ಕಡಿದಾಳ್ ಮಂಜಪ್ಪ ಜನ್ಮಶತಮಾನೋತ್ಸವ ಸಂಸ್ಮರಣೆ

# ಕಡಿದಾಳು

ಸಂಸ್ಮರಣ ಗ್ರಂಥ

ಸಂಪಾದಕರು

**ಡಾ. ಶ್ರೀಕಂಠ ಕೂಡಿಗೆ**

ಸದಸ್ಯರು

**ಡಾ. ಎಚ್.ಡಿ. ಚಂದ್ರಪ್ಪಗೌಡ**

**ಕೋಣಂದೂರು ಲಿಂಗಪ್ಪ**




ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಬೆಂಗಳೂರು

**KADIDAALU** : A commemorative volume on Late Kadidal Manjappa
Edited by : **Dr. Srikanta Koodige**, Published by : **Manu Baligar** KAS
Director, Department of Kannada & Culture, Kannada Bhavana
J.C. Road, Bengalooru - 560 002.



ಪ್ರಥಮ ಮುದ್ರಣ : ೨೦೦೮

ಪುಟಗಳು : x + ೫೩೨

ಪ್ರತಿಗಳು : ೨೦೦೦

ರಕ್ಷಾಪುಟ : **ಪ.ಸ. ಕುಮಾರ್**

ಬೆಲೆ : **ರೂ. ೧೫೫/-**

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಪ್ರಕಾಶಕರ ಮಾತು

ಭೂಸುಧಾರಣೆಯ ರೂವಾರಿ, ಸ್ವಾತಂತ್ರ್ಯ ಹೋರಾಟಗಾರ, ಪರಿಶುದ್ಧ ಜೀವನ ನಡೆಸಿದ ಆದರ್ಶ ರಾಜಕಾರಣಿ, ಈ ಶತಮಾನ ಕಂಡ ಅಪರೂಪದ ಚೇತನ ಕಡಿದಾಳ್ ಮಂಜಪ್ಪನವರ ಜನ್ಮಶತಮಾನೋತ್ಸವದ ಅಂಗವಾಗಿ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಅವುಗಳಲ್ಲಿ ಕಡಿದಾಳ್ ಮಂಜಪ್ಪನವರ ಕೃತಿಗಳ ಮರುಮುದ್ರಣ ಹಾಗೂ ಅವರ ಜೀವನ–ಸಾಧನೆಗಳನ್ನು ಕುರಿತ ಸಂಸ್ಮರಣ ಗ್ರಂಥ ಪ್ರಕಟಣೆಯೂ ಒಂದಾಗಿದೆ.

ಈ ಸಂಸ್ಮರಣ ಸಂಪುಟಕ್ಕೆ ಡಾ॥ ಶ್ರೀಕಂಠ ಕೂಡಿಗೆಯವರು ಸಂಪಾದಕರಾಗಿ ಸಂಪುಟವು ಉತ್ತಮವಾಗಿ ಹೊರಬರಲು ಅಪಾರ ಕಾಳಜಿ ವಹಿಸಿದ್ದಾರೆ. ಈ ಸಂಪುಟವನ್ನು ಅಚ್ಚುಕಟ್ಟಾಗಿ ಸಂಪಾದಿಸಿಕೊಟ್ಟ ಡಾ॥ ಶ್ರೀಕಂಠ ಕೂಡಿಗೆ ಅವರಿಗೆ ನನ್ನ ಕೃತಜ್ಞತಾಪೂರ್ವಕ ಧನ್ಯವಾದಗಳು. ಅಲ್ಲದೆ, ಸಂಸ್ಮರಣ ಗ್ರಂಥ ಸಮಿತಿಯ ಸದಸ್ಯರಾದ ಡಾ॥ ಹೆಚ್.ಡಿ. ಚಂದ್ರಪ್ಪಗೌಡ, ಶ್ರೀ ಕೋಣಂದೂರು ಲಿಂಗಪ್ಪ ಅವರಿಗೆ ನನ್ನ ಗೌರವಪೂರ್ವಕ ವಂದನೆಗಳು.

ಈ ಸಂಸ್ಮರಣ ಗ್ರಂಥಕ್ಕೆ ಲೇಖನಗಳನ್ನು ನೀಡುವ ಮೂಲಕ ಸಹಕರಿಸಿದ ಎಲ್ಲ ಮಹನೀಯರಿಗೆ ನನ್ನ ವಂದನೆಗಳು. ಲೇಖನದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಆಯಾ ಲೇಖಕರ ವ್ಯಕ್ತಿಗತ ಅಭಿಪ್ರಾಯವಾಗಿರುತ್ತದೆ ಎಂಬುದನ್ನು ನಮ್ರತೆಯಿಂದ ತಮ್ಮ ಮುಂದೆ ನಿವೇದಿಸಿಕೊಳ್ಳಲಾಗಿದೆ. ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೂ ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಪ.ಸ. ಕುಮಾರ್ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಸಂಸ್ಮರಣ ಸಂಪುಟ ಹೊರಬರಲು ಸಹಕರಿಸಿದ ಕಡಿದಾಳ್ ಮಂಜಪ್ಪನವರ ಮಗಳಾದ ಶ್ರೀಮತಿ ಶ್ರೀಕಲಾ ಅವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟ ಹೊರಬರಲು ನೆರವಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಪ್ರಕಟಣ ಶಾಖೆಯ ಸಿಬ್ಬಂದಿಗೆ ವಂದನೆಗಳು. ಕಡಿದಾಳ್ ಮಂಜಪ್ಪನವರ ಅಭಿಮಾನಿಗಳು ಈ ಗ್ರಂಥವನ್ನು ಸಂತೋಷದಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇನೆ. ಕಡಿದಾಳ್ ಮಂಜಪ್ಪನವರ ಜೀವನಪಥ - ಸುವರ್ಣಪಥ. ಈ ಸಂಸ್ಮರಣ ಗ್ರಂಥದ ಮೂಲಕ ಅವರ ಉನ್ನತ ಜೀವನಾದರ್ಶಗಳು ನಾಡಿನ ಜನಸೇವಕರಿಗೆ ಮಾದರಿಯಾಗಲಿ, ತರುಣ ಜನಾಂಗಕ್ಕೆ ಸ್ಫೂರ್ತಿ ನೀಡಲೆಂದು ಆಶಿಸುತ್ತೇನೆ.

**ಮನು ಬಳಿಗಾರ್** ಕ.ಆ.ಸೇ.

೧೫-೧೨-೨೦೦೮ ನಿರ್ದೇಶಕರು

## ಸಂಪಾದಕರ ಮಾತು

'ಭೂ ಸುಧಾರಣಾ ಕಾಯ್ದೆಯ ರೂವಾರಿ' ಎಂದೇ ಗುರುತಿಸಲ್ಪಟ್ಟಿರುವ ಕಡಿದಾಳ್ ಮಂಜಪ್ಪನವರು ಕರ್ನಾಟಕ ಕಂಡ ವಿರಳ ರಾಜಕಾರಣಿ. ಮಲೆನಾಡಿನ ವಿಧಾನಸಭಾ ಕ್ಷೇತ್ರಗಳಾದ ತೀರ್ಥಹಳ್ಳಿ, ಶೃಂಗೇರಿಯಿಂದ ಮೂರು ಬಾರಿ ಶಾಸಕರಾಗಿ ಆಯ್ಕೆಗೊಂಡು ಕಂದಾಯ, ಲೋಕೋಪಯೋಗಿ, ನೀರಾವರಿ ಸಚಿವರಾಗಿ ಮತ್ತು ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ್ದಾರೆ.

ವಕೀಲರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ನಿಷ್ಠಾವಂತ ಕಾಂಗ್ರೆಸ್ಸಿಗರಾಗಿ, ವಿಶಾಲ ಕರ್ನಾಟಕದ ಅಸ್ತಿತ್ವಕ್ಕೆ ಕಾರಣಕರ್ತರಾಗಿದ್ದಾರೆ. ಪಾರದರ್ಶಕ ಜೀವನದೃಷ್ಟಿ, ಪ್ರಾಮಾಣಿಕತೆಗೆ ಹೆಸರಾದ ಅವರು ಸಮಾಜದಲ್ಲಿನ ಎಲ್ಲಾ ವರ್ಗದವರ ಭ್ರಷ್ಟಾಚಾರದ ಬಗ್ಗೆ ನಿರಂತರ ಹೋರಾಟ ನಡೆಸಿಕೊಂಡು ಬಂದವರು. ಗೇಣಿದಾರನ ಮಗನಾಗಿ, ಗೇಣಿರೈತರ ಬವಣೆಗೆ ಮನ ಕರಗಿ ಅವರನ್ನು ಕಾನೂನುಬದ್ಧವಾಗಿ ಶೋಷಣೆಯಿಂದ ವಿಮುಕ್ತಿಗೊಳಿಸಲು ಪ್ರಯತ್ನಿಸಿದವರು. ತಮ್ಮ ಸಾಮಾಜಿಕ ನ್ಯಾಯದ ಕನಸನ್ನು ಭೂಸುಧಾರಣೆ ಕಾಯ್ದೆ ಮತ್ತು ದೇವಾದಾಯ, ಧರ್ಮಾದಾಯ ಇನಾಂ ರದ್ದಿಯಾತಿ ವಿಧೇಯಕದ ಮೂಲಕ ಸಾಕಾರಗೊಳಿಸಿದವರು. ಆ ಕಾಯ್ದೆಗಳ ಇತಿಮಿತಿಗಳು ಏನೇ ಇದ್ದರೂ ಆ ಕಾಲಕ್ಕೆ ಅವು ಕ್ರಾಂತಿಕಾರಕವಾದವು ಮಾತ್ರವಲ್ಲದೆ ಕರ್ನಾಟಕದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ದಾಖಲಿಸಬೇಕಾದ ಘಟನೆಗಳಾಗಿವೆ.

ತಾವು ಒಪ್ಪಿಕೊಂಡ ಮೌಲ್ಯಯುತ ಜೀವನ ದೃಷ್ಟಿಗೆ ಅನೇಕ ಅಡ್ಡಿ ಆತಂಕಗಳು ಒದಗಿ ಬಂದಾಗಲೂ ಉನ್ನತ ಪದವಿಗೆ ಆಸೆಪಡದೆ, ರಾಜಿ ಮಾಡಿಕೊಳ್ಳದೆ ಪರಿಸ್ಥಿತಿಯನ್ನು ದಿಟ್ಟವಾಗಿ ಎದುರಿಸಿ ತಮ್ಮ ಗುಣಸಂಪನ್ನತೆಯನ್ನು ಮೆರೆದಿದ್ದಾರೆ. ರಾಜಕೀಯ ಶುದ್ಧೀಕರಣಕ್ಕೆ, ಸದಭಿರುಚಿಯ ಹಾಗೂ ಜನಕಲ್ಯಾಣದ ರಾಜಕೀಯ ವಾತಾವರಣಕ್ಕೆ ಹಂಬಲಿಸಿದ ಕಡಿದಾಳರು ಭವಿಷ್ಯದ ರಾಜಕೀಯ ಅವನತಿಯ

ಪ್ರಕ್ರಿಯೆಯನ್ನು ದ್ರಷ್ಟಾರನಂತೆ ಗುರುತಿಸಿದ್ದಾರೆ. ಅವರ ಸಾಮಾಜಿಕ, ರಾಜಕೀಯ ಹತಾಶೆಗೆ ರೂಪಕಗಳೆನ್ನುವಂತೆ 'ಪಂಜರವಳ್ಳಿಯ ಪಂಜು' (೧೯೬೩), 'ನಾಳೆಯ ನೆಳಲು' (೧೯೬೬), 'ಕ್ರಾಂತಿ ಕೂಟ' (೧೯೭೫) ಕಾದಂಬರಿಗಳು ಹೊರಬಂದಿವೆ. ಮಂಜಪ್ಪನವರ ಖಾಸಗಿ ಬದುಕು, ಬವಣೆ, ಹೋರಾಟ, ಏರಿದ ಎತ್ತರ, ನೆಚ್ಚಿದ ಮೌಲ್ಯಗಳನ್ನು ಗುರುತಿಸಲು ಅನುಕೂಲವಾಗುವಂತೆ ಅವರು ಬರೆದ ಆತ್ಮಕಥೆ 'ನನಸಾಗದ ಕನಸು' (೧೯೮೦) ಬೆಳಕು ಕಂಡಿದೆ. ಇದೊಂದು ಅನನ್ಯ ಆತ್ಮಕಥೆಯಾಗಿರುವಂತೆಯೇ ಸ್ವಾತಂತ್ರ್ಯೋತ್ತರ ಕರ್ನಾಟಕದ ಎರಡು ದಶಕಗಳ ರಾಜಕೀಯ ಚರಿತ್ರೆಯ ಸ್ಥಿತ್ಯಂತರಗಳನ್ನು ದಾಖಲಿಸುತ್ತದೆ.

ಕಡಿದಾಳ್ ಮಂಜಪ್ಪನವರು ಬೇರೆ ಬೇರೆ ಕಾಲಘಟ್ಟಗಳಲ್ಲಿ ಬರೆದ ಕೃತಿಗಳನ್ನು ಅವರ ಶತಮಾನೋತ್ಸವ ಸ್ಮರಣೆಗಾಗಿ ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಮರುಮುದ್ರಿಸಿ ಸುಲಭ ಬೆಲೆಗೆ ಒದಗಿಸಲು ಹಾಗೂ ಸಂಸ್ಮರಣ ಗ್ರಂಥವೊಂದನ್ನು ಸಿದ್ಧಪಡಿಸಿಕೊಡಲು ಸಂಪಾದಕ ಸಮಿತಿಯೊಂದನ್ನು ರಚಿಸಿತು. ನನ್ನನ್ನು ಆ ಸಮಿತಿಯ ಸಂಪಾದಕನನ್ನಾಗಿಯೂ, ಡಾ. ಎಚ್.ಡಿ. ಚಂದ್ರಪ್ಪಗೌಡ ಮತ್ತು ಶ್ರೀ ಕೋಣಂದೂರು ಲಿಂಗಪ್ಪನವರನ್ನು ಸದಸ್ಯರನ್ನಾಗಿ ನೇಮಕ ಮಾಡಿತು. ಈ ಯೋಜನೆಯನ್ವಯ ಕಡಿದಾಳರ ಕೃತಿಗಳು ಪುನರ್ ಮುದ್ರಣಗೊಂಡು ಓದುಗರನ್ನು ತಲಪುತ್ತಿವೆಯೆಂಬುದು ಸಂತಸದ ಸಂಗತಿಯಾಗಿದೆ. ಹಾಗೆಯೆ ಕಡಿದಾಳರ ಶತಮಾನೋತ್ಸವ ಸಂಸ್ಮರಣ ಗ್ರಂಥ 'ಕಡಿದಾಳು' ಹೊರಬರುತ್ತಿದೆ.

ಸಂಸ್ಮರಣ ಗ್ರಂಥ ರೂಪುಗೊಳ್ಳುವ ಪೂರ್ವದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧಿಕಾರಿಗಳ ನೇತೃತ್ವದಲ್ಲಿ ಸಮಿತಿಯು ಸಭೆ ಸೇರಿ ಸಂಸ್ಮರಣ ಗ್ರಂಥದ ಸ್ಥೂಲ ರೂಪರೇಷೆಗಳನ್ನು ನಿರ್ಧರಿಸಿತು.

೧. ಬದುಕು ಮತ್ತು ಸಾಧನೆಯ ಹಾದಿ

೨. ಆತ್ಮೀಯರು ಕಂಡಂತೆ

೩. ಕಡಿದಾಳರ ಕೃತಿಗಳ ಪರಾಮರ್ಶೆ

೪. ಸದನದಲ್ಲಿ ಕಡಿದಾಳರು

೫. ಭಾಷಣಗಳು – ಲೇಖನಗಳು (ಕನ್ನಡ ಮತ್ತು ಇಂಗ್ಲಿಷ್)

೬. ಛಾಯಾಚಿತ್ರಗಳು

ಈ ಚೌಕಟ್ಟಿಗನುಗುಣವಾಗಿ ಗ್ರಂಥವನ್ನು ರೂಪಿಸಲಾಗಿದೆ. ಕಡಿದಾಳರ ಒಡನಾಡಿಗಳು, ನಿಕಟವರ್ತಿಗಳಿಗೆ ಲೇಖನ ಬರೆಯಲು ಸಂಪಾದಕ ಸಮಿತಿ ಕೋರಿದ್ದರೂ ಅನಾರೋಗ್ಯ, ವಯಸ್ಸಿನ ತೊಂದರೆಯಿಂದ ಕೆಲವರಿಗೆ ಬರೆಯಲು ಆಗಲಿಲ್ಲವೆಂಬುದು ವಿಷಾದದ ಸಂಗತಿ. ಅವರೆಲ್ಲರ ಲೇಖನಗಳು ಇಲ್ಲಿ ಸೇರಿದ್ದರೆ ಗ್ರಂಥದ ಮೌಲ್ಯ ಇನ್ನಷ್ಟು ಹೆಚ್ಚುತ್ತಿತ್ತು. ಎಂಟ್ಹತ್ತು ತಿಂಗಳುಗಳ ಸತತ ಪರಿಶ್ರಮದಲ್ಲಿ ಸಾಧ್ಯವಾದಷ್ಟು ಸಮಗ್ರತೆಯನ್ನು ಸಾಧಿಸಲು ಪ್ರಯತ್ನಿಸಲಾಗಿದೆ. ಲೇಖನದಾರರಲ್ಲಿ ಹಲವರಿಗೆ ದೈಹಿಕ ತೊಂದರೆಯಿದ್ದರೂ ಕಡಿದಾಳರ ಮೇಲಿನ ಅಭಿಮಾನದಿಂದ ಲೇಖನಗಳನ್ನು ನೀಡಿದ್ದಾರೆ. ಒಂದೆರಡು ಪ್ರಕಟಿತ ಲೇಖನಗಳನ್ನು ಕೂಡ ಬಳಸಿಕೊಳ್ಳಲಾಗಿದೆ. ಚದುರಿಹೋಗಿದ್ದ ಅಪಾರ ಸಂಖ್ಯೆಯ ಕಡಿದಾಳರ ಭಾಷಣ–ಲೇಖನಗಳನ್ನು ಸಂಪುಟದಲ್ಲಿ ಒಗ್ಗೂಡಿಸಲಾಗಿದೆ. ಕಡಿದಾಳರ ರಾಜಕೀಯ ಕಾದಂಬರಿಗಳ ಮತ್ತು ಆತ್ಮಚರಿತ್ರೆಯ ಸಮಕಾಲೀನ ಪ್ರಸ್ತುತತೆಯನ್ನು ಅವಲೋಕಿಸಲಾಗಿದೆ. ಅವರು ಸದನದಲ್ಲಿ ಮಂಡಿಸಿದ ಮಸೂದೆ, ಚರ್ಚೆ, ಪ್ರತಿಚರ್ಚೆ, ಪ್ರಶ್ನೋತ್ತರಗಳು ದೊಡ್ಡ ಪ್ರಮಾಣದಲ್ಲಿ ಲಭ್ಯವಿದ್ದರೂ ಸಂಪುಟದ ಪುಟಮಿತಿಯನ್ನು ಗಮನದಲ್ಲಿರಿಸಿಕೊಂಡು ಉಪಯುಕ್ತವಾದ ಕೆಲವನ್ನು ಮಾತ್ರ ತೆಗೆದುಕೊಳ್ಳಲಾಗಿದೆ.

ಈ ಸಂಸ್ಮರಣ ಗ್ರಂಥ 'ಕಡಿದಾಳು' ರೂಪುಗೊಳ್ಳಲು ಹಲವರು ಹಲವು ಬಗೆಯ ನೆರವನ್ನಿತ್ತಿದ್ದಾರೆ. ಅವರನ್ನೆಲ್ಲಾ ನೆನೆಯುವುದು ಕರ್ತವ್ಯವಾಗಿದೆ. ನನ್ನ ನೆನಪಿನೋಲೆ, ದೂರವಾಣಿ ಕರೆಗೆ ಕಾಯದೆ ಸಕಾಲದಲ್ಲಿ ಲೇಖನಗಳನ್ನು ಬರೆದುಕೊಟ್ಟ ಕಡಿದಾಳ್ ಮಂಜಪ್ಪನವರ ಹಿರಿಯ–ಕಿರಿಯ ಒಡನಾಡಿಗಳಿಗೆ, ಸಮಕಾಲೀನ ಲೇಖಕರಿಗೆ, ಅಭಿಮಾನಿಗಳಿಗೆ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ. ಶ್ರೀ ಗಣಪತಿಯಪ್ಪನವರನ್ನು ಸಂದರ್ಶಿಸಿ ಲೇಖನ ಸಿದ್ಧಪಡಿಸಿಕೊಟ್ಟ ಅಧ್ಯಾಪಕ ಮಿತ್ರ ಡಾ. ಸಫ್ರಾಜ್ ಚಂದ್ರಗುತ್ತಿ, ಶ್ರೀ ಎಚ್.ಜಿ. ಗೋವಿಂದೇಗೌಡರನ್ನು ಮಾತನಾಡಿಸಿ ಅವರಿಂದ ಮಾಹಿತಿ ಪಡೆದು ಲೇಖನ ತಯಾರಿಸಿದ ವಿದ್ಯಾರ್ಥಿ ಸ್ನೇಹಿತ ಶ್ರೀ ಟಿ.ಎನ್. ಬಸವರಾಜು ಅವರ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ನನ್ನ ಮೇಲಿನ ಪ್ರೀತಿ ಮತ್ತು ಕಡಿದಾಳರ ಮೌಲಿಕ ಜೀವನ ಕಥನದಿಂದ ಪ್ರೇರಣೆಗೊಂಡು, ತಮ್ಮದೇ ಪುಸ್ತಕವೆನ್ನುವಂತೆ ಡಿ.ಟಿ.ಪಿ. ಮಾಡಿಸುವುದರಿಂದ ಹಿಡಿದು ಸಂಪೂರ್ಣ ಓಡಾಟದ ಹೊಣೆ ಹೊತ್ತ ಉಪನ್ಯಾಸಕ ಸ್ನೇಹಿತರಾದ ಡಾ. ಕುಂಸಿ ಉಮೇಶ್ ಮತ್ತು ಶಿವಮೊಗ್ಗದ ಮಿತ್ರ ಅಸೋಸಿಯೇಟ್ಸ್ ಡಿಟಿಪಿ ಕೇಂದ್ರದ ಶ್ರೀಮತಿ ಪವಿತ್ರ, ಸವಿತಾ ಅವರ ನೆರವನ್ನು ವಿಶೇಷವಾಗಿ ಸ್ಮರಿಸುತ್ತೇನೆ.

'ಕಡಿದಾಳು' ಸಂಸ್ಮರಣ ಗ್ರಂಥ ರೂಪುಗೊಳ್ಳಲು ನಾನಾ ಹಂತಗಳಲ್ಲಿ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಸಿಬ್ಬಂದಿ ವರ್ಗಕ್ಕೆ ಸಮಿತಿಯು ಆಭಾರಿಯಾಗಿದೆ.

'ಸದನದಲ್ಲಿ ಕಡಿದಾಳರು' ವಿಭಾಗದ ಮಾಹಿತಿಯನ್ನು ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಕಡಿದಾಳ್ ಮಂಜಪ್ಪ ಕಿರುಹೊತ್ತಗೆ (ಪ್ರಕಟಣೆ: ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು. ಲೇಖಕರು : ಡಾ. ಎಸ್.ಎಚ್. ಕವಂಟೆ ಮತ್ತು ಡಾ. ವಿ.ಜಿ. ಪೂಜಾರ್)ಯಿಂದ ಆಯ್ದುಕೊಳ್ಳಲಾಗಿದೆ. ಇದನ್ನು ಬಳಸಿಕೊಳ್ಳಲು ಅನುಮತಿ ಇತ್ತ ಸಂಬಂಧಿಸಿದ ಅಧಿಕಾರಿಗಳಿಗೆ ಧನ್ಯವಾದಗಳು.

ಈ ಸಂಸ್ಮರಣ ಸಂಪುಟದ ಪೂರ್ವ ಸಿದ್ಧತೆಯಲ್ಲಿ ಸಲಹೆ, ಸೂಚನೆ ನೀಡಿದ ಇಲಾಖೆಯ ಹಿಂದಿನ ಕಾರ್ಯದರ್ಶಿ ಶ್ರೀ ಐ.ಎಂ. ವಿಠಲಮೂರ್ತಿ, ಕಡಿದಾಳರ ಮಗಳು ಶ್ರೀಕಲಾ, ಶ್ರೀ ಜಿ.ಎ. ಪುರುಷೋತ್ತಮಗೌಡರ ಸಹಕಾರಕ್ಕೆ ಕೃತಜ್ಞತೆಗಳು. ಗ್ರಂಥವನ್ನು ಸುಂದರವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿಯವರಿಗೆ, ರಕ್ಷಾಪುಟ ವಿನ್ಯಾಸಗೊಳಿಸಿದ ಕಲಾವಿದ ಶ್ರೀ ಪ.ಸ. ಕುಮಾರ್ ಅವರಿಗೆ ನೆನಕೆಗಳು ಸಲ್ಲುತ್ತವೆ.

ಕಳೆದುಹೋದ ಮೌಲ್ಯಗಳನ್ನು ಪುನಃ ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಮತ್ತು ಪ್ರಜ್ಞಾವಂತ ಕನ್ನಡ ಮನಸ್ಸುಗಳನ್ನು ರೂಪಿಸುವಲ್ಲಿ ಈ ಸಂಪುಟ ನೆರವಾಗಲೆಂದು ಆಶಿಸುತ್ತೇನೆ.

ತಾ. ೧೦.೧೨.೨೦೦೮ **–ಡಾ. ಶ್ರೀಕಂಠ ಕೂಡಿಗೆ**

# ಪರಿವಿಡಿ

'ಕಡಿದಾಳು' ಸಂಸ್ಮರಣ ಗ್ರಂಥ ರೂಪುಗೊಳ್ಳಲು ನಾನಾ ಹಂತಗಳಲ್ಲಿ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಸಿಬ್ಬಂದಿ ವರ್ಗಕ್ಕೆ ಸಮಿತಿಯು ಆಭಾರಿಯಾಗಿದೆ.

'ಸದನದಲ್ಲಿ ಕಡಿದಾಳರು' ವಿಭಾಗದ ಮಾಹಿತಿಯನ್ನು ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ ಕಡಿದಾಳ್ ಮಂಜಪ್ಪ ಕಿರುಹೊತ್ತಗೆ (ಪ್ರಕಟಣೆ: ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು. ಲೇಖಕರು : ಡಾ. ಎಸ್.ಎಚ್. ಕವಂಟೆ ಮತ್ತು ಡಾ. ವಿ.ಜಿ. ಪೂಜಾರ್)ಯಿಂದ ಆಯ್ದುಕೊಳ್ಳಲಾಗಿದೆ. ಇದನ್ನು ಬಳಸಿಕೊಳ್ಳಲು ಅನುಮತಿ ಇತ್ತ ಸಂಬಂಧಿಸಿದ ಅಧಿಕಾರಿಗಳಿಗೆ ಧನ್ಯವಾದಗಳು.

ಈ ಸಂಸ್ಮರಣ ಸಂಪುಟದ ಪೂರ್ವ ಸಿದ್ಧತೆಯಲ್ಲಿ ಸಲಹೆ, ಸೂಚನೆ ನೀಡಿದ ಇಲಾಖೆಯ ಹಿಂದಿನ ಕಾರ್ಯದರ್ಶಿ ಶ್ರೀ ಐ.ಎಂ. ವಿಠಲಮೂರ್ತಿ, ಕಡಿದಾಳರ ಮಗಳು ಶ್ರೀಕಲಾ, ಶ್ರೀ ಜಿ.ಎ. ಪುರುಷೋತ್ತಮಗೌಡರ ಸಹಕಾರಕ್ಕೆ ಕೃತಜ್ಞತೆಗಳು. ಗ್ರಂಥವನ್ನು ಸುಂದರವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿಯವರಿಗೆ, ರಕ್ಷಾಪುಟ ವಿನ್ಯಾಸಗೊಳಿಸಿದ ಕಲಾವಿದ ಶ್ರೀ ಪ.ಸ. ಕುಮಾರ್ ಅವರಿಗೆ ನೆನಕೆಗಳು ಸಲ್ಲುತ್ತವೆ.

ಕಳೆದುಹೋದ ಮೌಲ್ಯಗಳನ್ನು ಪುನಃ ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಮತ್ತು ಪ್ರಜ್ಞಾವಂತ ಕನ್ನಡ ಮನಸ್ಸುಗಳನ್ನು ರೂಪಿಸುವಲ್ಲಿ ಈ ಸಂಪುಟ ನೆರವಾಗಲೆಂದು ಆಶಿಸುತ್ತೇನೆ.

ತಾ. ೧೦.೧೨.೨೦೦೮ **–ಡಾ. ಶ್ರೀಕಂಠ ಕೂಡಿಗೆ**

# ಪರಿವಿಡಿ

# ಭೂಸುಧಾರಣಾ ಹರಿಕಾರ

–ಬಿಳುಮನೆ ರಾಮದಾಸ್

## ಪ್ರಸ್ತಾವನೆ

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಸಾಹಿತ್ಯ, ರಾಜಕಾರಣ, ನ್ಯಾಯಾಂಗ, ಸಹಕಾರಿ ಕ್ಷೇತ್ರದಲ್ಲಿ ತನ್ನದೇ ಆದ ಕೊಡುಗೆಯನ್ನು ಕರ್ನಾಟಕಕ್ಕೆ ಕೊಟ್ಟಿದೆ. ಸಾಹಿತ್ಯ ಕ್ಷೇತ್ರದಲ್ಲಿ ಮಹಾಕವಿ ಕುವೆಂಪು ಎಸ್.ವಿ.ಪರಮೇಶ್ವರಭಟ್ಟ ಹಾ.ಮಾ.ನಾಯಕ, ಡಾ.ಯು.ಆರ್. ಅನಂತಮೂರ್ತಿ, ಎಂ.ಕೆ. ಇಂದಿರಾ ಅವರಂತಹ ವ್ಯಕ್ತಿಗಳನ್ನು ನೀಡಿದ್ದರೆ ರಾಜಕಾರಣದಲ್ಲಿ ಕಡಿದಾಳ್ ಮಂಜಪ್ಪ, ಶಾಂತವೇರಿ ಗೋಪಾಲಗೌಡರಂತಹ ರಾಜಕಾರಣಿಗಳನ್ನು ಕೊಟ್ಟಿದೆ. ನ್ಯಾಯಾಂಗದಲ್ಲಿ ಎನ್.ಡಿ.ವೆಂಕಟೇಶ್, ರಾಮಜೋಯಿಸ್ ಅವರಂತವರನ್ನೂ ಸಹಕಾರಿ ಕ್ಷೇತ್ರದಲ್ಲಿ ಬಿ.ಎಸ್.ವಿಶ್ವನಾಥ್ ಅವರನ್ನೂ ಅರ್ಪಿಸಿದೆ. ಈ ಎಲ್ಲ ಮಹನೀಯರುಗಳು ತಮ್ಮ ತಮ್ಮ ಕ್ಷೇತ್ರದಲ್ಲಿ ಪ್ರಾಮಾಣಿಕರೂ ಅತ್ಯಂತ ನಿಷ್ಠೆಯಿಂದ ಯಾವುದೇ ಲಾಭದ ಪ್ರಲೋಭನೆಯಿಲ್ಲದೆ ಕೆಲಸ ಮಾಡಿದ್ದಾರೆ. ಅವರುಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ತಮ್ಮದೇ ಆದಂತಹ ಛಾಪು ಮೂಡಿಸಿದ್ದಾರೆ. ಇದಲ್ಲದೆ ಶಿಕ್ಷಣ, ವೈದ್ಯಕೀಯ, ಇಂಜಿನಿಯರಿಂಗ್ ಕ್ಷೇತ್ರಗಳಲ್ಲಿ ಹಾಗೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಣನೀಯ ಸೇವೆಯನ್ನು ಸಲ್ಲಿಸಿದವರು ಇದ್ದಾರೆ.

ಪ್ರಸ್ತುತ ಲೇಖನದಲ್ಲಿ ಕಡಿದಾಳರ ಜನನ, ಬಾಲ್ಯ, ಶಿಕ್ಷಣ, ಸ್ವಾತಂತ್ರ್ಯ ಹೋರಾಟ ಮಹಾರಾಜರ ಕಾಲದಲ್ಲಿ ಎಂ.ಆರ್.ಎ ಆಗಿದ್ದು, ಸ್ವಾತಂತ್ರ್ಯ ನಂತರ ಮಂತ್ರಿ, ಮುಖ್ಯಮಂತ್ರಿಯಾಗಿ, ವಕೀಲರಾಗಿ ಮಾಡಿದ ಸಾಧನೆ ಕುರಿತು ಬರೆಯಲಾಗಿದೆ.

## ಜನನ, ಬಾಲ್ಯ ಮತ್ತು ಶಿಕ್ಷಣ

ಸ್ವಾತ್ರಂತ್ಯ ಪೂರ್ವದಲ್ಲಿ ಮಲೆನಾಡು ಪ್ರದೇಶ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಬಹಳ ಹಿಂದುಳಿದಿದ್ದಿತ್ತು. ಅನಕ್ಷರಸ್ಥರಾಗಿದ್ದ ಜನಗಳು ಕಾಯಿಲೆಕಸಾಲೆಯಾದರೆ ವೈದ್ಯಕೀಯ ಸೌಲಭ್ಯವಿಲ್ಲದ್ದರಿಂದ ದೇವರುಗಳಿಗೆ ಹರಕೆ ಹೊರುವುದು, ಮುಡುಪು ಕಟ್ಟುವುದು, ಅಳಲೆಕಾಯಿ ಪಂಡಿತರುಗಳ ಮರೆಹೋಗುವುದು ಅನಿವಾರ್ಯವಾಗಿತ್ತು. ಮಲೆನಾಡಿನ ಜನ ಅನಾಗರಿಕರಾಗಿ ಕಗ್ಗತ್ತಲೆಯಲ್ಲಿದ್ದರು. ಅಂದು ಮಲೆನಾಡಿನಲ್ಲಿ ಕಾಡು ಸಮೃದ್ಧವಾಗಿದ್ದರಿಂದ ವನ್ಯ ಜೀವಿಗಳು ಹೇರಳವಾಗಿದ್ದವು. ರೈತರು ತಮ್ಮ

ಬೆಳೆ, ಫಸಲುಗಳನ್ನು ಜಾನುವಾರುಗಳನ್ನು ರಕ್ಷಿಸಿಕೊಳ್ಳಲು ಬೇಟೆಯ ಕಾಯಕದಲ್ಲಿ ತೊಡಗಿದ್ದರು. ಇಂತಹ ದುರ್ದಿನಗಳಲ್ಲಿ ಕಡಿದಾಳ್ ಮಂಜಪ್ಪನವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಹಾರೋಗೊಳಿಗೆ ಎಂಬ ಕುಗ್ರಾಮದಲ್ಲಿ ದಿನಾಂಕ ೧೩-೦೭-೧೯೦೭ ರಲ್ಲಿ ದುಗ್ಗಣ್ಣಗೌಡ ಮತ್ತು ಚೆನ್ನಮ್ಮ ದಂಪತಿಗಳಿಗೆ ದ್ವಿತೀಯ ಪುತ್ರರಾಗಿ ಜನಿಸಿದರು. ಅವರಿಗಿಂತ ಮೊದಲು ವೀರಮ್ಮ ಎಂಬ ಹೆಣ್ಣುಮಗಳಿದ್ದಳು. ಮಂಜಪ್ಪನವರ ನಂತರ ಕ್ರಮವಾಗಿ ತಮ್ಮಯ್ಯ, ಅಣ್ಣಯ್ಯ, ಸೀತಮ್ಮ, ನಾಗಪ್ಪ, ಸಾವಿತ್ರಿ, ಶ್ರೀನಿವಾಸ ಎಂಬ ಮಕ್ಕಳು ಜನಿಸಿದರು. ಮಂಜಪ್ಪನವರ ತಾಯಿಯ ತವರೂರು ನಂಟೂರು ಎಂಬ ಕುಗ್ರಾಮ. ಪೂರ್ವಕಾಲದಲ್ಲಿ ಮಂಜಪ್ಪನವರ ವಂಶಜರೊಬ್ಬರು ಪಾಳೇಗಾರರ ಸೈನ್ಯದಲ್ಲಿ ಕಾಲಾಳಾಗಿ ಸೇರಿ ಬಹಳ ವೀರವೇಶದಿಂದ ಹೋರಾಡಿ ನಂತರ ಊರಿಗೆ ಬಂದು ನೆಲೆಸಿದ್ದರು. ಊರಿನ ಜನ ಅವರನ್ನು "ಕಡಿದ ಆಳು" ಎಂದು ಕರೆಯುತ್ತಿದ್ದರಿಂದ ಅವರ ಮನೆಗೆ "ಕಡಿದಾಳ್" ಎಂಬ ಹೆಸರು ಬಂದಿತು. ಮೂಲ ಪುರುಷ ಅನಕ್ಷರಸ್ಥನಾಗಿ ಹೋರಾಡಿ ಜಯಗಳಿಸಿದರೆ, ಮಂಜಪ್ಪನವರು ಅಕ್ಷರಸ್ಥರಾಗಿ, ವಕೀಲರಾಗಿ, ಶಾಸಕರಾಗಿ, ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ, ಮಹಾತ್ಮಗಾಂಧಿಯವರ 'ಶಾಂತಿ' ಎಂಬ ಬೀಜಮಂತ್ರವನ್ನು ಹಿಡಿದು ಜನಸೇವೆ ಮಾಡಿ ಜನಾನುರಾಗಿಯಾದರು.

ಕಡಿದಾಳರ ತಂದೆಗೆ ಪಿತ್ರಾರ್ಜಿತ ಆಸ್ತಿ ಇದ್ದರೂ ಕಾರಣಾಂತರದಿಂದ ವಂಚಿತರಾಗಿ ಅವರು ಬಡಗೇಣಿದಾರರಾಗಬೇಕಾಗಿ ಬಂದಿತು. ಹೀಗಾಗಿ ಕಡಿದಾಳರ ತಂದೆಯ ಸಹೋದರರು ಶ್ರೀಮಂತರಾಗಿದ್ದರೆ ಇವರು ಬಡತನದಲ್ಲಿ ಕಾಲ ಹಾಕಬೇಕಾಯಿತು. ಕಡಿದಾಳರ ಶಿಕ್ಷಣ ಐಗಳ ಮಠದಲ್ಲಿ ಅಕ್ಷರಾಭ್ಯಾಸ ಮಾಡುವುದರಿಂದ ಪ್ರಾರಂಭವಾಯಿತು. ಐಗಳ ಮಠವೆಂದರೆ ಖಾಸಗಿ ಶಾಲೆ. ಅಲ್ಲಿನ ಉಪಾಧ್ಯಾಯರುಗಳಿಗೆ ವಿದ್ಯಾರ್ಥಿಗಳ ಪೋಷಕರು ಅಕ್ಕಿ, ಭತ್ತ, ಹಣವನ್ನು ಸಂಭಾವನೆಯಾಗಿ ಕೊಡುತ್ತಿದ್ದರು. ಉಪಾಧ್ಯಾಯರು ಈಗಿನಂತೆ ಬಹಳ ಶಿಕ್ಷವೇತ್ತರೂ ಅಲ್ಲ. ಬಡಗಿ ಕೆಲಸ ಮಾಡುವವರು, ಅಕ್ಕಸಾಲಿ ಕೆಲಸ ಮಾಡುವವರಾಗಿದ್ದರು ಅವರು. ಅವರಿಗೆ ಉಪಾಧ್ಯಾಯ ವೃತ್ತಿ ಉಪಕಸಬಷ್ಟೆ. ಶಾಲೆ ಹುಲ್ಲು ಜೋಪಡಿಯಲ್ಲಿ ಬಡಗಿ, ಅಕ್ಕಸಾಲಿ ಕೆಲಸ ಮಾಡುವಲ್ಲಿ ನಡೆಯುತ್ತಿತ್ತು. ಅಕ್ಷರಾಭ್ಯಾಸ ಮಾಡುತ್ತಿದ್ದುದು ಮರಳಿನ ಮೇಲೆ, ಆಗ ಹಲಗೆ ಬಳಪವಿರಲಿಲ್ಲ. ಉಪಾಧ್ಯಾಯರೋ ಮಕ್ಕಳ ಪಾಲಿಗೆ ರಾಕ್ಷಸರಾಗಿರುತ್ತಿದ್ದರು. ಮಕ್ಕಳು ಸಣ್ಣಪುಟ್ಟ ತಪ್ಪು ಮಾಡಿದರೂ ಉಗ್ರಶಿಕ್ಷೆಯನ್ನು ಕೊಡುತ್ತಿದ್ದರು. ಆಗಲೇ ಕಡಿದಾಳರು ವಿದ್ಯಾರ್ಥಿಗಳ ಪೈಕಿ ಚುರುಕಾದ ವಿದ್ಯಾರ್ಥಿಯೆಂದು ಹೆಸರು ಪಡೆದಿದ್ದರು. ಶಾಲೆಗೆ

ಸೇರಿದ ಮೂರು ವರ್ಷದೊಳಗೆ ತಪ್ಪಿಲ್ಲದೆ ವ್ಯಾಕರಣಬದ್ಧರಾಗಿ ಬರೆಯುವುದನ್ನೂ, ಓದುವುದನ್ನೂ ಕಲಿತಿದ್ದರು. ಮಗ್ಗಿ ಬಾಯಿಪಾಠವಾಗಿತ್ತು ಅವರಿಗೆ ಐಗಳ ಮಠದ ವಿದ್ಯಾಭ್ಯಾಸವಾದ ಮೇಲೆ ಅವರ ಓದು ನಿಲ್ಲುವ ಹಂತದಲ್ಲಿತ್ತು. ಈ ಹೊತ್ತಿಗೆ ಕಡಿದಾಳರ ತಂದೆ ದುಗ್ಗಣ್ಣ ಗೌಡರ ಶಡ್ಡಕ (ಕಡಿದಾಳರ ಚಿಕ್ಕಮ್ಮ ದುಗ್ಗಮ್ಮನ ಗಂಡ) ತುಡ್ಕಿ ರಾಮಣ್ಣಗೌಡರು ಅವರ ಮನೆಗೆ ಬಂದು ಬಾಲಕ ಕಡಿದಾಳರನ್ನು ತಮ್ಮ ಮನೆಗೆ ಓದಲು ಕಳುಹಿಸಬೇಕೆಂದು ಕೇಳಿಕೊಂಡರು. ರಾಮಣ್ಣಗೌಡರು ಆರ್ಥಿಕವಾಗಿ ಸಾಕಷ್ಟು ಅನುಕೂಲವಾಗಿದ್ದರು. ಅವರು ತೀರ್ಥಹಳ್ಳಿಯಲ್ಲಿ ವಾಸವಾಗಿದ್ದು ಗೇಣಿ ಜಮೀನನ್ನು ಸಾಗುವಳಿ ಮಾಡುತ್ತಿದ್ದರು. ಜೊತೆಗೆ ಎಮ್ಮೆಗಳನ್ನು ಕಟ್ಟಿಕೊಂಡು ಹಾಲನ್ನು ಹೋಟೆಲಿಗೆ ಮಾರುತ್ತಿದ್ದರು. ಅಬಕಾರಿ ಕಂಟ್ರಾಕ್ಟು, ಅಡಿಕೆ ವ್ಯಾಪಾರವನ್ನು ಅವರು ಮಾಡುತ್ತಿದ್ದರು. ಅವರಿಗೆ ಮನೆಯಲ್ಲಿ ಚಿಕ್ಕ ಹೆಣ್ಣು ಮಕ್ಕಳಲ್ಲದೆ ಗಂಡು ಮಕ್ಕಳಿರಲಿಲ್ಲ. ಹುಡುಗ ಕಡಿದಾಳರ ಆಗಮನ ಚಿಕ್ಕಮ್ಮ ದುಗ್ಗಮ್ಮನವರಿಗೆ ಬಹಳ ಸಂತೋಷವನ್ನು ಕೊಟ್ಟಿತ್ತು.

ಕಡಿದಾಳರು ತೀರ್ಥಹಳ್ಳಿಯಲ್ಲಿ ಪ್ರಾಥಮಿಕ ಶಾಲೆಗೆ ಸೇರಿದರು. ಅಗ ಮೊದಲನೆ ಮಹಾಯುದ್ಧ ನಡೆಯುತ್ತಿತ್ತು. ತೀರ್ಥಹಳ್ಳಿಯ ಪ್ರಾಥಮಿಕಶಾಲೆಯಲ್ಲಿ ಇಂಗ್ಲೀಷ್ ಭಾಷೆ ಕಡ್ಡಾಯವಾಗಿತ್ತು. ಕಡಿದಾಳರಿಗೆ ಇಂಗ್ಲೀಷ್ ಭಾಷೆಯ ಗಂಧವೇ ಇರಲಿಲ್ಲ ಬಾಲಕ ಕಡಿದಾಳರು ಶಾಲೆಗೆ ಹೋಗುವಾಗ ಹಾಲನ್ನು ಹೋಟೆಲಿಗೆ ಕೊಟ್ಟು ಹೋಗಬೇಕಾಗಿತ್ತು. ಬರುವಾಗ ಖಾಲಿ ಪಾತ್ರೆಗಳನ್ನು ವಾಪಸು ಮನೆಗೆ ತರಬೇಕಾಗಿತ್ತು. ಜೊತೆಗೆ ಚಿಕ್ಕಮ್ಮ ತರಕಾರಿ, ಮಲ್ಲಿಗೆ ಹೂವನ್ನು ಮಾರಲು ತೀರ್ಥಹಳ್ಳಿ ಪೇಟೆಗೆ ಕಳುಹಿಸುತ್ತಿದ್ದರು. ಶಾಲೆಯಲ್ಲಿ ಕಡಿದಾಳರು ಕನ್ನಡ ಪಾಠ ಮತ್ತು ಮಗ್ಗಿಯನ್ನು ಮೇಷ್ಟರಿಗೆ ಒಪ್ಪಿಸುವುದರಲ್ಲಿ ಸಹಪಾಠಿಗಳಿಗೆ ಅವರು ಕಡಿಮೆ ಇರಲಿಲ್ಲ. ಅದರೆ ಇಂಗ್ಲೀಷ್ ಅವರಿಗೆ ಕಬ್ಬಿಣದ ಕಡಲೆಯಾಗಿತ್ತು. ಮೇಷ್ಟರಿಂದ ಅವರು ಒಳಕುಂಠಿ ಶಿಕ್ಷೆಯನ್ನು ಅನುಭವಿಸುತ್ತಿದ್ದರು. ದಸರಾ ರಜೆ ಬಂದಾಗ ತಂದೆಯೊಂದಿಗೆ ಊರಿಗೆ ಹೋಗುವಾಗ ಇಂಗ್ಲೀಷ್ ಭಾಷೆ ತನಗೆ ಒಗ್ಗದ ಬಗ್ಗೆ ತಂದೆಯೊಂದಿಗೆ ಹೇಳಿಕೊಂಡರು. ತಂದೆಯವರು ಇದೊಂದು ವರ್ಷ ನೋಡು. ಇಂಗ್ಲೀಷ್ ಬರದಿದ್ರೆ ಇನ್ನೇನ್ಮಾಡತೀಯ ಮನೆ ಕೆಲಸ ಮಾಡ್ಕೊಂಡು ಇರು, ಹೇಗಿದ್ದರೂ ಕನ್ನಡ ಬರತದೆ ನಿನ್ನದೃಷ್ಟ ನಾಏನ್ಮಾಡ್ಲಿ ಎಂದು ಹೇಳಿದರು. ನವರಾತ್ರಿ ಕಾಲದಲ್ಲಿ ವಿದ್ಯೆಯ ಅಧಿದೇವತೆಯಾದ ಸರಸ್ವತಿ ಪೂಜೆ ಮಾಡುವುದು ರೂಢಿ. ಅಂದು ಎಲ್ಲಾ ವಿದ್ಯಾರ್ಥಿಗಳು ಮಾಡುತ್ತಿದ್ದರು. ಕಡಿದಾಳರು ಬಹಳ ಭಕ್ತಿಯಿಂದ ಪೂಜೆ ಮಾಡಿದರು. ಸರಸ್ವತಿ ಅವರಿಗೆ ಒಲಿದಳು.

ಪೂಜೆ ಮುಗಿದ ಮೇಲೆ ಇಂಗ್ಲಿಷ್ ಪುಸ್ತಕವನ್ನೆತ್ತಿಕೊಂಡರೆ ಪಾಠಗಳು ಅವರಿಗೆ ಅರಿವಾಗದಂತೆ ಸರಾಗವಾಗಿ ಓದುವಂತಾಯಿತು. ನಾಲ್ಕು ತಿಂಗಳಕಾಲ ಎಷ್ಟು ಪ್ರಯತ್ನಿಸಿದರೂ ಓದಲಾಗದ ಪಾಠಗಳು ಸರಾಗವಾಗಿ ಓದುವಂತಾಯ್ತು. ರಜಾ ಮುಗಿದು ಶಾಲೆಯಲ್ಲಿ ಮೇಷ್ಟರಿಗೆ ತನ್ನ ಇಂಗ್ಲೀಷ್ ಪಾಠಗಳು ಪಾಂಡಿತ್ಯವನ್ನು ಪ್ರದರ್ಶಿಸಿದರು. ಖುಷಿಪಟ್ಟ ಮೇಷ್ಟರು "ನಿನಗೆ ಇನ್ನು ಒಳಕುಂಠಿ ಶಿಕ್ಷೆ ಇಲ್ಲ" ಎಂದರು. ಶಿಷ್ಯನಿಗೂ ಖುಷಿಯಾಗದೆ ಇರಲಿಲ್ಲ.

ಪ್ರಾಥಮಿಕ ಶಾಲೆ ಮುಗಿದ ನಂತರ ಅವರು ಮಾಧ್ಯಮಿಕ ಶಾಲೆಗೆ ಸೇರಿದರು ಅದೇ ಶಾಲೆಯಲ್ಲಿ ಓದಿದ ಮಹಾಕವಿ ಕುವೆಂಪು ಅವರು ಲೋಯರ್ ಸೆಕೆಂಡರಿ ಪರೀಕ್ಷೆ ಪಾಸುಮಾಡಿ ಎರಡು ವರ್ಷಗಳ ಹಿಂದೆ ಹೆಚ್ಚಿನ ವ್ಯಾಸಂಗಕ್ಕಾಗಿ ಮೈಸೂರಿಗೆ ಹೋಗಿದ್ದರು. ಇಬ್ಬರಿಗೂ ಆಗ ಪರಸ್ಪರ ಪರಿಚಯವಿರಲಿಲ್ಲ. ಕುವೆಂಪು ಅವರ ಊರು ಕುಪ್ಪಳಿಗೂ ಕಡಿದಾಳಿಗೂ ಕಾಲುದಾರಿಯಲ್ಲಿ ಸುಮಾರು ಏಳುಮೈಲಿದೂರವಿತ್ತು. (ಕಾಲಾನುಕ್ರಮದಲ್ಲಿ ಅವರಿಬ್ಬರೂ ಬೀಗರಾದರು. ಕುವೆಂಪು ಅವರ ಮಗಳು ಇಂದು ಕಲಾಳನ್ನು ಕಡಿದಾಳರ ತಮ್ಮ ತಮ್ಮಯ್ಯ ಗೌಡರ ಮಗ ಡಾ॥ ಕೆ.ಟಿ.ಸುರೇಂದ್ರ ಅವರಿಗೆ ಕೊಟ್ಟು ವಿವಾಹವಾಯಿತು) ಮಾಧ್ಯಮಿಕ ಶಾಲೆಗೆ ಸೇರಿದಾಗಲೆ ಕಡಿದಾಳರಿಗೆ ಹಿಂದುಳಿದ ಬಡ ವಿದ್ಯಾರ್ಥಿಗಳಿಗೆ ಕೊಡುವ ವಿದ್ಯಾರ್ಥಿ ವೇತನ ಸಿಕ್ಕಿತು. ಅದರಿಂದಾಗಿ ಕಡಿದಾಳರಿಗೆ ತನ್ನ ಬಟ್ಟೆ ಪುಸ್ತಕಗಳನ್ನು ಕೊಳ್ಳಲು ತಂದೆಯವರನ್ನಾಗಲಿ ಚಿಕ್ಕಪ್ಪ ತುಡ್ಕಿ ರಾಮಣ್ಣಗೌಡರನ್ನಾಗಲಿ ಅಶ್ರಯಿಸುವ ಅವಶ್ಯಕತೆ ಬರಲಿಲ್ಲ. ಚಿಕ್ಕಪ್ಪನವರ ಅನ್ನದ ಋಣಕ್ಕಾಗಿ ಅವರು ಚಿಕ್ಕಮ್ಮನಿಗೆ ಸಣ್ಣಪುಟ ಕೆಲಸದಲ್ಲಿ ನೆರವಾಗುತ್ತಿದ್ದರು. ಮನೆಯ ಕೆಲಸದಾಳು ಗೈರು ಹಾಜರಾದಾಗ ದನಕಾಯುವ ಕೆಲಸವನ್ನು ಮಾಡುತ್ತಿದ್ದರು. ಭತ್ತದ ಕೊಯಿಲಿನ ಸಮಯದಲ್ಲಿ ಕಣದಲ್ಲಿ ಕುತ್ತರೆ ಹಾಕಿದ ಭತ್ತವನ್ನು ಕಳ್ಳರು ರಾತ್ರಿ ಕದಿಯದಂತೆ ಹಕ್ಕೆಮನೆಯಲ್ಲಿ ಮಲಗಿ ಕಾಯುವ ಕೆಲಸವನ್ನು ಮಾಡುತ್ತಿದ್ದರು. ಹುಡುಗ ಓದಿಕೊಳ್ಳುತ್ತಿದ್ದಾನೊ ಶಾಲೆಗೆ ಹೋಗುತ್ತಿದ್ದಾನೊ ಇಲ್ಲವೋ ಎಂಬುದನ್ನು ರಾಮಣ್ಣ ಗೌಡರು ಗಮನಿಸುತ್ತಿರಲಿಲ್ಲ. ಏಕೆಂದರೆ ಅವರು ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಸದಾತಿರುಗಾಟದಲ್ಲಿರುತ್ತಿದ್ದರು. ಹುಡುಗನ ಕೆಲಸ ಕಾರ್ಯಗಳು ಅತನ ನಡವಳಿಕೆ ಚಿಕ್ಕಪ್ಪ ಚಿಕ್ಕಮ್ಮಗೆ ತೃಪ್ತಿಯನ್ನುಂಟು ಮಾಡಿತ್ತು. ಹುಡುಗನ ಮೇಲೆ ಅವಳಿಗೆ ಮಮತೆ ಹಾಗೂ ಪ್ರೀತಿ ವಿಶ್ವಾಸ ಬೆಳೆಯಿತು. ಹುಡುಗನು ಚಿಕ್ಕಪ್ಪ ಚಿಕ್ಕಮ್ಮಂದಿರಿಗೆ ನಿಷ್ಠೆಯಿಂದ ನಡೆದುಕೊಂಡ. ಹುಡುಗನ ಓದಿನ ಬಗ್ಗೆ ಚಿಕ್ಕಪ್ಪ ರಾಮಣ್ಣಗೌಡರು ತಲೆಕೆಡಿಸಿಕೊಳ್ಳದೆ ಇರುವುದಕ್ಕೆ ಬೇರೆ ಕಾರಣವಿತ್ತು. ಅದೇನೆಂದರೆ ಅವರು ತೀರ್ಥಹಳ್ಳಿ

ತಾಲೂಕ್ ಬೋರ್ಡಿನ ಸದಸ್ಯರಾಗಿದ್ದುದಲ್ಲದೆ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದುದರಿಂದ ಮೈಸೂರಿಗೆ ಹೋಗಿಬರಬೇಕಾಗಿತ್ತು. ಅವರು ಬಿಡುವಿಲ್ಲದ ಕೆಲಸದಲ್ಲಿ ತೊಡಗಿರುತ್ತಿದ್ದರು.

ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಪಾಸುಮಾಡಿದ ಬಳಿಕ ಚಿಕ್ಕಪ್ಪ ರಾಮಣ್ಣ ಗೌಡರು ಕಡಿದಾಳರನ್ನು ಹೈಸ್ಕೂಲ್ ವಿದ್ಯಾಭ್ಯಾಸಕ್ಕಾಗಿ ಕಡಿದಾಳರ ದೂರದ ಬಂಧು ವೆಂಕಟಪ್ಪಗೌಡರೊಂದಿಗೆ ಬೆಂಗಳೂರಿಗೆ ಕಳುಹಿಸಿದರು. ವೆಂಕಟಪ್ಪಗೌಡರು ತೀರ್ಥಹಳ್ಳಿ ಕಡೆಯವರೇ ಆಗಿದ್ದು, ಬೆಂಗಳೂರಿನಲ್ಲಿ ಮೆಡಿಸನ್ ಓದುತ್ತಿದ್ದರು. ತೀರ್ಥಹಳ್ಳಿಯಲ್ಲಿ ಅಂದು ಪ್ರೌಢಶಾಲೆ ಇರಲಿಲ್ಲ. ಪ್ರೌಢಶಾಲೆ ಓದಲು ವಿದ್ಯಾರ್ಥಿಗಳು ಶಿವಮೊಗ್ಗ ಬೆಂಗಳೂರಿಗೆ ಹೋಗಬೇಕಾಗಿತ್ತು. ಬೆಂಗಳೂರಿನ ಬಸವನಗುಡಿಯ ಒಕ್ಕಲಿಗರ ವಿದ್ಯಾರ್ಥಿನಿಲಯದಲ್ಲಿ ವಸತಿ ಸೌಕರ್ಯ ಸಿಕ್ಕಿತು. ಮೆಜೆಸ್ಟಿಕ್ಕಿನ ಮೈಸೂರು ಬ್ಯಾಂಕಿನ ಸಮೀಪದಲ್ಲಿದ್ದ ಮಿಶನ್ ಹೈಸ್ಕೂಲಿಗೆ ಪ್ರವೇಶ ಪಡೆದರು. ಬಸವನಗುಡಿಯ ವಿದ್ಯಾರ್ಥಿನಿಲಯದಲ್ಲಿ ಶ್ರೀ ಹೊಂಬೇಗೌಡರು (ರಾಜ್ಯ ಹೈಕೋರ್ಟ್ ಮುಖ್ಯನ್ಯಾಯಮೂರ್ತಿ) ವಸತಿ ಸೌಕರ್ಯ ಪಡೆದಿದ್ದರು. ಹುಡುಗ ಮಂಜಪ್ಪನವರು ಬಸವನಗುಡಿಯ ವಿದ್ಯಾರ್ಥಿನಿಲಯದಿಂದ ದೊಡ್ಡಪೇಟೆಯ ಮಾರ್ಗವಾಗಿ ಶಾಲೆಗೆ ನಡೆದುಕೊಂಡು ಹೋಗಬೇಕಾಗಿತ್ತು. ಹಳ್ಳಿಯಿಂದ ಬಂದ ಹುಡುಗನಿಗೆ ಬೆಂಗಳೂರು ನಗರದ ದೃಶ್ಯಗಳನ್ನು ನೋಡುವುದು ಉಲ್ಲಾಸಕರ ವಿಷಯವಾಗಿತ್ತು. ಹೊಸ ಅನುಭವವಾಗಿತ್ತು. ಅದರೆ ತಂದೆ ತಾಯಿಗಳನ್ನು ಬಂಧುಬಳಗದವರನ್ನು ಬಿಟ್ಟು ಬಂದುದರಿಂದ ಹೊಸಮುಖಗಳನ್ನು ಹಾಗೂ ಕಾಣದ ಹೊಸ ಊರಿಗೆ ಬಂದುದರಿಂದ ಮನಸ್ಸಿಗೆ ಬಹಳ ಬೇಸರವಾಗುತ್ತಿತ್ತು. ಬೆಂಗಳೂರಿನ ವಾತಾವರಣ ಹಿಡಿಸಲಿಲ್ಲ. ಸಂಕೋಚ ಸ್ವಭಾವದ ಹುಡುಗನಿಗೆ ಹೊಸ ಹುಡುಗರೊಂದಿಗೆ ಬೆರೆಯುವುದು ಕಷ್ಟವಾಗುತ್ತಿತ್ತು. ಚಿಕ್ಕಪ್ಪನವರಿಗೆ ತನ್ನ ಕಷ್ಟವನ್ನು ಹೇಳಿಕೊಂಡು ತನಗೆ ಶಿವಮೊಗ್ಗೆಯಲ್ಲಿ ಓದಲು ಅನುಮತಿ ನೀಡಬೇಕೆಂದು ಪತ್ರ ಬರೆದರು. ಚಿಕ್ಕಪ್ಪನವರು ಹುಡುಗನ ಕಷ್ಟಕ್ಕೆ ಮರುಗಿ ಸ್ಪಂದಿಸಿದರು. ಹೊಂಬೇಗೌಡರು ಬೆಂಗಳೂರಿನಲ್ಲಿಯೇ ಇದ್ದು ವ್ಯಾಸಂಗವನ್ನು ಮುಂದುವರೆಸಬೇಕೆಂದು ಹೇಳಿದರೂ ಮಂಜಪ್ಪನವರು ಒಪ್ಪಿಕೊಳ್ಳಲಿಲ್ಲ. (ಮುಂದೊಂದು ದಿನ ಕಡಿದಾಳರು ಹೊಂಬೇಗೌಡರು ಬೀಗರಾದರು. ಕಡಿದಾಳರು ಮಗಳು ಶ್ರೀಲತಾಳನ್ನು ಹೊಂಬೇಗೌಡರ ಮಗ ಶರತ್‌ಚಂದ್ರ ಅವರಿಗೆ ಕೊಟ್ಟು ವಿವಾಹವಾಯಿತು). ಶಿವಮೊಗ್ಗೆಯ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ಓದಲು ಅರ್ಥಿಕವಾಗಿ ಕಷ್ಟದಲ್ಲಿದ್ದುದರಿಂದ ದೇವಂಗಿ ರಾಮಣ್ಣಗೌಡರ (ಕುವೆಂಪು ಅವರ

ಹೆಂಡತಿಯ ತಂದೆ) ಅಡಿಕೆ ಮಂಡಿಯಲ್ಲಿ ತೀರ್ಥಹಳ್ಳಿ ವಿದ್ಯಾರ್ಥಿಗಳಿಗೆಂದು ಮೀಸಲಿಟ್ಟಿದ್ದ ಕೊಠಡಿಯಲ್ಲಿ ವಸತಿ ಸೌಕರ್ಯವನ್ನು ಪಡೆದರು. ಎರಡು ಹೊತ್ತಿನ ಊಟಕ್ಕೆ ಅಡಿಕೆ ಮಂಡಿಯ ಹತ್ತಿರವಿದ್ದ ಕುಪ್ಪಯ್ಯ ಎಂಬುವರ ಹೋಟೆಲಿನಲ್ಲಿ ಚಿಕ್ಕಪ್ಪನವರು ವ್ಯವಸ್ಥೆ ಮಾಡಿದರು. ಕಾಫಿ ತಿಂಡಿಯ ವ್ಯವಸ್ಥೆ ಇಲ್ಲ. ಹಸಿವಾದರೆ ಶಾಲೆಯ ಆವರಣದಲ್ಲಿದ್ದ ನಲ್ಲಿಯ ನೀರಿನ ಸೇವನೆಯಷ್ಟೆ. ಪ್ರತಿನಿತ್ಯ ಎರಡು ಹೊತ್ತಿನ ಊಟ ಬಿಟ್ಟರೆ ಉಳಿದಂತೆ ಉಪವಾಸ. ವಸತಿ ಅಶ್ರಯದಾತ ರಾಮಣ್ಣಗೌಡರ ಮಗ ಮಾನಪ್ಪನವರು (೧೯೬೪ ರಲ್ಲಿ ಶಿವಮೊಗ್ಗೆಯ ಮಂಡಗದ್ದೆ ಸಮೀಪದ ಮುಡಬ ಎಂಬಲ್ಲಿ ದೋಣಿ ದುರಂತದಲ್ಲಿ ನಿಧನರಾದರು) ಅದೇ ಶಾಲೆಯಲ್ಲಿ ಓದುತ್ತಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ಅವರು ಪಾಲ್ಗೊಂಡಿದ್ದರು. ಮಾನಪ್ಪನವರು ಒಂದು ಗ್ರಂಥಾಲಯವನ್ನು ಇಟ್ಟುಕೊಂಡಿದ್ದರು. ಇಂಗ್ಲಿಷ್, ಕನ್ನಡ ಉತ್ತಮ ಪುಸ್ತಕಗಳು ಅಲ್ಲಿದ್ದವು. ಮಂಜಪ್ಪನವರು ಭಾಷಾಜ್ಞಾನವನ್ನು ಸಂಪಾದಿಸಿಕೊಳ್ಳಲು ಗ್ರಂಥ ಭಂಡಾರವನ್ನು ಬಳಸಿಕೊಂಡರು. ಊಟದ ಹೋಟೆಲ್ಲಿನ ಕುಪ್ಪಯ್ಯನವರಿಗೆ ಮಂಜಪ್ಪನವರ ಮೇಲೆ ಬಹಳ ಪ್ರೀತಿ, ವಿಶ್ವಾಸ. ಹುಡುಗನಿಗೆ ವಾರಕ್ಕೊಮ್ಮೆ ಅಭ್ಯಂಜನ ಸ್ನಾನವನ್ನು ಮಾಡಿಸುತ್ತಿದ್ದರು. ಮಂಜಪ್ಪನವರು ಊಟಕ್ಕೆ ಬರುವುದು ತಡವಾದರೆ ರಸ್ತೆಯಲ್ಲಿ ನಿಂತು ಹುಡುಗನಿಗಾಗಿ ಕಾಯುತ್ತಿದ್ದರು. ಮಂಜಪ್ಪನವರು ಕುಪ್ಪಯ್ಯನವರನ್ನು ಬಹಳ ಕೃತಜ್ಞತೆಯಿಂದ ನೆನೆಸಿಕೊಳ್ಳುತ್ತಾರೆ. ಪ್ರೌಢಶಾಲೆಯಲ್ಲಿ ಮಂಜಪ್ಪನವರಿಗೆ ವಿದ್ಯಾರ್ಥಿ ವೇತನ ಸಿಕ್ಕಿತು. ಅದು ಹೋಟೆಲ್ ಊಟದ ಖರ್ಚಿಗೆ ಸಾಕಾಗುತ್ತಿತ್ತು. ಚಿಕ್ಕಪ್ಪನವರು ಶಿವಮೊಗ್ಗೆಗೆ ಬಂದಾಗ ಅಲ್ಪಸ್ವಲ್ಪ ಹಣವನ್ನು ಕೊಡುತ್ತಿದ್ದರು. ಆ ದಿನಗಳಲ್ಲೂ ಮುಂದೆಯೂ ಕಡಿದಾಳರಿಗೆ ತಂದೆಯಿಂದ ಯಾವ ಆರ್ಥಿಕ ಸಹಾಯವೂ ದೊರೆಯಲಿಲ್ಲ. ಆದಾಯವಿದ್ದರೆ ತಾನೆ ಸಹಾಯ ಮಾಡುವುದು?

ಶಿವಮೊಗ್ಗೆಯಲ್ಲಿ ಓದುತ್ತಿರುವಾಗಲೆ ಮಂಜಪ್ಪನವರು ತನ್ನ ಹೆಸರಿನ ಹಿಂದೆ ಇದ್ದ ಜಾತಿ ಸೂಚಕ 'ಗೌಡ' ಎಂಬ ಪದವನ್ನು ಕಿತ್ತು ಹಾಕಿದರು. ಆದರೂ. ತೀರ್ಥಹಳ್ಳಿ ಕಡೆಯ ಜನ ಕಡಿದಾಳರು ಮಂತ್ರಿ, ಮುಖ್ಯಮಂತ್ರಿ, ಶಾಸಕ, ವಕೀಲರಾದಾಗ ಮಂಜಪ್ಪ ಗೌಡರೆಂದೇ ಕರೆಯುತ್ತಿದ್ದರು. ೧೯೨೭ ರಲ್ಲಿ ಅವರು ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ಪಾಸುಮಾಡಿದರು. ಅನಂತರ ಎಂಟ್ರೆನ್ಸ್ ಪರೀಕ್ಷೆಯನ್ನು ತೆಗೆದುಕೊಂಡರು. ಇಲ್ಲಿಯು ಅವರಿಗೆ ವಿದ್ಯಾರ್ಥಿ ವೇತನ ಸಿಕ್ಕಿತು. ಎಂಟ್ರೆನ್ಸ್ ಪರೀಕ್ಷೆ ಬಹಳ ಕಠಿಣವಾದ ಪರೀಕ್ಷೆಯಾಗಿತ್ತು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಬಹಳ ಮಂದಿ ವಿದ್ಯಾರ್ಥಿಗಳ ಭವಿಷ್ಯ ಮುಗಿದು ಹೋಗುತ್ತಿತ್ತು. ಅಲ್ಲಿ ಪಾಸದವರು

ಎಂಟ್ರೆನ್ಸ್ ಪರೀಕ್ಷೆಯಲ್ಲಿ ನಪಾಸಾಗಿ ವಿದ್ಯೆಗೆ ಶರಣು ಹೊಡೆಯುತ್ತಿದ್ದುದು ಜಾಸ್ತಿ. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಪಾಸಾದವರು ಯಾವುದೋ ಡಿಗ್ರಿಯನ್ನು ತಮ್ಮ ಜೇಬಿಗೆ ಇಳಿಸಿಕೊಳ್ಳುವುದು ಖಚಿತವಾಗಿತ್ತು. ಇದು ಹಳ್ಳಿಯಿಂದ ಬಂದ ವಿದ್ಯಾರ್ಥಿಗಳ ಗೋಳಿನ ಕತೆ. ಮಂಜಪ್ಪನವರು ಎಂಟ್ರೆನ್ಸ್ ಪರೀಕ್ಷೆಯ ಇಂಗ್ಲೀಷ್ ವಿಷಯದಲ್ಲಿ ಐದು ಅಂಕಗಳು ಕಡಿಮೆಯಾಗಿ ನಪಾಸಾದರು. ನಪಾಸಾದ್ದರಿಂದ ಎರಡನೆ ಬಾರಿಗೆ ಪರೀಕ್ಷೆಗೆ ಕೂತರೆ ವಿದ್ಯಾರ್ಥಿ ವೇತನ ಸಿಗುತ್ತಿರಲಿಲ್ಲ. ಹಿಂದಿನಂತೆ ನಿಯಮಿತ ದಿನಗಳಕಾಲ ತರಗತಿಗೆ ಹಾಜರಾಗಬೇಕಿತ್ತು. ಶಿವಮೊಗ್ಗೆಯಲ್ಲಿ ಕಡಿದಾಳರಿಗೆ ಹಣದ ಅವಶ್ಯಕತೆ ಇತ್ತು. ಚಿಕ್ಕಪ್ಪನವರಿಂದ ಹಣದ ಸಹಾಯ ಕೇಳಲು ಸಂಕೋಚವಾಯಿತು. ಅವರ ಸ್ಥಿತಿಯನ್ನು ಕಂಡು ಮರುಗಿ ಚಿಕ್ಕಪ್ಪ ಹಣದ ಸಹಾಯ ಮಾಡಿದರು. ಆದರೆ ಮಂಜಪ್ಪನವರ ಆರೋಗ್ಯ ಕೆಟ್ಟಿತು. ಮಲೇರಿಯಾ ಜ್ವರದಿಂದ ಅವರು ನರಳಿದರು. ಪರೀಕ್ಷೆಯಲ್ಲಿ ಒಮ್ಮೆ ನಪಾಸಾದ್ದರಿಂದ ಅವರು ಮಾನಸಿಕವಾಗಿ ಕುಗ್ಗಿ ಹೋಗಿದ್ದರು. ಅನಾರೋಗ್ಯದಲ್ಲಿ ಓದು ಮುಂದುವರಿಸಲಾಗದೆ ತೀರ್ಥಹಳ್ಳಿಗೆ ಚಿಕ್ಕಪ್ಪನ ಮನೆಗೆ ಹೋದರು. ತಂದೆ ದುಗ್ಗಣ್ಣಗೌಡರು ಮಗನ ಆರೋಗ್ಯ ಕೆಟ್ಟಿದ್ದುದು ಕೇಳಿ ದುಗುಡದಿಂದ ತೀರ್ಥಹಳ್ಳಿಗೆ ಧಾವಿಸಿ ಬಂದರು. ತೀರ್ಥಹಳ್ಳಿಯ ಮಲೆಯಾಳಿ ಕೀಲು ಪಂಡಿತರಿಗೆ ಹುಡುಗನನ್ನು ತೋರಿಸಿದರು. ಕೀಲು ಪಂಡಿತರು ಹುಡುಗನನ್ನು ಪರೀಕ್ಷಿಸಿ ಹುಡುಗನಿಗೆ ರಾಜಕ್ಷಯವೆಂದು, ಅದು ಮಹಾರಾಜರುಗಳಿಗೆ ಮಾತ್ರ ಬರುವಂತಹ ಕಾಯಿಲೆಯೆಂದು, ಹುಡುಗ ಬದುಕುಳಿದರೆ ಆತನಿಗೆ ರಾಜಯೋಗವೆಂದು ಹೇಳಿದರು. ಗುರುತರವಾದ ಕಾಯಿಲೆಯ ವಿಷಯ ಕೇಳಿ ಗೌಡರು ದಿಗಿಲುಬಿದ್ದರು. ಹೇಗಾದರೂ ಮಾಡಿ ಮಗನ ಕಾಯಿಲೆ ವಾಸಿ ಮಾಡಬೇಕೆಂದು ಪಂಡಿತರನ್ನು ಅಂಗಲಾಚಿದರು. ಪಂಡಿತರು ಕಾಯಿಲೆ ವಾಸಿ ಮಾಡಲು ರೂಪಾಯಿ ಐನೂರು ಖರ್ಚಾಗುತ್ತದೆಂದು ಹೇಳಿದರು. ಗೌಡರಿಗೆ ಆಕಾಶವೆ ತಲೆಯ ಮೇಲೆ ಕಳಚಿ ಬಿದ್ದಂತಾಯಿತು. ಗೌಡರಲ್ಲಿ ಐವತ್ತು ರೂಪಾಯಿ ಕೂಡ ಇರಲಿಲ್ಲ. ಇನ್ನು ಐನೂರು ರೂಪಾಯಿ ಎಲ್ಲಿಂದ ತರುವುದು? ಹುಡುಗನನ್ನು ವಾಪಾಸು ಕರೆದುಕೊಂಡು ಬಂದರು. ಚಿಕ್ಕಪ್ಪ ರಾಮಣ್ಣಗೌಡರು ತಮ್ಮ ಆಪ್ತರಾದ ಸರ್ಕಾರಿ ಆಸ್ಪತ್ರೆಯ ವೈದ್ಯರಾದ ಶಾಮರಾವ್ ಅವರಿಗೆ ತೋರಿಸಿದರು. ಶ್ಯಾಮರಾಯರು ದಕ್ಷ ವೈದ್ಯರೂ ಪ್ರಾಮಾಣಿಕರೂ ಆಗಿದ್ದು ರೋಗಿಗಳ ಮೇಲೆ ಬಹಳ ಅನುಕಂಪವನ್ನು ಹೊಂದಿದವರು. ಅವರು ಹುಡುಗನನ್ನು ಪರೀಕ್ಷಿಸಿ ಬಹಳ ದಿನದಿಂದ ಹುಡುಗ ಮಲೇರಿಯಾ ಕಾಯಿಲೆಯಿಂದ ನರಳುತ್ತಿದ್ದಾನೆಂದು ಹೇಳಿ ಸೂಕ್ತ ಚಿಕಿತ್ಸೆ ನೀಡಿದರು. ಮರಣ ಶಯ್ಯೆಯಲ್ಲಿದ್ದ ಹುಡುಗ ಗುಣಮುಖನಾದ. ಮನೆಯಲ್ಲಿದ್ದುಕೊಂಡು ಯೋಗಾಸನ ಮಾಡುತ್ತ ಪೌಷ್ಠಿಕವಾದ ಆಹಾರವನ್ನು

ತೆಗೆದುಕೊಂಡು ಆರೋಗ್ಯವಂತನಾದ. ಅರೋಗ್ಯ ಸುಧಾರಿಸಿದ ಮೇಲೆ ಸುಮ್ಮನೆ ಕಾಲಹರಣ ಮಾಡದೆ ಗೃಹಕೃತ್ಯದಲ್ಲಿ ಕಷ್ಟಪಡುತ್ತಿದ್ದ ತಾಯಿಗೆ ಸಕಲ ರೀತಿಯಲ್ಲೂ ನೆರವಾದ. ಶಾಲೆಗೆ ಹೋಗುತ್ತಿದ್ದ ಸಹೋದರರಿಗೆ ಪಾಠ ಹೇಳಿ ಕೊಡುವುದು ಅನಕ್ಷರಸ್ಥರಾದ ಸಹೋದರಿಯರಿಗೆ ಅಕ್ಷರಾಭ್ಯಾಸವನ್ನು ಮಾಡಿಸಿದ. ತೀರ್ಥಹಳ್ಳಿಯ ಸಾರ್ವಜನಿಕ ಗ್ರಂಥಾಲಯದಲ್ಲಿದ್ದ ಇಂಗ್ಲೀಷ್ ಗ್ರಂಥಗಳನ್ನು ಎರವಲಾಗಿ ತಂದು ಓದಿದ. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಇಂಗ್ಲೀಷ್ ವಿಷಯದಲ್ಲಿ ನಪಾಸಾದುದರಿಂದ ಇಂಗ್ಲೀಷ್ ಭಾಷಾಜ್ಞಾನವನ್ನು ಗಳಿಸಲು ನಡೆಸಿದ ಪ್ರಯತ್ನವದು. ಅವರು ಓದಿದ ಪುಸ್ತಕಗಳು ಲಾರ್ಡ್‌ಮೆಕಾಲೆ, ಷೇಕ್ಸ್‌ಪಿಯರ್, ವರ್ಡ್‌ವರ್ತ್, ಷೆಲ್ಲಿ, ಕೀಟ್ಸ್, ಬ್ರೌನಿಂಗ್ ಮುಂತಾದ ಲೇಖಕರಿಗೆ ಸಂಬಂಧಿಸಿದವು. ಹುಡುಗನ ಆರೋಗ್ಯ ಸುಧಾರಿಸಿದ ಮೇಲೆ ಚಿಕ್ಕಪ್ಪ ರಾಮಣ್ಣಗೌಡರು ಹುಡುಗನಿಗೆ ಬೆಂಗಳೂರಿನಲ್ಲಿ ಓದು ಮುಂದುವರಿಸಬೇಕೆಂದು ತಾನು ಆರ್ಥಿಕ ಸಹಾಯ ಮಾಡುವುದಾಗಿ ಹೇಳಿದರು.

ಚಿಕ್ಕಪ್ಪನ ಭರವಸೆಯಿಂದ ಕಡಿದಾಳರು ಬೆಂಗಳೂರಿನ ಇಂಟರ್ ಮಿಡಿಯಲ್ ಕಾಲೇಜಿಗೆ ಸೇರಿದರು. ಆ ಕಾಲೇಜು ಈಗಿನ ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜಿನಲ್ಲಿ ನಡೆಯುತ್ತಿತ್ತು. ಸರ್ಕಾರವು ಶಿಕ್ಷಣದಲ್ಲಿ ಸುಧಾರಣೆ ತರುವ ಸಲುವಾಗಿ ಎಂಟ್ರೆನ್ಸ್ ಪರೀಕ್ಷೆಯನ್ನು ರದ್ದುಗೊಳಿಸಿ ಎರಡು ವರ್ಷದ ಇಂಟರ್ ಮಿಡಿಯೇಟ್ ಪರೀಕ್ಷಾ ಪದ್ಧತಿಯನ್ನು ಜಾರಿಗೆ ತಂದಿದ್ದರು. ಅಳಿಯ ಅಲ್ಲ ಮಗಳ ಗಂಡ ಎಂಬ ಗಾದೆಯಂತೆ ಇಂಟರ್ ಮಿಡಿಯೇಟ್ ಪರೀಕ್ಷೆಯೇನು ಅಷ್ಟು ಸುಲಭವಾಗಿರಲಿಲ್ಲ. ಆದರೂ ಕೂಡ ಬಹಳ ಮಂದಿ ವಿದ್ಯಾರ್ಥಿಗಳ ಭವಿಷ್ಯವನ್ನು ನಿರ್ಧರಿಸುವ ಪರೀಕ್ಷೆಯಾಗಿತ್ತು. ಊಟ ವಸತಿಗೆ ಹಿಂದೆ ಸೇರಿಕೊಂಡಿದ್ದ ಬಸವನಗುಡಿ ಒಕ್ಕಲಿಗ ವಿದ್ಯಾರ್ಥಿನಿಲಯಕ್ಕೆ ಸೇರಿಕೊಂಡರು. ಹಿಂದುಳಿದ ವಿದ್ಯಾರ್ಥಿಗಳಿಗೆ ಸಿಗುವ ವಿದ್ಯಾರ್ಥಿವೇತನ ಸಿಕ್ಕಿದ್ದರಿಂದ ಊಟದ ಖರ್ಚಿಗೆ ತೊಂದರೆಯಾಗಲಿಲ್ಲ. ಕಾಲೇಜಿಗೆ ಸೇರಿದ ಮೇಲೆ ದೃಢಕಾಯನಾಗಬೇಕೆಂದು ಸಂಜೆ ಹೊತ್ತು ಕೆ.ವಿ. ಅಯ್ಯರ್ ನಡೆಸುತ್ತಿದ್ದ ವ್ಯಾಯಾಮ ಶಾಲೆಗೆ ಸೇರಿಕೊಂಡರು. ಹೆಚ್ಚಿನ ಜ್ಞಾನ ಸಂಪಾದನೆಗಾಗಿ ಬಿಡುವಿನ ವೇಳೆಯಲ್ಲಿ ಗ್ರಂಥಾಲಯಕ್ಕೆ ಹೋಗಿ ವೃತ್ತ ಪತ್ರಿಕೆಗಳನ್ನು, ಇಂಗ್ಲೀಷ್ ಕನ್ನಡ ಪುಸ್ತಕಗಳನ್ನು ಓದಹತ್ತಿದರು. ಪಠ್ಯಪುಸ್ತಕಗಳನ್ನು ಮಾತ್ರ ಓದುತ್ತಿದ್ದ ಗೆಳೆಯರುಗಳಿಗೆ ಕಡಿದಾಳರು ಹೆಚ್ಚಿನ ವೇಳೆಯನ್ನು ಗ್ರಂಥಾಲಯದಲ್ಲಿ ಕಳೆಯುತ್ತಿದ್ದುದನ್ನು ನೋಡಿ ನಗು ಬಂದಿತು. ಕಡಿದಾಳರು ಪಠ್ಯ ಪುಸ್ತಕಗಳನ್ನು ರಾತ್ರಿ ಒಂಭತ್ತುವರೆವರೆಗೆ ಓದುವ ನಿಯಮವನ್ನುಇಟ್ಟುಕೊಂಡಿದ್ದರು. ಕಾಲೇಜಿನಲ್ಲಿ ವಿರಾಮ ವೇಳೆಯಲ್ಲಿ ಬಹಳ ಮಂದಿ

ವಿದ್ಯಾರ್ಥಿಗಳು ತಿಂಡಿ ತಿನ್ನಲು ಉಪಹಾರಗೃಹಗಳಿಗೆ ಹೋಗುತ್ತಿದ್ದರು. ಹಸಿವಿಲ್ಲದ್ದರಿಂದ ಕಡಿದಾಳರು ತಣ್ಣೀರು ಕುಡಿದು ತಮ್ಮ ಹಸಿವನ್ನು ನೀಗಿಸಿಕೊಳ್ಳುತ್ತಿದ್ದರು. ೧೯೩೦ನೇ ಇಸವಿಯಲ್ಲಿ ಇಂಟರ್ ಪರೀಕ್ಷೆ ಪ್ರಾರಂಭವಾಗುವ ಸಮಯದಲ್ಲಿ ಕಡಿದಾಳರ ಅಕ್ಕ ವೀರಮ್ಮ ನಿಧನರಾದ ಸುದ್ದಿ ಬಂದಿತು. ವೀರಮ್ಮ ಅವರನ್ನು ನಂಬಳದ ದುಗ್ಗಪ್ಪ ಗೌಡರಿಗೆ ಕೊಟ್ಟು ವಿವಾಹವಾಗಿತ್ತು. ಎನ್.ಡಿ. ವೆಂಕಟೇಶ್ (ರಾಜ್ಯ ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ) ಮತ್ತು ಚಂದ್ರಶೇಖರ್ ಎಂಬ ಇಬ್ಬರು ಗಂಡು ಮಕ್ಕಳನ್ನು ವೀರಮ್ಮನವರು ಅಗಲಿದ್ದರು. ಅಕ್ಕನ ಸಾವು ಕಡಿದಾಳರನ್ನು ಬಹುವಾಗಿ ಕಾಡಿತು. ಪರೀಕ್ಷೆಯನ್ನು ಬರೆಯದೆ ಊರಿಗೆ ಹೋಗುವಂತಿರಲಿಲ್ಲ. ಕಷ್ಟಕ್ಕೆ ಸಿಕ್ಕಿದ ಕಡಿದಾಳರು ದುಃಖದಲ್ಲೇ ಪರೀಕ್ಷೆ ಬರೆದು ಊರಿಗೆ ಹೋದರು. ಎಳೆಯ ಮಕ್ಕಳ ಗೋಳನ್ನು ನೋಡಿ ಕಡಿದಾಳರ ಕರುಳು ಕಿವುಚಿತು. ಪರೀಕ್ಷೆಯಲ್ಲಿ ಪಾಸಾಗುವ ಭರವಸೆ ಅವರಿಗೆ ಇರಲಿಲ್ಲ. ಆದರೆ ಅವರ ನಿರೀಕ್ಷೆಮೀರಿ ಪಾಸಾದುದಲ್ಲದೆ ಉತ್ತಮ ಅಂಕಗಳು ಬಂದಿದ್ದವು. ಪಠ್ಯಪುಸ್ತಕಗಳನ್ನಲ್ಲದೆ ಇತರೆ ಗ್ರಂಥಗಳನೋದುತ್ತಿದ್ದ ಅವರನ್ನು ನೋಡಿ ನಗುತ್ತಿದ್ದ ವಿದ್ಯಾರ್ಥಿ ನಿಲಯದ ಗೆಳೆಯರೆಲ್ಲ ಸಾರಾಸಗಟಾಗಿ ಢುಮುಕಿ ಹೊಡೆದಿದ್ದರು.

ಬಿ.ಎ. ಪರೀಕ್ಷೆ ಓದಲು ಕಡಿದಾಳರು ಮೈಸೂರಿನ ಮಹಾರಾಜ ಕಾಲೇಜು ಸೇರಿದರು. ಮೈಸೂರು ನಗರದ ಒಕ್ಕಲಿಗರ ವಿದ್ಯಾರ್ಥಿನಿಲಯದಲ್ಲಿ ವಸತಿ ಪಡೆದರು. ಖ್ಯಾತ ವಿದ್ವಾಂಸರುಗಳಾದ ತೀನಂಶ್ರೀ, ವಿ. ಸೀತಾರಾಮಯ್ಯ ಅವರು ಕನ್ನಡ ಅಧ್ಯಾಪಕರುಗಳಾದರೆ ಎ.ಎನ್.ಮೂರ್ತಿರಾಯರು ಅವರಿಗೆ ಇಂಗ್ಲೀಷ್ ಬೋಧನೆಯ ಅಧ್ಯಾಪಕರಾಗಿದ್ರು. ಕುವೆಂಪು ಅವರು ಯುವರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಕುವೆಂಪು ಅವರು ಅವಿವಾಹಿತರಾಗಿ ರಾಮಕೃಷ್ಣ ಆಶ್ರಮದಲ್ಲಿ ವಾಸಿಸುತ್ತಿದ್ದರು. ಅವರು ಆಗಲೇ ಕನ್ನಡ ನಾಡಿನಲ್ಲಿ ಉತ್ತಮ ಕವಿ ಎಂದು ಹೆಸರು ಪಡೆದಿದ್ದರು. ಅವರನ್ನು ನೋಡಲು ಕಡಿದಾಳರು ಆಗಾಗ್ಗೆ ಆಶ್ರಮಕ್ಕೆ ಹೋಗುತ್ತಿದ್ದರು. ಒಕ್ಕಲಿಗರ ವಿದ್ಯಾರ್ಥಿ ನಿಲಯಕ್ಕೆ ಬಂಗಾಳಿ ಸನ್ಯಾಸಿ ಪ್ರಿಯನಾಥ್ ಮಹಾರಾಜ್ ಎಂಬುವರು ಪ್ರತಿ ಭಾನುವಾರ ಬಂದು ಪರಮಹಂಸ ಮತ್ತು ವಿವೇಕಾನಂದರ ಉಪದೇಶಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುತ್ತಿದ್ದರು. ಅವರ ಉಪದೇಶಗಳು ಕಡಿದಾಳರ ಮೇಲೆ ಬಹಳ ಪರಿಣಾಮವನ್ನು ಬೀರಿತು. ಅವರು ಕೂಡ ಬಿ.ಎ. ವ್ಯಾಸಂಗ ಮುಗಿದ ಮೇಲೆ ಆಶ್ರಮವನ್ನು ಸೇರಿ ಸಂನ್ಯಾಸಿಯಾಗಬೇಕೆಂದು ಬಯಸಿದ್ದರು. ಆದರೆ ಅವರಲ್ಲಿದ್ದ ಲೌಕಿಕ ಪ್ರವೃತ್ತಿ ಆಧ್ಯಾತ್ಮಿಕ ಪ್ರವೃತ್ತಿಗಿಂತ ಪ್ರಬಲವಾಗಿದ್ದುದರಿಂದ ಸನ್ಯಾಸಿಯಾಗುವ ಬದಲು ವಕೀಲರಾಗಿ ರಾಜಕಾರಣಿಯಾದರು. ಶಿವಮೊಗ್ಗೆಯಲ್ಲಿ ವ್ಯಾಸಂಗ ಮಾಡುವಾಗ

ಅವರು ಫುಟ್‌ಬಾಲ್, ಹಾಕಿ, ಕ್ರಿಕೆಟ್ ಆಟಗಳಲ್ಲಿ ಆಸಕ್ತಿ ವಹಿಸುತ್ತಿದ್ದರು. ಮೈಸೂರಿಗೆ ಬಂದ ಮೇಲೆ ಕ್ರೀಡೆಗಳಿಗಾಗಿ ಕಾಲಹರಣ ಮಾಡುವುದಕ್ಕಿಂತ ಗ್ರಂಥಗಳನ್ನು ಓದುವುದು ಒಳ್ಳೆಯದೆಂದು ಅತ್ತ ಕಡೆ ತಮ್ಮ ಗಮನವನ್ನು ಹರಿಯಬಿಟ್ಟರು. ಎಂ.ಪಿ.ಎಲ್ ಶಾಸ್ತ್ರೀಯವರು, ನುಗ್ಗೆಹಳ್ಳಿ ಗುಜ್ಜೇಗೌಡರು ಕುವೆಂಪು ಅವರ ಸ್ನೇಹಿತರು. ಕಡಿದಾಳರ ಸ್ನೇಹಿತರಾಗಿದ್ದರು. ಗೌಡರು ಒಕ್ಕಲಿಗ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯವನ್ನು ತೆರೆದಿದ್ದರು. ಅವರಿಂದಾಗಿ ಬಹಳ ಬಡ ವಿದ್ಯಾರ್ಥಿಗಳು ಉನ್ನತ ವ್ಯಾಸಂಗವನ್ನು ಮಾಡಿ ವಕೀಲರು, ವೈದ್ಯರು, ಹಿರಿಯ ಸರ್ಕಾರಿ ಅಧಿಕಾರಿಗಳು ಆದರು. ತಾರುಣ್ಯದಲ್ಲೆ ಅವರು ನಿಧನರಾದರು. ಕುವೆಂಪು ಅವರು ಗೆಳೆಯನ ಅಗಲಿಕೆಯನ್ನು ತಾಳಲಾಗದೆ ಗೌಡರ ಶ್ರೀಮತಿಯವರಿಗೆ ಒಂದು ಕವನವನ್ನೇ ಶ್ರದ್ಧಾಂಜಲಿಯಾಗಿ ಬರೆದು ಕಳುಹಿಸಿದ್ದರು.

ಕಡಿದಾಳರು ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಆಗಾಗ ಪ್ರಜಾಪ್ರತಿನಿಧಿ ಸಭೆಯಲ್ಲಿ ಭಾಗವಹಿಸಲು ಎಂ.ಆರ್.ಎ. ಆಗಿದ್ದ ಅವರ ಚಿಕ್ಕಪ್ಪ ತುಡ್ಕಿ ರಾಮಣ್ಣಗೌಡರು ಮೈಸೂರಿಗೆ ಬರುತ್ತಿದ್ದರು. ಕಡಿದಾಳ ಚಿಕ್ಕಪ್ಪನವರೊಂದಿಗೆ ಹೋಗಿ ಅಧಿವೇಶನದ ಕಾರ್ಯಕಲಾಪಗಳನ್ನು ವೀಕ್ಷಿಸುತ್ತಿದ್ದರು. ಕಾಂಗ್ರೆಸ್ ನಾಯಕರಾಗಿದ್ದ ಕೆ.ಟಿ. ಭಾಷ್ಯಂ ಅವರ ಭಾಷಣ ಜನ ಮೆಚ್ಚುಗೆಗಳಿಸಿತ್ತು. ಅದು ಕಡಿದಾಳರ ಮೇಲೂ ಪ್ರಭಾವ ಬೀರಿತು. ಆಗಲೆ ಅವರಿಗೆ ಹೆಚ್.ಸಿ. ದಾಸಪ್ಪನವರ ಪರಿಚಯವಾದದ್ದು, ೧೯೩೨ ರಲ್ಲಿ ಕಡಿದಾಳರು ಬಿ.ಎ.ಪರೀಕ್ಷೆಯನ್ನು ಉತ್ತಮ ಅಂಕಗಳನ್ನು ಪಡೆದು ಪಾಸಾದರು. ಪದವೀಧರರಾದ ಮೇಲೆ ಅವರ ಮನಸ್ಸು ಕಾಂಗ್ರೆಸ್ ಸೇರುವ ಬಗ್ಗೆ, ರಾಮಕೃಷ್ಣ ಆಶ್ರಮ ಸೇರುವ ಬಗ್ಗೆ ಹೊಯ್ದಾಡುತ್ತಿತ್ತು. ಊರಿನಲ್ಲಿ ತಂದೆಯವರ ಆರ್ಥಿಕ ಪರಿಸ್ಥಿತಿ ಸರಿ ಇರಲಿಲ್ಲ. ಹಾಗಾಗಿ ಆಶ್ರಮಕ್ಕೆ ಸೇರುವಂತಿರಲಿಲ್ಲ. ಕಾಂಗ್ರೆಸ್ಸೂ ಸೇರುವಂತೆಯೂ ಇರಲಿಲ್ಲ. ಅಂದು ಹಿಂದುಳಿದ ವರ್ಗದವರಿಗೆ ಸರ್ಕಾರಿ ಉದ್ಯೋಗ ಸಿಗುವುದು ಕಷ್ಟವಿರಲಿಲ್ಲ. ಪ್ರೌಢಶಾಲೆಯ ಶಿಕ್ಷಕರುಗಳ ಕನಸು ಕಂಡು ವಿದ್ಯಾಭ್ಯಾಸಕ್ಕೆ ಅಧಾರ ಸ್ಥಂಭವಾಗಿದ್ದ ಚಿಕ್ಕಪ್ಪನವರ ಅಭಿಪ್ರಾಯ ಕೇಳದೆ ಮುಂದುವರೆಯುವಂತಿರಲಿಲ್ಲ. ಚಿಕ್ಕಪ್ಪನವರೊಡನೆ ಸಮಾಲೋಚನೆ ಮಾಡಿದಾಗ ಅವರು ವಕೀಲಿ ಓದಬೇಕೆಂದು, ತಾವು ಆರ್ಥಿಕ ಸಹಾಯ ಮಾಡುವುದಾಗಿ ಹೇಳಿದರು. ಚಿಕ್ಕಪ್ಪನವರ ಅನುಯಾಯಿಗಳು ಕೋರ್ಟ್ ವ್ಯವಹಾರದಲ್ಲಿ ಸಿಲುಕಿಕೊಂಡು ವಕೀಲರ ಕಛೇರಿಗೆ ತಿರುಗುತ್ತಿದ್ದರು. ಅದ್ದರಿಂದ ನಮ್ಮ ಹುಡುಗ ವಕೀಲನಾದರೆ ಒಳ್ಳೆಯದೆಂದು ಅವರು ಭಾವಿಸಿದ್ದರು. ಅಂದು ಮೈಸೂರು ರಾಜ್ಯದಲ್ಲಿ ಕಾನೂನು ಕಾಲೇಜು ಇರಲಿಲ್ಲ. ಕಾನೂನು ಶಿಕ್ಷಣವನ್ನು

ಓದುವವರು ಮದರಾಸಿಗೂ, ಪೂನಾ ನಗರಕ್ಕೂ ಹೋಗಬೇಕಾಗಿತ್ತು. ಚಿಕ್ಕಪ್ಪನವರು ೫೦೦ ರೂಪಾಯಿ ಕೊಟ್ಟರು. ಶಿವಮೊಗ್ಗೆಯ ಕೆಲವು ಗೆಳೆಯರು ಕಾನೂನು ಶಿಕ್ಷಣವನ್ನು ಓದಲು ಪೂನಾಕ್ಕೆ ಹೋಗುವವರಿದ್ದರು. ಕಡಿದಾಳ್ ಅವರೊಂದಿಗೆ ಕೆಲವು ಗೆಳೆಯರು ೧೯೩೨ ಸೆಪ್ಟಂಬರ್ ತಿಂಗಳಲ್ಲಿ ಪೂನಾ ಪ್ರಯಾಣ ಬೆಳೆಸಿ ಫರ್ಗೂಸನ್ ಕಾಲೇಜಿಗೆ ಸೇರಿದರು. ಅಂದು ಪೂನ ನಗರವು ಸಾಂಸ್ಕೃತಿಕ ಮತ್ತು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿತ್ತು. ಪೂನಾದ ನಟ ಬಾಲಗಂಧರ್ವ, ಸಂಗೀತ ವಿದುಷಿ ಹೀರಾಬಾಯಿ, ಸಿನೆಮಾ ನಟಿಯರಾದ ಶಾಂತ ಆಪ್ಟೆ, ದುರ್ಗಾಕೋಟೆ ಅವರುಗಳು  ಅಲ್ಲಿ ನೆಲೆಸಿದ್ದರು. ಸರ್ವೆಂಟ್ ಆಫ್ ಸೊಸೈಟಿಯಲ್ಲಿ ಅಂದು ಹೆಸರಾದ ರಾಜಕೀಯ ಮುಖಂಡರುಗಳು ಭಾಷಣ ಮಾಡುತ್ತಿದ್ದರು. ಕಡಿದಾಳರು ತಪ್ಪದೆ ಹಾಜರಾಗಿ ಅವರ ಭಾಷಣವನ್ನು ಕೇಳುತ್ತಿದ್ದರು. ಇದು ರಾಜಕೀಯ ಮುತ್ಸದ್ಧಿಯೊಬ್ಬರ ಪೂರ್ವಸಿದ್ಧತೆಯ ಲಕ್ಷಣಗಳು. ಕಡಿದಾಳರು ಕಾಮವನ್ನು ಪ್ರಚೋದಿಸುವ ಸಿನೆಮಾ ನೋಡಲು ಹೋಗುತ್ತಿರಲಿಲ್ಲ. ಮಹಿಳೆಯರನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಅವರು ಸ್ವಾಮಿ ವಿವೇಕಾನಂದರಂತೆ ಆಜನ್ಮ ಬ್ರಹ್ಮಾಚಾರಿಯಾಗುವ ಕನಸು ಕಾಣುತ್ತಿದ್ದರು. ಅವರ ಈ ವರ್ತನೆಗೆ ಅವರ ಗೆಳೆಯರುಗಳು ಸ್ವಾಮಿ ವಿವೇಕಾನಂದ ಎಂದು ಗೇಲಿ ಮಾಡುತ್ತಿದ್ದರು.

೧೯೩೨ ಸೆಪ್ಟಂಬರ್ ತಿಂಗಳಿನಲ್ಲಿ ಪುಣೆನಗರದ ಎರವಾಡ ಸೆರೆಮನೆಯಲ್ಲಿದ್ದ ಗಾಂಧೀಜಿಯವರು ಬ್ರಿಟಿಷ್ ಸರ್ಕಾರದವರು ನೀಡಿದ್ದ ಕೋಮುವಾರು ತೀರ್ಪಿನ ವಿರುದ್ಧ ಅಮರಣಾಂತರ ಉಪವಾಸ ಕೈಗೊಂಡಿದ್ದರು. ಇಡಿ ದೇಶವೇ ಅವರ ಉಪವಾಸ ಸತ್ಯಾಗ್ರಹದಿಂದ ತಲ್ಲಣಗೊಂಡಿತ್ತು. ವಿದ್ಯಾರ್ಥಿಗಳು ಕೂಡ ತಳಮಳಗೊಂಡಿದ್ದರು. ಡಾ॥ ಅಂಬೇಡ್ಕರ್ ಅವರು ನಿಮ್ನ ವರ್ಗದ ಪರವಾಗಿ ಬ್ರಿಟಿಷ್ ಸರ್ಕಾರದ ತೀರ್ಪಿನ ಪರವಾಗಿದ್ದರು. ಅಂಬೇಡ್ಕರ್ ಮನಸ್ಸನ್ನು ಗಾಂಧೀಜಿಯವರ ಪರವಾಗಿ ಒಲಿಸಿಕೊಳ್ಳುವ ಸಲುವಾಗಿ ದೇಶದ ವಿವಿಧ ಕಡೆಗಳಿಂದ ಕಾಂಗ್ರೆಸ್ ನಾಯಕರು ಇತರೆ ಪಕ್ಷಗಳ ನಾಯಕರುಗಳು ಪುಣೆಗೆ ಬಂದು ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಿ ಭಾಷಣ ಮಾಡುತ್ತಿದ್ದಾಗ ಕಡಿದಾಳರು ತಪ್ಪದೆ ಆ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಗಾಂಧೀಜಿ ಬ್ರಿಟೀಷ್ ಸರ್ಕಾರ ಮತ್ತು ಅಂಬೇಡ್ಕರ್ ನಡುವೆ ಒಡಂಬಡಿಕೆಯಾಗಿ ಗಾಂಧೀಜಿಯವರು ಉಪವಾಸ ನಿಲ್ಲಿಸಿದರು. ಇಡೀ ದೇಶ ಸಮಾಧಾನದ ನಿಟ್ಟುಸಿರು ಬಿಟ್ಟತು. ಗಾಂಧೀಜಿಯವರನ್ನು ಸೆರಮನೆಯಿಂದ ಬಿಡುಗಡೆ ಮಾಡಿತು. ಕಡಿದಾಳರು ಶಿವಮೊಗ್ಗೆಯಲ್ಲಿ ಹೈಸ್ಕೂಲ್ ಓದುವಾಗ ಅವರ ಶಾಲೆಗೆ ಗಾಂಧೀಜಿಯವರು ಭೇಟಿಕೊಟ್ಟಿದ್ದರು. ಗಾಂಧೀಜಿಯವರ ಮುಖದ ತೇಜಸ್ಸು, ಸಭಿಕರನ್ನು

ಮಂತ್ರಮುಗ್ಧರನ್ನಾಗಿ ಮಾಡುವ ಅವರು ಪ್ರಖರ ಭಾಷಣ ಅವರನ್ನು ಆಕರ್ಷಿಸಿತ್ತು. ಅವರು ಸಂಪೂರ್ಣವಾಗಿ ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಮಾರುಹೋಗಿದ್ದರು. ಪೂನಾದಲ್ಲಿನ ಗಾಂಧೀಜಿಯವರ ಉಪವಾಸ ಸತ್ಯಾಗ್ರಹ, ಅವರ ಕುರಿತು ಹಿರಿಯ ರಾಜಕೀಯ ಮುಖಂಡರುಗಳು ವಹಿಸಿದ ಕಾಳಜಿಯನ್ನು ನೋಡಿ ಗಾಂಧೀಜಿಯ ಪ್ರಭಾವಕ್ಕೆ ತಮ್ಮನ್ನು ಅರ್ಪಿಸಿಕೊಂಡರು. ತಪಸ್ವಿಗಳು ತ್ಯಾಗಿಗಳು ಶ್ರೇಷ್ಠರೆಂಬ ಭಾವನೆ ಅವರಲ್ಲಿ ಮೂಡಿತು. ಮೊದಲ ವರ್ಷದ ಎಲ್.ಎಲ್.ಬಿ ಪರೀಕ್ಷೆಯಲ್ಲಿ ಅವರು ಉತ್ತೀರ್ಣರಾದರೂ ಇನ್ನೂ ಒಂದು ವರ್ಷ ಓದಬೇಕಿದ್ದಿತು. ಎರಡನೆ ವರ್ಷಕ್ಕೆ ಮತ್ತೆ ಹಣಕಾಸಿನ ತೊಂದರೆ ಎದುರಾಯಿತು. ಮತ್ತೆ ಚಿಕ್ಕಪ್ಪನವರಲ್ಲಿ ಹಣಕಾಸಿನ ನೆರವು ಕೇಳುವುದು ಅವರಿಗೆ ಕಷ್ಟವಾಯಿತು. ಚಿಕ್ಕಪ್ಪನವರು ಈಗಾಗಲೆ ಬಹುವಾಗಿ ಸಹಾಯ ಮಾಡಿದ್ದರು. ಎರಡನೆ ವರ್ಷವು ತೊಂದರೆ ಕೊಡಬಾರದೆಂದು ಭಾವ ನಂಬಳದ ದುಗ್ಗಪ್ಪಗೌಡರನ್ನು ಹಣಕಾಸಿನ ನೆರವು ಕೋರಿದರು. ಅಕ್ಕ ವೀರಮ್ಮ ಆಗಲೇ ನಿಧನರಾದ್ದರಿಂದ ಭಾವ ಸಹಾಯ ಮಾಡುವರೋ ಇಲ್ಲವೊ ಎಂಬ ಅಳಕು ಅವರಲ್ಲಿದ್ದಿತು. ಭಾವನಿಗೆ ಅವರ ಮೇಲೆ ಎಂದಿನ ಪ್ರೀತಿ ವಿಶ್ವಾಸ ಇದ್ದೇ ಇತ್ತು. ಹುಡುಗ ಹಣ ಕೇಳಿದ ಕೂಡಲೆ ಮರುಮಾತಾಡದೆ ಅವರು ಆರುನೂರು ರೂಪಾಯಿ ಕೊಟ್ಟರು.

## ತಂದೆಯ ಅಕಾಲ ಮರಣ

ಎರಡನೇ ಎಲ್.ಎಲ್.ಬಿ ಪರೀಕ್ಷೆಗೆ ಇನ್ನು ಮೂರು ತಿಂಗಳು ಇದೆ ಎನ್ನುವಾಗ ಚಿಕ್ಕಪ್ಪ ರಾಮಣ್ಣಗೌಡರು ಕಡಿದಾಳರ ತಂದೆ ರೇಷ್ಮೆ ಕಾಯಿಲೆಯಿಂದ ನಿಧನರಾದರೆಂದು ತಂತಿ ಸಂದೇಶ ಕಳುಹಿಸಿದರು. ಕಡಿದಾಳರಿಗೆ ಅಕಾಶವೆ ಕಳಚಿ ತಲೆಯ ಮೇಲೆ ಬಿದ್ದ ಅನುಭವವಾಯಿತು. ಮನೆಗೆ ತಾನೇ ಹಿರಿಯ ಮಗ, ತಾಯಿ ತಮ್ಮ ತಂಗಿಯರು ಹೇಗೆ ಜೀವನ ಮಾಡುವರೊ ಎಂಬುದೊಂದು ಚಿಂತೆಯಾದರೆ, ತಂದೆ ಸತ್ತ ದುಃಖ ಇನ್ನೊಂದು ಚಿಂತೆಯಾಗಿ ಕಳವಳಗೊಂಡರು. ಎರಡು-ಮೂರು ವರ್ಷಗಳ ಹಿಂದೆ ಗೋರ್ಗಲ್ ಎಂಬ ಸ್ಥಳದಲ್ಲಿ ಜಮೀನುಕೊಳ್ಳಲು ತಂದೆ ಸಾಲ ಮಾಡಿದ್ದರು. ಜಮೀನಿನಿಂದ ಹೇಳಿಕೊಳ್ಳುವ ಉತ್ಪತ್ತಿ ಇರಲಿಲ್ಲ. ಸಾಲದ ಬಡ್ಡಿಯನ್ನು ಕಟ್ಟಲಾಗಿರಲಿಲ್ಲ. ಕಷ್ಟಗಳ ಪರಂಪರೆ ಕಡಿದಾಳರನ್ನು ದುಃಖದ ಮಡುವಿಗೆ ದೂಡಿತು. ಗೆಳೆಯರು ಈ ಪರಿಸ್ಥಿತಿಯಲ್ಲಿ ಪರೀಕ್ಷೆ ಬರೆಸುವುದು ಕಷ್ಟವಾಗುತ್ತದೆಂದು ಮುಂದಿನ ವರ್ಷಪರೀಕ್ಷೆಗೆ ಕೂತಾರಾಯಿತೆಂದು ಸಮಾಧಾನ ಹೇಳಿ ಗಂಟು ಮೂಟೆ ಸಹಿತ ಅವರನ್ನು ಊರಿಗೆ ಕಳುಹಿಸಿದರು. ತಾಯಿಯ ಗೋಳು ಹೇಳತೀರದಾಗಿತ್ತು. ತಮ್ಮಂದಿರಲ್ಲಿ ಹಿರಿಯ

ತಮ್ಮಯ್ಯಗೌಡರು ಚಿಕ್ಕಪ್ಪ ರಾಮಣ್ಣಗೌಡರ ಮನೆಯಲ್ಲಿದ್ದುಕೊಂಡು ಹೈಸ್ಕೂಲ್ ಓದುತ್ತಿದ್ದರು. ತಾಯಿ ತಮ್ಮಂದಿರು, ತಂಗಿಯರಿಗೆ ಸಮಾಧಾನ ಮಾಡಿ ಪರೀಕ್ಷೆಗೆ ಕೂರಲು ಪೂನಕ್ಕೆ ವಾಪಾಸಾದರು. ಪರೀಕ್ಷೆಗೆ ಇನ್ನೂ ಒಂದುವರೆ ತಿಂಗಳಿತ್ತು. ಸ್ನೇಹಿತರ ಸಲಹೆ ಮೇರೆಗೆ ಒಂದು ವರ್ಷಕಾಲ ಮನೆಯಲ್ಲಿ ಕಾಲಹರಣ ಮಾಡಲು ಅವರಿಗೆ ಇಷ್ಟವಿರಲಿಲ್ಲ. ಪರೀಕ್ಷೆಗೆ ಸಿದ್ಧತೆಯನ್ನು ಮಾಡಿಕೊಂಡಿರಲಿಲ್ಲ. ಅವರ ಆಗಮನ ಗೆಳೆಯರುಗಳಿಗೆ ಅಶ್ಚರ್ಯವನ್ನು ತಂದಿತು. ಈ ಸ್ಥಿತಿಯಲ್ಲಿ ಕಡಿದಾಳರು ಪರೀಕ್ಷೆ ಪಾಸು ಮಾಡುವುದು ಕಷ್ಟವೆಂದು ಹೇಳಿದರು. ಅದರೂ ಧೃತಿಗೆಡದೆ ವ್ಯಾಸಂಗದಲ್ಲಿ ಮಗ್ನರಾದರು. ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತರ ಬರೆದು ಪಾಸಾಗುವ ಭರವಸೆಯನ್ನಿಟ್ಟು ಕೊಂಡರು. ಪರೀಕ್ಷಾ ಫಲಿತಾಂಶ ಬಂದಾಗ ಕಡಿದಾಳರ ಗೆಳೆಯರುಗಳಿಗಿಂತ ಹೆಚ್ಚಿನ ಅಂಕಗಳನ್ನು ಪಡೆದು ಪಾಸಾಗಿದ್ದರು.

ಪರೀಕ್ಷೆ ಮುಗಿಸಿ ಬಂದು ತಮ್ಮ ತಮ್ಮಯ್ಯಗೌಡರನ್ನು ಕೂಡಿಸಿಕೊಂಡು ಮನೆಯ ಆರ್ಥಿಕ ಪರಿಸ್ಥಿತಿ ಕುರಿತು ಚರ್ಚಿಸಿದರು. ತಮ್ಮಯ್ಯಗೌಡರು ಹೈಸ್ಕೂಲ್ ವ್ಯಾಸಂಗಕ್ಕೆ ಶರಣು ಹೊಡೆದು ಮನೆಯಲ್ಲಿ ನೆಲೆನಿಂತಿದ್ದರು. ತಂದೆಯವರು ಜಮೀನುಕೊಳ್ಳಲು ಮಾಡಿದ ಸಾಲದ ಜೊತೆಗೆ ತೀರ್ಥಹಳ್ಳಿಯ ಉಡುಪಿ ಗುಂಡಪ್ಪ ಮತ್ತು ಶಿವಮೊಗ್ಗೆಯ ಭೂಪಾಳಂ ನಂಜುಂಡಯ್ಯನವರಲ್ಲಿ ಕೂಡ ಸಾಲ ಮಾಡಿದ್ದರು. ಸಾಲವನ್ನು ತೀರಿಸುವ ಸಲುವಾಗಿ ತಂದೆ ಸಾಲಮಾಡಿ ಖರೀದಿಸಿದ ಗೋರ್ಗಲ್ ಜಮೀನನ್ನು ಮಾರಾಟ ಮಾಡುವ ತೀರ್ಮಾನವನ್ನು ಮಾಡಿಕೊಂಡಿರು, ಬಾಕಿ ಉಳಿದ ಸಾಲವನ್ನು ವಾರ್ಷಿಕ ಎರಡು ಕಂತಿನವರೆಗೆ ತೀರಿಸುವ ಒಪ್ಪಂದವನ್ನು ಮಾಡಿಕೊಂಡರು. ಇದರಿಂದಾಗಿ ಅವಿಭಕ್ತ ಕುಟುಂಬದ ಪರಿಸ್ಥಿತಿ ಸುಧಾರಿಸ ತೊಡಗಿತು.

## ವಕೀಲ ವೃತ್ತಿ ಆರಂಭ

ಪರೀಕ್ಷೆ ಫಲಿತಾಂಶ ಬಂದ ಮೇಲೆ ಮುಂದೇನು ಮಾಡಬೇಕೆಂದು ತೋಚದೆ ಹಳ್ಳಿಯ ಮನೆಯಲ್ಲೇ ಕೆಲಕಾಲ ಕಡಿದಾಳರು ವಿಶ್ರಾಂತಿ ಪಡೆದರು. ಒಂದು ದಿನ ತನಗೆ ಓದುವಾಗ ಆರ್ಥಿಕ ಸಹಾಯ ಮಾಡಿದ ಚಿಕ್ಕಪ್ಪ ರಾಮಣ್ಣಗೌಡರೊಂದಿಗೆ ತನ್ನ ಮುಂದಿನ ಕಾಯಕದ ಬಗ್ಗೆ ಸಲಹೆ ಕೇಳಲು ಹೋದರು. ಹಾಗೂ ಪ್ರೌಢಶಾಲೆಯ ಶಿಕ್ಷಕನಾಗುವ ಬಯಕೆಯನ್ನು ಅವರ ಮುಂದಿಟ್ಟರು. ಕಡಿದಾಳರ ಬಗ್ಗೆ ಯಾವಾಗಲೂ ಬಹಳ ಅನುಕಂಪದಿಂದ ವರ್ತಿಸಿದ ಗೌಡರು ಅಂದು ಸಿಟ್ಟಾಗಿ "ಹುಡುಗಾ ನಿಂಗೆ ನಾಚಿಕೆ ಆಗಲ್ವ ಶಾಲಾ ಮೇಷ್ಟ್ರರಾಗಲಿಕ್ಕೆ? ಒಂದೇ ನೀನು ವಕೀಲನಾಗಬೇಕು ಇಲ್ಲ

ಅಂದ್ರೆ ಅಮಲ್ದಾರನಾಗಬೇಕು" ಎಂದು ಖಡಾಖಂಡಿತವಾಗಿ ಹೇಳಿದರು. ಚಿಕ್ಕಪ್ಪನ ವಿರುದ್ಧ ಮಾತನಾಡುವ ಧೈರ್ಯ ಮಾಡಲಿಲ್ಲ. ಕಡಿದಾಳರಿಗೆ ಅಮಲ್ದಾರನಾಗಿ ಸರ್ಕಾರಿ ಚಾಕರಿ ಮಾಡಲು ಇಷ್ಟವಾಗಲಿಲ್ಲ. ವಕೀಲ ವೃತ್ತಿ ಮಾಡಲು ಶಿವಮೊಗ್ಗೆಗೆ ಹೋಗಬೇಕು. ಅಲ್ಲಿ ಊಟ, ವಸತಿ, ಖರ್ಚಿಗೆ ಹಣಬೇಕು. ಹಣ ಎಲ್ಲಿಂದ ಹೊಂದಿಸುವುದು? ಈಗಾಗಲೇ ಚಿಕ್ಕಪ್ಪನವರಿಂದ ಸಾಕಷ್ಟು ಸಹಾಯ ಪಡೆದಾಗಿದೆ. ಭಾವ ನಂಬಳದ ದುಗ್ಗಪ್ಪಗೌಡರಿಂದಲೂ ಹಣ ಕೇಳುವಂತಿಲ್ಲ. ಅವರು ಎರಡನೇ ವರ್ಷದ ಎಲ್.ಎಲ್.ಬಿ. ಓದುವಾಗ ಸಹಾಯ ಮಾಡಿದ್ದಾರೆ. ತೀವ್ರ ಚಿಂತೆ ಹತ್ತಿ ಕಡಿದಾಳರು ಚಿಕ್ಕಪ್ಪನ ಮಗಳ ಗಂಡ ಬಿ.ಹೆಚ್.ಸುಬ್ಬಯ್ಯಗೌಡ (ಸಹಕಾರಿ ಕ್ಷೇತ್ರದ ದುರೀಣ ಬಿ.ಎಸ್. ವಿಶ್ವನಾಥರ ತಂದೆ) ರಲ್ಲಿ ಸಹಾಯ ಕೋರಿದರು. ಅವರು ತಮ್ಮಲ್ಲಿ ಹಣವಿಲ್ಲವೆಂದು ಗೊಣಗಾಡಿ ೧೫೦ ರೂಪಾಯಿಯನ್ನು ಕೊಟ್ಟರು. ಅನಂತರ ಕೋರ್ಟ್ ವ್ಯವಹಾರಗಳಲ್ಲಿ ಪಳಗಿದ್ದ ತೀರ್ಥಹಳ್ಳಿಯ ಸಾಹುಕಾರ್ ಹೆಚ್.ಎಸ್. ವೆಂಕಟಪ್ಪಗೌಡರ ಸಲಹೆ ಕೇಳಿದರು. ಅವರು "ನೋಡಿ ಗೌಡ್ರೆ ಲಾಯರ್ ಕಸುಬು ಬ್ರಾಹ್ಮಣರಿಗೆ ಹೇಳಿಸಿದ್ದು, ನಮ್ಮವರಿಗೆ ಅದು ಕೈ ಹತ್ತಲ್ಲ ಬ್ರಾಹ್ಮಣರೊಂದಿಗೆ ನಿಮಗೆ ಪೈಪೋಟಿ ಮಾಡಲಿಕ್ಕೆ ಆಗಲ್ಲ" ಎಂದರು. ಅವರ ಮಾತಿನಿಂದ ಕಡಿದಾಳರು ಧೃತಿಗೆಡಲಿಲ್ಲ. ವಕೀಲಿ ವೃತ್ತಿಯನ್ನಲ್ಲದೆ ಬೇರಾವ ವೃತ್ತಿಯನ್ನು ಮಾಡುವ ಅವಕಾಶ ಇರಲಿಲ್ಲ ಅವರಿಗೆ. ಚಿಕ್ಕಪ್ಪನವರು ಶಿವಮೊಗ್ಗೆಯ ಪ್ರಸಿದ್ಧ ಕ್ರಿಮಿನಲ್ ವಕೀಲರಾದ ನಾರಾಯಣಅಯ್ಯಂಗಾರ್ ಅವರಲ್ಲಿ ಕಿರಿಯ ವಕೀಲನಾಗಿ ಇರುವ ವ್ಯವಸ್ಥೆ ಮಾಡಿದರು. ವಸತಿ ಏರ್ಪಾಡಿಗೆ ಹಿಂದೆ ಅವರು ವಿದ್ಯಾರ್ಥಿಯಾಗಿದ್ದಾಗ ವಸತಿ ಸೌಕರ್ಯ ಒದಗಿಸಿದ ದೇವಂಗಿ ರಾಮಣ್ಣಗೌಡರನ್ನು ಕಂಡರು. ಅವರು ಅಡಿಕೆ ಮಂಡಿಯ ಮಹಡಿಯಲ್ಲಿ ಇರಲು ಸ್ಥಳಾವಕಾಶ ಮಾಡಿಕೊಟ್ಟರು. ಮಂಡಿಯ ಸಮೀಪದಲ್ಲಿದ್ದ ಫಣಿಯಪ್ಪ ಎಂಬುವರ ಹೋಟೆಲ್‌ನಲ್ಲಿ ಎರಡು ಹೊತ್ತಿನ ಊಟಕ್ಕೆ ತಾವೇ ವ್ಯವಸ್ಥೆ ಮಾಡಿಕೊಂಡರು. ವಕೀಲಿ ವೃತ್ತಿ ಆದಾಯ ಸಿಗುವವರೆಗೆ ಕಾಫಿ, ತಿಂಡಿಯ ಪ್ರಶ್ನೆ ಇಲ್ಲ. ಕೈಯಲ್ಲಿರುವ ೧೫೦ ರೂಪಾಯಿಗಳನ್ನು ಹಿಡಿತದಲ್ಲಿ ಖರ್ಚು ಮಾಡಬೇಕಿತ್ತು. ಹಸಿವಾದರೆ ಕಾಫಿ, ತಿಂಡಿ ಬದಲಿಗೆ ನೀರೇ ಗತಿಯಾಗಿತ್ತು.

ವಕೀಲ ನಾರಾಯಣ ಅಯ್ಯಂಗಾರರು ಕಡಿದಾಳರನ್ನು ಬಹಳ ವಿಶ್ವಾಸದಿಂದ ನೋಡುತ್ತಿದ್ದರು. ಅವರು ಕ್ರಿಮಿನಲ್ ವಕೀಲರಾಗಿದುದ್ದರಿಂದ ಅವರಲ್ಲಿ ಸಿವಿಲ್ ಕೇಸುಗಳು ಬಹಳ ಕಡಿಮೆ ಸಂಖ್ಯೆಯಲ್ಲಿದ್ದವು. ಅಯ್ಯಂಗಾರ್ ಬಳಿ ಇದ್ದ ಗುಮಾಸ್ತರಾದ ಅಪ್ಪಣ್ಣ ಅಯ್ಯಂಗಾರ್‌ರವರನ್ನು ಬಹಳ ಕೃತಜ್ಞತೆಯಿಂದ ಕಡಿದಾಳರು ಸ್ಮರಿಸಿಕೊಳ್ಳುತ್ತಾರೆ.

ಅಪ್ಪಣ್ಣ ಅಯ್ಯಂಗಾರ್‌ರರು ಕಡಿದಾಳರಿಗೆ ದಾವೆಗಳನ್ನು, ತಕರಾರು ವರದಿಗಳನ್ನು, ಅರ್ಜಿಗಳನ್ನು, ಬರೆಯುವ ವಿಧಾನಗಳನ್ನು, ಲಾಯರ್ ನೋಟಿಸ್ ಬರೆಯುವ ವಿಧಾನವನ್ನು ಕಲಿಸಿಕೊಟ್ಟರು. ಅಯ್ಯಂಗಾರ್‌ರ ಕಛೇರಿಯಲ್ಲಿದ್ದಾಗಲೇ ಕಿರಿಯ ವಕೀಲರಾಗಿ ಕಕ್ಷಿದಾರರ ಪರವಾಗಿ ನೋಟೀಸುಗಳನ್ನು ಕೊಡಲು ಪ್ರಾರಂಭಿಸಿದರು. ಆಗ ಲಾಯರ್ ನೋಟೀಸಿಗೆ ಬರುತ್ತಿದ್ದ ಸಂಭಾವನೆ ಕೇವಲ ಎರಡು ರೂಪಾಯಿಗಳಷ್ಟೆ ಈ ನೋಟೀಸ್ ಕೊಡುವುದರಿಂದ ಕಡಿದಾಳರಿಗೆ ಬರುತ್ತಿದ್ದ ಆದಾಯ ತಿಂಗಳಿಗೆ ಕೇವಲ ಹತ್ತು ರೂಪಾಯಿ ಆಗಿತ್ತು. ಈ ಸಮಯದಲ್ಲಿ ಕೋರ್ಟ್ ತೀರ್ಪುಗಳ ಅಧ್ಯಯನಕ್ಕಾಗಿ ಹೈಕೋರ್ಟ್ ತೀರ್ಪುಗಳನ್ನೊಳಗೊಂಡ ಮಾಸ ಪತ್ರಿಕೆಗಳನ್ನು ಇತರ ಹೈಕೋರ್ಟ್ ತೀರ್ಪುಗಳನ್ನು ಶ್ರದ್ದೆಯಿಂದ ಅಧ್ಯಯನ ಮಾಡಿದ್ದರು. ಇದು ಸಾಧನೆಗೆ ಇರಬೇಕಾದ ಗುಣಲಕ್ಷಣಗಳು. ನಾರಾಯಣ ಅಯ್ಯಾಂಗಾರರ ಕಛೇರಿಯಲ್ಲಿರುವಾಗಲೇ ಕಡಿದಾಳರು ಸಣ್ಣಪುಟ್ಟ ಪ್ರಕರಣಗಳನ್ನು ನಡೆಸುತ್ತಿದ್ದರು. ೧೯೩೬ನೇ ಇಸವಿಯಲ್ಲಿ ತೀರ್ಥಹಳ್ಳಿಯಲ್ಲಿ ಶ್ರೀಮಂತರೆನಿಸಿಕೊಂಡಿದ್ದ ಆನಂದರಾಯರೆಂಬುವರು ಒಂದು ಕೇಸು ಕೊಟ್ಟರು. ಕಡಿದಾಳರು ಆ ಕೇಸು ನಡೆಸುವಲ್ಲಿ ಯಶಸ್ವಿಯಾದರು. ಆ ಕೇಸಿನಲ್ಲಿ ಅವರಿಗೆ ಸಿಕ್ಕ ಸಂಭಾವನೆ ನೂರು ರೂಪಾಯಿ. ಈ ಪ್ರಕರಣದಿಂದಾಗಿ ಅವರ ವಕೀಲ ವೃತ್ತಿಯ ಭವಿಷ್ಯ ಉಜ್ವಲವಾಯಿತು. ಸುದ್ದಿ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಹಬ್ಬಿ ಅವರಿಗೆ ಕೇಸುಗಳು ಬರತೊಡಗಿದವು. ಈ ಮೊದಲು ಕಡಿದಾಳರನ್ನು ಉಪೇಕ್ಷೆ ಮಾಡಿದ್ದ ತೀರ್ಥಹಳ್ಳಿಯ ತಾಲೂಕಿನ ಒಕ್ಕಲಿಗರು ಕೇಸು ಕೊಡತೊಡಗಿದರು. ಹಣಕಾಸಿನ ಸ್ಥಿತಿಯಲ್ಲಿ ಕೊಂಚ ಸುಧಾರಿಸಿಕೊಂಡ ಅವರೂ ಅವರ ಸ್ನೇಹಿತರಾದ ಅಡಿಕೆ ಮಂಡಿ ಕೆಳನರ್ಸೆ ದೇವಪ್ಪಗೌಡರು (ಅವರು ಕಡಿದಾಳರಂತೆ ಕಡ್ಡಿ ಫೈಲ್ವಾನ್ ಆಗಿದ್ದರು) ಒಂದು ಸಣ್ಣ ಮನೆಯನ್ನು ಬಾಡಿಗೆಗೆ ಪಡೆದರು. ಇವರಿಬ್ಬರು ಒಂದು ಕಾಲದಲ್ಲಿ ಒಟ್ಟಿಗೆ ಹೈಸ್ಕೂಲ್ ವ್ಯಾಸಂಗ ಮಾಡಿದವರು. ಆ ಮನೆಯಲ್ಲಿ ಕಡಿದಾಳರು, ಶಾಲೆಗೆ ಹೋಗುವ ಅವರ ಸೋದರ ಅಳಿಯ ಚಿಕ್ಕ ಹುಡುಗ ಎನ್.ಡಿ. ವೆಂಕಟೇಶ್ ಅವರೂ, ಅಡುಗೆಯವನೂ ಇರುತ್ತಿದ್ದರು. ದೇವಪ್ಪಗೌಡರು ಸ್ನಾನಕ್ಕೆ, ಊಟಕ್ಕೆ ಮಾತ್ರ ಬರುತ್ತಿದ್ದರು. ಅವರ ವಾಸ್ತವ್ಯ ಅಡಿಕೆ ಮಂಡಿಯಲ್ಲಿ. ವಕೀಲ ವೃತ್ತಿ ಹುಲುಸಾಗಿ ನಡೆಯುವಾಗ ಕಡಿದಾಳರು ತಿಂಗಳಿಗೆ ಒಂದು ರೂಪಾಯಿ ಬಾಡಿಗೆಗೆ ಒಂದು ರೂಮನ್ನು ಪಡೆದು ಸ್ವತಂತ್ರ್ಯವಾಗಿ ವಕೀಲಿ ಪ್ರಾರಂಭಿಸಿದರು. ಸ್ವತಂತ್ರವಾಗಿ ವಕೀಲಿ ಕೆಲಸ ಶುರು ಮಾಡಿದ ಮೇಲೆ ಬೇರೆ ಬೇರೆ ಕೋಮಿನ ಜನಗಳು ಕೇಸು ಕೊಡತೊಡಗಿದರು. ವಕೀಲಿ ಕೆಲಸ ಒಕ್ಕಲಿಗರಿಗೆ ಹೇಳಿಸಿದ್ದಲ್ಲ, ಅದೇನಿದ್ದರೂ ಬ್ರಾಹ್ಮಣರಿಗೆ ಹೇಳಿಸಿದ್ದು ಎಂಬ ಹಚ್.ಎಸ್. ವೆಂಕಟಪ್ಪಗೌಡರ ಹೇಳಿಕೆ ಸುಳ್ಳಾಯಿತು.

೧೯೩೭ ರಲ್ಲಿ ಕಡಿದಾಳರ ತಾಯಿ ಮನೆಯಲ್ಲೊಬ್ಬಳು ಸೊಸೆ ಇರುವುದು ಅವಶ್ಯವೆಂದು, ಆದ್ದರಿಂದ ಮಗನಿಗೆ ಮದುವೆಯಾಗಲು ಆಗಾಗ ತಗಾದೆ ಮಾಡ ಹತ್ತಿದರು. ಕಡಿದಾಳರು ಆಜನ್ಮ ಬ್ರಹ್ಮಾಚಾರಿಯಾಗಿ ಆಧ್ಯಾತಿಕ ಸಾಧನೆ ಮತ್ತು ದೇಶ ಸೇವೆಯಲ್ಲಿ ತೊಡಗಬೇಕೆಂದು ನಿರ್ಧರಿಸಿದ್ದರು. ಆಕಾರಣಕ್ಕೆ ಅವರು ತಾನು ಮದುವೆಯಾಗದೆ ತಮ್ಮ ತಮ್ಮಯ್ಯಗೌಡರಿಗೆ ಮದುವೆ ಮಾಡಿಸಿದರು.

೧೯೩೬ ರಲ್ಲಿ ಕಡಿದಾಳರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಸದಸ್ಯರಾದರು. ೧೯೩೭ ರಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ನೇಮಕಗೊಂಡರು. ಭೂಪಾಳಂ ಚಂದ್ರಶೇಖರಯ್ಯ (ಕುವೆಂಪು ಅವರ ಸ್ನೇಹಿತರು) ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದು ಅನಂತರ ೧೯೩೮ ರಲ್ಲಿ ಕಾಂಗ್ರೆಸ್ಸನ್ನು ಬಿಟ್ಟು ಹಿಂದೂ ಮಹಾಸಭೆಯನ್ನು ಸೇರಿದರು. ಡಿ.ಆರ್. ಮಾನಪ್ಪನವರು (ಕುವೆಂಪು ಅವರ ಹೆಂಡತಿಯ ಅಣ್ಣ) ಸಕ್ರಿಯ ಪಾತ್ರವಹಿಸದಿದ್ದರೂ ಕಾಂಗ್ರೆಸ್ಸಿಗೆ ನಾನಾ ವಿಧದಲ್ಲಿ ಬೆಂಬಲಕೊಡುತ್ತಿದ್ದರು. ಅಂದು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆ ಇತ್ತು. ಪ್ರಜೆಗಳ ಕ್ಷೇಮವೇ ತಮ್ಮ ಕ್ಷೇಮವೆಂಬ ಭಾವನೆಯಿಂದ ಅವರು ರಾಜ್ಯಭಾರ ಮಾಡುತ್ತಿದ್ದರು. ಅವರದ್ದು ನಲವತ್ತು ವರ್ಷ ಆಳ್ವಿಕೆಯಾಗಿತ್ತು. ಗಾಂಧೀಜಿಯವರು ಮೈಸೂರು ಸಂಸ್ಥಾನಕ್ಕೆ ಭೇಟಿಕೊಟ್ಟು ಪ್ರವಾಸಮಾಡಿ, ಅಡಳಿತವನ್ನು ನೋಡಿ, ಮುಕ್ತ ಕಂಠದಿಂದ ಶ್ಲಾಘಿಸಿ ಒಡೆಯರ್ ಅವರನ್ನು ರಾಜಋಷಿ ಎಂದು ಹೊಗಳಿದರು. ಗಾಂಧೀಜಿಯವರನ್ನು ರಾಜ್ಯಾದ್ಯಂತ ಪ್ರವಾಸ ಕರೆದುಕೊಂಡು ಹೋದವರು ದಿವಾನ್ ಮಿರ್ಜಾಇಸ್ಮಾಯಿಲ್ ಅವರು. ಅವರು ಗಾಂಧೀಜಿಯವರನ್ನ ಪೂಜ್ಯಭಾವನೆಯಿಂದ ಕಾಣುತ್ತಿದ್ದರು. ರಾಷ್ಟ್ರೀಯ ಕಾಂಗ್ರೆಸ್ಸಿನ ವಿಚಾರದಲ್ಲಿ ಸಹಾನುಭೂತಿಯನ್ನು ತಾಳಿರಲಿಲ್ಲ. ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ತಲೆ ಎತ್ತದಂತೆ ಮಾಡಲು ಸಾಮಾ, ದಾನ, ಭೇದ, ದಂಡ ಎಂಬ ಚತುರೋಪಾಯ ವಿಧಾನಗಳನ್ನು ಅನುಸರಿಸುತ್ತಿದ್ದರು. ಕಾಂಗ್ರೆಸ್ಸಿಗೆ ಸೇರಿದವರನ್ನು ಅವರಿಗೆ ಬೆಂಬಲ ನೀಡುತ್ತಿದ್ದವರನ್ನು. ಅವರು ವೈರಿಗಳೆಂಬ ಭಾವನೆಯಿಂದ ಕಾಣುತ್ತಿದ್ದರು.

೧೯೩೭ರಲ್ಲಿ ಕಡಿದಾಳರು ಎರಡು ದೋಣಿಗಳಲ್ಲಿ ಕಾಲಿಟ್ಟಿದ್ದರು. ಒಂದು ಕಡೆ ರಾಷ್ಟ್ರಸೇವೆಯ ಕೆಲಸ, ಇನ್ನೊಂದು ಕಡೆ ವಕೀಲಿ ವೃತ್ತಿಗೆ ಸಂಬಂಧಪಟ್ಟ ಕೆಲಸ, ಕಾಂಗ್ರೆಸ್ ಚಟುವಟಿಕೆಯಲ್ಲಿ ಎಷ್ಟು ಶ್ರದ್ದೆಯಿಂದ ಭಾಗವಹಿಸುತ್ತಿದ್ದರೂ ಅಷ್ಟೇ ಶ್ರದ್ಧೆಯಿಂದ ವಕೀಲಿ ವೃತ್ತಿಯನ್ನು ಮಾಡಿದರು. ಸಂಜೆ ಹೊತ್ತು ಎಸ್.ವಿ. ಕೃಷ್ಣಮೂರ್ತಿರಾಯರು (ಲೋಕಸಭೆಯ ಉಪಸಭಾಪತಿಯಾಗಿದ್ದರು) ಡಾ. ಪಾರ್ಥನಾರಾಯಣ ಪಂಡಿತರು,

ವಾಸಪ್ಪ ಗೋಗಿಯವರು, ಕೆ.ಆರ್. ಮಾಧವ ರಾಯರು ಮತ್ತು ಇನ್ನಿತರು ಸ್ನೇಹಿತರುಗಳು ಕಡಿದಾಳ ಮನೆಗೆ ಬರುತ್ತಿದ್ದರು. ಪಂಡಿತರ ಮಗಳು ಅಲಕ ಮತ್ತು ಎಸ್.ವಿ.ಕೃ. ಅವರ ಮಗಳು ಚಂದ್ರಿಕಾ (ಆಕಾಶವಾಣಿಯಲ್ಲಿ ಕನ್ನಡದ ವಾರ್ತೆಗಳನ್ನು ಮಧುರವಾಗಿ ಓದುತ್ತಿದ್ದವರು) ಕೂಡ ತಮ್ಮ ತಂದೆಯವರೊಂದಿಗೆ ಬಂದು ಕಡಿದಾಳರ ಅಡಿಗೆ ಮನೆ ಲೂಟಿ ಮಾಡುತ್ತಿದ್ದರು. ಅಂದಿನ ದಿನಗಳಲ್ಲಿ ಕಡಿದಾರನ್ನು ನೋಡಲಿಕ್ಕೆ ಬಂದವರಲ್ಲಿ ಯು.ಎಸ್.ಮಲ್ಯ, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ (ಮೊರಾರ್ಜಿದೇಸಾಯಿಯವರು ಪ್ರಧಾನಿ ಆಗಿದ್ದಾಗ ಇವರನ್ನು ರಾಷ್ಟ್ರಪತಿ ಮಾಡಲು ಬಯಸಿದ್ದರು. ಆದರೆ ಅವರು ಒಪ್ಪಲಿಲ್ಲ) ಹಳ್ಳಿಕೇರಿ ಗುದ್ಲಪ್ಪ, ಭಾರತ ಸೇವಾದಳದ ಅಧ್ಯಕ್ಷರಾಗಿದ್ದ ಹರ್ಡೆಕರ್ ಮಂಜಪ್ಪ ಉತ್ತರ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರ ಸರ್ದಾರ್ ವೆಂಕಟರಾಮಯ್ಯ ಅವರುಗಳು ಮುಖ್ಯರು. ಸುಪ್ರಸಿದ್ಧ ಕಾಂಗ್ರೆಸ್ ಹೋರಾಟಗಾರ ಆರ್.ಆರ್. ದಿವಾಕರ್ ಮತ್ತು ಸಿದ್ದಪ್ಪನವರ ನಿಕಟ ಸಂಪರ್ಕವಿತ್ತು ಕಡಿದಾಳರಿಗೆ.

ಮೈಸೂರು ರಾಜ್ಯದಲ್ಲಿ 'ಪ್ರಜಾಪಕ್ಷ'ವೆಂಬ ರಾಜಕೀಯ ಪಕ್ಷವಿತ್ತು. ಆ ಪಕ್ಷವು ಮೈಸೂರು ಸರ್ಕಾರದ ಪರವಾಗಿದ್ದುಕೊಂಡು ಕಾಂಗ್ರೆಸ್ಸಿಗೆ ವಿರೋಧವಾಗಿತ್ತು. ದಿವಾನ್ ಸರ್ ಮಿರ್ಜಾರವರು ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷ ತಲೆ ಎತ್ತದಂತೆ ಏನೇ ಪ್ರಯತ್ನ ಮಾಡಿದರೂ ಜನಗಳಿಗೆ ಕಾಂಗ್ರೆಸ್ಸಿನ ಬಗ್ಗೆ ಬಹಳ ಸಹಾನುಭೂತಿ ಹೆಚ್ಚಾಗುತ್ತ ಬಂದಿತು. ಇದನ್ನು ಗಮನಿಸಿದ ಪ್ರಜಾಪಕ್ಷದ ಬಹುಮಂದಿ ಸದಸ್ಯರು ತಮ್ಮ ಪಕ್ಷಕ್ಕೆ ಮುಂದೆ ಭವಿಷ್ಯವಿಲ್ಲವೆಂಬುದನ್ನು ಮನಗಂಡು ಕಾಂಗ್ರೆಸ್ ಸೇರಲು ನಿರ್ಧರಿಸಿದರು. ೧೯೩೮ ರ ಫೆಬ್ರವರಿ ತಿಂಗಳಿನಲ್ಲಿ ಕಾಂಗ್ರೆಸ್ ಮುಖಂಡರು, ಕಾರ್ಯಕರ್ತರು ಮೈಸೂರಿನಲ್ಲಿ ಸಭೆ ಸೇರಿ ಮೈಸೂರು ಕಾಂಗ್ರೆಸ್ ಎಂಬ ಹೆಸರಿನಲ್ಲಿ ಪ್ರತ್ಯೇಕ ಪಕ್ಷ ಸ್ಥಾಪಿಸಬೇಕೆಂದು ತೀರ್ಮಾನ ಮಾಡಿ ೧೯೩೮ರ ಏಪ್ರಿಲ್ ತಿಂಗಳಿನಲ್ಲಿ ಕಾಂಗ್ರೆಸ್ ಪ್ರಮುಖರ ಹಾಗೂ ಪ್ರಜಾಪಕ್ಷದ ಪ್ರಮುಖರ ಒಂದು ಬೃಹತ್ ಸಭೆಯನ್ನು ಮದ್ದೂರು ತಾಲ್ಲೂಕಿನ ಶಿವಪುರದಲ್ಲಿ ಸಮಾವೇಶಗೊಳಿಸಿದರು. ಆ ಸಭೆಗೆ ಕಡಿದಾರರು ಹೋಗಿದ್ದರು. ಟಿ. ಸಿದ್ಧಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಸಮಾವೇಶದಲ್ಲಿ ಧ್ವಜ ಸತ್ಯಾಗ್ರಹ ನಡೆದು ಹಲವು ಮುಖಂಡರ ದಸ್ತಗಿರಿಯಾಯಿತು. ಆ ಅಧಿವೇಶನದಲ್ಲಿ ಮಹಾರಾಜರ ನೇತೃತ್ವದಲ್ಲಿ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಮೈಸೂರು ಕಾಂಗ್ರೆಸ್ಸು ಹೋರಾಟ ಮಾಡಬೇಕೆಂದು ನಿರ್ಣಯವನ್ನು ಕೈಗೊಳ್ಳಲಾಯಿತು. ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದನಂತರ ಪ್ರಜಾಪಕ್ಷದಲ್ಲಿದ್ದ ಪ್ರಮುಖ ನಾಯಕರು ಕಾಂಗ್ರೆಸ್

ಸೇರಿಕೊಂಡರು. ಪ್ರಜಾಪಕ್ಷದ ಸದಸ್ಯರುಗಳಲ್ಲಿ ಪ್ರಸಿದ್ಧ ವಕೀಲರಾಗಿದ್ದ ಹೆಚ್.ಸಿ ದಾಸಪ್ಪನವರು ಸಾಹುಕಾರ್ ಚೆನ್ನಯ್ಯನವರು, ಟಿ. ಮರಿಯಪ್ಪನವರು ಶ್ರೀಮತಿ ಯಶೋಧರಾದಾಸಪ್ಪ, ಪಿ. ವೆಂಕಟಪ್ಪ, ಕೆ.ಸಿ. ರೆಡ್ಡಿ, ಪಟ್ಟಾಭಿರಾಮನ್ ಅವರು ಕಾಂಗ್ರೆಸ್ಸಿನ ಪದಾಧಿಕಾರಿಗಳಾಗಿ ಪ್ರಮುಖ ಪಾತ್ರ ವಹಿಸಿದ್ದರು. ಮೂಲ ಕಾಂಗ್ರೆಸ್ಸಿನವರುಗಳಲ್ಲಿ ಪ್ರಮುಖರಾದವಳು ತಗಡೂರು ರಾಮಚಂದ್ರರಾಯರು, ಎಂ.ಎನ್. ಜೋಯಿಸ್, ಆಗರಂ ರಂಗಯ್ಯ, ಕೆ.ಟಿ. ಭಾಷ್ಯಂ, ಹೆಚ್.ಕೆ. ವೀರಣ್ಣಗೌಡ, ಟಿ.ಸುಬ್ರಮಣ್ಯಂ ಅವರುಗಳು ಮೈಸೂರು ಕಾಂಗೆಸ್ಸಿಗೆ ಸೇರಿಕೊಂಡಿದ್ದರು. ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದ ನಂತರ ಕಾಂಗ್ರೆಸ್ಸಿಗೆ ಸೇರಿದ ನಿಜಲಿಂಗಪ್ಪವರು ಬೆಂಗಳೂರಿನ ಲಿಬರ್ಟಿಸ್ ಯೂನಿಯನ್ ಅಧ್ಯಕ್ಷ ಎಲ್.ಎಸ್ ರಾಜು ಅವರೊಂದಿಗೆ ೧೯೩೯ ರಲ್ಲಿ ಶಿವಮೊಗ್ಗಕ್ಕೆ ಬಂದಿದ್ದರು. ಅವರ ಪರಿಚಯವಾಗಿದ್ದು ಕಡಿದಾಳರಿಗೆ ಅದೇ ಮೊದಲು. ಕಡಿದಾಳರನ್ನು ನೋಡಿದ ನಿಜಲಿಂಗಪ್ಪನವರು "ನೀವೇನೋ ಕಡಿದಾಳ್ ಮಂಜಪ್ಪನವರು ನಿಮ್ಮ ಹೆಸರು ಪತ್ರಿಕೆಗಳಲ್ಲಿ ದಪ್ಪ ಅಕ್ಷರದಲ್ಲಿ ಬರುವುದನ್ನು ನೋಡಿ, ದೊಡ್ಡ ಮೀಸೆಯ ದೃಢಕಾಯ ಶರೀರದ ಅಜಾನುಬಾಹು ವ್ಯಕ್ತಿ ಎಂದು ತಿಳಿದಿದ್ದೆ. ನೀವು ಹೆಸರಿಗೆ ತಕ್ಕಂತೆ ದೇಹದಾರ್ಢ್ಯ ಇಲ್ಲದ ವ್ಯಕ್ತಿಯಾಗಿದ್ದೀರಿ" ಎಂದು ಹಾಸ್ಯ ಮಾಡಿದರು. ೧೯೩೮ ರಲ್ಲಿ ಕಡಿದಾಳರು ಮಾನಸಿಕ ಶಾಂತಿ ಪಡೆಯಲು ಪ್ರಾಣಾಯಾಮವನ್ನು ಧ್ಯಾನಯೋಗವನ್ನು ಆರಂಭಿಸಿದರು. ಸ್ವಾಮಿ ವಿವೇಕಾನಂದರು ಅರವಿಂದ ಘೋಷರು ರಾಜಯೋಗಕ್ಕೆ ಸಂಬಂಧಪಟ್ಟಂತೆ ಬರೆದಿದ್ದ ವಿಧಾನವನ್ನು ಆಧ್ಯಯನ ಮಾಡಿದರು. ಸಾಧನೆಗೆ ಸಹಕಾರಿಯಾಗುವಂತೆ ಮಾಂಸಹಾರ, ಕಾಫಿ, ಟೀ, ಮುಂತಾದವನ್ನು ವರ್ಜಿಸಿದರು. ಸರಿಯಾದ ಗುರುವಿನ ಮಾರ್ಗದರ್ಶನವಿಲ್ಲದೆ ರಾಜಯೋಗದಲ್ಲಿ ತೊಡಗುವುದು ಅಪಾಯಕರವೆಂಬ ವಿಚಾರ ಅವರಿಗೆ ತಿಳಿದಿರಲಿಲ್ಲ. ಲೌಕಿಕ ವ್ಯವಹಾರದಲ್ಲಿ ತೊಡಗಿ ಸದಾ ಲೌಕಿಕ ವಿಚಾರದಲ್ಲಿ ಮಗ್ನರಾಗಿರುವುದು, ಯೋಗ ಸಾಧನೆಯಲ್ಲಿ ಪ್ರಗತಿ ಪಡೆಯುವುದು ಅಸಾಧ್ಯವೆಂಬ ಅನುಭವವು ಅವರಿಗೆ ಉಂಟಾಗಿರಲಿಲ್ಲ. ಪ್ರತಿದಿನ ಬೆಳಗ್ಗೆ ಪ್ರಾಣಾಯಾಮವನ್ನು, ಮಾನಸಿಕ ಏಕಾಗ್ರತೆಯನ್ನು ಅಭ್ಯಾಸ ಮಾಡತೊಡಗಿದರು.

## ಅರಣ್ಯ ಸತ್ಯಾಗ್ರಹದಲ್ಲಿ ಸಕ್ರಿಯ ಪಾತ್ರ

೧೯೩೯ನೇ ಸೆಪ್ಟೆಂಬರ್ ತಿಂಗಳಲ್ಲಿ ಮೈಸೂರು ಕಾಂಗ್ರೆಸ್ ಅರಣ್ಯ ಸತ್ಯಾಗ್ರಹವನ್ನು ಆರಂಭಿಸಿತು. ಆರಣ್ಯ ಸತ್ಯಾಗ್ರಹವೆಂದರೆ ಸೇಂದಿ, ಕಳ್ಳು, ನೀರಾ ಇಳಿಸುವ ಮರಗಳನ್ನು ಕಡಿದು ಹಾಕುವುದು. ಸ್ವಾತಂತ್ರ ಪೂರ್ವದಲ್ಲಿ ಪಾನ ನಿಷೇಧ ಜಾರಿಯಲ್ಲಿದ್ದುದರಿಂದ

ಜನಗಳು ಮಧ್ಯಪಾನ ಮಾಡದಂತೆ ಗಾಂಧೀಜಿಯವರು ಕರೆಕೊಟ್ಟಿದ್ದರು. ಈ ಕಾರಣಕ್ಕಾಗಿ ಸ್ವಾತಂತ್ರ್ಯ ಹೋರಾಟಗಾರರು ಜನ ಮಧ್ಯಪಾನ ಮಾಡದಂತೆ ಮಧ್ಯವನ್ನು ಉತ್ಪಾದಿಸುವ ಮರಗಳನ್ನೆ ಕಡಿದು ಹಾಕುತ್ತಿದ್ದರು. ರಾಜ್ಯದ ಕೆಲವು ಪ್ರಮುಖ ಕಾಂಗ್ರೆಸ್ ನಾಯಕರು ಸತ್ಯಾಗ್ರಹದಲ್ಲಿ ಭಾಗವಹಿಸಿ ಒಬ್ಬೊಬ್ಬರಾಗಿ ಸೆರೆಮನೆ ಸೇರುತ್ತಿದ್ದರು. ಅವರಲ್ಲಿ ಕೆಲವು ಪ್ರಮುಖನಾಯಕರನ್ನು ಶಿವಮೊಗ್ಗ ಸೆರೆಮನೆಯಲಿಟ್ಟಿದ್ದರು. ಕಡಿದಾಳರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾದ್ದರಿಂದ ಸತ್ಯಾಗ್ರಹಕ್ಕೆ ಸ್ವಯಂಸೇವಕರನ್ನು ಗೊತ್ತು ಮಾಡುವುದು, ಅವರಿಗೆ ನೆರವು ನೀಡುವುದು ಅವರ ಕರ್ತವ್ಯವಾಗಿತ್ತು. ಅವರು ಈ ಕರ್ತವ್ಯದಲ್ಲಿ ಮಗ್ನರಾಗಿದ್ದಾಗ ಅವರ ವಕೀಲಿ ಕಚೇರಿಯಲ್ಲಿ ಗುಮಾಸ್ತರಾಗಿದ್ದ ಶಾಮಣ್ಣನವರು ಕಡಿದಾಳರ ವಕೀಲ ವೃತ್ತಿಗೆ ಭಂಗ ಬಾರದಂತೆ ಅವರಿಗೆ ನೆರವು ನೀಡುತ್ತಿದ್ದರು. ಅವರು ಸಂಬಳಕ್ಕಾಗಿ ಕೆಲಸ ಮಾಡದೆ ಕಾಂಗ್ರೆಸ್ಸಿನ ಸಿಪಾಯಿಯಂತೆ ಕಡಿದಾಳರಿಗೆ ಸಹಾಯಕರಾಗಿದ್ದರು. ಕಡಿದಾಳರು ಅವರ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದರು.

ಕಡಿದಾಳರು ಎಷ್ಟೇ ಗುಟ್ಟಾಗಿ ಸತ್ಯಾಗ್ರಹಿಗಳಿಗೆ ಬೆಂಬಲಿಸುತ್ತಿದ್ದರೂ, ಪೋಲೀಸರಿಗೆ ಅವರ ಕಾರುಬಾರುಗಳು ತಿಳಿಯುತ್ತಿದ್ದವು. ಅವರನ್ನು ದಸ್ತಗಿರಿ ಮಾಡಲು ಪೋಲಿಸರು ಜಿಲ್ಲಾಧಿಕಾರಿಗಳಿಗೆ ವರದಿ ಕಳುಹಿಸುವ ವಿಚಾರ ಇವರಿಗೆ ತಿಳಿಯಿತು. ಪ್ರಾಮಾಣಿಕರೂ ದಕ್ಷರೂ ಅಗಿದ್ದ ಜಿಲ್ಲಾಧಿಕಾರಿ ಶೇಷಾದ್ರಿ ಅವರಿಗೆ ಕಡಿದಾಳರ ಮೇಲೆ ಬಹಳ ಒಳ್ಳೆಯ ಅಭಿಪ್ರಾಯವಿದ್ದಿತು. ಆದ್ದರಿಂದ ಅವರನ್ನು ದಸ್ತಗಿರಿ ಮಾಡಲು ಜಿಲ್ಲಾಧಿಕಾರಿಗಳು ಒಪ್ಪಲಿಲ್ಲ. ಸತ್ಯಾಗ್ರಹಿಗಳಿಗೆ ಸೆರೆಮನೆಯಲ್ಲಿ ಹಾಗೂ ಹೊರಗಡೆ ಪೋಲೀಸರು ಚಿತ್ರಹಿಂಸೆ ಕೊಡುತ್ತಿದ್ದರು. ಪೋಲೀಸರ ದುರ್ವರ್ತನೆ ಮತ್ತು ಸರ್ಕಾರದ ಕ್ರೂರ ದಬ್ಬಾಳಿಕೆ ವಿಚಾರದಲ್ಲಿ ಸೆರೆಮನೆ ಹಾಗೂ ಹೊರಗಡೆಯಿದ್ದ ಕಾಂಗ್ರೆಸ್ ಮುಖಂಡರು ಗಾಂಧೀಜಿಯವರಿಗೆ ದೂರನ್ನುಕಳಿಸುತ್ತಿದ್ದರು. ಗಾಂಧೀಜಿಯವರು ಸತ್ಯಾಂಶ ತಿಳಿಯಲು ವರದಿ ಒಪ್ಪಿಸಲು ಅವರ ಆಪ್ತ ಕಾರ್ಯದರ್ಶಿ ಮಹದೇವ ದೇಸಾಯಿ ಅವರನ್ನು ಕಳುಹಿಸಿದರು. ದೇಸಾಯಿ ಮತ್ತು ಕಡಿದಾಳರ ಪ್ರಥಮ ಭೇಟಿಯಿದು. ದೇಸಾಯಿಯವರು ರಾಷ್ಟ್ರ ಸೇವೆಗಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ ಅಪ್ರತಿಮ ದೇಶ ಭಕ್ತರಾಗಿದ್ದರು. ಅವರು ಸತ್ಯ ಅಹಿಂಸೆಯ ನಿರ್ಭಯ ರೂಪದಂತಿದ್ದರು. ಕಡಿದಾಳರು ಅವರಿಗೆ ಎಲ್ಲಾ ವಿಷಯವನ್ನು ಮನದಟ್ಟು ಮಾಡಿದರು. ದೇಸಾಯಿಯವರು ಕೂಡ ರಾಜ್ಯದ ಪ್ರಮುಖ ಸ್ಥಳಗಳಿಗೆ ಜಿಲ್ಲಾ ಕೇಂದ್ರಗಳಿಗೆ ಭೇಟಿ ನೀಡಿದ್ದಲ್ಲದೆ ಸೆರಮನೆಯಲ್ಲಿದ್ದ ಸತ್ಯಾಗ್ರಹಗಳನ್ನು ಸಂದರ್ಶಿಸಿದರು. ಅವರ ವರದಿಯ ಮೇರೆಗೆ ಗಾಂಧೀಜಿಯವರು

ಅವರು ನುರಿತ ಆಡಳಿತಗಾರರಾಗಿದ್ದರು. ನಾಲ್ವಡಿ ಕೃಷ್ಣರಾಜ ಒಡೆಯರು ಪ್ರಜಾಭಿಪ್ರಾಯಕ್ಕೆ ಮನ್ನಣೆ ಕೊಡುವ ಸಲುವಾಗಿ ಪ್ರಜೆಗಳ ಪ್ರತಿನಿಧಿಗಳು ಪಾಲ್ಗೊಳ್ಳಲು ೧೮೮೧ ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದ್ದರು. ೧೯೧೭ ರಲ್ಲಿ ನ್ಯಾಯ ವಿಧೇಯಕ ಸಭೆಯನ್ನು ಆರಂಭಿಸಿದರು.

## ಚುನಾವಣೆಯ ಕಣಕ್ಕೆ

ನಾಲ್ವಡಿ ಕೃಷ್ಣರಾಜ್ ಒಡೆಯರು ಸ್ಥಾಪಿಸಿದ ಪ್ರಜಾಪ್ರತಿನಿಧಿ ಸಭೆಗೆ ಪ್ರತಿ ತಾಲೂಕಿನಿಂದ ಇಬ್ಬರು ಸದಸ್ಯರಾಗಲು ಅವಕಾಶವಿತ್ತು. ಪ್ರಜೆಗಳಿಂದ ಚುನಾಯಿತರಾದ ಮತ್ತು ಸರ್ಕಾರದಿಂದ ನೇಮಕ ಮಾಡಲ್ಪಟ್ಟ ಸದಸ್ಯರು ಸೇರಿ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಒಟ್ಟು ಮುನ್ನೂರು ಜನ ಸದಸ್ಯರಾಗಲು ಅವಕಾಶ ಕಲ್ಪಿಸಲಾಗಿತ್ತು. ಅವರ ಪೈಕಿ ಪ್ರತಿ ಜಿಲ್ಲೆಯಿಂದ ಇಬ್ಬರು ಸದಸ್ಯರಾಗಲು ಅವಕಾಶವಿತ್ತು. ೧೯೪೧ ರಲ್ಲಿ ಹೊಸ ಸಂವಿಧಾನದ ಪ್ರಕಾರ ಪ್ರಜಾಪ್ರತಿನಿಧಿ ಸಭೆಗೂ ಮತ್ತು ನ್ಯಾಯ ವಿಧಾಯಕ ಸಭೆಗೂ ಚುನಾವಣೆ ನಡೆಯಲು ಮಹಾರಾಜರ ಸರ್ಕಾರದ ಆಜ್ಞೆಯಾಗಿತ್ತು.

ಕಡಿದಾಳರ ಚಿಕ್ಕಪ್ಪ ತುಡ್ಕಿ ರಾಮಣ್ಣ ಗೌಡರು ಸುಮಾರು ಇಪ್ಪತ್ತು ವರ್ಷಕ್ಕೂ ಮೇಲ್ಪಟ್ಟು ಸತತವಾಗಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಅವರನ್ನು ಚುನಾವಣೆಯಲ್ಲಿ ಎದುರಿಸುವವರೇ ಇರಲಿಲ್ಲ. ಅವರು ಅಷ್ಟು ಜನಾನುರಾಗಿಯಾಗಿದ್ದರು. ಪ್ರಜಾಪ್ರತಿನಿಧಿ ಸಭೆಗೂ ನ್ಯಾಯ ವಿಧಾಯಕ ಸಭೆಗೂ ಚುನಾವಣೆ ನಡೆಯುತ್ತಿದೆ ಎಂದು ತಿಳಿದಾಗ ರಾಮಣ್ಣ ಗೌಡರು ಕಡಿದಾಳರಿಗೆ ಚುನಾವಣೆಗೆ ಸ್ಪರ್ಧಿಸಬೇಕೆಂದು, ತಾನು ನಿವೃತ್ತಿ ಹೊಂದಲು ಬಯಸುವುದಾಗಿ ತಿಳಿಸಿದರು. ಜಿಲ್ಲಾ ಕಾಂಗ್ರೆಸ್ ನಾಯಕರಾಗಿದ್ದ ಹೆಚ್.ಸಿದ್ದಯ್ಯವರು ತೀರ್ಥಹಳ್ಳಿ ಕ್ಷೇತ್ರದಿಂದ ಕಾಂಗ್ರೆಸ್ ಪರವಾಗಿ ಸ್ಪರ್ಧಿಸಲು ಹೇಳಿದರು. ಕಡಿದಾಳರೊಂದಿಗೆ ತೀರ್ಥಹಳ್ಳಿಯ ವೆಂಕಟಗಿರಿರಾಯರ ಹೆಸರನ್ನು ಪಾರ್ಲಿಮೆಂಟ್ ಬೋರ್ಡಿಗೆ ಸೂಚಿಸಿದರು. ಹೇಗಿದ್ದರೂ ತೀರ್ಥಹಳ್ಳಿ ಕ್ಷೇತ್ರದಿಂದ ಎರಡು ಸ್ಥಾನವಿತ್ತಲ್ಲ? ಮೊದಲು ಚುನಾವಣೆಗೆ ಸ್ಪರ್ಧಿಸುವುದಿಲ್ಲ ಎಂದು ಹೇಳಿದ ಚಿಕ್ಕಪ್ಪನವರು ಸರ್ಕಾರದ ಒತ್ತಾಯದಿಂದಾಗಿ ಪ್ರಜಾಪಕ್ಷದ ವತಿಯಿಂದಾಗಿ ಸ್ಪರ್ಧಿಸಿದರು. ಸುದ್ದಿ ತಿಳಿದ ಕಡಿದಾಳರು ಚಿಕ್ಕಪ್ಪನ ವಿರುದ್ಧ ಸ್ಪರ್ಧಿಸಲು ಧೈರ್ಯ ಸಾಲದೆ ಅವರನ್ನು ಕಂಡು ತಾವು ಸ್ಪರ್ಧಿಸುವುದಿಲ್ಲವೆಂದು ಹೇಳಿದ್ದರಿಂದ ತಾನು ಸ್ಪರ್ಧಿಸಿದ್ದೇನೆಂದು ಈಗ ತಾನು ತನ್ನ ನಾಮಪತ್ರವನ್ನು ವಾಪಸ್ಸು ತೆಗೆದುಕೊಳ್ಳುತ್ತೇನೆಂದು ಹೇಳಿ ಗಳಗಳ ಅತ್ತುಬಿಟ್ಟರು. ಗೌಡರು ಅಳ್ತಿಯಾ? ನಿನ್ನ ಕೆಲಸ ನೀನು ಮಾಡು ನನ್ನ

ಕೆಲಸ ನಾನು ಮಾಡುತೀನಿ. ನಾವಿಬ್ಬರು ಗೆಲ್ಲುತ್ತೇವೆ" ಎಂದು ಸಮಾಧಾನ ಪಡಿಸಿ ಕಳುಹಿಸಿದರು. ಚುನಾವಣೆ ಸಮಯದಲ್ಲಿ ಕಡಿದಾಳರು ಚಿಕ್ಕಪ್ಪನ ಮನೆಯಲ್ಲಿ ಉಳಿಯದೆ ಬೇರೆ ಕಡೆ ವ್ಯವಸ್ಥೆ ಮಾಡಿಕೊಂಡು ತನಗೂ ವೆಂಕಟಗಿರಿರಾಯರಿಗೂ ಮತಕೊಡಬೇಕೆಂದು ಪ್ರಚಾರದಲ್ಲಿ ತೊಡಗಿದರು. ಚಿಕ್ಕಪ್ಪನವರ ವಿರುದ್ಧ ಸ್ಪರ್ಧಿಸಿದ್ದರಿಂದ ಇತನಿಗೆ ಸೋಲಾಗಿ ವೆಂಕಟಗಿರಿರಾಯರು, ಚಿಕ್ಕಪ್ಪನು ಗೆಲ್ಲಲಿ ಎಂದು ಕಡಿದಾಳರು ಹಾರೈಸಿದರು. ದೈವಲೀಲೆಯೆ ಬೇರೆಯಾಗಿತ್ತು. ಕಡಿದಾಳರು ತುಂಬಾ ಜನಪ್ರಿಯ ವ್ಯಕ್ತಿಯಾಗಿದ್ದರಿಂದ ಅವರು ಗೆದ್ದು ವೆಂಕಟಗಿರಿರಾಯರು ಸೋತರು. ಚಿಕ್ಕಪ್ಪನವರು ಹೇಳಿದಂತೆ ಅವರೂ ಗೆದ್ದರು. ನಾಲಿಗೆಗೆ ಎಲುಬಿಲ್ಲದ ಜನ "ಚಿಕ್ಕಪ್ಪ ಮಗ ಷರೀಕಾಗಿ ವೆಂಕಟಗಿರಿರಾಯರನ್ನು ಸೋಲಿಸಿದರು" ಎಂದು ಆಡಿಕೊಂಡರು. ಈ ಟೀಕೆಯಿಂದ ಕಡಿದಾಳರು ನೊಂದುಕೊಂಡರು. ಚುನಾವಣೆ ಮುಗಿದ ಕೆಲದಿನಗಳಲ್ಲಿಯೆ ಚಿಕ್ಕಪ್ಪ ರಾಮಣ್ಣ ಗೌಡರು ನಿಧನರಾದರು. ಶಿವಮೊಗ್ಗ ಜಿಲ್ಲೆಯಲ್ಲಿ ಅವರೊಬ್ಬ ಪ್ರಭಾವಿ ನಾಯಕರಾಗಿದ್ದರು. ದಿವಾನ್ ಮಿರ್ಜಾ ಇಸ್ಮಾಯಿಲ್ ಅಭಿಮಾನವನ್ನು ಅವರು ಗಳಿಸಿದ್ದರು.

## ಈಸೂರು ಘಟನೆ

ಕಡಿದಾಳರ ವಕೀಲ ವೃತ್ತಿ ದಿನೇ ದಿನೇ ವೃದ್ಧಿಗೊಂಡಿತು. ಆದರೆ ಬಹಳಕಾಲ ವಕೀಲ ವೃತ್ತಿಯಲ್ಲಿ ಮುಂದುವರೆಯಲಾಗಲಿಲ್ಲ. ದಿನಾಂಕ೯-೦೮-೧೯೪೦ ರಲ್ಲಿ 'ಕ್ವಿಟ್ ಇಂಡಿಯಾ' ಘೋಷಣೆ ಮಾಡಲಾಯಿತು. ಶಿವಮೊಗ್ಗ ಜಿಲ್ಲೆಯ ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಇವರು ಒಬ್ಬರಾಗಿದ್ದರು. ಚಳುವಳಿಯಿಂದ ದೂರವಿರಲು ಕಡಿದಾಳರಿಗಾಗಲಿಲ್ಲ. ಚಳುವಳಿಯನ್ನು ಕುರಿತು ಜನಗಳ ಸಹಕಾರ ಕೋರಲು ಅನೇಕ ಕಡೆ ಪ್ರವಾಸ ಮಾಡಿ ಭಾಷಣ ಮಾಡಬೇಕಿದ್ದಿತು. ಪೋಲೀಸರು ಕಡಿದಾಳರ ಓಡಿಯಾಡುವಲ್ಲೆಲ್ಲ ಕಣ್ಣಿಟ್ಟರು ಚಳುವಳಿಯನ್ನು ಅಹಿಂಸಾತ್ಮಕವಾಗಿ ಶಾಂತ ರೀತಿಯಾಗಿ ನಡೆಸಬೇಕೆಂದು ಗಾಂಧೀಜಿಯ ಅದೇಶವಾಗಿತ್ತು. ೧೯೪೨ ಸೆಪ್ಟೆಂಬರ್ ತಿಂಗಳಲ್ಲಿ ಶಿಕಾರಿಪುರ ತಾಲೂಕಿನ ಈಸೂರಿನಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ಭಾಷಣ ಮಾಡಲು ಕಡಿದಾಳರು ಹೋಗಲಿಕ್ಕಾಗಲಿಲ್ಲ. ಈಸೂರಿನಲ್ಲಿ ನಡೆದಿದ್ದ ಸಭೆಯನ್ನು ಚದುರಿಸಲಿಕ್ಕಾಗಿ ಪೋಲಿಸರು ಲಾಠಿ ಪ್ರಹಾರ ಮಾಡಿದ್ದರಿಂದ ಉದ್ರಿಕ್ತಗೊಂಡು ಜನರ ಗುಂಪು ತಹಶೀಲ್ದಾರನ್ನು ಸಬ್ ಇನ್ಸ್‌ಪೆಕ್ಟರನ್ನು ಕೊಲೆ ಮಾಡಿದರು. ಬಹುಶಃ ಕಡಿದಾಳರು ಆ ಸಭೆಗೆ ಹೋಗಿದ್ದರೆ ಆ ದುರ್ಘಟನೆಯನ್ನು ತಪ್ಪಿಸಬಹುದಾಗಿತ್ತೆಂದು ಹಾಗಿಲ್ಲವೆ ಅವರ ಹತೋಟಿ ಮೀರಿ ಹಿಂಸಾಕೃತ್ಯಕ್ಕೆ ಕೈಹಾಕಿದ ಜನರೊಂದಿಗೆ ತಾನೂ

ಅಪರಾಧಿಯಾಗಿರುತ್ತಿದ್ದನೆಂದೂ ಕಡಿದಾಳರು ಅಭಿಪ್ರಾಯಪಡುತ್ತಾರೆ. ಈ ಅಧಿಕಾರಿಗಳ ಕೊಲೆ ಸಂಬಂಧ ಪೊಲೀಸರು ಕೆಲವರ ಮೇಲೆ ಮೊಕದ್ದಮೆಯನ್ನು ಹೂಡಿದರು. ಅ ಮೊಕದ್ದಮೆಯಲ್ಲಿ ಕೆಲವರಿಗೆ ಮರಣ ದಂಡನೆಯ ಶಿಕ್ಷೆಯಾಯಿತು.

## ಸೆರೆಮನೆಯಲ್ಲಿ ಸಿಹಿ ಸುದ್ದಿ

ಈಸೂರು ಘಟನೆಯಾದ ಮೇಲೆ ಕಡಿದಾಳರನ್ನು ದಸ್ತಗಿರಿ ಮಾಡಲು ವಾರೆಂಟ್ ಹೊರಡಿಸಿದ ವಿಷಯ ಅವರಿಗೆ ತಿಳಿಯಿತು. ಆಗ ಕಡಿದಾಳರ ಪತ್ನಿ ತುಂಬು ಗರ್ಭಿಣಿ, ಅತ್ತ ಊರಿನಲ್ಲಿ ಅವರ ತಮ್ಮ ತಮ್ಮಯ್ಯಗೌಡರಿಗೆ ತೀವ್ರ ಅನಾರೋಗ್ಯವಾಗಿ ಬದುಕುವುದೇ ಕಷ್ಟದ ಸುದ್ದಿ ಬಂದಿತು. ಕಡಿದಾಳರ ಪತ್ನಿ ಪ್ರಸವದ ಸಮಯದಲ್ಲಿ ತಾವು ಎಲ್ಲಿಗೂ ಹೋಗಬಾರದೆಂದು ತನ್ನೊಡನೆಯೆ ಇರಬೇಕೆಂದು ದುಂಬಾಲು ಬಿದ್ದಿದ್ದರು. ಕಡಿದಾರ ಸ್ಥಿತಿ ಶೋಚನೀಯವಾಗಿತ್ತು. ಅದರೂ ಪೊಲೀಸ್‌ನವರಿಗೆ ಚಳ್ಳೆಹಣ್ಣು ತಿನ್ನಿಸಿ ತುಂಬು ಗರ್ಭಿಣಿ ಹೆಂಡತಿಯನ್ನು ಬಾಡಿಗೆ ಕಾರು ಮಾಡಿಕೊಂಡು ರಾತ್ರೋರಾತ್ರಿ ಊರಿಗೆ ಹೋಗಿ ತಮ್ಮನನ್ನು ಕಂಡು ಅವರಿಗೆ ತನ್ನ ಪರಿಸ್ಥಿತಿಯನ್ನು ವಿವರಿಸಿ ಹೆಂಡತಿಯನ್ನು ಕೈ ಕೂಸನ್ನು ಎತ್ತಿಕೊಂಡು ಅತ್ತಿಗೊಂಡ ಎಸ್ಟೇಟ್ ಮನೆಗೆ ತಲುಪಿಸಿದರು. ಆಗಲೆ ಅವರಿಗೆ ಶ್ರೀಲತಾ ಎಂಬ ಹೆಣ್ಣು ಮಗಳು ಜನಿಸಿದಳು. ಈ ನಡುವೆ ಭದ್ರಾವತಿ ಕಬ್ಬಿಣದ ಕಾರ್ಖಾನೆಯ ಕಾರ್ಮಿಕರು ಕ್ವಿಟ್ ಇಂಡಿಯಾ ಚಳುವಳಿಗೆ ತಮ್ಮ ಬೆಂಬಲ ಸೂಚಿಸಲು ಮುಷ್ಕರ ಹೂಡಿದ್ದರು. ಅವರಿಗೆ ಧನಸಹಾಯ ಮಾಡಲು ಹಣ ಸಂಗ್ರಹಿಸಿ ಕೊಡಬೇಕೆಂದು ಶಿವಮೊಗ್ಗೆಯ ಸೆರೆಮನೆಯಲ್ಲಿದ್ದ ಕಾಂಗ್ರೆಸ್ ನಾಯಕರುಗಳು ಕಡಿದಾಳರಿಗೆ ವರ್ತಮಾನ ಕಳುಹಿಸಿದ್ದರು. ಕಷ್ಟಗಳು ಬಂದರೆ ಹೀಗೆ ಒಂದರ ಮೇಲೊಂದು ಬರುತ್ತವೆ. ಕಡಿದಾಳರು ವೇಷ ಮರೆಸಿಕೊಂಡು ಮೂಡಿಗೆರೆ ಸಕಲೇಶಪುರಕ್ಕೆ ಪೋಲೀಸರ ಕೈಗೆ ಸಿಗದೆ ತೆರಳಿ ಹಣ ಸಂಗ್ರಹಿಸಿ ಶಿವಮೊಗ್ಗೆಯ ಕಾಂಗ್ರೆಸ್ ಕಾರ್ಯಕರ್ತರಾದ ಕೆ.ಟಿ. ಶಾಮಯ್ಯ ಗೌಡರಿಗೆ ತಲುಪಿಸಿದರು. ಈ ಸಮಯದಲ್ಲಿ ಸಂಬಂಧಿಕರು ಮತ್ತು ಕಾಂಗ್ರೆಸ್ ಕಾರ್ಯಕರ್ತರ ಮನೆಯಲ್ಲಿ ಅವರು ಉಳಿದುಕೊಳ್ಳುತ್ತಿದ್ದರು. ಈ ಹೊತ್ತಿಗಾಗಲೆ ಅವರಿಗೆ ಹೇಡಿಯಂತೆ ತಲೆಮರೆಸಿಕೊಂಡಿರುವುದು ಸೂಕ್ತವಲ್ಲ ಅನ್ನಿಸಿತು. ಕದ್ದು ತಿರುಗುವ ಬದಲು ಬಹಿರಂಗವಾಗಿ ಓಡಾಡಬೇಕೆಂದು ನಿರ್ಧರಿಸಿದರು. ಒಂದು ದಿನ ಅವರ ಸ್ನೇಹಿತರೊಬ್ಬರು ಅವರನ್ನು ನೋಡುವ ಸಲುವಾಗಿ ಕಡಿದಾಳರು ತಂಗಿದ್ದ ಅವರ ಮಾವನ ಮನೆಗೆ ಬಂದರು. ಪೊಲೀಸರ ಪ್ರೇರಣೆಯಿಂದ ಅವರು ಬಂದವರೆಂದು ತಿಳಿದಿದ್ದರೂ ಕಡಿದಾಳರು ಅವರೊಂದಿಗೆ ಶಿವಮೊಗ್ಗೆಗೆ ಹೋದರು. ಮೈಸೂರಿನಲ್ಲಿ ಪ್ರಜಾಪ್ರತಿನಿಧಿ

ಸಭೆ ನಡೆಯುವುದಿತ್ತು. ಸಭೆಯಲ್ಲಿ ಭಾಗವಹಿಸಿ ಸರ್ಕಾರದ ನಡವಳಿಕೆಯನ್ನು ಖಂಡಿಸಬೇಕೆಂದು ರೈಲು ಹಿಡಿಯಲು ರೈಲ್ವೆ ನಿಲ್ದಾಣಕ್ಕೆ ಹೋದರು. ಅಲ್ಲಿ ಅವರಿಗಾಗಿ ಕಾದಿದ್ದ ಪೊಲೀಸರು ಅವರನ್ನು ದಸ್ತಗಿರಿ ಮಾಡಿ ಶಿವಮೊಗ್ಗ ಸೆರೆಮನೆಗೆ ಕರೆದೊಯ್ದರು. ಅಲ್ಲಿ ಹೆಚ್.ಸಿ.ದಾಸಪ್ಪನವರು ಇತರೆ ಮುಖಂಡರುಗಳು ಬಂಧಿಗಳಾಗಿದ್ದರು. ಅವರು ಸೆರೆಮನೆಯಲ್ಲಿದ್ದಾಗ್ಗೆ ಅವರ ಮಾವನವರು ಕಾಗದ ಬರೆದು ದಿನಾಂಕ: ೧೫-೧೦-೧೯೪೨ ರಂದು ಅವರ ಪತ್ನಿ ಗಂಡು ಮಗುವಿಗೆ ಜನ್ಮವಿತ್ತಿದ್ದಾರೆಂದು ತಿಳಿಸಿದರು. ಮಗ ಹುಟ್ಟಿದ ಒಂದೆರೆಡು ದಿನಗಳ ಹಿಂದೆ ಜಯಪ್ರಕಾಶ್ ನಾರಾಯಣ್ ಅವರು ಗೋಡೆಹತ್ತಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿದ್ದರು. ಹೆಚ್.ಸಿ.ದಾಸಪ್ಪನವರು ಇತರೆ ಸ್ನೇಹಿತರುಗಳು ಜೆ.ಪಿ.ಯವರ ಸಾಹಸದ ನೆನಪಿಗಾಗಿ ಮಗುವಿಗೆ ಜಯಪ್ರಕಾಶ್ ಎಂಬ ಹೆಸರನ್ನು ಸೂಚಿಸಿದರು. ಅ ಹುಡುಗ ದೊಡ್ಡವನಾದ ಮೇಲೆ ಇಂಜಿನಿಯರಾಗಿ ಬಿ.ಇ.ಎಲ್ ಸಂಸ್ಥೆಯಲ್ಲಿ ಅಧಿಕಾರಿಯಾದನು. ಸೆರೆಮನೆಯಲ್ಲಿದ್ದಾಗ ಕಡಿದಾಳರ ಆರೋಗ್ಯ ಕೆಟ್ಟಿತು. ವೈದ್ಯರು ಮಾಂಸಾಹಾರವನ್ನು ಸೇವಿಸಬೇಕೆಂದು ಹೇಳಿದರು. ಬಹಳ ದಿನ ಮಾಂಸಾಹಾರ ಬಿಟ್ಟಿದ್ದು ಕಡಿದಾಳರು ಪತ್ನಿಯ ಒತ್ತಾಯದ ಮೇರೆಗೆ ಮತ್ತೆ ಮಾಂಸಾಹಾರವನ್ನು ಸೇವಿಸತೊಡಗಿದರು.

## ಪೆರೋಲ್ ಮೇಲೆ ಬಿಡುಗಡೆ

ಕಡಿದಾಳರು ಸೆರೆಮನೆಯಲ್ಲಿದ್ದಾಗ ಊರಿನಲ್ಲಿ ಅವರ ತಾಯಿ ತೀವ್ರ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದಾರೆಂದು ಆವರಿಗೆ ನಿನ್ನದೇ ಚಿಂತೆಯಾಗಿದೆಯೆಂದು ನೀನು ಬಾರದೇ ಇದ್ದರೆ ಅವರ ಮುಖದರ್ಶನವಾಗುವುದು ಅಸಂಭವವೆಂದು ಆದ್ದರಿಂದ ಪೆರೋಲ್ ಮೇಲೆ ಬಿಡುಗಡೆ ಮಾಡಿಸಿಕೊಂಡು ಬರಬೇಕೆಂದು ಅವರ ತಮ್ಮ ತಮ್ಮಯ್ಯ ಗೌಡರಿಂದ ಪತ್ರ ಬಂದಿತು. ಕಡಿದಾಳರಿಗೆ ಪೆರೋಲ್ ಮೇಲೆ ಬಿಡುಗಡೆಯಾಗುವುದು ಇಷ್ಟವಿರಲಿಲ್ಲ. ಆದರೂ ಹಾಸಿಗೆ ಹಿಡಿದ ತಾಯಿಯನ್ನು ನೋಡದೆ ಗತ್ಯಂತರವಿರಲಿಲ್ಲ. ಆದ್ದರಿಂದ ಹದಿನೈದು ದಿನದ ಮಟ್ಟಿಗೆ ಪೆರೋಲ್ ಮೇಲೆ ಬಿಡುಗಡೆ ಪಡೆದು ಊರಿಗೆ ಹೋದರು. ಅವರು ಊರಿನಲ್ಲಿದ್ದಾಗ ಪೆರೋಲ್ ಅವಧಿ ಮುಗಿಯುವದರೊಳಗಾಗಿ ಮೈಸೂರು ಸರ್ಕಾರದವರು ಬಂಧಿಗಳೆಲ್ಲರನ್ನು ಬಿಡುಗಡೆ ಮಾಡಿದರು. ಅವರು ಸೆರೆಮನೆಯಲ್ಲಿದುದು ಹತ್ತೂವರೆ ತಿಂಗಳು. ಅವರು ಸೆರೆಮನೆಯಲ್ಲಿದ್ದಾಗ ಅವರ ವಕೀಲಿ ಕಚೇರಿ ಸುಮಾರು ಒಂದು ವರ್ಷಕ್ಕೂ ಮೇಲ್ಪಟ್ಟು ಮುಚ್ಚಿದ್ದಿತು. ಅವರ ಗುಮಾಸ್ತರಾದ ಶಾಮಣ್ಣನವರು ಬಹಳ ನಿಷ್ಠೆಯಿಂದ ಕೇಸುಗಳನ್ನು ನಿರ್ವಹಿಸಿದ್ದರು. ಕಡಿದಾಳರ ಮಿತ್ರರಿಂದ ಕೇಸು ನಡೆಸಿದ್ದರು. ಅವರ ಕಕ್ಷಿದಾರರಿಗೆ

ಜಯವಾಗಿತ್ತು ಕೂಡ.

ಬಹಳದಿನಗಳಿಂದ ವಕೀಲಿ ಕಛೇರಿ ಮುಚ್ಚಿದ್ದರಿಂದ ಮುಂದೇನು ಮಾಡಬೇಕೆಂದು ಕಡಿದಾಳರಿಗೆ ತೋಚಲಿಲ್ಲ. ಬಹಳ ದಿನದಿಂದ ವಕೀಲರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ತಮ್ಮ ವೃತ್ತಿಯನ್ನು ಹಾಳು ಮಾಡಿಕೊಂಡಿದ್ದರು. ತಾನು ಮತ್ತೆ ಚಳುವಳಿಯಲ್ಲಿ ಧುಮುಕ ಬಹುದೇನೊ ಎಂದು ಜನ ಅವರಿಗೆ ಕೇಸುಗಳನ್ನು ಕೊಡುತ್ತಾರೊ ಇಲ್ಲವೊ ಎಂದು ಕಡಿದಾಳರಿಗೆ ಅನುಮಾನವಾಗಿದ್ದಿತು. ಆದರೆ ಹಾಗಾಗಲಿಲ್ಲ.

## ಕೈ ಹಿಡಿದ ವಕೀಲಿ ವೃತ್ತಿ

ಭಗವಂತನ ಮೇಲೆ ಭಾರಹಾಕಿ ಕಡಿದಾಳರು ಮತ್ತೆ ವಕೀಲಿ ವೃತ್ತಿ ಆರಂಭಿಸಿದರು. ಹೆಂಡತಿ ಮಕ್ಕಳನ್ನು ಕರೆದುಕೊಂಡು ಬಂದು ಸಂಸಾರ ಹೂಡಿದರು. ಆ ಸಮಯದಲ್ಲಿ ಅವರ ಅರ್ಥಿಕ ಪರಿಸ್ಥಿತಿ ತೀರ ಹದಗೆಟ್ಟಿದ್ದಿತು. ವಕೀಲಿ ಮತ್ತೆ ಆರಂಭ ಮಾಡಿದಾಗ ಒಬ್ಬ ಕಕ್ಷಿದಾರನು ರೆವಿನ್ಯೂ ಪ್ರಕರಣ ಒಂದರಲ್ಲಿ ಜಿಲ್ಲಾಧಿಕಾರಿಗಳ ಮುಂದೆ ತನ್ನ ಪರವಾಗಿ ಹಾಜರಾಗಿ ಕೇಸನ್ನು ನಡೆಸಬೇಕೆಂದು ಕೇಳಿಕೊಂಡ. ಸುಂದರರಾವ್ ಎಂಬುವರು ಜಿಲ್ಲಾಧಿಕಾರಿಯಾಗಿದ್ದರು.ಅವರು ಕೋಲಾರದಲ್ಲಿ ಜಿಲ್ಲಾಧಿಕಾರಿಯಾಗಿದ್ದಾಗ ಕಾಂಗ್ರೆಸನ್ನು ತುಳಿಯಲು ಕ್ರೂರವಾಗಿ ನಡೆದುಕೊಂಡು ಬಹಳ ಮಂದಿಗೆ ಹಿಂಸೆ ಕೊಟ್ಟಿದ್ದರೆಂದು ಕಾಂಗ್ರೆಸ್ ಮಿತ್ರರ ಭಾವನೆಯಾಗಿತ್ತು. ಅವರು ಮಿರ್ಜಾ ಇಸ್ಮಾಯಿಲ್ ಅವರ ಮೆಚ್ಚಿನ ಅಧಿಕಾರಿಯಾಗಿದ್ದರು. ಅಂಥವರ ಮುಂದೆ ಹಾಜರಾಗಿ ಕೇಸು ನಡೆಸುವುದರಿಂದ ಕಕ್ಷಿದಾರರಿಗೆ ತೊಂದರೆಯಾಗಬಹುದೆಂದು ಕಡಿದಾಳರು ಕೇಸು ತೆಗೆದುಕೊಳ್ಳಲು ಒಪ್ಪಲಿಲ್ಲ. ಕಕ್ಷಿದಾರನು ನಿರ್ಭೀತಿಯಿಂದ "ಸ್ವಾಮೀ, ನೀವು ಡಿ.ಸಿ. ಸಾಹೇಬರತ್ರ ಭಿಕ್ಷೆ ಬೇಡಲಿಕ್ಕೆ ಹೋಗುತ್ತಿಲ್ಲ. ಯಾಕೆ ಸಂಕೋಚ? ಕಾನೂನು ಪ್ರಕಾರ ವಾದ ಮಾಡೊಕೆ ಹೋಗತೀರಿ, ಕೇಸು ನಡೆಸಿ. ತಗೊಳ್ಳಿ ಇಪ್ಪತ್ತೈದು ರೂಪಾಯಿ" ಎಂದು ಹಣಕೊಟ್ಟನು. ಅಂದು ಕೊಟ್ಟ ಇಪ್ಪತ್ತೈದು ರೂಪಾಯಿ ಶುಲ್ಕ ಕಡಿದಾಳರಿಗೆ ಹತ್ತುದಿನದ ಜೀವನ ನಿರ್ವಹಣೆಗೆ ಸಾಕಾಗುತ್ತಿತ್ತು. ಕಡಿದಾಳರು ಕೇಸು ಕುರಿತು ಜಿಲ್ಲಾಧಿಕಾರಿಗಳ ಎದುರು ಹಾಜರಾದರು. ಸ್ನೇಹಿತರು ಹೇಳಿದ ಸ್ವಭಾವ ಜಿಲ್ಲಾಧಿಕಾರಿಯವರಲ್ಲಿ ಕಾಣಲಿಲ್ಲ. ಕಡಿದಾಳರ ಸರದಿ ಬಂದಾಗ ಜಿಲ್ಲಾಧಿಕಾರಿಗಳು ಅವಕಾಶವಿತ್ತು, ವಕಾಲತ್ತು ನಾಮೆಯಲ್ಲಿ ಕಡಿದಾಳರ ಹೆಸರನ್ನು ನೋಡಿ "ನೀವೇನೊ ಪ್ರಸಿದ್ಧ ಕಡಿದಾಳ ಮಂಜಪ್ಪನವರು. ನಿಮ್ಮ ವಿಚಾರದಲ್ಲಿ ಪೋಲಿಸಿನವರು ಕಳುಹಿಸಿದ ವರದಿಗಳು ಒಂದು ಸಂಪುಟಕ್ಕಾಗುವಷ್ಟು ಇವೆ. ವರದಿಗಳನ್ನೋದಿ ನೀವೊಬ್ಬ ಭಯಂಕರ

ವ್ಯಕ್ತಿಯೆಂದು ನಾನು ತಿಳಿದಿದ್ದೆ. ಇಂದು ನನ್ನ ಕಣ್ಣಿಗೆ ನೀವು ಸೌಜನ್ಯದ ವ್ಯಕ್ತಿಯಾಗಿ ಕಾಣಿಸುವಿರಿ ಎಂದು ನಕ್ಕು ನುಡಿದರು. ಕಡಿದಾಳರ ವಾದವನ್ನು ಕೇಳಿ ಅವರ ಕಕ್ಷಿದಾರನಿಗೆ ನ್ಯಾಯವಾಗಿ ಸಿಗಬೇಕಾಗಿದ್ದ ಪರಿಹಾರ ಸಿಗುವಂತೆ ಮಾಡಿದರು. ಸುಂದರರಾಯರು ಬಹಳ ಮೇಧಾವಿ ಹಾಗೂ ಸೌಜನ್ಯಶೀಲರಾಗಿದ್ದ ದಕ್ಷ ಆಡಳಿತಗಾರರೆಂದು ಕಡಿದಾಳರಿಗೆ ತಿಳಿಯಿತು. ಅಂತಹ ಅಧಿಕಾರಿಗಳು ಇಂದಿನ ದಿನಗಳಲ್ಲಿ ಎಲ್ಲಿ ಸಿಗುತ್ತಾರೆಂದು ಕಡಿದಾಳರು ಹೇಳುತ್ತಾರೆ. ವಕೀಲ ವೃತ್ತಿ ಆರಂಭಿಸಿದ ಎರಡು ದಿನಗಳಲ್ಲಿ ತೀರ್ಥಹಳ್ಳಿ ಕಡೆಯ, ಕಡಿದಾಳರಿಗೆ ಪರಿಚಯವಿದ್ದ ಕೆಳನರ್ಸೆ ಬೊಮ್ಮೆಗೌಡರು ತಮ್ಮ ಅವಿಭಕ್ತ ಕುಟುಂಬದ ಹಿಸ್ಸೆಗೆ ಸಂಬಂಧಿಸಿದಂತೆ ಕೇಸನ್ನು ಕೊಟ್ಟರು. ಹಿಸ್ಸೆ ಕುರಿತು ಕುಟುಂಬದವರು ಗೌಡರ ವಿರುದ್ಧ ಕೇಸು ಹಾಕಿದ್ದರು. ಜಿಲ್ಲಾ ನ್ಯಾಯಾಧೀಶರಿಂದ ಅವರಿಗೆ ಸಮನ್ಸ್ ಹೋಗಿತ್ತು. ಗೌಡರು ಸಮನ್ಸ್ ತೆಗೆದುಕೊಳ್ಳದೆ, ಕಡಿದಾಳರು ಸೆರೆಮನೆಯಿಂದ ಬಿಡುಗಡೆಯಾಗುವುದನ್ನೆ ಕಾಯುತ್ತಿದ್ದರು. ಕಡಿದಾಳರು ಬಿಡುಗಡೆಯಾದ ವಿಷಯ ತಿಳಿದು ಸಮನ್ಸ್ ಜಾರಿಯಾದ ನಂತರ ಕಡಿದಾಳರನ್ನು ಕಂಡು ನೂರು ರೂಪಾಯಿ ಶುಲ್ಕ ಕೊಟ್ಟು ತಮ್ಮ ಪರವಾಗಿ ಕೋರ್ಟಿಗೆ ಹಾಜರಾಗಲು ಕೇಳಿಕೊಂಡರು, ನೂರು ರೂಪಾಯಿ ಶುಲ್ಕ ಸಿಕ್ಕಿರುವುದಕ್ಕೆ ಕಡಿದಾಳರ ಸಂತೋಷಕ್ಕೆ ಪಾರವೇ ಇರಲಿಲ್ಲ. ಅನಂತರ ಕೇಸುಗಳು ಬರಹತ್ತಿದವು. ಅಂತು ಅವರು ವಕೀಲಿ ವೃತ್ತಿ ಕುದುರಿತು. ಯಾರ ಹಂಗಿಗೂ ಒಳಗಾಗದೆ ತಾನು ಸಂಸಾರ ನಿರ್ವಹಣೆ ಮಾಡಬಲ್ಲನೆಂಬ ಧೈರ್ಯ ಬಂದಿತು ಅವರಿಗೆ.

## ಸರ್ಕಾರಿ ಹುದ್ದೆಯ ಆಮಿಷ

ಕಡಿದಾಳರ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವದ ಅವಧಿ ಇನ್ನೂ ಮುಗಿದಿರಲಿಲ್ಲ. ವಕೀಲ ವೃತ್ತಿಗೆ ಸಂಬಂಧಪಟ್ಟ ಕೆಲಸ ಕಾರ್ಯಗಳ ಜೊತೆಗೆ ಕಾಂಗ್ರೆಸ್ ಕೆಲಸಕಾರ್ಯಗಳಲ್ಲೂ ಭಾಗವಹಿಸಬೇಕಾಗುತ್ತಿತ್ತು. ಜೊತೆಗೆ ವರ್ಷಕ್ಕೆರಡು ಬಾರಿ ನಡೆಯುವ ಪ್ರಜಾ ಪ್ರತಿನಿಧಿ ಅಧಿವೇಶನದ ಸಭೆಗೆ ತಪ್ಪದೆ ಕಡಿದಾಳರು ಹಾಜರಾಗುತ್ತಿದ್ದರು.

೧೯೪೪ನೇ ಇಸವಿಯಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿ ಕಡಿದಾಳರು ದಸರಾ ಅಧಿವೇಶನಕ್ಕೆ ಒಂದು ಖಾಸಗಿ ನಿರ್ಣಯವನ್ನು ಕಳುಹಿಸಿದರು. ನಿರ್ಣಯಗಳ ಪಟ್ಟಿಯಲ್ಲಿ ಇವರ ನಿರ್ಣಯಕ್ಕೆ ಪ್ರಥಮಸ್ಥಾನ ದೊರಕಿತ್ತು. ಆಡಳಿತದಲ್ಲಿರುವ ಭ್ರಷ್ಟಾಚಾರವನ್ನು ಹೋಗಲಾಡಿಸುವ ಸಲುವಾಗಿ ಮತ್ತು ಆಡಳಿತದಲ್ಲಿ ದಕ್ಷತೆಯನ್ನು

ಹೆಚ್ಚಿಸಲು ಸೂಕ್ತ ಸಲಹೆ ನೀಡಲು ಒಂದು ಸಮಿತಿಯನ್ನು ನೇಮಕ ಮಾಡಬೇಕೆಂದು ಅವರ ಸಲಹೆಯಾಗಿತ್ತು. ಕಡಿದಾಳರ ಭಾಷಣವನ್ನು ಸಭೆಯ ಅಧ್ಯಕ್ಷತೆ ವಹಿಸಿದ್ದ ದಿವಾನ್ ಮಾಧವರಾಯರು ಅವರ ಸಹೋದ್ಯೋಗಿಗಳು ಮೆಚ್ಚಿಕೊಂಡರು. ಕಾಂಗ್ರೆಸ್ಸೇತರ ಸದಸ್ಯರೂ ಕಡಿದಾಳರ ನಿರ್ಣಯದ ಪರವಾಗಿ ಮಾತನಾಡಿದರು. ದಿವಾನರು. ಲಂಚ ನಿರ್ಮೂಲನಕ್ಕೆ ಮತ್ತು ಆಡಳಿತ ದಕ್ಷತೆಯನ್ನು ಹೆಚ್ಚಿಸುವುದಕ್ಕೆ ಏನಾದರು ನಿರ್ದಿಷ್ಟ ಸಲಹೆ ನಿಮ್ಮಿಂದ ಇದೆಯೆಯೆಂದು ಕೇಳಿದರು. "ಕಡಿದಾಳರು ನನಗೆ ಅಧಿಕಾರ ಕೊಡಿ, ಲಂಚ ನಿರ್ಮೂಲನೆ ಮಾಡಿ ದಕ್ಷತೆ ಮೂಡುವಂತೆ ಮಾಡುತ್ತೇನೆ". ಎಂದರು. ಮಾಧವರಾಯರು ನಗುತ್ತಾ "ನಿಮಗೂ ಅಧಿಕಾರ ಬರತದೆ, ಇನ್ನೂ ಸ್ವಲ್ಪ ದಿನ ಕಾಯಬೇಕು" ಎಂದರು. ಕಡಿದಾಳರು ಅಂದಿನ ಪ್ರಜಾಪ್ರತಿನಿಧಿ ಸರ್ಕಾರದ ಅಧಿಕಾರಿಗಳ ಮತ್ತು ಮಂತ್ರಿಗಳ ವಿಶ್ವಾಸಗಳಿಸಿದ್ದರು. ಅವರೆಂದೂ ಅವಿಧೇಯರಾಗಿ ವರ್ತಿಸಿರಲಿಲ್ಲ. ಈ ಕಾರಣಕ್ಕಾಗಿ ಕಡಿದಾಳರಿಗೆ ಅಸಿಸ್ಟೆಂಟ್ ಕಮೀಷನರ್ ಹುದ್ದೆ ನೀಡುವುದಾಗಿ ಸರ್ಕಾರದ ವತಿಯಾದ ಆಶ್ವಾಸನೆ ಬಂದಿತ್ತು. ಅದರ ಹಿಂದಿನ ಮರ್ಮ ತಿಳಿದ ಅವರು ಸಲಹೆ ಕೊಟ್ಟವರಿಗೆ ತಾನು ಸರ್ಕಾರಿ ಚಾಕರಿ ಮಾಡುವುದಿಲ್ಲವೆಂದು ಹೇಳಿದರು.

## ಅವಿರೋಧ ಆಯ್ಕೆ

೧೯೪೫ ರಲ್ಲಿ ಕಡಿದಾಳರ ಪ್ರಜಾಪ್ರತಿನಿಧಿಸಭೆಯ ಸದಸ್ಯತ್ವ ಮುಕ್ತಾಯವಾಯಿತು. ಅದೇ ವರ್ಷ ಪ್ರಜಾಪ್ರತಿನಿಧಿ ಸಭೆಗೂ ನ್ಯಾಯ ವಿಧಾಯಕ ಸಭೆಗೂ ಚುನಾವಣೆ ನಡೆಯತಕ್ಕದೆಂದು ಸರ್ಕಾರ ತೀರ್ಮಾನ ಮಾಡಿತು. ಪ್ರಜಾಪ್ರತಿನಿಧಿ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಬೇಕೆಂದು ಸಿದ್ದಯ್ಯನವರು ಕಡಿದಾಳರ ಮೇಲೆ ಒತ್ತಾಯ ಹೇರಿದರು. ಆದರೆ ದಿವಂಗತ ಚಿಕ್ಕಪ್ಪ ರಾಮಣ್ಣ ಗೌಡರ ವಿರುದ್ಧ ಸ್ಪರ್ಧಿಸಿದ್ದ ಕಹಿ ನೆನಪು ಕಡಿದಾಳರನ್ನು ಕಾಡುತ್ತಿತ್ತು. ಆ ಕಾರಣಕ್ಕಾಗಿ ಅವರು ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಲು ಒಪ್ಪಲಿಲ್ಲ. ಅವರ ಬದಲಿಗೆ ಕಾಂಗ್ರೆಸ್ ಪಕ್ಷದಿಂದ ಸೀಕೆ ಹರಿಯಪ್ಪ ಗೌಡರನ್ನು, ತೀರ್ಥಹಳ್ಳಿಯ ರಾಮಭಟ್ಟರನ್ನು ನಿಲ್ಲಿಸಲಾಯಿತು. ಈ ಹಿಂದೆ ಕಡಿದಾಳರರಿಗೆ ಪ್ರತಿಸ್ಪರ್ಧಿಯಾಗಿ ನಿಂತು ಸೋತು ಹೋಗಿದ್ದ ನಾಲೂರು ಚೆನ್ನಪ್ಪಗೌಡರನ್ನು ಸರ್ಕಾರ ನಿಲ್ಲಿಸಿತು. ಕಡಿದಾಳರು ಕಾಂಗ್ರೆಸ್ ಪರವಾಗಿ ಸ್ಪರ್ಧಿಸಿದವರ ಪರವಾಗಿ ಪ್ರಚಾರ ಮಾಡಿದರು. ಹರಿಯಪ್ಪ ಗೌಡರು ಸೋತು ರಾಮಭಟ್ಟರು, ಚೆನ್ನಪ್ಪಗೌಡರು ಗೆದ್ದರು. ಚುನಾವಣೆಯಿಂದ ಪಾರಾದೆನೆಂದು ಕಡಿದಾಳರು ನೆಮ್ಮದಿಯಿಂದ ತನ್ನ ವಕೀಲ ಕೆಲಸದಲ್ಲಿ ನಿರತರಾಗಿದ್ದರು. ಅವರಿಗೆ ಚುನಾವಣೆ

ಬೇಡವಾದರೂ ಚುನಾವಣೆ ಅವರನ್ನು ಬಿಡಲಿಲ್ಲ. ನ್ಯಾಯವಿಧಾಯಕ ಸಭೆಗೆ ಚುನಾವಣೆ ನಡೆಯಲು ಸರ್ಕಾರ ತೀರ್ಮಾನಿಸಿತ್ತು. ಶಿವಮೊಗ್ಗ ಜಿಲ್ಲೆಯ ಕಾಂಗ್ರೆಸ್ ನಾಯಕರಾದ ಸಿದ್ದಯ್ಯನವರು ಶಿವಮೊಗ್ಗ ಜಿಲ್ಲೆಯಿಂದ ಎರಡು ಸ್ಥಾನಕ್ಕೆ ಕಾಂಗ್ರೆಸ್ ಪಕ್ಷದಿಂದ ಕಡಿದಾಳರು, ಹೆಚ್.ಎಸ್. ರುದ್ರಪ್ಪನವರು (ತದನಂತರ ರೈತ ಸಂಘದ ಅಧ್ಯಕ್ಷರಾದವರು) ಸ್ಪರ್ಧಿಸಬೇಕೆಂದು ಹೇಳಿದರು. ಕಡಿದಾಳರು ಹಣಕಾಸಿನ ತೊಂದರೆ ಇದೆಯೆಂದು ತನಗೆ ಬೇಡವೆಂದರು. ಸಿದ್ಧಯ್ಯನವರು ನಿಮಗೆ ವಿರೋಧಿಗಳೇ ಇಲ್ಲವೆಂದು ಚುನಾವಣೆಯಲ್ಲಿ ಅವಿರೋಧ ಅಯ್ಕೆ ಆಗುವುದೆಂದು ಭರವಸೆ ಕೊಟ್ಟರು. ಸಿದ್ದಯ್ಯನವರ ಕಡು ವಿರೋಧಿ ಕಾಂಗ್ರೆಸ್ ಪಕ್ಷಕ್ಕೆ ವಿರೋಧವಾಗಿದ್ದ ಸಿದ್ದಪ್ಪನವರು ಕಡಿದಾಳರ ಖಾಸ ಗೆಳೆಯರು. ಅವರು ಕಡಿದಾಳರಿಗೆ ತಾವು ಚುನಾವಣೆಗೆ ಸ್ಪರ್ಧಿಸುವುದಾದರೆ ತಾನು ಅವರ ವಿರುದ್ಧ ನಿಲ್ಲುವುದಿಲ್ಲವೆಂದು ಪ್ರಾಸಂಗಿಕವಾಗಿ ಮಾತನಾಡುವಾಗ ಹೇಳಿದರು. ಸಿದ್ದಯ್ಯನವರು, ಸಿದ್ಧಪ್ಪನವರು ಇಬ್ಬರೂ ಚನ್ನಗಿರಿ ತಾಲೂಕಿಗೆ ಸೇರಿದವರು. ವಾಗ್ದಾನ ಮಾಡಿದಂತೆ ಸಿದ್ಧಪ್ಪನವರು ಚುನಾವಣೆಗೆ ನಿಲ್ಲಲಿಲ್ಲ. ಹಾಗಾಗಿ ಕಡಿದಾಳರು ಹೆಚ್.ಎಸ್. ರುದ್ರಪ್ಪನವರು ಇಬ್ಬರೂ ಅವಿರೋಧವಾಗಿ ಆಯ್ಕೆಯಾದರು. ಅಂದು ಈಗಿನಂತೆ ಚುನಾವಣೆಗೆ ಸ್ಪರ್ಧಿಸುವವರಿಗೆ ಪಕ್ಷದಿಂದ ಚುನಾವಣೆ ಖರ್ಚಿಗೆ ಹಣ ಕೊಡುತ್ತಿರಲಿಲ್ಲ. ಸ್ಪರ್ಧಿಗಳೇ ಖರ್ಚುವೆಚ್ಚ ಭರಿಸಬೇಕಾಗಿತ್ತು.

### ಕೈಕೊಟ್ಟ ರೈತ ಸಂಘದ ಹಿತೈಷಿಗಳು

ಕಡಿದಾಳರು ಶಿವಮೊಗ್ಗೆಯಲ್ಲಿ ವಕೀಲರಾಗಿದ್ದಾಗ ಗೇಣಿದಾರರ ಗೋಳನ್ನು ನೋಡಲಾಗದೆ ೧೯೪೫ ರಲ್ಲಿ ರೈತ ಸಂಘವನ್ನು ಕಟ್ಟಿದರು. ಅದರ ಪ್ರಥಮ ಅಧ್ಯಕ್ಷರು ಅವರೇ ಅಗಿದ್ದರು. ಬಸವಾನಿ ರಾಮಶರ್ಮರು, ಸಾಗರದ ಗಣಪತಿಯಪ್ಪ ಸಂಘದ ಕಾರ್ಯದರ್ಶಿಗಳಾಗಿದ್ದರು. ಸಾಗರ ತಾಲೂಕಿನ ಮೂಕಪ್ಪ ಎಂಬುವವರು ಸಂಘದ ಸದಸ್ಯರಾಗಿದ್ದರು. 'ಮಲೆನಾಡು ಗೇಣಿದಾರರ ಸಂಘ' ಎಂಬ ಹೆಸರಿನಲ್ಲಿ ಸಂಘವನ್ನು ಸ್ಥಾಪಿಸಿದರು. ಆ ಸಂಘದ ವ್ಯಾಪ್ತಿ ತೀರ್ಥಹಳ್ಳಿ, ಸಾಗರ ಮತ್ತು ಹೊಸನಗರ ತಾಲೂಕುಗಳಿಗೆ ಮಾತ್ರ ಸೀಮಿತವಾಗಿತ್ತು. ಗೇಣೆದಾರರ ರಕ್ಷಣೆಗಾಗಿ ಮೈಸೂರು ಲ್ಯಾಂಡ್ ರೆವಿನ್ಯೂ ಕೋಡಿನಲ್ಲಿ ಕೆಲವು ನಿಬಂಧನೆಗಳು ಅಡಕವಾಗಿದ್ದರೂ ಅವು ಪುಸ್ತಕದಲ್ಲಿದ್ದವೇ ಹೊರತು ಅವುಗಳಿಂದ ಗೇಣಿದಾರರಿಗೆ ಯಾವ ರಕ್ಷಣೆಯೂ ದೊರೆತಿರಲಿಲ್ಲ. ಭೂ ಮಾಲೀಕರು ಗೇಣಿದಾರರನ್ನು ಶೋಷಣೆ ಮಾಡುತ್ತಿದ್ದರು. ಮನಸ್ಸು ಬಂದಾಗ ಗೇಣಿದಾರರನ್ನು ಉಚ್ಚಾಟಿಸಿ ಬೇರೆಯವರಿಗೆ ಭೂಮಿಯನ್ನು ಗೇಣಿಗೆ ಕೊಡುತ್ತಿದ್ದರು. ಭೂಮಾಲೀಕರು ಗೇಣಿಯನ್ನು ವಸೂಲಿ ಮಾಡುವಾಗ

ಮತ್ತು ಗೇಣಿಯನ್ನು ನಿಗದಿ ಮಾಡುವಾಗ ಗೇಣಿದಾರರ ಕಷ್ಟಕಾರ್ಪಣ್ಯಗಳನ್ನು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಅಳತೆ ತೂಕದಲ್ಲಿಯೂ ಮೋಸ ಮಾಡುತ್ತಿದ್ದರು. ಗೇಣಿದಾರರ ಮಗನಾದ ಕಡಿದಾಳರಿಗೆ ಗೇಣಿದಾರರ ಶೋಷಣೆಯನ್ನು ತಡೆಗಟ್ಟುವುದಕ್ಕಾಗಿ ಗೇಣಿದಾರರ ಸಂಘಟನೆ ಅಗತ್ಯವಾಗಿ ಕಂಡು ಬಂದಿತು.

ಪ್ರಾರಂಭದಲ್ಲಿ ಭೂಮಾಲೀಕರು ಸಂಘದ ಕಾರ್ಯಕಲಾಪಗಳಿಗೆ ಅಡ್ಡಿಪಡಿಸಿದರೂ ಗೇಣಿದಾರರಲ್ಲಿ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿ ಉಂಟಾಯಿತು. ಸಾಗರದಲ್ಲೂ ಒಂದು ರೈತ ಸಂಘದ ಶಾಖೆ ತೆಗೆದು ಆ ಸಂಘಕ್ಕೆ ಮೂಕಪ್ಪನವರನ್ನು ಅಧ್ಯಕ್ಷರನ್ನಾಗಿ, ಗಣಪತಿಯಪ್ಪನವರನ್ನು ಕಾರ್ಯದರ್ಶಿಯನ್ನಾಗಿ ಮಾಡಲಾಯಿತು. ಗೇಣೀದಾರರ ಸಂಘಟನೆ ಬೆಳೆಯುತ್ತಾ ಹೋದ ಹಾಗೆ ಅಲ್ಲಲ್ಲಿ ಗೇಣಿದಾರರಿಗೂ ಭೂ ಮಾಲೀಕರಿಗೂ ವಿವಾದಗಳು ಉಂಟಾಗ ಹತ್ತಿತು. ೧೯೪೭ ರಲ್ಲಿ ಸಾಗರದಲ್ಲಿ 'ಮಲೆನಾಡು ಗೇಣಿದಾರರ ಸಂಘ' ಒಂದು ಸಮ್ಮೇಳನವನ್ನು ದೊಡ್ಡ ಪ್ರಮಾಣದಲ್ಲಿ ನಡೆಸಿತು. ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ಪ್ರಸಿದ್ಧ ಸಮಾಜವಾದಿ ನಾಯಕ ರಮಾನಂದ ಮಿಶ್ರಾ ಸಮ್ಮೇಳನಕ್ಕೆ ಆಗಮಿಸಿದ್ದರು. ಗೇಣಿಯ ಪ್ರಮಾಣ ಬಿದನೂರಿನ ಶಿವಪ್ಪನಾಯಕನ ರಾಜ್ಯದಲ್ಲಿ ಜಾರಿಯಲ್ಲಿದ್ದಂತೆ ಜಮೀನಿನ ಹುಟ್ಟುವಳಿಯಲ್ಲಿ ೧/೨ ಭಾಗಕ್ಕಿಂತ ಹೆಚ್ಚಾಗಿರಕೂಡದೆಂದು, ಭೂಮಾಲೀಕರು ಗೇಣಿ ಪಾವತಿ ಮಾಡಿದ್ದಕ್ಕೆ ರಶೀದಿ ಕೊಡಬೇಕೆಂದು ಮತ್ತು ಸರ್ಕಾರದ ಅಡಳಿತದಲ್ಲಿದ ಮುಜರಾಯಿ ಇಲಾಖೆಗೆ ಸೇರಿದ್ದ ದೇವಾಲಯದ ಇನಾಮು ಜಮೀನುಗಳನ್ನು ಹರಾಜು ಮಾಡುವ ಪದ್ಧತಿಯನ್ನು ನಿಲ್ಲಿಸಬೇಕೆಂದು ಸಮ್ಮೇಳನದಲ್ಲಿ ಪ್ರತಿಪಾದಿಸಲಾಯಿತು. ಸಾಗರ ತಾಲೂಕಿನ ಕಾಗೋಡು ಜಮೀನುದಾರರಿಂದ ಅವರ ಒಕ್ಕಲುಗಳಿಗೆ ಉಂಟಾಗಿದ್ದ ವಿವಾದ ಒಂದು ಹೋರಾಟಕ್ಕೆ ನಾಂದಿಯಾಯಿತು. ಸಾಗರ ತಾಲ್ಲೂಕಿನ ಕೆ.ಜಿ. ಒಡೆಯರ್ ದೊಡ್ಡ ಭೂಮಾಲೀಕರಾಗಿದ್ದರು. ಒಡೆಯರ್ ಅವರು ಕಾಂಗ್ರೆಸ್‌ನವರಾಗಿದ್ದರಿಂದ ವಿವಾದವನ್ನು ಸೌಹಾರ್ದವಾಗಿ ಬಗೆಹರಿಸಲು ಕಡಿದಾಳರು ಶ್ರಮಿಸಿದರು. ಒಡೆಯರ್ ಅವರು ಒಪ್ಪಿದ್ದರೂ ಕೆಲವು ಭೂಮಾಲೀಕರು ಯಾವ ಒಪ್ಪಂದಕ್ಕೂ ಜಗ್ಗಬಾರದೆಂದು, ಒಂದು ವೇಳೆ ಒಪ್ಪಿದರೆ ಮುಂದೆ ಗೇಣಿದಾರರ ಕೈಮೇಲಾಗುವುದೆಂದು ಎಚ್ಚರಿಸಿದ್ದರಿಂದ ಒಡೆಯರ್ ಸಹೋದರರು ಒಪ್ಪಲಿಲ್ಲ. ಇದರಿಂದ ವಿವಾದ ಗಂಭೀರ ಸ್ವರೂಪ ತಾಳಿತು. ರಾಜಿಯಿಂದ ಇತ್ಯರ್ಥವಾಗದಿದ್ದರೆ ಸತ್ಯಾಗ್ರಹ ಅನಿವಾರ್ಯ ಎಂಬ ನಿರ್ಧಾರವನ್ನು ಕಡಿದಾಳರು ತಿಳಿಸಿದರು. ಈ ನಡುವೆ ಸರ್ಕಾರ ಮಧ್ಯೆ ಪ್ರವೇಶಿಸಿ ಗೇಣಿದಾರರ ರಕ್ಷಣೆಗಾಗಿ ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಬೇಕೆಂದು ಅಂದಿನ ಕಂದಾಯ

ಸಚಿವರಾಗಿದ್ದ ಶಿವಮೊಗ್ಗ ಜಿಲ್ಲೆಯವರೇ ಆದ ಸಿದ್ದಯ್ಯವರನ್ನು ಕಡಿದಾಳರು ಒತ್ತಾಯಿಸಿದರು. ಅಂದು ಕಾಂಗ್ರೆಸ್ ಪಕ್ಷದ ಪ್ರಮುಖರಾಗಿದ್ದವರಿಗೆ ಗೇಣೀದಾರರ ಬಗ್ಗೆ ಸಹಾನುಭೂತಿ ಇರಲಿಲ್ಲ. ಭೂಮಾಲೀಕರಿಗೂ ಗೇಣಿದಾರರಿಗೂ ದಿನೇ ದಿನೇ ಮನಸ್ತಾಪ ಬೆಳೆಯಿತು. ಮಂತ್ರಿ ಸಿದ್ದಯ್ಯನವರು ಭೂಮಾಲೀಕರು ಗೇಣಿದಾರರು ಶಿವಮೊಗ್ಗದ ರೈತಸಂಘದ ಅಧ್ಯಕ್ಷ ಕಡಿದಾಳರ ಸಮ್ಮುಖದಲ್ಲಿ ಒಂದು ಒಪ್ಪಂದಕ್ಕೆ ಬರಬೇಕೆಂದು ಸೂಚಿಸಿ ಕೆಲವು ಸಲಹೆ ನೀಡಿದರು. ಅವರ ಸಲಹೆ ಕಡಿದಾಳರಿಗೆ ಒಪ್ಪಿಗೆಯಾಗಲಿಲ್ಲ. ಹೀಗೆ ನಡೆಯುವ ಹೊತ್ತಿಗೆ ರೈತಸಂಘದ ಕಾರ್ಯದರ್ಶಿಗಳು ಕಡಿದಾಳರಿಗೆ ತಿಳಿಯದಂತೆ ಸಮಾಜವಾದಿ ಮುಖಂಡರಾದ ಶಾಂತವೇರಿ ಗೋಪಾಲ ಗೌಡರನ್ನು, ಅವರ ಪಕ್ಷದ ಕೆಲ ಕಾರ್ಯಕರ್ತರನ್ನೂ ಭೇಟಿ ಮಾಡಿ ಕಡಿದಾಳರು ಸಿದ್ಧಗೊಳಿಸಿದ ಕಾಗೋಡು ಸತ್ಯಾಗ್ರಹದ ಭೂಮಿಕೆಯನ್ನು ಅವರ ಕೈಗೆ ಕೊಟ್ಟರು. ಕಡಿದಾಳರು ನಿಷ್ಠಾವಂತ ಕಾಂಗ್ರೆಸ್ಸಿಗರಾದ್ದರಿಂದ ಸಮಾಜವಾದಿ ಪಕ್ಷದೊಂದಿಗೆ ಕೈ ಜೋಡಿಸಲು ಇಷ್ಟಪಡದೆ ಒಂದು ಪತ್ರಿಕಾ ಹೇಳಿಕೆಯನ್ನು ಕೊಟ್ಟು ಹಿಂದೆ ಸರಿದರು. ಸಮಾಜವಾದಿ ವ್ಯಕ್ತಿಗಳು ಮಿಂಚಲು ಇದೊಂದು ಕಾರಣವಾಯಿತು. ಗೋಪಾಲಗೌಡರಿಗೆ ರಾಜಕೀಯ ಪ್ರವೇಶಕ್ಕೆ ಕಾಗೋಡು ಸತ್ಯಾಗ್ರಹವು ನಾಂದಿಯಾಯಿತು. ಆ ಕಾರಣಕ್ಕೆ ಅವರು ತಮ್ಮ ಸ್ವಂತ ತಾಲೂಕಾದ ತೀರ್ಥಹಳ್ಳಿಯಲ್ಲಿ ಸ್ಪರ್ಧಿಸದೆ ಸಾಗರ ತಾಲೂಕಿನಿಂದ ೧೯೫೨ರಲ್ಲಿ ವಿಧಾನಸಭೆಗೆ ಸ್ಪರ್ಧಿಸಿ ಗೆದ್ದು ಶಾಸಕರಾದರು. ಗೋಪಾಲ ಗೌಡರು ವಿಧಾನಸಭೆಯಲ್ಲಿ ಹದ್ದುಮೀರಿ ಮಾತನಾಡಿದರೂ ಆಡಳಿತ ಪಕ್ಷದವರಲ್ಲಿ ಆಜನ್ಮ ಶತ್ರುಗಳಂತೆ ವರ್ತಿಸುತ್ತಿರಲಿಲ್ಲ ಎಂದು ಕಡಿದಾರರು ಅಭಿಪ್ರಾಯಪಡುತ್ತಾರೆ. ಹಾಗಲ್ಲದೆ ಗೌಡರು ಈಗಿನ ಕಾಲದ ಶಾಸಕರಂತೆ ಅಧಿಕಾರಿಗಳ ವರ್ಗಾವರ್ಗಿಯಲ್ಲಾಗಲಿ ಇತರೆ ಸವಲತ್ತುಗಳನ್ನು ಕೊಡಿಸುವ ಸಲುವಾಗಿ ಕಮಿಷನ್ ಏಜೆಂಟರುಗಳಂತೆ ವರ್ತಿಸಿ ಅಕ್ರಮ ಸಂಪಾದನೆ ಮಾಡುತ್ತಿರಲಿಲ್ಲವೆಂದು ಪ್ರಾಮಾಣಿಕವಾಗಿ ಹೇಳುವುದನ್ನು ಕಡಿದಾಳರು ಮರೆಯುವುದಿಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಗೌಡರು ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಖ್ಯಾತರಾಗಿದ್ದರು.

## ಮಧ್ಯೆರಾತ್ರಿ ಬಂದ ಸ್ವಾತಂತ್ರ್ಯ

ದಿನಾಂಕ : ೧೫-೦೮-೧೯೪೭ ರಂದು ಮಧ್ಯರಾತ್ರಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. ಸ್ವಾತಂತ್ರಕ್ಕಾಗಿ ಹೋರಾಡಿದ ಜನ ನಾಯಕರಿಗೆ ಸಂತೋಷ, ಸಂಭ್ರಮ. ಆ ರಾತ್ರಿ ಕಡಿದಾಳರ ಅಧ್ಯಕ್ಷತೆಯಲ್ಲಿ ಶಿವಮೊಗ್ಗದಲ್ಲಿ ಒಂದು ದೊಡ್ಡ ಸಭೆ ಏರ್ಪಟ್ಟಿತು.

ಆಗ ಕಡಿದಾಳರು ಇನ್ನೂ ಬಿಸಿ ರಕ್ತದ ತರುಣ. ಕಡಿದಾಳರು ಅಂದು ಶಿವಮೊಗ್ಗದ ಜನತೆಯನ್ನುದ್ದೇಶಿಸಿ ಇನ್ನು ಕೆಲವೇ ದಶಕದಲ್ಲಿ ಭಾರತವು ಸಂಪತ್ ಸಮೃದ್ಧಿಯಿಂದ ಕೂಡಿದ ಪ್ರಬಲ ರಾಷ್ಟ್ರವಾಗುವುದೆಂದು, ಸತ್ಯ ಅಹಿಂಸೆಗಳ ಹೋರಾಟದಲ್ಲಿ ಸ್ವಾತಂತ್ರ್ಯವನ್ನು ಗಳಿಸಿದ ಭಾರತ ಇಡೀ ಜಗತ್ತಿಗೆ ಮಾದರಿ ರಾಷ್ಟ್ರವಾಗುತ್ತದೆಂದು ಹೇಳಿದರು. ಆದರೆ ತದನಂತರ ಕಡಿದಾಳರು ತಾನು ಕಂಡ ಕನಸು ನನಸಾಗಲಿಲ್ಲ. ಇತರ ರಾಷ್ಟ್ರಗಳಿಗೆ ಮಾರ್ಗದರ್ಶನ ನೀಡುವ ನೈತಿಕ ಹಕ್ಕನ್ನು ನಾವು ಕಳೆದುಕೊಂಡಿದ್ದೇವೆ ಎಂದು ವಿಷಾದಿಸಿದ್ದಾರೆ. ಸ್ವಾತಂತ್ರ್ಯ ಬಂದ ಮೇಲೆ ರಾಜಕೀಯ ವ್ಯಕ್ತಿಗಳು ಭ್ರಷ್ಟರೂ ಕ್ರೂರಿಗಳೂ ಸ್ವಾರ್ಥಸಾಧಕರೂ ಆಗಿದ್ದಾರೆಂದು ಅಭಿಪ್ರಾಯಪಟ್ಟಿದ್ದಾರೆ. ಒಮ್ಮೊಮ್ಮೆ ಅವರಿಗೆ ಈ ದೇಶದಲ್ಲಿ ಪ್ರಜಾಪ್ರಭುತ್ವ ಉಳಿಯವುದೇ ಎಂಬ ಸಂಶಯ ಕಾಡಿದೆ. ಇಂದಿನ ರಾಜಕಾರಣಿಗಳು ಸ್ವಾತಂತ್ರ್ಯವನ್ನು ದುರುಪಯೋಗಿಸಿಕೊಂಡು ಅಧಿಕಾರ ಸ್ಥಾನಗಳನ್ನು ಆಕ್ರಮಿಸಿಕೊಂಡಿರುತ್ತಾರೆ. ಅವರಿಗೆ ರಾಷ್ಟ್ರಪ್ರೇಮವೂ ಇಲ್ಲ ಆದರ್ಶವೂ ಇಲ್ಲ, ಸತ್ಯಸಂಧತೆಯೂ ಇಲ್ಲ. ಜನರ ಸಮಸ್ಯೆಗಳ ಅರಿವೂ ಇಲ್ಲ. ದೇಶ ದಿನೇ ದಿನೇ ಅಧೋಗತಿಯ ಕಡೆಗೆ ಹೋಗುತ್ತಿದೆ ಎಂದು ದೇಶಕ್ಕೆ ಒದಗಿಬಂದ ದುಸ್ಥಿತಿ ಬಗ್ಗೆ ಮರುಗಿದ್ದಾರೆ. ಕಡಿದಾಳರು ರಾಜೇಂದ್ರ ಪ್ರಸಾದ್, ಜವಹರಲಾಲ್ ನೆಹರೂ, ಲಾಲ್‌ಬಹದ್ದೂರ್ ಶಾಸ್ತ್ರಿ, ಗುಲ್ಜಾರಿಲಾಲ್ ನಂದ ಮುಂತಾದವರೊಡನೆ ಒಡನಾಡಿದವರು. ಇಳಿವಯಸ್ಸಿನಲ್ಲಿ ರಾಷ್ಟ್ರ ಅಧೋಗತಿ ಕಡೆಗೆ ಹೋಗುತ್ತಿರುವುದನ್ನು ನೋಡುತ್ತ ಬದುಕಿದ್ದುದು ತನ್ನ ದೌರ್ಭಾಗ್ಯ ಎಂದು ದುಃಖಿಸಿದ್ದಾರೆ.

## ತೀರ್ಥಹಳ್ಳಿಯಿಂದ ವಿಧಾನಸಭೆಗೆ ಆಯ್ಕೆ

೧೯೫೨ ನೇ ಇಸವಿ ಮಾರ್ಚ್ ತಿಂಗಳಲ್ಲಿ ವಿಧಾನಸಭೆಗೆ ಚುನಾವಣೆ ನಡೆಯಿತು. ಕಡಿದಾಳರು ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಬೇಕೆಂದು ಕಾಂಗ್ರೆಸ್ ವರಿಷ್ಠರು ನಿರ್ಧರಿಸಿದರು. ಕಾಂಗ್ರೆಸ್ ಪಕ್ಷದ ವತಿಯಿಂದ ಉಮೇದುವಾರರ ಹೆಸರುಗಳನ್ನು ಪ್ರಕಟಿಸಿದ ನಂತರ ಭೂಮಾಲಿಕರ ಸಂಘದ ಅಧ್ಯಕ್ಷರಾಗಿದ್ದ ತೀರ್ಥಹಳ್ಳಿ ತಾಲ್ಲೂಕಿನ ಕಿತ್ತಂದೂರು ರಾಮಕೃಷ್ಣಭಟ್ಟರು ಕಡಿದಾಳರಿಗೆ ತಾವು ಚುನಾವಣೆಗೆ ನಿಂತಿದ್ದು ಸಂತೋಷದ ಸುದ್ದಿಯೆಂದು, ಬೆಂಬಲ ಬೇಕಾದರೆ ಕಡಿದಾಳರು ಭೂಮಾಲೀಕರ ಹಿತಕಾಪಾಡುವ ಭರವಸೆ ಕೊಡಬೇಕೆಂದು, ಇಲ್ಲವಾದಲ್ಲಿ ಭೂಮಾಲೀಕರ ಪರವಾಗಿ ಒಬ್ಬರನ್ನು ಪ್ರತಿಸ್ಪರ್ಧಿಯಾಗಿ ನಿಲ್ಲಿಸಲಾಗುವುದೆಂದು ಬೆದರಿಕೆ ಹಾಕಿದರು. ಕಡಿದಾಳರು ನೇರ ವ್ಯಕ್ತಿತ್ವದ ಮನುಷ್ಯ. ಈಗಿನ ರಾಜಕಾರಣಿಗಳಂತೆ ಸುಳ್ಳು ಭರವಸೆ ಕೊಟ್ಟು ನುಣುಚಿಕೊಳ್ಳುವ ವ್ಯಕ್ತಿಯಲ್ಲ. ಕಡಿದಾಳರು ಕಾಂಗ್ರೆಸ್ ಧ್ಯೇಯ ಧೋರಣೆಗಳಿಗೆ

ತಾನು ಬದ್ಧನಾಗಿರುವೆನೆಂದು, ಯಾವುದೇ ಒಂದು ವರ್ಗದ ಹಿತಕಾಪಾಡಲು ಸಾಧ್ಯವಿಲ್ಲವೆಂದು ಹೇಳಿದರು. ಭಟ್ಟರು ಹಾಗಾದರೆ ನಿಮ್ಮದಾರಿ ನಿಮಗೆ ನಮ್ಮ ದಾರಿ ನಮಗೆ ಎಂದರು. ಕಡಿದಾಳರು ಸಂತೋಷ ಎಂದು ಚುನಾವಣೆ ಎಂಬ ಯುದ್ಧಕ್ಕೆ ಸಿದ್ಧರಾದರು.

ಕಡಿದಾಳರ ವಿರುದ್ಧ ದೊಡ್ಡ ಭೂಮಾಲೀಕರೆಲ್ಲಾ ಸೇರಿ ಆಗರ್ಭ ಶ್ರೀಮಂತರಾದ ಕಾಸರವಳ್ಳಿ ರಾಮಕೃಷ್ಣ ರಾಯರನ್ನು ಜನಸಂಘ ಪಕ್ಷದಿಂದ ಚುನಾವನೆಗೆ ನಿಲ್ಲಿಸಿದರು. ಆಗ ತೀರ್ಥಹಳ್ಳಿ ಕ್ಷೇತ್ರಕ್ಕೆ ಕೊಪ್ಪ ತಾಲೂಕು ಮತ್ತು ಶೃಂಗೇರಿ ಕ್ಷೇತ್ರವು ಸೇರಿದ್ದಿತು. ಕೊಪ್ಪ ತಾಲೂಕಿನ ಬೇಳೆಗದ್ದೆ ಪುಟ್ಟೇಗೌಡರು ಪ್ರಜಾಪ್ರತಿನಿಧಿ ಸಭೆಯ ಎಂ.ಆರ್.ಎ ಆಗಿದ್ದರು. ಅವರು ಚುನಾವಣೆಗೆ ನಿಲ್ಲಲು ಕಾಂಗ್ರೆಸ್ ಪಕ್ಷದ ಟಿಕೆಟ್ ಸಿಗದೆ ನಿರಾಶರಾಗಿದ್ದರು. ಆದರೂ ಅವರೂ, ಕೊಪ್ಪ ಪುರಸಭಾಧ್ಯಕ್ಷ ಹೆಚ್.ಜಿ.ಗೋವಿಂದೇಗೌಡರು ಕಡಿದಾಳರಿಗೆ ಸಂಪೂರ್ಣ ಸಹಕಾರ ಕೊಡುವುದಾಗಿ ಭರವಸೆ ಇತ್ತರು. ಚುನಾವಣೆ ಪ್ರಚಾರಕ್ಕೆ ಕಡಿದಾಳರಲ್ಲಿ ಕಾರು ಇರಲಿಲ್ಲ. ದೇವಂಗಿ ರಾಮಣ್ಣ ಗೌಡರ ಮಗ ರತ್ನಾಕರ ಅವರು ಚುನಾವಣಾ ಪ್ರಚಾರಕ್ಕೆ ತಮ್ಮ ಕಾರನ್ನು ಕೊಟ್ಟರು. ಎದುರಾಳಿ ರಾಮಕೃಷ್ಣ ರಾಯರ ಬಳಿ ಏಳೆಂಟು ಕಾರುಗಳಿದ್ದು, ಅವರು ಭಾರೀ ಪ್ರಚಾರದಲ್ಲಿ ತೊಡಗಿದ್ದರು. ಅವರಿಗೆ ಶ್ರೀಮಂತ ಭೂ ಮಾಲೀಕರ ಬೆಂಬಲವಿತ್ತು. ಕಡಿದಾಳರಿಗೆ ಬಡವರು, ಕಾರ್ಮಿಕರು, ಹರಿಜನರು, ಮಧ್ಯವರ್ಗದವರ ಬೆಂಬಲವಿತ್ತು. ಜೊತೆಗೆ ಕಡಿದಾಳರು ಬ್ರಾಹ್ಮಣ ವಿರೋಧಿ ಎಂಬ ಅಬ್ಬರದ ಅಪಪ್ರಚಾರವೂ ಇತ್ತು. ಆದರೆ ಅಂದು ಜನಸಂಘ ಪಕ್ಷದ ಮೇಲೆ ಯಾರಿಗೂ ಯಾವ ವಿಶ್ವಾಸವೂ ಇರಲಿಲ್ಲ. ಲೇಖಕನೇ ಚಿಕ್ಕಂದಿನಲ್ಲಿ ನೋಡಿದಂತೆ ಅದೊಂದು ಕೋಮುವಾದಿ ಪಕ್ಷ ಎಂಬ ಭಾವನೆ ಜನರಲ್ಲಿದ್ದಿತು. ಕಡಿದಾಳರು ಸೋದರಳಿಯ ಎನ್.ಡಿ. ವೆಂಕಟೇಶ್ ಅವರೊಂದಿಗೆ ಚುನಾವಣಾ ಪ್ರಚಾರದಲ್ಲಿ ತೊಡಗಿದರು. ಆಗ ವೆಂಕಟೇಶ್ ಅವರು ಕಾನೂನು ಪರೀಕ್ಷೆ ಮುಗಿಸಿ ಸೋದರ ಮಾವನೊಂದಿಗೆ ಕಿರಿಯ ವಕೀಲರಾಗಿದ್ದರು. ಜನರು ಅವರವರ ಸ್ವಂತ ಖರ್ಚಿನಲ್ಲಿ ಕಡಿದಾಳರ ಪರವಾಗಿ ಪ್ರಚಾರ ಕಾರ್ಯದಲ್ಲಿ ತೊಡಗಿದ್ದರು. ಈ ಸಮಯದಲ್ಲಿ ಕಡಿದಾಳರಿಗೆ ಚುನಾವಣಾ ಪ್ರಚಾರದಲ್ಲಿ ತೊಡಗದಂತೆ ಒಂದು ದುಃಖದ ಪ್ರಸಂಗ ಒದಗಿ ಬಂದಿತು. ಕಡಿದಾಳರ ನಾಲ್ಕು ವರ್ಷದ ಮಗ ದೇವಿಪ್ರಸಾದನು ಅನಾರೋಗ್ಯದಿಂದ ಹಾಸಿಗೆ ಹಿಡಿದವನು ತೀರಿಕೊಂಡ. ಪುತ್ರ ಶೋಕದಿಂದ ಕಡಿದಾಳರು ಮನೆಯಲ್ಲೇ ಉಳಿದರು. ಆದರೆ ಬೆಂಬಲಿಗರು ಚುನಾವಣಾ ಪ್ರಚಾರಕ್ಕೆ ಕಡಿದಾಳರು ಬರುವ ಅವಶ್ಯಕತೆ ಇದೆಯೆಂದು ತಿಳಿಸಿದ್ದರಿಂದ ಕಡಿದಾಳರು

ನಿರ್ವಾಹವಿಲ್ಲದೆ ಪುತ್ರಶೋಕವನ್ನು ಅದುಮಿಟ್ಟುಕೊಂಡು ಪ್ರಚಾರಕ್ಕೆ ಹೊರಟರು. ಜನ ಕಡಿದಾಳರ ಕೈಬಿಡಲಿಲ್ಲ. ಪ್ರಚಂಡ ಬಹುಮತದಿಂದ ಜಯಗಳಿಸುವಂತೆ ಮಾಡಿದರು.

## ಮಂತ್ರಿಯಾಗಿ ಕಡಿದಾಳರು

೧೯೫೨ ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ಪ್ರಚಂಡ ಬಹುಮತವನ್ನು ಗಳಿಸಿ ಅಧಿಕಾರಕ್ಕೆ ಬಂದಿತು. ಕೆ.ಸಿ. ರೆಡ್ಡಿಯವರಿಗೂ ಕೆಂಗಲ್ ಹನುಮಂತಯ್ಯ ಅವರಿಗೂ ರಾಜಕೀಯ ಪೈಪೋಟಿ ಇದ್ದಿತು. ಹನಮಂತಯ್ಯ ಅವರಿಗಿಂತ ಮುಂಚೆ ಕೆ.ಸಿ. ರೆಡ್ಡಿಯವರು ಮುಖ್ಯಮಂತ್ರಿಯಾಗಿದ್ದರು. ಹನುಮಂತಯ್ಯನವರು ಆಗ ರಾಜ್ಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದರು. ಶಾಸನ ಸಭೆಯ ಕಾಂಗ್ರೆಸ್ ಪಕ್ಷದ ನಾಯಕ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ರೆಡ್ಡಿಯವರು ಪರಾಭವಗೊಂಡು ಹನುಮಂತಯ್ಯ ಅವರು ಆರಿಸಲ್ಪಟ್ಟರು. ಅವರಿಬ್ಬರೂ ಕಡಿದಾಳರಿಗೆ ಅಪ್ತ ಮಿತ್ರರು. ರೆಡ್ಡಿಯವರಿಗೆ ಸಾಹುಕಾರ್ ಚೆನ್ನಯ್ಯ ಅವರು ಮುಖ್ಯಮಂತ್ರಿ ಆಗಿದ್ದಾಗ ಅವರ ಸಂಪುಟದಲ್ಲಿ ಸಚಿವರಾಗಿದ್ದ ಟಿ. ಮರಿಯಪ್ಪ ಪ್ರಮುಖ ಬೆಂಬಲಿಗರಾಗಿದ್ದರು. ಹನುಮಂತಯ್ಯ ಅವರ ಪರವಾಗಿ ದೇವರಾಜ್ ಅರಸು, ಹೆಚ್.ಎಂ. ಚನ್ನಬಸಪ್ಪ ಮುಂತಾದ ಬೆಂಬಲಿಗರಿದ್ದರು. ಕಡಿದಾಳರು ಕೆ.ಸಿ.ರೆಡ್ಡಿಯವರ ಪಕ್ಷಪಾತಿಯಾದರೂ ಅವರ ಬೆಂಬಲಿಗರಾದ ಸಾಹುಕಾರ್ ಚೆನ್ನಯ್ಯ ಮತ್ತು ಅವರ ಸಂಗಡಿಗರ ರಾಜಕಾರಣವನ್ನು ಇಷ್ಟಪಡುತ್ತಿರಲಿಲ್ಲ. ನಾಯಕನಾಗಿ ಆರಿಸಲ್ಪಟ್ಟ ಹನುಮಂತಯ್ಯ ಅವರು ಕಡಿದಾಳರಿಗೆ ತಾನು ದೆಹಲಿಗೆ ಹೋಗಿ ಬರುವುದಾಗಿಯೂ, ಅಲ್ಲಿಯ ತನಕ ನೀವು ಬೆಂಗಳೂರಿನಲ್ಲಿಯೆ ಇರಬೇಕೆಂದು ಹೇಳಿ ಹೋದರು. ಕಡಿದಾಳರಿಗೆ ಹನುಮಂತಯ್ಯನವರು ತನ್ನನ್ನು ಮಂತ್ರಿಯಾಗಲು ಕೇಳುತ್ತಾರೆಂದು ತಿಳಿದಿತ್ತು. ಅದರೆ ಕಡಿದಾಳರಿಗೆ ಮಂತ್ರಿಯಾಗಲು ಇಷ್ಟವಿರಲಿಲ್ಲ. ಅವರು ೧೯೩೬ ರಿಂದ ೧೯೪೭ ರವರೆಗೆ ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರ ಅರ್ಥಿಕ ಸ್ಥಿತಿ ಸುಸ್ಥಿತಿಯಲ್ಲಿರಲಿಲ್ಲ. ೧೯೪೭ ರ ನಂತರ ಅವರ ವಕೀಲ ವೃತ್ತಿ ಸುಗಮವಾಗಿ ನಡೆದು ಅವರು ಚೇತರಿಸಿಕೊಳ್ಳುತ್ತಿದ್ದರು. ಅದಲ್ಲದೆ ಹನುಮಂತಯ್ಯನವರು ಶೀಘ್ರಕೋಪಕ್ಕೆ ಹೆಸರಾದವರು. ಕಡಿದಾಳರಿಗೆ ತನ್ನನ್ನು ಅವರು ಗೌರವದಿಂದ ಕಾಣುತ್ತಾರೆಂಬ ಭರವಸೆ ಇರಲಿಲ್ಲ. ಆದ್ದರಿಂದ ಅವರು ಶಿವಮೊಗ್ಗಕ್ಕೆ ವಾಪಾಸಾದರು. ಹನುಮಂತಯ್ಯ ಅವರು ದೆಹಲಿಯಿಂದ ಬಂದವರೆ ವೈರ್‌ಲೆಸ್ ಮೂಲಕ ಕಡಿದಾಳರಿಗೆ ತುರ್ತಾಗಿ ಬೆಂಗಳೂರಿಗೆ ಬರಲು ಹೇಳಿದರು. ಅಂತಹ ಕರೆ ಹೆಚ್.ಎಸ್.ರುದ್ರಪ್ಪನವರಿಗೂ ಬಂದಿತ್ತು. ಕಡಿದಾಳರು

ಬೆಂಗಳೂರಿಗೆ ಹೋಗಬೇಕೋ ಬೇಡವೋ ಎಂದು ಡೋಲಾಯಮಾನ ಸ್ಥಿತಿಯಲ್ಲಿದ್ದರು. ಆದರೆ ಸೋದರ ಅಳಿಯ ಎನ್.ಡಿ. ವೆಂಕಟೇಶ್ ಅವರು ಇನ್ನಿತರ ಹಿತೈಷಿಗಳು ಮುಖ್ಯಮಂತ್ರಿಯವರು ಕರೆದಾಗ ಉಪೇಕ್ಷೆ ಮಾಡಬಾರದೆಂದು ಕಿವಿಮಾತು ಹೇಳಿದ್ದರಿಂದ ಕಡಿದಾಳರು ನಿರ್ವಾಹವಿಲ್ಲದೆ ಹೆಚ್.ಎಸ್. ರುದ್ರಪ್ಪನವರು ವೆಂಕಟೇಶ್ ಅವರೊಂದಿಗೆ ಅವರ ಕಕ್ಷಿದಾರರೂ ಶ್ರೀಮಂತರೂ ಅದ ಗುಡ್ಡೆಕೆರೆ ವೆಂಕಪ್ಪ ಹೆಗಡೆ ಅವರು ಕಾರಿನಲ್ಲಿ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

ಕಡಿದಾಳರು ಹನುಮಂತಯ್ಯನವರನ್ನು ಭೇಟಿಯಾದಾಗ ಅಲ್ಲಿ ಒಕ್ಕಲಿಗರ ಇನ್ನಿತರ ನಾಯಕರುಗಳಾದ ಪಿ. ವೆಂಕಟಪ್ಪ, ಕೆ.ವಿ. ಶಂಕರೇಗೌಡರು, ಎಸ್.ಕರಿಯಪ್ಪನವರು, ಹುಚ್ಚ ಮಾಸ್ತಿಗೌಡರು ಉಪಸ್ಥಿತರಿದ್ದರು. ಹನುಮಂತಯ್ಯನವರು ಅವರನ್ನೆಲ್ಲ ಉದ್ದೇಶಿಸಿ "ಸಚಿವ ಸಂಪುಟಕ್ಕೆ ಒಕ್ಕಲಿಗರೊಬ್ಬರನ್ನು ಸೇರಿಸಿಕೊಳ್ಳಲು ಬಯಸಿದ್ದೇನೆ. ನೀವುಗಳು ಮಾತಾಡಿಕೊಂಡು ಯಾರಾದರೊಬ್ಬರ ಹೆಸರನ್ನ ಸೂಚಿಸಿರಿ ಎಂದರು. ತಕ್ಷಣವೆ ಕಡಿದಾಳರು "ಹನುಮಂತಯ್ಯನವರೇ ನಾನು ರಾಜಕಾರಣದಲ್ಲಿ ಕೈಸುಟ್ಟುಕೊಂಡಿದ್ದೇನೆ. ೧೯೪೭ ರಿಂದ ವಕೀಲ ವೃತ್ತಿಯನ್ನು ಶ್ರದ್ಧೆಯಾದ ನಡೆಸುತ್ತಿದ್ದೇನೆ. ದೇವರ ದಯೆಯಿಂದ ಚೆನ್ನಾಗಿ ನಡೆಯುತ್ತಿದೆ. ನನಗೆ ಮಂತ್ರಿ ಪದವಿ ಬೇಡ ಇವರಲ್ಲಿ ಯಾರನ್ನಾದರೂ ಆರಿಸಿಕೊಳ್ಳಿ" ಎಂದು ಹೇಳಿ ಹೊರಬಂದರು. ಅದರೆ ನಿಜಲಿಂಗಪ್ಪನವರು, ಹೆಚ್.ಸಿ. ದಾಸಪ್ಪನವರು ಮಂತ್ರಿ ಪದವಿಯನ್ನು ಒಪ್ಪಿಕೊಳ್ಳಬೇಕೆಂದು ಕಡಿದಾಳರಮೇಲೆ ಒತ್ತಡ ಹೇರಿದರು. ಹನುಮಂತಯ್ಯ ಅವರಿಗೆ ಹಾಗೆ ಸೂಚಿಸಿರುವುದಾಗಿಯು ತಿಳಿಸಿದರು. ಕಡಿದಾಳರು ತನ್ನ ಕಷ್ಟವನ್ನು ದಾಸಪ್ಪನವರೊಂದಿಗೆ ಹಂಚಿಕೊಂಡರು. ದಾಸಪ್ಪನವರು ತಮ್ಮ ಪಟ್ಟು ಬಿಡಲಿಲ್ಲ. ವಕೀಲ ವೃತ್ತಿ ಹಾಳಾಗುವುದೆಂದು ಸಚಿವ ಸ್ಥಾನವನ್ನು ಬಿಡಕೂಡದೆಂದು ಸಲಹೆ ಮಾಡಿದರು. ದಾಸಪ್ಪನವರು ಕಡಿದಾಳರ ದೂರದ ಬಂಧು, ಮೇಲಾಗಿ ವಿದ್ಯಾರ್ಥಿ ದೆಸೆಯಿಂದ ಕಡಿದಾಳರ ಮೇಲೆ ಅವರಿಗೆ ಬಹಳ ವಾತ್ಸಲ್ಯವಿತ್ತು. ಇಬ್ಬರು ಮುಖಂಡರ ಸಲಹೆಯನ್ನು ನಿರಾಕರಿಸುವುದಾಗಲಿ ಒಪ್ಪಿಕೊಳ್ಳುವುದಾಗಲಿ ಕಡಿದಾಳರಿಗೆ ಕಷ್ಟವಾಯಿತು. ಅಲ್ಲದೆ ಹನುಮಂತಯ್ಯ ಅವರು ತಮ್ಮ ಸಹೋದ್ಯೋಗಿಗಳನ್ನು ಗೌರವದಿಂದ ಕಾಣುತ್ತಾರೆಂಬ ನಂಬಿಕೆ ಅವರಿಗಿರಲಿಲ್ಲ. ಆ ಕಾರಣಕ್ಕೂ ಸಚಿವರಾಗಲು ಅವರಿಗೆ ಇಷ್ಟವಿರಲಿಲ್ಲ. ಹನುಮಂತಯ್ಯ ಅವರು ಕಡಿದಾಳರನ್ನು ಕರೆಸಿಕೊಂಡು ಯೋಚನೆ ಮಾಡುವಷ್ಟು ಕಾಲಾವಕಾಶವಿಲ್ಲವೆಂದು ಒತ್ತಾಯ ಮಾಡಿ ಕಡಿದಾಳರನ್ನು ಒಪ್ಪಿಸಿದರು. ಇಂದಿನ ದಿನಗಳಲ್ಲಿ ತಮ್ಮನ್ನು ಮಂತ್ರಿ ಮಾಡಿ ಎಂದು ಶಾಸಕರು ಅವರಿವರ ಕೈಕಾಲು ಹಿಡಿಯುವುದು ಪ್ರಭಾವ ಬೀರುವುದು ನೋಡಿದರೆ ಕಡಿದಾಳರ ವ್ಯಕ್ತಿತ್ವ ಎಂತಹುದು

ಎಂದು ತಿಳಿಯುತ್ತದೆ. ಕಡಿದಾಳರೊಂದಿಗೆ ಸಿದ್ದಲಿಂಗಯ್ಯ, ಎ.ಜಿ. ರಾಮಚಂದ್ರರಾವ್, ಸಿದ್ದವೀರಪ್ಪ, ಟಿ. ಚೆನ್ನಯ್ಯ ಅವರನ್ನು ಸಂಪುಟಕ್ಕೆ ಸಚಿವರಾಗಿ ಸೇರಿಸಿಕೊಳ್ಳಲಾಯಿತು. ಹೆಚ್.ಎಸ್. ರುದ್ರಪ್ಪನವರನ್ನು ತೆಗೆದುಕೊಳ್ಳಲಿಲ್ಲ. ಸಿದ್ಧಯ್ಯನವರಿಗೆ ಮಂತ್ರಿಯಾಗುವ ಹಂಬಲವಿತ್ತು. ಸಿದ್ಧಯ್ಯನವರು ಕೆ.ಸಿ. ರೆಡ್ಡಿ ಸಂಪುಟದಲ್ಲಿದ್ದುದರಿಂದ ಹನುಮಂತಯ್ಯನವರು ಕೆ.ಸಿ. ರೆಡ್ಡಿ ಸಂಪುಟದಲ್ಲಿದ್ದ ಯಾರನ್ನೂ ತೆಗೆದುಕೊಳ್ಳಲಿಲ್ಲ ಆದರೆ ಸಿದ್ಧಯ್ಯನವರನ್ನು ವಿಧಾನಸಭಾ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ೧೯೫೩ ರಲ್ಲಿ ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ನಂತರ ಡಾ॥ ನಾಗನಗೌಡರನ್ನು, ೧೯೫೫ ರಲ್ಲಿ ಹೆಚ್.ಎಂ. ಚೆನ್ನಬಸಪ್ಪ ಅವರನ್ನು ಸಚಿವ ಸಂಪುಟಕ್ಕೆ ಸೇರಿಸಿಕೊಳ್ಳಲಾಯಿತು. ಖಾತೆಗಳನ್ನು ಹಂಚುವಾಗ ಕಡಿದಾಳರಿಗೆ ಬಹುಮುಖ್ಯವಾದ ಮತ್ತು ದೊಡ್ಡ ಇಲಾಖೆಗಳಾದ ಕಂದಾಯ, ಲೋಕೋಪಯೋಗಿ, ನೀರಾವರಿ ಇಲಾಖೆಗಳನ್ನು ವಹಿಸಿದರು. ಜೊತೆಗೆ ನೌಕರರ ನೇಮಕ, ಮುಜರಾಯಿ ಇಲಾಖೆ, ಸ್ಟಾಂಪ್ ಮತ್ತು ರಿಜಿಸ್ಟ್ರೇಷನ್, ಲಂಚನಿರೋಧ ಇಲಾಖೆ, ಕ್ಷಾಮ ನಿವಾರಣೆ ಇವುಗಳನ್ನು ಕೂಡ ಕಡಿದಾಳರಿಗೆ ವಹಿಸಿದರು. ಈ ಇಲಾಖೆಗೆ ಸಂಬಂಧಪಟ್ಟ ಆಡಳಿತ ಸರ್ವ ನಿರ್ವಹಣೆ ಜೊತೆಗೆ ರೆವಿನ್ಯೂ ಮುಜರಾಯಿ, ಸ್ಟಾಂಪ್‌ರಿಜಿಸ್ಟ್ರೇಷನ್ ಇಲಾಖೆಗಳಿಗೆ ಸಂಬಂಧಪಟ್ಟ ತೀರ್ಮಾನವನ್ನು ಕೂಡ ಕಡಿದಾಳರು ಮಾಡಬೇಕಾಗಿತ್ತು. ಮಂತ್ರಿಯಾದ ಮೇಲೆ ಕಡಿದಾಳರು ಶಿವಮೊಗ್ಗೆಯ ವಕೀಲಿ ಕಚೇರಿಯನ್ನು ಸೋದರ ಅಳಿಯ ವೆಂಕಟೇಶ್ ಮತ್ತು ಇನ್ನೊಬ್ಬ ಕಿರಿಯ ವಕೀಲ ಕೆಂಚಪ್ಪ ಅವರಿಗೆ ವಹಿಸಿಕೊಟ್ಟು, ಹೆಂಡತಿ ಮಕ್ಕಳು ಮತ್ತು ತಮ್ಮನ ಮಗ ಸುರೇಂದ್ರ ಅವರನ್ನು ಕರೆದುಕೊಂಡು ಬೆಂಗಳೂರಿಗೆ ಹೋದರು. ಅವರು ವಕೀಲರಾಗಿದ್ದಾಗ ಬಡಕಕ್ಷಿದಾರರಿಂದ ಕೇಸು ನಡೆಸುವುದಕ್ಕೆ ಶುಲ್ಕ ತೆಗೆದುಕೊಳ್ಳುತ್ತಿರಲಿಲ್ಲ. ಹಣ ಕೊಡಬಂದವರಿಗೆ ಬೈದು ಕಳುಹಿಸುತ್ತಿದ್ದರು. ಆ ಪರಂಪರೆಯನ್ನು ಸೋದರಳಿಯ ವೆಂಕಟೇಶ್ ಅವರು ಮುಂದುವರೆಸಿಕೊಂಡು ಹೋದರು.

## ಯೋಜನೆಗಳ ಅನುಷ್ಠಾನ

ಕಡಿದಾಳರು ತಮ್ಮ ಸುಪರ್ದಿನಲ್ಲಿ ಅನೇಕ ಖಾತೆಗಳನ್ನು ಹೊಂದಿರುವಾಗ್ಗೆ ಬಿಡುವಿಲ್ಲದ ಕೆಲಸದಲ್ಲಿ ತೊಡಗಿದರು. ನೀರಾವರಿ ಯೋಜನೆಗಳನ್ನು ಕಾರ್ಯಗತ ಮಾಡುವ ಸಲುವಾಗಿ ೧೯೫೪ರಲ್ಲಿ ರಾಮಸ್ವಾಮಿ ಅಯ್ಯಂಗಾರ್ ಎಂಬ ವಿಶೇಷ ಮುಖ್ಯ ಇಂಜಿನಿಯರನ್ನು ನೇಮಕ ಮಾಡಿದರು. ದೊಡ್ಡ ದೊಡ್ಡ ನೀರಾವರಿ ಜಲಾಶಯಗಳ ನಿರ್ಮಾಣ ಕಾರ್ಯದಲ್ಲಿ ತಾಂತ್ರಿಕ ಸಮಸ್ಯೆಗಳ ವಿಚಾರದಲ್ಲಿ ಇಲಾಖೆಗೆ ಬೇಕಾದ ಸಾಧನ ಸಾಮಗ್ರಿಗಳನ್ನು ಕೊಂಡುಕೊಳ್ಳುವ ಸಂದರ್ಭದಲ್ಲಿ ಹಾಗೂ

ಕಂಟ್ರಾಕ್ಟರುಗಳಿಂದ ಬಂದ ಟೆಂಡರುಗಳನ್ನು ಪರಿಶೀಲನೆ ಮಾಡುವಾಗ, ಸರ್ಕಾರಕ್ಕೆ ಸೂಕ್ತ ಸಲಹೆ ನೀಡಲು ನಿವೃತ್ತ ದಕ್ಷ ಇಂಜಿನಿಯರುಗಳನ್ನು ನೇಮಕ ಮಾಡಿದರು. ತಜ್ಞರ ಸಮಿತಿ ಕೊಡುವ ಅಭಿಪ್ರಾಯದ ಪ್ರಕಾರ ಸರ್ಕಾರ ನಡೆದುಕೊಳ್ಳುತ್ತಿತ್ತು. ಕಡಿದಾಳರು ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಮಂತ್ರಿಯಾಗಿ ನೇಮಕಗೊಂಡಾಗ ಭದ್ರ ಜಲಾಶಯದ ನಿರ್ಮಾಣದ ಕಾರ್ಯ ಇನ್ನೂ ಪ್ರಾರಂಭದ ಹಂತದಲ್ಲಿತ್ತು. ಶಿವಮೊಗ್ಗೆಯ ಬಳಿ ನಿರ್ಮಾಣವಾಗುತ್ತಿದ್ದ ತುಂಗಾ ಅಣೆಕಟ್ಟಿನ ನಿರ್ಮಾಣದ ಕಾರ್ಯ ಹೆಚ್ಚೂ ಕಡಿಮೆ ಮುಗಿದಿತ್ತು. ಇವರು ಮಂತ್ರಿಯಾದ ನಂತರ ಈ ಎರಡೂ ಜಲಾಶಯದ ನಿರ್ಮಾಣದ ಕಾರ್ಯ ತ್ವರಿತಗೊಳಿಸಲು ಕ್ರಮಕೈಗೊಂಡರು. ಪಂಚ ವಾರ್ಷಿಕ ಯೋಜನೆಗೆ ಅನುಗುಣವಾಗಿ ಹಲವು ಹೊಸ ಸಣ್ಣ ಮತ್ತು ಮಧ್ಯಮ ದರ್ಜೆಯ ಜಲಾಶಯಗಳನ್ನು ನಿರ್ಮಿಸುವ ಕಾರ್ಯಗಳನ್ನು ಕೈಗೊಂಡರು. ಅಲ್ಲದೆ ಸಣ್ಣ ಮತ್ತು ದೊಡ್ಡ ಸೇತುವೆಗಳ ನಿರ್ಮಾಣದ ಕಾರ್ಯಗಳನ್ನು ಕೈಗೊಂಡರು ಪಂಚವಾರ್ಷಿಕ ಯೋಜನೆಗೆ ಅನುಗುಣವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ರಸ್ತೆಗಳನ್ನು ಸೇತುವೆಗಳನ್ನು ನಿರ್ಮಿಸಲು ಕ್ರಮ ತೆಗೆದುಕೊಂಡರು.

## ವಿಧಾನಸೌಧ ನಿರ್ಮಾಣ

ದೇಶ ಸ್ವತಂತ್ರವಾಗುವ ಮುಂಚೆ ಪ್ರಜಾಪ್ರಭುತ್ವ ಸಭೆ ಮೈಸೂರಿನಲ್ಲಿ ನಡೆಯುತ್ತಿತ್ತು. ನ್ಯಾಯ ವಿಧಾಯಕ ಸಭೆಯ ಅಧಿವೇಶನ ಬೆಂಗಳೂರಿನ ಅಠಾರ ಕಛೇರಿಯಲ್ಲಿ ಜರುಗುತ್ತಿತ್ತು. ದೇಶ ಸ್ವತಂತ್ರವಾದ ಮೇಲೆ ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳಿಗೆ ಪ್ರತ್ಯೇಕ ಕಛೇರಿ ಕಟ್ಟಬೇಕೆಂದು ಕೆ.ಸಿ. ರೆಡ್ಡಿ ಸರ್ಕಾರ ಪ್ರತ್ಯೇಕ ಕಟ್ಟಡಕ್ಕೆ ಕ್ರಮಕೈಗೊಂಡಿತು. ಅ ತೀರ್ಮಾನಕ್ಕನುಗುಣವಾಗಿ ಈಗಿನ ವಿಧಾನ ಸೌಧದ ಕಟ್ಟಡಕ್ಕೆ ೧೩-೦೭-೧೯೫೧ ರಂದು ಪ್ರಧಾನಿ ನೆಹರೂರವರು ಕಟ್ಟದ ನಿರ್ಮಾಣಕ್ಕೆ ಶಂಕು ಸ್ಥಾಪನೆ ಮಾಡಿದರು. ೧೯೫೨ನೇ ಇಸವಿಯಲ್ಲಿ ನಡೆದ ಚುನಾವಣೆಯಿಂದಾಗಿ ರೆಡ್ಡಿ ಸರ್ಕಾರದ ಬದಲಿಗೆ ಕೆಂಗಲ್ ಹನುಮಂತಯ್ಯನವರ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಶಾಸನಸಭೆಯ ಉಭಯ ಸದನಗಳನ್ನು ವಿವಿಧ ಇಲಾಖೆಗಳ ಸಚಿವಾಲಯಗಳೂ ಒಂದೇ ಕಟ್ಟಡದಲ್ಲಿರುವುದು ಸೂಕ್ತವೆಂದು ಭಾವಿಸಿ ಭವ್ಯ ಕಟ್ಟಡದ ನಿರ್ಮಾಣಕ್ಕೆ ಸಿದ್ದತೆ ನಡೆಯಿತು. ಕಟ್ಟಡದ ವೆಚ್ಚ ಐವತ್ತು ಲಕ್ಷವೆಂದು ಅಂದಾಜು ಮಾಡಲಾಗಿತ್ತು. ಕಂಟ್ರಾಕ್ಟರಿಗೆ ಕಟ್ಟಡ ಕಟ್ಟಲು ವಹಿಸದೆ ಸರ್ಕಾರವೆ ಲೋಕೋಪಯೋಗಿ ಇಲಾಖೆಯ ಸಹಾಯದಿಂದ ಕಟ್ಟುವುದೆಂದು ತೀರ್ಮಾನಿಸಿ, ಮೇಲುಉಸ್ತುವಾರಿ ನೋಡಲು ಎಕ್ಸಿಕ್ಯುಟಿವ್ ಇಂಜಿನಿಯರೊಬ್ಬರನ್ನು ನೇಮಿಸಲಾಯಿತು. ಕಟ್ಟಡದ ವಿನ್ಯಾಸಕಾರ ಶಿಲ್ಪಿ ಮಾಣಿಕ್ಯಂ ಸರ್ಕಾರಕ್ಕೆ ಸಲಹೆ ನೀಡುತ್ತಿದ್ದರು, ಆದರೆ ಹನುಮಂತಯ್ಯನವರು ಅಂತಿಮದಲ್ಲಿ

ಕಟ್ಟಡದ ವಿನ್ಯಾಸವನ್ನು ಗೊತ್ತು ಮಾಡಿದ್ದರೂ, ಅವರು ರಾಷ್ಟ್ರದ ಕೆಲವುಕಡೆ ಪ್ರವಾಸ ಮಾಡಿ ಪ್ರಸಿದ್ಧ ಕಟ್ಟಡಗಳನ್ನು ನೋಡಿಬಂದು ತಮಗೆ ಮೆಚ್ಚುಗೆಯಾದ ವಿನ್ಯಾಸವನ್ನು ವಿಧಾನಸೌಧದ ನಿರ್ಮಾಣಕ್ಕೆ ಅಳವಡಿಸಬೇಕೆಂದು ವಿಶೇಷ ಇಂಜಿನಿಯರಿಗೂ, ವಾಸ್ತು ಶಿಲ್ಪಿಗೂ ಆದೇಶ ನೀಡುತ್ತಿದ್ದರು. ಕಡಿದಾಳರು ಲೋಕೋಪಯೋಗಿ ಸಚಿವರಾಗಿದ್ದರೂ ಹನುಮಂತಯ್ಯ ಅವರೇ ವಿಧಾನಸೌಧದ ನಿರ್ಮಾಣ ಕಾರ್ಯದಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದರು. ಅವರು ಆಗಾಗ ಹೊಸ ಆದೇಶವನ್ನು ಕೊಡುತ್ತಿದ್ದುದರಿಂದ ಕಟ್ಟಡದ ವೆಚ್ಚ ಒಂದು ಕೋಟಿಗೂ ಮೀರುವಂತಿತ್ತು. ಈ ಕುರಿತು ಕಡಿದಾಳರೊಂದಿಗೆ ಕೇಂದ್ರ ಸಚಿವರಾದ ವಿ.ಟಿ.ಕೃಷ್ಣಮಾಚಾರಿ, ಪ್ರಧಾನಿ ನೆಹರು, ಕಾಂಗ್ರೆಸ್ ಅಧ್ಯಕ್ಷದೇಬರ್ ಅವರು ಆಕ್ಷೇಪವೆತ್ತಿದರು. ಹನುಮಂತಯ್ಯನವರು ಕಡಿದಾಳರ ಮಾತುಕೇಳುತ್ತಿರಲಿಲ್ಲ. ಅಷ್ಟೇಕೆ? ಸ್ವಾತಂತ್ರ ಹೋರಾಟಗಾರರೂ ವಯಸ್ಸಿನಲ್ಲಿ ಹಿರಿಯರೂ, ಕೇಂದ್ರ ಸಚಿವರೂ ಆದ ಅರ್ಥಸಚಿವ ದೇಶಮುಖ್ ಅವರು, ಕಾಂಗ್ರೆಸ್ ಹಿರಿಯ ಮುಖಂಡರುಗಳು, ಸ್ವತಃ ಪ್ರಧಾನ ನೆಹರೂ ಅವರು ಹನುಮಂತಯ್ಯನವರ ಮುಂಗೋಪದಿಂದ ಅಸಮಾಧಾನಗೊಂಡಿದ್ದರು. ದೇಶಮುಖ್ ಅವರು ಬೆಂಗಳೂರಿಗೆ ಬಂದರೆ ಕಡಿದಾಳರ ಮನೆಗೆ ಹೋಗುತ್ತಿದ್ದರೆ ವಿನಃ ಹನುಮಂತಯ್ಯನವರ ಮನೆಗೆ ಹೋಗುತ್ತಿರಲಿಲ್ಲ. ರೂಪಾಯಿ ಐವತ್ತು ಲಕ್ಷಕ್ಕೆ ಸುಂದರ ಕಟ್ಟಡ ನಿರ್ಮಿಸುವುದು ಕಡಿದಾಳರ ಗುರಿಯಾದರೆ ಹನುಮಂತಯ್ಯನವರದ್ದು ಕರ್ನಾಟಕ ಸಂಸ್ಕೃತಿ ಹಾಗೂ ದಕ್ಷಿಣ ಭಾರತದ ವಾಸ್ತುಶಿಲ್ಪ ಕಲೆಯ ಹಿರಿಮೆಯನ್ನು ಪ್ರತಿಬಿಂಬಿಸುವ ಜಗತ್ ಪ್ರಸಿದ್ಧವಾದ ಭವ್ಯವಾದ ಸೌಧವನ್ನು ನಿರ್ಮಿಸುವುದು ಗುರಿಯಾಗಿತ್ತು. ಕಟ್ಟಡಕ್ಕೆ ಲೋಕೋಪಯೋಗಿ ಸಚಿವನಾಗಿ ದುಂದುವೆಚ್ಚ ಹಾಗೂ ಕರ್ತವ್ಯಲೋಪ ಮಾಡುತ್ತಿದ್ದಾರೆಂದು ಶಾಸಕರುಗಳು ಆಪಾದನೆ ಮಾಡುತ್ತಿದ್ದರು. ೧೯೫೪ ನೆ ಇಸವಿ ಅಖ್ಯೆರಿಗೆ ಕಟ್ಟಡಕ್ಕೆ ಎಪ್ಪತ್ತೈದು ಲಕ್ಷಕ್ಕೆ ಮೀರಿತು. ಆಗ ಕಡಿದಾಳರು ಹನುಮಂತಯ್ಯ ಅವರಿಗೆ ರಾಜ್ಯದ ಹಣಕಾಸಿನ ಶಕ್ತಿಗೆ ಮೀರಿದ ಪ್ರಮಾಣದಲ್ಲಿ ಕಟ್ಟಡವನ್ನು ಕಟ್ಟುವುದು ತಪ್ಪಾಗುತ್ತದೆಂದು ನಮ್ರತೆಯಿಂದ ಹೇಳಿದರು. ಅದಕುತ್ತರವಾಗಿ ಹನುಮಂತಯ್ಯನವರು ಎಂಭತ್ತು ಲಕ್ಷಕ್ಕೆ ಮೀರದಂತೆ ಕಟ್ಟೋಣವೆಂದರು. ಪುನರ್‌ವಿಮರ್ಶಿತ ಅಂದಾಜು ಪಟ್ಟಿಯ ಪ್ರಕಾರ ಒಂದೂವರೆ ಕೋಟಿ ಖರ್ಚಾಗುವುದಿತ್ತು. ಈ ಕಾರಣಕ್ಕಾಗಿ ಕಡಿದಾಳರು ದಿನಾಂಕ:೨೩-೦೪-೧೯೫೫ ರಂದು ಹನುಮಂತಯ್ಯನವರಿಗೆ ಪತ್ರ ಬರೆದು, ತಾನು ಲೋಕೋಪಯೋಗಿ ಸಚಿವನಾದರೂ ವಿಧಾನಸೌಧದ ಕಟ್ಟಡದ ನಿರ್ಮಾಣದಲ್ಲಿ ತನ್ನ ಮಾತು ನಡೆಯುವುದಿಲ್ಲವಾದ್ದರಿಂದ ಮುಖ್ಯಮಂತ್ರಿಗಳ ಖಾತೆಗೆ ಕಟ್ಟಡ ನಿರ್ಮಾಣದ ಹೊಣೆಯನ್ನು ಸೇರಿಸಿಕೊಳ್ಳಬೇಕೆಂದು ಪತ್ರ ಬರೆದು, ಕೈ ತೊಳೆದುಕೊಂಡರು.

ಹನುಮಂತಯ್ಯನವರು ವಿಧಾನಸೌಧ ನಿರ್ಮಾಣದ ಕಾರ್ಯವನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡರು. ವಿಧಾನಸೌಧ ನಿರ್ಮಾಣಕ್ಕೆ ಒಂದು ಕೋಟಿ ಮೂವತ್ತು ಲಕ್ಷ ಖರ್ಚಾದಾಗ ಕೇಳಿ ಬಂದ ಟೀಕೆ ವಿಕಾಸ ಸೌಧಕ್ಕೆ ನೂರುಕೋಟಿ ಖರ್ಚಾದಾಗ ಕೇಳಿಬರಲಿಲ್ಲ.

## ನೊಂದವರಿಗೆ ಸಹಾಯ ಹಸ್ತ

ಕಡಿದಾಳರು ಮಂತ್ರಿಯಾಗಿದ್ದಾಗ ತೀರ್ಥಹಳ್ಳಿ ತಾಲ್ಲೂಕಿನ ನೆಲ್ಲಿಸರದ ನಿವೃತ್ತ ಶಾನುಭೋಗರಾದ ವೆಂಕಟರಾಯರು ೧೯೫೨ರಲ್ಲಿ ಕಡಿದಾಳರನ್ನು ನೋಡಲು ಬಂದರು. ಚುನಾವಣಾ ಸಮಯದಲ್ಲಿ ಕಡಿದಾಳರು ಬ್ರಾಹ್ಮಣರ ವಿರೋಧಿ ಎಂದು ಅವರು ಅಪಪ್ರಚಾರ ಮಾಡಿದ್ದರು. ಅವರನ್ನು ನೋಡಿದ ಕೂಡಲೆ ಕಡಿದಾಳರಿಗೆ ಅವರ ಮೇಲೆ ಅಸಾಧ್ಯ ಕೋಪ ಬಂದಿತು. ಆದರೆ ತಾನು ಈಗ ಮಂತ್ರಿ. ತನಗೆ ಓಟು ಕೊಟ್ಟವರಿಗೂ ಕೊಡದೆ ಇದ್ದವರಿಗೂ ಮಂತ್ರಿ. ಮಂತ್ರಿಯಾದವನು ವೈಯಕ್ತಿಕ ದ್ವೇಷ ಅಸೂಯೆ ಇಟ್ಟುಕೊಳ್ಳಬಾರದೆಂದು ತಾಳ್ಮೆ ತೆಗೆದುಕೊಂಡು ಅವರು ಬಂದದ್ದೇಕೆ ಎಂದು ಕೇಳಿದರು. ವೆಂಕಟರಾಯರು ತಮ್ಮ ಮಗನು ಮೈಸೂರಿನ ಆಯುರ್ವೇದ ಕಾಲೇಜಿಗೆ ಪ್ರವೇಶಕೋರಿ ಅರ್ಜಿ ಹಾಕಿದ್ದಾನೆಂದೂ, ತಾವು ಒಂದುಮಾತು ಕಾಲೇಜಿನ ಪ್ರಾಚಾರ್ಯರಿಗೆ ಹೇಳಬೇಕೆಂದೂ ಅತಿ ವಿನಯದಿಂದ ಕೇಳಿಕೊಂಡರು. ಕಡಿದಾಳರು ಹಳೆಯದನ್ನು ಮರೆತು ರಾಯರ ಎದುರಿಗೆ ಮೈಸೂರು ಕಾಲೇಜಿನ ಪ್ರಾಚಾರ್ಯರಿಗೆ ಫೋನ್‌ಮಾಡಿ ಸೀಟು ಕೊಡಿಸುವ ವ್ಯವಸ್ಥೆ ಮಾಡಿದರು. ಶಿವಮೊಗ್ಗ ಜಿಲ್ಲೆಯ ಶತ್ರುಗಳಿಗೂ ಮಿತ್ರರಾಗಿ, ಅನಾಮಿಕ ವ್ಯಕ್ತಿಗಳಿಗೆ ಸರ್ಕಾರಿ ಕೆಲಸ ಕೊಡಿಸಿರುವುದನ್ನು, ವರ್ಗಾವಣೆ ಮಾಡಿಸಿಕೊಟ್ಟಿರುವುದನ್ನು ಸ್ವತಃ ಈ ಲೇಖಕನೆ ಕಣ್ಣಾರೆ ಕಂಡಿದ್ದಾನೆ. ಬಹಳ ಜನರು ಲಕ್ಷಾಧಿಪತಿಗಳಾಗಿದ್ದಾರೆ. ಬಹಳಮಂದಿ ಸರ್ಕಾರದ ಹಿರಿಯ ಅಧಿಕಾರಿಗಳಾಗಿ ನಿವೃತ್ತರಾಗಿರುತ್ತಾರೆ. ಈ ಕುರಿತು ಕಡಿದಾಳರು ಬಾಳಿನ ಮುಸ್ಸಂಜೆಯಲ್ಲಿದ್ದಾಗ ಲೇಖಕನು ತಾವು ಬಹಳ ಜನಕ್ಕೆ ಕೆಲಸ ಕೊಡಿಸಿದಿರಿ. ಬಹಳ ಜನ ಸರ್ಕಾರದ ಹಿರಿಯ ಅಧಿಕಾರಿಗಳಾಗಿದ್ದಾರೆ. ಅವರಿಗೆಲ್ಲ ಕೃತಜ್ಞತೆ ಇದೆಯೋ ಈಗ ಅವರು ಸ್ಮರಿಸಿಕೊಳ್ಳುತ್ತಾರಾ? ನಿಮ್ಮನ್ನು ಅವರು ಬಂದು ನೋಡುತ್ತಾರಾ? ಎಂದು ಕೇಳಿದೆ. ಕಡಿದಾಳರು ನಕ್ಕು "ಕೆಲವರು ಬರುತ್ತಾರೆ. ಕೆಲವರು ಬರಲ್ಲ. ಅವರಿಂದ ಪ್ರತಿಫಲಾಪೇಕ್ಷೆ ನಾನು ನಿರೀಕ್ಷಿಸಬಾರದು. ನಮ್ಮ ಜನಗಳೇ ಹಾಗೆ ಏನು ಮಾಡುತ್ತೀಯಾ ಹೇಳು" ಎಂದರು. ಕಡಿದಾಳರು ಅಧಿಕಾರದಲ್ಲಿದ್ದಾಗ ತಮ್ಮಮನೆ ಗೇಟಿನ ಕಡೆಗೆ ಯಾರು ಬರುತ್ತಿದ್ದಾರೆ ಎಂದು ನೋಡಲು, ಬಂದವರು ತನಗೆ

ಕಟ್ಟಡದ ವಿನ್ಯಾಸವನ್ನು ಗೊತ್ತು ಮಾಡಿದ್ದರೂ, ಅವರು ರಾಷ್ಟ್ರದ ಕೆಲವುಕಡೆ ಪ್ರವಾಸ ಮಾಡಿ ಪ್ರಸಿದ್ಧ ಕಟ್ಟಡಗಳನ್ನು ನೋಡಿಬಂದು ತಮಗೆ ಮೆಚ್ಚುಗೆಯಾದ ವಿನ್ಯಾಸವನ್ನು ವಿಧಾನಸೌಧದ ನಿರ್ಮಾಣಕ್ಕೆ ಅಳವಡಿಸಬೇಕೆಂದು ವಿಶೇಷ ಇಂಜಿನಿಯರಿಗೂ, ವಾಸ್ತು ಶಿಲ್ಪಿಗೂ ಆದೇಶ ನೀಡುತ್ತಿದ್ದರು. ಕಡಿದಾಳರು ಲೋಕೋಪಯೋಗಿ ಸಚಿವರಾಗಿದ್ದರೂ ಹನುಮಂತಯ್ಯ ಅವರೇ ವಿಧಾನಸೌಧದ ನಿರ್ಮಾಣ ಕಾರ್ಯದಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದರು. ಅವರು ಆಗಾಗ ಹೊಸ ಆದೇಶವನ್ನು ಕೊಡುತ್ತಿದ್ದುದರಿಂದ ಕಟ್ಟಡದ ವೆಚ್ಚ ಒಂದು ಕೋಟಿಗೂ ಮೀರುವಂತಿತ್ತು. ಈ ಕುರಿತು ಕಡಿದಾಳರೊಂದಿಗೆ ಕೇಂದ್ರ ಸಚಿವರಾದ ವಿ.ಟಿ.ಕೃಷ್ಣಮಾಚಾರಿ, ಪ್ರಧಾನಿ ನೆಹರು, ಕಾಂಗ್ರೆಸ್ ಅಧ್ಯಕ್ಷದೇಬರ್ ಅವರು ಆಕ್ಷೇಪವೆತ್ತಿದರು. ಹನುಮಂತಯ್ಯನವರು ಕಡಿದಾಳರ ಮಾತುಕೇಳುತ್ತಿರಲಿಲ್ಲ. ಅಷ್ಟೇಕೆ? ಸ್ವಾತಂತ್ರ ಹೋರಾಟಗಾರರೂ ವಯಸ್ಸಿನಲ್ಲಿ ಹಿರಿಯರೂ, ಕೇಂದ್ರ ಸಚಿವರೂ ಆದ ಅರ್ಥಸಚಿವ ದೇಶಮುಖ್ ಅವರು, ಕಾಂಗ್ರೆಸ್ ಹಿರಿಯ ಮುಖಂಡರುಗಳು, ಸ್ವತಃ ಪ್ರಧಾನ ನೆಹರೂ ಅವರು ಹನುಮಂತಯ್ಯನವರ ಮುಂಗೋಪದಿಂದ ಅಸಮಾಧಾನಗೊಂಡಿದ್ದರು. ದೇಶಮುಖ್ ಅವರು ಬೆಂಗಳೂರಿಗೆ ಬಂದರೆ ಕಡಿದಾಳರ ಮನೆಗೆ ಹೋಗುತ್ತಿದ್ದರೆ ವಿನಃ ಹನುಮಂತಯ್ಯನವರ ಮನೆಗೆ ಹೋಗುತ್ತಿರಲಿಲ್ಲ. ರೂಪಾಯಿ ಐವತ್ತು ಲಕ್ಷಕ್ಕೆ ಸುಂದರ ಕಟ್ಟಡ ನಿರ್ಮಿಸುವುದು ಕಡಿದಾಳರ ಗುರಿಯಾದರೆ ಹನುಮಂತಯ್ಯನವರದ್ದು ಕರ್ನಾಟಕ ಸಂಸ್ಕೃತಿ ಹಾಗೂ ದಕ್ಷಿಣ ಭಾರತದ ವಾಸ್ತುಶಿಲ್ಪ ಕಲೆಯ ಹಿರಿಮೆಯನ್ನು ಪ್ರತಿಬಿಂಬಿಸುವ ಜಗತ್ ಪ್ರಸಿದ್ಧವಾದ ಭವ್ಯವಾದ ಸೌಧವನ್ನು ನಿರ್ಮಿಸುವುದು ಗುರಿಯಾಗಿತ್ತು. ಕಟ್ಟಡಕ್ಕೆ ಲೋಕೋಪಯೋಗಿ ಸಚಿವನಾಗಿ ದುಂದುವೆಚ್ಚ ಹಾಗೂ ಕರ್ತವ್ಯಲೋಪ ಮಾಡುತ್ತಿದ್ದಾರೆಂದು ಶಾಸಕರುಗಳು ಆಪಾದನೆ ಮಾಡುತ್ತಿದ್ದರು. ೧೯೫೪ ನೆ ಇಸವಿ ಅಖೈರಿಗೆ ಕಟ್ಟಡಕ್ಕೆ ಎಪ್ಪತ್ತೈದು ಲಕ್ಷಕ್ಕೆ ಮೀರಿತು. ಆಗ ಕಡಿದಾಳರು ಹನುಮಂತಯ್ಯ ಅವರಿಗೆ ರಾಜ್ಯದ ಹಣಕಾಸಿನ ಶಕ್ತಿಗೆ ಮೀರಿದ ಪ್ರಮಾಣದಲ್ಲಿ ಕಟ್ಟಡವನ್ನು ಕಟ್ಟುವುದು ತಪ್ಪಾಗುತ್ತದೆಂದು ನಮ್ರತೆಯಿಂದ ಹೇಳಿದರು. ಅದಕುತ್ತರವಾಗಿ ಹನುಮಂತಯ್ಯನವರು ಎಂಭತ್ತು ಲಕ್ಷಕ್ಕೆ ಮೀರದಂತೆ ಕಟ್ಟೋಣವೆಂದರು. ಪುನರ್‌ವಿಮರ್ಶಿತ ಅಂದಾಜು ಪಟ್ಟಿಯು ಪ್ರಕಾರ ಒಂದೂವರೆ ಕೋಟಿ ಖರ್ಚಾಗುವುದಿತ್ತು. ಈ ಕಾರಣಕ್ಕಾಗಿ ಕಡಿದಾಳರು ದಿನಾಂಕ:೨೩-೦೪-೧೯೫೫ ರಂದು ಹನುಮಂತಯ್ಯನವರಿಗೆ ಪತ್ರ ಬರೆದು, ತಾನು ಲೋಕೋಪಯೋಗಿ ಸಚಿವನಾದರೂ ವಿಧಾನಸೌಧದ ಕಟ್ಟಡದ ನಿರ್ಮಾಣದಲ್ಲಿ ತನ್ನ ಮಾತು ನಡೆಯುವುದಿಲ್ಲವಾದ್ದರಿಂದ ಮುಖ್ಯಮಂತ್ರಿಗಳ ಖಾತೆಗೆ ಕಟ್ಟಡ ನಿರ್ಮಾಣದ ಹೊಣೆಯನ್ನು ಸೇರಿಸಿಕೊಳ್ಳಬೇಕೆಂದು ಪತ್ರ ಬರೆದು, ಕೈ ತೊಳೆದುಕೊಂಡರು.

ಹನುಮಂತಯ್ಯನವರು ವಿಧಾನಸೌಧ ನಿರ್ಮಾಣದ ಕಾರ್ಯವನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡರು. ವಿಧಾನಸೌಧ ನಿರ್ಮಾಣಕ್ಕೆ ಒಂದು ಕೋಟಿ ಮೂವತ್ತು ಲಕ್ಷ ಖರ್ಚಾದಾಗ ಕೇಳಿ ಬಂದ ಟೀಕೆ ವಿಕಾಸ ಸೌಧಕ್ಕೆ ನೂರುಕೋಟಿ ಖರ್ಚಾದಾಗ ಕೇಳಿಬರಲಿಲ್ಲ.

## ನೊಂದವರಿಗೆ ಸಹಾಯ ಹಸ್ತ

ಕಡಿದಾಳರು ಮಂತ್ರಿಯಾಗಿದ್ದಾಗ ತೀರ್ಥಹಳ್ಳಿ ತಾಲ್ಲೂಕಿನ ನೆಲ್ಲಿಸರದ ನಿವೃತ್ತ ಶಾನುಭೋಗರಾದ ವೆಂಕಟರಾಯರು ೧೯೫೨ರಲ್ಲಿ ಕಡಿದಾಳರನ್ನು ನೋಡಲು ಬಂದರು. ಚುನಾವಣಾ ಸಮಯದಲ್ಲಿ ಕಡಿದಾಳರು ಬ್ರಾಹ್ಮಣರ ವಿರೋಧಿ ಎಂದು ಅವರು ಅಪಪ್ರಚಾರ ಮಾಡಿದ್ದರು. ಅವರನ್ನು ನೋಡಿದ ಕೂಡಲೆ ಕಡಿದಾಳರಿಗೆ ಅವರ ಮೇಲೆ ಅಸಾಧ್ಯ ಕೋಪ ಬಂದಿತು. ಆದರೆ ತಾನು ಈಗ ಮಂತ್ರಿ. ತನಗೆ ಓಟು ಕೊಟ್ಟವರಿಗೂ ಕೊಡದೆ ಇದ್ದವರಿಗೂ ಮಂತ್ರಿ. ಮಂತ್ರಿಯಾದವನು ವೈಯಕ್ತಿಕ ದ್ವೇಷ ಅಸೂಯೆ ಇಟ್ಟುಕೊಳ್ಳಬಾರದೆಂದು ತಾಳ್ಮೆ ತೆಗೆದುಕೊಂಡು ಅವರು ಬಂದದ್ದೇಕೆ ಎಂದು ಕೇಳಿದರು. ವೆಂಕಟರಾಯರು ತಮ್ಮ ಮಗನು ಮೈಸೂರಿನ ಆಯುರ್ವೇದ ಕಾಲೇಜಿಗೆ ಪ್ರವೇಶಕೋರಿ ಅರ್ಜಿ ಹಾಕಿದ್ದಾನೆಂದೂ, ತಾವು ಒಂದುಮಾತು ಕಾಲೇಜಿನ ಪ್ರಾಚಾರ್ಯರಿಗೆ ಹೇಳಬೇಕೆಂದೂ ಅತಿ ವಿನಯದಿಂದ ಕೇಳಿಕೊಂಡರು. ಕಡಿದಾಳರು ಹಳೆಯದನ್ನು ಮರೆತು ರಾಯರ ಎದುರಿಗೆ ಮೈಸೂರು ಕಾಲೇಜಿನ ಪ್ರಾಚಾರ್ಯರಿಗೆ ಫೋನ್‌ಮಾಡಿ ಸೀಟು ಕೊಡಿಸುವ ವ್ಯವಸ್ಥೆ ಮಾಡಿದರು. ಶಿವಮೊಗ್ಗ ಜಿಲ್ಲೆಯ ಶತ್ರುಗಳಿಗೂ ಮಿತ್ರರಾಗಿ, ಅನಾಮಿಕ ವ್ಯಕ್ತಿಗಳಿಗೆ ಸರ್ಕಾರಿ ಕೆಲಸ ಕೊಡಿಸಿರುವುದನ್ನು, ವರ್ಗಾವಣೆ ಮಾಡಿಸಿಕೊಟ್ಟಿರುವುದನ್ನು ಸ್ವತಃ ಈ ಲೇಖಕನೆ ಕಣ್ಣಾರೆ ಕಂಡಿದ್ದಾನೆ. ಬಹಳ ಜನರು ಲಕ್ಷಾಧಿಪತಿಗಳಾಗಿದ್ದಾರೆ. ಬಹಳಮಂದಿ ಸರ್ಕಾರದ ಹಿರಿಯ ಅಧಿಕಾರಿಗಳಾಗಿ ನಿವೃತ್ತರಾಗಿರುತ್ತಾರೆ. ಈ ಕುರಿತು ಕಡಿದಾಳರು ಬಾಳಿನ ಮುಸ್ಸಂಜೆಯಲ್ಲಿದ್ದಾಗ ಲೇಖಕನು ತಾವು ಬಹಳ ಜನಕ್ಕೆ ಕೆಲಸ ಕೊಡಿಸಿದಿರಿ. ಬಹಳ ಜನ ಸರ್ಕಾರದ ಹಿರಿಯ ಅಧಿಕಾರಿಗಳಾಗಿದ್ದಾರೆ. ಅವರಿಗೆಲ್ಲ ಕೃತಜ್ಞತೆ ಇದೆಯೋ ಈಗ ಅವರು ಸ್ಮರಿಸಿಕೊಳ್ಳುತ್ತಾರಾ? ನಿಮ್ಮನ್ನು ಅವರು ಬಂದು ನೋಡುತ್ತಾರಾ? ಎಂದು ಕೇಳಿದೆ. ಕಡಿದಾಳರು ನಕ್ಕು "ಕೆಲವರು ಬರುತ್ತಾರೆ. ಕೆಲವರು ಬರಲ್ಲ. ಅವರಿಂದ ಪ್ರತಿಫಲಾಪೇಕ್ಷೆ ನಾನು ನಿರೀಕ್ಷಿಸಬಾರದು. ನಮ್ಮ ಜನಗಳೇ ಹಾಗೆ ಏನು ಮಾಡುತ್ತೀಯಾ ಹೇಳು" ಎಂದರು. ಕಡಿದಾಳರು ಅಧಿಕಾರದಲ್ಲಿದ್ದಾಗ ತಮ್ಮಮನೆ ಗೇಟಿನ ಕಡೆಗೆ ಯಾರು ಬರುತ್ತಿದ್ದಾರೆ ಎಂದು ನೋಡಲು, ಬಂದವರು ತನಗೆ

ಕಾಣುವಂತೆ ಕುರ್ಚಿ ಹಾಕಿಕೊಂಡು ಕೂತಿರುತ್ತಿದ್ದರು. ಈಗಿನ ಮಂತ್ರಿಗಳು ಹಾಗಿದ್ದಾರೆಯೇ? ಓಟನ್ನು ಕೊಡುವಾಗ ಮಾತ್ರ ಜನಬೇಕು. ಓಟನ್ನು ಪಡೆದು ವಿಧಾನಸಭೆಗೆ ಹೋದಮೇಲೆ ಮತದಾರ ಬೇಡ. ಒಂದು ವೇಳೆ ಸಹಾಯ ಮಾಡುವುದಾದರೂ ಅವರ ಕೈಬಿಸಿ ಮಾಡಬೇಕು.

ದಿನಾಂಕ: ೧೪-೦೫-೧೯೫೪ರಂದು ವಿಧಾನಸಭಾಧ್ಯಕ್ಷರೂ, ಶಿವಮೊಗ್ಗ ಜಿಲ್ಲೆಯ ಮುಖಂಡರೂ ಆದ ಹೆಚ್. ಸಿದ್ಧಯ್ಯನವರು ನಿಧನರಾದರು. ಐದು ವರ್ಷಮಂತ್ರಿ ಎರಡು ವರ್ಷವಿಧಾನಸಭಾಧ್ಯಕ್ಷರಾಗಿದ್ದ ಅವರು ಸತ್ತಾಗ ನಿರ್ಗತಿಕರಾಗಿದ್ದರು. ಅವರ ಪತ್ನಿ ಮಕ್ಕಳ ಗೋಳನ್ನು ನೋಡಲಾಗದೆ ಕಡಿದಾಳರು, ಹನುಮಂತಯ್ಯನವರು ಸಿದ್ಧಯ್ಯನವರ ಹಿತೈಷಿಗಳೂ ಸೇರಿ ಮೂವತ್ತು ಸಾವಿರ ಹಣ ಸಂಗ್ರಹಸಿ ಅವರ ಪತ್ನಿ ವೀರಮ್ಮನವರಿಗೆ ಕೊಟ್ಟರು. ಅಲ್ಲದೆ ಕಡಿದಾಳರು ಅವರ ಮಗ ರಾಜಶೇಖರನಿಗೆ ಭದ್ರಾವತಿಯ ಹತ್ತಿರ ಹತ್ತು ಎಕರೆ ತರಿ ಭೂಮಿಯನ್ನು ಮಂಜೂರು ಮಾಡಿದರು. ಕೆ.ಟಿ.ಭಾಷ್ಯಂ ಅವರು ೧೯೫೬ ರಲ್ಲಿ ವಿಧಾನ ಪರಿಷತ್ತಿನ ಅಧ್ಯಕ್ಷರಾಗಿದ್ದಾಗಲೇ ನಿಧನರಾದರು. ಅವರಿಗೆ ಒಂದು ಮನೆ ಕೂಡ ಇರಲಿಲ್ಲ. ಬೆಂಗಳೂರಿನ ಸಮೀಪದಲ್ಲಿ ಅವರಿಗೆ ಒಂದೆರಡು ಎಕರೆ ಭೂಮಿ ಇದ್ದಿತು. ಅದನ್ನು ಅಪ್ಪ ಮಾಡಿದ ಸಾಲ ತೀರಿಸಲು ಮಾರಾಟ ಮಾಡಿದ್ದರು. ಅವರ ಮರಣಾನಂತರ ಅವರ ಹೆಂಡತಿ ಬಾಡಿಗೆ ಮನೆಯನ್ನು ಬಿಡಬೇಕಾಗಿ ಬಂದಿತು. ಅವರ ಕಷ್ಟವನ್ನು ನೋಡಲಾಗದೆ ಕಡಿದಾಳರು ಶೃಂಗೇರಿ ಸ್ವಾಮಿಗಳಿಗೆ ಹೇಳಿ ಕಡಿಮೆ ಬಾಡಿಗೆಗೆ ಒಂದು ಸಣ್ಣ ಮನೆಯನ್ನು ಕೊಡಿಸಿದರು. ಸ್ವಾತಂತ್ರ್ಯ ಹೋರಾಟಗಾರರಾದ ಮೈಸೂರಿನ ಎಂ.ಎನ್.ಜೋಯಿಸ್ ಅವರು ಬಹಳ ಕಷ್ಟದಲ್ಲಿದ್ದುದನ್ನು ನೋಡಿ ಅವರಿಗೆ ಇಪ್ಪತ್ತೈದು ಎಕರೆ ಜಮೀನು ಮಂಜೂರು ಮಾಡಿಸಿಕೊಡುವುದಾಗಿ ಹೇಳಿದರು. ಆದರೆ ಜೋಯಿಸರು ತಾವು ಸ್ವಾತಂತ್ರಕ್ಕಾಗಿ ಹೋರಾಟ ಮಾಡಿದ್ದು, ಆಸ್ತಿ ಮಾಡಿಕೊಳ್ಳುವುದಕ್ಕಲ್ಲ ಎಂದು ಕಡಿದಾಳರ ನೆರವನ್ನು ನಿರಾಕರಿಸಿದರು. ಆದರೆ ಕಡಿದಾಳರು ಬಹಳಮಂದಿ ಸ್ವಾತಂತ್ರ ಹೋರಾಟಗಾರರಿಗೆ ಜಮೀನು ದರಕಾಸ್ತು ಮಂಜೂರು ಮಾಡಿದ ನಿದರ್ಶನಗಳಿವೆ. ಮಾಜಿ ರಾಷ್ಟ್ರಪತಿ ವಿ.ವಿ. ಗಿರಿಯವರು ಲೋಕಸಭಾ ಸದಸ್ಯರಾಗಿದ್ದಾಗ ಕಡಿದಾಳರಿಗೆ ಪತ್ರ ಬರೆದು ತನಗೆ ಬೆಂಗಳೂರಿನಲ್ಲಿ ಎರಡು ಸೈಟುಕೊಡಿಸಬೇಕೆಂದು ಕೇಳಿಕೊಂಡಿದ್ದರು. ಅವರ ಕೋರಿಕೆಯ ಮೇರೆಗೆ ಸಚಿವ ಚೆನ್ನಯ್ಯನವರಿಗೆ ಹೇಳಿ ಜಯನಗರದಲ್ಲಿ ಎರಡು ಸೈಟುಗಳನ್ನು ಮಂಜೂರು ಮಾಡಿಸಿದ್ದರು. ಆದರೆ ಕಡಿದಾಳರಿಗೆ ಬೆಂಗಳೂರಿನಲ್ಲಿ ಸ್ವಂತ ಮನೆಯಾಗಲಿ ಸೈಟುಗಳಾಗಲಿ ಇರಲೇ ಇಲ್ಲ.

## ಕೆಂಗಲ್ ಹನುಮಂತಯ್ಯನವರ ಕೋಪ ಶಮನ

ಸ್ವಾತಂತ್ರ ಪೂರ್ವದಲ್ಲಿ ಬೆಂಗಳೂರು ನಗರ ಇಡೀ ಭಾರತದಲ್ಲಿ ಸುಂದರ ನಗರವೆಂದು ಹೆಸರು ಪಡೆದಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದನಂತರ ಮದ್ರಾಸ್ ರಾಜ್ಯದಿಂದ ಬೆಂಗಳೂರು ನಗರಕ್ಕೆ ಬಹುಸಂಖ್ಯೆಯಲ್ಲಿ ವಲಸೆ ಬರುತ್ತಿದ್ದರು. ಹೀಗೆ ವಲಸೆ ಬಂದವರು ನಗರದ ಸರ್ಕಾರಿ ಭೂಮಿಯನ್ನೊ ಅಥವಾ ಪುರಸಭೆಗೆ ಸಂಬಂಧಿಸಿದ ಭೂಮಿಯನ್ನೊ ಅಕ್ರಮವಾಗಿ ಕಾನೂನಿಗೆ ವಿರೋಧವಾಗಿ ಆಕ್ರಮಿಸಿಕೊಂಡು ಗುಡಿಸಲುಗಳನ್ನು ಕಟ್ಟಿ ನಗರದ ಮಧ್ಯೆ ಅಲ್ಲಲ್ಲಿ ಕೊಳೆಗೇರಿಗಳನ್ನು ನಿರ್ಮಾಣ ಮಾಡಿದ್ದರು. ಇದರಿಂದ ಬೆಂಗಳೂರು ನಗರದ ಸೌಂದರ್ಯಕ್ಕೆ ಧಕ್ಕೆ ಬಂದಿತ್ತು. ನಗರ ಪ್ರದಕ್ಷಿಣೆ ಮಾಡಿದ ಕಂದಾಯ ಸಚಿವ ಕಡಿದಾಳರ ಗಮನಕ್ಕೆ ಇದು ಬಂದಿತು. ಇದರಿಂದ ಕೋಪಗೊಂಡ ಅವರು ಮದ್ರಾಸಿನ ಅಂದಿನ ಮುಖ್ಯಮಂತ್ರಿ ರಾಜಾಜಿಯವರಿಗೆ ಪತ್ರ ಬರೆದು, ತಮಿಳರ ವಲಸೆಯಿಂದಾಗಿ ಬೆಂಗಳೂರು ನೈರ್ಮಲ್ಯ ಹಾಳಾಗುತ್ತಿದೆ ಎಂದು, ಆದ್ದರಿಂದ ಮದ್ರಾಸಿನಿಂದ ತಮಿಳರು ವಲಸೆ ಬರದಂತೆ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಪ್ರಾರ್ಥಿಸಿದರು. ರಾಜಾಜಿಯವರು ಕಡಿದಾಳರ ಪತ್ರಕ್ಕೆ ಉತ್ತರಿಸಲಿಲ್ಲ. ಆಮೇಲೆ ಕಡಿದಾಳರಿಗೆ ತಾನು ಹಾಗೆ ಪತ್ರ ಬರೆದದ್ದು ತಪ್ಪೆಂದು ತಿಳಿಯಿತು. ಭಾರತದ ಸಂವಿಧಾನದ ಪ್ರಕಾರ ಭಾರತದ ಪ್ರಜೆ ಈ ದೇಶದಲ್ಲಿ ಎಲ್ಲಿಯಾದರೂ ನೆಲೆಸಲು ಆಸ್ಪದವಿದೆಯೆಂದು.

ಇನ್ನೊಂದು ಪ್ರಕರಣದಲ್ಲಿ ಕಡಿದಾಳರು ತಮ್ಮ ದಕ್ಷತೆಯನ್ನು ಒರೆಗಲ್ಲಿಗೆ ಉಜ್ಜಿ ನೋಡುವ ಸಂದರ್ಭ ಬಂದು ಬಿಟ್ಟಿತು. ೧೯೫೩ರಲ್ಲಿ ಕೆ.ಆರ್.ಎಸ್.ನೀರಿನ ಮಟ್ಟ ಗಮನಾರ್ಹವಾಗಿ ಕುಸಿದು ಹೋಯಿತು. ಮಂಡ್ಯದ ರೈತರಿಗೆ ಬೇಸಿಗೆ ಬೆಳೆ ಬೆಳೆಯಲು ನೀರಿಲ್ಲವಾಯಿತು. ಕುಪಿತಗೊಂಡ ರೈತರು ನೀರಾವರಿ ಸಚಿವ ಕಡಿದಾಳರಲ್ಲಿಗೆ ನಿಯೋಗ ಬಂದು ತಮಗೆ ನೀರು ಬಿಡದಿದ್ದರೆ ಭತ್ತದ ಫಸಲು ಒಣಗಿ ಹೋಗುತ್ತದೆಂದು ದೂರಿಕೊಂಡರು. ಮಂಡ್ಯದ ರೈತರಿಗೆ ನೀರು ಬಿಡಲು ೧೯೨೪ ರಲ್ಲಿ ಮದ್ರಾಸ್ ಪ್ರಾಂತ್ಯಕ್ಕೂ ಮೈಸೂರು ರಾಜ್ಯ ಸರ್ಕಾರಕ್ಕೂ ಆದ ಒಪ್ಪಂದ ಅಡ್ಡಿಯಾಗಿತ್ತು. ಆಗ ಮೈಸೂರು ರಾಜ್ಯ ಒಂದು ಆಶ್ರಿತ ದೇಶಿಯ ಸಂಸ್ಥಾನವಾದುದರಿಂದ ಮದ್ರಾಸ್ ಸರ್ಕಾರದಲ್ಲಿದ್ದ ಆಂಗ್ಲ ಅಧಿಕಾರಿಗಳು ಮೈಸೂರಿನ ನಿಸ್ಸಹಾಯಕತೆಯನ್ನು ದುರುಪಯೋಗಪಡಿಸಿಕೊಂಡು ಮದರಾಸು ರಾಜ್ಯಕ್ಕೆ ಅನುಕೂಲವಾಗುವಂತೆ ಕರಾರನ್ನು ಮಾಡಿಸಿದ್ದರು. ಈ ಕರಾರಿನಿಂದ ಮೈಸೂರು ರಾಜ್ಯಕ್ಕೆ ಬಹಳ ಅನ್ಯಯವಾಗಿದೆ ಎಂದು ಮೊದಲಿನಿಂದಲೂ ಮೈಸೂರು ರಾಜ್ಯದ ನಿಲುವಾಗಿತ್ತು. ಈ ಕಾರಣದಿಂದ

ಮಂಡ್ಯ ಜಿಲ್ಲೆಯ ರೈತರಿಗೆ ನೀರು ಕೊಡಲಾಗಿರಲಿಲ್ಲ. ಹಿಂದೆ ಇದೇ ರೀತಿ ಪರಿಸ್ಥಿತಿ ಬಂದಾಗ ಹಿಂದಿನ ಸರ್ಕಾರದವರು ಮದರಾಸ್ ಸರ್ಕಾರದವರೊಂದಿಗೆ ಮಾತಾಡಿ ಬೇಸಿಗೆ ಬೆಳೆಗೆ ನೀರನ್ನು ಬಿಟ್ಟ ಪ್ರಸಂಗಗಳು ಇದೆಯೆಂದು ಮಂಡ್ಯ ರೈತರು ಹೇಳಿದರು. ನಿಯೋಗದ ತಂಡದವರಿಗೆ ಕಡಿದಾಳರು ಸರ್ವ ಪ್ರಯತ್ನ ಮಾಡಿ ಪೈರು ಒಣಗದಂತೆ ಮಾಡುವುದಾಗಿ ಭರವಸೆ ಕೊಟ್ಟು ಕಳುಹಿಸಿದರು. ಅವರು ಉಭಯ ಸಂಕಟದಲ್ಲಿ ಸಿಕ್ಕಿಕೊಂಡರು. ಮಂಡ್ಯರೈತರಿಗೆ ನೀರು ಬಿಡುವಂತಿಲ್ಲ. ಮದರಾಸ್ ರಾಜ್ಯಕ್ಕೆ ಹಾದುಹೋಗುವ ನೀರು ನಿಲ್ಲಿಸುವಂತಿಲ್ಲ. ಚಿಂತೆಗೊಳಗಾದ ಅವರು ನೀರಾವರಿ ಇಲಾಖೆಯ ಕಾರ್ಯದರ್ಶಿಯಾಗಿದ್ದ ಶ್ರೀನಿವಾಸಾಚಾರ್ ಅವರೊಂದಿಗೆ ಒಂದು ನಿರ್ಧಾರಕ್ಕೆ ಬಂದರು. ಕೇವಲ ಏಳು ದಿನಗಳ ಮಟ್ಟಿಗೆ ಮಂಡ್ಯರೈತರಿಗೆ ನೀರು ಬಿಡಲು ಹೇಳಿ ಸಂಬಂಧಪಟ್ಟ ಇಂಜಿನಿಯರ್‌ಗಳಿಗೆ ನಿರ್ದೇಶನ ಕೊಟ್ಟರು. ಮದ್ರಾಸಿನ ಮುಖ್ಯಮಂತ್ರಿ ರಾಜಾಜಿ ಅವರಿಗೆ ಪತ್ರಬರೆದು ಮಂಡ್ಯ ರೈತರ ಕಷ್ಟವನ್ನು ಹೇಳಿಕೊಂಡು ಏಳುದಿನಗಳ ಮಟ್ಟಿಗೆ ಮದ್ರಾಸಿಗೆ ಹರಿಯುವ ನೀರನ್ನು ತಡೆಹಿಡಿದಿಡಲಾಗಿದೆಯೆಂದು, ಅನಂತರ ಮದ್ರಾಸ್‌ಗೆ ನೀರು ಬಿಡಲಾಗುವುದೆಂದು, ತಡೆಹಿಡಿದ ನೀರಿನ ಪ್ರಮಾಣವನ್ನು ಮುಂದಿನ ವರ್ಷ ಸರಿದೂಗಿಸುವುದಾಗಿ ಬರೆದರು. ಈಕಡೆ ತಂಜಾವೂರಿನ ರೈತರು ಪ್ರತಿಭಟಿಸಿ ಮುಖ್ಯಮಂತ್ರಿ ರಾಜಾಜಿಗೆ ಫಿರ್ಯಾದನ್ನು ಕೊಟ್ಟರು. ಈಕಡೆ ಮಂಡ್ಯರೈತರು ಕಡಿದಾಳರ ಕ್ರಮವನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಮದ್ರಾಸ್ ಶಾಸನಸಭೆಯಲ್ಲಿ ಸದಸ್ಯರು ಮೈಸೂರು ಸರ್ಕಾರದ ಕ್ರಮವನ್ನು ತೀವ್ರವಾಗಿ ಪ್ರತಿಭಟಿಸಿದರು. ರಾಜಾಜಿಯವರು ಕಡಿದಾಳರ ಪತ್ರವನ್ನು ಪ್ರಧಾನಿ ನೆಹರೂರವರಿಗೆ ಕಳುಹಿಸಿ ೧೯೨೪ರ ಒಪ್ಪಂದವನ್ನು ಮುರಿದಿದ್ದಕ್ಕಾಗಿ ಆಕ್ಷೇಪಿಸಿದರು. ನೆಹರೂರವರು ಮುಖ್ಯಮಂತ್ರಿ ಹನುಮಂತಯ್ಯನವರಿಗೆ ರಾಜಾಜಿ ಅವರ ಪತ್ರ ಕಳುಹಿಸಿ ಸಮಜಾಯಿಸಿ ಕೇಳಿದರು. ಕೆಂಗಲ್ ಹನುಮಂತಯ್ಯನವರು ಮಂಗೋಪಕ್ಕೆ ಹೆಸರಾದವರಾಗಿದ್ದರೂ ಕಡಿದಾಳರ ಮೇಲೆ ಅವರು ಎಂದೂ ರೇಗಿರಲಿಲ್ಲ. ಆದರೆ ಪ್ರಧಾನಿಯವರ ಪತ್ರನೋಡಿ ಅವರು ಕೋಪೋದ್ರಿಕ್ತರಾದರು. ಪ್ರಧಾನಿಯವರ ಪತ್ರವನ್ನು ಕಡಿದಾಳರಿಗೆ ತೋರಿಸಿ ಹೀಗೇಕೆ ಮಾಡಿದಿರಿ ಎಂದು ಸಿಟ್ಟಿನಿಂದ ಕೇಳಿದರು. ಅವರು ಅಧಿಕಾರ ಕಳೆದುಕೊಳ್ಳುವುದಕ್ಕೆ ಅವರ ಮಂಗೋಪ ಮತ್ತು ಅಹಂಕಾರ ಕಾರಣವಾಗಿತ್ತು. ಕಡಿದಾಳರು ಮುಖ್ಯಮಂತ್ರಿಗೆ ಸಾವಕಾಶವಾಗಿ ಎಲ್ಲವನ್ನೂ ವಿವರಿಸಿದರು. ರಾಜಾಜಿಯವರ ಮೇಲೆ ಕೆಂಗಲ್ಲರಿಗೆ ತುಂಬಾ ಗೌರವವಿದ್ದುದೂ ಅವರ ಕೋಪಕ್ಕೆ ಕಾರಣವಾಗಿದ್ದಿತು. ಕಡಿದಾಳರು ತಾಳ್ಮೆಕಳೆದುಕೊಳ್ಳದೆ ತಂಜಾವೂರಿನ ರೈತರಿಗೆ ಅನ್ಯಾಯವಾಗುವುದಾದರೆ ಮಂಡ್ಯ ರೈತರಿಗೆ ಅನ್ಯಾಯವಾಗುವುದು ಸರಿಯೇ? ನಮ್ಮ ರೈತರ ಹಿತವನ್ನು ನಾವು

ಕಾಪಾಡುವುದು ಬೇಡವೇ? ಎಂದು ಹೇಳಿದ್ದರಿಂದ ಕೆಂಗಲ್ಲರ ಕೋಪ ಶಮನವಾಯಿತು. ಅವರು ನೆಹರೂರವರಿಗೆ ಸಮಜಾಯಿಷಿ ಪತ್ರ ಬರೆದರು. ಅಂತು ಈ ಪ್ರಕರಣ ಮದರಾಸ್ ಹಾಗೂ ಮೈಸೂರು ರಾಜ್ಯಗಳ ನಡುವೆ ನಡೆಯುವ ಘರ್ಷಣೆ ಶಾಂತವಾಗಿ ಮುಕ್ತಾಯವಾಯಿತು.

## ಭುಗಿಲೆಬ್ಬಿಸಿದ ಭೂಸುಧಾರಣಾ ಕಾನೂನು

೧೯೪೮ ರಲ್ಲಿ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರ ಸರ್ಕಾರ ಕಂದಾಯ ಪದ್ಧತಿಯನ್ನು ಪುನರ್‌ವಿಮರ್ಶೆ ಮಾಡುವ ಸಲುವಾಗಿ ಮತ್ತು ಇನಾಂಗಳನ್ನೂ, ಜಹಗೀರಿಗಳನ್ನೂ ರದ್ದು ಮಾಡುವ ಸಲುವಾಗಿ ಸರ್ಕಾರಕ್ಕೆ ಸೂಕ್ತ ಸಲಹೆ ಕೊಡಲು 'ರಾಜಮಂತ್ರ ಪ್ರವೀಣ' ಹೆಚ್.ಬಿ. ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಿದ್ದರು. ಆ ಸಮಿತಿಯು ಭಾರತದ ಇತರ ರಾಜ್ಯಗಳಲ್ಲಿ ರಚಿತವಾಗಿದ್ದ ಭೂ ಹಿಡುವಳಿಗೆ ಮತ್ತು ಭೂಸುಧಾರಣೆಗೆ ಸಂಬಂಧಪಟ್ಟ ಕಾನೂನುಗಳನ್ನು ಅಧ್ಯಯನ ಮಾಡಿ ಒಂದು ವರದಿಯನ್ನು ಒಪ್ಪಿಸಿತು. ಸಮಿತಿಯು ತನ್ನ ವರದಿಯಲ್ಲಿ ಎಲ್ಲಾ ವಿಧವಾದ ಇನಾಂಗಳನ್ನೂ ಜಹಗೀರಿಗಳನ್ನೂ ರದ್ದುಪಡಿಸುವ ಅವಶ್ಯಕತೆ ಇದೆಯೆಂದು ಸರ್ಕಾರಕ್ಕೆ ಸಲಹೆ ಮಾಡಿದ್ದಿತು. ಕೆ.ಸಿ.ರೆಡ್ಡಿ ಸರ್ಕಾರವು ಸಮಿತಿಯ ವರದಿಯನ್ನು ಒಪ್ಪಿಕೊಂಡು ಎಲ್ಲಾ ವಿಧವಾದ ಇನಾಂಗಳನ್ನು ರದ್ದುಪಡಿಸುವ ಸಲುವಾಗಿ ಒಂದು ವಿಧೇಯಕವನ್ನು ರಚಿಸಿ ಅದನ್ನು ವಿಧಾನಸಭೆಯಲ್ಲಿ ಮಂಡಿಸಿದ್ದಿತು. ಆ ವರದಿಯನ್ನು ಚರ್ಚಿಸುವ ಮುಂಚೆ ೧೯೫೨ರಲ್ಲಿ ವಿಧಾನಸಭೆಗೆ ಚುನಾವಣೆಗೆ ನಡೆಯಬೇಕಾಗಿದ್ದುದರಿಂದ ವಿಧಾನಸಭೆಯನ್ನು ವಿಸರ್ಜಿಸಲಾಯಿತು. ಹಾಗಾಗಿ ವಿಧೇಯಕವು ಮೂಲೆಗೆ ಬಿದ್ದಿತು.

ಚುನಾವಣೆ ನಡೆದು ಕೆಂಗಲ್ ಹನುಮಂತಯ್ಯ ಅವರು ಮುಖ್ಯಮಂತ್ರಿಯಾದಾಗ ಕಡಿದಾಳರು ಅವರ ಸಂಪುಟದಲ್ಲಿ ಸಚಿವರಾಗಿದ್ದರು. ಅವರು ಕಂದಾಯಮಂತ್ರಿಯಾದ ತಕ್ಷಣ ಒಂದನೇ ಪಂಚವಾರ್ಷಿಕ ಯೋಜನೆಗನುಗುಣವಾಗಿ ಮತ್ತು ರಾಷ್ಟ್ರೀಯ ಕಾಂಗ್ರೆಸ್ಸಿನ ಆದೇಶಕ್ಕನುಗುಣವಾಗಿ ಭೂಸುಧಾರಣೆಯನ್ನು ಮಾಡುವುದು ಅವಶ್ಯಕವಾಗಿ ಕಂಡುಬಂದಿತು. ಭೂಸುಧಾರಣೆಯೊಂದಿಗೆ ದೇವಾದಾಯ ಮತ್ತು ಧರ್ಮಾದಾಯ ಇನಾಂಗಳನ್ನು ರದ್ದುಪಡಿಸಲು ಕ್ರಮಕೈಗೊಂಡರು. ಜನ ಇದನ್ನು ಕ್ರಾಂತಿಕಾರಿ ಕ್ರಮ ಎಂದು ಬಣ್ಣಿಸಿದರು. ಮಾಧ್ಯಮಗಳು ಮತ್ತು ಭೂಮಾಲೀಕರು ಕಡಿದಾಳರು ಬ್ರಾಹ್ಮಣರ ವಿರೋಧಿ ಎಂದು ಅಪಪ್ರಚಾರ ಮಾಡಿದರು. ಕಡಿದಾಳರು ಯಾವುದಕ್ಕೂ ಜಗ್ಗಲಿಲ್ಲ.

ಅವರ ತೆಗೆದುಕೊಂಡ ಕ್ರಮ ಶೃಂಗೇರಿ ಪೀಠವನ್ನು ಅಲ್ಲಾಡಿಸಿತು. ಪೀಠದ ಭಕ್ತರು ಮೈಸೂರು ರಾಜ್ಯದಲ್ಲೆಡೆ ಕೇರಳ, ಮದರಾಸು ಮತ್ತು ಆಂಧ್ರದಲ್ಲೂ ಇದ್ದರು. ಶೃಂಗೇರಿ ಜಹಗೀರು ಮಠಕ್ಕೆ ಸೇರಿದ್ದರಿಂದ ಉದ್ರಿಕ್ತ ವಾತಾವರಣ ಉಂಟಾಯಿತು. ಈ ಸಮಯದಲ್ಲಿ ಕಡಿದಾಳರಿಗೆ ಅನಾರೋಗ್ಯವಾಯಿತು. ಇದು ಲೋಕಸಭಾ ಸದಸ್ಯರಾದ ಹೆಚ್.ಸಿ.ದಾಸಪ್ಪನವರಿಗೆ ತಿಳಿದು ಅವರು ಕಡಿದಾಳರಿಗೆ ಫೋನ್ ಮಾಡಿ ಅವರ ಆರೋಗ್ಯವನ್ನು ವಿಚಾರಿಸಿ " ನೀನು ಶೃಂಗೇರಿ ಜಹಗೀರಿಯನ್ನು ರದ್ದುಪಡಿಸುವ ಕಾರ್ಯಕ್ಕೆ ಕೈಹಾಕಬಾರದಾಗಿತ್ತು. ಮಠ ದೇವಸ್ಥಾನಗಳಿಗೆ ಪೂರ್ವಜರು ಕೊಟ್ಟಿದ್ದ ಮಾನ್ಯವನ್ನು ಕಿತ್ತುಕೊಳ್ಳುವ ಪ್ರಯತ್ನ ಮಾಡಿದರೆ ದೈವಶಾಪಕ್ಕೆ ಗುರಿಯಾಗಬೇಕಾಗುತ್ತದೆ. ನೀನು ಅ ಪ್ರಯತ್ನ ಮಾಡಿದ್ದರಿಂದಲೇ ನಿನಗೆ ಕಾಯಿಲೆ ಆಗಿದೆ. ಇನ್ನಾದರು ನೀನು ಆ ಪ್ರಯತ್ನವನ್ನು ಕೈಬಿಡು" ಎಂದು ಹಿತವಚನ ಮಾಡಿದರು. ದಾಸಪ್ಪನವರ ಹಿತನುಡಿ ಕೇಳಿದಮೇಲೆ ಕಡಿದಾಳರು "ತಾವು ಹಿರಿಯರು, ನನ್ನ ಮೇಲಿನ ವಾತ್ಸಲ್ಯಕ್ಕಾಗಿ ನಾನು ಋಣಿ. ನಾನೇನು ನಾಸ್ತಿಕನಲ್ಲ. ಪ್ರತಿದಿನವೂ ಭಗವಂತನನ್ನು ಕುರಿತು ಧ್ಯಾನ ಮಾಡುತ್ತೇನೆ. ನನ್ನ ಅಭಿಪ್ರಾಯದಲ್ಲಿ ಮಠ ಮತ್ತು ದೇವಸ್ಥಾನಗಳಿಗೆ ಸರ್ಕಾರದವರು ಮಾನ್ಯವಾಗಿ ಕೊಟ್ಟಿದ್ದ ಭೂಮಿಯನ್ನು ಬೆವರು ಸುರಿಸಿ ಬೇಸಾಯ ಮಾಡುವ ರೈತರಿಗೆ ಕೊಟ್ಟರೆ ದೇವರು ನನ್ನ ಕಾರ್ಯವನ್ನು ನಿಜವಾಗಿಯೂ ಮೆಚ್ಚುತ್ತಾನೆ" ಎಂದು ಹೇಳಿದರು. ದಾಸಪ್ಪನವರು ಅದಕುತ್ತರವಾಗಿ "ನನಗೆ ಸರಿ ಕಂಡಿದ್ದನ್ನು ನಿನಗೆ ಹೇಳ್ದೆ. ಇನ್ನು ನಿನ್ನ ಇಷ್ಟ, ಯೋಚನೆ ಮಾಡು"ಎಂದು ಹೇಳಿದರು. ದಾಸಪ್ಪನವರು ಹಾಗೆ ಹೇಳಿದ್ದುದರ ಹಿನ್ನೆಲೆಯಲ್ಲಿ ಶೃಂಗೇರಿ ಮಠದ ಭಕ್ತರ ಕೈವಾಡ ಇರಬಹುದು ಎಂದು ಕಡಿದಾಳರು ಭಾವಿಸಿದರು. ಏಕೆಂದರೆ ದಾಸಪ್ಪನವರಿಗೂ ಕಡಿದಾಳರಿಗೂ ಇರುವ ಬಾಂಧವ್ಯವನ್ನು ಅವರು ಅರಿತಿದ್ದರು.

ಕಡಿದಾಳರು ಭಿತ್ತಿದ ಬೀಜದ ಫಲ ದೇವರಾಜ್ ಅರಸು ಕಾಲದಲ್ಲಿ ಫಲ ಕಂಡಿತು. ಮಾಧ್ಯಮಗಳು ಮತ್ತು ಜನ ಕಡಿದಾಳರನ್ನು ಮರೆತು ಅರಸು ಅವರನ್ನು ಹೊಗಳಲು ಪ್ರಾರಂಭಿಸಿದರು. ಕೆಟ್ಟ ಹೆಸರು ಮಾತ್ರ ಕಡಿದಾಳರಿಗೆ ಬಂದಿತು. ಕಡಿದಾಳರು ಅಧಿಕಾರಬಿಟ್ಟ ಮೇಲೆ ಮತ್ತು ರಾಜ್ಯ ಹೈಕೋರ್ಟ್‌ನಲ್ಲಿ ವಕೀಲರಾಗಿ ಸೇವೆಸಲ್ಲಿಸುತ್ತಿದ್ದಂತೆ ಈ ರಾಜ್ಯದ ಜನ ಅವರ ಸೇವೆಯನ್ನು ಗುರುತಿಸ ಹತ್ತಿದರು. ಕಡಿದಾಳರು ಶಾಸಕರನ್ನು ಹಿಡಿದಿಟ್ಟುಕೊಂಡು ರಾಜ್ಯವಾಳಲು ಇಷ್ಟಪಡಲಿಲ್ಲ. ಅವರು ಮನಸ್ಸು ಮಾಡಿದ್ದರೆ ಜತ್ತಿಯವರು ಮುಖ್ಯಮಂತ್ರಿಯಾಗುವಾಗಲೇ ಆ ಸ್ಥಾನವನ್ನು ಹಿಡಿಯಬಹುದಿತ್ತು. ಅವರು 'ಏಕ್ ದಿನ್‌ಕಾ ಸುಲ್ತಾನ್' ಆಗಲು ನನಗೆ ಇಷ್ಟವಿಲ್ಲವೆಂದು ಹೇಳಿದುದರ ಹಿನ್ನೆಲೆ ಇದೇ.

## ನ್ಯಾಯಮಂಡಳಿ ರಚನೆ

ಕಡಿದಾಳರು ಕಂದಾಯ ಮಂತ್ರಿಯಾಗಿದ್ದಾಗ ರೆವಿನ್ಯೂ ಮತ್ತು ರಿವಿಜನ್ ಪ್ರಕರಣ ತೀರ್ಮಾನಕ್ಕಾಗಿ ಈಗಿನ ರೆವಿನ್ಯೂ ಬೋರ್ಡ್ ಅಥವಾ ಮೇಲ್ಮನವಿ ಮಂಡಳಿ ಇರಲಿಲ್ಲ. ಕಂದಾಯ ಸಚಿವರಾಗಿದ್ದವರೆ ರೆವಿನ್ಯೂ ಮೇಲ್ಮನವಿಯನ್ನು ರಿವಿಜನ್ ಅರ್ಜಿಗಳನ್ನು ರೆವಿನ್ಯೂ ಕೋರ್ಟಿನ ನ್ಯಾಯಾಧೀಶರಾಗಿ ತೀರ್ಪು ನೀಡಬೇಕಾಗಿತ್ತು. ಆ ಕೋರ್ಟ್‌ನ ತೀರ್ಪೇ ಅಂತಿಮವಾದುದರಿಂದ ಕಡಿದಾಳ್ ಕೋರ್ಟಿನ ಮುಂದಿನ ಪ್ರಕರಣಗಳನ್ನು ಬಹಳ ಎಚ್ಚರಿಕೆ ವಹಿಸಿ ಉಭಯ ಪಕ್ಷಗಳ ಪರವಾಗಿ ಹಾಜರಾಗುತ್ತಿದ್ದ ವಕೀಲರುಗಳ ವಾದವಿವಾದಗಳನ್ನು ಕೇಳಿ, ಕಾನೂನು ಪ್ರಕಾರ ತೀರ್ಪನ್ನು ಕೊಡಬೇಕಾಗಿತ್ತು. ಕಡಿದಾಳರು ಮೈಸೂರು ರಾಜ್ಯದಲ್ಲಿ ೧೯೫೨ ರಿಂದ ೧೯೫೬ರ ವರೆಗೆ ರೆವಿನ್ಯೂ ನ್ಯಾಯಾಧೀಶರಾಗಿ ಕೆಲವು ಸಾವಿರ ಅಪೀಲುಗಳನ್ನು ಮತ್ತು ರೆವಿನ್ಯೂ ಪ್ರಕರಣಗಳಲ್ಲಿ ಅಂತಿಮ ತೀರ್ಪು ನೀಡಿರುತ್ತಾರೆ. ಅವರು ನ್ಯಾಯಾಧೀಶರಾಗಿ ನಿಷ್ಪಕ್ಷಪಾತವಾಗಿ ಕಾನೂನಿಗನುಸಾರವಾಗಿ ಯಾರ ಪ್ರಭಾವಕ್ಕೂ ಒಳಗಾಗದೆ ಕಾರ್ಯನಿರ್ವಹಿಸುತ್ತಿದ್ದರು. ಬಹಳ ಮಂದಿ ಲೋಕಸಭಾಸದಸ್ಯರು ಶಾಸನಸಭೆಯ ಸದಸ್ಯರುಗಳು ಯಾವುದಾದರೊಂದು ಪಕ್ಷದ ಪರವಾಗಿ ತೀರ್ಪನ್ನು ನೀಡಬೇಕೆಂದು ಕಡಿದಾಳರ ಮೇಲೆ ಒತ್ತಡತರುತ್ತಿದ್ದರು. ಅದು ನ್ಯಾಯಾಂಗದಲ್ಲಿ ಹಸ್ತಕ್ಷೇಪವೆಂಬುದು ಅವರಿಗೆ ತಿಳಿದಿರಲಿಲ್ಲ. ಅದು ಅಪಾಯಕಾರಿಯಾದ ಬೆಳವಣಿಗೆ ಎಂದು ಕಡಿದಾಳರು ತಿಳಿಯುತ್ತಾರೆ. ಕಡಿದಾಳರ ಮುಂದೆ ಹಾಜರಾದ ಹಿರಿಯ ವಕೀಲರುಗಳಲ್ಲಿ ಮುಖ್ಯರಾದವರು ಯತಿರಾಜಲು ನಾಯ್ಡು, ಗೋಪಿವಲ್ಲಭ ಅಯ್ಯಂಗಾರ್, ಕೆ.ಎಂ.ಶ್ರೀನಿವಾಸ ಅಯ್ಯಂಗಾರ್, ಇ.ಎಸ್.ವೆಂಕಟರಾಮಯ್ಯ ಅವರುಗಳು.

ಕಂದಾಯ ಮಂತ್ರಿಯಾದವರು ಭ್ರಷ್ಟರಾದರೆ ಜನರಿಗೆ ನ್ಯಾಯ ದೊರಕುವುದಿಲ್ಲವೆಂದು ಕಡಿದಾಳರು ಮುಖ್ಯಮಂತ್ರಿ ಹನುಮಂತಯ್ಯ ಅವರಿಗೆ ಹೇಳಿ ಅಪೀಲು ಮತ್ತು ರಿವಿಜನ್ ಪ್ರಕರಣಗಳನ್ನು ತೀರ್ಮಾನ ಮಾಡಲು ಪ್ರತ್ಯೇಕವಾದ ನ್ಯಾಯಮಂಡಳಿ ರಚಿಸುವುದು ಅಗತ್ಯವೆಂದು ಹಾಗೇ ಮಾಡಿಸಿದರು. ಈಗ ಅದೇ ರೆವಿನ್ಯೂ ಬೋರ್ಡ್, ಕರ್ನಾಟಕ ಅಪಿಲೇಟ್ ಟ್ರಿಬ್ಯೂನಲ್ ಎಂದು ಹೆಸರು ಪಡೆದಿದೆ. ಆದರೆ ಅದುಕೂಡ ಭ್ರಷ್ಟಾಚಾರದಿಂದ ಮುಕ್ತವಾಗಿಲ್ಲ ಎಂದು ಕಡಿದಾಳರು ವಿಷಾದಿಸುತ್ತಾರೆ. ಕಡಿದಾಳರು ಮುಂದೆ ವಕೀಲರಾದಾಗ ಅದೇ ಕೋರ್ಟಿನ ಮುಂದೆ ಹಾಜರಾಗುತ್ತಿದ್ದರು.

## ರಾಜಾಜಿಯ ವಿಸ್ಮಯ

ಕಡಿದಾಳರು ಕೆಂಗಲ್ ಹನುಮಂತಯ್ಯನವರ ಸಚಿವ ಸಂಪುಟದಲ್ಲಿ ಮಂತ್ರಿಯಾಗಿದ್ದಾಗ ೧೯೫೬ನೇ ಇಸವಿಯಲ್ಲಿ ಒಂದೊಮ್ಮೆ ಮದ್ರಾಸ್ ಮುಖ್ಯಮಂತ್ರಿ ರಾಜಾಜಿಯವರು ಹನುಮಂತಯ್ಯನವರ ಮನೆಗೆ ಬಂದ ವಿಚಾರ ತಿಳಿದು ಅವರನ್ನು ನೋಡಲು ಹೋದರು. ಅವರಿಗೆ ಕೇಂದ್ರ ಸಂಪುಟದ ಮಂತ್ರಿಗಳಾದ ಡಾ॥ ಸುಶೀಲಾ ನಾಯರ್, ಗುಲ್ಜಾರಿಲಾಲ್‌ನಂದ, ಲಾಲ್‌ಬಹದ್ದೂರ್ ಶಾಸ್ತ್ರಿ, ಮುರಾರ್ಜಿ ದೇಸಾಯಿ, ಪ್ರಧಾನಿ ನೆಹರೂ, ಕಾಂಗ್ರೆಸ್ ಅಧ್ಯಕ್ಷರಾದ ಢೇಬರ್ ಮುಂತಾದ ಗಣ್ಯವ್ಯಕ್ತಿಗಳ ನಿಕಟ ಪರಿಚಯವಿತ್ತು. ರಾಜಾಜಿಯವರನ್ನು ಮೂರುನಾಲ್ಕು ಸಾರಿ ನೋಡಿದ್ದರೆ ವಿನಃ ಅವರ ಸಾಮಿಪ್ಯವಿರಲಿಲ್ಲ. ಹಾಗಾಗಿ ಅವರನ್ನು ನೋಡಲು ಹೋದರು. ಹನುಮಂತಯ್ಯನವರು ಇನ್ನೂ ಒಳಗಿನಿಂದ ಬಾರದೆ ಇದ್ದುದರಿಂದ ರಾಜಾಜಿಯವರು ಅತಿಥಿಗಳು ಕೂತುಕೊಳ್ಳುವ ಕೊಠಡಿಯಲ್ಲಿ ಒಬ್ಬರೇ ಕೂತಿದ್ದರು. ಕಡಿದಾಳರು ಅವರಿಗೆ ತನ್ನ ಪರಿಚಯ ಮಾಡಿಕೊಂಡರು. ರಾಜಾಜಿಯವರು ಆಗಲೇ ಅವರ ಬಗ್ಗೆ ತಿಳಿದುಕೊಂಡಿದ್ದುದನ್ನು ಹೇಳಿದರು. ಕಾವೇರಿ ನೀರಿನ ಬಗ್ಗೆ ಕಡಿದಾಳರು ಬರೆದ ಪತ್ರದಿಂದಾಗಿ ರಾಜಾಜಿಯವರು ಕಡಿದಾಳರನ್ನು ಒಕ್ಕಲಿಗರೆಂದೂ, ಶಿವಮೊಗ್ಗ ಜಿಲ್ಲೆಯವರೆಂದು ತಿಳಿದುಕೊಂಡಿದ್ದರು. ರಾಜಾಜಿಯವರು ಶಿವಮೊಗ್ಗೆಯಿಂದ ತೀರ್ಥಹಳ್ಳಿಗೆ ವಾಹನ ಸೌಕರ್ಯವಿಲ್ಲದ ಕಾಲದಲ್ಲಿ ಸೈಕಲ್ ತುಳಿದುಕೊಂಡು ಆಗುಂಬೆಗೆ ಸ್ನೇಹಿತರೊಬ್ಬರನ್ನು ನೋಡಲು ಹೋದುದನ್ನು ಹೇಳಿ, ಕಡಿದಾಳರು ಯಾವ ಖಾತೆಯ ಮಂತ್ರಿಯಾಗಿದ್ದಾರೆಂದು ಕೇಳಿದರು. ಕಡಿದಾಳರು ತಾನು ಹೊಂದಿದ ಖಾತೆಗಳನ್ನು, ರೆವಿನ್ಯೂ ಕೋರ್ಟಿನ ನ್ಯಾಯಾಧೀಶರರಾಗಿ ಪ್ರಕರಣಗಳನ್ನು ಇತ್ಯರ್ಥ ಮಾಡುವ ಹೊಣೆಯೂ ತನ್ನ ಮೇಲಿದೆ ಎಂದು ನಮ್ರತೆಯಿಂದ ಹೇಳಿದರು. ರಾಜಾಜಿಯವರಿಗೆ ಆಶ್ಚರ್ಯವಾಯಿತು. ಆಮೇಲೆ ಹನುಮಂತಯ್ಯನವರಿಗೆ ಅವರು ಇಬ್ಬರು ಮೂರು ಮಂದಿ ಮಂತ್ರಿಗಳು ಹೋರುವ ಜವಾಬ್ದಾರಿಯನ್ನು ಇವರೊಬ್ಬರಿಗೆ ಹೊರಿಸಿದ್ದುದೇಕೆ ಎಂದು ಕೇಳಿದರು. ಹನುಮಂತಯ್ಯನವರು ಅಷ್ಟೆಲ್ಲಾ ಖಾತೆಗಳನ್ನು ನಿಭಾಯಿಸುವ ಶಕ್ತಿ ಅವರಿಗೆ ಇರುವುದರಿಂದಲೇ ಕೊಟ್ಟಿರುವುದಾಗಿ ತಿಳಿಸಿದರು.

## ನಿಜವಾದ ಕೀಳು ಪಂಡಿತರ ಭವಿಷ್ಯ

೧೯೫೬ ರಲ್ಲಿ ಮೈಸೂರು ಕಾಂಗ್ರೆಸ್ ಪಕ್ಷದಲ್ಲಿ ಕಾಂಗ್ರೆಸ್ ಅಧ್ಯಕ್ಷ ಸಾಹುಕಾರ್ ಚೆನ್ನಯ್ಯ ಮತ್ತು ಹನುಮಂತಯ್ಯನವರ ಎರಡುಗುಂಪು ಇದ್ದಿತು. ಚೆನ್ನಯ್ಯನವರ ಗುಂಪಿನಲ್ಲಿ ಬಹಳಮಂದಿ ಶಾಸಕರಿದ್ದು ಹನುಮಂತಯ್ಯ ಅವರನ್ನು ಮುಖ್ಯಮಂತ್ರಿ

ಹುದ್ದೆಯಿಂದ ಪದಚ್ಯುತಿಗೊಳಿಸಲು ಅವರು ಸತತವಾಗಿ ಪ್ರಯತ್ನಿಸುತ್ತಿದ್ದರು. ಅದಕ್ಕೆ ಹನುಮಂತಯ್ಯ ಅವರ ಅಹಂಕಾರ ಮತ್ತು ಮುಂಗೋಪ ಕಾರಣ. ಆದರೆ ಹನುಮಂತಯ್ಯ ಅವರ ಸಂಪುಟದ ಸಚಿವರು ಒಗ್ಗಟ್ಟಾಗಿದ್ದುದರಿಂದ ಅಷ್ಟು ಸುಲಭವಾಗಿ ಅವರನ್ನು ಪದಚ್ಯುತಗೊಳಿಸಲಾಗಿರಲಿಲ್ಲ. ಬಹಳಮಂದಿ ಶಾಸಕರು ಚೆನ್ನಯ್ಯನವರ ಕುಮ್ಮಕ್ಕಿನಿಂದ ಪ್ರಧಾನಿ ನೆಹರೂರವರಿಗೂ, ಕಾಂಗ್ರೆಸ್ ಅಧ್ಯಕ್ಷ ಧೇಬರ್ ಅವರಿಗೂ ಮನವಿಯನ್ನು ಕಳಿಸಿದ್ದರು. ಈ ಇಂದಿನ ಒಳಸಂಚು ಕಡಿದಾಳರಿಗೆ ತಿಳಿದಿರಲಿಲ್ಲ. ಏಕೆಂದರೆ ಕಡಿದಾಳರು ಅನಾರೋಗ್ಯದಿಂದ ಚೌರಿಂಗ್ ಆಸ್ಪತ್ರೆ ಸೇರಿದ್ದರು. ಉಗುಳಿದರೆ ಕಫ ಮುದ್ದೆಮುದ್ದೆಯಾಗಿ ಬೀಳುತ್ತಿತ್ತು. ಕೆಮ್ಮು ಜ್ವರ ಅವರನ್ನು ಬಾಧಿಸುತ್ತಿತ್ತು. ಕಡಿದಾಳರು ಸತ್ತುಹೋಗುವರೆಂದು ಕಾಂಗ್ರೆಸ್ ಶಾಸಕರಿಗೆ ತಿಳಿದ್ದುದರಿಂದ ಅವರಿಗೆ ಯಾರೂ ಕಾಂಗ್ರೆಸ್ಸಿನಲ್ಲಿ ನಡೆಯುತ್ತಿದ್ದುದನ್ನು ಹೇಳಿರಲಿಲ್ಲ. ಕಾಯಿಲೆ ವಾಸಿಯಾಗಿ ಅವರು ಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಹನುಮಂತಯ್ಯನವರು ಅವರನ್ನು ಭೇಟಿ ಮಾಡಿ ಆರೋಗ್ಯ ವಿಚಾರಿಸಿದರು. ಕಡಿದಾಳರಿಗೆ ಒದಗಿಬಂದ ಕಷ್ಟಕ್ಕೆ ಕಣ್ಣೀರು ಹಾಕಿದರು. ಹನುಮಂತಯ್ಯನವರು ಕೂಡ ತನ್ನನ್ನು ಪದಚ್ಯುತಿಗೊಳಿಸಲು ಸಂಚು ನಡೆಯುತ್ತಿದ್ದೆ ಎಂದು ಹೇಳಲಿಲ್ಲ. ಹೀಗಿದ್ದಾಗ ಸಾಹುಕಾರ ಚೆನ್ನಯ್ಯನವರು, ಹುಚ್ಚಮಾಸ್ತಿ ಗೌಡರು ಕಡಿದಾಳರ ಆರೋಗ್ಯ ವಿಚಾರಿಸುವ ನೆಪಮಾಡಿಕೊಂಡು ಅವರು ಮನೆಗೆ ಬಂದರು. ಆರೋಗ್ಯ ಕುರಿತು ಮಾತನಾಡಿಯಾದ ಮೇಲೆ ಚೆನ್ನಯ್ಯನವರು ಹನುಮಂತಯ್ಯನವರು ಕಾಂಗ್ರೆಸ್ ಪಕ್ಷದ ಬಹುಜನ ಶಾಸಕರ ವಿಶ್ವಾಸ ಕಳೆದುಕೊಂಡಿದ್ದಾರೆಂದು ಆ ಶಾಸಕರೆಲ್ಲ ಕಾಂಗ್ರೆಸ್ ವರಿಷ್ಠ ಮಂಡಳಿಗೆ ಮನವಿಯೊಂದನ್ನು ಕಳಿಸುತ್ತಿದ್ದಾರೆಂದು, ದೆಹಲಿ ವರಿಷ್ಠರು ಹನುಮಂತಯ್ಯನವರನ್ನು ಗದ್ದುಗೆಯಿಂದ ಇಳಿಸಬೇಕೆಂದು ತಮಗೆ ಸೂಚನೆ ನೀಡಿದ್ದಾರೆಂದು, ಆ ಕಾರಣದಿಂದ ಕಡಿದಾಳರು ಸಹಕಾರ ಕೊಡಬೇಕೆಂದು ಕೇಳಿದರು. ಅವರ ಮಾತಿನಿಂದ ದಿಗ್‌ಭ್ರಮೆಗೊಂಡ ಕಡಿದಾಳರು ಇನ್ನೂ ಕೆಲವೇ ತಿಂಗಳುಗಳಲ್ಲಿ ರಾಜ್ಯಗಳ ಪುನರ್ವಿಂಗಡಣೆಯಾಗುವುದರಿಂದ ಹನುಮಂತಯ್ಯ ಅವರನ್ನು ಅಷ್ಟರೊಳಗಾಗಿ ಪದಚ್ಯುತಗೊಳಿಸುವುದರಲ್ಲಿ ಯಾವ ಅರ್ಥವೂ ಇಲ್ಲವೆಂದು, ಇಲ್ಲಿಯತನಕ ಹನುಮಂತಯ್ಯನವರ ದೋಷಗಳನ್ನು ಸಹಿಸಿಕೊಂಡು ಬಂದವರು ನವಂಬರ್ ತಿಂಗಳ ತನಕ ಕಾಯಬೇಕೆಂದು ಹೇಳಿದರು. ಅವರು ಹೋದನಂತರ ಕಡಿದಾಳರು ಕಾಂಗ್ರೆಸ್ ಕಾರ್ಯದರ್ಶಿ ಮಾಧವನ್ ನಾಯರ್‌ಅವರಿಗೆ ಫೋನ್ ಮಾಡಿಕೇಳಿದರು. ನಾಯರ್ ಕೂಡ ಚೆನ್ನಯ್ಯನವರು ಹೇಳಿದ್ದದನ್ನು ಪುಷ್ಟೀಕರಿಸಿದರು. ಕಡಿದಾಳರು ವಿಶಾಲ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬರುವುದರಿಂದ ಹನುಮಂತಯ್ಯ ಅವರನ್ನು ಪದಚ್ಯುತಗೊಳಿಸಬಾರದೆಂದು ಉಭಯ ಗುಂಪುಗಳ ನಡುವೆ ಸೌಹಾರ್ದಯುತ

ವಾತಾವರಣ ಮೂಡುವಂತೆ ಮಾಡಬೇಕೆಂದು ಕೇಳಿಕೊಂಡರು. ನಾಯರ್ ಅವರು ಚೆನ್ನಯ್ಯನವರು ಆಪ್ತ ಸ್ನೇಹಿತರಾಗಿದ್ದರು. ಕಡಿದಾಳರು ಕಾಂಗ್ರೆಸ್ ಅಧ್ಯಕ್ಷ ಧೇಬರ್ ಅವರನ್ನು ಸಂಪರ್ಕಿಸಿದರು. ಅವರೂ ಕೂಡ ನಾಯರ್ ಅವರು ಹೇಳಿದಂತೆ ಹೇಳಿದರು. ಪರಿಸ್ಥಿತಿ ಕೈಮೀರಿ ಹೋದುದನ್ನು ಕಡಿದಾಳರು ಮನಗಂಡರು. ಅವರಿಗೆ ಹನುಮಂತಯ್ಯನವರ ಸಂಪುಟದಲ್ಲಿರುವವರೆಗೆ ಅವರಿಗೆ ವಿರುದ್ಧವಾಗಿ ನಡೆದುಕೊಳ್ಳಲು ಇಷ್ಟವಿರಲಿಲ್ಲ. ಈ ವಿಷಯವನ್ನು ಸಹೋದ್ಯೋಗಿ ಮಂತ್ರಿಗಳಾದ ಸಿದ್ಧವೀರಪ್ಪನವರಿಗೆ, ಎ.ಜಿ.ರಾಮಚಂದ್ರ ರಾಯರಿಗೆ, ಹುಚ್ಚಮಾಸ್ತಿ ಗೌಡರಿಗೆ ಕಡಿದಾಳರು ಮುಖಕ್ಕೆ ಹೊಡೆದಂತೆ ಹೇಳಿ ಕಳುಹಿಸಿದ್ದರು. ಹನುಮಂತಯ್ಯನವರು ರಾಜ್ಯಗಳ ಪುನರ್ ವಿಂಗಡಣ ಆಯೋಗದ ಶಿಫಾರಸ್ಸನ್ನು ಒಪ್ಪಿಕೊಂಡು ಕರ್ನಾಟಕ ಏಕೀಕರಣಕ್ಕೆ ಬೆಂಬಲ ನೀಡಿದ್ದರಿಂದ ಅವರ ಅಚ್ಚುಮೆಚ್ಚಿನ ಬೆಂಬಲಿಗ ಶಾಸಕರು ಬಂಡೆದ್ದು ಚೆನ್ನಯ್ಯನವರ ಕಡೆಗೆ ಹೋದರು. ಅವರ ಆಪ್ತ ಶಿಷ್ಯರೆನ್ನಿಸಿಕೊಂಡವರು ಅವರಿಗೆ ವಿರೋಧವಾದರೂ ಹನುಮಂತಯ್ಯನವರನ್ನು ಇಳಿಸುವುದರಲ್ಲಿ ಲೋಕಸಭಾ ಸದಸ್ಯರಾಗಿದ್ದ ನಿಜಲಿಂಗಪ್ಪನವರಿಗೂ ಆಸಕ್ತಿ ಎಂದು ಭಾವಿಸುತ್ತಾರೆ. ಕಾಂಗ್ರೆಸ್ ಅಧ್ಯಕ್ಷ ಧೇಬರ್ ಅವರೂ, ಮುರಾರ್ಜಿದೇಸಾಯಿ ಅವರೂ ಕಡಿದಾಳರಿಗೆ ಯಾವುದೇ ಗುಂಪಿನಲ್ಲಿ ತಮ್ಮನ್ನು ಗುರುತಿಸಿಕೊಳ್ಳಬಾರದೆಂದು, ತಟಸ್ಥರಾಗಿರಬೇಕೆಂದು ಸೂಚಿಸಿದರು. ಕಡಿದಾಳರು ಹಾಗೇ ಮಾಡಿದರು. ಕೊನೆಯ ಪ್ರಯತ್ನವಾಗಿ ಅವರು ದೆಹಲಿಗೆ ಹೋಗಿ ಹನುಮಂತಯ್ಯ ಅವರನ್ನು ರಾಜ್ಯ ಪುನರ್ವಿಂಗಡಣೆ ಆಗುವ ತನಕ ಮುಖ್ಯಮಂತ್ರಿಯಾಗಿ ಉಳಿಸಿಕೊಳ್ಳುವ ಪ್ರಯತ್ನ ಮಾಡಿದರು. ಆದರೆ ದೆಹಲಿಯ ವರಿಷ್ಠರು ಕೈಚೆಲ್ಲಿದ್ದರಿಂದ ವಾಪಸು ಬಂದವರೆ ಹನುಮಂತಯ್ಯನವರಿಗೆ ನಡೆದ ವಿದ್ಯಾಮಾನವನ್ನು ಸ್ಪಷ್ಟಪಡಿಸಿದರು. ಹನುಮಂತಯ್ಯನವರು ತಿಳಿದದ್ದು ಕಡಿದಾಳರು ದೆಹಲಿಗೆ ಪಿತೂರಿ ನಡೆಸಲು ಹೋಗಿದ್ದರೆಂದು ಹನುಮಂತಯ್ಯನವರು ತಾನು ಪದಚ್ಯುತನಾಗುವುದನ್ನು ತಡೆಯಲು ಶಾಸಕರ ಸಹಾಯ ಕೋರಿದರೆ ವಿನಃ ಈಗಿನ ರಾಜಕಾರಣಿಗಳಂತೆ ಯಾವುದೇ ಆಮಿಷವನ್ನು ಒಡ್ಡಲಿಲ್ಲ ಎಂದು ಕಡಿದಾಳರು ಸ್ಮರಿಸಿಕೊಳ್ಳುತ್ತಾರೆ.

ಹನುಮಂತಯ್ಯನವರನ್ನು ಉರುಳಿಸಿ ತಾನು ಮುಖ್ಯಮಂತ್ರಿಯಾಗಬೇಕೆಂದು ಚೆನ್ನಯ್ಯನವರು ಪ್ರಯತ್ನಿಸುತ್ತಿದ್ದುದರಿಂದ ಡಾ॥ ನಾಗನ ಗೌಡರು, ಚೆನ್ನಬಸಪ್ಪನವರು ಟಿ. ಚೆನ್ನಯ್ಯನವರು ಕಡಿದಾಳರಿಗೆ ಮುಖ್ಯಮಂತ್ರಿಯಾಗಬೇಕೆಂದು ದುಂಬಾಲು ಬಿದ್ದರು. ಹೆಚ್.ಕೆ.ವೀರಣ್ಣ ಗೌಡರು "ಮಾರಾಯ ನಿನ್ ಕಾಲು ಹಿಡಿತೀನಿ. ಮೈಸೂರು ರಾಜ್ಯದ ಹಿತದೃಷ್ಟಿಯಿಂದ ನೀವು ಲೀಡರ್ ಆಗಲು ಒಪ್ಪಿಕೊಳ್ಳಬೇಕು" ಎಂದು ಹೇಳಿದರು. ದೇವರಾಜ ಅರಸುರವರು ಮಂಜಪ್ಪನವರೆ, ದಯವಿಟ್ಟು ನಮ್ಮನ್ನೆಲ್ಲ ಆ

ಸಾಹುಕಾರರ ಗುಲಾಮರನ್ನಾಗಿ ಮಾಡಬೇಡಿ ಎಂದು ಅಂಗಲಾಚಿದರು. ಮಾಧವನ್ ನಾಯರ್‌ರು ಕೂಡ ತಾವು ಮುಖ್ಯಮಂತ್ರಿ ಆಗಬೇಕೆಂದು, ಅದು ದೆಹಲಿ ವರಿಷ್ಠರ ತೀರ್ಮಾನವೆಂದರು. ಕಡಿದಾಳರು ಒಪ್ಪಲಿಲ್ಲ. ನಾಯರ್ ಅವರು ದೆಹಲಿಗೆ ಫೋನ್ ಮಾಡಿದ್ದರಿಂದ ಕೇಂದ್ರ ಸಚಿವರಾಗಿದ್ದ ಕೆ.ಸಿ.ರೆಡ್ಡಿಯವರು ಕಡಿದಾಳರಿಗೆ ತಾವು ನಾಯಕತ್ವವನ್ನು ಒಪ್ಪಿಕೊಳ್ಳಬೇಕೆಂದು, ಪ್ರಧಾನಿ ಲಾಲ್‌ಬಹದ್ದೂರು ಶಾಸ್ತ್ರಿಯವರು ತಮ್ಮನ್ನು ಒಪ್ಪಿಸುವ ಜವಾಬ್ದಾರಿಯನ್ನು ತನಗೆ ವಹಿಸಿದ್ದಾರೆಂದು, ದೆಹಲಿ ನಾಯಕರ ತೀರ್ಮಾನದ ವಿರುದ್ಧ ಹೋಗಬಾರದೆಂದು ತಿಳಿಸಲಾಗಿ ಕಡಿದಾಳರು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡರು. ಶಾಸಕಾಂಗ ಪಕ್ಷದ ಸಭೆಯಲ್ಲಿ ಕಡಿದಾಳರ ಹೆಸರನ್ನು ಟಿ.ಮರಿಯಪ್ಪನವರು ಸೂಚಿಸಿದರು. ಅವರು ಚೆನ್ನಯ್ಯನವರ ಆಪ್ತರು . ಹನುಮಂತಯ್ಯನವರು ನಾಯಕತ್ವಕ್ಕೆ ಸ್ಪರ್ಧಿಸುವುದಿಲ್ಲವೆಂದು ಕಡಿದಾಳರು ತಿಳಿದಿದ್ದರು. ಅಚ್ಚರಿ ಎನ್ನುವಂತೆ ಸೋಲೂರು ಸಿದ್ದಪ್ಪನವರು ಹನುಮಂತಯ್ಯನವರ ಹೆಸರನ್ನು ಸೂಚಿಸಿದರು. ಹನುಮಂತಯ್ಯನವರು ಸ್ಪರ್ಧಿಸಿದ್ದು ನೋಡಿ ಕಡಿದಾಳರಿಗೆ ಆಕಾಶವೆ ಕಳಚಿ ತಲೆಯಮೇಲೆ ಬಿದ್ದಂತಾಯಿತು. ಮತ ಏಣಿಕೆಯಾದ ಮೇಲೆ ಕಡಿದಾಳರು ಗೆದ್ದು ಹನುಮಂತಯ್ಯ ಸೋತಿದ್ದರು. ಶಾಸಕಾಂಗದ ನಾಯಕರಾಗಿ ಆಯ್ಕೆಯಾದ ಕಡಿದಾಳರು ಹನುಮಂತಯ್ಯನವರನ್ನು ಸಂತೈಸಲು ಅವರ ಮನೆಗೆ ಹೋದರು. ಹನುಮಂತಯ್ಯ ಅವರು ಬಹಳ ದುಃಖದಿಂದ ಕೂತಿದ್ದರು. ಕಡಿದಾಳರೊಂದಿಗೆ ಮಾತನಾಡಲೇ ಇಲ್ಲ.

ರಾಜ್ಯಗಳ ಪುನರ್ವಿಂಗಡಣೆಯಾದ ಮೇಲೂ ಕಡಿದಾಳರು ಮುಖ್ಯಮಂತ್ರಿಯಾಗಬೇಕೆಂದು ಮುರಾರ್ಜಿದೇಸಾಯಿ ಅವರಿಗೆ ಆಸೆ ಇತ್ತು. ಅನಂತರ ಸುಮಾರು ಹತ್ತುವರ್ಷಗಳ ಮೇಲೆ ಅವರು ಬೆಂಗಳೂರಿಗೆ ಬಂದಿದ್ದಾಗ ಪ್ರಾಸಂಗಿಕವಾಗಿ ಮಾತನಾಡುತ್ತಿದ್ದಾಗ "ಮಂಜಪ್ಪ ಬಹಳ ಪ್ರಾಮಾಣಿಕ. ಆದ್ದರಿಂದ ಆತ ರಾಜಕಾರಣದಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬರಲಿಲ್ಲ" ಎಂದು ಹೇಳಿದ್ದರು. ಅಂತು ಕೀಳು ಪಂಡಿತರ ಭವಿಷ್ಯ ನಿಜವಾಯಿತು. ಆಹಾ ರಾಜಯೋಗವೇ ರಾಜ್ಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಾಹುಕಾರ್ ಚೆನ್ನಯ್ಯ ಅವರು ತಾನು ಹೇಳಿದವರನ್ನು ಮಾತ್ರ ಸಂಪುಟಕ್ಕೆ ಸೇರಿಸಿಕೊಳ್ಳಬೇಕೆಂದು ಕಡಿದಾಳರ ಮೇಲೆ ಒತ್ತಡ ಹೇರಿದರು. ಅವರ ಮಾತಿಗೆ ಕಿವಿಗೊಡದೆ ಕಡಿದಾಳರು ಹನುಮಂತಯ್ಯನವರ ಸಂಪುಟದಲ್ಲಿದ್ದ ಎಲ್ಲಾ ಸಚಿವರನ್ನು ಸೇರಿಸಿಕೊಳ್ಳಲು ಕಾಂಗ್ರೆಸ್ ಅಧ್ಯಕ್ಷ ಢೇಬರ್ ಅವರ ಒಪ್ಪಿಗೆ ಪಡೆದರು. ಕಡಿದಾಳರು ದಿನಾಂಕ:೧೯-೮-೧೯೫೬ ರಿಂದ ೧-೧೧-೧೯೫೬ರ ವರೆಗೆ ರಾಜ್ಯದ ಮುಖ್ಯಮಂತ್ರಿಯಾಗಿದ್ದರು.

## ಒಕ್ಕಲಿಗ ವಕೀಲರ ಮುನಿಸು

ಕಡಿದಾಳರು ಮುಖ್ಯಮಂತ್ರಿಯಾದ ಮೇಲೆ ಬಹಳ ಒತ್ತಡಕ್ಕೆ ಸಿಲುಕಿದರು. ಆದರೂ ಊರುಮನೆಯವರು, ಚಿರಪರಿಚಿತರು ಬಂದರೆ ಅವರ ಕುಂದುಕೊರತೆಗಳನ್ನು ವಿಚಾರಿಸದೆ ಇರುತ್ತಿರಲಿಲ್ಲ. ಈಗಿನ ರಾಜಕಾರಣಿಗಳಂತೆ ಪರಿಚಯವಿಲ್ಲದವರಂತೆ ಓಡಿಯಾಡುವುದಾಗಲಿ, ಅವರ ಕೆಲಸ ಮಾಡಿಕೊಟ್ಟು ಅವರ ಕೈನೋಡುವುದಾಗಲಿ ಮಾಡಲಿಲ್ಲ. ಊರುಮನೆಯವರು ಸತ್ತರೆ, ಕೆಟ್ಟರೆ ಕಾಗದ ಬರೆದು ಸಾಂತ್ವನ ಹೇಳುವ ಹವ್ಯಾಸವೂ ಅವರಿಗಿತ್ತು. ರಾಜ್ಯ ಪುನರ್ವಿಂಗಡಣೆಯಾದ ಮೇಲೆ ಅಂತರ ರಾಜ್ಯ ಸಚಿವರ ಸಮಿತಿಯು ಭಾವಿ ವಿಶಾಲ ಮೈಸೂರು ರಾಜ್ಯಕ್ಕೆ ಸಂಬಂಧಪಟ್ಟಂತೆ ಹಲವು ತೀರ್ಮಾನಗಳನ್ನು ಕೈಗೊಳ್ಳಬೇಕಾಯಿತು. ಐ.ಸಿ.ಎಸ್.ದರ್ಜೆಗೆ ಸೇರಿದ್ದ ಸಮರ್ಥ ಅಧಿಕಾರಿ ಪಿ.ವಿ.ಆರ್.ರಾವ್ ಅವರನ್ನು ಭಾವಿ ರಾಜ್ಯದ ಮುಖ್ಯಕಾರ್ಯದರ್ಶಿಯಾಗಿಯೂ ಕೊಡಗಿನ ರಾಜ್ಯದ ಮೊನ್ನಪ್ಪ ಅವರನ್ನು ಪೊಲೀಸ್ ಇಲಾಖೆಯ ಮುಖ್ಯ ಅಧಿಕಾರಿಯನ್ನಾಗಿಯೂ, ಪಿ.ಆರ್. ನಾಯರ್ ಅವರನ್ನು ಹಣಕಾಸು ಇಲಾಖೆಯ ಕಾರ್ಯದರ್ಶಿಯನ್ನಾಗಿಯೂ, ಮೈಸೂರು ರಾಜ್ಯದ ಮುಖ್ಯಕಾರ್ಯದರ್ಶಿಯಾಗಿದ್ದ ಪುಟ್ಟರಂಗಸ್ವಾಮಿ ಅವರನ್ನು ಡೆವಲಪ್‌ಮೆಂಟ್ ಕಾರ್ಯದರ್ಶಿಯಾಗಿಯೂ ನೇಮಕ ಮಾಡಬೇಕೆಂದು ಸಮಿತಿಯು ಒಮ್ಮತದ ತೀರ್ಮಾನವನ್ನು ಕೈಗೊಂಡು ಕೇಂದ್ರಗೃಹ ಖಾತೆಯ ರಾಜ್ಯ ಸಚಿವರಾಗಿದ್ದ ಬಿ.ಎನ್.ದಾತಾರ್ ಅವರಿಗೆ ಶಿಫಾರಸ್ ಮಾಡಲಾಯಿತು. ಇನ್ನು ವಿಶಾಲ ಮೈಸೂರು ರಾಜ್ಯದ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳ ನೇಮಕದ ವಿಚಾರ. ಬೊಂಬಾಯಿ ಮುಖ್ಯಮಂತ್ರಿಯಾಗಿದ್ದ ಮುರಾರ್ಜಿದೇಸಾಯಿಯವರು ಕೆ.ಜಿ.ದಾತಾರ್, ಜಿ.ಡಿ.ನಾಡಕರ್ಣಿ, ಎಸ್.ಎಸ್.ಮಳಿಮಠ್ ಅವರ ಹೆಸರುಗಳನ್ನು ಶಿಫಾರಸ್ ಮಾಡಿದ್ದರು. ಈ ನಡುವೆ ನ್ಯಾಯಮೂರ್ತಿಗಳ ನೇಮಕದ ವಿಚಾರದಲ್ಲಿ ಗೃಹಖಾತೆಯ ರಾಜ್ಯಸಚಿವ ದಾತಾರ್ ಅವರ ಸಲಹೆಯನ್ನು ಇತರರು ಮಾಡಿದ್ದ ಸಲಹೆಯನ್ನು ಅಂತರ ರಾಜ್ಯ ಸಮಿತಿಯಲ್ಲಿ ಮಂಡಿಸಿ ಆ ಸಮಿತಿಯ ಸದಸ್ಯರ ಅಭಿಪ್ರಾಯವನ್ನು ಕೂಡ ಮುಖ್ಯಮಂತ್ರಿ ಕಡಿದಾಳರು ಪಡೆದರು. ಆ ಸಮಿತಿಯ ಒಮ್ಮತದ ತೀರ್ಮಾನದ ಮೇರೆಗೆ ಕೇಂದ್ರಗೃಹ ಸಚಿವ ಗೋವಿಂದ ವಲ್ಲಭಪಂತ್ ಅವರಿಗೂ, ರಾಜ್ಯ ಸಚಿವ ದಾತಾರ್ ಅವರಿಗೂ ನ್ಯಾಯಾಧೀಶರ ನೇಮಕದ ಪಟ್ಟಿ ಕಳುಹಿಸಿದರು. ಅವರುಗಳೆಂದರೆ ಬೊಂಬಾಯಿ ಕರ್ಣಾಟಕದಿಂದ ಎಸ್.ಎಸ್.ಮಳಿಮಠ್, ಕೆ.ಜಿ.ದಾತಾರ್, ಜಿ.ಡಿ.ನಾಡಕರ್ಣಿ, ಮದರಾಸು ಕರ್ಣಾಟಕ ಪ್ರದೇಶದಿಂದ ಕೆ.ಎಸ್.ಹೆಗ್ಗಡೆ (ಲೋಕಸಭಾ ಸದಸ್ಯರು) ಎ.ನಾರಾಯಣ ಪೈ ಮೈಸೂರು ರಾಜ್ಯ ಪ್ರದೇಶದಿಂದ ಜಿ.ಚೆನ್ನಪ್ಪ ಅವರು. ಆದರೆ

ಕೆ.ಎಸ್.ಹೆಗಡೆ ಅವರ ನೇಮಕವಾಗುವ ಮೊದಲು ನಾರಾಯಣ ಪೈ ಅವರ ನೇಮಕ ಮಾಡುವ ಸುದ್ದಿಯನ್ನು ಹೆಗಡೆಯವರು ಕಡಿದಾಳರ ಗಮನಕ್ಕೆ ತಂದರು. ಈ ಹೊತ್ತಿಗೆ ಕಡಿದಾಳರಿಗೆ ಅಧಿಕಾರವಿರಲಿಲ್ಲ. ಆದರೂ ಅವರು ಕೊಂಚ ಅಳುಕಿನಿಂದ ಗೃಹಮಂತ್ರಿ ಅವರಿಗೆ ದೂರವಾಣಿಯಲ್ಲಿ ಮಾತನಾಡಿ ಅಂತರ್ ರಾಜ್ಯಸಚಿವರ ಸಮಿತಿಯಲ್ಲಿ ಆಗಿದ್ದ ನಿರ್ಣಯದ ವಿಚಾರವನ್ನು ಅವರ ಗಮನಕ್ಕೆ ತಂದು ಹೆಗಡೆಯವರನ್ನು ಮೊದಲು ನೇಮಕ ಮಾಡಲು ಕೇಳಿಕೊಂಡರು. ಪಂತ್ ಅವರು ಒಪ್ಪಿಕೊಂಡು ಹಾಗೇ ಮಾಡಿದರು. ಈ ಸುದ್ದಿ ತಿಳಿದ ಪೈ ಅವರು ಹಲವು ವರ್ಷಗಳು ಕಡಿದಾಳರೊಂದಿಗೆ ಮಾತುಬಿಟ್ಟಿದ್ದರು. ನ್ಯಾಯಾಧೀಶರ ನೇಮಕದಲ್ಲಿ ಒಬ್ಬರೇ ಒಬ್ಬ ಒಕ್ಕಲಿಗರ ಹೆಸರಿಲ್ಲದಿದ್ದುದರಿಂದ ಇಡೀ ಒಕ್ಕಲಿಗ ಕೋಮಿಗೆ ಅನ್ಯಾಯವಾಗಿದೆಯೆಂದು ಕೆಲವರು ಕಡಿದಾಳರನ್ನು ದೂರಿದರು. ಒಕ್ಕಲಿಗರ ಸಂಘದ ಕಾರ್ಯದರ್ಶಿಯಾಗಿದ್ದ ವಕೀಲ ಮುದ್ದಪ್ಪನವರು ಸುಮಾರು ಮೂವತ್ತು ಮಂದಿಯ ನಿಯೋಗವನ್ನು ಕಟ್ಟಿಕೊಂಡು ಕಡಿದಾಳರ ಮನೆಗೆ ಹೋದರು. ಮುದ್ದಪ್ಪನವರು ಒಕ್ಕಲಿಗ ಕೋಮಿನಲ್ಲಿ ನ್ಯಾಯಮೂರ್ತಿಯಾಗಿ ನೇಮಕವಾಗುವ ಅರ್ಹತೆ ಇರುವವರು ನಿಮ್ಮ ಕಣ್ಣಿಗೆ ಯಾರೂ ಬೀಳಲಿಲ್ಲವೆ? ಕೇಳಿದರು. ಕಡಿದಾಳರು 'ಇಲ್ಲ' ಎಂದರು. ಕುಪಿತರಾದ ಮುದ್ದಪ್ಪನವರು ನನಗೆ ಅರ್ಹತೆ ಇಲ್ಲವೆ? ಎಂದು ಮತ್ತೊಂದು ಪ್ರಶ್ನೆ ಹಾಕಿದರು. ಆಗಲೂ ಕಡಿದಾಳರು ಶಾಂತಚಿತ್ತದಿಂದ 'ಇಲ್ಲ' ಎಂದರು. ಮುದ್ದಪ್ಪನವರು ಕಡಿದಾಳರನ್ನು ಒಕ್ಕಲಿಗ ಕೋಮಿನ ವಿರೋಧಿ ಎಂದು ಆಡಿಕೊಂಡು ಶಪಿಸುತ್ತಾ ಹೋದರು. ಕಡಿದಾಳರು ಜಾತಿವಾದಿಯಾಗಿದ್ದರೆ ಒಕ್ಕಲಿಗರನ್ನು ನ್ಯಾಯಮೂರ್ತಿಗಳಾಗಿ ತುಂಬಿಬಿಡುತ್ತಿದ್ದರು. ತಾನು ಜಾತ್ಯಾತೀತ ವ್ಯಕ್ತಿ ಎಂದು ಸಾಬೀತುಪಡಿಸಿದರು. ಈಗ ನಮ್ಮ ಕಣ್ಣೆದುರಿಗೆ ಇರುವುದು ಢೋಂಗಿ ಜಾತ್ಯಾತೀತ ವ್ಯಕ್ತಗಳು.

## ನಿಜಲಿಂಗಪ್ಪನವರೊಂದಿಗೆ ಶೀಥಲ ಸಮರ

ದಿನಾಂಕ:೦೧-೧೧-೧೯೫೬ರಂದು ಹೊಸರಾಜ್ಯ ಅಸ್ತಿತ್ವಕ್ಕೆ ಬಂದಿತು. ಕಾಂಗ್ರೆಸ್ ಶಾಸಕಾಂಗ ಪಕ್ಷ ಹೊಸ ನಾಯಕನನ್ನು ಆಯ್ಕೆ ಮಾಡಲು ಸೇರಿದ ಸಭೆಯಲ್ಲಿ ನಿಜಲಿಂಗಪ್ಪನವರನ್ನು ಕಡಿದಾಳರೆ ಸೂಚಿಸಿದರು. ನಿಜಲಿಂಗಪ್ಪನವರು ಮೈಸೂರು ರಾಜ್ಯದ ಹೊರಗೆ ಇದ್ದ ಕನ್ನಡ ಪ್ರದೇಶದ ಶಾಸಕರಿಗೆ ಪರಿಚಿತರಾಗಿದ್ದವರು. ಕರ್ನಾಟಕ ಏಕೀಕರಣಕ್ಕೆ ಶ್ರಮಿಸಿದವರು ಕೂಡ. ಸ್ವಾಭಾವಿಕವಾಗಿ ಅವರಿಗೆ ಬಹುಮಂದಿ ಶಾಸಕರ ಬೆಂಬಲವಿತ್ತು. ಹಾಗಾಗಿ ಅವರು ಒಮ್ಮತದಿಂದ ಆರಿಸಲ್ಪಟ್ಟರು. ಅವರ ಸಂಪುಟದಲ್ಲಿ ಮಂತ್ರಿಯಾಗಲು ಕಡಿದಾಳರಿಗೆ ಇಷ್ಟವಿರಲಿಲ್ಲ. ಆದರೆ ಪ್ರಧಾನಿ ನೆಹರೂರವರು ನಿಜಲಿಂಗಪ್ಪನವರ ಸಂಪುಟವನ್ನು ಸೇರಿಕೊಳ್ಳಲು ಎಸ್.ವಿ.ಕೃಷ್ಣಮೂರ್ತಿರಾವ್ ಮತ್ತು

ಕರಮಕರ್ ಅವರೊಡನೆ ಹೇಳಿಕಳುಹಿಸಿದ್ದರು. ಮಹಾರಾಜ ಜಯಚಾಮರಾಜ್ ಒಡೆಯರ್ ಅವರು ಕೂಡ ಕಡಿದಾಳರನ್ನು ಕರೆಸಿ ಮಂತ್ರಿಮಂಡಲಕ್ಕೆ ಸೇರಬೇಕೆಂದು ಒತ್ತಾಯಪಡಿಸಿದ್ದರು. ಈ ಒತ್ತಡದಿಂದ ಕಡಿದಾಳರು ನಿಜಲಿಂಗಪ್ಪನವರ ಸಂಪುಟ ಸೇರಿಕೊಂಡರು. ಅವರಿಗೆ ಶಿಕ್ಷಣ ಖಾತೆಯನ್ನು ವಹಿಸಿದ್ದರು. ನಾಲ್ಕೂವರೆ ವರ್ಷಗಳು ೫-೬ ಖಾತೆಗಳನ್ನು ಹೊಂದಿದ್ದು ಬಿಡುವಿಲ್ಲದ ಕೆಲಸದಲ್ಲಿ ನಿರತರಾಗಿದ್ದುದರಿಂದ ಅವರಿಗೆ ಒಂದೇ ಖಾತೆಯನ್ನು ನಿಭಾಯಿಸುವುದು ಕಷ್ಟವಾಗಲಿಲ್ಲ.

ನಿಜಲಿಂಗಪ್ಪನವರು ಒಳ್ಳೆಯ ಸ್ವಭಾವದವರು. ಆದರೆ ಅವರದ್ದು ಹಿತ್ತಾಳೆ ಕಿವಿ, ಅವರ ನೆಚ್ಚಿನ ಹಿಂಬಾಲಕರು ಹೇಳಿದ್ದೆಲ್ಲವೂ ಅಪ್ಪಟ ಸತ್ಯವೆಂದು ನಂಬುವ ಸ್ವಭಾವದವರು. ಅವರ ಹಿತೈಷಿಗಳಂತೆ ವರ್ತಿಸುತ್ತಿದ್ದ ಕೆಲವರು ಶಿವಮೊಗ್ಗ ಜಿಲ್ಲೆಯ ಏಕೆ ಅವರಲ್ಲಿ ಕೆಲವರು ಕಡಿದಾಳರ ರಾಜಕೀಯ ವಿರೋಧಿಗಳಾಗಿದ್ದು ಅವರುಗಳು ಕಡಿದಾಳರ ಮೇಲೆ ಆಗಾಗ ನಿಜಲಿಂಗಪ್ಪನವರಿಗೆ ಚಾಡಿ ಹೇಳುತ್ತಿದ್ದರು. ರಾಜಕಾರಣದಲ್ಲಿ ಚಾಡಿಮಾತಿಗೆ ಪ್ರಾಶಸ್ತ್ಯ ತಾನೆ? ಕಡಿದಾಳರು ಪಿತೂರಿ ಸ್ವಭಾವದವರೆಂದು, ಅವರ ವರ್ಚಸ್ಸು ಬೆಳೆಯಲು ಅವಕಾಶ ಕೊಟ್ಟರೆ ಮುಂದೆ ಅವರು ನಾಯಕ ಸ್ಥಾನಕ್ಕೆ ಸ್ಪರ್ಧಿಸುವುದು ಖಚಿತವೆಂದು ಆಗಾಗ ನಿಜಲಿಂಗಪ್ಪನವರ ಕಿವಿಗೆ ಇಂಪಾಗುವಂತೆ ಹೇಳುತ್ತಿದ್ದರು. ಆದ್ದರಿಂದ ನಿಜಲಿಂಗಪ್ಪನವರಿಗೆ ಕಡಿದಾಳರ ವಿಚಾರದಲ್ಲಿ ಸಂಶಯ ಬರುವಂತಾಯಿತು. ಸಚಿವ ಸಂಪುಟದಲ್ಲಿದ್ದ ಇತರ ಕೆಲ ಸಚಿವರು ನಯವಿನಯ ಭಯಭಕ್ತಿಯಿಂದ ನಿಜಲಿಂಗಪ್ಪನವರೊಡನೆ ವರ್ತಿಸುತ್ತಿದ್ದರು. ಕಡಿದಾಳರು ಹಾಗೆ ವರ್ತಿಸುತ್ತಿರಲಿಲ್ಲ. ಅವರಿಗೆ ತಾನು ನಿಜಲಿಂಗಪ್ಪನವರಿಗಿಂತ ಮುಂಚೆ ಕಾಂಗ್ರೆಸ್ಸಿಗೆ ಸೇರಿದವನು. ಅವರಿಗಿಂತ ಮುಂಚೆ ಮುಖ್ಯಮಂತ್ರಿಯಾಗಿದ್ದೆನೆಂಬ ಕಾರಣದಿಂದ ತನಗೆ ಅಹಂಭಾವವೂ ಇತ್ತೆಂದು ಕಡಿದಾಳರೆ ಒಪ್ಪಿಕೊಳ್ಳುತ್ತಾರೆ. ಇದು ಮನುಷ್ಯನ ಸಹಜವಾದ ಗುಣ.

ಒಂದುಸಾರಿ ಕಡಿದಾಳರಿಗೂ ನಿಜಲಿಂಗಪ್ಪನವರಿಗೂ ಶೀಥಲ ಸಮರವಾಗುವ ಸಂದರ್ಭ ಬಂದಿತು. ಕಡಿದಾಳರು ಶಿಕ್ಷಣ ಸಚಿವರಾದ್ದರಿಂದ ಸಂಬಂಧಿಸಿದ ವಿಚಾರಗಳಲ್ಲಿ ತನಗೆ ಸಂಪೂರ್ಣ ಹೊಣೆಗಾರಿಕೆಯ ಅಧಿಕಾರವಿದೆ ಎಂದು ಕಾರ್ಯ ನಿರ್ವಹಿಸುತ್ತಿದ್ದರು. ಮೈಸೂರು ವಿಶ್ವವಿದ್ಯಾಲಯಕ್ಕೆ ಸಿಂಡಿಕೇಟ್ ಸದಸ್ಯರನ್ನು ನೇಮಕ ಮಾಡುವಾಗ ನಿಜಲಿಂಗಪ್ಪನವರನ್ನು ಕೇಳದೆ ಮಾಜಿಮಂತ್ರಿಗಳಾಗಿದ್ದ ಎಲ್.ಸಿದ್ದಪ್ಪನವರನ್ನು, ಮಹಮದ್ ಷರೀಫ್ ಅವರನ್ನು, ಚಿತ್ರದುರ್ಗ ಜಿಲ್ಲೆಯ ವೀರಬಸಪ್ಪನವರನ್ನು ನೇಮಕ ಮಾಡಿದರು. ನೇಮಕಾತಿ ಆಜ್ಞೆ ಜಾರಿಗೆ ಬಂದಮೇಲೆ ನಿಜಲಿಂಗಪ್ಪನವರು ಕಡಿದಾಳರನ್ನು ಕರೆಸಿ ತನ್ನನ್ನು ಕೇಳದೆ ಯಾಕೆ ಸಿಂಡಿಕೇಟ್

ಸದಸ್ಯರನ್ನು ನೇಮಕ ಮಾಡಿದಿರಿ ಎಂದು ಕೇಳಿದರು. ಕಡಿದಾಳರು ನನ್ನ ಖಾತೆಗೆ ಸಂಬಂಧಪಟ್ಟ ವಿಚಾರವಾದ್ದರಿಂದ ತಮ್ಮನ್ನು ಕೇಳುವ ಅಗತ್ಯವಿಲ್ಲವೆಂದು ಉತ್ತರ ಕೊಟ್ಟರು. ನಿಜಲಿಂಗಪ್ಪನವರು ಕಡಿದಾಳರ ಮೇಲೆ ಅಸಮಾದಾನಪಟ್ಟರು. ಆನಂತರ ನಿಜಲಿಂಗಪ್ಪನವರು ಕಡಿದಾಳರನ್ನು ಸಂಶಯದಿಂದಲೇ ನೋಡ ಹತ್ತಿದರು. ಚಾಡಿ ಮಾತು ಫಲಿಸಿದ್ದಿತು.

## ಮತ್ತೊಮ್ಮೆ ಚಕಮಕಿ

೧೯೫೭ನೇ ಇಸವಿ ಮಾರ್ಚ್ ತಿಂಗಳಲ್ಲಿ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆಯಿತು. ಕಡಿದಾಳರು ಶೃಂಗೇರಿ ಕ್ಷೇತ್ರದಿಂದ ಅವಿರೋಧ ಆಯ್ಕೆಯಾದರು. ಹಿಂದಿನಸಾರಿ ತಮ್ಮ ಸ್ವಂತ ತಾಲ್ಲೂಕು ತೀರ್ಥಹಳ್ಳಿಯಲ್ಲಿ ಸ್ಪರ್ಧಿಸಿ ಗೆದ್ದವರು ಎರಡನೇ ಬಾರಿಗೆ ಶೃಂಗೇರಿಯಿಂದ ಸ್ಪರ್ಧಿಸಿದರು, ಅವರಿಗೆ ಎದುರಾಳಿಗಳೇ ಇರಲಿಲ್ಲ. ಶಾಸಕಾಂಗ ಪಕ್ಷದ ನಾಯಕನನ್ನು ಆಯ್ಕೆಮಾಡುವ ಸಲುವಾಗಿ ವೀಕ್ಷಕರಾಗಿ ಕೆ.ಸಿ.ರೆಡ್ಡಿ ಅವರು ದೆಹಲಿಯಿಂದ ಬಂದರು. ಅವರು ನಿಜಲಿಂಗಪ್ಪನವರು ಕೇವಲ ಐದು ತಿಂಗಳು ಮುಖ್ಯಮಂತ್ರಿಯಾದದ್ದರಿಂದ, ಅವರನ್ನು ತಪ್ಪಿಸಿ ಬೇರೊಬ್ಬರು ನಾಯಕರಾಗುವುದು ಕಾಂಗ್ರೆಸ್ ಪಕ್ಷದ ದೃಷ್ಟಿಯಿಂದ ಸಮಂಜಸವಲ್ಲವೆಂದು, ಕಾಂಗ್ರೆಸ್ ಪಕ್ಷದ ವರಿಷ್ಠ ಮಂಡಳಿಯ ತೀರ್ಮಾನವೆಂದು ಹೇಳಿದ್ದುದಲ್ಲದೆ, ಕಡಿದಾಳರು ನಾಯಕ ಸ್ಥಾನಕ್ಕೆ ಸ್ಪರ್ಧಿಸದಂತೆ ಅವರ ಮನ ಒಲಿಸಲು ತಿಳಿಸಿದ್ದಾರೆಂದು ಹೇಳಿದರು. ಕಾಂಗ್ರೆಸ್ ವರಿಷ್ಠ ಮಂಡಳಿಗೆ ಕಡಿದಾಳರ ಮೇಲೆ ಬಹಳ ವಾತ್ಸಲ್ಯವಿತ್ತು. ಆದ್ದರಿಂದ ನಾಯಕನ ಸ್ಥಾನಕ್ಕೆ ಸ್ಪರ್ಧಿಸುವುದಿಲ್ಲವೆಂದು ರೆಡ್ಡಿಯವರಿಗೆ ಕಡಿದಾಳರು ಭರವಸೆ ಇತ್ತರು. ಕಡಿದಾಳರ ಈ ನಿಲುವು ಹನುಮಂತಯ್ಯನವರಿಗೆ ಕೋಪ ತರಿಸಿ ಅವರು ಕಡಿದಾಳರನ್ನು ಹೇಡಿ ಎಂದು ಜರಿದರು. ವಿಶಾಲ ಮೈಸೂರಿನ ಮುಖ್ಯಮಂತ್ರಿಯಾಗಬೇಕೆಂಬ ಆಶೆಯನ್ನು ನಿಜಲಿಂಗಪ್ಪನವರು ಇಟ್ಟುಕೊಂಡಿದ್ದರಿಂದ ಕಡಿದಾಳರು ಮುಖ್ಯಮಂತ್ರಿಯಾಗದಂತೆ ತಡೆಯುವುದರಲ್ಲಿ ಅವರ ಕೈವಾಡವಿತ್ತೆಂದು ಹನುಮಂತಯ್ಯನವರು ಭಾವಿಸಿದ್ದರು. ನಿಜಲಿಂಗಪ್ಪನವರು ವಿಧಾನ ಮಂಡಲದ ಕಾಂಗ್ರೆಸ್ ಪಕ್ಷದ ನಾಯಕರಾಗಿ ಆಯ್ಕೆಯಾದ ಮೇಲೆ ರೆಡ್ಡಿಯವರು ಕಡಿದಾಳರಿಗೆ ತಾವು ಮಂತ್ರಿ ಮಂಡಲಕ್ಕೆ ಸೇರಿಕೊಳ್ಳಬೇಕೆಂದು, ತಾವು ನಿಜಲಿಂಗಪ್ಪನವರಿಗೆ ತಿಳಿಸಿರುವುದಾಗಿಯೂ, ಅದು ಕಾಂಗ್ರೆಸ್ ವರಿಷ್ಠ ಮಂಡಲಿಯ ತೀರ್ಮಾನವೆಂದು ತಿಳಿಸಿದರು. ನಿಜಲಿಂಗಪ್ಪನವರು ನಾಯಕರಾಗಿ ಆಯ್ಕೆಯಾದ ನಂತರ ಅಭಿನಂದಿಸಿದ್ದು ಬಿಟ್ಟರೆ ಕಡಿದಾಳರು ಮತ್ತೆ ಅವರನ್ನು ನೋಡಲು ಹೋಗಲಿಲ್ಲ. ನಿಜಲಿಂಗಪ್ಪನವರು ಎಂಟು ಜನರ ಮಂತ್ರಿಗಳ ಹೆಸರು ಪ್ರಕಟಿಸಿದರು. ಆದರೆ ಕಡಿದಾಳರನ್ನು ಸಂಪುಟಕ್ಕೆ

ತೆಗೆದುಕೊಳ್ಳಲಿಲ್ಲ. ನಂತರ ನಿಜಲಿಂಗಪ್ಪನವರು ಕಡಿದಾಳರನ್ನು ತಮ್ಮ ಮನೆಗೆ ಆಹ್ವಾನಿಸಿ, ಕಡಿದಾಳರಿಗೆ "ನೋಡಿ ಮಂಜಪ್ಪನವರೆ ನಾನು ಈಗಾಗಲೇ ಎಂಟು ಜನ ಮಂತ್ರಿಗಳನ್ನು ನೇಮಿಸಿಕೊಂಡಿದ್ದೇನೆ. ನನ್ನ ಸ್ನೇಹಿತರು ನಿಮ್ಮನ್ನು ಸಂಪುಟಕ್ಕೆ ಸೇರಿಸಿಕೊಳ್ಳಬಾರದೆಂದು ಆಗ್ರಹಪಡಿಸುತ್ತಿದ್ದಾರೆ. ಏನು ಮಾಡಬೇಕೆಂದು ಯೋಚಿಸುತ್ತಿದ್ದೇನೆ" ಎಂದರು.

ನಿಜಲಿಂಗಪ್ಪನವರ ಮಾತು ಕೇಳಿ ಕಡಿದಾಳರು ಕೆಂಡಮಂಡಲವಾದರು. ಅವರು ಕೋಪೋದ್ರಿಕ್ತರಾಗಿ ನಾನು ಮಂತ್ರಿಪದವಿಗಾಗಿ ಅರ್ಜಿ ಹಾಕಿಕೊಂಡಿಲ್ಲವೆಂದು, ತನ್ನ ನೇಮಕದ ವಿಚಾರವನ್ನು ತಾವು ಪರಿಶೀಲನೆ ಮಾಡಬೇಕಾಗಿಲ್ಲವೆಂದು ಗಡುಸಾಗಿ ಹೇಳಿದರು. ನಿಜಲಿಂಗಪ್ಪನವರು ಹಾಗಾದರೆ ನನ್ನ ಮಂತ್ರಿಮಂಡಲಕ್ಕೆ ನಿಮ್ಮ ಸಹಕಾರವೇನು? ಎಂದು ಪ್ರಶ್ನಿಸಿದರು. ಅದಕ್ಕುತ್ತರವಾಗಿ ಕಡಿದಾಳರು "ಎಲ್ಲೀತಂಕ ನಿಮ್ಮ ಆಡಳಿತ ಸರಿಯಾಗಿರುವುದೋ ಅಲ್ಲೀತಂಕ ನನ್ನ ಸಹಕಾರ ಇದ್ದೇ ಇದೆ" ಎಂದು ಹೇಳಿ ಹೊರಬಂದರು. ಮಂತ್ರಿ ಪದವಿ ಸಿಗಲಿಲ್ಲವೆಂದು ಕಡಿದಾಳರು ದೆಹಲಿ ವರಿಷ್ಠರಿಗೆ ದೂರುಕೊಡಲಿಲ್ಲ. ನಿಜಲಿಂಗಪ್ಪನವರ ಸರ್ಕಾರವನ್ನು ಉರುಳಿಸುವ ಪಿತೂರಿಯನ್ನು ಅವರು ಮಾಡಲಿಲ್ಲ. ಕಡಿದಾಳರನ್ನು ಸಂಪುಟಕ್ಕೆ ಸೇರಿಸಿಕೊಳ್ಳಿ ಎಂದವರು ಕಡಿದಾಳರನ್ನು ಯಾಕೆ ಸೇರಿಸಿಕೊಳ್ಳಲಿಲ್ಲ ಎಂದು ಕೇಳಲೂ ಇಲ್ಲ. ಇದೇ ತೆರೆಮರೆಯ ರಾಜಕಾರಣ. ಸ್ವಾಭಿಮಾನ ವ್ಯಕ್ತಿಯೊಬ್ಬನ ಗುಣವನ್ನು ನಾವು ಕಡಿದಾಳರಲ್ಲಿ ಕಾಣಬಹುದು.

## ನಗುವಾಗ ಎಲ್ಲ ನೆಂಟರು, ಅಳುವಾಗ?

ಮಾಡಲು ಕೆಲಸವಿಲ್ಲದೆ ಶಾಸಕ ಕಡಿದಾಳರು ಆರ್ಥಿಕವಾಗಿ ಕಷ್ಟಕ್ಕೆ ಸಿಕ್ಕಿಬಿದ್ದರು. ಮಂತ್ರಿ, ಮುಖ್ಯಮಂತ್ರಿಯಾಗಿದ್ದವರೊಬ್ಬರು ಹೀಗೆ ಆರ್ಥಿಕವಾಗಿ ಅಧೋಗತಿಗೆ ಹೋಗಿರುವುದು ಕರ್ನಾಟಕ ರಾಜಕಾರಣದಲ್ಲಿ ಬಹಳ ವಿರಳ. ಒಂದು ಅವಧಿಗೆ ಶಾಸಕರಾದವರು ಆಸ್ತಿ ಭೂಮಿ ಮನೆ ಕೈತುಂಬ ಹಣ ಮಾಡಿಕೊಂಡು ಐಶಾರಾಮ ಜೀವನ ನಡೆಸುತ್ತಿರುವುದನ್ನು ನಾವು ಕಣ್ಣಾರೆ ಕಾಣುತ್ತಿದ್ದೇವೆ. ಕಡಿದಾಳರಿಗೆ ಬೆಂಗಳೂರಿನಲ್ಲಿ ಸ್ವಂತ ಮನೆ ಇರಲಿಲ್ಲ. ಅವರ ಹೆಂಡತಿ ಮಕ್ಕಳಲ್ಲದೆ ಅವರ ಜೊತೆಯಲ್ಲಿ ಅವರ ತಮ್ಮ ಶ್ರೀನಿವಾಸ ಅವರೂ, ತಮ್ಮ ತಮ್ಮಯ್ಯ ಗೌಡರ ಮಗ ಸುರೇಂದ್ರ ಅವರು ಜೊತೆಯಲ್ಲಿದ್ದು ಓದುತ್ತಿದ್ದರು. ಆರ್ಥಿಕವಾಗಿ ಕಷ್ಟಕ್ಕೆ ಸಿಕ್ಕಿಬಿದ್ದ ಕಡಿದಾಳರಿಗೆ ಮುಂದೇನು ಮಾಡಬೇಕೆಂದು ತಿಳಿಯಲಿಲ್ಲ. ಶಿವಮೊಗ್ಗೆಗೆ ಹೋಗಿ ಮತ್ತೆ ವಕೀಲವೃತ್ತಿ ಪ್ರಾರಂಭಿಸಲು ಶಿವಮೊಗ್ಗೆಯಲ್ಲಿದ್ದಾಗ ಕೊಂಡುಕೊಂಡ ಮನೆಯನ್ನು ಶಿವಮೊಗ್ಗ ಬಿಡುವಾಗ ಮಾರಿಬಿಟ್ಟಿದ್ದರು. ದಿಕ್ಕು ತೋಚದಂತಾಗಿ ಊರಿಗೆ ಹೋಗಿ

ಅವಿಭಕ್ತಕುಟುಂಬದಲ್ಲಿ ಜೀವನ ಮಾಡುವ ದಾರಿ ತೋರಿತು. ಶಾಲೆ ಕಾಲೇಜಿಗೆ ರಜೆ ಇದ್ದುದರಿಂದ ಹುಡುಗರಿಬ್ಬರು ಊರಿಗೆ ಹೋಗಿದ್ದರು. ಆದ್ದರಿಂದ ಕಡಿದಾಳರು ಹೆಂಡತಿಮಕ್ಕಳನ್ನು ಕಟ್ಟಿಕೊಂಡು ಹೆಂಡತಿಯ ತವರುಮನೆ ಅತ್ತಿಕೊಂಡಕ್ಕೆ ಹೋದರು. ಅವರು ಊರಿಗೆಹೋದಾಗ ಅವರನ್ನು ಮುಂಚೆ ಭಯಭಕ್ತಿಯಿಂದ ಕಾಣುತ್ತಿದ್ದವರು ಈಗ ಅಷ್ಟೇನು ಸಂಭ್ರಮದಿಂದ ಕಾಣಲಿಲ್ಲ. ಕಡಿದಾಳರ ಅಧಿಕಾರ ಅವಧಿಯಲ್ಲಿ ಲಾಭಪಡೆದವರು ಅವರೆಲ್ಲ. ಕಡಿದಾಳರ ಹೆಂಡತಿಯ ಬಂಧು ನಾಲೂರು ಶಂಕರಪ್ಪ ಗೌಡರು ಕಡಿದಾಳರು ಹೆಂಡತಿ ಮಕ್ಕಳನ್ನು ಕರೆದುಕೊಂಡು ಬೆಂಗಳೂರಿಗೆ ಹೋಗಬೇಕೆಂದು, ತಾವು ಬಂಧುಗಳು ಅವರು ಅಧಿಕಾರದಲ್ಲಿದ್ದಾಗ ಸಹಾಯ ಪಡೆದಿದ್ದುದರಿಂದ ತಾವೆಲ್ಲಸೇರಿ ಅವರಿಗೆ ತಿಂಗಳ ಖರ್ಚಿಗೆ ಸಾವಿರ ರೂಪಾಯಿ ಕಳಿಸುವುದಾಗಿ ಹೇಳಿದರು. ಅವರದು ಹುಸಿ ಭರವಸೆಯಷ್ಟೆ. ಕಡಿದಾಳರಿಗೆ ಅನಂತರ ಅವರು ಬರೆದ ಪತ್ರದಲ್ಲಿ ತಾವು ಈಗ ಕಷ್ಟದಲ್ಲಿರುವುದಾಗಿಯು ತಮಗೊದಗಿದ ಕಷ್ಟಕ್ಕೆ ತಾವು ವ್ಯಥೆಪಡುತ್ತಿರುವುದಾಗಿಯು ಬರೆದು ಕೈತೊಳೆದುಕೊಂಡರು. ಕಡಿದಾಳರು ತಮ್ಮ ಊರಿಗೆ ಹೋಗಿ ತಮ್ಮಂದಿರೊಂದಿಗೆ ಸುಮಾರು ಇಪ್ಪತ್ತು ದಿನಗಳು ಇದ್ದರು. ಅವರ ಹೆಂಡತಿಗೆ ಅವಿಭಕ್ತ ಕುಟುಂಬದ ವಾತಾವರಣ ಹಿಡಿಸಲಿಲ್ಲ. ಅವರು ಶ್ರೀಮಂತರ ಮಗಳು, ಸುಖದಲ್ಲಿ ಬೆಳೆದವರು. ಅವರು ಮಕ್ಕಳನ್ನು ಓದಿಸುವ ಸಲುವಾಗಿ ಬೆಂಗಳೂರಿಗೆ ಹೋಗಲು ಯಜಮಾನರಿಗೆ ಕಿವಿಮಾತು ಹೇಳಿದರು. ಕಡಿದಾಳರು ಮಂತ್ರಿಯಾಗಿದ್ದಾಗ ಅವರ ಕೈಕೆಳಗೆ ಎ.ಸಿ.ಯಾಗಿದ್ದ ನಂಜುಂಡಪ್ಪನವರಿಗೆ ಪತ್ರ ಬರೆದು ಒಂದು ಸಣ್ಣ ಮನೆಯನ್ನು ಗೊತ್ತುಮಾಡಲು ಬರೆದರು. ಅವರು ನೂರಾಇಪ್ಪತ್ತು ರೂಪಾಯಿಗೆ ಬಾಡಿಗೆ ಮನೆಯನ್ನು ಗೊತ್ತು ಮಾಡಿದರು. ಹಾಗಾಗಿ ಕಡಿದಾಳರ ಕುಟುಂಬ ಬೆಂಗಳೂರಿಗೆ ಪ್ರಯಾಣ ಬೆಳೆಸಿತು. ಕಡಿದಾಳರ ಕತೆ ನಗುವಾಗ ಎಲ್ಲ ನೆಂಟರು. ಅಳುವಾಗ ಯಾರೂ ಇಲ್ಲ ಎನ್ನುವಂತಾಯಿತು.

## ಮನೆಗೆ ಬಂದ ಜಗದ್ವಿಖ್ಯಾತ ವ್ಯಕ್ತಿ

ಬೆಂಗಳೂರಿಗೆ ಬಂದ ಮೇಲೂ ಕಡಿದಾಳರಿಗೆ ಸಹಾಯಮಾಡುವ ಕೈಗಳಿದ್ದವು. ಅವರಿಂದ ಹಣ ತೆಗೆದುಕೊಂಡು ಜೀವನ ಮಾಡುವ ಮನಸ್ಸಾಗಲಿಲ್ಲ ಅವರಿಗೆ. ಆತ್ಮಗೌರವವನ್ನು ಕಾಪಾಡಿಕೊಂಡು ಜೀವನ ಮಾಡಲು ನೋಡಿದರು. ಊರಿಂದ ಅವರ ತಮ್ಮ ತಮ್ಮಯ್ಯ ಎರಡು ಮೂರು ಬಾರಿ ನಾನೂರು, ಐನೂರು ಹಣ ಕಳುಹಿಸಿದರು. ತಮ್ಮಂದಿರನ್ನು ಅವಲಂಬಿಸಿ ಜೀವನ ನಿರ್ವಹಿಸಲು ಕಡಿದಾಳರು ಸಿದ್ಧರಿರಲಿಲ್ಲ. ಅವರು ಮತ್ತೆ ವಕೀಲಿ ವೃತ್ತಿ ಮಾಡುವುದೆಂದು ತೀರ್ಮಾನಿಸಿದರು. ರಾಜ್ಯ ಹೈಕೋರ್ಟ್ ಮುಖ್ಯ ನ್ಯಾಯಾಧೀಶರಾದ ಹೊಂಬೇಗೌಡರು ಕಡಿದಾಳರ

ಮನೆಗೆ ಬಂದು ವಕೀಲ ವೃತ್ತಿ ಮಾಡಲು ಪ್ರೋತ್ಸಾಹಿಸಿದರು. ಕೆಲವು ಮಿತ್ರರಿಗೆ ತನ್ನ ನಿರ್ಧಾರವನ್ನು ತಿಳಿಸಿ ಕಡಿದಾಳರೂ ಕಾಗದ ಬರೆದರು. ಮಳವಳ್ಳಿಯ ಹಳೆಯ ಕಾಂಗ್ರೆಸ್ಸಿಗರಾಗಿದ್ದ ವೀರಪ್ಪನವರು ಸಿಟ್ಟಾಗಿ "ತಾವು ಮುಖ್ಯಮಂತ್ರಿಯಾಗಿದ್ದವರು, ವಕೀಲಿ ವೃತ್ತಿಯನ್ನು ಮಾಡುವುದು ಅಗೌರವ, ನೀವು ವಕೀಲಿ ಬೋರ್ಡ್ ಹಾಕಿದರೆ ನಾನು ಕಿತ್ತು ಹಾಕುತ್ತೇನೆ" ಎಂದು ಬರೆದರು. ಕಡಿದಾಳರು ಅವರ ಮಾತಿಗೆ ಬೆಲೆಕೊಡದೆ ವಕೀಲಿವೃತ್ತಿ ಶುರುಮಾಡಿದರು. ನ್ಯಾಯ ರೀತಿಯಲ್ಲಿ ಸಂಪಾದನೆ ಮಾಡುವುದು ಶ್ರೇಷ್ಠ ಎಂದು ತಿಳಿದರು. ಎಂ.ಎಸ್.ಗೋಪಾಲ್ ಎಂಬ ಕಿರಿಯ ವಕೀಲರನ್ನು ನೇಮಿಸಿಕೊಂಡರು. ಕೇಸುಗಳು ಬರಹತ್ತಿದವು. ತನ್ನ ಕೈಕೆಳಗೆ ಕೆಲಸ ಮಾಡುತ್ತಿದ್ದವರ ಮುಂದೆ ಹಾಜರಾಗಬೇಕಾದ ಪ್ರಸಂಗ ಬಂದುದು ಮೊದಮೊದಲು ಮುಜುಗರ ತಂದರೂ ಅನಂತರ ಅದಕ್ಕೆ ಹೊಂದಿಕೊಂಡರು. ತಿಂಗಳಿಗೆ ಏಳುನೂರಕ್ಕಿಂತ ಕಡಿಮೆ ಸಂಪಾದನೆಯಾಗ ಹತ್ತಿತು. ಶಿವಮೊಗ್ಗೆಯಲ್ಲಿ ತಿಂಗಳಿಗೆ ಸಾವಿರ ಸಂಪಾದನೆ ಇತ್ತು.

ವಕೀಲ ವೃತ್ತಿ ಆರಂಭಿಸಿದ ಒಂದು ತಿಂಗಳಿನಲ್ಲಿ ಒಂದುದಿನ ಜಗದ್ವಿಖ್ಯಾತ ಸರ್ ಎಂ.ವಿಶ್ವೇಶ್ವರಯ್ಯನವರು ಕಡಿದಾಳರನ್ನು ನೋಡಲು ಬಂದರು. ಅಂತಹ ಮಹಾನ್ ವ್ಯಕ್ತಿಯೊಬ್ಬರು ತನ್ನ ಮನೆಗೆ ಬರುತ್ತಾರೆಂದು ಕಡಿದಾಳರು ಕನಸು ಮನಸಿನಲ್ಲಿಯೂ ತಿಳಿದಿರಲಿಲ್ಲ. ಕಡಿದಾಳರು ತಾವೇಕೆ ಬಂದಿರಾ? ಹೇಳಿಕಳುಹಿಸಿದ್ದರೆ ನಾನೆ ಬರುತ್ತಿದ್ದೆನಲ್ಲ ಎಂದರು. ಸರ್.ಎಂ.ವಿ.ಯವರು ಬಹಳ ವರ್ಷಗಳ ನಂತರ ಮೈಸೂರು ರಾಜ್ಯದಲ್ಲಿ ಒಬ್ಬ ಪ್ರಾಮಾಣಿಕ ವ್ಯಕ್ತಿಯನ್ನು ಗುರುತಿಸಿದ್ದೇನೆ. ಅದಕ್ಕಾಗಿ ಸ್ಫೂರ್ತಿ ಪಡೆಯಲು ಬರುತ್ತಿದ್ದೇನೆ ಎಂದರು. ಅನಂತರವೂ ಸರ್.ಎಂ.ವಿ.ಯವರು ಕಡಿದಾಳರನ್ನು ಆಗಾಗ ಬಂದು ಭೇಟಿಯಾಗುತ್ತಿದ್ದರು. ಸರ್.ಎಂ.ವಿ.ಯವರು ಜಾತ್ಯತೀತ ವ್ಯಕ್ತ ಎಂದು ಕಡಿದಾಳರು ಹೇಳುತ್ತಾರೆ. ಮಿಲ್ಲರ್ ಸಮಿತಿಯ ವರದಿಯನ್ನು ಒಪ್ಪದೆ ಅವರು ದಿವಾನ್ ಹುದ್ದೆಗೆ ರಾಜೀನಾಮೆ ಕೊಟ್ಟಿದ್ದರಿಂದ, ಅವರು ಬ್ರಾಹ್ಮಣೇತರ ವಿರೋಧಿ ಎಂದು ಕೆಲವರು ತಿಳಿದುಕೊಂಡಿದ್ದರು. ಅದು ತಪ್ಪು ಭಾವನೆ ಎಂದು ಕಡಿದಾಳರು ಅಭಿಪ್ರಾಯಪಡುತ್ತಾರೆ. ಅವರು ಬ್ರಾಹ್ಮಣೇತರರ ವಿರೋಧಿಯಾಗಿದ್ದರೆ ಬಿ.ಪಿ.ನಾರಾಯಣ ರೆಡ್ಡಿಯವರನ್ನು ಮೈಸೂರು ಬ್ಯಾಂಕಿನ ಮೇನೇಜರ್ ಆಗಿ ನೇಮಿಸುತ್ತಿರಲಿಲ್ಲ ಎಂದು ಹೇಳುತ್ತಾರೆ. ಆಮೇಲೂ ಸರ್.ಎಂ.ವಿ.ಯವರು ಕಡಿದಾಳರ ಮನೆಗೆ ಬಂದಿದ್ದರು. ಕಡಿದಾಳರೂ ಅವರನ್ನು ನೋಡಲು ಹೋಗುತ್ತಿದ್ದರು. ಅನಾರೋಗ್ಯದಿಂದ ಹಾಸಿಗೆ ಹಿಡಿದು ಪ್ರಜ್ಞೆ ಹೋಗುವ ಮೊದಲು ಎಂ.ವಿ.ಯವರು ತಮ್ಮನಮಗ ಕೃಷ್ಣಮೂರ್ತಿಯವರಿಗೆ ಅವಶ್ಯಕತೆ ಬಿದ್ದರೆ ಕಡಿದಾಳರ ಅಥವಾ

ನಾರಾಯಣ ರೆಡ್ಡಿಯವರ ನೆರವು ಪಡೆದುಕೊ ಎಂದು ಹೇಳಿದ್ದರು.

## ಭಾಗ್ಯಲಕ್ಷ್ಮಿ ತೊಲಗಾಚೆ

೧೯೫೦ನೇ ಇಸವಿಯ ಅಂತ್ಯಭಾಗದಲ್ಲಿ ರಾಜಪ್ರಮುಖ ಜಯಚಾಮರಾಜೇಂದ್ರ ಒಡೆಯರ್ ಅವರು ಬೆಂಗಳೂರಿನ ಅರಮನೆಯಲ್ಲಿ ತಂಗಿದ್ದರು. ಕಡಿದಾಳರ ಮೇಲೆ ಅವರಿಗೆ ತುಂಬಾ ವಿಶ್ವಾಸವಿದ್ದಿತು. ಅವರನ್ನು ನೋಡಲು ಕಡಿದಾಳರು ಅರಮನೆಗೆ ಹೋದರು. ರಾಜಪ್ರಮುಖರನ್ನು ಭೇಟಿಮಾಡಿ ಅವರೊಂದಿಗೆ ಮಾತುಕತೆಯಾಡಿ ಹೊರಗೆ ಬಂದಾಗ ಮಹಾರಾಜರ ಕಾರ್ಯದರ್ಶಿ ಮೇಜರ್ ಮಹದೇವಯ್ಯನವರು ಮಹಾಸ್ವಾಮಿಯವರು ತಮಗೆ ಪ್ಯಾಲೇಸ್ ಆರ್ಚರ್ಡ್‌ನಲ್ಲಿ ವಸತಿಗೃಹ ಕಟ್ಟಿಕೊಳ್ಳಲು ಒಂದು ಎಕರೆ ಭೂಮಿಯನ್ನು ರಿಯಾಯಿತಿ ದರ ಹತ್ತು ಸಾವಿರ ರೂಪಾಯಿಗೆ ಕೊಡಲು ಇಚ್ಛಿಸಿದ್ದಾರೆಂದು ಮುಂದೆ ಆ ಜಾಗ ಬಹಳ ಬೆಲೆಯುಳ್ಳ ಜಾಗವಾಗುತ್ತದೆಂದು ತಾವು ಅದನ್ನು ತೆಗೆದುಕೊಳ್ಳಬೇಕೆಂದು ಹೇಳಿದರು. ಕೆಲವು ರಾಜಕಾರಿಣಿಗಳು ಅದೇ ಪ್ಯಾಲೇಸ್ ಆರ್ಚರ್ಡ್‌ನಲ್ಲಿ ಮಹಾರಾಜರಿಂದ ಎಕರೆ ಒಂದಕ್ಕೆ ತಲಾ ಹತ್ತುಸಾವಿರ ರೂಪಾಯಿಗೆ ಕೊಂಡ ವಿಷಯ ಕಡಿದಾಳರಿಗೆ ತಿಳಿದಿತ್ತು. ಮಹಾರಾಜರಿಗೆ ಕಡಿದಾಳರ ಮೇಲಿದ್ದ ಗೌರವ ಮತ್ತು ವಿಶ್ವಾಸವನ್ನು ದುರುಪಯೋಗಪಡಿಸಿಕೊಳ್ಳಲು ಅವರು ಇಷ್ಟಪಡಲಿಲ್ಲ. ಆದ್ದರಿಂದ ಮಹಾರಾಜರ ಔದಾರ್ಯಕ್ಕಾಗಿ ತನ್ನ ಕೃತಜ್ಞತೆಗಳನ್ನು ತಿಳಿಸಬೇಕೆಂದು, ತನಗೆ ಭೂಮಿ ಬೇಡವೆಂದು ಮಹದೇವಯ್ಯನವರಿಗೆ ತಿಳಿಸಿದರು. ಮಹದೇವಯ್ಯ ಖಿನ್ನ ಮನಸ್ಕನಾಗಿ "ಸಾರ್ ಒಳ್ಳೆಯ ಅವಕಾಶ ಕಳೆದುಕೊಳ್ತೀರಿ" ಎಂದರು. ಕಡಿದಾಳರು ಮತ್ತೊಮ್ಮೆ ಕುಂಟುನೆಪ ಹೇಳಿ ತಪ್ಪಿಸಿಕೊಂಡರು. ಈ ಸುದ್ದಿ ಕೇಳಿ ಕಡಿದಾಳರ ಹಿತೈಷಿಗಳು "ಮನೆಗೆ ಬರಲೊಪ್ಪಿದ ಭಾಗ್ಯಲಕ್ಷ್ಮಿಯನ್ನು ಒದ್ದು ಓಡಿಸಿದಿರಿ" ಎಂದು ಮೂದಲಿಸಿ ಮಾತನಾಡಿದರು. ಕಡಿದಾಳರು ಈ ಪ್ರಕರಣದಲ್ಲಿ ತನ್ನ ವರ್ತನೆಗೆ ಎಂದೂ ಪಶ್ಚಾತ್ತಾಪ ಪಡಲಿಲ್ಲ. ಮಹದೇವಯ್ಯನವರಿಗೆ ಕಡಿದಾಳರು ಹುಚ್ಚರಾಗಿ ಕಂಡಿರಬೇಕು. ಅವರಿಗೇಕೆ ಬಹಳಜನರಿಗೂ ಕಡಿದಾಳರು ಹುಚ್ಚು ಮನುಷ್ಯರಾಗಿದ್ದರು. ಗೊಬ್ಬರದ ಗುಂಡಿಯಲ್ಲಿ ದುಂಬಿಗಳನ್ನು ಆಕರ್ಷಿಸುವ ಸುಂದರ ಹೂವುಗಳು ಅರಳುತ್ತವೆ ಅಲ್ಲವೆ?

## ಮಾಜಿ ಮುಖ್ಯಮಂತ್ರಿಗಳು ಮನೆ ಕಟ್ಟಿಕೊಂಡ ಕತೆ

ಕಡಿದಾಳರು ಬಾಡಿಗೆ ಮನೆಯಲ್ಲಿದ್ದು ವಕೀಲ ವೃತ್ತಿ ಮಾಡುತ್ತಿರುವುದು ನಗರಾಭಿವೃದ್ಧಿ ಮಂಡಳಿಯ ಅಧ್ಯಕ್ಷ ಲಂಕಪ್ಪನವರಿಗೆ ತಿಳಿಯಿತು. ಅವರಿಗೆ ಕಡಿದಾಳರ ಮೇಲೆ ಬಹಳ ಪ್ರೀತಿ, ವಿಶ್ವಾಸ. ಇಬ್ಬರೂ ಪೂನಾದಲ್ಲಿ ಎಲ್.ಎಲ್.ಬಿ.ಓದುವಾಗ

ಒಟ್ಟಿಗೆ ಒಂದೇ ಮನೆಯಲ್ಲಿ ವಾಸಮಾಡುತ್ತಿದ್ದರು. ಅವರು ಕಡಿದಾಳರನ್ನು ನೋಡಲು ಬಂದವರು ನಗರಾಭಿವೃದ್ಧಿ ಮಂಡಳಿಗೆ ಮನೆ ಕಟ್ಟಿಕೊಳ್ಳಲು ಅರ್ಜಿ ಸಲ್ಲಿಸಬೇಕೆಂದು, ತಾವು ನಿವೇಶನವನ್ನು ಕೊಡುವುದಾಗಿ ತಿಳಿಸಿದರು. ಮಂತ್ರಿ ಮುಖ್ಯಮಂತ್ರಿಯಾಗಿದ್ದ ಸ್ನೇಹಿತರು ಬಾಡಿಗೆ ಮನೆಯಲ್ಲಿರುವುದು ಅವರಿಗೆ ದುಃಖವನ್ನುಂಟು ಮಾಡಿತ್ತು. ಈಗ ಮಂತ್ರಿಯಾಗಿರದೆ ಜನಸಾಮಾನ್ಯನಾದುದರಿಂದ ಒಂದು ನಿವೇಶನವನ್ನು ಪಡೆದರೆ ಯಾವ ಆರೋಪವೂ ಬರುವುದಿಲ್ಲವೆಂದು ಹೇಳಿದರು. ಕಡಿದಾಳರು ಅರ್ಜಿಯನ್ನು ಹಾಕಿದರು. ನಗರಾಭಿವೃದ್ಧಿ ಮಂಡಳಿಯು ೮೦x೬೦ ಅಡಿ ವಿಸ್ತೀರ್ಣದ ಒಂದು ನಿವೇಶನವನ್ನು ಐದುಸಾವಿರದ ಮುನ್ನೂರನಲವತ್ತನಾಲ್ಕು ರೂಪಾಯಿಗೆ ಮಂಜೂರು ಮಾಡಿತು. ಆದರೆ ಕಡಿದಾಳರ ಶ್ರೀಮತಿಯವರು ಮಂಜೂರಾದ ನಿವೇಶನವು ಬೆಂಗಳೂರು ಅರಮನೆಯ ಎದುರು ಇದ್ದು, ಮದರಾಸು ರೈಲ್ವೆ ಲೈನಿನ ಹತ್ತಿರವಾಗಿದ್ದುದರಿಂದ ರೈಲು ಓಡಾಟದ ಸದ್ದುಗದ್ದಲ ದೆಸೆಯಿಂದ ಅಲ್ಲಿ ವಾಸಮಾಡುವುದು ಕಷ್ಟವೆಂದು ದೂರಿಕೊಂಡರು. ಯಜಮಾನರಿಗೂ ಅದು ಸರಿಕಂಡಿತು. ಲಂಕಪ್ಪನವರ ಗಮನಕ್ಕೆ ಈ ವಿಷಯವನ್ನು ತಂದಾಗ ಅವರು ಮಂಜೂರಾದ ಸೈಟನ್ನು ಬಿಡಬಾರದೆಂದು, ನಿವೇಶನದ ಹಣವನ್ನು ಪಾವತಿ ಮಾಡಿದಮೇಲೆ ಬೇರೆ ನಿವೇಶನ ಕೇಳಿ ಅರ್ಜಿ ಕೊಡಬೇಕೆಂದು ತಿಳಿಸಿದರು. ಕಡಿದಾಳರಿಗೂ ಅದು ಸರಿಕಂಡಿತು. ನಿವೇಶನದ ಬೆಲೆಯನ್ನು ಕಟ್ಟಿದರು. ಬದಲಿ ನಿವೇಶನವು ೧೮-೦೭-೧೯೬೦ ರಂದು ಪ್ಯಾಲೇಸ್ ಆರ್ಚ್‌ರ್ಡ್‌ನಲ್ಲಿ ಮಂಜೂರಾಯಿತು. ೧೯೬೩ನೇ ಇಸವಿಯಲ್ಲಿ ಮನೆಕಟ್ಟಲು ಪ್ರಾರಂಭಿಸಿದರು. ಶಿವಮೊಗ್ಗ ಮನೆಯನ್ನು ಮಾರಾಟ ಮಾಡಿದ ಹಣ ಹನ್ನೆರಡು ಸಾವಿರ ರೂಪಾಯಿಯನ್ನು ಖರ್ಚುಮಾಡದೆ ಹಾಗೆ ಬ್ಯಾಂಕಿನಲ್ಲಿಟ್ಟಿದ್ದರು. ಅದು ಈಗ ಪ್ರಯೋಜನಕ್ಕೆ ಬಂದಿತು. ಶಿವಮೊಗ್ಗೆಯಲ್ಲಿ ವಕೀಲ ವೃತ್ತಿ ಮಾಡುವಾಗ ಬಂದ ಸಂಪಾದನೆಯಲ್ಲಿ ಒಂಭತ್ತು ಸಾವಿರ ರೂಪಾಯಿಯನ್ನು ಶಿವಮೊಗ್ಗೆಯ ಹತ್ತಿರದ ಬಂಧು ಡಿ.ಆರ್.ರತ್ನಾಕರ್ (ಕಡಿದಾಳರ ಸೋದರಳಿಯ ಎನ್.ಡಿ.ವೆಂಕಟೇಶ್ ಅವರ ಹೆಂಡತಿಯ ಸಹೋದರ ರತ್ನಾಕರ್. ಅವರ ಹಿರಿಯ ಸಹೋದರಿಯನ್ನು ಕುವೆಂಪು ಅವರಿಗೆ ಕೊಟ್ಟದ್ದಿತು.) ಅವರ ಮಂಡಿಯಲ್ಲಿಟ್ಟಿದ್ದರು. ಅದನ್ನು ವಾಪಾಸು ಪಡೆದುದಲ್ಲದೇ ಮನೆಕಟ್ಟಲು ಗೃಹಮಂಡಳಿಯಿಂದ ಇಪ್ಪತ್ತು ಸಾವಿರ ರೂಪಾಯಿ ಸಾಲಪಡೆದರು. ಆಗ ನಗರಾಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿದ್ದ ಹೆಚ್.ಎಲ್.ತಿಮ್ಮೇಗೌಡರು ಸುಲಭ ಕಂತುಗಳಲ್ಲಿ ಕಟ್ಟಲು ಅವಕಾಶ ಮಾಡಿಕೊಟ್ಟರು. ಈ ಎಲ್ಲ ಮಹನೀಯರುಗಳನ್ನು ಕಡಿದಾಳರು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ. ಇದು ರಾಜ್ಯದ ಮುಖ್ಯಮಂತ್ರಿಯಾಗಿದ್ದವರೊಬ್ಬರು ಮನೆ ಕಟ್ಟಿಕೊಂಡ ದಾರುಣ ಕತೆ.

## ಮತ್ತೆ ಕಂದಾಯ ಸಚಿವರಾದದ್ದು

೧೯೫೮ನೇ ಇಸವಿ ಮಾರ್ಚ್ ತಿಂಗಳನಲ್ಲಿ ಮುಖ್ಯಮಂತ್ರಿ ನಿಜಲಿಂಗಪ್ಪನವರು ಬಹುಮಂಧಿ ಶಾಸಕರ ಬೆಂಬಲವನ್ನು ಕಳೆದುಕೊಂಡಿದ್ದರಿಂದ ರಾಜೀನಾಮೆ ಕೊಡಬೇಕಾಯಿತು. ಶಾಸಕಾಂಗ ಪಕ್ಷದ ನಾಯಕ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಬಿ.ಡಿ.ಜತ್ತಿಯವರು ನಾಯಕರಾಗಿ ಆಯ್ಕೆಯಾದರು. ಜತ್ತಿಯವರು ಕಡಿದಾಳರಿಗೆ ಫೋನ್ ಮುಖಾಂತರ ಮಾತನಾಡಿ ಅವರ ಸಂಪುಟದಲ್ಲಿ ಸಚಿವರಾಗಬೇಕೆಂದು ಕೇಳಿಕೊಂಡರು. ಕಡಿದಾಳರು ರಾಜಕಾರಣದಲ್ಲಿ ತನಗೆ ಕೈಸುಟ್ಟುಕೊಂಡ ಅನುಭವವಾಗಿದೆಯೆಂದು, ಆದ್ದರಿಂದ ಸಚಿವನಾಗಲು ಇಷ್ಟಪಡುವುದಿಲ್ಲವೆಂದು ಹೇಳಿದರು. ಏಕೆಂದರೆ ರಾಜಕಾರಣ ಶಾಶ್ವತವಲ್ಲವೆಂದು ಕಡಿದಾಳರಿಗೆ ಆಗಾಲೇ ಅದರ ಕಹಿ ಅನುಭವವಾಗಿತ್ತು. ವಕೀಲಿ ವೃತ್ತಿ ಕೈಹಿಡಿಯುತ್ತಲಿದ್ದುದರಿಂದ ಅದನ್ನು ಹಾಳುಮಾಡಿಕೊಳ್ಳಲು ಅವರು ಇಷ್ಟಪಡಲಿಲ್ಲ. ಆದರೆ ಜತ್ತಿಯವರು ಪಟ್ಟು ಬಿಡಲಿಲ್ಲ. ಕಡಿದಾಳರ ಮನೆಗೇ ಬಂದು ಮಂತ್ರಿಸ್ಥಾನವನ್ನು ಒಪ್ಪಿಕೊಳ್ಳಬೇಕೆಂದು ಪರಿಪರಿಯಾಗಿ ಕೇಳಿಕೊಂಡರು. ರಾಜಕೀಯ ಅಧಿಕಾರವು ನಾಯಿಯ ತಲೆ ಮೇಲಿನ ಬುತ್ತಿ ಎಂಬ ಗಾದೆ ಕಡಿದಾಳರಿಗೆ ಚೆನ್ನಾಗಿ ಅನುಭವವಾಗಿತ್ತು. ಜತ್ತಿಯವರ ಸಂಪುಟ ಸೇರಿದರೆ ಅವರಿಗೂ ಕಡಿದಾಳರಿಗೂ ಹೊಂದಾಣಿಕೆ ಆಗುವ ಅನುಮಾನವಿತ್ತು. ಆದರೆ ಕಡಿದಾಳರ ಶ್ರೀಮತಿಯವರು ಯಜಮಾನರಿಗೆ ಚೀಫ್ ಮಿನಿಸ್ಟರ್ ಮನೆಗೆ ಬಂದು ಅಷ್ಟೊಂದು ಕೇಳಿಕೊಂಡಾಗ ಬೇಡ ಎಂದು ಹೇಳುವುದು ಸೌಜನ್ಯವಲ್ಲವೆಂದು ಹೇಳಿದರು. ಜತ್ತಿಯವರ ಒತ್ತಾಯಕ್ಕೆ ಮಣಿದು ಕಡಿದಾಳರು ಅವರ ಸಂಪುಟಕ್ಕೆ ಸೇರಬೇಕಾದರೆ ಮೂರು ಷರತ್ತುಗಳನ್ನು ಹಾಕಿದರು. ಮೊದಲ ಷರತ್ತು ಸಂಪುಟದಲ್ಲಿ ಕಡಿದಾಳರಿಗೆ ಎರಡನೆ ಸ್ಥಾನ ಕೊಡುವುದು, ಎರಡನೆ ಷರತ್ತು ತಾನು ಅಪೇಕ್ಷೆ ಪಟ್ಟ ಖಾತೆ ಕೊಡುವುದು, ಮೂರನೆ ಷರತ್ತು ತಾನು ಅಪೇಕ್ಷೆಪಟ್ಟಾಗ ಜತ್ತಿಯವರೂ ಅದರ ಜೊತೆಯಲ್ಲಿ ರಾಜೀನಾಮೆ ಕೊಡುವುದು ಜತ್ತಿಯವರು ಅವರ ಎಲ್ಲಾ ಷರತ್ತುಗಳನ್ನೂ ಒಪ್ಪಿಕೊಂಡರು. ಅನಂತರ ಜತ್ತಿ ಸಮಿತಿಯ ವರದಿಯನ್ನು ನಿಜಲಿಂಗಪ್ಪನವರ ಸರ್ಕಾರ ಒಪ್ಪಿಕೊಂಡಿರುವುದರಿಂದ ಭೂಸುಧಾರಣ ಕಾನೂನನ್ನು ಮಾಡಲು ಮತ್ತು ಶಾಸನಸಭೆಯಲ್ಲಿ ಅದನ್ನು ಮಂಡಿಸಿ ಸಮರ್ಥನೆ ಮಾಡುವುದು ಬೇರೆಯವರಿಂದ ಸಾಧ್ಯವಿಲ್ಲದ್ದರಿಂದ ಈ ಖಾತೆಯನ್ನು ಕಡಿದಾಳರೇ ಒಪ್ಪಿಕೊಳ್ಳಬೇಕೆಂದು ಜತ್ತಿಯವರು ಹೇಳಿದರು. ಜತ್ತಿಯವರು ಕೊಟ್ಟ ಕಾರಣ ಸಮಂಜಸವಾಗಿತ್ತು. ಆದ್ದರಿಂದ ಕಂದಾಯ ಸಚಿವರಾಗಿ ಕಡಿದಾಳರು ದಿನಾಂಕ:೨೨.೦೫.೧೯೫೮ರಲ್ಲಿ ನೇಮಕಗೊಂಡರು. ಜತ್ತಿಯವರು ಅವರನ್ನು ಬಹಳ ಗೌರವದಿಂದ ನೋಡಿದರು ಎಂದು ಕಡಿದಾಳರು

ಸ್ಮರಿಸಿಕೊಳ್ಳುತ್ತಾರೆ. ಹೋದ ಮಂತ್ರಿಗಿರಿ ಅವರನ್ನು ಮತ್ತೆ ಹುಡುಕಿಕೊಂಡು ಬಂದಿತು.

ಕಡಿದಾಳರು ಜತ್ತಿಯವರ ಸಂಪುಟದಲ್ಲಿ ಕಂದಾಯ ಸಚಿವರಾಗಿದ್ದಾಗ ಸುಮಾರು ಒಂಭತ್ತೂವರೆ ಲಕ್ಷ ಎಕರೆ ಸರ್ಕಾರಿ ಭೂಮಿಯನ್ನು ಹರಿಜನ ಗಿರಿಜನರಿಗೂ, ಇತರೆ ಭೂಹೀನರಿಗೂ, ಅತ್ಯಲ್ಪಭೂಮಿ ಇದ್ದವರಿಗೂ ಹಂಚಿದರು. ಕಡಿದಾಳರು ಅಧಿಕ ಸಂಖ್ಯೆಯಲ್ಲಿರುವ ಚಿಕ್ಕಮಗಳೂರು ಮತ್ತು ಮೂಡಿಗೆರೆ ತಾಲ್ಲೂಕಿನ ಅವರ ಬಂಧುಗಳಿಗೆ ಒಂದು ಎಕರೆ ಭೂಮಿಯನ್ನು ಕೊಡಲಿಲ್ಲ. ಈಗಿನ ಮಂತ್ರಿಗಳು ಅವರಂತೆ ಇದ್ದಾರೆಯೇ?.

ಜತ್ತಿಯವರು ಭಾರತದ ಉಪರಾಷ್ಟ್ರಪತಿಯಾಗಿದ್ದಾಗ ಕಡಿದಾಳರನ್ನು ರಾಜ್ಯಪಾಲರನ್ನಾಗಿ ಮಾಡಲು ಲೋಕಸಭಾಸದಸ್ಯರಾಗಿದ್ದ ಟಿ.ವಿ.ಚಂದ್ರಶೇಖರಪ್ಪ ಅವರೊಂದಿಗೆ ಹೇಳಿಕಳುಹಿಸಿದ್ದರು. ಆದರೆ ಕಡಿದಾಳರು ಅವರ ಸಲಹೆಯನ್ನು ಒಪ್ಪಿಕೊಳ್ಳಲಿಲ್ಲ. ಅವರು ೧೯೬೭ ರಲ್ಲಿ ಮತ್ತೆ ಶೃಂಗೇರಿಯಿಂದ ಚುನಾಯಿತರಾದಾಗ ಅವರನ್ನು ರಾಜಕೀಯದಿಂದ ಹೊರದಬ್ಬಲು ಅಂದಿನ ಇಬ್ಬರು ಪ್ರಬಲ ರಾಜಕಾರಣಿಗಳು ಅವರನ್ನು ಕರ್ನಾಟಕ ಹೈಕೋರ್ಟಿನ ನ್ಯಾಯ ಮೂರ್ತಿಗಳಾಗಿ ನೇಮಿಸಲು ಪ್ರಯತ್ನ ಪಟ್ಟರು. ಈ ಪ್ರಯತ್ನವನ್ನು ರಾಜ್ಯ ಹೈಕೋರ್ಟಿನ ಮುಖ್ಯ ನ್ಯಾಯಮೂರ್ತಿಗಳೂ, ಕಡಿದಾಳರ ಆತ್ಮೀಯ ಮಿತ್ರರೂ ಆದ ಮುಖ್ಯನ್ಯಾಯಮೂರ್ತಿ ಸೋಮನಾಥ ಅಯ್ಯರ್ ಅವರ ಮೂಲಕ ಹೇಳಿಸಲಾಯಿತು. ಕಡಿದಾಳರು "ನೋಡಿ ಸೋಮನಾಥ ಅಯ್ಯರ್‌ರವರೇ ತಾವು ಈಗ ಹೈಕೋರ್ಟಿನ ನ್ಯಾಯಮೂರ್ತಿ ಆಗಿದ್ದೀರಿ. ದಯವಿಟ್ಟು ಅನ್ಯಥಾ ಭಾವಿಸಬೇಡಿ. ಈ ಕಡಿದಾಳ್ ಮಂಜಪ್ಪ ಚಿಂದಿ ಬಟ್ಟೆಯಲ್ಲಿ ಬೆಂಗಳೂರು ನಗರದ ಬೀದಿಗಳಲ್ಲಿ ಹೋದರೆ ನೂರಾರು ಜನರು ನನ್ನನ್ನು ಗೌರವಿಸುತ್ತಾರೆ. ಆದರೆ ನಿವೃತ್ತ ಹೈಕೋರ್ಟ್ ನ್ಯಾಯಮೂರ್ತಿಯಾಗಿ ಅದೇ ಬೀದಿಗಳಲ್ಲಿ ಹೋದರೆ ಎಷ್ಟುಜನ ನನ್ನನ್ನು ಲೆಕ್ಕಿಸಿಯಾರು? ಎಂದು ಹೇಳಿ ನ್ಯಾಯಮೂರ್ತಿ ಹುದ್ದೆಯನ್ನು ನಿರಾಕರಿಸಿದರು. ಕಡಿದಾಳರು ಅಂದಿನ ಆಡಳಿತ ರೂಢ ಹಿರಿಯ ರಾಜಕಾರಣಿಗಳಿಗೆ ದುಸ್ವಪ್ನವಾಗಿದ್ದರು. ಆದರೆ ಕಡಿದಾಳರು ಯಾರನ್ನಾದರು ಓಲೈಸುವ ಕೀಳು ರಾಜಕಾರಣ ಮಾಡಲಿಲ್ಲ. ಅವರು ಗುಂಪು ರಾಜಕಾರಣ ಮಾಡಿದವರಲ್ಲ. ಇದು ನಿಷ್ಠಾವಂತ ಕಾಂಗ್ರೆಸ್ಸಿಗರ ಗುಣ.

## ಮುಖ್ಯಕಾರ್ಯದರ್ಶಿಗೆ ಮುಖಭಂಗ

ಕಡಿದಾಳರು ಜತ್ತಿಯವರ ಸಂಪುಟದಲ್ಲಿ ಕಂದಾಯ ಸಚಿವರಾಗಿದ್ದಾಗ ಇಲಾಖೆಯ ಆಡಳಿತವನ್ನು ಚುರುಕುಗೊಳಿಸುವ ಸಲುವಾಗಿ ಆಗಾಗ ತಾಲ್ಲೂಕುಗಳ ತಹಶೀಲ್ದಾರರ,

ಅಸಿಸ್ಟೆಂಟ್ ಕಮೀಷನರುಗಳ ಮತ್ತು ಜಿಲ್ಲಾಧಿಕಾರಿಗಳ ಕಛೇರಿಗಳಿಗೆ ಅನಿರೀಕ್ಷಿತವಾಗಿ ಭೇಟಿ ನೀಡಿ ಕಾಗದ ಪತ್ರಗಳ ವಿಲೇವಾರಿ ಯಾವ ರೀತಿ ನಡೆಯುತ್ತದೆ ಎಂಬುದನು ತನಿಖೆ ಮಾಡುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ವಿಳಂಬಕ್ಕೆ ಕಾರಣಕರ್ತರಾದ ಅಧಿಕಾರಿಗಳ ಮೇಲೆ ಸೂಕ್ತಕ್ರಮ ಕೈಗೊಳ್ಳುವಂತೆ ಆಜ್ಞೆ ಮಾಡುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅಂತಹ ಅಧಿಕಾರಿಗಳ ವರ್ಗಾವಣೆಗೂ ಆದೇಶ ನೀಡುತ್ತಿದ್ದರು. ಇನ್ನು ಕೆಲವು ಸಂದರ್ಭಗಳಲ್ಲಿ ಕಡಿದಾಳರೆ ಪೂರ್ವಭಾವಿ ವಿಚಾರಣೆಗಾಗಿ ಅಧಿಕಾರಿ ನೌಕರರನ್ನು ಅಮಾನತ್ತಿನಲ್ಲಿಡುತ್ತಿದ್ದರು. ಕಡಿದಾಳರ ಭೇಟಿಯಿಂದಾಗಿ ಆಡಳಿತದ ಲೋಪದೋಷಗಳು ವೃತ್ತಿಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಇದು ಸರ್ಕಾರಕ್ಕೆ ಅವಮಾನವೆಂದು ಭಾವಿಸಿದ ಅಂದಿನ ಮುಖ್ಯಕಾರ್ಯದರ್ಶಿ ಐ.ಸಿ.ಎಸ್. ಅಧಿಕಾರಿ ಪಿ.ಆರ್.ರಾವ್ ಅವರಿಗೆ ಕಡಿದಾಳರ ಮೇಲೆ ಅಸಮಾಧಾನವಾಯಿತು. ಕಡಿದಾಳರು ಮುಖ್ಯಮಂತ್ರಿಯಾಗಿದ್ದಾಗ, ರಾಜ್ಯ ಪುನರ್ವಿಂಗಡಣೆಯಾದಾಗ ಅವರನ್ನು ಮುಖ್ಯಕಾರ್ಯದರ್ಶಿಯಾಗಿ ಮಾಡಲಾಗಿತ್ತು. ಅದುತನಕ ಯಾವುದೇ ಮಂತ್ರಿಗಳು ಸರ್ಕಾರಿ ಕಛೇರಿಗೆ ಭೇಟಿಕೊಟ್ಟು ಅಧಿಕಾರಿಗಳು ಮತ್ತು ನೌಕರರ ಕಾರ್ಯವೈಖರಿ ಕುರಿತು ತನಿಖೆ ಮಾಡಿರಲಿಲ್ಲ. ಕಡಿದಾಳರು ಹೀಗೆ ಮಾಡಬಹುದೆ? ಎಂದು ಅವರು ಮಂತ್ರಿಗಳು ಸರ್ಕಾರಿ ಕಛೇರಿಗೆ ಭೇಟಿಕೊಡುವುದನ್ನು ತಡೆಗಟ್ಟಲು ಹೊಸದಾಗಿ ಒಂದು ನಿಯಾಮವಳಿಯನ್ನು ರಚಿಸಿದರು. ಆ ನಿಯಮಾವಳಿಯ ನಿಬಂಧನೆಯಲ್ಲಿ ಅನಿರೀಕ್ಷಿತ ತನಿಖೆಗಳಿಂದ ಯಾವ ಪ್ರಯೋಜನವು ಆಗುವುದಿಲ್ಲವೆಂದು. ಅಧಿಕಾರಿಗಳು ಅನಿರೀಕ್ಷಿತ ತನಿಖೆಗಳಿಂದ ಕಾಲಹರಣ ಮಾಡಲಿಕ್ಕೆ ಅವಕಾಶ ಕೊಟ್ಟಂತಾಗುವುದೆಂದು ನಮೂದಿಸಲಾಗಿತ್ತು. ರಾವ್ ಅವರಿಗೆ ಕೆಳಹಂತದಲ್ಲಿ ಅಧಿಕಾರಿಗಳು ಯಾವ ರೀತಿ ಕಾರ್ಯನಿರ್ವಹಣೆ ಮಾಡುತ್ತಾರೆಂದು ಪರಿಜ್ಞಾನವಿರಲಿಲ್ಲ. ಅವರು ನಿಯಮಾವಳಿಗೆ ಮುಖ್ಯಮಂತ್ರಿಯವರ ಸಹಿ ಪಡೆದು ಕಡಿದಾಳರ ಅನುಮೋದನೆಗೆ ಕಳುಹಿಸಿದರು. ಕಡಿದಾಳರು ಅವರ ಅನುಮೋದನೆಗೆ ಸಹಿಮಾಡದೆ ಹಾಗೇ ಇಟ್ಟುಕೊಂಡು ದೊಡ್ಡಬಳ್ಳಾಪುರದ ತಾಲ್ಲೂಕು ಕಛೇರಿಗೆ ಹೋದರು. ಅಲ್ಲಿ ಗುಮಾಸ್ತರುಗಳು ಐದಾರು ವರ್ಷಗಳಿಂದ ಕಡತಗಳನ್ನು ವಿಲೇವಾರಿ ಮಾಡದೆ ಹಾಗೇ ಇಟ್ಟುಕೊಂಡುದನ್ನು ನೋಡಿ, ಕಡತಗಳನ್ನು ಮುಟ್ಟುಗೋಲು ಹಾಕಿಕೊಂಡು ಬಂದರು. ಅದೇದಿನ ಮಧ್ಯಾಹ್ನ ಮುಖ್ಯಕಾರ್ಯದರ್ಶಿಯವರಿಗೆ ಕರೆ ಕಳುಹಿಸಿದರು. ಮುಖ್ಯಕಾರ್ಯದರ್ಶಿ ರಾವ್ ಅವರು ಹಾಜರಾಗಿ ತನ್ನನ್ನು ಕರೆಸಿದ ಉದ್ದೇಶವೇನೆಂದು ಕೇಳಿದರು. ಮಂತ್ರಿಯಾದವರು ಐ.ಎ.ಎಸ್. ಅಥವಾ ಐ.ಸಿ.ಎಸ್. ಅಧಿಕಾರಿಗಿಂತ ಹೆಚ್ಚು ಸಮರ್ಥರಾಗುವುದು ಸಾಧ್ಯವಿಲ್ಲವೆಂದು ರಾವ್ ಅವರು ತಿಳಿದಿದ್ದರೆಂದು ಕಾಣುತ್ತದೆ. ಕಡಿದಾಳರು ರಾವ್

ಅವರೆ ನಾನು ಐ.ಸಿ.ಎಸ್. ಅಥವಾ ಐ.ಎ.ಎಸ್. ದರ್ಜೆಗೆ ಸೇರಿದ ಅಧಿಕಾರಿ ಅಲ್ಲ. ಸಾಮಾನ್ಯ ರೈತನೊಬ್ಬನ ಮಗ. ನನ್ನ ಅನುಮೋದನೆಗಾಗಿ ತಾವು ಕಳುಹಿಸಿದ ನಿಯಮಾವಳಿಗಳನ್ನು ನೋಡಿದೆ. ಒಂದು ನಿಯಮದಲ್ಲಿ ಅನಿರೀಕ್ಷಿತ ತನಿಖೆಗಳಿಂದ ಯಾವ ಪ್ರಯೋಜವೂ ಆಗುವುದಿಲ್ಲ ಎಂದು ನಮೂದು ಮಾಡಿದ್ದೀರಿ. ಇಂದು ಬೆಳಿಗ್ಗೆ ದೊಡ್ಡಬಳ್ಳಾಪುರದ ತಾಲ್ಲೂಕು ಕಛೇರಿಗೆ ಭೇಟಿ ನೀಡಿ ಎರಡು ವರ್ಷಗಳಿಂದ ಹಿಡಿದು ಏಳುವರ್ಷಗಳವರೆಗೆ ಕೊಳೆತು ಬಿದ್ದಿದ್ದ ಕಡಿತಗಳನ್ನು ಪತ್ತೆಹಚ್ಚಿ ಅವನ್ನು ತಂದಿದ್ದೇನೆ. ತಾವು ಅವುಗಳನ್ನು ನೋಡಬಹುದು. ನಿಮ್ಮ ಅಧಿಕಾರಿಗಳು ವರ್ಷಕ್ಕೊಮ್ಮೆಯಾದರೂ ತಾಲ್ಲೂಕು ಕಛೇರಿಯಲ್ಲಿ ಕೂಲಂಕಷವಾಗಿ ತನಿಖೆ ಮಾಡಿದ್ದರೆ ಈ ಕಡತಗಳು ಇಷ್ಟೊಂದು ದೀರ್ಘಕಾಲ ಕೊಳೆಯುತ್ತಾ ಬಿದ್ದಿರುತ್ತಿರಲಿಲ್ಲ ಎಂದು ಹೇಳಿ ಕಡತಗಳನ್ನು ಅವರ ಮುಂದೆ ಇಟ್ಟರು. ರಾವ್ ಅವರು ಒಂದೊಂದೇ ಕಡತಗಳನ್ನು ಪರಿಶೀಲನೆ ಮಾಡಿ ಮಂತ್ರಿಗಳು ಹೇಳಿದ್ದು ನಿಜವೆಂದು ಒಪ್ಪಿಕೊಂಡರು. ಅಲ್ಲದೆ ರಾವ್ ಅವರು ಕಡತಗಳನ್ನು ವಾಪಾಸು ತೆಗೆದುಕೊಂಡು, ಕಡತಗಳನ್ನು ವಿಲೇವಾರಿಯನ್ನು ತ್ವರಿತಗೊಳಿಸುವ ಸಲುವಾಗಿ ಸಂಬಂಧಪಟ್ಟ ಅಧಿಕಾರಿಗಳು ತಮ್ಮ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಕಛೇರಿಗಳಿಗೆ ಆಗಾಗ ಅನಿರೀಕ್ಷಿತ ತನಿಖೆ ನಡೆಸುವುದು ಬಹಳ ಅವಶ್ಯಕವೆಂಬ ನಿಯಮವನ್ನು ಅಡಕಮಾಡಿ ಕಡಿದಾಳರ ಅನುಮೋದನೆಗೆ ಕಳುಹಿಸಿದರು. ಈ ನಿಯಾಮವಳಿ ಈಗಲೂ ಅಸ್ತಿತ್ವದಲ್ಲಿದೆ. ಇದರಿಂದಾಗಿ ಮುಖ್ಯಕಾರ್ಯದರ್ಶಿಗೆ ಮುಖಭಂಗವಾಯಿತು.

## ಕೆರಳಿದ ಸ್ವಾಭಿಮಾನ

೧೯೬೧ ನೆಯ ಇಸವಿ ಮಾರ್ಚ್ ತಿಂಗಳಿನಲ್ಲಿ ರಾಜ್ಯದ ರಾಜಕಾರಣದಲ್ಲಿ ಗುಂಪುಗಾರಿಕೆ ಇತ್ತು. ಗುಂಪು ರಾಜಕಾರಣವನ್ನು ಹೋಗಲಾಡಿಸುವ ಸಲುವಾಗಿ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ನೀಲಂ ಸಂಜೀವರೆಡ್ಡಿಯವರು ರಾಜ್ಯಕಾಂಗ್ರೆಸ್ ಅಧ್ಯಕ್ಷರಾಗಿದ್ದ ನಿಜಲಿಂಗಪ್ಪನವರು, ವಿರೋಧಗುಂಪಿಗೆ ಸೇರಿದ ಹೆಚ್.ಕೆ. ವೀರಣ್ಣ ಗೌಡರು, ಹೆಚ್.ಎಸ್.ರುದ್ರಪ್ಪ, ವೀರೇಂದ್ರ ಪಾಟೀಲರು ಮತ್ತು ವೈಕುಂಠ ಬಾಳಿಗ ಅವರನ್ನು ಸಂಪುಟಕ್ಕೆ ಸೇರಿಸಿಕೊಳ್ಳಲು ಮುಖ್ಯಮಂತ್ರಿಯವರಿಗೆ ಸೂಚಿಸಿದ್ದರು. ಅವರನ್ನು ಸಂಪುಟಕ್ಕೆ ಸೇರಿಸಿಕೊಳ್ಳುವಾಗ ಜತ್ತಿಯವರು ಹೆಚ್.ಕೆ.ವೀರಣ್ಣ ಗೌಡರಿಗೆ ಸಚಿವ ಸಂಪುಟದಲ್ಲಿ ಎರಡನೇ ಸ್ಥಾನ ಕೊಡುವುದಾಗಿ ವಾಗ್ದಾನ ಮಾಡಿದರು. ಈ ರಹಸ್ಯ ಒಳಒಪ್ಪಂದ ಕಡಿದಾಳರಿಗೆ ತಿಳಿದಿರಲಿಲ್ಲ. ನೂತನ ಸಚಿವರುಗಳು ಅಧಿಕಾರ ವಹಿಸಿಕೊಂಡ ದಿನ ವಿಧಾನಸಭೆಯಲ್ಲಿ ಮಂತ್ರಿಗಳು ಆಸೀನರಾಗುತ್ತಿದ್ದ ಜಾಗದಲ್ಲಿ

ಕೂರದೆ ವೀರಣ್ಣಗೌಡರು ಹಿಂದಿನಸಾಲಿನಲ್ಲಿ ಕೂತಿದ್ದರು. ಅವರನ್ನು ಕರೆದು ಮುಂದಿನ ಸಾಲಿನಲ್ಲಿ ಕೂರಿಸಬೇಕೆಂದು ಜತ್ತಿಯವರು ಕಡಿದಾಳರಿಗೆ ಹೇಳಿದರು. ಅವರನ್ನು ಎಲ್ಲ ಕೂರಿಸುವುದು ಎಂದು ಕಡಿದಾಳರು ಕೇಳಲಾಗಿ ಜತ್ತಿಯವರು ನೀವು ಕೂತುಕೊಳ್ಳುವ ಜಾಗದಲ್ಲಿ ಕೂರಿಸಿ ಎಂದರು. ಕಡಿದಾಳರ ಸ್ವಾಭಿಮಾನ ಕೆರಳಿತು. ಅವರಿಗೆ ಆಶ್ಚರ್ಯವೂ ಕೋಪವು ಬಂದಿತು. ಅವರು ಜತ್ತಿಯವರಿಗೂ ತಮಗೂ ತಮ್ಮ ಮನೆಯಲ್ಲಿ ನಡೆದ ಮಾತುಕತೆಯನ್ನು ಜ್ಞಾಪಿಸಿ, ವೀರಣ್ಣಗೌಡರಿಗೆ ಎರಡನೇ ಸ್ಥಾನವನ್ನು ಬಿಟ್ಟುಕೊಡಲು ಅಡ್ಡಿ ಇಲ್ಲವೆಂದು, ತನಗೂ ಪ್ರತಿಷ್ಠೆಯ ಪ್ರಶ್ನೆ ಇರುವುದರಿಂದ ತಮ್ಮ ರಾಜಿನಾಮೆಯನ್ನು ಸ್ವೀಕರಿಸಬೇಕೆಂದು ಹೇಳಿದರು. ಕಡಿದಾಳರ ಮಾತಿನಿಂದ ವಿಚಲಿತರಾದ ಜತ್ತಿಯವರು ನಿಜಲಿಂಗಪ್ಪನವರಿಗೂ ಸಂಜೀವ ರೆಡ್ಡಿಯವರಿಗೂ ಮಧ್ಯೆ ಪ್ರವೇಶಿಸಿ ಕಡಿದಾಳರ ಮನವೊಲಿಸಲು ಕೇಳಿಕೊಂಡರು. ನಿಜಲಿಂಗಪ್ಪನವರು ಕಡಿದಾಳರಿಗೆ ತಾವೂ, ಸಂಜೀವ ರೆಡ್ಡಿಯವರು ವೀರಣ್ಣಗೌಡರನ್ನು ಸಂಪುಟಕ್ಕೆ ಸೇರಿಸಿಕೊಳ್ಳುವಾಗ ಅವರಿಗೆ ಸಂಪುಟದಲ್ಲಿ ಎರಡನೆ ಸ್ಥಾನ ಕೊಡಲು ಭರವಸೆ ನೀಡಿರುವುದಾಗಿ ಹೇಳಿದ್ದೇವೆಂದು ತಾವು ಸಹಕರಿಸಬೇಕೆಂದು ಕೇಳಿಕೊಂಡರು. ಆಗ ಕಡಿದಾಳರು ಜತ್ತಿಯವರಿಗೂ ತನಗೂ ನಡೆದ ಮಾತುಕತೆಯನ್ನು ನೆನಪಿಸಿ ವೀರಣ್ಣಗೌಡರಿಗೆ ಎರಡನೆಸ್ಥಾನ ಕೊಡುವುದಾದರೆ ತನ್ನ ರಾಜೀನಾಮೆಯನ್ನು ಒಪ್ಪಿಕೊಳ್ಳಬೇಕೆಂದು ಹೇಳಿದರು. ನಿಜಲಿಂಗಪ್ಪನವರು ಕಡಿದಾಳರ ಮಾತುಕೇಳಿ ವಿಸ್ಮಯಪಟ್ಟರು. ಸಂಜೀವ ರೆಡ್ಡಿಯವರು ಕರೆದಾಗ ಕಡಿದಾಳರಿಗೆ ಇದೇ ವಿಷಯಕ್ಕೆ ಕರೆಯುತ್ತಿದ್ದಾರೆಂದು ತಿಳಿಯಿತು.ರೆಡ್ಡಿಯವರು ಕಡಿದಾಳರು ೧೯೫೪ ರಿಂದ ಸ್ನೇಹಿತರು. ಕಡಿದಾಳರು ಮುಖ್ಯಮಂತ್ರಿಯಾಗಿದ್ದಾಗ ರೆಡ್ಡಿಯವರು ಆಂಧ್ರ ಸರ್ಕಾರದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಸಚಿವರಾಗಿದ್ದರು. ರೆಡ್ಡಿಯವರು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾದ ನಂತರ ಆಗಾಗ ಕಡಿದಾಳರು ಅವರನ್ನು ಭೇಟಿ ಮಾಡುತ್ತಿದ್ದರು. ಇಬ್ಬರೂ ಬಹಳ ಸಲುಗೆಯಿಂದ ಮಾತನಾಡುತ್ತಿದ್ದರು. ಹಳೆಯ ವಿಶ್ವಾಸದ ಮೇಲೆ ರೆಡ್ಡಿಯವರು ಕಡಿದಾಳರಿಗೆ ತಾನು, ನಿಜಲಿಂಗಪ್ಪನವರು ವೀರಣ್ಣಗೌಡರಿಗೆ ನೀಡಿದ್ದ ಆಶ್ವಾಸನೆಯಲ್ಲಿ ಪ್ರಮಾದವಾಗಿದೆಯೆಂದು, ತಾವು ಸಹಕರಿಸಬೇಕೆಂದು ಕೇಳಿಕೊಂಡರು. ಕಡಿದಾಳರು ನಿಜಲಿಂಗಪ್ಪನವರಿಗೆ ಹೇಳದ ಉತ್ತರವನ್ನು ಹೇಳಿ ಹೆಚ್ಚಿನ ವಿಚಾರಕ್ಕೆ ಜತ್ತಿಯವರನ್ನು ಕೇಳಿ ತಿಳಿದುಕೊಳ್ಳಬೇಕೆಂದರು. ರೆಡ್ಡಿಯವರಿಗೆ ಕಡಿದಾಳರ ನಿಲುವು ಸಮಂಜಸವೆಂದು ಅರಿವಾಗಿ ವೀರಣ್ಣಗೌಡರನ್ನು ಕರೆದು ತೃತಿಯ ಸ್ಥಾನವನ್ನು ಒಪ್ಪಿಕೊಳ್ಳಬೇಕೆಂದು ಹೇಳಿ ಬಿಕ್ಕಟ್ಟನ್ನು ಪರಿಹರಿಸಿದರು. ವೀರಣ್ಣಗೌಡರು ಮರುದಿನದಿಂದ ಕಡಿದಾಳರ ಪಕ್ಕದಲ್ಲಿ ಮೂರನೆ ಸ್ಥಾನದಲ್ಲಿ ಕೂರಹತ್ತಿದರು. ಆದರೆ ವೀರಣ್ಣಗೌಡರು ತಮ್ಮ "ಬದುಕು ಮೆಲುಕು" ಪುಸ್ತಕದಲ್ಲಿ

ತನಗೆ ಸಂಪುಟದಲ್ಲಿ ಎರಡನೆ ಸ್ಥಾನ ಕಲ್ಪಿಸಲಾಗಿತ್ತೆಂದು ಬರೆದುಕೊಂಡಿದ್ದಾರೆ. ಕಡಿದಾಳರು ಇದು ಸತ್ಯಕ್ಕೆ ದೂರವಾದ ವಿಷಯ ಎಂದಿದ್ದಾರೆ.

## ಭೂಸುಧಾರಣಾ ಪರಿಹಾರ

ದಿನಾಂಕ:೩೦-೦೮-೧೯೬೧ ರಂದು ಕಡಿದಾಳರು ಭೂಸುಧಾರಣ ವಿಧೇಯಕದ ಸಂಬಂಧ ಜಂಟಿ ಪರಿಶೀಲನಾ ಸಮಿತಿಯ ವರದಿಯನ್ನು ಚರ್ಚೆಗೆ ತೆಗೆದುಕೊಳ್ಳಲು ವಿಧಾನಸಭೆಯಲ್ಲಿ ಸೂಚಿಸಿದರು. ಹನುಮಂತಯ್ಯ ಸಂಪುಟದಲ್ಲಿ ಅವರು ಕಂದಾಯ ಸಚಿವರಾಗಿದ್ದಾಗ ಭೂಸುಧಾರಣೆಗೆ ಸಂಬಂಧಿಸಿದಂತೆ ನಡೆಸಿದ ಹೋರಾಟ ನಾನಾ ಕಾರಣಗಳಿಂದ ತೆವಳುತ್ತಾ ಬಂದಿತ್ತು. ಚರ್ಚೆಯ ಕಾಲದಲ್ಲಿ ವಿಧಾನಸಭೆಯ ಸದಸ್ಯರು ಕೆಲವರು ವಿಧೇಯಕ್ಕೆ ಸೂಚಿಸಿದ ಕೆಲವು ತಿದ್ದುಪಡಿಗಳನ್ನು ಕಡಿದಾಳರು ಒಪ್ಪಿಕೊಂಡರು. ತಿದ್ದುಪಡಿ ಭೂಸುಧಾರಣ ವಿಧೇಯಕವು ದಿನಾಂಕ:೧೫-೦೯-೧೯೬೧ ರಿಂದ ವಿಧಾನಸಭೆಯ ಒಪ್ಪಿಗೆಯನ್ನು ಪಡೆಯಿತು. ಭೂಸುಧಾರಣಾ ಕಾನೂನನ್ನು ವಿಧಾನ ಪರಿಷತ್ತಿನಲ್ಲಿ ಮಂಡಿಸಿದಾಗ ಕೆಲವು ಸದಸ್ಯರು ಮತ್ತಷ್ಟು ತಿದ್ದುಪಡಿಗೆ ಸೂಚಿಸಿದರಾದರೂ ಕಡಿದಾಳರು ಒಪ್ಪಲಿಲ್ಲ. ದಿನಾಂಕ:೧೮-೧೧-೧೯೬೧ ರಂದು ವಿಧಾನಸಭೆಯ ಅಂಗೀಕಾರವನ್ನು ಪಡೆದಿದ್ದ ಭೂಸುಧಾರಣ ಕಾನೂನು ವಿಧಾನ ಪರಿಷತ್ತಿನ ಅನುಮೋದನೆ ಪಡೆಯಿತು. ಕಡಿದಾಳರ ಕನಸು ನನಸಾಯಿತು. ಇದರಿಂದಾಗಿ ಕಡಿದಾಳರು ಕರ್ನಾಟಕದಲ್ಲಿ ಭೂಸುಧಾರಣೆಯ ಹರಿಕಾರರಾದರು.

## ಗ್ರಾಮಾಧಿಕಾರಿಗಳ ಅನುವಂಶಿಕ ಹುದ್ದೆಗಳ ರದ್ದು

ಈ ನಡುವೆ ಕೆಲವು ಕಾರಣಗಳ ದೆಸೆಯಿಂದ ರಾಜ್ಯಾದ್ಯಂತ ಇದ್ದ ಗ್ರಾಮಾಧಿಕಾರಿಗಳ ಅನುವಂಶಿಕ ಹುದ್ದೆಗಳನ್ನು ರದ್ದುಪಡಿಸಲು ಕಾನೂನನ್ನು ರಚಿಸುವುದು ಅನಿವಾರ್ಯವಾಯಿತು. ಶ್ಯಾನುಭೋಗರು ಕುಲಕರ್ಣಿಗಳು ಪಟೇಲರುಗಳೂ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳೀಯ ರಾಜಕಾರಣದಲ್ಲಿ ಕೈಹಾಕಿ ಗುಂಪು ರಾಜಕಾರಣವನ್ನು ಬೆಳೆಸುತ್ತಿದ್ದಾರೆಂದೂ ಅವರ ಅನುವಂಶಿಕ ಹುದ್ದೆಗಳನ್ನು ರದ್ದುಪಡಿಸಬೇಕೆಂದೂ ಆಗಾಗ ಶಾಸನಸಭೆಯಲ್ಲಿ ಕೆಲವು ಸದಸ್ಯರು ಒತ್ತಾಯಪಡಿಸುತ್ತಿದ್ದರು. ಜೊತೆಗೆ ತಾವುಗಳು ಚುನಾವಣೆಗಳಿಗೆ ಸ್ಪರ್ಧಿಸಲು ಅವಕಾಶವನ್ನು ಕಲ್ಪಿಸುವ ಸಲುವಾಗಿ ತಮ್ಮ ಅನುವಂಶಿಕ ಹುದ್ದೆಗಳನ್ನು ರದ್ದುಪಡಿಸಬೇಕೆಂದು ಹಳೆ ಮೈಸೂರು ರಾಜ್ಯದ ಶ್ಯಾನುಭೋಗರು ಪಟೇಲರೂ ಸೇರಿ ಮೈಸೂರು ನಗರದಲ್ಲಿ ಒಂದು ಸಮ್ಮೇಳನ ನಡೆಸಿದ್ದರು. ಅಲ್ಲದೆ ಹಿಂದಿನ

ಮದರಾಸು ರಾಜ್ಯದ ೧೮೯೫ನೇ ಅನುವಂಶಿಕ ಗ್ರಾಮಾಧಿಕಾರಿಗಳ ಕಾಯ್ದೆಯು ಸಂವಿಧಾನ ಬಾಹಿರವಾಗಿದೆ ಎಂದು ದಶರಥರಾವ್ ಎಂಬುವರ ಕೇಸಿನಲ್ಲಿ ದೇಶದ ಸರ್ವೋಚ್ಚನ್ಯಾಯಾಲಯವು ಒಂದು ತೀರ್ಪನ್ನು ನೀಡಿತ್ತು. ಈ ಕಾರಣದಿಂದಾಗಿ ರಾಜ್ಯ ಸರ್ಕಾರವು ಒಂದು ವಿಧೇಯಕವನ್ನು ರಚಿಸಿತ್ತು. ಆ ವಿಧೇಯಕದ ಹೆಸರು ಮೈಸೂರು ಅನುವಂಶಿಕ ಗ್ರಾಮಾಧಿಕಾರಿಗಳ ಹುದ್ದೆಗಳ ರದ್ದಿಯಾತಿ ವಿಧೇಯಕ ಎಂದು ಕರೆಯಲಾಗಿತ್ತು. ಆ ವಿಧೇಯಕರ ೨೦-೦೪-೧೯೬೧ ರಂದು ವಿಧಾನಸಭೆಯು ಅನುಮೋದನೆ ನೀಡಿತು. ಅನಂತರ ೨೬-೦೪-೧೯೬೧ ರಂದು ಮೈಸೂರು ಗ್ರಾಮಾಧಿಕಾರಿಗಳ ಹುದ್ದೆಗಳನ್ನು ರದ್ದುಮಾಡುವ ಕಾಯ್ದೆಯು ವಿಧಾನ ಪರಿಷತ್ತಿನ ಅನುಮೋದನೆಯನ್ನು ಪಡೆಯಿತು. ಇದರಿಂದಾಗಿ ಶ್ಯಾನುಭೋಗರು ಪಟೇಲರು ಕುಲಕರ್ಣಿಗಳು ವಿನಾಕಾರಣವಾಗಿ ಕಡಿದಾಳರಿಗೆ ಹಿಡಿ ಶಾಪ ಹಾಕಿದರು. ಒಳ್ಳೆಯ ಕೆಲಸಗಳು ಪ್ರಾರಂಭದಲ್ಲಿ ಕೆಟ್ಟ ಹೆಸರು ತರುತ್ತವೆ. ಆನಂತರ ಒಳ್ಳೆಯ ಹೆಸರುಗಳಿಸುತ್ತವೆ. ಭೂಸೂಧಾರಣೆ ಮತ್ತು ಅನುವಂಶಿಕ ಹುದ್ದೆಗಳ ರದ್ದಿನ ಕಾರ್ಯಕ್ರಮ ಕಡಿದಾಳರ ಕ್ರಾಂತಿಕಾರಿ ಕಾರ್ಯಕ್ರಮಗಳು.

## ಗೇಣಿದಾರರ ಉದ್ಘಾಟನೆ ತಡೆಗಟ್ಟತಕ್ಕ ತಾತ್ಕಾಲಿಕ ಕಾನೂನು ರಚನೆ

ಕಡಿದಾಳರು ಜತ್ತಿಯವರ ಸಂಪುಟದಲ್ಲಿ ಕಂದಾಯ ಸಚಿವರಾಗಿದ್ದಾಗ ಇನ್ನೂ ಕೆಲವು ಕಾಯ್ದೆಗಳನ್ನು ರಚಿಸಲು ಕ್ರಮಕೈಗೊಂಡಿದ್ದರು. ಅವುಗಳಲ್ಲಿ ಭೂಮಾಲೀಕರ ಗೇಣಿದಾರರನ್ನು ಭೂಮಿಯಿಂದ ಉಚ್ಚಾಟನೆ ಮಾಡುವುದನ್ನು ತಪ್ಪಿಸುವ ಸಲುವಾಗಿ ರಚಿಸಿದ್ದ ಒಂದು ತಾತ್ಕಾಲಿಕ ಕಾನೂನು. ಅದರ ಹೆಸರು ಗೇಣಿದಾರರ ಉಚ್ಚಾಟನೆಯನ್ನು ತಡೆಗಟ್ಟತಕ್ಕ ತಾತ್ಕಾಲಿಕ ಕಾನೂನು ಎಂದಾಗಿತ್ತು. ಆ ಕಾನೂನು ದಿನಾಂಕ:೨೪-೧೧-೧೯೬೧ ರಂದು ವಿಧಾನಸಭೆಯ ಅನುಮೋದನೆ ಪಡೆಯಿತ್ತು. ದಿನಾಂಕ:೨೮-೧೧-೧೯೮೧ರಂದು ಅದು ವಿಧಾನಪರಿಷತ್ತಿನ ಅನುಮೋದನೆಯನ್ನು ಪಡೆಯಿತು. ಕಡಿದಾಳರು ಇನ್ನೊಂದು ಪ್ರಮುಖ ಕಾಯ್ದೆಯನ್ನು ಕಂದಾಯ ಸಚಿವರಾಗಿದ್ದಾಗ ರಚಿಸಿದ್ದರು. ಅದು ೧೯೬೧ ನೇ ಇಸವಿಯ ಭೂಸ್ವಾಧೀನ ತಿದ್ದುಪಡಿ ಕಾನೂನು ಅದನ್ನು ಈಗ "೧೯೬೧ನೇ ಕರ್ಣಾಟಕ ಲ್ಯಾಂಡ್ ಅಕ್ವಿಜಿಷನ್ ಅಮೆಂಡ್‌ಮೆಂಟ್ ಆ್ಯಕ್ಟ್" ಎಂದು ಕರೆಯಲಾಗುತ್ತದೆ. ೧೯೬೧ ರಲ್ಲಿ ರಚಿಸಲ್ಪಟ್ಟ ಭೂಸುಧಾರಣಾ ಕಾಯ್ದೆಯಲ್ಲಿ ಕೆಲವು ವರ್ಗಗಳ ಭೂಮಾಲೀಕರಿಗೆ ಅಂದರೆ ಸಣ್ಣ ಹಿಡುವಳಿದಾರರು ವಿಧವೆಯರು, ಅವಿವಾಹಿತ ಹೆಣ್ಣು ಮಕ್ಕಳು, ಸೈನಿಕರು, ನಾವಿಕರು, ವೈಮಾನಿಕರುಗಳಿಗೆ ತಮ್ಮ ವ್ಯವಸಾಯದ ಭೂಮಿಯನ್ನು ಗೇಣಿಗೆ ಕೊಡುವ ಅವಕಾಶವನ್ನು ಕಲ್ಪಿಸಲಾಗಿತ್ತು.

ಅಲ್ಲದೆ ಗೇಣಿದಾರರ ಸ್ವಾಧೀನದಲ್ಲಿದ್ದ ಕೆಲವು ಭಾಗದ ಜಮೀನನ್ನು ಬಿಡಿಸಿಕೊಳ್ಳಲು ಕೂಡ ಅವಕಾಶವನ್ನು ಮಾಡಿಕೊಡಲಾಗಿತ್ತು. ಆದರೆ ೧೯೭೪ರ ದೇವರಾಜ್ ಅರಸು ಸರ್ಕಾರ ಜಾರಿಗೆ ತಂದಿದ್ದ ತಿದ್ದುಪಡಿ ಶಾಸನದಲ್ಲಿ ಈ ಸೌಲಭ್ಯಗಳನ್ನೆಲ್ಲಾ ತೆಗೆದು ಹಾಕಿದ್ದಲ್ಲದೆ ವ್ಯವಸಾಯ ಭೂಮಿಯನ್ನು ಗೇಣಿಗೆ ಕೊಡುವುದೇ ಕಾನೂನು ಬಾಹಿರವೆಂದು ವಿಧಾಯಕ ಮಾಡಲಾಯಿತು. ಅಲ್ಲದೆ ಭೂಮಾಲೀಕರ ಮತ್ತು ಗೇಣಿದಾರರ ನಡುವೆ ಉದ್ಭವಿಸುವ ವಿವಾದಗಳನ್ನು ತೀರ್ಮಾನಿಸಲು ನ್ಯಾಯಾಂಗ ಇಲಾಖೆಗೆ ಸೇರಿದ್ದ ಮುನ್ಸಿಫರ ಬದಲು ಬಹುತೇಕ ರಾಜಕಾರಣಿಗಳು ಕೂಡಿದ ಭೂನ್ಯಾಯ ಮಂಡಳಿಗಳನ್ನು ರಚಿಸಲಾಯಿತು. ಅರಸು ಸರ್ಕಾರದ ಈ ಕ್ರಮ ರಾಜಕಾರಣಿಗಳು ಲಂಚ ಹೊಡೆದು ಶ್ರೀಮಂತರಾಗಿ ಕೊಬ್ಬಲು ಅವಕಾಶ ಮಾಡಿಕೊಟ್ಟಿತು.

## ಶೃಂಗೇರಿ ಕ್ಷೇತ್ರದಿಂದ ಮತ್ತೆ ಆಯ್ಕೆ

೧೯೬೨ರಲ್ಲಿ ಕರ್ನಾಟಕ ವಿಧಾನಸಭೆಗೆ ಚುನಾವಣೆ ನಡೆಯಿತು. ಕಡಿದಾಳರು ಪುನಃ ಶೃಂಗೇರಿ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದರು. ಅವರ ವಿರುದ್ಧ ಕಡಿದಾಳರ ಆತ್ಮೀಯ ಸ್ನೇಹಿತರಾದ ಎನ್.ಪಿ.ಗೋವಿಂದೇಗೌಡರು ವಿರೋಧ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಅವರು ಹಿಂದಿನ ಬಾರಿಯು ಕಾಂಗ್ರೆಸ್ ಟಿಕೆಟ್‌ಗಾಗಿ ಪ್ರಯತ್ನಿಸಿ ವಿಫಲರಾಗಿದ್ದರು. ಈ ಬಾರಿಯು ಕಾಂಗ್ರೆಸ್ ಟಿಕೆಟ್ ಸಿಗದಿದ್ದುದರಿಂದ ನಿರಾಶರಾಗಿ ವಿರೋಧಪಕ್ಷದ ಅಭ್ಯರ್ಥಿಯಾಗಿ ನಿಂತರು. ಕಡಿದಾಳರು ಕಂದಾಯ ಸಚಿವರಾಗಿ ರಚಿಸಲಾಗಿದ್ದ ಭೂಸುಧಾರಣ ಕಾಯ್ದೆಯಿಂದಾಗಿ ಕಾಫಿ ಪ್ಲಾಂಟರ್‌ಗಳಿಗೂ, ಗ್ರಾಮಾಧಿಕಾರಿಗಳ ಅನುವಂಶಿಕ ಹಕ್ಕನ್ನು ರದ್ದುಪಡಿಸಿದ ಕಾರಣಕ್ಕಾಗಿ ಶ್ಯಾನುಭೋಗರುಗಳಿಗೂ, ಪಟೇಲರುಗಳಿಗೂ ಕಡಿದಾಳರ ಮೇಲೆ ಕೋಪವಿತ್ತು. ಈ ಮಹನೀಯರುಗಳು ಒಟ್ಟಾಗಿ ಸೇರಿ ಕಡಿದಾಳರನ್ನು ಸೋಲಿಸಲು ಶತಾಯಗತಾಯ ಹೋರಾಟ ಮಾಡಿದರು. ಕಡಿದಾಳರ ಪರವಾಗಿ ಚುನಾವಣಾ ಪ್ರಚಾರಕ್ಕೆ ಕಾದಂಬರಿ ಸಾರ್ವಭೌಮ ಅ.ನ.ಕೃ.ಅವರು, ವೀರಕೇಸರಿ ಸೀತಾರಾಮ ಶಾಸ್ತ್ರಿಯವರು ಆಗಮಿಸಿದರು. ಮುಸ್ಲಿಮರು ಕ್ರಿಶ್ಚಿಯನ್ನರು ಕಡಿದಾಳರ ಪರವಾಗಿ ಕೆಲಸ ಮಾಡಿದರು. ಬೆಂಗಳೂರು ತೀರ್ಥಹಳ್ಳಿಯಿಂದಲೂ ತಮ್ಮ ಸ್ವಂತ ಖರ್ಚಿನಿಂದ ಶೃಂಗೇರಿ ಕ್ಷೇತ್ರಕ್ಕೆ ಹೋಗಿ ಜನಗಳು ಪ್ರಚಾರ ಮಾಡಿದರು. ಕಡಿದಾಳರ ಸೋದರ ಅಳಿಯ ಪ್ರಸಿದ್ಧ ವಕೀಲರಾಗಿದ್ದ ಎನ್.ಡಿ.ವೆಂಕಟೇಶ್ ಅವರು, ಕಡಿದಾಳರ ಇನ್ನೊಬ್ಬ ಸೋದರ ಅಳಿಯ ಸಹಕಾರಿ ಸಂಘದ ದುರೀಣ ಬಿ.ಎಸ್.ವಿಶ್ವನಾಥ್ ಸೋದರ ಮಾವನ ಪರವಾಗಿ ಚುನಾವಣಾ ಪ್ರಚಾರಕ್ಕೆ ಹೋದರು. ವಿರೋಧಿ ಗುಂಪಿನವರು ಕಡಿದಾಳರು ಬೆಂಗಳೂರಿನಲ್ಲಿ

ಇಪ್ಪತ್ತೈದು ನಿವೇಶನಗಳನ್ನು ಹೊಂದಿದ್ದಾರೆಂದು ಅಕ್ರಮ ಸಂಪಾದನೆಯಿಂದ ಬೆಂಗಳೂರಿನಲ್ಲಿ ಒಂದು ಮನೆಯನ್ನು ಕೊಂಡಿದ್ದಾರೆಂದು ಅಪಪ್ರಚಾರ ಮಾಡಿದರು. ಕಡಿದಾಳರು ವಾಸವಾಗಿದ್ದುದು ಅವರ ಹೆಂಡತಿಯ ತಂದೆಯ ಮನೆಯಲ್ಲಿ ಎಂದು ಗೊತ್ತಿದ್ದೂ ಅಪಪ್ರಚಾರ ಮಾಡಿದರು. ಆದರೆ ಕಡಿದಾಳರ ವಿರುದ್ಧ ಸ್ಪರ್ಧಿಸಿದ್ದ ಸಭ್ಯಮನುಷ್ಯ ಎನ್.ಪಿ.ಗೋವಿಂದಗೌಡರು ಕಡಿದಾಳರ ವಿರುದ್ಧ ಆಕ್ಷೇಪಾರ್ಹವಾದ ಯಾವುದೇ ಆಪಾದನೆ ಮಾಡಲಿಲ್ಲ. ಗ್ರಾಮಾಂತರ ಪ್ರದೇಶದಲ್ಲಿ ಬಡಗೇಣಿದಾರರು ತಂಡೋಪತಂಡವಾಗಿ ಕಡಿದಾಳರಿಗೋಸ್ಕರ ಚುನಾವಣಾ ಕಣಕ್ಕೆ ಧುಮುಕಿ ಅಹರ್ನಿಶಿ ದುಡಿದರು. ಕಡಿದಾಳರೊಂದಿಗೆ ಲೋಕಸಭೆಗೆ ಸ್ಪರ್ಧಿಸಿದ್ದ ಎಸ್.ವಿ.ಕೃಷ್ಣಮೂರ್ತಿರಾಯರು ಯಾವ ಪ್ರಚಾರವನ್ನು ಮಾಡಲಿಲ್ಲ. ಕಡಿದಾಳರೇ ಪ್ರಚಾರ ಮಾಡಬೇಕಾಯಿತು. ಅಂದು ಕಡಿದಾಳರ ಚುನಾವಣಾ ವೆಚ್ಚ ಕೇವಲ ಆರುಸಾವಿರ ರೂಪಾಯಿ, ಅಂದು ಇಂದಿನಂತೆ ಮತದಾರರಿಗೆ ಹಣ ಹಂಚಿ ಓಟು ಪಡೆಯುವ ಸಂಸ್ಕೃತಿ ಇರಲಿಲ್ಲ. ಮತದಾರರು ಕೂಡ ಅದನ್ನೆಲ್ಲ ನಿರೀಕ್ಷಿಸುತ್ತಿರಲಿಲ್ಲ. ಇಂದು ರಾಜಕಾರಣಿಗಳು ಮತದಾರರನ್ನು ಕೊಳ್ಳುತ್ತಿದ್ದಾರೆ. ಮತದಾರರು ಮತ ಹಾಕಲು ಏನುಕೊಡುತ್ತೀರಿ ಎಂದು ಕೇಳುವ ಸ್ಥಿತಿಗೆ ಬಂದಿದ್ದಾರೆ. ಕಡಿದಾಳರಿಗೆ ತಿಳಿಯದಂತೆ ಮತ್ತು ಅವರನ್ನು ಕೇಳದೆ ಅವರ ಬಂಧುವೊಬ್ಬರು ರೂ. ೯೪೭೫ ಖರ್ಚು ಮಾಡಿರುವುದಾಗಿ ತಿಳಿಸಿದರು. ಅವರು ಅಷ್ಟು ಖರ್ಚು ಮಾಡುವ ಅವಶ್ಯಕತೆಯೆ ಇರಲಿಲ್ಲ. ಕಡಿದಾಳರಿಗೆ ಕೋಪ ಬಂದರೂ ಅದನ್ನು ನುಂಗಿಕೊಂಡು ಅವರು ಖರ್ಚುಮಾಡಿದ ಹಣವನ್ನು ಕಂತಿನ ಮೇಲೆ ತೀರಿಸಿದರು. ಕಡಿದಾಳರು ಗೆದ್ದರೆ ಮುಖ್ಯಮಂತ್ರಿ ಸ್ಥಾನಕ್ಕೆ ಪ್ರಬಲಸ್ಪರ್ಧಿಯಾಗುವರೆಂದು ಮುಖ್ಯಮಂತ್ರಿ ಸ್ಥಾನದ ಆಕಾಂಕ್ಷಿಗಳು ಅವರನ್ನು ಸೋಲಿಸಲು ಹಣ ಖರ್ಚು ಮಾಡಿದರು. ಈ ದುಷ್ಟಶಕ್ತಿಗಳನ್ನು ಮೆಟ್ಟಿ ಮತದಾರರು ಕಡಿದಾಳರನ್ನು ಹದಿನಾರು ಸಾವಿರ ಅಂತರದಿಂದ ಗೆಲ್ಲಿಸಿದರು.

ಜತ್ತಿಯವರು ಚುನಾವಣೆಯಲ್ಲಿ ವಿಧಾನಸಭೆಗೆ ಆಯ್ಕೆಯಾಗಿದ್ದರು. ನಿಜಲಿಂಗಪ್ಪನವರು ಹೊಸದುರ್ಗ ಕ್ಷೇತ್ರದಿಂದ ಪರಾಜಿತರಾಗಿದ್ದರು. ಶಾಸಕಾಂಗ ಪಕ್ಷದ ನಾಯಕನನ್ನು ಆಯ್ಕೆಮಾಡಲು ವೀಕ್ಷಕರಾಗಿ ಕೇಂದ್ರಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರೀಯವರು ಆಗಮಿಸಿದ್ದರು. ಶಾಸಕರುಗಳು ಸೂಚಿಸದ ವ್ಯಕ್ತಿಗಳು ಶಾಸ್ತ್ರೀಯವರಿಗೆ ಒಪ್ಪಿಗೆಯಾಗಲಿಲ್ಲ. ಆದ್ದರಿಂದ ಅವರು ಕಡಿದಾಳರಿಗೆ ನಾಯಕನಾಗಲು ಒಪ್ಪಿಕೊಳ್ಳಬೇಕೆಂದು ಕೇಳಿದರು. ತೂಕದಲ್ಲೂ ಘನತೆಯಲ್ಲೂ ಇಬ್ಬರೂ ಸರಿಸಮಾನರು. ಕಡಿದಾಳರು ಉತ್ತರ ಕರ್ನಾಟಕದ ಶಾಸಕರ ಬೆಂಬಲ ತನಗಿಲ್ಲವೆಂದು ಜತ್ತಿಯವರನ್ನು ನಾಯಕನನ್ನಾಗಿ ಆಯ್ಕೆ ಮಾಡುವುದು ಸೂಕ್ತವೆಂದು ಪ್ರಾಮಾಣಿಕವಾಗಿ ತಿಳಿಸಿದರು.

ಆದರೆ ಜತ್ತಿಯವರರು ನಾಯಕನಾಗಿ ಆಯ್ಕೆಯಾಗದಂತೆ ನಿಜಲಿಂಗಪ್ಪನವರ ಪಡೆ ಪ್ರಬಲವಾದ ಗುಂಪೊಂದನ್ನು ಜತ್ತಿಯವರ ವಿರುದ್ಧ ಎತ್ತಿ ಕಟ್ಟಿದ್ದಿತು. ನಿಜಲಿಂಗಪ್ಪನವರ ಪರವಾಗಿ ಎಸ್.ಆರ್.ಕಂಠಿಯವರನ್ನು ನಾಯಕಸ್ಥಾನಕ್ಕೆ ನಿಲ್ಲಿಸಿದ್ದರು. ಯಾವಾಗಬೇಕೊ ಆವಾಗ ಕಂಠಿಯವರು ನಿಜಲಿಂಗಪ್ಪನವರಿಗೆ ಅಧಿಕಾರ ಹಸ್ತಾಂತರ ಮಾಡುವ ಸಲುವಾಗಿ. ಚುನಾವಣೆಯಲ್ಲಿ ಜತ್ತಿಯವರು ಪರಾಭವಗೊಂಡು ಕಂಠಿಯವರು ಆಯ್ಕೆಯಾದರು. ಮುಖ್ಯಮಂತ್ರಿಯೂ ಆದರು. ಸಂಪುಟವನ್ನು ರಚಿಸಿದರು. ಕಡಿದಾಳರನ್ನು ಸಂಪುಟಕ್ಕೆ ತೆಗೆದುಕೊಳ್ಳಲಿಲ್ಲ. ಕಡಿದಾಳರು ತನ್ನನ್ನು ಮಂತ್ರಿಯನ್ನಾಗಿ ಏಕೆ ಮಾಡಲಿಲ್ಲ ಎಂದು ಕೇಳಲಿಲ್ಲ. ಕಂಠಿಯವರು ಮುಖ್ಯಮಂತ್ರಿ ಸ್ಥಾನವನ್ನು ನಿಜಲಿಂಗಪ್ಪನವರಿಗೆ ಬಿಟ್ಟುಕೊಡುತ್ತಾರೆಂಬ ಗುಲ್ಲೆದ್ದಿತು. ಪ್ರಜಾವಾಣಿ ಪತ್ರಿಕೆಯಲ್ಲಿ ಒಂದು ವ್ಯಂಗ್ಯ ಚಿತ್ರ ಪ್ರಕಟವಾಯಿತು. 'ಕಾದಿರುವನು ಭರತ ಶ್ರೀರಾಮ ಬರುವನೆಂದು' ಎಂಬ ಶೀರ್ಷಿಕೆಯಲ್ಲಿ, ಭರತನ ಪಾತ್ರದ ಕಂಠಿಯವರು ಪಾದುಕೆಗಳನ್ನು ಹೊತ್ತುತಿರುಗುವ ಚಿತ್ರ , ಶಿಗ್ಗಾವಿ ಕ್ಷೇತ್ರದಿಂದ ಶಾಸಕರಾಗಿ ಆಯ್ಕೆಯಾದ ಮುರುನಾಳ್ ಶಾಸಕಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ನಿಜಲಿಂಗಪ್ಪನವರು ಶಿಗ್ಗಾವಿಯಲ್ಲಿ ಆ ಕ್ಷೇತ್ರದಿಂದ ಸ್ಪರ್ಧಿಸಿ ಅವಿರೋಧ ಆಯ್ಕೆಯಾದರು. ಕಂಠಿಯವರು ಮುಖ್ಯಮಂತ್ರಿಯಾದರು. ಮುಂದೊಂದು ದಿನ ಕಾಂಗ್ರೆಸ್ ಇಬ್ಭಾಗವಾದಾಗ ಮುರನಾಳ್ ಅವರು ನಿಜಲಿಂಗಪ್ಪನವರನ್ನು ಬಿಟ್ಟು ಇಂದಿರಾ ಕಾಂಗ್ರೆಸ್ ಸೇರಿದರು. ನಿಜಲಿಂಗಪ್ಪನವರು ಸಂಪುಟಕ್ಕೆ ಕಡಿದಾಳರನ್ನು ಆಹ್ವಾನಿಸಲಿಲ್ಲ. ಕಡಿದಾಳರು ನಿಜಲಿಂಗಪ್ಪನವರನ್ನು ಕೇಳ ಹೋಗಲಿಲ್ಲ. ಕಡಿದಾಳರ ಮೇಲೆ ಭಯವಿದ್ದುದರಿಂದ ಇದೇ ಸಂದರ್ಭದಲ್ಲಿ ಅವರನ್ನು ರಾಜ್ಯ ಹೈಕೋರ್ಟ್ ನ್ಯಾಯಮೂರ್ತಿಯಾಗಿ ಕಳುಹಿಸುವ ಹುನ್ನಾರು ನಡೆದದ್ದು , ಇಂತಹ ಕುತಂತ್ರ ಬುದ್ಧಿಯನ್ನರಿತ ಕಡಿದಾಳರು ನ್ಯಾಯಮೂರ್ತಿ ಹುದ್ದೆಯನ್ನು ನಿರಾಕರಿಸಿದರು. ಅನಂತರ ರಾಜ್ಯಪಾಲ ಹುದ್ದೆಯ ಆಮಿಷವನ್ನು ಒಡ್ಡಲಾಯಿತು. ಕಡಿದಾಳರು ಅದನ್ನೂ ನಿರಾಕರಿಸಿದರು. ಒಟ್ಟಿನಲ್ಲಿ ಜತ್ತಿಯವರನ್ನು ರಾಜಕಾರಣದಿಂದ ಹೊರಗಟ್ಟಿದಂತೆ ಕಡಿದಾಳರನ್ನು ಹೊರಗಟ್ಟುವ ಪ್ರಯತ್ನ ವಿಫಲವಾಯಿತು.

## ಮಾತೃವಿಯೋಗ

೧೯೬೭ ರಲ್ಲಿ ಶಾಸಕರಾಗಿ ಆಯ್ಕೆಯಾದ ಕಡಿದಾಳರು ವಿಧಾನಸಭೆಗೆ ಹಾಜರಾಗುವುದಲ್ಲದೆ, ಪ್ಯಾಲೇಸ್ ಆರ್ಚರ್ಡ್‌ನಲ್ಲಿ ತನಗೆ ಮಂಜೂರಾಗಿದ್ದ ಸೈಟಿನಲ್ಲಿ ಮನೆ ಕಟ್ಟಿಕೊಳ್ಳುವ ವ್ಯವಹಾರದಲ್ಲಿ ತೊಡಗಿದ್ದರು. ಇದಲ್ಲದೆ ವಕೀಲ ವೃತ್ತಿಯನ್ನು ಮಾಡುತ್ತಿದ್ದರು. ವಕೀಲ ವೃತ್ತಿಯಲ್ಲಿ ಅವರಿಗೆ ಅಪಾರ ಕೇಸುಗಳು ಬರುತ್ತಿದ್ದವು. ಆ

ಕಡೆಗೆ ಹೆಚ್ಚು ಗಮನವನ್ನು ಕೊಡುತ್ತಿದ್ದರು. ಹಾಗಾಗಿ ಅವರಿಗೆ ವಿರಾಮವೇ ಸಿಗುತ್ತಿರಲಿಲ್ಲ. ಅವರು ಆರೋಗ್ಯವಾಗಿ ಇರುವವರೆಗೂ ಕರ್ನಾಟಕದ ಉಚ್ಚನ್ಯಾಯಾಲಯದಲ್ಲಿ ಸುಮಾರು ಐದುಸಾವಿರ ಕೇಸುಗಳನ್ನು ನಡೆಸಿದ ದಾಖಲೆ ಇದೆ. ಅವರ ವಕೀಲಿ ವೃತ್ತಿ ಭರದಿಂದ ಸಾಗುತ್ತಿತ್ತು. ಇದರೊಂದಿಗೆ ಅವರು 'ಪಂಜರವಳ್ಳಿಯ ಪಂಜು' ಎಂಬ ರಾಜಕೀಯ ಕಾದಂಬರಿಯನ್ನು ಬರೆಯುವ ಹವಣಿಕೆಯಲ್ಲಿದ್ದರು. ಚುನಾವಣಾ ಪ್ರಚಾರದ ಸಮಯದಲ್ಲಿ ಅ.ನ.ಕೃ. ಅವರಿಗೆ ಆ ವಿಷಯ ತಿಳಿಸಿದ್ದರು. ಅ.ನ.ಕೃ. ಅವರು ನಕ್ಕು ಆ ವಿಷಯವನ್ನು ಹಗುರವಾಗಿ ತೆಗೆದುಕೊಂಡಿದ್ದರು. ಅಂದರೆ ರಾಜಕಾರಣಿಗಳು ಕಾದಂಬರಿ ಬರೆಯುವುದು ಸಾಧ್ಯವೆ ಎಂದಿರಬೇಕು. ಅವರು ಈ ಜಂಜಾಟದಲ್ಲಿದ್ದಾಗ ಅವರು ತಾಯಿ ದುಗ್ಗಮ್ಮನವರು ದಿನಾಂಕ:೧೬-೦೧-೧೯೬೩ ರಂದು ನಿಧನರಾದರು. ತಾಯಿ ಜೀವ ಬಿಡುವಾಗ ಕಡಿದಾಳರು ಪಕ್ಕದಲ್ಲೇ ಇದ್ದರು.

## ದಿಟ್ಟ ಉತ್ತರ

ದಿನಾಂಕ:೦೮-೦೪-೧೯೬೮ರಂದು ಮುಖ್ಯಮಂತ್ರಿ ನಿಜಲಿಂಗಪ್ಪನವರು ಕಡಿದಾಳರಿಗೆ ಒಂದು ಪತ್ರ ಬರೆದರು. ಅಂತಹ ಪತ್ರ ಇನ್ನೂ ಕೆಲವು ಮಂದಿಗೆ ಹೋಗಿತ್ತೆಂದು ಕಡಿದಾಳರು ಅಭಿಪ್ರಾಯ ಪಡುತ್ತಾರೆ. ಪತ್ರದ ಸಾರಾಂಶವೇನೆಂದರೆ ೧೯೪೭ನೇ ಇಸವಿಯಿಂದ ಕಡಿದಾಳರು ಅವರ ಹೆಸರಿನಲ್ಲಿ ಮತ್ತು ಪತ್ನಿ ಪುತ್ರನ ಹೆಸರಿನಲ್ಲಿ, ಸೊಸೆ ಮತ್ತು ಅಳಿಯ, ಅವರ ಸಹೋದರರು ಇವರುಗಳ ಹೆಸರಿನಲ್ಲಿ ಸಂಗ್ರಹಿಸಿದ ಆಸ್ತಿಗಳ ವಿವರಣೆಯನ್ನು ಅವರ ಕಾಗದದ ಲಗ್ತು ಕಳುಹಿಸಿದ ತಖ್ತೆಯಲ್ಲಿ ಕಂಡಂತೆ ನಮೂದಿಸಿ ಪ್ರತಿಜ್ಞಾಪೂರ್ವಕವಾಗಿ ಘೋಷಣೆ ಮಾಡಬೇಕೆಂಬುದಾಗಿತ್ತು. ನಿಜಲಿಂಗಪ್ಪನವರ ಪತ್ರನೋಡಿ ಕಡಿದಾಳರಿಗೆ ನಗು ಮತ್ತು ಕೋಪ ಏಕಕಾಲದಲ್ಲಿ ಉಕ್ಕಿ ಬಂದಿತು. ಅವರ ಸಂಪುಟದ ಸಚಿವರ ಮೇಲೆ ಭ್ರಷ್ಟಾಚಾರದ ಆಪಾದನೆಗಳು ಕೇಳಿಬರುತ್ತಿದ್ದವು. ಅದನ್ನು ತಡೆಗಟ್ಟಲು ಅಸಮರ್ಥರಾದ ನಿಜಲಿಂಗಪ್ಪನವರು ಕುಟುಂಬ ನಿರ್ವಹಣೆಗಾಗಿ ಮತ್ತು ತಾನು ಮಾಡಿದ ಸಾಲದ ತೀರುವಳಿಗಾಗಿ ದಿನವೂ ತೊಳಲಾಡುತ್ತಿದ್ದವನನ್ನು ಪ್ರತಿಜ್ಞಾ ಪೂರ್ವಕವಾಗಿ ಘೋಷಣೆಯನ್ನು ಮಾಡಬೇಕೆಂದು ಕೇಳಿದ್ದದು ಸ್ವಾಭಾವಿಕವಾಗಿ ಕಡಿದಾಳರಿಗೆ ಕೋಪವನ್ನು ತರಿಸಿತ್ತು. ಸಾಲದಕ್ಕೆ ಅವರು ೧೯೬೭ನೇ ಜನವರಿಯಿಂದ ಸಕ್ರಿಯ ರಾಜಕಾರಣವನ್ನು ತೊರೆದಿದ್ದರು ನಿಜಲಿಂಗಪ್ಪನವರ ಪತ್ರಕ್ಕೆ ಕಡಿದಾಳರು ೨೨-೪-೧೯೬೮ರಂದು ಹೀಗೆ ಉತ್ತರಿಸಿದರು.

"ನಿಮ್ಮ ಕಾಗದ ನೋಡಿ ನನಗೆ ನಗು ಬಂದಿತು. ಭ್ರಷ್ಟರಾಜಕಾರಣಿಯಾದವನು ಯಾವ ಸಂದರ್ಭದಲ್ಲೂ ಸತ್ಯಕ್ಕನುಗುಣವಾಗಿ ಆಸ್ತಿಪಾಸ್ತಿಗಳ ವಿವರಣೆಯನ್ನು

ಕೊಡುವುದು ಅಸಂಭವವೆಂದೂ, ಕಳೆದ ಸುಮಾರು ಒಂದು ದಶಕದ ಅವಧಿಯಲ್ಲಿ ಕೆಲವು ಕಾಂಗ್ರೆಸ್ ನಾಯಕರು ಅಧಿಕಾರದ ಗದ್ದುಗೆಯನ್ನೇರುವ ಸಲುವಾಗಿ ಅಥವಾ ಇದ್ದ ಅಧಿಕಾರವನ್ನು ಉಳಿಸಿಕೊಳ್ಳುವ ಸಲುವಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಲಂಚಕೋರರಿಗೆ ಪ್ರೋತ್ಸಾಹ ಕೊಡುತ್ತಾ ಬಂದಿದ್ದರಿಂದ ಕಾಂಗ್ರೆಸ್ ರಾಜಕಾರಣದಲ್ಲಿ ಭ್ರಷ್ಟಾಚಾರ ಪ್ರಾಪ್ತಿಯಾಗಿದೆ. ಅಲ್ಲದೆ ನಾನು ದೇವರ ಆಣೆಯಾಗಿ ಭ್ರಷ್ಟಾಚಾರದ ಮೂಲಕ ಯಾವ ಆಸ್ತಿಯನ್ನು ಗಳಿಸಿಲ್ಲ. ನಾನು ನನ್ನ ಅವಿಭಕ್ತ ಕುಟುಂಬದ ಸದಸ್ಯರು ಇನ್ನೂ ಸಾಲಗಾರರಾಗಿದ್ದೇವೆ. ನೀವು ಅನುಸರಿಸಿದ ಕ್ರಮದಿಂದ ಕಾಂಗ್ರೆಸ್‌ನಲ್ಲಿ ವ್ಯಾಪಸಿದ್ದ ಭ್ರಷ್ಟಾಚಾರವನ್ನು ತಡೆಗಟ್ಟುವುದು ಅಸಾಧ್ಯ. ನೀವು ಈಗತಾನೆ ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷರಾಗಿರುವುದರಿಂದ ಧೈರ್ಯಮಾಡಿ ಭ್ರಷ್ಟರನ್ನು ಕಾಂಗ್ರೆಸ್ಸಿನಿಂದ ಹೊರದೂಡಿರಿ, ಕಡಿದಾಳರು ಪತ್ರಿಕಾಗೋಷ್ಠಿಯಲ್ಲಿ ನನ್ನ ಆಸ್ತಿಪಾಸ್ತಿ ವಿವರ ಸಲ್ಲಸಿ ಎಂದು ಕೇಳಲು ಇವರು ಯಾರು ಎಂದು ಗುಡುಗಿದ್ದುದು ಪ್ರಜಾವಾಣಿ ಪತ್ರಿಕೆಯಲ್ಲಿ ಓದಿದ್ದುದು ಲೇಖಕನಿಗೆ ಇನ್ನೂ ನೆನಪಿದೆ.

## ರಾಜಕೀಯದಿಂದ ನಿವೃತ್ತಿ

೧೯೬೯ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಇಬ್ಭಾಗವಾಯಿತು. ಪ್ರಧಾನಿ ಇಂದಿರಾಗಾಂಧೀಯವರ ನೇತೃತ್ವದಲ್ಲಿ ಒಂದುಭಾಗ ಆಡಳಿತ ಕಾಂಗ್ರೆಸ್ ಪಕ್ಷವಾಗಿ, ಇನ್ನೊಂದು ಭಾಗ ನಿಜಲಿಂಗಪ್ಪನವರ ನೇತೃತ್ವದಲ್ಲಿ ಸಂಸ್ಥಾಕಾಂಗ್ರೆಸ್ಸಾಗಿ ಉದಯವಾಯಿತು. ಕಾಂಗ್ರೆಸ್ ಇಬ್ಭಾಗವಾದ ಮೇಲೆ ಕಡಿದಾಳರು ಇಂದಿರಾ ಕಾಂಗ್ರೆಸ್ಸಿನ ಕರ್ನಾಟಕ ಶಾಖೆಯ ಅಧ್ಯಕ್ಷರಾಗಬೇಕೆಂದು ಇಂದಿರಾಗಾಂಧಿಯವರು ಮಧ್ಯರಾತ್ರಿಯಲ್ಲಿ ರಾಜ್ಯಸಭಾ ಸದಸ್ಯರಾಗಿದ್ದ ಕೊಲ್ಲೂರು ಮಲ್ಲಪ್ಪನವರ ಮೂಲಕ ಫೋನ್ ಮಾಡಿಸಿದರು. ಕಡಿದಾಳರು ತಾನು ಅಧ್ಯಕ್ಷನಾದರೆ ಅವರ ಜೊತೆಯಲ್ಲಿ ಯಾರ್‍ಯಾರು ಇರುತ್ತಾರೆಂದು ಕೇಳಿ ತಿಳಿದು, ಅಂತಹವರ ಜೊತೆಯಲ್ಲಿ ಕೆಲಸ ಮಾಡುವುದು ಅಸಾಧ್ಯವೆಂದು ಅವರೊಂದಿಗೆ ಶುದ್ಧರಾಜಕಾರಣ ಮಾಡುವುದು ಸಾಧ್ಯವಿಲ್ಲದ ಕಾರಣ ತಾನು ಈಗ ಸಕ್ರಿಯ ರಾಜಕಾರಣದಿಂದ ನಿವೃತ್ತನಾಗಿದ್ದೇನೆಂದು, ಆದ್ದರಿಂದ ತಾನು ಅಧ್ಯಕ್ಷನಾಗಲು ಸಾಧ್ಯವಿಲ್ಲವೆಂದು ಆದರೆ ಪಕ್ಷಕ್ಕೆ ಬೆಂಬಲಕೊಡುತ್ತೇನೆಂದೂ ಹೇಳಿದರು. ಅನಂತರ ಗುಂಡೂರಾವ್ ಮತ್ತು ಎಫ್.ಎಂ. ಖಾನ್ ಅವರು ಕಡಿದಾಳರ ಮೇಲೆ ಕಾಂಗ್ರೆ ಅಧ್ಯಕ್ಷರಾಗಲು ಒತ್ತಡ ಹೇರಿದರು. ಅವರಿಬ್ಬರೂ ಕೊಡುಗು ಜಿಲ್ಲೆಯ ಶನಿವಾರ ಸಂತೆಯ ಪುರಸಭೆಗೆ ನಡೆದ ಚುನಾವಣೆಯ ಸಂಬಂಧವಾಗಿ ಕೇಸೊಂದನ್ನು ರಾಜ್ಯ ಹೈಕೋರ್ಟ್‌ನಲ್ಲಿ ವಾದಮಾಡಲು ಕಡಿದಾಳರಿಗೆ ಕೊಟ್ಟಿದ್ದರು. ಕೇಸು ಅವರಿಗೆ

ಅನುಕೂಲವಾಗಿತ್ತು. ಈ ಕಾರಣದಿಂದ ಅವರಿಬ್ಬರು ನೋಡಲು ಬಂದಿದ್ದರು. ದೇವರಾಜ್ ಅರಸು ಅವರನ್ನು ನೆಚ್ಚಿಕೊಂಡು ಕಾಂಗ್ರೆಸ್ ಬೆಳೆಸುವಂತಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. ಕಡಿದಾಳರು ಕೊಲ್ಲೂರು ಮಲ್ಲಪ್ಪನವರಿಗೆ ಕೊಟ್ಟ ಉತ್ತರವನ್ನೇ ಅವರಿಬ್ಬರಿಗೂ ಕೊಟ್ಟರು. ಕಡಿದಾಳರು ಒಪ್ಪದ ಕಾರಣ ಅರಸು ಕೊರಳಿಗೆ ಅಧ್ಯಕ್ಷ ಪದವಿ ಬಿದ್ದಿತು. ಅರಸು ಅವರು ಕಡಿದಾಳರ ಮನೆಗೆ ಬಂದು ತಾವು ಒಪ್ಪದೇ ಇದ್ದುದರಿಂದ ಇಂದಿರಾಗಾಂಧಿ ಅವರು ತನ್ನನ್ನು ಅಧ್ಯಕ್ಷನನ್ನಾಗಿ ಮಾಡಿದ್ದಾರೆಂದು ತಾವು ತನ್ನನ್ನು ಆಶೀರ್ವದಿಸಿ ಬೆಂಬಲಿಸಬೇಕೆಂದು ಕೇಳಿದರು. ಕಡಿದಾಳರು ತಾವು ಬೆಂಬಲ ಕೊಡುವುದಾಗಿ ಆಶ್ವಾಸನೆ ಕೊಟ್ಟರು. ಹಾಗೂ ಅವರು ಶಿವಮೊಗ್ಗೆಗೆ ಅರಸು ಅವರೊಂದಿಗೆ ಹೋಗಿ ಕಾಂಗ್ರೆಸ್ ಕಾರ್ಯಕರ್ತರನ್ನುದ್ದೇಶಿಸಿ ಇಂದಿರಾ ಕಾಂಗ್ರೆಸ್ಸಿಗೆ ಬೆಂಬಲ ನೀಡಬೇಕೆಂದೂ, ಶ್ರೀಮತಿ ಗಾಂಧಿಯವರು ದೇಶಕ್ಕೆ ಸ್ವಚ್ಛವಾದ ಆಡಳಿತ ಹಾಗೂ ರಾಜಕಾರಣವನ್ನು ನೀಡುವರೆಂದೂ ಭಾಷಣ ಮಾಡಿದರು. ಶಿವಮೊಗ್ಗ ಜನರನ್ನೂ ಕುರಿತು ಬಹಿರಂಗ ಭಾಷಣ ಮಾಡುವಾಗಲೂ ಹಾಗೇ ಹೇಳಿದರು. ಅನಂತರ ಕೆಲವು ಸಾರಿ ಇಂದಿರಾಗಾಂಧಿಯವರ ಪಕ್ಷದ ಪರವಾಗಿ ಪತ್ರಿಕಾ ಹೇಳಿಕೆಯನ್ನು ಕೊಡುತ್ತಿದ್ದರು. ಅವಿಭಾಜ್ಯ ಕಾಂಗ್ರೆಸ್ಸನ ಆಳ್ವಿಕೆಯಿಂದ ಬೇಸರಗೊಂಡಿದ್ದ ಜನರು ಶ್ರೀಮತಿ ಗಾಂಧಿಯವರು ಪಕ್ಷ ಭ್ರಷ್ಟಾಚಾರ ರಹಿತ ಸ್ವಚ್ಛ ಆಡಳಿತ ನೀಡುತ್ತಿದೆ ಎಂಬ ನಿರೀಕ್ಷೆಯಿಂದ ಶ್ರೀಮತಿ ಗಾಂಧಿಯವರ ಪಕ್ಷಕ್ಕೆ ಬೆಂಬಲ ನೀಡಲಾರಂಭಿಸಿದರು. ೧೯೭೦ ರಲ್ಲಿ ಬೆಂಗಳೂರು ನಗರ ಪಾಲಿಕೆಗೆ ನಡೆದ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ಸು ಅದ್ಭುತ ಜಯಗಳಿಸಿತು. ಈ ಜಯದಿಂದ ಅರಸು ಅವರ ತಲೆತಿರುಗಿತು. ಮೊದಲು ಕಡಿದಾಳರ ಅವಿಚ್ಛಿನ್ನ ಭಕ್ತರಂತೆ ವರ್ತಿಸುತ್ತಿದ್ದ ಅರಸುರವರು, ಕ್ರಮೇಣ ಕಡಿದಾಳರನ್ನು ಕಡೆಗಣಿಸಲಾರಂಭಿಸಿದರು. ೧೯೭೧ರ ಲೋಕಸಭಾ ಚುನಾವಣೆಯಲ್ಲಿ ಅರಸುರವರು ಚಿಕ್ಕಮಗಳೂರು ಶಿವಮೊಗ್ಗ ಜಿಲ್ಲೆಯ ಕಾಂಗ್ರೆಸ್ ದುರೀಣರು ಕಡಿದಾಳರನ್ನು ತಮ್ಮ ಜಿಲ್ಲೆಯಿಂದ ಲೋಕಸಭೆಗೆ ಸ್ಪರ್ಧಿಸಲು ಒತ್ತಾಯಪಡಿಸಿದರು. ಕಡಿದಾಳರು ತಮ್ಮ ಆರೋಗ್ಯದ ದೃಷ್ಟಿಯಿಂದ ಮತ್ತು ತಮ್ಮ ಏಕೈಕ ಮಗನು ಅಮೇರಿಕಾದಲ್ಲಿದ್ದುದರಿಂದ ಸ್ಪರ್ಧಿಸಲು ಇಚ್ಚಿಸಲಿಲ್ಲ. ಶಿವಮೊಗ್ಗೆಯಿಂದ ಸ್ಪರ್ಧಿಸಲು ತಮ್ಮ ಹಿತೈಷಿಗಳಾದ ನಲುಗುದರೆ ವೀರಬಸಪ್ಪನವರ ಮಗ ಟಿ.ವಿ.ಚಂದ್ರಶೇಖರಪ್ಪನವರಿಗೆ ತನ್ನ ಬದಲಿಗೆ ಟಿಕೆಟ್ ಕೊಡಿಸಿದರು. ಚಂದ್ರಶೇಖರಪ್ಪನವರೊಂದಿಗೆ ಚುನಾವಣಾ ಪ್ರಚಾರಕ್ಕೆಂದೆ ಸಾಗರ ತಾಲ್ಲೂಕಿನ ಕಾಗೋಡಿಗೆ ಹೋದಾಗ, ಕಾಗೋಡು ತಿಮ್ಮಪ್ಪನವರ ತಂದೆ ಸಾವಾಜಿ ಬೀರನಾಯಕ ಕಡಿದಾಳರನ್ನು ತಬ್ಬಿಕೊಂಡು " ನಮ್ಮ ತಂದೆ ನಮ್ಮ ದೇವರು" ಎಂದುದು

ನೋಡುವವರಿಗೆ ಹೃದಯಸ್ಪರ್ಶಿ ಘಳಿಗೆಯಾಗಿತ್ತು. ಕಾಗೋಡು ಸತ್ಯಾಗ್ರಹಕ್ಕೂ ಮುಂಚೆ ಕಡಿದಾಳರು ಗೇಣೀದಾರರ ಸಂಘದ ಅಧ್ಯಕ್ಷರಾಗಿ ಆ ಕಡೆಯಲ್ಲಿ ಓಡಾಡಿ ಜನಗಳ ಹೃದಯವನ್ನು ಗೆದ್ದಿದ್ದರ ಫಲವಿದು. ಡಿ.ಬಿ.ಚಂದ್ರೇಗೌಡರ ಪರವಾಗಿ ಚಿಕ್ಕಮಗಳೂರು ಜಿಲ್ಲೆಗೂ ಮಂಡ್ಯ ಜಿಲ್ಲೆಗೂ ಚುನಾವಣಾ ಪ್ರಚಾರಕ್ಕೆ ಕಡಿದಾಳರು ಹೋಗಿದ್ದರು. ಆ ಮಹಾಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ಸಿನ ಅಭ್ಯರ್ಥಿಗಳು ದೊಡ್ಡ ಪ್ರಮಾಣದಲ್ಲಿ ಲೋಕಸಭೆಗೆ ಆಯ್ಕೆಯಾದರು. ಆದರೆ ಶ್ರೀಮತಿ ಇಂದಿರಾಗಾಂಧಿಯವರು ಚುನಾವಣೆಯಲ್ಲಿ ಹಣದ ಹೊಳೆ ಹರಿಸಿದ್ದು ನೋಡಿ ಕಡಿದಾಳರಿಗೆ ಜಿಗುಪ್ಸೆ ಹುಟ್ಟಿಸಿತು. ಇದರಿಂದಾಗಿ ಅವರು ರಾಜಕಾರಣದಿಂದ ಸಂಪೂರ್ಣವಾಗಿ ಹಿಂದೆ ಸರಿದರು. ಅವರು ಸ್ವಚ್ಛ ರಾಜಕಾರಣ ಮತ್ತು ಉತ್ತಮ ಆಡಳಿತ ಕೊಡುತ್ತಾರೆಂಬ ಕಡಿದಾಳರ ಕನಸು ಭಗ್ನವಾಯಿತು.

ದಿನಾಂಕ:೫-೧೧-೧೯೭೮ ಇಂದಿರಾಗಾಂಧಿಯವರು ಚಿಕ್ಕಮಗಳೂರು ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿದ್ದರು. ಅವರಿಗಾಗಿ ಲೋಕಸಭಾ ಸದಸ್ಯ ಡಿ.ಬಿ.ಚಂದ್ರೇಗೌಡರು ಸ್ಥಾನ ತೆರವು ಮಾಡಿಕೊಟ್ಟಿದ್ದರು ಇಂದಿರಾಗಾಂಧಿ ಅವರ ಲೋಕಸಭಾಸದಸ್ಯತ್ವವನ್ನು ಅಲಹಾಬಾದ್ ಹೈಕೋರ್ಟ್ ರದ್ದುಗೊಳಿಸಿ ಪ್ರತಿಸ್ಪರ್ಧಿ ರಾಜನಾರಾಯಣ್ ಅವರ ಆಯ್ಕೆ ಪತ್ರವನ್ನು ತಡೆಹಿಡಿದಿತ್ತು. ಆದ್ದರಿಂದ ಚಿಕ್ಕಮಗಳೂರು ಸೂಕ್ತ ಕ್ಷೇತ್ರವೆಂದು ಆಯ್ಕೆ ಮಾಡಲಾಗಿತ್ತು. ಆ ಚುನಾವಣೆಯಲ್ಲಿ ಇಂದಿರಾಗಾಂಧಿ ವಿರುದ್ಧ ಕಡಿದಾಳರನ್ನು ನಿಲ್ಲಿಸಲು ವಿರೋಧಪಕ್ಷಗಳ ನಾಯಕರು ಕಡಿದಾಳರ ಮೇಲೆ ಬಹಳ ಒತ್ತಡ ತಂದರು. ಕಡಿದಾಳರು ಆದರ್ಶವಿಲ್ಲದ ಅಧಿಕಾರ ಲಾಲಸೆಯ ರಾಜಕಾರಣದಲ್ಲಿ ತೊಡಗಲು ಮನಸ್ಸು ಮಾಡಲಿಲ್ಲ. ಆಗ ಕಡಿದಾಳರ ಬದಲಿಗೆ ವಿರೇಂದ್ರ ಪಾಟೀಲರನ್ನು ವಿರೋಧಪಕ್ಷದ ಅಭ್ಯರ್ಥಿಯಾಗಿ ನಿಲ್ಲಿಸಿದರು. ಪಾಟೀಲರು ಸೋತು ಇಂದಿರಾಗಾಂಧಿ ಗೆದ್ದರು. ಶ್ರೀಮತಿ ಗಾಂಧಿ ವಿರುದ್ಧ ಕಡಿದಾಳರು ಸ್ಪರ್ಧಿಸಿದ್ದರೆ. ಕಾಂಗ್ರೆಸ್ ಪಕ್ಷ ಅವರನ್ನು ಸೋಲಿಸಲು ಕಷ್ಟಪಡಬೇಕಿತ್ತು. ಹಣದ ಪ್ರಭಾವದಿಂದ ಶ್ರೀಮತಿ ಗಾಂಧಿ ಗೆದ್ದರೂ ಗೆಲ್ಲಬಹುದಿತ್ತು. ಆದರೆ ಕಡಿದಾಳರಿಗೆ ರಾಜಕಾರಣದ ಮೇಲೆ ಸಂಪೂರ್ಣ ಆಸಕ್ತಿ ಹೋಗಿಬಿಟ್ಟಿತ್ತು. ಅವರು ಜೀವನ ಯೋಜನೆಗಾಗಿ ಸಂಪೂರ್ಣ ವಕೀಲಿವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

### ಜೆ.ಪಿ.ಚಳುವಳಿಯಲ್ಲಿ ಕಡಿದಾಳರು

೧೯೭೫ರಲ್ಲಿ ಲೋಕನಾಯಕ ಜಯಪ್ರಕಾಶ್ ನಾರಾಯಣ್ ಅವರು ಜನಜಾಗೃತಿಯನ್ನುಂಟು ಮಾಡುವ ಸಲುವಾಗಿ ರಾಜ್ಯದಲ್ಲಿ ಪ್ರವಾಸ ಕೈಗೊಂಡರು.

ಸ್ವಾತಂತ್ರ್ಯ ವೀರನಿಗೆ ಸ್ವಾಗತಕೋರಲು, ಅವರ ಪ್ರವಾಸಕ್ಕೆ ಅನುಕೂಲ ಕಲ್ಪಿಸಲು ಕಡಿದಾಳರು ಕಲವು ಆಸಕ್ತರೊಂದಿಗೆ ಸ್ವಾಗತ ಸಮಿತಿ ರಚಿಸಿದರು. ಆ ಸಭೆಗೆ ಕೆ.ಎಸ್.ಹೆಗಡೆ ಬಿ.ಎನ್.ಗುಪ್ತ ಅವರು ಆಗಮಿಸಿದ್ದರು. ಸಭೆಯು ಕಡಿದಾಳರನ್ನೆ ಸ್ವಾಗತ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿತು. ಕಡಿದಾಳರಿಗೆ ಬೆಂಬಲವಾಗಿ ಹೆಚ್.ಎಸ್.ದೊರೆಸ್ವಾಮಿ.ಎಂ. ಚಂದ್ರಶೇಖರ್, ಡಾ॥ ನಾಗಪ್ಪ ಆಳ್ವ, ಟಿ.ಆರ್.ಶಾಮಣ್ಣ, ಬಿ.ಎನ್.ಗುಪ್ತ ಮುಂತಾದವರಿದ್ದರು. ಬೆಂಗಳೂರಿಗೆ ಬಂದ ಜೆ.ಪಿ.ಯವರು ಕಡಿದಾಳರೊಂದಿಗೆ ಕಾಂಗ್ರೆಸ್ ಪಕ್ಷವನ್ನು ಅಧಿಕಾರ ಗದ್ದುಗೆಯಿಂದ ಇಳಿಸಲು ವಿರೋಧಪಕ್ಷಗಳೊಡನೆ ಸಹಕರಿಸಬೇಕೆಂದು ಕೇಳಿಕೊಂಡರು. ಕಡಿದಾಳರು ವಿರೋಧ ಪಕ್ಷದವರೂ ಆಡಳಿತ ಪಕ್ಷದವರಷ್ಟೇ ಭ್ರಷ್ಟರೆಂದು ಹೇಳಿ ಅವರನ್ನು ನಂಬಿ ರಾಜಕಾರಣವನ್ನು ಮಾಡುವಂತಿಲ್ಲ ಎಂದು ತಿಳಿಸಿದರು. ಹಾಗೂ ಜೆ.ಪಿ.ಯವರೇ ಒಂದು ಪಕ್ಷವನ್ನು ಕಟ್ಟಿದರೆ ಒಳ್ಳೆಯದೆಂದು ಹೇಳಿದರು. ದಿನಾಂಕ:೩೧--೦೫-೧೯೭೫ರಲ್ಲಿ ಜೆ.ಪಿ.ಯವರಿಗೆ ಬರೆದ ಪತ್ರದಲ್ಲಿ ಕಡಿದಾಳರು ವಿರೋಧ ಪಕ್ಷಗಳನ್ನು ಒಂದೇ ಪಕ್ಷದಲ್ಲಿ ವಿಲೀನಗೊಳಿಸಿ ಒಂದೇ ಧ್ಯೇಯ ಧೋರಣೆ ಮತ್ತು ಒಂದೇ ಧ್ವಜ ಹೊಂದಿ ಶುದ್ಧ ರಾಜಕಾರಣದ ಹೊಸ ರಾಜಕೀಯ ಶೈಲಿಯನ್ನು ಪ್ರಾರಂಭಿಸದ ಹೊರತು ಜನರು ವಿರೋಧ ಪಕ್ಷಗಳನ್ನು ನಂಬುವುದಿಲ್ಲವೆಂದು ತಿಳಿಸಿದರು. ಕಡಿದಾಳರ ಕನಸು ೧೯೭೭ರಲ್ಲಿ ನನಸಾಯಿತು. ವಿರೋಧ ಪಕ್ಷಗಳು ಒಗ್ಗೂಡಿ ಕೇಂದ್ರದಲ್ಲಿ ಇಂದಿರ ಸರ್ಕಾರವನ್ನು ಉರುಳಿಸಿದರು ಅನಂತರದ ದಿನಗಳಲ್ಲಿ ಕೇಂದ್ರದ ರಾಜಕಾರಣಿಗಳಲ್ಲಿ ಸ್ವಾರ್ಥ, ಅಧಿಕಾರದಾಹ, ಒಳಜಗಳ ಹುಟ್ಟಿಕೊಂಡು ಹೊಸಪಕ್ಷ ಬಹುಬೇಗನೆ ನೆಲಕಚ್ಚಿತು. ಇದೀಗ ಕಡಿದಾಳರ ಕನಸು ನನಸಾಗಲಿಲ್ಲ. ರಾಜಕೀಯ ವ್ಯಕ್ತಿಗಳು ಶುದ್ಧಹಸ್ತರಾಗುವ ತನಕ ಕಡಿದಾಳರ ಕನಸು ನನಸಾಗುವುದಿಲ್ಲ. ನಮ್ಮ ದೇಶದ ರಾಜಕಾರಣಿಗಳಲ್ಲಿ ಶುದ್ಧ ಹಸ್ತರನ್ನು ಇನ್ನು ನಾವು ಕಾಣುವುದು ಸಾಧ್ಯವೇ ಇಲ್ಲವೇನೋ? ಕಡಿದಾಳರು ಜೆ.ಪಿ.ಚಳುವಳಿಯ ಸಮಯದಲ್ಲಿ ನೂರಾನಾಲ್ಕು ಡಿಗ್ರಿ ಜ್ವರದಲ್ಲಿ ನರಳುತ್ತಿದ್ದರು. ಮೈಸೂರು ನಗರದ ಪುರಭವನದಲ್ಲಿ ಇಂದಿರಾಕಾಂಗ್ರೆಸ್ಸನ್ನು ಅಧಿಕಾರದಿಂದ ಕಿತ್ತೊಗೆಯಬೇಕೆಂದು ಸಾರ್ವಜನಿಕರನ್ನುದ್ದೇಶಿಸಿ ಭಾಷಣ ಮಾಡಿದ್ದುದನ್ನು ಲೇಖಕನು ಕಣ್ಣಾರೆ ಕಂಡಿದ್ದಾನೆ.

## ಕಡಿದಾಳರು ಅಸ್ತಂಗತ

ಕಡಿದಾಳರು ೧೯೬೯ ರಿಂದ ಬಿ.ಎಂ.ಎಸ್. ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಸುಮಾರು ಹತ್ತು ವರ್ಷಗಳಕಾಲ ಸೇವೆಸಲ್ಲಿಸಿದರು. ಟ್ರಸ್ಟ್‌ಗೆ ಸಂಬಂಧಪಟ್ಟ

ಕೆಲಸಕಾರ್ಯಗಳನ್ನು ಕೂಡ ಹೆಚ್ಚುಹೆಚ್ಚಾಗಿ ನಿರ್ವಹಿಸಬೇಕಾಗಿ ಬಂದಿತು. ವಕೀಲಿ ವೃತ್ತಿಗೆ ಸಂಬಂಧಪಟ್ಟ ಕೆಲಸ ಕಾರ್ಯಗಳನ್ನು ಕಡಿಮೆ ಮಾಡಲು ಸಾಧ್ಯವಿರಲಿಲ್ಲ. ಈ ಎಲ್ಲಾ ಕಾರಣಗಳ ದೆಸೆಯಿಂದಾಗಿ ಟ್ರಸ್ಟ್‌ನ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆ ನೀಡಿದರು. ದಿನಾಂಕ:೨೨-೦೩-೧೯೭೫ ರಲ್ಲಿ ರಾಜ್ಯ ಉಚ್ಛನ್ಯಾಯಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರ ಸಲಹೆ ಮೇರೆಗೆ ಕಡಿದಾಳರು ಕರ್ಣಾಟಕ ಗಾಂಧಿ ಸ್ಮಾರಕನಿಧಿಯ ಅಧ್ಯಕ್ಷರಾದರು. ಕಡಿದಾಳರು ಒಲ್ಲೆ ಎಂದರು. ಹಾಗಾದರೆ ನಿಮ್ಮಂತಹ ಸತ್ಯಸಂಧರು, ಪ್ರಾಮಾಣಿಕರನ್ನು ಹುಡುಕಿಡಿ ಎಂದಾಗ ಕಡಿದಾಳರು ಒಪ್ಪಲೇಬೇಕಾಯಿತು. ೧೯೭೭ ರಲ್ಲಿ ಜಗಜೀವನರಾಂ ಮತ್ತು ಹೆಚ್.ಎನ್.ಬಹುಗುಣ ಅವರುಸ್ಥಾಪಿಸಿದ 'ಕಾಂಗ್ರೆಸ್ ಫಾರ್ ಡೆಮಾಕ್ರಸಿ' ರಾಜಕೀಯ ಪಕ್ಷದ ಕರ್ಣಾಟಕ ಶಾಖೆಯ ಅಧ್ಯಕ್ಷರಾದರು. ಪಕ್ಷವು ಜನತಾಪಕ್ಷದೊಂದಿಗೆ ವಿಲೀನವಾದಾಗ ಕಡಿದಾಳರು ಅದನ್ನು ವಿರೋಧಿಸಿ ರಾಜೀನಾಮೆ ಕೊಟ್ಟರು. ಸರ್ಕಾರದಲ್ಲಿ ನಡೆಯುವ ಭ್ರಷ್ಟಾಚಾರ ಮತ್ತು ಜನಸಾಮಾನ್ಯರ ಕುಂದುಕೊರತೆಗಳನ್ನು ವಿಚಾರಿಸಿಕೊಳ್ಳುವ ಸಲುವಾಗಿ 'ರಾಷ್ಟ್ರೀಯ ಜಾಗೃತಿ ಮಂಡಳಿ'ಯನ್ನು ೧೯೮೨ರಲ್ಲಿ ಸ್ಥಾಪಿಸಿದರು. ಆ ಸಂಸ್ಥೆಯು ಸಂಪೂರ್ಣವಾಗಿ ಕಡಿದಾಳರನ್ನೆ ಅವಲಂಬಿಸಿದ್ದುದರಿಂದ ಕಡಿದಾಳರಿಗೆ ಅನಾರೋಗ್ಯವಾಗಿ ಆ ಸಂಸ್ಥೆಯನ್ನು ನಡೆಸಿಕೊಂಡು ಹೋಗುವ ವ್ಯಕ್ತಿಗಳಾರು ಇಲ್ಲದೆ, ಸಂಸ್ಥೆಯ ಅಸ್ತಿತ್ವವೆ ಉಳಿಯದಂತಾಯಿತು. ದಿನಾಂಕ:೧೫-೦೩-೧೯೮೫ ರಂದು ಕರ್ನಾಟಕ ವಿಧಾನಸಭೆಗೆ ಚುನಾವಣೆ ನಡೆಯುವುದಿತ್ತು. ರಾಜ್ಯದ ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆಯವರು ವಿಧಾನಸಭೆಗೆ ಚುನಾವಣೆಗಳು ನಡೆಯುವ ಕಾಲದಲ್ಲಿ ತಮ್ಮ ಸರ್ಕಾರ ಅಥವಾ ಸರ್ಕಾರದ ಅಧಿಕಾರಿಗಳು ಆಡಳಿತ ಪಕ್ಷದ ಗೆಲುವಿಗಾಗಿ ಕೈವಾಡ ನಡೆಸದಂತೆ ಮಾಡುವ ಉದ್ದೇಶದಿಂದ ಒಂದು ಕಾವಲು ಸಮಿತಿಯನ್ನು ರಚಿಸುವ ತೀರ್ಮಾನ ಮಾಡಿತು. ಆ ಸಮಿತಿಗೆ ಕಡಿದಾಳರೆ ಅಧ್ಯಕ್ಷರಾಗಬೇಕೆಂದು ಹೆಗಡೆಯವರು ಕೇಳಿಕೊಂಡರು. ಕಡಿದಾಳರಿಗೆ ಇಷ್ಟವಿಲ್ಲದಿದ್ದರೂ ಹೆಗಡೆಯವರು ತೀವ್ರ ಕಳಕಳಿಯಿಂದ ಮನವಿಮಾಡಿ ಕೊಂಡಿದ್ದರಿಂದ ಅಧ್ಯಕ್ಷರಾಗಲು ಒಪ್ಪಿಕೊಂಡರು. ಆ ಸಮಿತಿಯುಲ್ಲಿ ಶಿವರಾಮಕಾರಂತರು, ಹೆಚ್. ನರಸಿಂಹಯ್ಯನವರು, ರೆವರೆಂಡ್.ಎಂ.ಎ. ಥಾಮಸ್ ಅವರು ಹಾಗೂ ಎ.ಸಿ.ದೇವೇಗೌಡರು ಸದಸ್ಯರಾಗಿದ್ದರು.

ಕಡಿದಾಳರು ಕಾಮರಾಜ್, ಲಾಲ್‌ಬಹದ್ದೂರ್ ಶಾಸ್ತ್ರಿ, ಗುಲ್ಜಾರಿಲಾಲ್‌ನಂದ ಪರಂಪರೆಯ ರಾಜಕೀಯ ವ್ಯಕ್ತಿ. ಕಡಿದಾಳರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರೂ ಸ್ವಾಭಿಮಾನದಿಂದ ಪಿಂಚಣಿಗಾಗಿ ಅರ್ಜಿಸಲ್ಲಿಸಿರಲಿಲ್ಲ. ಇಂತಹ ವ್ಯಕ್ತಿಗಳನ್ನು

ಇನ್ನುಮುಂದೆ ರಾಜಕಾರಣದಲ್ಲಿ ಕಾಣುವುದು ದುರ್ಲಬ. ಪ್ರಾಮಾಣಿಕ, ಸತ್ಯಸಂಧ, ನಿಷ್ಠಾವಂತ, ತತ್ವನಿಷ್ಠ, ನಿಸ್ವಾರ್ಥ, ಭೂಸುಧಾರಣೆಯ ಹರಿಕಾರ ಕಡಿದಾಳ್ ಮಂಜಪ್ಪನವರು ದಿನಾಂಕ:೦೮-೦೩-೧೯೯೨ರಂದು ನಿಧನರಾದರು. ಇದು ಹಳ್ಳಿಯ ಬಡರೈತನ ಮಗನೊಬ್ಬನ ಜೀವನಗಾಥೆ. ಕಡಿದಾಳರು ರಾಜಕಾರಣದ ಜೊತೆಗೆ ಬಿಡುವಿನ ವೇಳೆಯಲ್ಲಿ ಸಾಹಿತ್ಯ ರಚನೆಯಲ್ಲೂ ತೊಡಗಿದ್ದರು. ಅವರು ಮೂರು ಕಾದಂಬರಿಗಳನ್ನು ಒಂದು ಆತ್ಮಕಥೆಯನ್ನೂ ರಚಿಸಿರುತ್ತಾರೆ. ಅವು ಇಂತಿವೆ. ೧) ಪಂಜರವಳ್ಳಿಯ ಪಂಜು ೨) ನಾಳಿನ ನೆಳಲು ೩) ಕ್ರಾಂತಿಕೂಟ(ಕಾದಂಬರಿಗಳು) ೪) ನನಸಾಗದ ಕನಸು (ಆತ್ಮಕಥೆ). ಈ ಕೃತಿಗಳನ್ನು ಕುರಿತು ಸಾಹಿತ್ಯವಲಯದಲ್ಲಿ ಚರ್ಚೆ ನಡೆಯದಿರುವುದು ದುಃಖದ ಸಂಗತಿ.

**ಸಂದರ್ಶನ**

ಕಡಿದಾಳರ ನಿಕಟ ಪರಿಚಯ ನನಗೆ ೧೯೬೨ ರಿಂದ ಇದ್ದಿತು. ನನಗೆ ಅವರು ಸರ್ಕಾರಿ ಕೆಲಸ ಕೊಡಿಸುವುದರಲ್ಲಿ ನೆರವಾಗಿದ್ದರು. ಸರ್ಕಾರಿ ಕೆಲಸದ ಪ್ರಾರಂಭದ ದಿನಗಳಲ್ಲಿ ನಾನು ಹಾಸನ, ಮೈಸೂರು, ಅರಸೀಕೆರೆ, ಕೋಲಾರ ಊರುಗಳಲ್ಲಿ ಕೆಲಸ ಮಾಡುತ್ತಿದ್ದುದರಿಂದ ಅವರನ್ನು ಭೇಟಿಯಾಗಿರಲಿಲ್ಲ. ಒಂದೆರಡು ಪತ್ರಗಳನ್ನು ಬರೆದಿದ್ದೆನು. ಅವರು ಉತ್ತರಿಸಿದ್ದರು. ೧೯೮೮೪ ರಲ್ಲಿ ನನಗೆ ಬೆಂಗಳೂರಿಗೆ ವರ್ಗಾವಣೆಯಾದಾಗ ಒಂದೆರಡು ಬಾರಿ ಭೇಟಿಯಾಗಿದ್ದೆ ೧೯೮೮ರಲ್ಲಿ ನಾನು 'ವ್ಯಾಮೋಹ' ಕಾದಂಬರಿ ಬರೆದಾಗ ಅವರನ್ನು ಭೇಟಿಮಾಡಿ ಒಂದು ಪ್ರತಿಯನ್ನು ಕೊಟ್ಟು ಮಾತನಾಡಿಕೊಂಡು ಬಂದಿದ್ದೆ. ಅವರಿಗೆ ಅನಾರೋಗ್ಯವಾದಾಗ ಅವರನ್ನು ನಾಲ್ಕಾರು ಸಾರಿ ಭೇಟಿಯಾಗಿದ್ದೆ. ಅವರಿಗೆ ಕೆಲವೊಂದು ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆದಿದ್ದೆ. ಓದುಗರೊಂದಿಗೆ ಅವರ ಸಂದರ್ಶನವನ್ನು ಹಂಚಿಕೊಳ್ಳಲು ಇಷ್ಟಪಡುತ್ತೇನೆ.

**ನಾನು:** ತಮಗೆ ಇಂದಿರಾಗಾಂಧಿಯವರು ೧೯೬೭ ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಇಂದಿರಾ ಕಾಂಗ್ರೆಸ್‌ನ ಕರ್ನಾಟಕ ಶಾಖೆಯ ಅಧ್ಯಕ್ಷರಾಗಲು ಕೇಳಿದರು, ತಾವು ಏಕೆ ಒಪ್ಪಿಕೊಳ್ಳಲಿಲ್ಲ. ತಾವು ಅವತ್ತು ಒಪ್ಪಿಕೊಂಡಿದ್ದರೆ ತಾವೆ ಮುಖ್ಯಮಂತ್ರಿ ಆಗಬಹುದಿತ್ತಲ್ಲ?

ಕಡಿದಾಳರು ಇಂದಿರಾಗಾಂಧಿಯವರಿಗೆ ನಾನು ಕಾಂಗ್ರೆ ಅಧ್ಯಕ್ಷನಾದರೆ ನನ್ನ ಜೊತೆಗೆ ಪದಾಧಿಕಾರಿಗಳು ಯಾರಿರುತ್ತಾರೆಂದು ಕೇಳಿದೆ. ಆಕೆ ಇಬ್ಬರು ಮೂರುಜನ ಭ್ರಷ್ಟರ ಹೆಸರುಗಳನ್ನು ಕೊಲ್ಲೂರು ಮಲ್ಲಪ್ಪನವರ ಮೂಲಕ ಹೇಳಿಸಿದರು. ಅಂತಹವರ ಜತೀಗೆ ಕೆಲಸ ಮಾಡಲಿಕ್ಕೆ ಆಗೊಲ್ಲ. ಬ್ಯಾಡಾಂದೆ. ನನಗೆ ಮುಖ್ಯಮಂತ್ರಿ ಆಗಲೇಬೇಕು ಅಂತಿದ್ದರೆ ನಿಜಲಿಂಗಪ್ಪನವರು ಬಹುಮತ ಕಳಕೊಂಡು ರಾಜೀನಾಮೆ ಕೊಟ್ಟಾಗಲೆ ಆಗಬಹುದಿತ್ತು. ದೆಹಲಿಯಿಂದ ವೀಕ್ಷಕರಾಗಿ ಬಂದ ಲಾಲ್‌ಬಹದ್ದೂರ್ ಶಾಸ್ತ್ರಿಯವರು

ನನಗೆ ನಾಯಕನಾಗಲು ಕೇಳಿದ್ದರು. ಅವರಿಗೆ ನನ್ನ ಮೇಲೆ ಬಹಳ ಪ್ರೀತಿ ವಿಶ್ವಾಸ ಇತ್ತು. ನಾನು ನನಗೆ ಉತ್ತರ ಕರ್ನಾಟಕದ ಶಾಸಕರ ಬೆಂಬಲ ಇಲ್ಲ. ಜತ್ತಿಯವರನ್ನು ಮಾಡಿ ಅಂತ ಹೇಳಿದೆ. ಹಾಗಾಗಿ ಜತ್ತಿಯವರು ಮುಖ್ಯಮಂತ್ರಿ ಆದರು.

**ನಾನು:** ತಮಗೆ ರಾಜ್ಯಪಾಲ ಹುದ್ದೆ ಕೊಡತೀವಿ ಅಂತ ಹೇಳಿಕಳಿಸಿದ್ದರಲ್ಲ. ತಾವು ಯಾಕೆ ಒಪ್ಪಿಕೊಳ್ಳಲಿಲ್ಲ?

**ಕಡಿದಾಳರು;** ಅಯ್ಯೋ ಅವಳು ಇವತ್ತು ರಾಜ್ಯಪಾಲನಾಗು ಅಂತ ಹೇಳುತ್ತಾಳೆ. ನಾಳೆ ಸೆಂಟ್ರಲ್ ಕ್ಯಾಬಿನೇಟಿಗೆ ಬಾ ದುಡ್ಡು ಸಪ್ಲೈ ಮಾಡು ಅಂತಾಳೆ. ನಾನೆಲ್ಲಿಂದ ಅವಳಿಗೆ ದುಡ್ಡು ತಂದು ಕೊಡಲಿ? ನಿಮಗೆ ಹುಡುಗರಿಗೆ ಹುಚ್ಚು. ಅವಳ ಸುತ್ತ ಎಲ್ಲ ಲಂಚಕೋರರೆ ಸೇರಿಕೊಂಡಿದ್ದಾರೆ.

**ನಾನು:** ತಾವು ಬೇಡ ಅಂದಿದ್ದರಿಂದಲೆ ದೇವರಾಜ ಅರಸು ಇಲ್ಲಿ ಕಾಂಗೈ ಪಕ್ಷದ ಅಧ್ಯಕ್ಷರಾದದ್ದು ಅಲ್ಲವೇ?

**ಕಡಿದಾಳರು :** ನಾನು ಬೇಡ ಅಂದಿದ್ದರಿಂದ ಅರಸುಅವರು ಕಾಂಗೈ ಅಧ್ಯಕ್ಷರಾದರು. ನನ್ನತ್ರ ಬಂದು ಆಶೀರ್ವಾದ ಮಾಡಿ ಅಂದರು. ಕಾಂಗೈ ಪಕ್ಷದ ಗೆಲುವಿಗೆ ತಾವು ಬಂದು ಪ್ರಚಾರಮಾಡಿ ಅಂದರು. ಒಪ್ಪಿಕೊಂಡೆ. ಪ್ರಚಾರ ಮಾಡಿದ್ದಾಯಿತು. ಪಕ್ಷ ಅಧಿಕಾರಕ್ಕೆ ಬಂತು. ಆಮೇಲೆ ಅವರಿಗೆ ತಲೆತಿರುಗಿ ಹೋಯಿತು. ಆಮೇಲೆ ಅವರು ನನ್ನನ್ನು ತಿರುಗಿ ನೋಡಲೇ ಇಲ್ಲ. ನಂಗದರಿಂದ ನಷ್ಟ ಇಲ್ಲಾಂತ ಅನಿಸ್ತು. ಅವರಿಂದಲೇ ರಾಜ್ಯದಲ್ಲಿ ಭಾರಿ ಭ್ರಷ್ಟಾಚಾರ ಶುರುವಾದ್ದು. ಅವರಿಗೆ ಅಧಿಕಾರ ಹೋದಮೇಲೆ ಯಾವುದೋ ಮದುವೆ ಮನೇಲಿ ಸಿಕ್ಕಿದ್ದರು. ನಿಮ್ಮಿಂದಲೆ ಈ ರಾಜ್ಯದಲ್ಲಿ ಬಾಳ ಭ್ರಷ್ಟಾಚಾರ ಶುರುವಾಯಿತು ಅಂದೆ. ಅವರು ಅದಕ್ಕೆ ಉತ್ತರ ಕೊಟ್ಟಿದ್ದರೆ ಕೇಳು.

ನಾನು : ನಿಜಲಿಂಗಪ್ಪನವರು ಪ್ರಾಮಾಣಿಕರೆ?

**ಕಡಿದಾಳರು :** ಪ್ರಾಮಾಣಿಕರು ನಗು... ಇಲ್ಲಿ ಬಂದಿದ್ದರು. ಅವರದ್ದು ಹಿತ್ತಾಳೆ ಕಿವಿ. ನನ್ಮೇಲೆ ಶಿವಮೊಗ್ಗದವರು ಯಾರೋ ಒಬ್ಬರು ಹೇಳಿದ್ದರಿಂದ ನನಗೆ ಅವರು ಮಿನಿಷ್ಟ್ರುಕೊಡಲಿಲ್ಲ. ನಾನು ಅವರತ್ತ ಹಲ್ಲುಗಿಂಜಲಕ್ಕೆ ಹೋಗಲಿಲ್ಲ ನಾನು ಎಂ.ಆರ್.ಎ. ಆಗಿದ್ದಾಗ ಅವರು ಚಿತ್ರದುರ್ಗದಲ್ಲಿ ಇಸ್ಪೀಟ್ ಆಡುತ್ತಾ ಕೂತಿದ್ದರು. ನಾನು ಅವರಿಗಿಂತ ಮೊದಲು ಕಾಂಗ್ರೆಸ್ ಸೇರಿದವನು. ನಾನು ಯಾಕೆ ಅವರತ್ರ ಹೋಗಿ ಮಂತ್ರಿ ಪದವಿಗೆ ಅವರ ಕೈಕಾಲು ಹಿಡೀಲಿ? ಜತ್ತಿಯವರನ್ನು ರಾಜ್ಯಪಾಲರನ್ನಾಗಿ

ಮಾಡಿಕಳಿಸಿದಂಗೆ ನನ್ನನ್ನೂ ರಾಜ್ಯಪಾಲರಾಗಿ ಕಳಸ್ಲಿಕ್ಕೆ ನೋಡಿದರು. ನಾನು ಒಪ್ಪಲಿಲ್ಲ. ಆಮೇಲೆ ಹೈಕೋರ್ಟ್ ಜಡ್ಜ್ ಮಾಡಿ ಕಳಿಸಲಿಕ್ಕೆ ನೋಡಿದರು. ಅದಕ್ಕೆ ನಾನು ಒಪ್ಪಲಿಲ್ಲ. ಹಳೇಮೈಸೂರು ಶಾಸಕರ ಬೆಂಬಲ ನನಗಿತ್ತು. ನಾನು ಮನಸ್ಸು ಮಾಡಿದರೆ ಅವರನ್ನ ಉರುಳಿಸಬಹುದಿತ್ತು, ಅದೆಲ್ಲ ನನಗೆ ಇಷ್ಟವಿರಲಿಲ್ಲ. ಹೈಕಮಾಂಡ್ ವಿರುದ್ಧ ಹೋಗೋದು ಒಳ್ಳೇದಲ್ಲ ಅಂತ ಸುಮ್ಮನಿದ್ದೆ. ನನಗೂ ಅಧಿಕಾರ ದಾಹ ಇರಲಿಲ್ಲಾಂತ ಮಾಡು.

**ನಾನು :** ತಾವು ಬಹಳಮಂದಿಗೆ ಸರ್ಕಾರಿ ಅಧಿಕಾರಿ ಹುದ್ದೆಗಳನ್ನು ಕೊಡಿಸಿದ್ದೀರಿ. ಅವರೆಲ್ಲ ಹಿರಿಯ ಅಧಿಕಾರಿಗಳಾಗಿ ನಿವೃತ್ತರಾಗಿದ್ದಾರೆ. ಈಗ ಅವರು ಬಂದು ನಿಮ್ಮನ್ನು ನೋಡುತಾರಾ?

**ಕಡಿದಾಳರು :** (ನಗು) ಇಲ್ಲೆ ಬೆಂಗಳೂರಲ್ಲಿದಾರೆ ಕೆಲವರು. ಬಂದು ಮಾತಾಡಿಸಿ ಆರೋಗ್ಯ ವಿಚಾರಿಸುತ್ತಾರೆ. ಇನ್ನು ಕೆಲವರು ಬರುವುದಿಲ್ಲ. ಅವರು ಬರಲಿಲ್ಲಾಂತ ನಾನು ಬೇಜಾರು ಮಾಡಿಕೊಳ್ಳಲ್ಲ. ನನ್ನ ಕರ್ತವ್ಯ ನಾನು ಮಾಡಿದೀನಿ ಅಂತ ನನಗೆ ತೃಪ್ತಿ ಇದೆ, ಅಷ್ಟು ಸಾಕು.

# ಗುರು-ಶಿಷ್ಯರು

-ಹೆಚ್.ಗಣಪತಿಯಪ್ಪ

ನಮ್ಮಿಬ್ಬರದೂ ಗುರುಶಿಷ್ಯರ ಸಂಬಂಧ. ಇಬ್ಬರೂ ಅಪೇಕ್ಷೆ ಪಟ್ಟು ಜೊತೆಯಲ್ಲಿ ತೆಗೆಯಿಸಿಕೊಂಡ ಫೋಟೊ ೧೮.೦೮.೯೦ ನನಗೆ ಇಂದಿಗೂ ಪೂಜಾರ್ಹವಾಗಿ ಉಳಿದಿದೆ. ಅವರು ತಮ್ಮ ಜೀವಿತದ ಕೆಲವೆ ದಿನಗಳ ಮೊದಲು ಬರೆದು ಮುದ್ರಿಸಿದ 'ನನಸಾಗದ ಕನಸು' ಎಂಬ ಅವರ ಜೀವನ ಚರಿತ್ರೆ ಓದಿದರೆ ಅವರ ಪ್ರಾಮಾಣಿಕ ಜೀವನದ ಮತ್ತು ಸಜ್ಜನಿಕೆಯ ಶ್ರೇಷ್ಠತೆಯ ಬಗ್ಗೆ ಅರಿವಾಗುತ್ತದೆ . ಅದರಲ್ಲಿ ಅವರು ಪ್ರಸ್ತಾಪಿಸಿದ ಕಾಗೋಡು ರೈತ ಹೋರಾಟದ ವಿಷಯ ಮುಖ್ಯವಾಗಿ, ಆ ಬಗ್ಗೆ ರೈತರನ್ನ ಸಂಘಟಿಸಿ ಹೋರಾಟಕ್ಕೆ ಸಜ್ಜುಗೊಳಿಸಿದ ಸಂದರ್ಭವನ್ನು ವಿವರಿಸಿದ್ದಾರೆ. ಅವರೆ ಹೇಳಿರುವಂತೆ 'ಕೋಳಿದೊಡ್ಡಿಯಲ್ಲಿ ಹುಟ್ಟಿದ ವ್ಯಕ್ತಿ ಹಿಮಾಲಯದಷ್ಟು ದೊಡ್ಡವರಾಗಿ ಬೆಳೆದು ರಾಷ್ಟಕ್ಕೆ ಸೇವೆ ಸಲ್ಲಿಸಿ ನಮ್ಮಂಥವರಿಗೆ ನಿಲುಕದ ವ್ಯಕ್ತಿತ್ವವನ್ನು ಪಡೆದಿದ್ದಾರೆ' ಅವರು ಬರೆದಿರುವ ಆತ್ಮ ಚರಿತ್ರೆಯಲ್ಲಿ ಯಾವುದೆ ಸೇರ್ಪಡೆ ಇಲ್ಲವೆ ಕೈಬಿಡುವಂತಹ ಲೋಪಗಳನ್ನ ಮಾಡಲು ಯಾರಿಗೂ ಅಧಿಕಾರವಿಲ್ಲ ಎಂಬುದು ಸಹಜ. 'ನನಸಾಗದ ಕನಸು' ಗ್ರಂಥದ ಮುದ್ರಣದಲ್ಲಿ ಕಾಗೋಡು ಸತ್ಯಾಗ್ರಹ ಕುರಿತು 'ಗೇಣೀದಾರರ ಸಂಘ' ಎಂಬ ಉಪಶೀರ್ಷಿಕೆಯಲ್ಲಿ ಹೀಗೆ ಬರೆದಿದ್ದಾರೆ, ೧೯೫೧ ನೇ ಇಸವಿ ಏಪ್ರಿಲ್ ತಿಂಗಳೆಂದು ನನ್ನ ನೆನಪು. ನಾನು ಮತ್ತು ಇತರ ಮಿತ್ರರೂ ಸಿದ್ಧಗೊಳಿಸಿದ್ದ ಭೂಮಿಕೆಯನ್ನ ಉಪಯೋಗಿಸಿಕೊಂಡು ಸೋಷಿಯಲಿಸ್ಟರು ಸತ್ಯಾಗ್ರಹ ನಡೆಸುತ್ತಾರೆಂದು ಖಚಿತವಾದ ಮೇಲೆ ; ಸೋಷಿಯಲಿಸ್ಟರ ಮುಖಂಡತ್ವದಲ್ಲಿ ನಡೆಯುವ ಸತ್ಯಾಗ್ರಹದಲ್ಲಿ ಭಾಗವಹಿಸಲು ನನಗೆ ಸಾಧ್ಯವಿಲ್ಲವೆಂದು ಒಂದು ಪತ್ರಿಕಾ ಹೇಳಿಕೆಯನ್ನ ಹೊರಡಿಸಿ ಅನಂತರ ಕಾಗೋಡಿನ ವಿಚಾರದಲ್ಲಿ ಆಸಕ್ತಿವಹಿಸಲಿಲ್ಲ ಎಂದು ಬರೆದು ಅದೇ ವಾಕ್ಯವನ್ನು ಮುಂದುವರಿಸಿ 'ಈ ಸಂದರ್ಭದಲ್ಲಿ ನನಗೆ ಗೇಣಿದಾರರ ಸಂಘಟನೆಯ ವಿಚಾರದಲ್ಲಿ ಬೆಂಬಲ ನೀಡಿರುವ ಡಿ. ಮೂಕಪ್ಪನವರನ್ನೂ, ಈಗಲೂ ಸಹ ನನ್ನ ಶಿಷ್ಯನಾಗಿ ಉಳಿದಿರುವ ಶ್ರೀ ಗಣಪತಿಯಪ್ಪನವರನ್ನೂ, ಸವಾಜಿಬೀರನಾಯುಕರನ್ನೂ, ಬರ್ಸಿನ ದೇವಪ್ಪನವರನ್ನೂ, ಮನೆಘಟ್ಟದ ಚೌಡಪ್ಪನವರನ್ನೂ, ಕಲಸೆಚೌಡಪ್ಪನವರನ್ನೂ, ಎಲಗಳಲೆ ಹುಚ್ಚಪ್ಪನವರನ್ನೂ ನೆನಸಿಕೊಳ್ಳು ವುದು ನನ್ನ ಕರ್ತವ್ಯ' ಎಂದಿದ್ದಾರೆ. (ಪು. ೧೨೭)ಆದರೆ ಸಾಗರ ತಾಲೂಕು

ರೈತಸಂಘದ ಯಾವ ಸದಸ್ಯರನ್ನು ಯಾವ ಕಾರಣಕ್ಕೂ ಆಕ್ಷೇಪಿಸಿಲ್ಲ. ವಾಸ್ತವ ಪರಿಸ್ಥಿತಿ ಈ ರೀತಿ ನಿರ್ಮಾಣವಾಯಿತೆಂದು ಸ್ಪಷ್ಟವಾಗಿ ಅಭಿಪ್ರಾಯ ಪಟ್ಟಿದ್ದಾರೆ. ಅದರಲ್ಲೂ ನನ್ನ ಬಗ್ಗೆ ವಿಶೇಷ ಆಸಕ್ತಿ ವಹಿಸಿ' ಗಣಪತಿಯಪ್ಪ ಈಗಲೂ ನನ್ನ ಶಿಷ್ಯನಾಗಿ ಉಳಿದಿದ್ದಾನೆ' ಎಂದು ನಮೂದಿಸಿರುವುದು ಅವರು ಕೊನೆ ಕ್ಷಣದವರೆಗೂ ನನ್ನ ಮೇಲಿಟ್ಟ ವಿಶ್ವಾಸ, ಪ್ರೀತಿಯ ಧ್ಯೋತಕವೆಂದು ಆ ಗುರುವಿಗೆ ಕೃತಜ್ಞತೆ ಅರ್ಪಿಸುತ್ತಿದ್ದೇನೆ. ಆದರೆ ಈ ನನ್ನ ಹೆಸರು ಎರಡನೇ ಮುದ್ರಣದಲ್ಲಿ ಕೈಬಿಟ್ಟುಹೋಗಿರುವುದು ನನ್ನ ದುರ್ದೈವವೆನ್ನಬೇಕು. ಅದಕ್ಕೆ ಯಾರೆ ಕಾರಣರಾಗಿದ್ದರೂ ಅವರನ್ನು ಕ್ಷಮಿಸಲಾರದಷ್ಟು ನನಗೆ ದುಃಖವಾಗಿದೆ.

ಅದೇನೇ ಇರಲಿ, ಕಾಗೋಡು ಚಳುವಳಿಯ ಸುವರ್ಣಸಂಪುಟ ಮತ್ತು ಇನ್ನು ಕೆಲವು ಪುಸ್ತಕಗಳಲ್ಲಿ ಅವರ ಮೊದಲನೇ ಮುದ್ರಣದಲ್ಲಿ ನನ್ನ ಹೆಸರಿರುವ ಈ ಪಂಕ್ತಿಯೊಂದಿಗೆ ನಮ್ಮೆಲ್ಲರ ಹೆಸರುಗಳು ಪ್ರಕಟವಾಗಿರುವುದನ್ನ ನೋಡಿ ಸ್ವಲ್ಪ ಮಟ್ಟಿನ ಸಮಾಧಾನ ಹೊಂದಿದ್ದೇನೆ. ಈ ಎರಡನೆ ಮುದ್ರಣದಲ್ಲಿ ಇನ್ನೂ ಯಾರ್‍ಯಾರ ಬಗ್ಗೆ ಏನೇನು ಕೈಬಿಡುವಿಕೆ ಮತ್ತು ಹೊಸ ಸೇರ್ಪಡೆ ನಡೆದಿದೆಯೊ ಹೇಗೆ ನಂಬುವುದು? ಆದ್ದರಿಂದ ಈ ಎರಡನೇ ಮುದ್ರಣವನ್ನು ರದ್ದುಪಡಿಸಿ ಯಾವ ಲೋಪವು ಇಲ್ಲದಂತೆ ಮೊದಲನೆ ಮುದ್ರಣದಲ್ಲಿ ಅಚ್ಚಾದ ಯಥಾವತ್ತಾದ ಪುನರ್ಮುದ್ರಣವಾಗಬೇಕೆಂದು ಈ ಎರಡನೆ ಮುದ್ರಣ ಮಾಡಿದ ಜವಾಬ್ದಾರರಿಗೆ ಸ್ಪಷ್ಟ ಸೂಚನೆ ನೀಡುತ್ತೇನೆ.

ಈಗ ನನಗೆ ಎಂಭತ್ತೈದು ತುಂಬಿದ ಇಳಿವಯಸ್ಸು. ಅಂಗಾಂಗಗಳು ಸರಿಯಾಗಿ ತಮ್ಮ ಕೆಲಸ ಮಾಡಲಾಗದ ಸ್ಥಿತಿ. ನನ್ನ ಗುರುಗಳಾದ ಕಡಿದಾಳರ ಆಶೀರ್ವಾದ ಬಲದಿಂದ ಇಷ್ಟಾದರೂ ಬರೆಯುವ, ಆಲೋಚಿಸುವ ಶಕ್ತಿಯನ್ನು ಉಳಿಸಿಕೊಂಡಿದ್ದೇನೆ. ಅವರ ಕುರಿತು ಕೆಲವು ನೆನಪುಗಳನ್ನಾದರೂ ಅವರ ಅಭಿಮಾನಿಗಳೊಂದಿಗೆ ಹಂಚಿಕೊಳ್ಳುವ ಬಯಕೆ ನನ್ನದು.

ಕಾಗೋಡು ಸತ್ಯಾಗ್ರಹ ಚಳುವಳಿ ಕುರಿತು ಬರೆದವರೆಲ್ಲರೂ ನನ್ನ ಬೇಡಿಕೆ ಏನೂ ಇಲ್ಲದೆ ನನ್ನನ್ನು ಈ ಚಳುವಳಿಯ ರೂವಾರಿಯೆಂದು ಗುರುತಿಸುತ್ತಿದ್ದಾರೆ. ನನಗೂ ಅದು ಹೆಮ್ಮೆಯ ವಿಷಯ. ಯಾಕೆಂದರೆ ಕಡಿದಾಳ್ ಮಂಜಪ್ಪನವರಂಥ ಬಹು ಎತ್ತರದ ಪ್ರಾಮಾಣಿಕ ಸಜ್ಜನರನ್ನು ಸಾಗರ ತಾಲೂಕಿನ ಗೇಣೀದಾರರ ಸಂಘಟನೆಗೆ ಬಳಸಿಕೊಂಡು, ನಾನು ಅವರ ಶಿಷ್ಯನೆಂದು ಅವರಿಂದಲೆ ಕರೆಯಿಸಿಕೊಳ್ಳುವ ಮಟ್ಟಕ್ಕೆ ಅವರಿಗೆ ನಂಬಿಕಸ್ಥನಾಗಿದ್ದು ನನ್ನ ಹೆಮ್ಮೆಗೆ ಕಾರಣ. ಅನಂತರ ಮಾನ್ಯ ಶಾಂತವೇರಿ

ಗೋಪಾಲಗೌಡರು, ಜಿ. ಸದಾಶಿವರಾಯರು, ಶಿವಮೊಗ್ಗದ ಅಣ್ಣಯ್ಯ ಇವರುಗಳ ಮೂಲಕ ಸಮಾಜವಾದಿ ರಾಷ್ಟ್ರೀಯ ನಾಯಕರುಗಳನ್ನು ಹೋರಾಟಕ್ಕೆ ಬರುವಂತೆ ಮಾಡುವ ಸಂದರ್ಭದಲ್ಲಿ ನಾನು ಯಾರ್‍ಯಾರ ಜತೆ ಹೇಗೇಗೆ ವರ್ತನೆ ಮಾಡಿ ಅವರ ನಂಬುಗೆ, ವಿಶ್ವಾಸಕ್ಕೆ ಪಾತ್ರನಾಗಿ ಹೋರಾಟದ ಉದ್ದೇಶ ಸಾಧನೆ ಮಾಡಿಕೊಳ್ಳಬೇಕಾಗಿತ್ತು ಎಂಬುದನ್ನು ಬರೆಯುತ್ತಾ ಹೋದರೆ ದೊಡ್ಡಚರಿತ್ರೆಯೆ ಆದೀತು. ಇತ್ತ ಮುಂದೆ ಸರ್ಕಾರದಲ್ಲಿ ನಮ್ಮ ಪರವಾಗಿ ಹೃದಯಾಂತರಾಳದಿಂದ ಸಹಾಯ ಮಾಡುವ ಕಡಿದಾಳರಂಥವರನ್ನ ನೋಯಿಸದೆ, ಅವರ ವಿಶ್ವಾಸವನ್ನ ಭದ್ರಪಡಿಸಿಕೊಳ್ಳುವುದು, ಇನ್ನೊಂದು ಕಡೆ ಹೋರಾಟ ಮುಂದುವರಿಸದೆ ಇದ್ದರೆ ಸಾಗರ ತಾಲೂಕಿನ ಗೇಣಿ ರೈತರೆಲ್ಲಾ ಭೂಮಿಬಿಟ್ಟು ಇಂದಿನ ಮುಳುಗಡೆ ರೈತರಂತೆ ಅತಂತ್ರವಾಗಬಹುದಾದ ಭೀತಿ, ದೊಡ್ಡ ದೊಡ್ಡ ನಾಯಕರುಗಳು ಬಂದಾಗ ಅವರಿಗೆಲ್ಲಾ ಸೂಕ್ತವ್ಯವಸ್ಥೆಯ ಜವಾಬ್ದಾರಿ, ಆರು ತಿಂಗಳ ಕಾಲ ಭೂಗತನಾಗಿ ಸತ್ಯಾಗ್ರಹಕ್ಕೆ ರೈತರನ್ನು ಸಿದ್ದಗೊಳಿಸುವ ಜವಾಬ್ದಾರಿ, ಭೂಮಾಲಿಕರುಗಳಿಂದ ನೂರಾರು ಸುಳ್ಳು ಆಪಾದನೆ, ಸುಳ್ಳು ಕೇಸುಗಳನ್ನು ಎದುರಿಸುವ ಪ್ರಸಂಗ, ಎಲ್ಲಿ ಪ್ರಾಣಾಪಾಯ ಕಾದಿದೆಯೊ ತಿಳಿಯಲಾರದ ವಿಪತ್ತುಗಳ ಸುದ್ದಿ ಸುಳಿವುಗಳ ಮಧ್ಯೆ ಕೆಲಸಮಾಡಿದ ನನಗೆ ಈ ಚಳುವಳಿಯ ರೂವಾರಿಯೆಂದು ಕರೆಯಿಸಿಕೊಳ್ಳುವುದು ಜೀವನದ ಸಾರ್ಥಕತೆಯಲ್ಲದೆ ಮತ್ತೇನು. ?

ಇದಕ್ಕೆಲ್ಲಾ ಪ್ರಾರಂಭದಿಂದಲೂ ಕೊನೆಯವರೆಗೂ ನನಗೆ ಬೆಂಗಾವಲಾಗಿದ್ದ ನನ್ನ ಗುರು ಕಡಿದಾಳ್ ಮಂಜಪ್ಪನವರನ್ನು ನೆನೆಯದಿದ್ದರೆ ದೇವರನ್ನು ಮರೆತಂತೆ ಅಲ್ಲವೇ? ಸಾರ್ವಜನಿಕ ಕ್ಷೇತ್ರದಲ್ಲಿ ಬದುಕುವ ರೀತಿಯನ್ನು ನನಗೆ ಬೋಧಿಸಿದವರೆ ಅವರು. ಇಷ್ಟೇ ಅಲ್ಲ ಕೌಟುಂಬಿಕ ಜೀವನದಲ್ಲಿ ಸಹ ಬದುಕುವ ರೀತಿಯ ಆದರ್ಶ ತೋರಿದವರು ಅವರು. ನನ್ನಿಂದ ಅದೆಷ್ಟೋ ರೈತರು ತಮ್ಮ ಸಣ್ಣದೊಡ್ಡ ಕೆಲಸಗಳನ್ನು ಕಾಸು ಖರ್ಚಿಲ್ಲದೆ ಮಾಡಿಸಿಕೊಳ್ಳಲು ನನಗೆ ಇರುವ ನನ್ನ ಗುರುಗಳ ಬೆಂಬಲ ಪ್ರೋತ್ಸಾಹವೆ ಕಾರಣ. ಆದ್ದರಿಂದ ನಾನು ಅವರನ್ನು ಈ ಜೀವನದಲ್ಲಿ ಮರೆಯಲಾರೆ.

ಶ್ರೀ ಕಡಿದಾಳ್ ಮಂಜಪ್ಪನವರನ್ನು ಬಲ್ಲವರಿಗೆ ಮಾತ್ರ ಗೊತ್ತು. ಅವರಿಂದ 'ಇವನು ನನ್ನ ಶಿಷ್ಯ' ಎನಿಸಿಕೊಳ್ಳುವುದು ಎಷ್ಟು ಕಠಿಣ ಕೆಲಸ ಎಂಬುದು. ಅದಕ್ಕಾಗಿಯೆ ನಾನು ಅವರ ಜೀವನ ಚರಿತ್ರೆಯ ಎರಡನೆ ಮುದ್ರಣದಲ್ಲಿ ನನ್ನ ಹೆಸರು ತಿಳಿದೊ ತಿಳಿಯದೆಯೋ ಮೊಟಕುಗೊಳಿಸಿದವರ ಬಗ್ಗೆ ಕಠಿಣವಾಗಿ ಬರೆದಿದ್ದೇನೆ. ಅಂದರೆ ನನ್ನ ಗುರುಗಳು ನನಗೆ ನೀಡಿದ ಆಶೀರ್ವಾದದ ಮುದ್ರೆಯ ಉಂಗುರ ಕಳುವಾದರೆ

ಎಂಥಾ ಸಂಕಟದ ಮನಃಸ್ಥಿತಿ ಉಂಟಾಗಲಿಕ್ಕಿಲ್ಲ ?

ನಾನು ಈಗ ವಾಸವಾಗಿರುವ ಗ್ರಾಮ ವಡ್ನಾಲ. ಸಾಗರ ಪಟ್ಟಣದ ಬಸವನಹೊಳೆಯ ದಡದಲ್ಲಿರುವ ಪುಟ್ಟ ಊರು ಇದು. ಈ ಊರನ್ನು ಮೊದಲು ಕಟ್ಟಿದವನು ನಾನು. ಅದಕ್ಕೂ ಬೆಂಗಾವಲಾಗಿ ನಿಂತಿದ್ದವರು ಯಾರುಗೊತ್ತೆ ? ಕಾಗೋಡಿನಿಂದ ನಾನು ವಡ್ನಾಲ (ನಾಲೆಯ ವಡ್ಡು ಇರುವ ಸ್ಥಳ) ಕ್ಕೆ ಬಂದಾಗ ಕಡಿದಾಳ ಮಂಜಪ್ಪನವರು ಕರ್ನಾಟಕ ಸರ್ಕಾರದಲ್ಲಿ ರೆವಿನ್ಯೂ ಮಂತ್ರಿಗಳಾಗಿದ್ದರು. ಗ್ರಾಮಾಂತರ ಗೃಹ ನಿರ್ಮಾಣ ಯೋಜನೆ ಅಡಿ ವಡ್ನಾಲ ಗ್ರಾಮದ ಶಂಕುಸ್ಥಾಪನೆಯನ್ನು ಅವರೆ ನೆರವೇರಿಸಿದರು. ಅವರ ಸೂಚನೆಯನುಸಾರ ಆಗಿನ ಜಿಲ್ಲಾಧಿಕಾರಿಗಳಾಗಿದ್ದ ಭರಣಯ್ಯನವರು ಬೇಕಾದ ಮೂಲಭೂತ ಸೌಕರ್ಯಗಳನ್ನೆಲ್ಲಾ ಒದಗಿಸಿಕೊಟ್ಟವರು. ವಡ್ನಾಲ ಗ್ರಾಮದಲ್ಲಿ ಮನೆಕಟ್ಟಿ ಹೊಸ ಮನೆಯ ಹಬ್ಬ ಮಾಡಿದ ಸಂದರ್ಭ. ಸ್ವತಃ ಕಡಿದಾಳು ಮಂಜಪ್ಪನವರು ಮಂತ್ರಿಯೆಂಬ ಅಹಮಿಕೆಯನ್ನು ತೊರೆದು ಮನೆಗೆ ಬಂದರು. ನಮ್ಮ ಪುಟ್ಟಮನೆಯ ಜಗಲಿಯಲ್ಲಿಯೆ ಕುಳಿತು ನಾವು ದಂಪತಿಗಳು ನೀಡಿದ ಆತಿಥ್ಯವನ್ನು ಸ್ವೀಕರಿಸಿ, ಮನದುಂಬಿ ಹರಸಿ ಹೋದ ಆದಿನ ಇವತ್ತಿಗೂ ನನ್ನ ಭಾವಕೋಶದಲ್ಲಿ ಜೀವಂತವಾಗಿದೆ.

ಈ ಲೇಖನ ಮುಗಿಸುವ ಮೊದಲು ಕೊನೆಯದಾಗಿ ಒಂದು ಮುಖ್ಯ ವಿಚಾರವನ್ನು ಹೇಳಿಬಿಡುತ್ತೇನೆ. ನನ್ನ ಈ ಭೂಮಿಹೋರಾಟದ ಬಗ್ಗೆ ಅಪಾರವಾದ ಗೌರವ ಅಭಿಮಾನಗಳನ್ನು ವ್ಯಕ್ತಪಡಿಸುವ ನಾಡಿನ ಬುದ್ಧಿಜೀವಿವಲಯದ ಅನೇಕರು ಒಂದು ಪ್ರಮುಖ ಆಕ್ಷೇಪವನ್ನು ಇಟ್ಟುಕೊಂಡಿದ್ದಾರೆ. ಆ ಕಾಲದ ರಾಜಕೀಯ ಆದರ್ಶವಾದ ಸಮಾಜವಾದಿ ಪಕ್ಷಕ್ಕೆ ಗಣಪತಿಯಪ್ಪನವರು ಏಕೆ ಸೇರಲಿಲ್ಲ. ಆಡಳಿತ ಪಕ್ಷವಾದ ಕಾಂಗ್ರೆಸ್‌ನಲ್ಲಿಯೆ ಅವರು ಉಳಿದುಕೊಂಡರೇಕೆ? ಈ ಪ್ರಶ್ನೆಯನ್ನು ಈಗಲೂ ಅನೇಕರು ನನಗೆ ಕೇಳುತ್ತಿದ್ದಾರೆ. ನಾನು ಅವರಿಗೆ ನೀಡುತ್ತಿರುವ ಉತ್ತರ ಸ್ವತಃ ನನಗೇ ತೃಪ್ತಿನೀಡಿಲ್ಲ. ನಾನು ಅಧಿಕೃತವಾಗಿ ಸಮಾಜವಾದಿ ಪಕ್ಷವನ್ನು ಸೇರದೆ ಕಾಂಗ್ರೆಸ್‌ನಲ್ಲಿಯೆ ಉಳಿದೆಯೆಂದರೆ ಆ ಮಾತಿನ ನಿಜವಾದ ಅರ್ಥ 'ನಾನು ಮಂಜಪ್ಪನವರ ಜತೆಯಲ್ಲಿಯೆ ಉಳಿದೆ' ಎಂದಾಗಿದೆ. ಕಾಗೋಡು ಚಳುವಳಿಯ ಅಮೋಘ ಯಶಸ್ಸಿನ ನಂತರ ಸಾಗರ ವಿಧಾನ ಸಭಾ ಕ್ಷೇತ್ರದಿಂದ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸುವಂತೆ ಶಾಂತವೇರಿ ಗೋಪಾಲಗೌಡರೇ ನನ್ನ ಹೆಸರನ್ನು ಸೂಚಿಸಿದರು. ಆದರೆ ನಾನು ಅವರ ಅಭಿಪ್ರಾಯವನ್ನು ನಯವಾಗಿಯೆ ತಿರಸ್ಕರಿಸಿ 'ತಾವೇ ಅಭ್ಯರ್ಥಿಯಾಗಬೇಕು' ಎಂದು ಗೌಡರ ಹೆಸರನ್ನೆ ಸೂಚಿಸಿದೆ.

ಚುನಾವಣೆಯಲ್ಲಿ ಗೌಡರು ಗೆದ್ದರು. ಇದು ಕರ್ನಾಟಕದ ರಾಜಕೀಯ ಇತಿಹಾಸಬಲ್ಲ ಎಲ್ಲರಿಗೂ ತಿಳಿದಿರುವ ವಿಚಾರವೆ. ಸಮಾಜವಾದಿ ಪಕ್ಷವನ್ನು ನಾನು ಸೇರಿದ್ದರೆ ಅಂದೇ ನಾನು ಶಾಸಕ–ಮಂತ್ರಿ ಇನ್ನೇನೊ ಆಗಬಹುದಿತ್ತು. ಬೆಂಗಳೂರಿನ ಡಾಲರ್ ಕಾಲೋನಿಯಲ್ಲಿ ಸ್ವಂತ ಮನೆಯೊಂದರ ಮಾಲಿಕನು ಆಗಬಹುದಿತ್ತು, ಆದರೆ ಕಾಗೋಡು ರೈತ ಹೋರಾಟ ಕಣ್ತೆರೆದಾಗ ಸಮಾಜವಾದಿ ಹೋರಾಟಗಾರರು ಇರಲಿಲ್ಲ. ಸಾಗರ ತಾಲ್ಲೂಕಿನ ರೈತಸಂಘ ಇತ್ತು. ಈ ರೈತಸಂಘಕ್ಕೆ ಮುಖ್ಯ ಪ್ರೇರಣೆ ಕಡಿದಾಳ್ ಮಂಜಪ್ಪನವರು ಸ್ಥಾಪಿಸಿದ ಮಲೆನಾಡಿನ ರೈತಸಂಘ. ಮಲೆನಾಡಿನ ರೈತಸಂಘದ ಹುಟ್ಟು ೧೯೪೭ ರಲ್ಲಾದರೆ ಸಾಗರದ ರೈತ ಸಂಘ ೧೯೪೮ ರಲ್ಲಿ ಸ್ಥಾಪನೆಯಾದದ್ದು. ಕಾಗೋಡು ಚಳುವಳಿಯ ಯಶಸ್ಸು ಮುಖ್ಯವಾಗಿ ಸೇರಬೇಕಾದದ್ದು ಈ ರೈತಸಂಘದ ಎಲ್ಲಾ ಕಾರ್ಯಕರ್ತರಿಗೆ. ಈ ಚಳುವಳಿಗೆ ರಾಷ್ಟ್ರೀಯ ಮಹತ್ವ ಸಿಕ್ಕಿದ್ದು ಮಾತ್ರ ಲೋಹಿಯಾ, ಗೋಪಾಲಗೌಡ, ಜಯಪ್ರಕಾಶ್‌ನಾರಾಯಣ, ಅಶೋಕ್‌ಮೆಹ್ತಾ, ದಿನಕರದೇಸಾಯಿ, ಖಾದ್ರಿಶಾಮಣ್ಣ, ಸಿಜಿಕೆರೆಡ್ಡಿ, ಜೆ.ಹೆಚ್.ಪಟೇಲ್, ಮುಲ್ಕಾ ಗೋವಿಂದರೆಡ್ಡಿ, ಕೋಣಂದೂರು ಲಿಂಗಪ್ಪ, ದಾವಣಗೆರೆ ಶಿವಾನಂದಸ್ವಾಮಿ, ವೀರಭದ್ರಪ್ಪ ಮೊದಲಾದ ಸಮಾಜವಾದಿ ಚಿಂತಕರ ಅಧಿಕೃತ ಪ್ರವೇಶದಿಂದ. ರೈತಸಂಘವನ್ನು ಸಮಾಜವಾದಿ ಪಕ್ಷದೊಂದಿಗೆ ವಿಲೀನಗೊಳಿಸಿ ನೀನು ನಮ್ಮೊಂದಿಗೆ ಬಂದುಬಿಡು ಎಂದು ಗೋಪಾಲಗೌಡರು ಹೇಳಿದಾಗ ಒಂದು ಐತಿಹಾಸಿಕ ಚಳುವಳಿಯನ್ನು ಹುಟ್ಟುಹಾಕಿದ ನನ್ನ ಪ್ರೀತಿಯ ರೈತಸಂಘ ಕಳೆದುಹೋಗುವುದು ನನಗೆ ಇಷ್ಟವಾಗಲಿಲ್ಲ. ಮೇಲಾಗಿ ಸಾಗರದ ತಾಲ್ಲೂಕು ರೈತಸಂಘ ಮಂಜಪ್ಪನವರ ನೇತೃತ್ವದ ಮಲೆನಾಡು ರೈತಸಂಘದ ಒಂದು ಭಾಗವೇ ಆಗಿತ್ತು.

ಈ ನಡುವೆ ಮಂಜಪ್ಪನವರೇ ಒಂದು ಮಾತು ಹೇಳಿದರು. "ಗಣಪತಿ ನೀನು ನನ್ನ ಪ್ರೀತಿಯ ಶಿಷ್ಯ. ಗಾಂಧೀಜಿಯವರ ಕೈ ಮುಟ್ಟಿ ಆಶೀರ್ವಾದ ಪಡೆದು ರಂಗಪ್ರವೇಶ ಮಾಡಿದವ ನೀನು. ಕಾಂಗ್ರೆಸ್ ಅನ್ನೋದು ಗಾಂಧಿ ಮೌಲ್ಯಗಳನ್ನು ಮುಂದಿಟ್ಟುಕೊಂಡು ಹೊರಟ ಪಕ್ಷ. ಅದರ ಹಾದಿಯಲ್ಲಿಯೇ ನೀನು ಬೆಳೆಯಬೇಕು. ಹಾಗೆಂದು ನಾನು ಸಮಾಜವಾದಿ ಪಕ್ಷವನ್ನು ಸೇರಲೇ ಕೂಡದು ಎಂದು ತಾಕೀತು ಮಾಡುವ ಹಕ್ಕು ನನಗಿಲ್ಲ. ಆದರೆ ನಾವೆಲ್ಲ ಸೇರಿ ಕಟ್ಟಿ ಬೆಳೆಸಿದ ರೈತಸಂಘವನ್ನು ಸಮಾಜವಾದಿ ಪಕ್ಷದ ಹೆಸರಿನಲ್ಲಿ ಯಾಕೆ ಕಳೆದುಕೊಳ್ಳಬೇಕು ? ಎಂದರು. ಮುಂದುವರಿದು ಅವರು ಅತ್ಯಂತ ರಹಸ್ಯವಾಗಿ ಹೇಳಿದ ಮಾತಿದು. "ನಾನು ಆಡಳಿತ ಪಕ್ಷದಲ್ಲಿಯೇ ಇದ್ದು ನಿನ್ನ ಎಲ್ಲಾ ಹೋರಾಟಗಳಿಗೆ ಬೆಂಬಲ ನೀಡುತ್ತೇನೆ,

ಆದರೆ ಯಾವುದೂ ಬಹಿರಂಗವಾಗಬಾರದು. ಯಾಕೆಂದರೆ ಚಳುವಳಿಗಳಿಗೆ ಅಧಿಕಾರ ವಲಯದ ಬೆಂಬಲ ದೊರೆಯದೇ ಹೋದರೆ ಅವು ಅಲೆಯನ್ನು ಹುಟ್ಟು ಹಾಕಬಹುದೆ ಹೊರತು ಫಲ ನೀಡಲಾರವು. ಆದರೆ ನಾನು ಕಾಂಗ್ರೆಸ್ ಬಿಟ್ಟು ಹೊರಬಂದು ಹೋರಾಟ ಮಾಡಲಾಗದು. ಆಳುವ ಪಕ್ಷ ಕಾಂಗ್ರೆಸ್ ಜತೆಗಿದ್ರೆ ರೈತರ ಪರವಾಗಿ ಕಾನೂನು ರೂಪಿಸಲು, ಈಗಾಗಲೇ ಸುಳ್ಳು ಕೇಸುಗಳಲ್ಲಿ ಸಿಕ್ಕಿಹಾಕಿಕೊಂಡಿರೊ ರೈತ ಹೋರಾಟಗಾರರನ್ನು ಉಳಿಸಲು ಮತ್ತು ಅವರ ಕೇಸುಗಳನ್ನು ಗೆಲ್ಲಲು ನಮಗೊಂದು ಅವಕಾಶ ಸಿಗುತ್ತದೆ. ಆದ್ದರಿಂದ ನೀನು ನನ್ನೊಂದಿಗೆ ಇರಬೇಕಾದುದು ಅವಶ್ಯ ಎಂದರು. ಮುಂದಿನ ದಿನಗಳಲ್ಲಿ ಅವರು ನುಡಿದಂತೆ ನಡೆದುಕೊಂಡರು. ಹೋರಾಟದ ಹಾದಿಯಲ್ಲಿ ನನ್ನನ್ನು ಯಾವಾಗ ಬೇಕಾದರೂ ಜಮಿನ್ದಾರರು ಹೊಡೆದುಹಾಕಬಹುದಾಗಿತ್ತು. ಆದರೆ ನಾನು ಇಂದಿಗೂ ಬದುಕಿದ್ದೇನೆ. ಹೀಗೆ ನಾನು ಸಾವನ್ನು ಗೆದ್ದುಬರಲು ಸಾಧ್ಯವಾದದ್ದು ಕಡಿದಾಳ್ ಮಂಜಪ್ಪನವರ ಬಲದಿಂದಲೇ. ಅವರ ಪ್ರಭಾವದಿಂದ ಪರಿಚಯವಾದ ಅಧಿಕಾರಿವರ್ಗ ನನ್ನ ಬೇಡಿಕೆಗಳಿಗೆ ಸ್ಪಂದಿಸಿತು. ರೈತರು ಮತ್ತು ನನ್ನ ಹೋರಾಟಗಳಿಗೆ ಒಂದು ನಯಾ ಪೈಸೆ ಕೇಳದೆ ಸಾಲದ್ದಕ್ಕೆ ಖರ್ಚಿಗೂ ಆಗೀಗ ಕೊಟ್ಟು 'ನನ್ನ ಪ್ರೇರಕಶಕ್ತಿ' ಆಗಿ ನಿಂತವರು ಮಂಜಪ್ಪನವರು. ಮಾಡಿದ್ದೆಲ್ಲಾ ನಾನೆ ಆದರೂ ಮಾಡಿಸಿದ್ದು ಮಾತ್ರ ಅವರೇ!. ಆಳುವ ಪಕ್ಷದಲ್ಲಿ ಮೈಕೈಗಳನ್ನಿಟ್ಟುಕೊಂಡೆ ದುಡಿಯುವ ಜನರೊಂದಿಗೆ ಭಾವನಾತ್ಮಕವಾಗಿ ಅವರು ಇರುತ್ತಿದ್ದರು. ಶಿವಮೊಗ್ಗದ ಕೋರ್ಟ್‌ನಲ್ಲಿ ಲಾಯರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಅವರು ಬಹುತೇಕ ವಾದ ಮಾಡಿದ್ದು ಕಾಗೋಡು ಚಳುವಳಿಯ ರೈತ ಹೋರಾಟಗಾರರ ಪರವಾಗಿ. ೧೯೪೨ರ ಕ್ವಿಟ್‌ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಜೈಲು ವಾಸ ಅನುಭವಿಸಿ ಗಾಂಧಿ ಮಾರ್ಗದಲ್ಲಿ ಬೆಳೆದವರು. ಆದ್ದರಿಂದ ಸಹಜವಾಗಿಯೆ ಅವರಿಗೆ ಬಡತನ, ಹಸಿವು, ದಲಿತರು, ಕಾರ್ಮಿಕರು, ರೈತರು, ಸ್ತ್ರೀಯರು ಈ ಜನ ವರ್ಗದ ಮೇಲೆ ಅಪಾರ ಪ್ರೀತಿ. ಜನರಿಗೂ ಅವರ ಪ್ರಮಾಣಿಕತೆಯ ಬಗ್ಗೆ ಭಾರಿ ಭರವಸೆ, ಶೋಷಕವರ್ಗ ಕೂಡ ಅವರ ಬದ್ಧತೆ–ಪ್ರಾಮಾಣಿಕತೆಯನ್ನು ಸಂಶಯದಿಂದ ನೋಡಲಿಲ್ಲ. ಒಂದರ್ಥದಲ್ಲಿ ಅವರು ಲಾಯರಿ ಡ್ರೆಸ್‌ನಲ್ಲಿದ್ದ ಗಾಂಧಿ!

ಇಂತಹ ಮಹನೀಯರ ಆಕರ್ಷಣೆ ನನ್ನನ್ನು ಬಲವಾಗಿ ಹಿಡಿದು ನಿಲ್ಲಿಸಿತ್ತು. ನಮ್ಮದು ಪ್ರಜ್ಞೆಯನ್ನು ಮೀರಿದ ಭಾವನಾತ್ಮಕ ಸಂಬಂಧ. ಆದ್ದರಿಂದಲೇ ಅವರನ್ನು ಬಿಟ್ಟು ಬರಲಾಗಲಿಲ್ಲ. ಅವರು ನೀಡಿದ ನೆರವು ತುಂಬಿದ ಪ್ರೇರಣೆ. ತೋರಿದ ಮಮತೆಗೆ ಮತ್ತಾವುದೂ ಸರಿಸಾಟಿಯೆಂದು ನನಗೆ ಅನ್ನಿಸಲಿಲ್ಲ. ಒಂದರ್ಥದಲ್ಲಿ

ನಾನು ಕಡಿದಾಳ್ ಮಂಜಪ್ಪನವರ ಮಾನಸ ಪುತ್ರನೇ ಹೌದು. ಗಾಂಧಿ ಲೋಹಿಯಾರನ್ನು ಒಪ್ಪಿಕೊಂಡ ಹಾಗೆ. ಆದರೆ ನಾನು ಗಾಂಧಿವಾದಿಯು ಹೇಗೋ ಹಾಗೆಯೆ ಲೋಹಿಯಾವಾದಿಯೂ ಹೌದು. ಲೋಹಿಯಾ, ಜೆ.ಪಿ. ಗೋಪಾಲಗೌಡರ ಸಮಾಜವಾದಿ ಪಕ್ಷದ ಬಗ್ಗೆ ಅಪಾರವಾದ ಗೌರವ ನನಗಿದೆ. ಒಮ್ಮೊಮ್ಮೆ – "ಹೌದಲ್ಲ, ನಾನು ಸಮಾಜವಾದಿ ಪಕ್ಷಕ್ಕೆ ಸೇರಿಬಿಡಬೇಕಿತ್ತು" ಎಂದೂ ಅನ್ನಿಸಿದ್ದುಂಟು. ಸೇರದಿದ್ದಕ್ಕಾಗಿ ವಿಷಾದವೂ ನನ್ನಲ್ಲುಂಟು. ಕ್ಷಮಿಸಿ, ನನ್ನ ಗುರು ಕಡಿದಾಳರ ಪ್ರೀತಿಯನ್ನು ಮೀರಲಾಗಲಿಲ್ಲ.

# ವಿಶಿಷ್ಟ ವ್ಯಕ್ತಿ

**–ಎಚ್.ಜಿ.ಗೋವಿಂದೇಗೌಡ**

ಕರ್ನಾಟಕದ ರಾಜಕೀಯ ಪರಂಪರೆಯಲ್ಲಿ ಮರೆಯಲಾಗದಂತಹ ಹಿರಿಯ ಚೇತನ ಕಡಿದಾಳ್ ಮಂಜಪ್ಪನವರು. ಬಡವರ ಬಂಧುವಾಗಿ, ಇಲ್ಲದವರ ಪರವಾಗಿ ನಿಂತಂತಹ ವ್ಯಕ್ತಿ ಕಡಿದಾಳ್ ಮಂಜಪ್ಪನವರು. ಕಡಿದಾಳ್ ಮಂಜಪ್ಪನವರು ನನಗೆ ೧೯೫೨ರಲ್ಲಿ ಪರಿಚಯವಾದರು. ಅಂದಿನಿಂದ ಅವರ ಕೊನೆಗಾಲದವರೆಗೂ ನನ್ನ ಅವರ ಸಂಬಂಧ ಬಹಳ ನಿಕಟವಾಗಿತ್ತು.

ಕಡಿದಾಳ್ ಮಂಜಪ್ಪನವರು ೧೯೫೨ರಲ್ಲಿ ಮೊಟ್ಟ ಮೊದಲ ಬಾರಿಗೆ ಶಾಸನ ಸಭೆಗೆ (ಕೊಪ್ಪ, ಶೃಂಗೇರಿ ಹಾಗೂ ತೀರ್ಥಹಳ್ಳಿ ಈ ಮೂರು ಸೇರಿ ಒಂದು ಕ್ಷೇತ್ರ) ಆಯ್ಕೆಯಾದರು. ನಾನು ಈ ಸಂದರ್ಭದಲ್ಲಿ ಪುರಸಭೆಯ ಅಧ್ಯಕ್ಷನಾಗಿ ಸೇವೆ ಸಲ್ಲಿಸುತ್ತಿದ್ದೆ. ಇದರಿಂದ ಅವರ ಮತ್ತು ನನ್ನ ನಡುವೆ ಬಹಳ ಗಾಢವಾದ ಸಂಬಂಧ ಬೆಳೆದು ಅವರು ನನಗೆ ಬಹಳ ಹತ್ತಿರವಾದರು. ಇದರಿಂದಾಗಿ ಅವರು ನನಗೆ ಆದರ್ಶರಾಜಕಾರಣಿಯಾಗಿ ಕಂಡುಬಂದರು.

ಚುನಾವಣೆ ಪ್ರಚಾರದ ಸಂದರ್ಭದಲ್ಲಿ ಅವರ ಸಂಗಡವಿದ್ದು ಪ್ರಚಾರ ಮಾಡುತ್ತಿದ್ದೆ. ಇದರಿಂದಾಗಿ ನನಗೆ ಜನರ ಸಂಪರ್ಕ ಬೆಳೆಯಲು ಸಹಕಾರಿಯಾಯಿತು. ಕಡಿದಾಳ್ ಮಂಜಪ್ಪನವರ ವಿರುದ್ಧವಾಗಿ ತೀರ್ಥಹಳ್ಳಿ ತಾಲ್ಲೂಕಿನ ಭಾರಿ ಶ್ರೀಮಂತರೊಬ್ಬರು ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಆದರೆ ನಮ್ಮ ಕಡಿದಾಳರು ಅವರಷ್ಟು ಶ್ರೀಮಂತರಾಗದೆ ಜನ ಬೆಂಬಲವನ್ನು ಪಡೆದಿದ್ದರು. ಆದ್ದರಿಂದ ಆ ವ್ಯಕ್ತಿಯ ವಿರುದ್ಧವಾಗಿ ಶಾಸನಸಭೆಗೆ ಚುನಾಯಿತರಾದರು.

ಕರ್ನಾಟಕ ರಾಜ್ಯದ ಹೊಸ ಸರ್ಕಾರ ರಚನೆಮಾಡುವ ಸಂದರ್ಭದಲ್ಲಿ ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದರು. ಆ ಸಂದರ್ಭದಲ್ಲಿ ಕಡಿದಾಳ್ ಮಂಜಪ್ಪನವರು ಸಹ ಸಂಪುಟ ಸಚಿವರಾಗಿದ್ದರು. ಇವರು ಹೊಂದಿದ ಖಾತೆಗಳೆಂದರೆ ಕಂದಾಯ ಇಲಾಖೆ, ಲೋಕೋಪಯೋಗಿ ಇಲಾಖೆ ಮೊದಲಾದ ಇಲಾಖೆಗಳ ಖಾತೆಗಳನ್ನು ಹೊಂದಿ ಜನ ಸೇವೆಯನ್ನು ಕೈಗೊಂಡಿದ್ದರು. ಇದರಿಂದಾಗಿ ಜನಪರವಾದ ಕೆಲಸಗಳನ್ನು ಮಾಡುವುದರ ಮೂಲಕ ಜನಪರವಾದ ಮತ್ತು ಜನಹಿತವಾದ ಸೇವೆಯಲ್ಲಿ ತೊಡಗಿದರು.

ಕಡಿದಾಳ್ ಮಂಜಪ್ಪನವರು ೧೯೫೭ರಲ್ಲಿ ನಡೆದ ಚುನಾವಣೆಯಲ್ಲಿ ಮತ್ತೊಮ್ಮೆ ಶೃಂಗೇರಿ ಕ್ಷೇತ್ರದಿಂದ ಅವಿರೋಧವಾಗಿ ಚುನಾಯಿತರಾದರು. ಈ ಸಂದರ್ಭದಲ್ಲಿ ಮಂತ್ರಿಗಳಾಗಿ, ರಾಜ್ಯದ, ಕ್ಷೇತ್ರದ ಅಭಿವೃದ್ಧಿಗೆ ಬಹಳ ನಿಸ್ವಾರ್ಥತೆಯಿಂದ ಕಾರ್ಯನಿರ್ವಹಿಸಿದರು. ಅಲ್ಲದೇ ಪ್ರಮಾಣಿಕತೆ ಮತ್ತು ದಕ್ಷತೆಗೆ ಹೆಸರಾಗಿ ಮಲೆನಾಡಿನ ತುಂಬೆಲ್ಲಾ ಜನಪ್ರಿಯರಾದರು. ಭ್ರಷ್ಟಾಚಾರವನ್ನು ತೊಡೆದು ಹಾಕುವಲ್ಲಿ ತಮ್ಮ ಬದುಕನ್ನೇ ಮುಡುಪಾಗಿಟ್ಟಿದ್ದರು. ಸಮಾಜದಲ್ಲಿ ಎಲ್ಲರಿಗೂ ಸಮನಾದ ಹಕ್ಕು ನೀಡಲು ಮತ್ತು ತಾರತಮ್ಯ ಭಾವನೆಯನ್ನು ಹೋಗಲಾಡಿಸುವಲ್ಲಿ ಸಕ್ರಿಯ ಪಾತ್ರವಹಿಸಿದ್ದರು. ಕಡಿದಾಳ್ ಮಂಜಪ್ಪನವರು. ಇದರಿಂದಾಗಿ ಅವರು ಸಮಾಜ ಪರವಾದ ಚಿಂತನೆಯಲ್ಲಿ ತೊಡಗಿ ಸಮಾಜ ಪರವಾದ ಕಾರ್ಯವನ್ನು ಕೈಗೊಂಡರು. ಕಡಿದಾಳ್ ಮಂಜಪ್ಪನವರು ಬಿ.ಡಿ.ಜತ್ತಿ ಸಂಪುಟದಲ್ಲೂ ಲೋಕೋಪಯೋಗಿ, ಕಂದಾಯ ಇಲಾಖೆ ಸಚಿವರಾಗಿಯೂ ಮತ್ತು ಅನಂತರ ಮುಖ್ಯ ಮಂತ್ರಿಗಳಾಗಿಯೂ ಸೇವೆ ಸಲ್ಲಿಸಿದ್ದಾರೆ. ಈ ಸಂದರ್ಭದಲ್ಲಿ ಭೂ ಸುಧಾರಣೆ ಕಾಯ್ದೆ ಜಾರಿಗೆ ಬಂದಿತ್ತು. ಇದಕ್ಕೆ ಪೂರಕವಾಗಿ ಮಂಜಪ್ಪನವರು ಕಂದಾಯ ಇಲಾಖೆ ಮಂಜೂರಾತಿ ಮಾಡಿದ ಭೂಮಿಯನ್ನು ಭೂ ರಹಿತ ಕೃಷಿಕರಿಗೆ ಕೊಡಿಸಿ ಕೊಡುವಲ್ಲಿ ಯಶಸ್ವಿಯಾದರು. ಅದೇ ಸಂದರ್ಭದಲ್ಲಿ ಭೂ ಮಾಲೀಕರನ್ನು ಸಂಪೂರ್ಣವಾಗಿ ಎದುರ್ಹಾಕಿಕೊಂಡರು.

ಕಡಿದಾಳ್ ಮಂಜಪ್ಪನವರು ಲೋಕೋಪಯೋಗಿ ಮಂತ್ರಿಗಳಾದ ಸಂದರ್ಭದಲ್ಲಿ ಮಲೆನಾಡಿನ ಹಳ್ಳಿ ಮತ್ತು ನಗರ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸಲು ಹಲವಾರು ನದಿ, ಹಳ್ಳ ಕೊಳ್ಳಗಳಿಗೆ ಸೇತುವೆಯನ್ನು ನಿರ್ಮಿಸಿದರು. ಇದರಿಂದಾಗಿ ಮಲೆನಾಡಿನ ಹಳ್ಳಿಯ ಜನರಿಗೆ ನಗರದ ಹೊಸ ಪ್ರಪಂಚವನ್ನು ಕಾಣಲು ಸಾಧ್ಯವಾಯಿತು. ಅಕ್ಷರ ಕಲಿಸುವ ಶಾಲೆಗೆ ಬರ ಉಂಟಾದ ಸಂದರ್ಭದಲ್ಲಿ ಅನಕ್ಷರತೆಯು ತಾಂಡವಾಡುತ್ತಿತ್ತು, ಇದನ್ನು ಹೋಗಲಾಡಿಸಲು ಕಡಿದಾಳ್ ಮಂಜಪ್ಪನವರು ಶಾಲೆಯನ್ನು ಸ್ಥಾಪಿಸಿದರು. ಇದರಿಂದಾಗಿ ಮಲೆನಾಡಿನಲ್ಲಿ ಶೈಕ್ಷಣಿಕ ಕ್ರಾಂತಿಗೆ ನಾಂದಿಯಾಯಿತು. ಅಲ್ಲದೆ ಜನರಲ್ಲಿ ಶಿಕ್ಷಣಪ್ರಜ್ಞೆ ಮೂಡಿಸಲು ಕಾರಣಕರ್ತರಾದರು.

ಕಡಿದಾಳ್ ಮಂಜಪ್ಪನವರು ೧೯೬೨ರಲ್ಲಿ ನಡೆದ ವಿಧಾನ ಸಭೆಯ ಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಶೃಂಗೇರಿ ಕ್ಷೇತ್ರದಿಂದ ಸ್ಪರ್ಧಿಸಲು ನಿಶ್ಚಯಿಸಿದರು. ಆ ಸಂದರ್ಭದಲ್ಲಿ ಭೂ ಸುಧಾರಣೆ ಕಾಯ್ದೆಯಿಂದ ಭೂಮಿಯನ್ನು ಕಳೆದುಕೊಂಡಂತಹ ಭೂ ಮಾಲಿಕರು ಕಡಿದಾಳ್ ಮಂಜಪ್ಪನವರ ವಿರುದ್ಧವಾಗಿ ಮತ್ತೊಬ್ಬ ಅಭ್ಯರ್ಥಿಯನ್ನು ನಿಲ್ಲಿಸುವುದರ ಮೂಲಕ ಚುನಾವಣೆಗೆ ಹೊಸ ತಿರುವು

ಕೊಟ್ಟರು. ಇದರಿಂದಾಗಿ ಭೂ ಮಾಲೀಕರು ಕಡಿದಾಳ್ ಮಂಜಪ್ಪನವರಿಗೆ ಯಾವುದೇ ರೀತಿಯ ಹಣಕಾಸಿನ ಬೆಂಬಲ ಮತ್ತು ಸಹಾಯವನ್ನು ಸಂಪೂರ್ಣವಾಗಿ ನಿರಾಕರಿಸಿದರು. ಆ ಸಂದರ್ಭದಲ್ಲಿ ನಾನು ಕೊಪ್ಪ ತಾಲ್ಲೂಕಿನ ಅಭಿವೃದ್ಧಿ ಮಂಡಳಿಯ ಅಧ್ಯಕ್ಷನಾಗಿ ಕಾರ್ಯ ನಿರ್ವಹಿಸುತ್ತಿದ್ದೆ. ಆಗ ನಾನು ಕಡಿದಾಳ್ ಮಂಜಪ್ಪನವರನ್ನು ಸಂಪೂರ್ಣವಾಗಿ ಬೆಂಬಲಿಸಿ ಅವರನ್ನು ೨ ತಿಂಗಳ ಕಾಲ ನನ್ನ ಮನೆಯಲ್ಲಿಟ್ಟುಕೊಂಡು ನನ್ನ ಸಂಪೂರ್ಣವಾಗಿ ಸಹಕಾರವನ್ನು ನೀಡುವುದರ ಮೂಲಕ ಚುನಾವಣೆಯ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡೆ. ನನ್ನ ಜೊತೆಯಲ್ಲಿ ಸಹಕಾರ ನೀಡಿದವರೆಂದರೆ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾದ ಕೌಳಿಸುಬ್ಬರಾಯ ಗೌಡರು, ಬಾಳೆಮನೆ ಹಾಲಪ್ಪಗೌಡರು, ಗುಡ್ಡೆತೋಟದ ಸುಬ್ಬರಾವ್, ನರಸಿಂಹರಾಜಪುರ ತಾಲ್ಲೂಕಿನ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾದ ಕೆ.ಸಿ. ಮಂಜಪ್ಪನವರು, ಇಜಾಬುಲ್ಲ, ತೋಟದ ಮಾಲಿಕರಾದ ರಘು ರಾಮಶೆಟ್ಟರು, ಶಂಕರ್ ಟ್ರಾನ್ಸ್‌ಪೋರ್ಟ್ ಕಂಪೆನಿ ಮಾಲಿಕರಾದ ಎ. ರಮೇಶ್‌ರಾವ್, ತೀರ್ಥಹಳ್ಳಿಯ ಬಿ.ಎಸ್.ವಿಶ್ವನಾಥ್, ನ್ಯಾಯಮೂರ್ತಿ ಎನ್.ಡಿ.ವೆಂಕಟೇಶ್ ಮುಂತಾದವರು. ಈ ಮುಖಂಡರ ಜೊತೆಗೆ ಪರಿಶಿಷ್ಟ ಜಾತಿ ಬಡವರ್ಗದವರು, ಅಲ್ಪಸಂಖ್ಯಾತರು, ಕೂಲಿ ಕಾರ್ಮಿಕರು, ಗೇಣಿದಾರರು ಮೊದಲಾದವರು ಹಗಲಿರುಳು ದುಡಿದು, ಅವರ ಪ್ರತಿಸ್ಪರ್ಧಿಯಾಗಿದ್ದ ಎನ್.ಪಿ. ಗೋವಿಂದೇಗೌಡರಿಂದ ೧೬.೮೦೦ ಮತಗಳ ಅಂತರದಲ್ಲಿ ಕಡಿದಾಳ್ ಮಂಜಪ್ಪನವರನ್ನು ಜಯಶಾಲಿಯಾಗಿಸಿದರು. ಇದರಿಂದಾಗಿ ಕಡಿದಾಳ್ ಮಂಜಪ್ಪ ನವರು ಜನ ಸೇವೆಯೇ ಜನಾರ್ಧನ ಸೇವೆಯೆಂದು ಪರಿಗಣಿಸಿ ಜನರ ಪರವಾದ ಕಾರ್ಯದಲ್ಲಿ ತೊಡಗಿದರು. ಮತ್ತೊಂದು ವಿಶೇಷವೆಂದರೆ ಅಂದಿನ ಕಾಲದ ಚುನಾವಣೆ ಪ್ರಚಾರಕ್ಕೆ ಕೇವಲ ಮೂರು ವಾಹನಗಳನ್ನು ಮಾತ್ರ ಬಳಸಲಾಗಿದ್ದಿತು.

ಕಡಿದಾಳ್ ಮಂಜಪ್ಪನವರು ಕೆಂಗಲ್ ಹನುಮಂತಯ್ಯ ಮತ್ತು ಬಿ.ಡಿ. ಜತ್ತಿಯವರ ಕಾಲದಲ್ಲಿ ನಿಷ್ಠೆ ಹಾಗೂ ಪ್ರಾಮಾಣಿಕತೆಗೆ ಹೆಸರಾಗಿದ್ದರು. ಯಾವುದೇ ಕಾರಣಕ್ಕೂ ತನ್ನದಲ್ಲದ ಸಂಪತ್ತನ್ನು ಮುಟ್ಟಿದಂತವರಲ್ಲ. ಎಂದಿಗೂ ಸಹ ಸ್ವಹಿತಾಸಕ್ತಿಯ ಬಗ್ಗೆ ಯೋಚನೆಯನ್ನು ಮಾಡದೆ ಪ್ರಜೆಗಳ ಕಲ್ಯಾಣವನ್ನು ಬಯಸಿದ್ದರು. ಭ್ರಷ್ಟಾಚಾರಕ್ಕೆ ತಿಲಾಂಜಲಿ ಇಟ್ಟಿದ್ದರು. ಕಡಿದಾಳರು ಎಂದಿಗೂ ಆಡಂಬರದ ಜೀವನವನ್ನು ಬಯಸಿದಂತಹವರಲ್ಲ. ಬಹಳ ಸರಳ ಜೀವಿಯಾಗಿದ್ದರು. ನಿಸ್ಪೃಹತೆಯಿಂದ ಜನತೆಯ ಸೇವೆಯನ್ನು ನಡೆಸಿದ್ದರು. ಇವರ ಕಾಲದಲ್ಲಿ ಬಡಕೂಲಿ ವರ್ಗದವರಿಗೆ ಜಮೀನನ್ನು ಒದಗಿಸುವುದರ ಮೂಲಕ ಸಾವಿರಾರು ಕುಟುಂಬಗಳಿಗೆ ಆಶ್ರಯದಾತರಾಗಿದ್ದರು.

ಕಡಿದಾಳ್‌ರವರು ೧೯೬೨ರಲ್ಲಿ ವಿಧಾನಸಭೆಗೆ ಆಯ್ಕೆಯಾದ ಸಂದರ್ಭದಲ್ಲಿ ಭೂ ಮಾಲೀಕರು ಇವರ ವಿರುದ್ಧ ಪಿತೂರಿ ನಡೆಸಿ ಮಂತ್ರಿ ಸ್ಥಾನ ದೊರೆಯದಂತೆ ಮಾಡಿದರು. ಮಂಜಪ್ಪನವರು ಇಂತಹ ಸನ್ನಿವೇಶಕ್ಕೆ ಧೃತಿಗೆಡದೆ ತಮ್ಮ ಜೀವನವನ್ನು ಹೈಕೋರ್ಟಿನಲ್ಲಿ ವಕೀಲರಾಗಿ ಕೆಲಸ ಮಾಡುವುದರ ಮೂಲಕ ನಡೆಸಿದರು. ಕೊನೆಯವರೆಗೂ ಸಹ ಇದೇ ವೃತ್ತಿಯಲ್ಲಿ ಮುಂದುವರಿದರು. ಆದ್ದರಿಂದ ಇವರನ್ನು ಅಪರೂಪದ ರಾಜಕಾರಣಿಗಳೆಂದು ಕರೆಯಬಹುದು.

ಒಟ್ಟಿನಲ್ಲಿ ಕರ್ನಾಟಕವು ಪಡೆದಂತಹ ವಿಶಿಷ್ಟ ವ್ಯಕ್ತಿಗಳಲ್ಲಿ ಕಡಿದಾಳ್ ಮಂಜಪ್ಪನವರು ಒಬ್ಬರಾಗಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು. ಇಂತಹ ವ್ಯಕ್ತಿಯ ಜೀವನ ಆದರ್ಶಗಳನ್ನು ಇಂದು ಅಧಿಕಾರದಲ್ಲಿರುವ ರಾಜಕಾರಣಿಗಳು, ಅಧಿಕಾರಿಗಳು ಮತ್ತು ಯುವಜನತೆ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಸಮಾಜದಲ್ಲಿ ಭ್ರಷ್ಟಾಚಾರ ನಿರ್ಮೂಲನೆ ಮತ್ತು ಅನ್ಯಾಯವನ್ನು ತಡೆಗಟ್ಟುವಲ್ಲಿ ಸಹಕಾರಿಯಾಗಿ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಆಶಿಸುತ್ತೇನೆ.

# ನಾ ಕಂಡ ಕಡಿದಾಳರು

–ಎಚ್.ಎಸ್.ದೊರೆಸ್ವಾಮಿ

ನಾ ಕಂಡ ರಾಜಕಾರಣಿಗಳಲ್ಲಿ ಕಡಿದಾಳ್ ಮಂಜಪ್ಪನವರೂ ಒಬ್ಬ ಪರಿಶುದ್ಧ ವ್ಯಕ್ತಿ. ಬಾಲ್ಯದಲ್ಲಿ ಹಾಗೂ ವಿದ್ಯಾರ್ಥಿ ದೆಸೆಯಲ್ಲಿ ಕಡು ಬಡತನ ಅನುಭವಿಸಿದವರು. ಅವರು ತಂದೆಯಂತೆಯೇ ಮಾನಧನರಾಗಿದ್ದ ಕಡಿದಾಳರು ಬಡತನ ಕಾಡಿದರೂ ಛಲಬಿಡದೆ ವಿದ್ಯಾರ್ಜನೆ ಮಾಡಿದವರು. ಶಾಸಕರಾಗಿದ್ದ, ಮಂತ್ರಿಯಾಗಿದ್ದ, ಮುಖ್ಯಮಂತ್ರಿಯಾಗಿದ್ದ ಕಡಿದಾಳರು ಕೊನೆಯುಸಿರೆಳೆಯುವವರೆಗೂ ಶುದ್ಧ ಹಸ್ತರಾಗಿ ಉಳಿದರು. ಕೊನೆಯ ದಿನಗಳಲ್ಲಿ ರಾಜಕೀಯದಿಂದ ದೂರ ಉಳಿದ ಮಂಜಪ್ಪನವರು ದುಡಿಮೆ ಮಾಡಿ ಸಂಸಾರ ತೂಗಿಸಿದರು. ವಕೀಲಿ ವೃತ್ತಿಮಾಡಿ ಜೀವನ ಸಾಗಿಸಿದರು. ಸಾರ್ವಜನಿಕ ಜೀವನದಲ್ಲಿ ಸಾತ್ವಿಕತೆಯನ್ನು ಮೆರೆದವರು ಕಡಿದಾಳರು.

ತಮ್ಮ ತಂದೆ ಗೇಣೀದಾರನಾಗಿ ಅನುಭವಿಸಿದ ಕಷ್ಟ ಕಾರ್ಪಣ್ಯಗಳನ್ನು ಕಂಡಿದ್ದ ಮಂಜಪ್ಪನವರಿಗೆ ಗೇಣಿ ಪದ್ದತಿಯನ್ನು ರದ್ದು ಮಾಡುವ ಮಹದಾಕಾಂಕ್ಷೆ ಅವರು ರಾಜಕೀಯ ಪ್ರವೇಶ ಮಾಡುತ್ತಿದ್ದಂತೆಯೇ ಅಂಕುರಿಸಿತು. ಆದರೆ ಅದನ್ನ ಕಾರ್ಯಗತಗೊಳಿಸಲು ಅವರು ಕಂದಾಯ ಮಂತ್ರಿಯಾಗುವವರೆಗೆ ಕಾಯಬೇಕಾಯಿತು. ಆ ದಿನಗಳಲ್ಲಿ ಮೇಲಿಂದ ಮೇಲೆ ಗೇಣಿ ಪದ್ದತಿಯಿಂದ ಜರ್ಜರಿತರಾದ ರೈತರು ಜಮೀನುದಾರರ ಶೋಷಣೆಗೆ ಒಳಗಾಗುತ್ತಿದ್ದರು.

ಜಮೀನ್ದಾರರು, ಗೇಣಿ ಮಾಡುವವರಿಗೆ ಭತ್ತ ಸಾಲವಾಗಿ ಕೊಡುವಾಗ ೮–೯ ಸೇರಿನ ಕೊಳಗದಲ್ಲಿ ಅಳೆದುಕೊಡುವುದು, ಗೇಣಿ ವಸೂಲಿ ಮಾಡುವಾಗ ೧೧ ಸೇರಿನ ಕೊಳಗದಲ್ಲಿ ಅಳೆದು ಪಡೆಯುವುದು, ಕ್ಷುದ್ರ ಕಾರಣಗಳಿಗಾಗಿ ರೈತರಿಂದ ಗೇಣಿ ಭೂಮಿ ಕಿತ್ತುಕೊಳ್ಳುವುದು, ಗೇಣೀದಾರರ ಮಕ್ಕಳು ಬಿಳಿ ಪಂಚೆ ಇಸ್ತ್ರಿ ಮಾಡಿದ ಶರ್ಟು ಹಾಕಿಕೊಂಡರೆ ಅವರನ್ನು ಥಳಿಸುವುದು, ಶಾಲೆಗೆ ಹೋಗುವ ಮಕ್ಕಳನ್ನು ಶಾಲೆ ಬಿಡಿಸಿ, ತಮ್ಮ ಮನೆಯಲ್ಲಿ ದುಡಿಮೆಗೆ ಹಾಕಿಕೊಳ್ಳುವುದು, ಗೇಣೀದಾರರ ವಯಸ್ಸಿಗೆ ಬಂದ ಹೆಣ್ಣು ಮಕ್ಕಳನ್ನು ತಮ್ಮ ಭೋಗಕ್ಕೆ ಬಳಸುವುದು ಹೀಗೆ ಒಂದೇ ಎರಡೇ ಎಷ್ಟೊ ಬಗೆಯಲ್ಲಿ ಶೋಷಣೆಗೊಳಪಡಿಸುತ್ತಿದ್ದರು. ಇದನ್ನೆಲ್ಲಾ ಕಣ್ಣಾರೆ ಕಂಡಿದ್ದ ಕಡಿದಾಳರಿಗೆ ಈ ಅನಿಷ್ಠ ಪದ್ಧತಿಯನ್ನು ಕೊನೆಗಾಣಿಸಿ, ಗೇಣಿದಾರನ್ನೆಲ್ಲ

ಭೂ ಮಾಲೀಕರನ್ನಾಗಿ ಮಾಡುವ ಛಲ ಕಾಡುತ್ತಿತ್ತು.

ಕಡಿದಾಳರು ರೆವಿನ್ಯೂ ಸಚಿವರಾಗಿದ್ದಾಗ ಗೇಣಿ ಪದ್ಧತಿ ರದ್ದುಗೊಳಿಸುವ ಶಾಸನ ಜಾರಿಗೆ ತಂದರು. ಭೂ ಮಾಲೀಕರು ಒಂದುಗೂಡಿಕೊಂಡು ಈ ಕಾನೂನನ್ನು ಅಸಿಂಧು ಮಾಡುವುದಕ್ಕಾಗಿ ಭಾರಿ ಪ್ರಯತ್ನ ನಡೆಸಿದರು. ಗೇಣೀದಾರರು ದುಡಿಮೆ ಬಿಟ್ಟು ನ್ಯಾಯಾಲಯಗಳಿಗೆ ಅಲೆದಾಡುವ ಪರಿಸ್ಥಿತಿ ಸೃಷ್ಟಿ ಮಾಡಿದರು. ತಮ್ಮ ಜಮೀನಿನಲ್ಲಿ ಬೆಳೆಯೇ ಆಗದಿದ್ದರೂ ಅಡ್ಡಿ ಇಲ್ಲ. ತಮ್ಮ ಕಣಜ ತುಂಬದಿದ್ದರೂ ಅಡ್ಡಿಯಿಲ್ಲ, ಗೇಣೀದಾರರನ್ನು ನ್ಯಾಯಾಲಯಕ್ಕೆ ಅಲೆಯುವಂತೆ ಮಾಡಿ ಅವರನ್ನು ಮಣಿಯುವಂತೆ ಮಾಡಬೇಕು. ಸರ್ಕಾರ ತಮ್ಮ ವಿರುದ್ಧ ರೂಪಿಸಿರುವ ಶಾಸನವನ್ನು ಹಿಂದಕ್ಕೆ ಪಡೆಯುವಂತೆ ಮಾಡಬೇಕು. ಅದರೆ ಅವರ ಆಶಯ ಫಲಿಸಲಿಲ್ಲ.

ಕಡಿದಾಳರು ಗೇಣಿರದ್ದಿಯಾತಿ ಶಾಸನವನ್ನು ಜಾರಿಗೊಳಿಸಿದರು. ಗೇಣಿ ಮಾಡುತ್ತಿದ್ದ ಭೂ ಹೀನ ರೈತರೆಲ್ಲ ಭೂಮಿಯ ಒಡೆಯರಾದರು. ನೂರಾರು ವರ್ಷಗಳಿಂದ ಶೋಷಣೆಗೊಳಗಾಗಿದ್ದ ಈ ಮುಗ್ಧ ಜನರೆಲ್ಲ ಮರ್ಯಾದೆಯಿಂದ ಎರಡು ಹೊತ್ತು ಊಟ ಮಾಡುವಂತಾಯಿತು.

ದೇವರಾಜ ಅರಸರು ಮುಖ್ಯ ಮಂತ್ರಿಯಾಗಿದ್ದ ಕಾಲದಲ್ಲಿ ಕರ್ನಾಟಕದಲ್ಲಿ ಭೂಸುಧಾರಣೆ ಕಾಯ್ದೆ ಜಾರಿಗೆ ಬಂತು. ಭೂ ಸುಧಾರಣಾ ಕಾಯ್ದೆಯಡಿ (೧) ಭೂಮಿತಿ ಕಾಯ್ದೆ (೨) ಗೇಣೀ ಪದ್ದತಿ ರದ್ದಿಯಾತಿ ಕಾಯ್ದೆ ಎರಡೂ ಜಾರಿಗೊಂಡವು. ಭೂಮಿತಿ ಕಾಯ್ದೆ ನಾನಾ ಕಾರಣಗಳಿಂದ ವಾಂಛಿತ ಫಲವನ್ನು ನೀಡಲಿಲ್ಲ. ಅದಕ್ಕೆ ಮುಖ್ಯವಾದ ಕಾರಣಗಳೆಂದರೆ, ಭೂ ಹಿಡುವಳಿಯ ಗರಿಷ್ಠ ಮಿತಿ ಅವಾಸ್ತವಿಕವಾಗಿರುವುದು, ಅಡಿಕೆ, ತೆಂಗು, ಹಣ್ಣಿನ ತೋಟಗಳಿಗೆ ಭೂಮಿತಿ ಶಾಸನದಿಂದ ವಿನಾಯ್ತಿ ನೀಡಿದ್ದು, ದೊಡ್ಡ ರೈತರು ತಮ್ಮ ಹೆಚ್ಚಿನ ಭೂಮಿಯನ್ನು ಬೇನಾಮಿ ಜನರ ಹೆಸರಿಗೆ ವರ್ಗಾಯಿಸಿದ್ದು, ಭೂಮಿತಿ ಶಾಸನದಿಂದ ತಪ್ಪಿಸಿಕೊಳ್ಳುವುದನ್ನು ಶ್ರೀಮಂತ ರೈತರು ಒಂದು ಕುಶಲ ಕಲೆಮಾಡಿಕೊಂಡಿದ್ದು ಮುಂತಾದವು. ಈ ಎಲ್ಲ ಕಾರಣಗಳಿಂದ ಭೂಮಿತಿ ಶಾಸನ ನಿರೀಕ್ಷಿತ ಫಲವನ್ನು ನೀಡಲಿಲ್ಲ. ಆದರೂ ಅರಸುರವರ ಭೂ ಸುಧಾರಣಾ ಶಾಸನ ಭಾರತಕ್ಕೆ ಮಾದರಿ ರೀತಿಯದು ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಭೂಮಿತಿ ಶಾಸನ ಫಲಕಾರಿಯಾಗದಿದ್ದರೂ ಕಡಿದಾಳರ ಕನಸಾದ ಗೇಣಿರದ್ದಿಯಾತಿ ಶಾಸನ ನೂರಕ್ಕೆ ನೂರು ಫಲ ನೀಡಿದ್ದೇ ಈ ಹೆಗ್ಗಳಿಕೆಗೆ ಕಾರಣವಾಯಿತು.

ಕಡಿದಾಳ್ ಮಂಜಪ್ಪನವರು ವಿದ್ಯಾರ್ಥಿ ದೆಸೆಯಲ್ಲೇ ಗಾಂಧಿಜಿಯಿಂದ ಪ್ರಭಾವಿತರಾದರು. ಸ್ವಾತಂತ್ರ್ಯಕ್ಕಾಗಿ ದುಡಿದರು. ತಮ್ಮ ಜೀವನದಲ್ಲಿ ಸತ್ಯ ಮತ್ತು ಸರಳತೆಯನ್ನು ಅಳವಡಿಸಿಕೊಂಡರು. ಶುದ್ಧ ಖಾದೀಧಾರಿಗಳಾದರು. ದೇಶಸೇವೆಯೇ ಈಶ ಸೇವೆ ಎಂದು ಬಗೆದು ತಮ್ಮ ಜೀವಿತವನ್ನು ಪೂರ್ತಿ ನಾಡು, ನುಡಿಯ ಸೇವೆಗೆ ಮುಡುಪಾಗಿಟ್ಟರು.

ರಾಜಕೀಯ ಅಧಿಕಾರ ಕಡಿದಾಳರನ್ನು ತಲೆತಿರುಕರನ್ನಾಗಿ ಪರಿವರ್ತಿಸಲಿಲ್ಲ. ಭ್ರಷ್ಟರನ್ನಾಗಿಸಲಿಲ್ಲ. ಶಿಸ್ತಿನ ಸಿಪಾಯಿಯಂತೆ ತಮ್ಮ ಜೀವನ ನಡೆಸಿದರು. ಎಲ್ಲರ ಪ್ರಶಂಸೆಗೂ ಅವರು ಪಾತ್ರರಾದರು.

ಇಂದಿನ ರಾಜಕೀಯ ಕಲುಷಿತವಾಗಿದೆ. ಮೌಲ್ಯಗಳು ಕುಸಿದು ಬಿದ್ದಿವೆ. ರಾಜಕೀಯ ಪಕ್ಷಗಳಿಗೆ, ರಾಜಕೀಯ ವ್ಯಕ್ತಿಗಳಿಗೆ ಅಗ ಒಂದು ಗುರಿಯಿತ್ತು. ಆದರ್ಶಗಳಿದ್ದವು. ಬಡತನ ನಿವಾರಣೆ, ಸಾಮಾಜಿಕ ನ್ಯಾಯಕ್ಕಾಗಿ ಹೊಡೆದಾಡುವುದು ಆ ಗುರಿ. ನಮ್ಮ ಇಂದಿನ ರಾಜಕೀಯ ಪಕ್ಷಗಳೂ ಇಂತಹ ಉದಾತ್ತ ಗುರಿಗಳನ್ನು ಹೊಂದಿರಬೇಕು. ತನ್ನ ಸದಸ್ಯರಲ್ಲಿ ಇಂತಹ ಅದರ್ಶಗಳನ್ನು ಮೂಡಿಸಬೇಕು. ಕುರ್ಚಿ ಹಿಡಿಯುವ ತನ್ನ ಏಕೈಕ ಗುರಿಯನ್ನು ಬಿಟ್ಟು ರಾಜಕೀಯ ಪಕ್ಷಗಳು ಸಮರ್ಥ ನಾಯಕರನ್ನೂ, ಆದರ್ಶ ಕಾರ್ಯಕರ್ತರನ್ನೂ ಸೃಷ್ಟಿಸುವುದನ್ನು ತಮ್ಮ ಕಾಯಕ ಮಾಡಿಕೊಳ್ಳಬೇಕು. ಕಡಿದಾಳರಿಗೆ ನಾವು ಸಲ್ಲಿಸಬಹುದಾದ ಪ್ರೀತಿಯ ಗೌರವವೆಂದರೆ ಇದೇ.

# ಕಪಟವರಿಯದ ಕೃಪಾಸಿಂಧು

**–ಕೋ. ಚೆನ್ನಬಸಪ್ಪ**

೧೯೭೭ ರಲ್ಲಿ ಜಿಲ್ಲಾ ನ್ಯಾಯಾಧೀಶ ಹುದ್ದೆಯಿಂದ ನಿವೃತ್ತನಾದ ಮೇಲೆ ನಾನು ಉಚ್ಚ ನ್ಯಾಯಾಲಯದಲ್ಲಿ ಮತ್ತೆ ನ್ಯಾಯವಾದಿ ವೃತ್ತಿಯನ್ನು ಕೈಕೊಂಡೆ. ೧೯೭೮ ರಲ್ಲಿ ಒಂದು ದಿನ ಉಚ್ಚ ನ್ಯಾಯಾಲಯಕ್ಕೆ ಹೋದೆ. ನನಗಿಂತ ಒಂದೆರಡು ನಿಮಿಷ ಮೊದಲೆ ಬಂದಿದ್ದ ಶ್ರೀ ಕಡಿದಾಳ ಮಂಜಪ್ಪನವರು ನ್ಯಾಯಾಲಯದ ಪಶ್ಚಿಮ ಮಹಾದ್ವಾರದ ಬಳಿ ಕಾರಿನಿಂದ ಇಳಿದು ಗೌನ್ ತೊಟ್ಟುಕೊಂಡು ಕೇಸಿನ ದಪ್ತರುಗಳನ್ನು, ಒಂದೆರಡು ಲಾ ರಿಪೋರ್ಟುಗಳನ್ನು ಎದೆಗವಚಿಕೊಂಡು ನಾಲ್ಕು ಹೆಜ್ಜೆ ನಡೆದು ಬಂದರು. ನಾನೂ ಅಷ್ಟು ಹೊತ್ತಿಗೆ ಕಾರಿನಿಂದ ಇಳಿದು ಅವರತ್ತ ತಿರುಗಿ 'ನಮಸ್ಕಾರ' ಎಂದರೆ ಅವರೂ ತಮ್ಮ ಹುಟ್ಟು ಹಸನ್ಮುಖದಿಂದ ನಮಸ್ಕಾರ ಎಂದರು. ಅವರ ಕೈಗಳಲ್ಲಿದ್ದ ಕಡತ ಮತ್ತು ಪುಸ್ತಕಗಳನ್ನು ನೋಡಿ:

'ಪುಸ್ತಕಗಳನ್ನು ಇಲ್ಲಿ ಕೊಡಿ' ಎಂದು ಕೈ ಚಾಚಿದೆ.

'ಬೇಡಿ ಬೇಡಿ: ನನ್ನ ಫೈಲು, ನನ್ನ ಪುಸ್ತಕ ತಗೊಂಡು ಹೋಗೋದೇನೂ ತೊಂದರೆಯಿಲ್ಲ'

'ಇಲ್ಲಿ ಕೊಡಿ, ನನ್ನ ಕೈಯಲ್ಲಿ ಏನೂ ಇಲ್ಲ. ನಿಮ್ಮ ಎರಡೂ ಕೈಗಳಲ್ಲಿ ಭಾರ. ನಿಮ್ಮ ಅರ್ಧ ಭಾರ ನನಗೆ ಕೊಡಿ' ಎಂದೆ ಹಠದಿಂದ.

ಅವರು ನಿಂತುಕೊಂಡು ಲಾ ರಿಪೋರ್ಟ್ ನನ್ನ ಕೈಗಿತ್ತರು. ಒಬ್ಬರ ಪಕ್ಕದಲ್ಲೊಬ್ಬರು ನಡೆಯುತ್ತ ಲಿಫ್ಟ್ ಹತ್ತಿ ಮಹಡಿ ಮೇಲಕ್ಕೆ ಹೋದೆವು. ಲಿಫ್ಟ್ ಇಳಿದು ಹೋದ ಮೇಲೆ ಪುಸ್ತಕಗಳನ್ನೂ ಇಸಿದುಕೊಂಡು ಥ್ಯಾಂಕ್ಸ್ ಎಂದರು. 'ಅದೇನು ಅಂಥ ಕೆಲಸವಲ್ಲ ಥ್ಯಾಂಕ್ಸ್ ಏಕೆ'? ಎಂದೆ. ನನ್ನ ಕೆಲಸ ನಾನು ಮಾಡಿಕೊಳ್ಳುವುದು ನನಗೆ ಅಭ್ಯಾಸವಾಗಿದೆ. ಆದರೂ ನೀವು ನೆರವಾದಿರಿ. ಅದಕ್ಕೆ ಥ್ಯಾಂಕ್ಸ್ ಎಂದರು.

'To Share the burden is socialism. I am a socialist. ನಿಮ್ಮ ಎರಡೂ ಕೈ ತುಂಬಿ ಭಾರವಾಗಿತ್ತು. ಅದರಲ್ಲೊಂದು ಕೈಭಾರವನ್ನು ನಾನು ಹೊತ್ತುಕೊಂಡೆ' ನನ್ನ ಮುಖ ನೋಡಿ ನಸು ನಗುತ್ತಾ: 'ಒಳ್ಳೆಯ ಸೋಷಿಯಲಿಸ್ಟ್

ಕಣ್ರೀ' ಎಂದರು. ಮತ್ತೆ ಹೇಳಿದರು 'To day I turn seventy? Do you know' ಅವರತ್ತ ಕೈಚಾಚಿ ನಾನು ಸಂತೋಷದಿಂದ Happy birthday to you! Many happy return of the day' ಎಂದೆ.

ನಗು ನಗುತ್ತಾ, ತಮ್ಮ ಹುಟ್ಟು ಹಬ್ಬದ ದಿನ ಅಷ್ಟೇನೂ ಮಹತ್ವದ ದಿನ ಅಲ್ಲ ಎಂಬಂತೆ ನ್ಯಾಯಾಂಗಣದ ಕಡೆ ನಡೆದರು. ನಾನು ಹಾಗೆಯೆ ಯೋಚನೆ ಮಾಡಿದೆ. ಐವತ್ತು ತುಂಬಿದೊಡನೆಯ ಅಷ್ಟೇಕೆ ನಾಲ್ವತ್ತು ತುಂಬಿದೊಡನೆ ಅದ್ದೂರಿಯಿಂದ ಹುಟ್ಟು ಹಬ್ಬವನ್ನು ಆಚರಿಸಿಕೊಳ್ಳುವ ರಾಜಕಾರಣಿಗಳು, ಸಾಹಿತಿಗಳು, ಸಮಾಜ ಸೇವಕರು ಹೆಚ್ಚಾಗುತ್ತಿರುವ ಈ ಕಾಲದಲ್ಲಿ ಒಮ್ಮೆ ಮುಖ್ಯ ಮಂತ್ರಿಯಾಗಿದ್ದ ಕಡಿದಾಳರು ೭೦ ವರ್ಷ ತುಂಬಿದ ದಿನವೂ ಕಾಯಕದಲ್ಲಿ ನಿರತರಾಗಿ ದುಡಿಮೆಯ ಭಾರ ಹೊತ್ತಿದ್ದರು. ನಾನವರನ್ನು ಗೌರವಿಸುವುದಕ್ಕಿದ್ದ ಮುಖ್ಯ ಕಾರಣ ಅವರ ಈ ಸರಳ ಸ್ವಭಾವ. ಅವರ ಈ ಸ್ವಭಾವವನ್ನು ಸ್ಮರಿಸಿಕೊಂಡಾಗ ಇನ್ನೊಬ್ಬ ಮರಿಮಂತ್ರಿಯ ನೆನಪಾಗುತ್ತದೆ.

ನನಗೆ ಗೊತ್ತಿದ್ದ ನನ್ನ ವಕೀಲ ಕಿರಿಯ ಮಿತ್ರರಿದ್ದರು. ಅವರು ಒಂದೇ ಸಲ ಶಾಸಕರಾಗಿ ಬಂದಿದ್ದರು. ಯಾವುದೊ ಅನಿವಾರ್ಯ ಸಂದರ್ಭದಲ್ಲಿ ಅವರನ್ನು ಉಪ ಮಂತ್ರಿಯನ್ನಾಗಿ ಮಾಡಿದರು. ಅವರ ಶಾಸನ ಸಭಾ ಅವಧಿ ಮುಗಿಯಿತು. ಮುಂದಿನ ಚುನಾವಣೆಯಲ್ಲಿ ಸೋತರು. ಅವರು ಬೆಂಗಳೂರಿನಲ್ಲೆ ನಿಂತರು. ವಕೀಲ ವೃತ್ತಿ ಬಿಟ್ಟರು. ಒಮ್ಮೆ ಅವರು ಗಾಂಧೀ ಭವನದಲ್ಲಿ ಸಿಕ್ಕರು. ಸಭೆ ಮುಗಿದ ಮೇಲೆ 'ಈಗ ವಕಾಲತ್ತು ಮಾಡುವುದಿಲ್ಲವೆ'? ಎಂದು ಕೇಳಿದೆ. ಅದಕ್ಕವರು: 'ಮಂತ್ರಿಯಾಗಿದ್ದವನು ಮುನ್ಸಿಫ್ ಕೋರ್ಟ್‌ಗೆ ಹೇಗೆ ಹೋಗುವುದು? ಬಿಟ್ಟು ಬಿಟ್ಟೆ!' ಎಂದರು.

ನನಗೆ ಅವರ 'ಆತ್ಮದುರಭಿಮಾನದ' ಹುಚ್ಚು ಕೇಳಿ ಆಶ್ಚರ್ಯವಾಯಿತು. ಒಂದಿಷ್ಟು ವ್ಯಂಗ್ಯವಾಗಿಯೆ: 'ಜೀವನೋಪಾಯ ಹೇಗೆ? ಏನು? ಎಂದು ಕೇಳಿದೆ. ಅವರು : 'ಹೇಗೋ ನಡೆಯುತ್ತಿದೆ' ಎಂದರು. ನಾನು 'ಏನೂ ಕೆಲಸ ಮಾಡದೆ ಜೀವನ ಸಾಗಿಸುವ ವಿದ್ಯೆಯಾವುದು? ನನಗೂ ಒಂದಿಷ್ಟು ತಿಳಿಸಿ' ಎಂದೆ. ಅವರು ಸುಮ್ಮನಾದರು. ಇಂಥ ಮನೋಭಾವನೆ ಮಂತ್ರಿತ್ವದ ಕಿರೀಟ ಹೊತ್ತ ತಲೆಯೊಳಗಿನ ಶೀಸದ ಗುಂಡಿನ ಭಾರ! ಇಂಥವರಿರುವ ಈ ದೇಶದಲ್ಲಿ ಕಡಿದಾಳರಂಥ ಗರಿ ಹಗುರದ ಮನೋಭಾವದವರನ್ನು ಮಹಾನುಭಾವರೆನ್ನದೆ ಇನ್ನೆಂಥವರನ್ನು

ದೊಡ್ಡವರೆನ್ನಬೇಕು? ಕಡಿದಾಳರ ವಿಚಾರವನ್ನೆತ್ತಿದರೆ ಸಾಕು ಅವರು ಮುಖ್ಯಮಂತ್ರಿ ಆಗಿದ್ದು ದೊಡ್ಡ ಹೆಸರುಗಳಿಸಿದ್ದರೂ ಆ ಉನ್ನತ ಪದವಿಯಿಂದ ವಿರಮಿಸಿದ ಮೇಲೆ ವಕೀಲ ವೃತ್ತಿಯನ್ನು ಮುಂದುವರಿಸಿದ ಸಂಗತಿಯನ್ನು ಆಶ್ಚರ್ಯದಿಂದ ಸ್ಮರಿಸುತ್ತಾರೆ. ತಾವು ಮುಖ್ಯಮಂತ್ರಿ ಆಗಿದ್ದರು ಎಂಬುದನ್ನೇ ಮರೆತುಬಿಟ್ಟಿದ್ದರೆಂದು ಕಾಣುತ್ತದೆ.

ಯಾಕೆ ಅವರು ಹೀಗೆ ಮುಪ್ಪಾಗುವವರೆಗೆ ದುಡಿದರು? ಅವರು ತಮ್ಮ ಆತ್ಮ ಕಥೆಯಲ್ಲಿ ಅದನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ. ವಕೀಲ ವೃತ್ತಿಯನ್ನು ಬಿಟ್ಟು ರಾಜಕೀಯದಲ್ಲಿ ಪ್ರವೇಶಿಸಿದ ಮೇಲೆ ಸಾಲವಂದಿಗರಾದರು! ಆ ಸಾಲ ತೀರಿಸಲು ಅವರು ದುಡಿಯಬೇಕಾಯಿತು. ದುಡಿಮೆಯ ನೊಗಕ್ಕೆ ಹೆಗಲೊಡ್ಡಿದ್ದರು. ರಾಜಕೀಯದಲ್ಲಿ ಸೇರಿ ಸಾಲವಂದಿಗರಾದರೆಂಬ ಮಾತನ್ನು ಈಗ ಯಾರ್ಯಾರೂ ನಂಬುವುದಿಲ್ಲ. ಒಂದೇ ಒಂದು ಬಾರಿ ಶಾಸಕರಾದರೆ, ಒಂದು ನಿಗಮ, ಪ್ರಾಧಿಕಾರದ ಅಧ್ಯಕ್ಷ, ಜುಜುಬಿ ಸಮಿತಿಯ ಸದಸ್ಯನಾದರೆ ಏಳು ತಲೆಮಾರುಗಳವರೆಗೆ ಸಾಕಾಗುವಷ್ಟು ಗಂಟು ಮಾಡುತ್ತಿರುವ ಈ ಕಾಲದಲ್ಲಿ ಕಡಿದಾಳರಂಥವರು ಸಾಲಗಾರರಾದರೆಂದರೆ ಅವರು ಹರಿಶ್ಚಂದ್ರರಾಗಿರಬೇಕು. ಇಲ್ಲವೆ ವ್ಯವಹಾರ ಚಾತುರ್ಯವಿಲ್ಲದ 'ಹೆಡ್ಡ' ರಾಗಿರಬೇಕು. ಅವರನ್ನು 'ಹೆಡ್ಡರ' ಹೆಡ್ಮಾಸ್ಟರ್ ಎಂದು ಕರೆಯದೆ, ಪ್ರಾಮಾಣಿಕ ರಾಜಕಾರಣಿ ಎಂದು ಈ ನಾಡು ಸ್ಮರಿಸುತ್ತದೆ. ಅದೇ ಅವರ ಹಿರಿಮೆ. ಅವರ ಜೀವನ ಸಂದೇಶ.

ಶ್ರೀ ಮಂಜಪ್ಪನವರ ಪ್ರಥಮ ಪ್ರತ್ಯಕ್ಷ ಪರಿಚಯವಾದದ್ದು ಅವರು ಕೆಂಗಲ್ ಹನುಮಂತಯ್ಯನವರ ಸಚಿವ ಸಂಪುಟದಲ್ಲಿ ಕಂದಾಯ ಮಂತ್ರಿಗಳಾಗಿದ್ದಾಗ. ೧೯೫೪ ಅಥವಾ ೫೫ರ ಏಪ್ರಿಲ್ ತಿಂಗಳಲ್ಲಿ ಅಂದಿನ ಅಠಾರ ಕಛೇರಿಯಲ್ಲಿ ಮುಖ್ಯ ಮಂತ್ರಿಗಳಿಗೆ ನಮ್ಮ ಜಿಲ್ಲೆಯ ಒಬ್ಬ ಭ್ರಷ್ಟ ಅಧಿಕಾರಿಯ ಬಗ್ಗೆ ಮಾಹಿತಿ ಕೊಡಲು ಹೋಗಿದ್ದೆ. ಆ ತಹಸೀಲ್ದಾರರ ಮೇಲೆ ಕ್ರಮ ಕೈಕೊಳ್ಳುವ ಅಧಿಕಾರ ಕಂದಾಯ ಮಂತ್ರಿಗಳದ್ದು. ಕ್ಷಿಪ್ರ ಕ್ರಮ ಕೈಗೊಳ್ಳಬೇಕಾಗಿದ್ದರಿಂದ ಕಡಿದಾಳರನ್ನು ಕೊಠಡಿಗೆ ಕರೆಸಿ ನನ್ನ ಪರಿಚಯ ಮಾಡಿಸಿದರು. ಹರಿಜನರಿಗೆ ವಸತಿ ನಿರ್ಮಾಣಕ್ಕಾಗಿ ಸರ್ಕಾರ ಮಂಜೂರು ಮಾಡಿದ್ದ ಹಣದಲ್ಲಿ ಆ ತಹಶೀಲ್ದಾರ ಶೇಕಡಾ ಇಂತಿಷ್ಟು 'ಕಟ್' ಮಾಡಿದ್ದ ಎಂಬ ವಿಷಯ ತಿಳಿಸಿದೆ. ಶ್ರೀ ಕಡಿದಾಳರು 'ಇದೆಷ್ಟು ನಿಜ? ಯಾರು ಕಂಡಿದ್ದಾರೆ? ಕ್ರಮ ತೆಗೆದುಕೊಳ್ಳುವುದಕ್ಕೆ ಆಧಾರ ಬೇಕಲ್ಲ?' ಎಂದರು. 'ಅಲ್ಲಿಂದ ಆತನನ್ನು ವರ್ಗಾಯಿಸಿದರೆ ಕಛೇರಿಯ ಗುಮಾಸ್ತರೆ ಜವಾನರೇ ಹೇಳುತ್ತಾರೆ' ಎಂದೆ. ವರ್ಗಾಯಿಸುವುದಕ್ಕಾದರೂ ಆಧಾರ ಬೇಕಲ್ಲ' ಎಂದರು. 'In the interest of public service' ಯಾವಾಗ

ಬೇಕಾದರೂ ಮಾಡಬಹುದಲ್ಲ? ಎಂದೆ ಕಡಿದಾಳರು ನಕ್ಕುಬಿಟ್ಟರು. ಆಗ ಮುಖ್ಯಮಂತ್ರಿಗಳು: 'ಕಾನೂನು ಮಂತ್ರಿಗಳನ್ನು ಕೇಳೋಣ' ಎಂದು ಶ್ರೀ ಸಿದ್ಧವೀರಪ್ಪನವರನ್ನು ಕರೆಸಿದರು, ಅವರು ಸಂವಿಧಾನ ಆರ್ಟಿಕಲ್ ೨೧೧ರ ಮಾತು ಎತ್ತಿದರು. ಆಗ ಮುಖ್ಯಮಂತ್ರಿಗಳು: 'ಸಂವಿಧಾನ ಚೆನ್ನಬಸಪ್ಪ ಅವರಿಗೂ ಗೊತ್ತು. ಮಂಜಪ್ಪನವರಿಗೂ ಗೊತ್ತು. ಈಗಿನ ಪ್ರಶ್ನೆ ತುರ್ತು ಹೇಗೆ ಕ್ರಮ ಕೈಕೊಳ್ಳಬಹುದು? ಏನಾದರು ಪರಿಹಾರ ಸೂಚಿಸಿ?" ಎಂದರು. ಯಾರನ್ನಾದರೂ ಆ ತಾಲ್ಲೂಕು ಕಛೇರಿಗೆ ಕಳಿಸಿ ಗುಪ್ತ ಮಾಹಿತಿ ಪಡೆದು ಮುಂದಿನಕ್ರಮ ಜರುಗಿಸುವುದೆಂದು ನಿರ್ಧರಿಸಿದರು. ಕಡಿದಾಳರು ನನ್ನ ಕಡೆ ತಿರುಗಿ: 'ಒಂದೆರಡು ದಿನಗಳಲ್ಲಿ ಬಳ್ಳಾರಿಗೆ ಒಬ್ಬರು ಬರುತ್ತಾರೆ. ಅವರು ಅಲ್ಲಿ ಯಾರನ್ನು ಸಂಪರ್ಕಿಸಬಹುದೆಂದು ಅವರಿಗೆ ತಿಳಿಸಿ. ಅವರ ವರದಿ ಬಂದೊಡನೆ ಸೂಕ್ತ ಕ್ರಮಕೊಳ್ಳುತ್ತೇವೆ' ಎಂದರು. ನಾನು ಬಳ್ಳಾರಿಗೆ ಹಿಂದಿರುಗಿದ ಒಂದೆರಡು ದಿನಗಳಲ್ಲಿ ಒಬ್ಬ ಅಧಿಕಾರಿ ಬಂದು ನನ್ನನ್ನು ಕಂಡರು. ನಾನು ಇಬ್ಬರು ಮೂವರು ಹೆಸರು ಕೊಟ್ಟೆ, ಅವರು ಮಾಹಿತಿ ಸಂಗ್ರಹಿಸಿ ಸರ್ಕಾರಕ್ಕೆ ವರದಿ ಮಾಡಿದರು. ಆ ವರದಿಯ ಆಧಾರದ ಮೇಲೆ ತಹಸಿಲ್ದಾರರನ್ನು ಕೊಪ್ಪಕ್ಕೆ ಕೂಡಲೇ ವರ್ಗಾಯಿಸಿದರು.

ಈ ಸಣ್ಣ ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸುವುದರ ಉದ್ದೇಶ–ಭ್ರಷ್ಟಾಚಾರದ ಬಗ್ಗೆ ಕಡಿದಾಳರಿಗಿದ್ದ ಸಾತ್ವಿಕ ಆಕ್ರೋಶ (RIGHTEOUS indigration) ಅವರೂ ನಾನೂ ಬಹು ಹತ್ತಿರಕ್ಕೆ ಬಂದದ್ದು ಈ ಭ್ರಷ್ಟಾಚಾರ ರಾಕ್ಷಸ ಶಕ್ತಿಯನ್ನು ತುಳಿಯುವುದಕ್ಕಾಗಿ. ಅವರು ಮಾಡಿದ ಪ್ರಯತ್ನದಲ್ಲಿ ನಾನು ಸಹಭಾಗಿಯಾಗಿದ್ದೆ. 'ಜಾಗೃತ ಭಾರತ' ಎಂಬ ಒಂದು ಸಂಘ ಸ್ಥಾಪನೆ ಮಾಡಿದ್ದರು. ಅದರ ಧ್ಯೇಯೋದ್ದೇಶಗಳಲ್ಲಿ ಭ್ರಷ್ಟಾಚಾರ ನಿರ್ಮೂಲನೆ ಒಂದು. ಬಹುಶಃ ಪ್ರಮುಖವಾದದ್ದು ಎಂದು ಇಟ್ಟುಕೊಳ್ಳಬಹುದು. ಸಾರ್ವಜನಿಕರ ದೂರು ದುಮ್ಮಾನಗಳಿಗೆ ಪರಿಹಾರ ಒದಗಿಸುವುದೂ ಇನ್ನೊಂದು, ಬಹುಶಃ ಸಾಂಘಿಕವಾಗಿ ಲಂಚ ವಿರೋಧಕ್ಕಾಗಿ ಕರ್ನಾಟಕದಲ್ಲಿ ಸ್ಥಾಪಿಸಿದ ಮೊಟ್ಟ ಮೊದಲ ಸಂಘ ಎಂದು ಕಾಣುತ್ತದೆ. ಈ ಭ್ರಷ್ಟಾಚಾರದ ಪಿಡುಗು, ಪ್ಲೇಗು ಈ ದೇಶದ ಏಳಿಗೆಗೆ ಪ್ರಥಮ ಶತ್ರು ಎಂಬುದನ್ನು ಮಂಜಪ್ಪನವರು ಅರಿತು, ಅದನ್ನು ತಡೆಯಲು, ನಿರ್ಮೂಲನೆ ಮಾಡಲು ಸಾಂಘಿಕವಾಗಿ ಪ್ರಯತ್ನಿಸಿದ ಮೊಟ್ಟ ಮೊದಲ ರಾಜಕಾರಣಿಯೆ ಅವರೆಂದು ಕಾಣುತ್ತದೆ. ಆಗ ಅವರು 'ಗಾಂಧಿ ಸ್ಮಾರಕ ನಿಧಿ'ಯ ಅಧ್ಯಕ್ಷರಾಗಿದ್ದರು. ಆಳುವವರ 'ಕಿವಿಹಿಂಡಿ' ಭ್ರಷ್ಟ ಆಡಳಿತವನ್ನು ತಿದ್ದುವಷ್ಟು ಎದೆಗಾರಿಕೆ ಇದ್ದ ಪ್ರಾಮಾಣಿಕ ರಾಜಕಾರಣಿ ಅವರು.

ಅವರ ಸಂಘದಲ್ಲಿ ಹಳೆಯ ಮೈಸೂರಿನ ಸ್ವಾತಂತ್ರ್ಯಯೋದರು ಸದಸ್ಯರೂ, ಪದಾಧಿಕಾರಿಗಳೂ ಇದ್ದರು. ಶಿವಮೊಗ್ಗ ಜಿಲ್ಲೆಯವರು ನಿಷ್ಠಾವಂತ ಗಾಂಧೀವಾದಿಗಳು ಅವರ ಬೆಂಬಲಕ್ಕಿದ್ದರು. ಒಬ್ಬಿಬ್ಬರು ಉತ್ತರ ಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಪ್ರತಿಷ್ಠಿತ ಸ್ವಾತಂತ್ರಯೋಧರು ಆ ಸಂಘದಲ್ಲಿದ್ದರು. ಶಿವಮೊಗ್ಗೆಯ ನಾಗಪ್ಪಶೆಟ್ಟರು, ತುಮಕೂರು ಜಿಲ್ಲೆಯ ಸಗರನಹಳ್ಳಿ ರೇವಣ್ಣನವರು, ಹನುಮಂತರಾಯರು, ದಕ್ಷಿಣ ಕನ್ನಡದ ನಾಗಪ್ಪ ಆಳ್ವರು, ಚಿಕ್ಕಬಳ್ಳಾಪುರದ ವೆಂಕಟರಮಣಪ್ಪನವರು, ಬೆಂಗಳೂರಿನ ಹೆಚ್.ಎಸ್.ದೊರೆಸ್ವಾಮಿ ಮುಂತಾದ ಮಹನೀಯರೂ ಆ ಸಂಘದ ಪ್ರಮುಖ ಸದಸ್ಯರು. ನಿವೃತ್ತ ಐಪಿಎಸ್., ಐಎಎಸ್., ಐಎಫ್‌ಎಸ್., ಚೀಫ್ ಇಂಜಿನಿಯರ್ಸ್, ಕಾರ್ಪೋರೇಷನ್ ಆಯುಕ್ತರು, ವೈದ್ಯರು,.... ಮುಂತಾದ ತಜ್ಞರೂ ಕೆಲವು ಸದಸ್ಯರಿದ್ದರು. (ಅವರ ಹೆಸರುಗಳು ಈಗ ನೆನಪಿಲ್ಲ) ಅವರು ತಿಂಗಳಿಗೆ ಒಮ್ಮೆ, ಅಗತ್ಯವಿದ್ದರೆ ಎರಡು ಮೂರು ಬಾರಿ ಗಾಂಧಿ ಭವನದಲ್ಲಿ ಸಭೆ ಸೇರಿ, ಸಾರ್ವಜನಿಕರಿಂದ ಬಂದ ದೂರುಗಳನ್ನು ಪರಿಶೀಲಿಸಿ ಭ್ರಷ್ಟಾಚಾರವನ್ನು ತಡೆಗಟ್ಟಲು ಪ್ರಯತ್ನಿಸಲಾಗುತ್ತಿತ್ತು. ಸಂಬಂಧಪಟ್ಟ ಮಂತ್ರಿಗಳಿಗೆ, ಮೇಲಾಧಿಕಾರಿಗಳಿಗೆ, ಇಲಾಖಾ ಮುಖ್ಯಸ್ಥರಿಗೆ ಆ ದೂರುಗಳನ್ನು ರವಾನಿಸಿ ತಕ್ಕ ಕ್ರಮ ಕೈಕೊಳ್ಳಲು ಒತ್ತಾಯಿಸಲಾಗುತ್ತಿತ್ತು. ಮಂಜಪ್ಪನವರು ಬರೆದ ಪತ್ರಗಳನ್ನು ಸಂಬಂಧಪಟ್ಟವರು ಗಮನಿಸಿ ತಕ್ಕ ಕ್ರಮ ಕೈಕೊಳ್ಳುತ್ತಿದ್ದರು. ಸದಸ್ಯರು ಸಂಬಂಧಪಟ್ಟ ಮಂತ್ರಿಗಳನ್ನು ಅಧಿಕಾರಿಗಳನ್ನು ಖುದ್ದು ಭೆಟ್ಟಿಯಾಗಿ ಅನ್ಯಾಯಕ್ಕೆ ಒಳಗಾಗಿದ್ದ ವ್ಯಕ್ತಿಗಳಿಗೆ ಪರಿಹಾರವನ್ನು ಒದಗಿಸುವಲ್ಲಿ ಸಹಾಯಮಾಡಲಾಗುತ್ತಿತ್ತು. ಈಗ ಲೋಕಾಯುಕ್ತರು ಮಾಡುತ್ತಿರುವ ಕೆಲಸದ ಮಾದರಿಯಲ್ಲಿ ಆ ಸಂಘದ ಕೆಲಸ. ಈ ಸಂಘದ ಉಪಾಧ್ಯಕ್ಷನೊ ಮತ್ತಾವುದೊ ಪದಾಧಿಕಾರಿಯನ್ನಾಗಿ ನನ್ನನ್ನು ನೇಮಿಸಿದ್ದರು. ಆ ಕಾಲಾವಧಿಯಲ್ಲಿ ಅವರ ಗಾಢ ಪರಿಚಯವಾಯಿತು. ಜೊತೆಗೆ ನ್ಯಾಯಾಲಯದಲ್ಲಿ ಬಹುಶಃ ಪ್ರತಿದಿನವೂ ಭೇಟಿಯಾಗುತ್ತಿದ್ದೆವು. ಒಂದು ಸಾರ್ವಜನಿಕ, ಸರ್ಕಾರೇತರ ಸಂಸ್ಥೆ (ಎನ್.ಜಿ.ಒ) ಎಷ್ಟು ಕೆಲಸ ಮಾಡಲು ಸಾಧ್ಯವೊ ಅಷ್ಟನ್ನು ಆ ಜಾಗೃತ ಭಾರತ ಸಂಘ ಸುಮಾರು ಹತ್ತು ವರ್ಷ (೧೯೮೧–೯೦ ರ ಅವಧಿಯಲ್ಲಿ) ಜೋರಾಗಿಯೆ ಕೆಲಸಮಾಡಿತು. ಆಗ ಇದ್ದ ಸರ್ಕಾರಗಳು ಮಂಜಪ್ಪನವರ ಮಾತುಗಳಿಗೆ ಕಿವಿಗೊಟ್ಟು ಅಲ್ಪಸ್ವಲ್ಪ ಪರಿಹಾರವನ್ನೂ ಒದಗಿಸುತ್ತಿದ್ದವು. ಆಗ ನಾನು ಜನತಾ ಪಕ್ಷದ ಕಾನೂನು ವಿಭಾಗದ ಸಂಚಾಲಕನೂ ಸಲಹೆಗಾರನೂ ಆಗಿದ್ದುದರಿಂದ ಶ್ರೀ ಹೆಗಡೆ ಸರ್ಕಾರದ ಕಾಲದಲ್ಲಿ ಜಾಗೃತ ಭಾರತದ ಸಲಹೆಗಳಿಗೆ ಸರ್ಕಾರ ಸ್ಪಂದಿಸುತ್ತಿತ್ತು.

ಶ್ರೀ ಕಡಿದಾಳರ ಬಗ್ಗೆ ಶ್ರೀ ಹೆಗಡೆ ಅವರಿಗೆ ಅಪಾರ ಗೌರವವಿತ್ತು. ಜನವರಿ ೧೯೮೩ ರಲ್ಲಿ ಮುಖ್ಯಮಂತ್ರಿ ಆದ ಹೆಗಡೆಯವರು ೧೯೮೪ ರಲ್ಲಿ ವಿಧಾನ ಸಭೆಯನ್ನು ವಿಸರ್ಜಿಸಿ ೧೯೮೫ ರಲ್ಲಿ ಮಧ್ಯಂತರ ಚುನಾವಣೆ ನಡೆಸಬೇಕಾಯಿತು. ಆಗ ಉಸ್ತುವಾರಿ ಮುಖ್ಯಮಂತ್ರಿ ಆಗಿದ್ದರು. ಆಗ ಚುನಾವಣೆಗಳು ನಿಷ್ಪಕ್ಷಪಾತವಾಗಿ, ನ್ಯಾಯಸಮ್ಮತ ಹಾಗೂ ಮುಕ್ತವಾಗಿ ನಡೆಯುವ ಬಗ್ಗೆ ವಿರೋಧ ಪಕ್ಷಗಳು ಸಂದೇಹ ವ್ಯಕ್ತಪಡಿಸಿದವು. ಚುನಾವಣೆಗಳನ್ನು ನ್ಯಾಯಸಮ್ಮತವಾಗಿ ನಡೆಸುವ ಉದ್ದೇಶದಿಂದ ಶ್ರೀ ಹೆಗಡೆ ಅವರು ಶ್ರೀ ಕಡಿದಾಳರನ್ನು ವೀಕ್ಷಕರನ್ನಾಗಿ ನೇಮಕ ಮಾಡಿದರು. ಎಲ್ಲಿಯಾದರೂ, ಯಾರಿಂದಲಾದರೂ ಚುನಾವಣಾ ಅಪರಾಧ, ಅಕ್ರಮ ನಡೆದಿದೆ ಎಂಬ ದೂರು, ಆಕ್ಷೇಪಣೆ ಬಂದುದಾದರೆ ಅದನ್ನು ಶ್ರೀ ಮಂಜಪ್ಪನವರಿಗೆ ತಿಳಿಸಬೇಕು. ಅವರು ಆ ದೂರು, ಆಕ್ಷೇಪಣೆಯನ್ನು ಪರಿಶೀಲಿಸಿ, ಅವರು ಸೂಚಿಸುವ ಪರಿಹಾರ ಕ್ರಮವನ್ನು ಕೈಕೊಳ್ಳುವ ಸರ್ಕಾರಿ ಆಜ್ಞೆಯನ್ನು ಹೊರಡಿಸಬೇಕು. ಕಡಿದಾಳರಿಗೆ ವಿಧಾನ ಸೌಧದಲ್ಲಿಯೇ ಒಂದು ಕೊಠಡಿಯನ್ನು, ತಕ್ಕ ಸಿಬ್ಬಂದಿಯನ್ನು ನಿಗದಿಪಡಿಸಿದರು. ಅವರು ಈಗ ಭಾರತದ ಮುಖ್ಯ ಚುನಾವಣಾ ಆಯುಕ್ತರು ನೇಮಿಸುವ ಚುನಾವಣಾ ವೀಕ್ಷಕರಂಥ ಅಧಿಕಾರಿಗಳಾಗಿದ್ದರು. ವೀಕ್ಷಕರನ್ನು ರಾಜ್ಯ ಸರ್ಕಾರವೇ ನೇಮಿಸುವ ಯೋಜನೆಯೆ ಆಗ ಹೊಸತು. ಹೆಗಡೆಯವರು ಆ ಜವಾಬ್ದಾರಿ ಸ್ಥಾನಕ್ಕೆ ಶ್ರೀ ಕಡಿದಾಳರನ್ನು ನಿಯಮಿಸಿದ್ದು, ಅವರ ಬಗ್ಗೆ ಇದ್ದ ಅಪಾರ ಗೌರವದ ಸಂಕೇತ. ಕಡಿದಾಳರು ಅವರಿಗೆ ವಹಿಸಿದ್ದ ಈ ಅತ್ಯಂತ ಗುರುತರ ಜವಾಬ್ದಾರಿಯನ್ನು ನೆರವೇರಿಸಿದರು. ಯಾವ ಸಂಭಾವನೆಯೂ, ದ್ರವ್ಯ ಪ್ರತಿಫಲವೂ ಇಲ್ಲದೆ. ಇದು ಕಡಿದಾಳರ ದೊಡ್ಡಸ್ತಿಕೆ.

ಈ ಸಂದರ್ಭದಲ್ಲಿ ಮಂಜಪ್ಪನವರ ಸ್ವಭಾವವನ್ನು ಹತ್ತಿರದಿಂದ ಗಮನಿಸಿದೆ. ಸಾಧಾರಣವಾಗಿ ಅವರಿಗೆ ಸಿಟ್ಟು ಬರುತ್ತಿರಲಿಲ್ಲ. ಅವರು ಬಹುಮಟ್ಟಿಗೆ ಹಸನ್ಮುಖಿ. ಆದರೆ ಲಂಚ, ಭ್ರಷ್ಟಾಚಾರದ ಸುದ್ದಿ ಗಮನಕ್ಕೆ ಬಂದರೆ, ಮೊದಲೆ ಕೆಂಪಗಿದ್ದ ಮುಖ ಇನ್ನೂ ಕೆಂಪಾಗುತ್ತಿತ್ತು. ಕಂಡಾಬಟ್ಟೆ ಸಿಟ್ಟಾಗುತ್ತಿದ್ದರು. ಬೈಯ್ದು ಬಿಡುತ್ತಿದ್ದರು. ಖಾಸಗಿ ಮಾತುಕತೆಯಲ್ಲಿ ಆಗಲಿ, ಬಹಿರಂಗ ಸಭೆಯಲ್ಲಿ ಆಗಲಿ ರೇಗುತ್ತಿದ್ದರು. ಲಂಚ ತಿನ್ನುವುದನ್ನು, ತಿನ್ನುವವರನ್ನು 'ಹೇ... ತಿನ್ನುವವರು ಮುಂತಾದ ಕೆಟ್ಟ ಶಬ್ದದಿಂದ ಖಂಡಿಸುತ್ತಿದ್ದರು. ಭ್ರಷ್ಟ ನ್ಯಾಯಾಧೀಶರ ಬಗೆಗೂ ಅವರಿಗೆ ಆಕ್ರೋಶ. ಬಹಿರಂಗವಾಗಿ ನ್ಯಾಯಾಲಯದಲ್ಲಿ ಅದನ್ನು ವ್ಯಕ್ತಪಡಿಸಲಾಗದ ಸಂದರ್ಭದಲ್ಲಿ ಆ ನ್ಯಾಯಮೂರ್ತಿಗಳ ಮುಂದೆ ಹಾಜರಾಗುತ್ತಿರಲಿಲ್ಲ. ಒಂದು ಭೂ ಸುಧಾರಣಾ ಕಾಯಿದೆಯ ಕೆಳಗೆ

ಅವರು ದಾಖಲು ಮಾಡಿದ್ದ ರಿಟ್ ಅರ್ಜಿಯಲ್ಲಿ ಪಕ್ಷಪಾತ ತೀರ್ಪು ಕೊಟ್ಟಿದ್ದರೆಂದು ಅದರ ವಿರುದ್ಧ ಅಪೀಲು ದಾಖಲು ಮಾಡಿದ್ದರು. ಆ ಅಪೀಲನ್ನು ವಾದಿಸಲು ಕಕ್ಷಿಗಾರನನ್ನು ದಸ್ತಾವೇಜು ಸಹಿತ ನನಗೆ ಕಳಿಸಿದ್ದರು. ಅವರು ದಾಖಲು ಮಾಡಿದ್ದ ಅಪೀಲಿನಲ್ಲಿ ನಾನೇಕೆ ವಾದಿಸಬೇಕೆಂದು ಆ ಕಕ್ಷಿಗಾರನನ್ನು ಕುರಿತು.

'ಅವರ ಕೇಸಿನಲ್ಲಿ ನಾನು ಹಾಜರಾಗಲಾರೆ' ಎಂದೆ.

'ಅವರೆ ನಿಮ್ಮತ್ರ ಕಳಿಸಿದ್ದು ಸ್ವಾಮಿ'

ಎಲ್ಲಿಯಾದರೂ ಉಂಟೆ? ಅವರಿಂದ ನೀಗದ ಕೆಲಸ ನನ್ನಿಂದ ಆದೀತೆ?

'ಇಲ್ಲ ಅವರೇ ಕಳಿಸಿದರು. ನೀವು ಕೇಸು ನಡೆಸಬೇಕಂತೆ

ನನಗೆ ನಂಬಿಕೆ ಆಗಲಿಲ್ಲ. ಕಡಿದಾಳರಿಗೆ ಫೋನ್ ಮಾಡಿದೆ.

'ಒಬ್ಬಾತ ನಿಮ್ಮ ಕಕ್ಷಿದಾರ ಕಟ್ಟು ತಂದಿದ್ದಾನೆ. ಹೀಗೆ ಹೇಳುತ್ತಾನೆ. ಹೌದೆ?' ಎಂದು ಕೇಳಿದೆ.

'ಹೌದು'

'ಯಾಕೆ? ನಿಮಗೆ ಆತನಿಂದ ಬೇಸರವೆ? ದಗಲುಬಾಜಿ ಏನಾದರೂ....'

'ಅಲ್ಲ ಮಾರಾಯ್ರೆ ಅವನು ಬಹಳ ಪ್ರಾಮಾಣಿಕ. ದೊಡ್ಡ ಮನುಷ್ಯ. ಆದರೆ ಆ ನ್ಯಾಯಮೂರ್ತಿ ಅಪ್ರಾಮಾಣಿಕ ತೀರ್ಪು ಕೊಟ್ಟಿದ್ದಾನೆ. ಅದನ್ನು ನೆನೆಸಿಕೊಂಡರೇ ನನಗೆ ಸಿಟ್ಟು ತಡೆದುಕೊಳ್ಳಲಾಗುವುದಿಲ್ಲ. ದ್ವಿ ಸದಸ್ಯ ಪೀಠದ ಮುಂದೆ ಆ ತೀರ್ಪನ್ನು ವಿಮರ್ಶಿಸುವಾಗ ನನಗೆ ಕೋಪ ನೆತ್ತಿಗೇರುತ್ತದೆ. ಕೋಪದ ಭರದಲ್ಲಿ ಏನಾದರೂ ಉಚಾಯಿಸಿ ಮಾತನಾಡಿ ಬಿಟ್ಟೇನೆಂಬ ಹೆದರಿಕೆ! ಅದಕ್ಕೆ ನಿಮ್ಮಲ್ಲಿಗೆ ಕಳಿಸಿಕೊಟ್ಟೆ. ನೀವೇ ಆರ್ಗ್ಯೂ ಮಾಡಿ'

'ನಿಮ್ಮ ಫೀಜೆಲ್ಲ ಸಂದಾಯವಾಗಿದೆಯೇ?

'ಆಯ್ಯೋ ಅದರ ವಿಚಾರ ಬಿಡಿ. ಅದೆಲ್ಲ ಏನು ಮಾತು. ನಿಮಗೂ ಕೇಳಿದಷ್ಟು ಕೊಡುತ್ತಾನೆ. ನೀವು ಸುಮ್ಮನೆ ಮಾಡಿ!'

ಭ್ರಷ್ಟಾಚಾರದ ಬಗ್ಗೆ ಅವರಿಗಿದ್ದ ಆಕ್ರೋಶ ಎಂಬುದಕ್ಕೆ ಈ ನಿದರ್ಶನ ದಾಖಲಿಸಿದ್ದೇನೆ.

ಮಂಜಪ್ಪನವರ ಹಿರಿಮೆಯನ್ನು ಸ್ಮರಿಸುವವರು, ಮಾತನಾಡುವವರು ಅವರ ಸಕ್ರಿಯ, ಚುನಾವಣಾ ರಾಜಕೀಯವನ್ನು ಬಿಟ್ಟ ಮೇಲೆ ಮಾಡಿದ ಸಾರ್ವಜನಿಕ ಸೇವಾ ಕಾರ್ಯವನ್ನೆ ಕುರಿತು ಪ್ರಶಂಸಿಸುತ್ತಾರೆ. ಸಾಧಾರಣವಾಗಿ ದೇಶ ಸೇವೆ, ಸಮಾಜ ಸೇವೆ ಮಾಡಬೇಕೆಂದು ಹಾತೊರೆಯುವವರು ರಾಜಕೀಯದಲ್ಲಿ ಪ್ರವೇಶಿಸಲು ಹಾತೊರೆಯುತ್ತಾರೆ. ಅಂಥವರು ಶಾಸಕರಾದ ಮೇಲೆ ಸಮಾಜ ಸೇವೆ ಮಾಯವಾಗಿ ಸಮಾಜ ಸಂಪತ್ತನ್ನು ಸೇವನೆ ಮಾಡುವ ಕಂಟಕರಾಗುತ್ತಾರೆ ಎಂಬುದನ್ನು ಪ್ರತ್ಯಕ್ಷ ಕಾಣುತ್ತಿದ್ದೇವೆ. ಅಂಥವರು ಎಂಥ ಅಧಿಕಾರ ಪಡೆದರೂ ಅವರು ಅಧಿಕಾರ ಕಳೆದುಕೊಂಡ ಕೂಡಲೆ ಅವರನ್ನು ತುಚ್ಛೀಕರಿಸುತ್ತಾರೆ. ಆದರೆ ಮಂಜಪ್ಪನವರ ವಿಚಾರ ಹಾಗಲ್ಲ. ರಾಜಕೀಯದಲ್ಲಿದ್ದಾಗ ಅವರು ಮಾಡಿದ ಕೆಲಸವನ್ನು ತಲೆ ತಲಾಂತರ ನೆನೆಸುತ್ತಾರೆ. ಅವರು ಕಂದಾಯ ಮಂತ್ರಿಗಳಾಗಿದ್ದಾಗ ಹಳೆಯ ಮೈಸೂರು ಸೀಮೆಯಲ್ಲಿದ್ದ 'ಇನಾಂ' ಗಳನ್ನು ರದ್ದುಮಾಡಿದ್ದು ಭೂ ಸುಧಾರಣಾ ಕಾಯಿದೆಯ ಮೊಟ್ಟ ಮೊದಲಿನ ದಿಟ್ಟ ಹೆಜ್ಜೆ. ಅದರಲ್ಲೂ ಶೃಂಗೇರಿ ಪೀಠದ ಇನಾಂ ರದ್ಧತಿಯ ಶಾಸನ ಅಗ್ರಗಣ್ಯ ಕಾರ್ಯ. ಆ ಮಸೂದೆಯನ್ನು ತಂದದ್ದು ಕೆಂಗಲ್ಲರ ಸರ್ಕಾರ. ಆ ಮಸೂದೆಯನ್ನು ರೂಪಿಸಿ, ಮಠದ ಶಾಪದ ಹೆದರಿಕೆಯನ್ನು ಲೆಕ್ಕಿಸದೆ ಶಾಸನವನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿದ ಕೀರ್ತಿ ಕಡಿದಾಳರದು.

ಹಾಗೆಯೇ ವಂಶಪಾರಂಪರ್ಯದ ಪಟೇಲ ಶಾನುಭೋಗರ ಹುದ್ದೆಯನ್ನು ರದ್ದು ಮಾಡಿದ್ದು ಕಡಿದಾಳರು ಮಾಡಿದ ಇನ್ನೊಂದು ಕ್ರಾಂತಿಕಾರಿ ಹೆಜ್ಜೆ. ಆ ಕಾಲದಲ್ಲಿ ಊರಿನ ಜನ ಪಟೇಲ್ ಶಾನುಭೋಗರ ಉಡಹಿಡಿತದಲ್ಲಿ ಸಿಕ್ಕು ಹೇಗೆ ಅವರ ದಾಸರಾಗಿದ್ದರೆಂಬುದು ಈಗಿನವರೆಗೆ ತಿಳಿದಿಲ್ಲ. ಊಳಿಗಮಾನ್ಯ ಪದ್ಧತಿಯ ತಾಯಿಬೇರು ಈ ವಂಶಪಾರಂಪರ್ಯ ಗ್ರಾಮಾಧಿಕಾರಿಗಳ ವ್ಯವಸ್ಥೆ. ಅವರ ಭೂಮಿಯನ್ನು ಊರಜನ ಬಿಟ್ಟಿಯಾಗಿ ಸಾಗುಮಾಡುವುದರಿಂದ ಹಿಡಿದು, ಫಸಲು ಬೆಳೆದು ಗ್ರಾಮಾಧಿಕಾರಿಗಳ ಕಣಜ ತುಂಬುವವರೆಗೆ ಬಿಟ್ಟಿಯಾಗಿ ದುಡಿಯಬೇಕಾಗಿತ್ತು. ಈ ದುಷ್ಟ ಪದ್ಧತಿಯ ಬೇರಿಗೇ ಕೊಡಲಿ ಹಾಕಿದ ಧೀರರು ಮಂಜಪ್ಪನವರು. ಆ ಬೇರು ಸಡಿಲವಾದದ್ದು, ಕೊಳೆಯಲು ಪ್ರಾರಂಭವಾದದ್ದು ಕಡಿದಾಳರ ಪ್ರಥಮ ಪ್ರಯತ್ನದಿಂದ. ಈ ಸುಧಾರಣೆ ಮುಂದೆ ದೇವರಾಜ ಅರಸರ ಕಾಲದಲ್ಲಿ ಕರ್ನಾಟಕ ಭೂಸುಧಾರಣಾ ಕ್ರಾಂತಿಕಾರಕ ಶಾಸನಕ್ಕೆ ದಾರಿಯಾಯಿತು.

ಕಡಿದಾಳರು ರಾಜಕೀಯದಲ್ಲಿದ್ದು, ಅದರಲ್ಲೂ ಲೋಕೋಪಯೋಗಿ (ಪಬ್ಲಿಕ್ ವರ್ಕ್ಸ್) ಮಂತ್ರಿಯಾಗಿದ್ದು, ಕೊನೆಗೆ ಮುಖ್ಯ ಮಂತ್ರಿಯೂ ಆಗಿದ್ದು ಪರಿಶುದ್ಧ ಹಸ್ತರಾಗಿದ್ದರೆಂಬುದೊಂದೇ ಅವರು ಅಜರಾಮರ ಕೀರ್ತಿಗೆ ಅರ್ಹರು. ಒಂದು ವೇಳೆ ಆ ಕಾಲದಲ್ಲಿ ಅಂಥವರು ಕೆಲವರಿದ್ದರು. ಉದಾ: ಲಾಲ್ ಬಹದ್ದೂರ್ ಶಾಸ್ತ್ರಿ, ಗುಲ್ಜಾರಿಲಾಲ್‌ನಂದ, ಮೊನ್ನೆ ಮೊನ್ನೆಯ ತನಕ ಜ್ಯೋತಿ ಬಸು, ಈಗಲೂ ಬುದ್ಧ ದೇವ ಭಟ್ಟಾಚಾರ್ಯ ಅಂಥವರು ಇದ್ದಾರೆ ಎಂದಿಟ್ಟುಕೊಂಡರೂ ಕಡಿದಾಳರಂತೆ ಕೊನೆತನಕ ತಮ್ಮ ಅನ್ನವನ್ನು ತಾವೇ ದುಡಿದುಂಡರು ಎಂಬ ಅವರ ಕಾಯಕ ಜೀವನ ಆದರ್ಶಪ್ರಾಯ. ಇವೆರಡು ಗುಣಗಳೆ ಸಾಕು ಅವರನ್ನು ಆದರ್ಶ ಜೀವಿಯೆಂದು ಗೌರವಿಸಲು ಇವುಗಳ ಜೊತೆಗೆ ಅವರ ಸಾಮಾಜಿಕ ನಿಷ್ಠೆ ಅವರ ಜೀವನವನ್ನು ಇನ್ನೂ ಎತ್ತರದ ಸ್ಥಾನಕ್ಕೇರಿಸುತ್ತದೆ. ಈ ಮಾತಿನ ಅರ್ಥ ಮತ್ತು ಮಹತ್ವವನ್ನು ಅರಿಯಬೇಕಾದರೆ ಆ ಪ್ರಶಸ್ತಿ, ಈ ಪ್ರಶಸ್ತಿ, ಊ ಪ್ರಶಸ್ತಿ ವಿಜೇತರ ಜೀವನವನ್ನು ನೋಡಬಹುದು. ರಾಜ್ಯದ ಮುಖ್ಯ ಕಾರ್ಯದರ್ಶಿಯೊ, ಸಾರ್ವಜನಿಕ ಸೇವಾ ಆಯೋಗದ ಅಧ್ಯಕ್ಷರೊ, ಉಚ್ಚ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯ ಮೂರ್ತಿಗಳಾಗಿಯೊ ಸೇವೆ ಸಲ್ಲಿಸುವ ಅಥವಾ ನಿವೃತ್ತರಾದವರಿಗೆ ಪ್ರಶಸ್ತಿಗಳ ಸುರಿಮಳೆ ಸುರಿಸುವಾಗ ಅವರ ಗುಣಗಾನ ಮಾಡುವುದನ್ನು ಕೇಳಿದರೆ, ಅವರು ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು, ಸಮರ್ಥ ಆಡಳಿತಾಧಿಕಾರಿಗಳಾಗಿದ್ದರು ಉನ್ನತ ಸ್ಥಾನಕ್ಕೇರಿದರು. ಇತ್ಯಾದಿ ಪ್ರಶಂಸೆ ಕೇಳಿಬರುತ್ತವೆ. ಆ ಪ್ರಶಸ್ತಿ ವಚನ ಹೆಗ್ಗಳಿಕೆಯನ್ನು ಕೇಳಿದಾಗ 'So What?' ಅದರಿಂದೇನು? ಎಂಬ ಪ್ರಶ್ನೆ ಉಳಿಯುತ್ತದೆ. ಅವರಿಂದ ಈ ಸಮಾಜಕ್ಕೆ, ಈ ನಾಡಿಗೆ, ಈ ನಾಡಿನ ಭಾಷೆಗೆ, ಬಹುಜನರ ಬಾಳಿನ ಒಳಿತಿಗೆ ಏನು ಮಾಡಿದರು ಎಂದು ಕೇಳಿದರೆ ತಲೆ ಕೆರೆದುಕೊಳ್ಳಬೇಕಾಗುತ್ತದೆ. ಕಡಿದಾಳರು ಇಂದಿಗೂ ಪ್ರಸ್ತುತರಾಗುತ್ತಿದ್ದರೆ ದೇಶಕ್ಕಾಗಿ, ನಾಡಿಗಾಗಿ, ಸಮಾಜಕ್ಕಾಗಿ ಏನು ಮಾಡಿದರು? ಇದಕ್ಕೆ ಉತ್ತರ ದೊರಕಿದರೆ ಅವರನ್ನು ಸ್ಮರಿಸಿದ್ದು ಸಾರ್ಥಕ.

ಈ ವಿಚಾರಕ್ಕೆ ಬಂದಾಗ ಅವರ ಸಾಹಿತ್ಯ ಕೃತಿಗಳು ನೆನಪಾಗುತ್ತವೆ. ಅವರು ಬರೆದ ಅನೇಕ ಕೃತಿಗಳು 'ಪಂಜರವಳ್ಳಿಯ ಪಂಜು' ಕಾದಂಬರಿಯಿಂದ 'ನನಸಾಗದ ಕನಸು' ಆತ್ಮ ಚರಿತ್ರೆಯವರೆಗೆ ಸಮಾಜವನ್ನು ತಿದ್ದುವ, ದಾರಿ ತೋರುವ ಕೃತಿ ರಚನೆ ಮಾಡಿದ್ದಾರೆ. ಆ ಕೃತಿಗಳು ಸಮಾಜದ ನೈಜ ಪರಿಸ್ಥಿತಿಯನ್ನು ಚಿತ್ರಿಸಿ, ಉತ್ತಮ ಸಮಾಜ ರಚನೆಗೆ, ಮೇಲು ಕೀಳುಗಳಿಲ್ಲದ, ಬಡವ ಬಲ್ಲಿದರೆಂಬ ತಾರತಮ್ಯ ನೀಗುವ ಸುಂದರ ಸಮಾಜ ನಿರ್ಮಾಣಕ್ಕೆ ಅವರದೇ ಆದ ರೀತಿಯಲ್ಲಿ ಪ್ರಯತ್ನಿಸಿದ್ದಾರೆ.

ಅವರ ಸಾಹಿತ್ಯ ಕೇಂದ್ರ ಅಥವಾ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆಯದಿರಬಹುದು. ಆದರೆ ಅವರೊಬ್ಬ ಪ್ರತಿಭಾವಂತ ಬರಹಗಾರರೆಂಬುದನ್ನು ಕನ್ನಡ ಸಾಹಿತ್ಯ ಚರಿತ್ರೆ ದಾಖಲಿಸುತ್ತದೆ.

ಅವರ ಈ ಸಮಾಜೋದ್ಧಾರ ನಿಷ್ಠೆಯ ಇನ್ನೊಂದು ಮುಖವನ್ನು ನಾನು ಕಂಡೆ. ಅವರು ಬೆಂಗಳೂರಿನ ಪ್ರತಿಷ್ಠಿತ ವಿದ್ಯಾಸಂಸ್ಥೆಗಳ ಧರ್ಮದರ್ಶಿಗಳೂ ಆಗಿದ್ದರು. ಆ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಲು ಉನ್ನತ ಅರ್ಹತೆಯಿಲ್ಲದ ಗ್ರಾಮೀಣ ಬಡ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಿಕೊಟ್ಟರು. ಅನೇಕ ಬಡವರು ಉನ್ನತ ಶಿಕ್ಷಣ ಪಡೆದು ಧನ್ಯರಾದರು. ಅಂಥವರು ಈ ನಾಡು ಈ ದೇಶದ ಬೌದ್ಧಿಕ ಸಂಪತ್ತಾದರು, ಕಡಿದಾಳರ ಸಹಾಯವಿಲ್ಲದೆ ಹೋಗಿದ್ದರೆ ಅವರು ಉತ್ತಮ ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಿದ್ದರು.

ಮತ್ತೊಂದು ರೀತಿಯಲ್ಲಿ ಕಡಿದಾಳರು ಸಮಾಜೋನ್ನತಿಗೆ ಸಹಾಯ ಮಾಡಿದರು. ವಿದ್ಯಾ ಅರ್ಹತೆ ಪಡೆದಿದ್ದರೂ ಉದ್ಯೋಗಾವಕಾಶವಿಲ್ಲದೆ ನಿರುದ್ಯೋಗಿಗಳಾಗಿದ್ದವರಿಗೆ ಅವರು ನೆರವಾದದ್ದನ್ನು ನಾನು ಖುದ್ದು ಕಂಡಿದ್ದೇನೆ. ಸಾರ್ವಜನಿಕರ ಸೇವಾ ಆಯೋಗಕ್ಕೆ ಅರ್ಜಿ ಹಾಕಿ ಕೊಂಡಿದ್ದ ಅಭ್ಯರ್ಥಿಗಳು ಅವರನ್ನು ಕಂಡು ಈ ಭ್ರಷ್ಟ ವ್ಯವಸ್ಥೆಯಲ್ಲಿ ಉದ್ಯೋಗ ಸಿಗುವ ಭರವಸೆ ಇಲ್ಲದ ಬಡವರು ಸಹಾಯಕ್ಕಾಗಿ ಯಾಚಿಸುತ್ತಿದ್ದರು. ಕಡಿದಾಳರ ಮಾತಿಗೆ ಬೆಲೆ ಕೊಡುತ್ತಿದ್ದ ಆಯೋಗದ ಸದಸ್ಯರು ಅಂಥವರಿಗೆ ಸಹಾಯ ಮಾಡುತ್ತಿದ್ದರು. ಅವರು ಸಹಾಯ ಮಾಡುವ ಮುಂಚೆ ಆ ಅಭ್ಯರ್ಥಿಗೆ ಒಂದು ಷರತ್ತು ಹಾಕುತ್ತಿದ್ದರು. 'ನೀನು ನೌಕರಿ ಸಿಕ್ಕು ಕೆಲಸಕ್ಕೆ ಸೇರಿದ ಮೇಲೆ ಲಂಚ ತಿನ್ನುವುದಿಲ್ಲವೆಂದು ಮಾತು ಕೊಡು' ಎನ್ನುತ್ತಿದ್ದರು. ನೌಕರಿ ಸಿಕ್ಕಮೇಲೆ ತಮ್ಮ ಕೃತಜ್ಞತೆ ಅರ್ಪಿಸಲು ಬಂದು ನಮಸ್ಕರಿಸಿದಾಗ 'ನೀನು ಲಂಚ ಮುಟ್ಟದಿರುವುದೆ ನನಗೆ ಕೊಡುವ ಗೌರವ. ಹಾಗೆ ಬಾಳು' ಎಂದು ಹೇಳುತ್ತಿದ್ದುದನ್ನು ನಾನು ಕೇಳಿದ್ದೆ.

ಒಮ್ಮೆ ಅವರ ಕೃಪೆಯಿಂದ ಉನ್ನತ ಹುದ್ದೆ ಪಡೆದಿದ್ದ ಒಬ್ಬಾತ ಬಂದಿದ್ದ. ಆತನಿಗೂ ಅದೇ ಉಪದೇಶದ 'ಆಶೀರ್ವಾದ' ಮಾಡಿದರು. ಆತ ನಿರ್ಗಮಿಸಿದ ಮೇಲೆ ನಾನು 'ಮಂಜಪ್ಪನವರೆ, ಅವನು ಕೊಟ್ಟ ಮಾತಿನಂತೆ ನಡೆದುಕೊಳ್ಳುತ್ತಾನೆಂಬ ಗ್ಯಾರೆಂಟಿ ಏನು? ಅವನ ಮೇಲೆ ಹೇಗೆ ನಿಗಾ ಇಟ್ಟಿರುತ್ತೀರಿ? ಎಂದೆ. ಮಂಜಪ್ಪನವರು ನನ್ನ ಮಾತಿನ ಹಿಂದಿದ್ದ ವ್ಯಂಗ್ಯ ಧ್ವನಿಯನ್ನು ಪಕ್ಕನೆ ಗ್ರಹಿಸಿ ನಸು ನಕ್ಕು: 'ಹೌದು ಕಣ್ರೀ. ನಾನು ನೌಕರಿ ಕೊಡಿಸಿದ ಎಷ್ಟೋ ಜನ ಶುದ್ಧ ಭ್ರಷ್ಟರಾಗಿ ಬಿಟ್ಟರು! ನಾನು

ತಪ್ಪು ಮಾಡಿದೆ ಅಂತ ಆಗ ವ್ಯಥೆ ಪಟ್ಟಿದ್ದೇನೆ. ಏನು ಮಾಡೋದು? ಬಂದು ದೈನಾಸ ಪಡುತ್ತಾರೆ. ನೋಡಲಾರದೆ ಏನೊ ಒಂದು ಮಾತು ಹೇಳ್ತೇನೆ. ಬೇಸ್ತು ಬೀಳ್ತೇನೆ. ತಪ್ಪು ಮಾಡಿದೆನೇನೊ ಎಂದು ವ್ಯಥೆ ಪಡ್ತೇನೆ' ಎಂದರು. ನಾನು ತುಂಟ ನಗೆ ನಕ್ಕು ಹೇಳಿದೆ; 'ಮತ್ತೆ ಅಂಥವರೆ ಬರ್ತಾರೆ; ಮತ್ತೆ ಉಪಕಾರ ಮಾಡ್ತೀರಿ.. ಹೀಂಗೆ ನಡಿತೈತೆ ಕೃಪಾಶೀರ್ವಾದ' ಎಂದೆ. ಅವರೂ ಈಗ ದೊಡ್ಡದಾಗಿ ನಕ್ಕರು. ನಾನು ಮನದಲ್ಲಿಯೆ ಅಂದುಕೊಂಡೆ; ಇವರು ಕಪಟವರಿಯದ ಕೃಪಾಸಿಂಧು.

ಅವರಿಗೆ ನನ್ನ ಮೇಲೆ ಅಪಾರ ಪ್ರೀತಿ. ಯಾಕೆಂಬುದರ ಕಾರಣ ಖಚಿತವಾಗಿ ಹೇಳಲಾರೆ. ಅವರ ಆ ಪ್ರೀತಿ ವ್ಯಕ್ತವಾದ ಒಂದು ಘಟನೆಯನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ೧೯೮೨ ಕ್ಕೆ ನನಗೆ ೬೦ ವರ್ಷ ತುಂಬಿತ್ತು. ಒಂದು ದಿನ ನನ್ನ ಅಭಿಮಾನಿ ಯುವಕ ವಕೀಲ ಮಿತ್ರರು ನನ್ನ ಷಷ್ಠ್ಯಬ್ದಿ ಸಮಾರಂಭವನ್ನು ಏರ್ಪಡಿಸುವ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ನಾನದಕ್ಕೆ ಸಮ್ಮತಿ ಕೊಡಬೇಕೆಂದು ಕೇಳಿದರು, ಅದಕ್ಕೆ ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದ ನನ್ನಂಥವರಿಗೆ ಹುಟ್ಟಿದ ದಿನವೆ ಗೊತ್ತಿರುವುದಿಲ್ಲ.ನನ್ನ ಐವತ್ತು –ಐವತ್ತೈದು ವಯಸ್ಸಿನವರಿಗೆ ಹುಟ್ಟು ಹಬ್ಬವನ್ನೇ ಆಚರಿಸುತ್ತಿದ್ದಿಲ್ಲ. ನನ್ನ ಮಕ್ಕಳು ಇತ್ತಿತ್ತಲಾಗಿ ಮನೆಯಲ್ಲಿ ಆ ದಿನ ನೆನಪು ಮಾಡಿ ಶುಭ ಕೋರುತ್ತಾರೆ. ಈಗೇಕೆ ಸಮಾರಂಭ? ಬೇಡ ಎಂದೆ. ಆದರೆ ನನ್ನ ಅಭಿಮಾನಿಗಳು ಹಠ ಹಿಡಿದು ಒಪ್ಪಿಸಿದರು. 'ಕಡಿದಾಳ್ ಮಂಜಪ್ಪನವರನ್ನು ಸಮಾರಂಭ ಸಮಿತಿ ಅಧ್ಯಕ್ಷರಾಗಲು ಕೇಳುತ್ತೇವೆ' ಎಂದು ಹೇಳಿದರು. ನಾನು ಕೂಡಲೆ ಹೇಳಿದೆ, 'ಕೇಳಿ. ಅವರು ಒಪ್ಪುವುದಿಲ್ಲ' ಎಂದು. 'ನೋಡುತ್ತೇವೆ ಅದು ಹೇಗೆ ಒಪ್ಪುಕೊಳ್ಳೊದಿಲ್ಲ' ಎಂದು ಹೊರಟು ಹೋದರು. ಇದಾದ ಸ್ವಲ್ಪ ದಿನಗಳ ಮೇಲೆ ನನ್ನನ್ನು ಕಂಡು, ಮಂಜಪ್ಪನವರು ಮೊದಲು 'ಸಾಧ್ಯವಿಲ್ಲ. ನಾನು ಇಂಥಾದ್ದನ್ನೆಲ್ಲ ಒಪ್ಪುವುದಿಲ್ಲ. ಅಂತ ತಲೆಕೊಡಹಿ ಬಿಟ್ಟರು...' 'ನಾನು ಹೇಳಿರಲಿಲ್ಲವೆ'? ಎಂದೆ, 'ಆದರೆ ನಾವು ಬಿಡಲಿಲ್ಲ. ಹಠ ಹಿಡಿದೆವು. ನೀವು ಒಪ್ಪದಿದ್ದರೆ ಮನೆ ಮುಂದೆ ಉಪವಾಸ ಸತ್ಯಾಗ್ರಹ ಮಾಡುತ್ತೇವೆ' ಎಂದು ಹೆದರಿಸಿದ ಮೇಲೆ 'ಆಗಲಿ' ಎಂದು ಒಪ್ಪಿಕೊಂಡರು' ಎಂದು ತಿಳಿಸಿದಾಗ ನನಗೇ ಆಶ್ಚರ್ಯವಾಯಿತು. ಅವರು ತಮ್ಮ ತತ್ವ ನಿಷ್ಠೆಯನ್ನೇಕೆ ಕೈ ಬಿಟ್ಟರು? ಬಹುಶಃ ಅವರಿಗೆ ನನ್ನ ಮೇಲಿದ್ದ ಅವ್ಯಾಜ ಪ್ರೇಮವೆ ಕಾರಣ ಇರಬೇಕು. ಇದಾದ ಒಂದೆರಡು ದಿನಗಳ ನಂತರ ನ್ಯಾಯಾಲಯದಲ್ಲಿ ಅವರನ್ನು ಎಂದಿನಂತೆ ಕಂಡಾಗ ನಗುಮೊಗದಿಂದ: 'ಹುಡುಗರು ಬಂದು ಹಠಹಿಡಿದರು. ಅಧ್ಯಕ್ಷನಾಗಲು ಒಪ್ಪಿಕೊಂಡೆ' ಎಂದರು. 'ನೀವು ಒಪ್ಪುವುದಿಲ್ಲ ಎಂದು ನಾನು ಮೊದಲೇ ಹೇಳಿದ್ದೆ. ನಿಮ್ಮ

ನಿರ್ಧಾರಕ್ಕೆ ಆಶ್ಚರ್ಯವಾಯಿತು. ನಿಮ್ಮ ಪ್ರೀತಿ ದೊಡ್ಡದು ಎಂದೆ. 'ಮಾಡಲಿ ಬಿಡಿ . ಒಳ್ಳೆಯ ಕೆಲಸ' ಎಂದು ಸಂತೋಷ ವ್ಯಕ್ತಪಡಿಸಿದರು. ಈ ಪ್ರೀತಿಗೆ ನಾನು ಹೇಗೆ ಪಾತ್ರನಾದೆ?

ಈ ಪ್ರೀತಿ ಕಡೆತನಕ ಉಳಿದಿತ್ತು. ಅವರಿದ್ದ ಲೆವೆಲೆ ರೋಡನಲ್ಲಿದ್ದ ಬಾಡಿಗೆ ಮನೆಯ ಮುಂದೆ ಹಾದು ಹೋದಾಗಲೆಲ್ಲ ಒಮ್ಮೆಯಾದರೂ ಅವರನ್ನು ನೋಡಿ ಮಾತನಾಡದೆ ಮುಂದೆ ಹೋಗುತ್ತಿರಲಿಲ್ಲ. ಹೋದಾಗಲೆಲ್ಲ ಅವರ ಮಡದಿಯನ್ನು ಕರೆದು ಮಾತನಾಡಿಸುತ್ತಿದ್ದರು. ಶ್ರೀಮತಿ ಕಡಿದಾಳರೂ ಸಾಹಿತಿಗಳು. ಅವರು ಬರೆದಿದ್ದ ಪುಸ್ತಕಗಳನ್ನು ಕೊಟ್ಟು ಸಂತೋಷ ಪಡುತ್ತಿದ್ದರು.

ಕಡಿದಾಳರು ಅನಾರೋಗ್ಯದಿಂದ ನ್ಯಾಯಾಲಯಕ್ಕೆ ಬರುವುದನ್ನು ನಿಲ್ಲಿಸಿದ ಮೇಲೆ ಯಾವಾಗಲೊ ಕ್ವಚಿತ್ ನೋಡುತ್ತಿದ್ದೆ. ಕಾಯಿಲೆ ಹೆಚ್ಚಾದ ಮೇಲೆ ಸೇಂಟ್ ಮಾರ್ಥಾ ಆಸ್ಪತ್ರೆಗೆ ಸೇರಿಸಿದ ಮೇಲೆ ಅವರಿಗೆ ಮಾತನಾಡಲು ತ್ರಾಣ ಇರುವ ತನಕ ಆಗಾಗ ಹೋಗಿ ಮಾತನಾಡಿಸುತ್ತಿದ್ದೆ. ಮಾತು ನಿಂತ ಮೇಲೆ ಒಮ್ಮೆ ಹೋಗಿ ನೋಡಿದ್ದೆ. ತುಂಬ ಯಾತನೆ ಪಡುತ್ತಿದ್ದುದನ್ನು ನೋಡಲಾಗುತ್ತಿರಲಿಲ್ಲ. ಒಂದು ದಿನ ಅವರ ಮನೆಯಿಂದ ದೂರವಾಣಿ ಬಂತು. 'ಮಂಜಪ್ಪನವರು ತೀರಿದರು' ಫೋನ್ ಕೆಳಗಿಟ್ಟು ಕೂಡಲೆ ಅವರ ಮನೆಗೆ ಹೋದೆ. ಪುಷ್ಪ ಮಾಲೆಯನ್ನು ಕಳೇಬರದ ಮೇಲಿರಿಸಿ ಕಣ್ಮುಚ್ಚಿ ನಮನ ಸಲ್ಲಿಸಿ ಬಂದೆ. ಆತ್ಮಕ್ಕೆ ಶಾಂತಿ ಸದ್ಗತಿ ಕೋರಿದೆ.

# ಗೇಣಿದಾರರ ಹಿತಚಿಂತಕ

–ಕಾಗೋಡು ತಿಮ್ಮಪ್ಪ

ಮಲೆನಾಡು ಪ್ರದೇಶದಲ್ಲಿಯೇ ಗೇಣಿದಾರರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದರು. ವಿಶೇಷವೆಂದರೆ ಗೇಣಿದಾರರಲ್ಲಿ ಬಹುಸಂಖ್ಯಾತರು ಹಿಂದುಳಿದ ವರ್ಗಕ್ಕೆ ಸೇರಿದವರು. ಜಮೀನುದಾರರ ಶೋಷಣೆಯಿಂದ ಗೇಣಿದಾರ ವರ್ಗ ಗುಲಾಮ ಗಿರಿಯ ವ್ಯವಸ್ಥೆಯಲ್ಲಿ ಬದುಕಬೇಕಾದ ಪರಿಸ್ಥಿತಿ ನಿರ್ಮಾಣವಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದರೂ ಸಹ ಗೇಣಿದಾರರಿಗೆ ಮಾತ್ರ ಅದರ ಫಲ ಸಿಗಲಿಲ್ಲ. ಗೇಣಿದಾರರ ಶೋಷಣೆ ಸ್ವಾತಂತ್ರದ ಪೂರ್ವದಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದರೆ ಸ್ವಾತಂತ್ರ್ಯದ ನಂತರವೂ ಸಹ ನಿರಾಂತಕವಾಗಿ ನಡೆದಿತ್ತು. ಕಾಂಗ್ರೆಸ್ ಪಕ್ಷದಲ್ಲಿ ಜಮೀನುದಾರರೇ ತಮ್ಮ ಹಿಡಿತವನ್ನು ಇಟ್ಟುಕೊಂಡ ಕಾರಣ ತಮ್ಮ ಅಧಿಕಾರದ ಬಲದಿಂದ ದುಡಿಯುವ ಜನರ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸುವಲ್ಲಿ ಯಶಸ್ವಿಯಾಗಿದ್ದರು. ಇಂತಹ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯ ಬಂದ ನಂತರ ಗೇಣಿದಾರರ ಪರ ಧ್ವನಿ ಎತ್ತಿದವರಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಮೊದಲಿಗರು. ಗೇಣಿದಾರರ ಮಧ್ಯದಲ್ಲಿಯೇ ಬೆಳೆದ ಶ್ರೀ ಮಂಜಪ್ಪನವರಿಗೆ ಅವರ ಶೋಷಣೆಯ ಪರಿಚಯ ಅರಿವಿನ ಭಾಗವಾಗಿತ್ತು. ಸರಳ ಮತ್ತು ಸಜ್ಜನಿಕೆಗೆ ಹೇಳಿ ಮಾಡಿಸಿದ ವ್ಯಕ್ತಿ ಶ್ರೀ ಮಂಜಪ್ಪನವರು. ಅಂದು ಕಾಂಗ್ರೆಸ್ ಪಕ್ಷ ಕಂಡ ಅತ್ಯಂತ ಅಪರೂಪದ ರಾಜಕೀಯ ಮತ್ತು ಸಾಮಾಜಿಕ ನಾಯಕ. ಬಡವರ ಮತ್ತು ದುಡಿದು ತಿನ್ನುವವರ ಪರ ಬದ್ಧತೆಯನ್ನು ಹೊಂದಿದ್ದವರು ಆಗಿದ್ದರು. ಕಾಂಗ್ರೆಸ್ ಪಕ್ಷದಲ್ಲಿದ್ದುಕೊಂಡೇ 'ಮಲೆನಾಡು ರೈತ ಸಂಘ' ವನ್ನು ಸ್ಥಾಪಿಸಿ, ಗೇಣಿದಾರರ ಸಂಘಟನೆಗೆ ಮುಂದಾದವರಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಪ್ರಥಮರು. ಅವರ ನಾಯಕತ್ವದಲ್ಲಿ ಗೇಣಿದಾರರ ಸಂಘಟನೆಗೆ ಒಂದು ಹೊಸ ಚಾಲನೆ ದೊರೆಯಿತು. ಇದರ ಪರಿಣಾಮವಾಗಿ ಗೇಣಿದಾರರು ತಮ್ಮ ಶೋಷಣೆಯ ವಿರುದ್ಧ ಧ್ವನಿ ಎತ್ತಲು ಸಾಧ್ಯವಾಯಿತು. ಅಂತೆಯೆ ಶ್ರೀ ಕಡಿದಾಳ ಮಂಜಪ್ಪನವರ ಮಾರ್ಗದರ್ಶನದಲ್ಲಿ ಸಾಗರ ತಾಲ್ಲೂಕಿನಲ್ಲಿಯೂ ಸಹ ರೈತ ಸಂಘ ಅಸ್ತಿತ್ವಕ್ಕೆ ಬಂತು. ಇದರ ಸ್ಥಾಪಕರು ಶ್ರೀ ಡಿ.ಮೂಕಪ್ಪನವರು ಮತ್ತು ಶ್ರೀ ಹೆಚ್. ಗಣಪತಿಯಪ್ಪನವರು. ಇವರ ಮುಖಂಡತ್ವದಲ್ಲಿ ಸಾಗರ ತಾಲ್ಲೂಕಿನಲ್ಲಿ ಗೇಣಿದಾರರ ಸಂಘಟನೆ ವ್ಯಾಪಕವಾಗಿ ಬೆಳೆದು ಕಾಗೋಡು ಗೇಣಿ ರೈತರ ಹೋರಾಟಕ್ಕೆ ನಾಂದಿಯಾಯಿತು. ಈ ಬೆಳವಣಿಗೆಗೆ ಶ್ರೀ ಕಡಿದಾಳ್ ಮಂಜಪ್ಪನವರೆ ಕಾರಣೀಭೂತರು.

"ಉಳುವವನೇ ಹೊಲದೊಡೆಯ" ಎಂಬ ತತ್ವವನ್ನು ಕಾಂಗ್ರೆಸ್ ಪಕ್ಷ ಸುಮಾರು ೧೯೩೫ ರಲ್ಲಿಯೇ ಒಪ್ಪಿಕೊಂಡಿದ್ದಾಗೂ ಸಹ, ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಅಧಿಕಾರ ಹಿಡಿದ ಕಾಂಗ್ರೆಸ್ ಪಕ್ಷ ಗೇಣಿ ರೈತರ ಸಮಸ್ಯೆಯನ್ನು ಬಗೆಹರಿಸಲು ಮುಂದಾಗಲಿಲ್ಲ. ಅಷ್ಟೆ ಅಲ್ಲ ಸ್ವಾತಂತ್ರ್ಯ ನಂತರ ಗೇಣಿದಾರರು ಗುಲಾಮಗಿರಿಯಲ್ಲಿ ಬದುಕುವ ಸ್ಥಿತಿ ಇರುವುದನ್ನು ಕಾಂಗ್ರೆಸ್ ಪಕ್ಷ ಗಮನಿಸಲೇ ಇಲ್ಲ. ಅಂದು ಗೇಣಿದಾರರಿಗೆ ರಕ್ಷಣೆ ನೀಡುವ ಯಾವುದೇ ಕಾನೂನು ವ್ಯವಸ್ಥೆ ಇರಲಿಲ್ಲ. ಜಮೀನ್ದಾರರ ಮರ್ಜಿಯಲ್ಲಿ ಬದುಕಲೇ ಬೇಕಾಗಿತ್ತು. ಸ್ವಾತಂತ್ರ್ಯದ ಚಳುವಳಿಯಲ್ಲಿ ಭಾಗವಹಿಸಿದ ಕಾಂಗ್ರೆಸ್ ಪಕ್ಷದ ಕೆಲವು ನಾಯಕರಲ್ಲಿ ಮತ್ತು ಕಾರ್ಯಕರ್ತರಲ್ಲಿ ಶೋಷಣೆಯ ವಿರುದ್ಧ ಧ್ವನಿ ಎತ್ತುವ ಮನೋಸ್ಥಿತಿ ಉದ್ಭವವಾಗಿತ್ತು. ಇದರ ಪರಿಣಾಮದಿಂದ ಮಲೆನಾಡು ಪ್ರದೇಶದಲ್ಲಿ ಗೇಣಿ ರೈತರ ಸಂಘಟನೆಗಳು ತಲೆ ಎತ್ತಿದ್ದವು. ಇದಕ್ಕೆ ಪೂರಕವಾಗಿ ಕಾಗೋಡಿನಲ್ಲಿ ನಡೆದ ಗೇಣಿ ರೈತರ ಚಳುವಳಿ ಒಂದು ಹೊಸ ಅಧ್ಯಾಯವನ್ನು ಸ್ಥಾಪಿಸಿ ಗೇಣಿ ರೈತರ ಶೋಷಣೆಯ ವಿಮೋಚನೆಗೆ ರಾಜ್ಯವು ಅಷ್ಟೆ ಅಲ್ಲ, ರಾಷ್ಟ್ರದಲ್ಲಿ ವಿಚಾರವಂತರ ಗಮನವನ್ನು ಸೆಳೆಯಿತು. ಇದರ ಫಲವಾಗಿ ಮುಂದೆ ಅನೇಕ ಗೇಣಿದಾರರ ಪರವಾದಂತಹ ಕಾನೂನುಗಳು ಜಾರಿಗೆ ಬರಲು ಸಾಧ್ಯವಾಯಿತು. ಅಂದರೆ ಕಾಗೋಡು ಗೇಣಿ ರೈತರ ಚಳುವಳಿ ಒಂದು ಹೊಸ ದಿಕ್ಕನ್ನು ತೋರಿಸಿತು.

ಕಾಗೋಡು ರೈತಚಳುವಳಿ ಪ್ರಾರಂಭವಾದಾಗ ಶ್ರೀ ಕಡಿದಾಳ್ ಮಂಜಪ್ಪನವರು ಕಾಂಗ್ರೆಸ್ ಪಕ್ಷದಲ್ಲಿಯೇ ಇದ್ದರು. ಕಾಗೋಡು ರೈತ ಚಳುವಳಿ ಅಂದಿನ ಕಾಂಗ್ರೆಸ್ ಸರ್ಕಾರದ ವಿರುದ್ಧವೇ ಆಗಿದ್ದುದರಿಂದ ಶ್ರೀ ಕಡಿದಾಳ್ ಮಂಜಪ್ಪನವರು ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿರಲಿಲ್ಲ. ಆದರೇ ಅವರ ಪ್ರೋತ್ಸಾಹ ಮತ್ತು ಬೆಂಬಲ ಎಲ್ಲಾ ಹಂತದಲ್ಲಿಯೂ ಇತ್ತು. ಅಷ್ಟೆ ಅಲ್ಲ ಅವರ ಎಲ್ಲಾ ಅನುಯಾಯಿಗಳು ಮತ್ತು ಮಲೆನಾಡು ಪ್ರದೇಶದ ರೈತ ಸಂಘದ ಪದಾಧಿಕಾರಿಗಳು ನೇರವಾಗಿ ಕಾಗೋಡು ರೈತ ಚಳುವಳಿಯಲ್ಲಿ ಭಾಗವಹಿಸಿದ್ದರು.

ಕಾಗೋಡು ಗೇಣಿ ರೈತರ ಹೋರಾಟ ಪ್ರಾರಂಭವಾಗಿದ್ದು ೧೯೫೧ ರ ಏಪ್ರಿಲ್‌ನಲ್ಲಿ. ಮೊದಲನೇ ಮಹಾ ಚುನಾವಣೆ ೧೯೫೨ ರಲ್ಲಿ ನಡೆಯಿತು. ಆಗ ಶ್ರೀ ಮಂಜಪ್ಪನವರು ಶಾಸನ ಸಭೆಗೆ ಆಯ್ಕೆಯಾಗಿ ಕಂದಾಯ ಸಚಿವರೂ ಆದರು. ಇದೇ ಚುನಾವಣೆಯಲ್ಲಿ ಶ್ರೀ ಶಾಂತವೇರಿ ಗೋಪಾಲಗೌಡರು ಸಹ ಶಾಸನ ಸಭೆಗೆ ಆಯ್ಕೆಯಾದರು. ಗೇಣಿದಾರರ ಸಂಘಟನೆಯ ಜನಕರಾದ ಶ್ರೀ ಕಡಿದಾಳ್ ಮಂಜಪ್ಪನವರು ಕಂದಾಯ ಸಚಿವರಾದದ್ದು ಮತ್ತು ಕಾಗೋಡು ಚಳುವಳಿಯನ್ನು ಪ್ರಬಲವಾಗಿ ಸಂಘಟಿಸಿ ಚಳುವಳಿಯನ್ನು

ಯಶಸ್ವಿಗೊಳಿಸಿದ ಶ್ರೀ ಶಾಂತವೇರಿ ಗೋಪಾಲ ಗೌಡರು ಶಾಸನ ಸಭೆಗೆ ಪ್ರವೇಶ ಮಾಡಿದ್ದು ಗೇಣಿದಾರರ ಜೀವನದಲ್ಲಿ ಒಂದು ಹೊಸ ವಿಶ್ವಾಸವನ್ನು ಮೂಡಿಸಿತು. ಇವರಿಬ್ಬರ ಜೋಡಿ ಅಮೂಲ್ಯವಾಗಿತ್ತು. ಅಪರೂಪವು ಆಗಿತ್ತು ಮತ್ತು ಚಾರಿತ್ರಿಕ ಘಟನೆ ಆಗಿತ್ತು. ಇದರ ಪರಿಣಾಮದಿಂದ ಕಂದಾಯ ಸಚಿವರಾದಂತಹ ಶ್ರೀಮಾನ್ ಕಡಿದಾಳ್ ಮಂಜಪ್ಪನವರು ೧೯೫೨ ರಲ್ಲಿ ಗೇಣಿದಾರರಿಗೆ ರಕ್ಷಣೆ ನೀಡುವ ಉದ್ದೇಶದ ಅಂದಿನ ಮೈಸೂರು ರಾಜ್ಯದಲ್ಲಿ ಮೊದಲನೇ ಬಾರಿಗೆ ಮೈಸೂರು ಗೇಣಿದಾರರ ಶಾಸನವನ್ನು ಜಾರಿಗೆ ತಂದರು. ಮೊದಲನೇ ಬಾರಿಗೆ ಗೇಣಿದಾರರಿಗೆ ಕಾನೂನಿನ ರಕ್ಷಣೆ ಪ್ರಾಪ್ತವಾಯಿತು. ಇದು ಒಂದು ಇತಿಹಾಸ. ಇದರ ಸೃಷ್ಟಿಕರ್ತ ಶ್ರೀ ಕಡಿದಾಳ ಮಂಜಪ್ಪನವರು. ಈ ಗೇಣಿ ಶಾಸನವನ್ನು ಶ್ರೀ ಗೋಪಾಲ ಗೌಡರು ಸ್ವಾಗತಿಸುತ್ತಾ ಈ ಶಾಸನ ಕೆಸರಿನಲ್ಲಿರುವ ಕಂಬ ಎಂದು ಲೇವಡಿ ಮಾಡುವುದರಲ್ಲಿ ಹಿಂದೆ ಬೀಳಲಿಲ್ಲ. ಕಾರಣ ಅದರಲ್ಲಿರುವ ಕೆಲವು ಲೋಪದೋಷಗಳನ್ನು ಅವರು ಗುರುತಿಸಿದ್ದರು.

ಶ್ರೀ ಕಡಿದಾಳ್ ಮಂಜಪ್ಪನವರು ಗೇಣಿ ಕಾನೂನನ್ನು ತರುವುದರಲ್ಲಿ ತೃಪ್ತರಾಗದೇ ಮುಂದೆ ಹೋಗಿ ೧೯೫೪ ಮತ್ತು ೫೫ ರಲ್ಲಿ ಎರಡು ಇನಾಮುರದ್ದಿಯಾತಿ ಕಾನೂನುಗಳನ್ನು ಜಾರಿಗೆ ತಂದರು (ಪರ್ಸನಲ್ ಅಂಡ್ ಮಿಸ್ಲೇನಿಯಸ್ ಇನಾಂ ಅಬಾಲಿಸನ್ ಆಕ್ಟ್ ಅಂಡ್ ರಿಲೀಜಿಯಸ್ ಅಂಡ್ ಚಾರಿಟಬಲ್ ಇನಾಮ್ಸ್ ಅಬಾಲಿಶನ್ ಆ್ಯಕ್ಟ್) ಈ ಕಾನೂನುಗಳಿಂದ ಗೇಣಿದಾರರಿಗೆ ಭೂಮಿಯ ಮಾಲಿಕತ್ವವನ್ನು ನೀಡುವ ಉದ್ದೇಶವನ್ನು ಹೊಂದಿದ್ದಾಗ್ಯೂ ಸಹ ಅದು ಕೆಲವು ಗೇಣಿ ರೈತರಿಗೆ ಮಾತ್ರ ದೊರೆಯಿತು. ಉಳಿದ ಗೇಣಿದಾರ ರೈತರು ೧೯೭೪ ರಲ್ಲಿ ತಂದ ತಿದ್ದುಪಡಿ ಭೂ ಸುಧಾರಣಾ ಕಾನೂನುನಿಂದ ಮಾಲಿಕತ್ವ ಪಡೆದರು. ಈ ಎರಡು ಇನಾಮು ರದ್ದಿಯಾತಿ ಕಾನೂನುಗಳನ್ನು ಜಾರಿಗೆ ತರುವುದರ ಮುಖಾಂತರ ಅಂದಿನ ಮೈಸೂರು ರಾಜ್ಯದಲ್ಲಿ ಮತ್ತೊಂದು ಹೊಸ ಚರಿತ್ರೆಯ ದಾಖಲೆಯನ್ನು ಸೃಷ್ಟಿಸಿದರು.

೧೯೫೬ ರಲ್ಲಿ ರಾಜ್ಯ ಪುನರ್ ವಿಂಗಡಣೆಯ ಮುಖಾಂತರ ವಿಶಾಲ ಕರ್ನಾಟಕ ರಾಜ್ಯ ಅಸ್ತಿತ್ವಕ್ಕೆ ಬಂತು. ಆಗ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ಗೇಣಿ ಶಾಸನಗಳು ಜಾರಿಯಲ್ಲಿದ್ದವು. ಇಡೀ ರಾಜ್ಯಕ್ಕೆ ಅನ್ವಯವಾಗುವ ಒಂದು ಸಮಗ್ರ ಕಾನೂನು ತರುವ ಉದ್ದೇಶದಿಂದಲೂ ಮತ್ತು ಭೂ ಸುಧಾರಣಾ ತತ್ವವನ್ನು ಜಾರಿಗೆ ತರುವ ಗುರಿಯನ್ನು ಹೊಂದಿ ಶ್ರೀ ಬಿ.ಡಿ.ಜತ್ತಿಯವರ ನೇತೃತ್ವದಲ್ಲಿ ಒಂದು ಆಯೋಗವನ್ನು ರಚಿಸಿದರು. ಈ ಆಯೋಗದ ಶಿಫಾರಸ್ಸಿನ ಮೇರೆಗೆ ೧೯೬೧ ರಲ್ಲಿ ಹೊಸ ಭೂ ಸುಧಾರಣಾ ಕಾನೂನನ್ನು ವಿಧಾನ ಸಭೆ ಅಂಗೀಕರಿಸಿತು. ಆದರೆ ಆ

ಕಾನೂನು ಜಾರಿಗೆ ಬಂದುದು ೧೯೭೪ ರಲ್ಲಿ. ಈ ವಿಳಂಬಕ್ಕೆ ಅಂದು ಕಾಂಗ್ರೆಸ್ ಪಕ್ಷದಲ್ಲಿದ್ದ ಜಮೀನ್ದಾರರ ಪ್ರಭಾವವೇ ಮುಖ್ಯ ಕಾರಣವಾಗಿತ್ತು. ಇಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಸೋತರು ಎಂಬ ಭಾವನೆ ನಮಗೆಲ್ಲರಿಗೂ ಇದೆ. ಆದರೆ ೧೯೬೧ರ ಹೊಸ ಭೂ ಸುಧಾರಣೆ ಶಾಸನ ಅಸ್ತಿತ್ವಕ್ಕೆ ಬರಲು ಶ್ರೀ ಕಡಿದಾಳ್ ಮಂಜಪ್ಪನವರ ಅವಿರತ ಪ್ರಯತ್ನದಿಂದ ಎಂಬುದನ್ನು ಮರೆಯಲು ಸಾಧ್ಯವಿಲ್ಲ. ಅಷ್ಟೆ ಅಲ್ಲದೇ ಭೂ ಮಾಲೀಕರ ನಿಷ್ಠುರಕ್ಕೂ ಗುರಿ ಆದರು.

೧೯೬೧ ರಲ್ಲಿ ಹೊಸ ಭೂ ಸುಧಾರಣಾ ಕಾನೂನು ಜಾರಿಗೆ ಬರುವ ಸೂಚನೆಯನ್ನು ಕಂಡ ಜಮೀನ್ದಾರರು ರಾಜ್ಯವ್ಯಾಪ್ತಿ ಗೇಣಿದಾರರನ್ನು ಒಕ್ಕಲೆಬ್ಬಿಸುವ ಕಾರ್ಯವನ್ನು ಪ್ರಾರಂಭ ಮಾಡಿದರು. ಈ ಗಂಭೀರ ಪರಿಸ್ಥಿತಿಯನ್ನು ಗಮನಿಸಿದ ಶ್ರೀ ಕಡಿದಾಳ್ ಮಂಜಪ್ಪನವರು ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ಪ್ರತಿಬಂಧಿಸಲು ೧೯೬೧ ರಲ್ಲಿ ಒಂದು ಹೊಸ ಗೇಣಿದಾರರ ಹಂಗಾಮಿ ರಕ್ಷಣಾ ಕಾನೂನನ್ನು ಜಾರಿಗೆ ತಂದರು. ಈ ಕಾನೂನು ಗೇಣಿದಾರರಿಗೆ ಒಂದು ವರದಾನವಾಯಿತು. ಅಷ್ಟೆ ಅಲ್ಲ ಜಮೀನ್ದಾರರ ಕಾನೂನು ವಿರೋಧಿ ಕ್ರಮಕ್ಕೆ ಕಡಿವಾಣ ಹಾಕಿದಂತಾಯಿತು. ಶ್ರೀ ಕಡಿದಾಳ್ ಮಂಜಪ್ಪನವರ ಛಲಕ್ಕೆ ಮತ್ತು ಇಚ್ಛಾಶಕ್ತಿಗೆ ಇದು ಒಂದು ಸಾಕ್ಷಿ.

**"ಉಳುವವನೇ ಹೊಲದೊಡೆಯ"** ಎಂಬ ತತ್ವವನ್ನು ಜಾರಿಗೆ ತರುವ ನಿಟ್ಟಿನಲ್ಲಿ ಹಂತ ಹಂತವಾಗಿ ಗೇಣಿದಾರರ ಸಂಘಟನೆಯನ್ನು ಮಾಡುವುದರಿಂದ ಪ್ರಾರಂಭವಾಗಿ ಶಾಸನಗಳನ್ನು ತರುವುದರ ಮುಖಾಂತರ ಗೇಣಿದಾರರನ್ನು ರಕ್ಷಿಸಿ, ಅವರಿಗೆ ಭೂಮಿಯ ಮಾಲಿಕತ್ವವನ್ನು ನೀಡುವ ನಿಟ್ಟಿನಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ತೋರಿದ ಪ್ರಜ್ಞೆ, ಬದ್ಧತೆ ಮತ್ತು ಕ್ರೀಯಾಶೀಲತೆಗಳು ಅವರ ಅಪೂರ್ವವಾದ ಕೊಡುಗೆಗಳು ಎಂಬುದನ್ನು ಮರೆಯಲು ಸಾಧ್ಯವೇ ಇಲ್ಲ. ಗೇಣಿದಾರರ ಪಾಲಿಗೆ ಶ್ರೀ ಕಡಿದಾಳ್ ಮಂಜಪ್ಪನವರು ರಕ್ಷಕರಾಗಿದ್ದರೆ, ಶ್ರೀ ದೇವರಾಜು ಅರಸುರವರು ಮಾಲಿಕತ್ವವನ್ನು ನೀಡಿ ಅಂತಿಮವಾಗಿ ಗೇಣಿದಾರರಿಗೆ ಮುಕ್ತಿಯನ್ನು ನೀಡಿದರು. ಶ್ರೀ ಕಡಿದಾಳ್ ಮಂಜಪ್ಪನಂತಹ ಅಪ್ಪಟ ಗಾಂಧೀವಾದಿ ಮತ್ತು ಸಮಾಜವಾದದಲ್ಲಿ ಬದ್ಧತೆಯನ್ನು ಹೊಂದಿದ ನಾಯಕರು. ಅಂದು ಕಾಂಗ್ರೆಸ್ ಪಕ್ಷದಲ್ಲಿ ಇವರು ಇಲ್ಲದೇ ಹೋಗಿದ್ದರೆ, ಈ ರಾಜ್ಯದ ಗೇಣಿದಾರರನ್ನು ಕೇಳುವವರೇ ಇರುತ್ತಿರಲಿಲ್ಲ. ಕಾಂಗ್ರೆಸ್ ಪಕ್ಷದಲ್ಲಿ ಜಮೀನ್ದಾರರ ಪ್ರಾಬಲ್ಯವೇ ಜಾಸ್ತಿಯಾಗಿ ಶೋಷಣೆಗೆ ಒಳಗಾದ ದುರ್ಬಲ ವರ್ಗದವರನ್ನು ರಕ್ಷಿಸುವಲ್ಲಿ ಕಾಂಗ್ರೆಸ್ ಪಕ್ಷ ವಿಫಲವಾಗಿದೆ. ಈ ಸನ್ನಿವೇಶವನ್ನು ಈಗಲೂ ಗುರುತಿಸಬಹುದು. ಒಪ್ಪದಂಥ ತತ್ವವನ್ನು ಜಾರಿಗೆ ತರುವಲ್ಲಿ ಕಾಂಗ್ರೆಸ್

ಪಕ್ಷ ನಡೆದುಕೊಂಡ ರೀತಿ ಇತಿಹಾಸದ ಒಂದು ದುರಂತ. ೧೯೫೨ ರಿಂದ ೧೯೭೨ ರವರೆಗೆ ಗೇಣಿದಾರನ ನಿರಂತರ ಹೋರಾಟದ ಫಲವಾಗಿ ಶ್ರೀ ಡಿ.ದೇವರಾಜ್ ಅರಸು ಅವರು ಭೂ ಸುಧಾರಣ ಕಾನೂನಿಗೆ ತಿದ್ದುಪಡಿಯನ್ನು ತಂದು ಉಳುವವನೇ ಹೊಲದೊಡೆಯ ಎಂಬ ತತ್ವವನ್ನು ಅಕ್ಷರಶಃ ಸಾಧಿಸಿ ತೋರಿಸಿದರು. ಆ ಮೂಲಕ ಎಲ್ಲಾ ಗೇಣಿ ರೈತರು ರಾಜ್ಯದಲ್ಲಿ ಭೂಮಿಯ ಮಾಲೀಕರಾದರು. ತತ್ವದ ಬದ್ಧತೆ ಮತ್ತು ಕಾರ್ಯರೂಪಕ್ಕೆ ತರುವ ಇಚ್ಛಾಶಕ್ತಿ ಇಲ್ಲದೇ ಹೋದರೆ ರಾಜಕಾರಣದಲ್ಲಿ ಏನು ನಡೆಯುತ್ತೆ ಎಂಬುದನ್ನು ಗೇಣಿದಾರರ ನಿರಂತರ ಹೋರಾಟದಿಂದ ನಾವು ಗಮನಿಸಬಹುದು. ಆದುದರಿಂದಲೇ ಶ್ರೀ ಕಡಿದಾಳ್ ಮಂಜಪ್ಪನವರಂತಹ ದಾರ್ಶನಿಕ ರಾಜಕಾರಣಿ ಗೇಣಿದಾರರ ನೆನಪಿನಲ್ಲಿ ಇಂದು ಜೀವಂತವಾಗಿದ್ದಾರೆ. ಅವರು ಬಿಟ್ಟು ಹೋದ ಕಾರ್ಯವನ್ನು ಪರಿಪೂರ್ಣಗೊಳಿಸಿದ ಕೀರ್ತಿ ಶ್ರೀ ದೇವರಾಜ್ ಅರಸು ಅವರಿಗೆ ಸಲ್ಲುತ್ತದೆ. ಗೇಣಿದಾರರ ಪಾಲಿಗೆ ಈ ಎರಡು ವ್ಯಕ್ತಿಗಳು ದೇವರಿದ್ದಂತೆ. ಅವರ ಬಗ್ಗೆ ಬರೆಯುವುದು ಎಂದರೆ, ದೇವರಿಗೆ ಪ್ರಾರ್ಥನೆ ಸಲ್ಲಿಸಿದಂತೆ.

# ದಾರಿ ದೀಪ

**–ಡಾ. ಎಚ್.ಡಿ.ಚಂದ್ರಪ್ಪಗೌಡ ಹೊಳೆಗದ್ದೆ**

ಇಪ್ಪತ್ತನೆ ಶತಮಾನದ ದಟ್ಟ ಅರಣ್ಯ ಪ್ರದೇಶದ ಮಲೆನಾಡಿನ ಹೊಳೆಗದ್ದೆ ಎಂಬ ಪುಟ್ಟ ಹಳ್ಳಿಯಲ್ಲಿ ಜನ್ಮ ತಾಳಿದವ ನಾನು (೧೯೨೯). ಒಂದುವರೆ ವರ್ಷದಲ್ಲೇ ತಂದೆಯನ್ನು ಕಳೆದುಕೊಂಡು ಅನಾಥನಾದೆ. ಅವಿಭಕ್ತ ಕುಟುಂಬದಲ್ಲಿ ತಾಯಿಯ ಅಕ್ಕರೆಯಲ್ಲಿ ಬಾಲ್ಯವನ್ನು ಕಳೆದೆ. ಒಬ್ಬನೆ ಮಗನಾದ ನನಗೆ ನಾಲ್ಕಕ್ಷರ ಕಲಿಸಬೇಕೆಂಬುದು ತಾಯಿಯ ಉತ್ಕಟ ಆಕಾಂಕ್ಷೆಯಾಗಿರಬೇಕು. ಮಲೆನಾಡಿನ ಅಂದಿನ ಪರಿಸರದಲ್ಲಿ ಎಲ್ಲೆಲ್ಲೂ ಶಾಲೆಗಳೇ ಇರಲಿಲ್ಲ ಅಪರೂಪಕ್ಕೆಂಬಂತೆ ಅಲ್ಲಲ್ಲೇ ತಲೆಯೆತ್ತುತ್ತಿದ್ದ 'ಐಗಳ ಮಠ' ಗಳಲ್ಲಿ ಸೇರಿಸಿ ಅಕ್ಷರಾಭ್ಯಾಸ ಮಾಡಿಸುವ ಪ್ರಯತ್ನಗಳನ್ನು ಜರುಗಿಸುತ್ತಲೇ ಇದ್ದಳು. ಆದರೆ ನಾನು ಅವುಗಳಿಂದ ಹೇಗೋ ತಪ್ಪಿಸಿಕೊಳ್ಳುತ್ತಾ ಇತರ ಮಕ್ಕಳ ಜೊತೆ ಅಂಡಲೆದುಕೊಂಡು ಕಾಲಹರಣ ಮಾಡಿಕೊಂಡಿರುತ್ತಿದ್ದೆ. ಅಂತಿಮವಾಗಿ ದೂರದ ಮೇಗರವಳ್ಳಿಯ ಸಂಬಂಧಿಕರ ಮನೆಯಲ್ಲಿ ನನ್ನನ್ನು ನೆಲೆಯೂರಿಸುವಲ್ಲಿ ಯಶಸ್ವಿಯಾದಳು.

ಮೇಗರವಳ್ಳಿಯಲ್ಲಿ ಮುಂದಿನ ೮ ವರ್ಷಗಳು ನನ್ನ ವಿದ್ಯಾಭ್ಯಾಸ ಅವ್ಯಾಹತವಾಗಿ ಮುಂದುವರಿಯಿತು. ಪ್ರೌಢ ಶಾಲಾ ವಿದ್ಯಭ್ಯಾಸ ಸ್ವಲ್ಪ ಕಷ್ಟದಿಂದಲೇ ತೀರ್ಥಹಳ್ಳಿಯಲ್ಲಿ ಜರುಗಿತು. ಮುಂದಿನ ಎರಡು ವರ್ಷಗಳ ಇಂಟರ್ ಮೀಡಿಯೇಟ್ (ಇಂದಿನ ಪಿ.ಯು.ಸಿ.) ಶಿವಮೊಗ್ಗದಲ್ಲಿ ಜರುಗಿತು. ಆರ್ಥಿಕವಾಗಿ ಅಷ್ಟೊಂದು ಸಬಲವಾಗಿರದ ಕುಟುಂಬದವರಿಗೆ ನನ್ನ ಖರ್ಚಿಗೆ ಹಣ ಒದಗಿಸುವುದು ದುಸ್ತರವಾಗಿ ಪರಿಣಮಿಸುತ್ತಿತ್ತು. ಆ ದಿನಗಳಲ್ಲಿ ಮಲೆನಾಡಿನ ಕಡೆಯ ಯುವ ವಕೀಲರೂ, ಅದಾಗಲೇ ರಾಜಕೀಯ ಕ್ಷೇತ್ರದಲ್ಲಿ ಹೆಸರುಗಳಿಸಿದ್ದ ಕಡಿದಾಳ್ ಮಂಜಪ್ಪನವರು ಆ ಎರಡೂ ವರ್ಷಗಳು ಸರ್ಕಾರದಿಂದ ವಿದ್ಯಾರ್ಥಿವೇತನ ಕೊಡಿಸಿ ಮಹದುಪಕಾರ ಮಾಡಿದರು.

೧೯೫೦ ರಲ್ಲಿ ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ನಮ್ಮ ತರಗತಿಯಲ್ಲಿ ತೇರ್ಗಡೆಯಾದ ಕೇವಲ ಒಂಭತ್ತು ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಈ ಹಿನ್ನೆಲೆಯಲ್ಲಿ ಯಾವುದರೊಂದು ಡಿಗ್ರಿ ಗಳಿಸಬೇಕೆಂಬ ಅಭಿಲಾಷೆ ನನ್ನ ಬೆನ್ನು ಹತ್ತಿತ್ತು. ಆ ಸಲುವಾಗಿ ಬೆಂಗಳೂರು, ಮೈಸೂರುಗಳ ಕೆಲವು ಕಾಲೇಜುಗಳಿಂದ ಬಿ.ಎ. ಬಿ.ಎಸ್ಸಿ (ಎ.ಜಿ.) ಅರ್ಜಿ ಫಾರಂಗಳನ್ನು ತರಿಸಿಕೊಂಡೆ.

ಈ ನಡುವೆ ಹಿಂದಿನ ಎರಡು ವರ್ಷಗಳಲ್ಲಿ ನನಗೆ ವಿದ್ಯಾರ್ಥಿವೇತನ ಕೊಡಿಸಲು ಸಹಾಯ ಮಾಡಿದ್ದ ಕಡಿದಾಳ್ ಮಂಜಪ್ಪನವರಿಗೆ ಕೃತಜ್ಞತೆ ತಿಳಿಸುವ ಸಲುವಾಗಿ ಅವರ ಮನೆಗೆ ಹೋದೆ. ನಾನು ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ಮೊದಲನೆ ಪ್ರಯತ್ನದಲ್ಲೇ ತೇರ್ಗಡೆಯಾಗಿದ್ದನ್ನು ತಿಳಿದು ಸಂತಸಪಟ್ಟಂತೆ ಕಂಡರು. ಮುಂದೆ ನಾನು ಏನು ಮಾಡಬೇಕೆಂದಿರುವೆ ಎಂಬುದರ ಬಗೆಗೂ ವಿಚಾರಿಸಿದರು. ಅದಾಗಲೇ ಕೆಲವು ಡಿಗ್ರಿ ಕೋರ್ಸುಗಳ ಕಾಲೇಜುಗಳಿಂದ ಅರ್ಜಿ ಫಾರಂಗಳನ್ನು ತರಿಸಿರುವುದನ್ನು ತಿಳಿಸಿದೆ. ಅವರು ಮುಂದುವರಿದು ನಾನು ತರಗತಿಯಲ್ಲಿ ಐಚ್ಛಿಕವಾಗಿ ಆರಿಸಿ ಕೊಂಡಿದ್ದ ವಿಷಯಗಳ ಕುರಿತು ವಿಚಾರಿಸಿದರು. ಅವು ಸಿ.ಬಿ.ಜಡ್. ಎಂದರೆ ಕೆಮಿಸ್ಟ್ರಿ, ಬಾಟನಿ, ಪ್ರಾಣಿಶಾಸ್ತ್ರಗಳೆಂದು ತಿಳಿಸಿದೆ. ಅಂದರೆ ನಿನಗೆ ಮೆಡಿಕಲ್ ಪದವಿ (ಎಂ.ಬಿ.ಬಿ.ಎಸ್.) ಕಲಿಯಲು ಅವಕಾಶವಿದೆ. ಅದಕ್ಕೇಕೆ ಅರ್ಜಿಫಾರಂ ತರಿಸಿಲ್ಲ? ಎಂದು ಪ್ರಶ್ನಿಸಿದರು. ಮನೆಯವರ ಆರ್ಥಿಕ ಪರಿಸ್ಥಿತಿ ಕಷ್ಟಕರವಾಗಿರುವುದರಿಂದ ಅಂತಹ ದುಬಾರಿ ಹಾಗೂ ದೀರ್ಘ ಕಾಲಾವಧಿಯ ವಿದ್ಯಭ್ಯಾಸ ಅಸಾಧ್ಯವಾದುದೆಂದು ಅತ್ತ ಮನಸ್ಸು ಮಾಡಿಲ್ಲವೆಂದು ವಿನೀತನಾಗಿ ಹೇಳಿದೆ. ಆ ಸಮಯದಲ್ಲಿ ಅವರು ಮೊದಲೇ ಮಾತನಾಡುತ್ತಿದ್ದ ಒಬ್ಬರ ಕಡೆ ತಿರುಗಿ 'ನೋಡ್ರೀ, ನಮ್ಮ ಕಡೆಯವರು ಮೊದಲ ಪ್ರಯತ್ನದಲ್ಲಿ ತೇರ್ಗಡೆಯಾಗುವುದು ಅಪರೂಪ; ಇವನು ಯಾವ ಯಾವುದೋ ಡಿಗ್ರಿಗಳನ್ನು ಪಡೆದುಕೊಂಡು ಮತ್ತೆ ಊರಿಗೆ ಹೋಗಿ, ಗದ್ದೆ ಹೂಳುತ್ತಾನಂತೆ ! ಎಂದು ಹೇಳಿ ನಕ್ಕರು. ಮತ್ತೆ ನನ್ನ ಕಡೆ ತಿರುಗಿ ಕೂಡಲೇ ನಾನು ಮೈಸೂರು ಮೆಡಿಕಲ್ ಕಾಲೇಜಿನಿಂದ ಅರ್ಜಿಫಾರಂಗಳನ್ನು ತರಿಸಿ ಎಂ. ಬಿ. ಬಿ. ಎಸ್. ಕೋರ್ಸಿಗೆ ಅರ್ಜಿ ಹಾಕಿ ಮತ್ತೆ ಬರುವಂತೆ ಸಿಟ್ಟಿನಿಂದಲೇ ಹೇಳಿದರು. ಇಂತಹ ಯಾವುದೇ ಪರಿಸ್ಥಿತಿಗೆ ತಯಾರಾಗಿರದ ನಾನು ಕಡಿದಾಳರನ್ನು ನೋಡಲು ಬಂದದ್ದೇ ತಪ್ಪೆನಿಸಿತು. ಅಂಕಪಟ್ಟಿ ನಾನು ಸೂಚಿಸಿದ್ದ ಮೇಗರವಳ್ಳಿ ವಿಳಾಸಕ್ಕೆ ಆತನಕ ಬಂದಿರಲಿಲ್ಲ ಕಾಲೇಜಿನಲ್ಲೇ ವಿಚಾರಿಸುವ ಸಲುವಾಗಿ ಇಂಟರ್‌ಮಿಡಿಯೇಟ್ ಕಾಲೇಜಿಗೆ ಹೊರಟೆ. ಅಂಕಪಟ್ಟಿಗಳನ್ನು ವಿತರಿಸುವ ಕಾರ್ಯಭರಾಟೆಯಲ್ಲಿ ಜರುಗುತ್ತಿತ್ತು. ನನ್ನ ಸರದಿಗಾಗಿ ಹಜಾರದಲ್ಲಿ ನಿಂತು, ಇನ್ನೊಬ್ಬ ವಿದ್ಯಾರ್ಥಿ ಸಂಗಡ ಮಾತನಾಡುತ್ತಿದ್ದೆ. ಅವನಿಗೆ ನಾನು ಮೆಡಿಕಲ್ ಕಾಲೇಜಿನಿಂದ ಅರ್ಜಿಫಾರಂ ತರಿಸದಿರುವ, ಇಕ್ಕಟ್ಟಿಗೆ ಸಿಲುಕಿರುವ ಪರಿಸ್ಥಿತಿಯನ್ನು ತಿಳಿಸಿದೆ. ನಾನು ಸಿಲುಕಿರುವ ಸಂದಿಗ್ಧತೆ ಅರಿತ ಅವನು ನನ್ನ ಸಹಾಯಕ್ಕೆ ಬಂದನು. ತಾನು ಇಂಜಿನಿಯರಿಂಗ್ ಮತ್ತು ಮೆಡಿಕಲ್ ಎರಡಕ್ಕೂ ಫಾರಂಗಳನ್ನು ತರಿಸಿ ಭರ್ತಿ ಮಾಡಿಟ್ಟಿರುವುದನ್ನು ಗಮನಕ್ಕೆ ತಂದು ಮೆಡಿಕಲ್‌ಗೆ ಹೋಗದ ನಿರ್ಧಾರ ಮಾಡಿರುವುದಾಗಿಯೂ ಹೇಳಿದ; ಅಲ್ಲದೆ ಅದು ನನಗೆ

ಉಪಕಾರವಾಗುವುದಾದರೆ ಕೊಡುವುದಾಗಿಯೂ ತಿಳಿಸಿದ. ನನ್ನ ಅಂಕಪಟ್ಟಿಯನ್ನು ಮೇಗರವಳ್ಳಿಯ ವಿಳಾಸಕ್ಕೆ ಅದಾಗಲೇ ಕಳುಹಿಸಿರುವ ವಿಷಯವೂ ತಿಳಿಯಿತು. ಆ ವಿದ್ಯಾರ್ಥಿಯ ಜೊತೆ ಅವನ ಮನೆಗೆ ಹೋಗಿ ಮೆಡಿಕಲ್ ಅರ್ಜಿ ಫಾರಂ ಪಡೆದುಕೊಂಡೆ. ಆದರೆ ಅದು ಭರ್ತಿಯಾಗಿದ್ದಲ್ಲದೆ ಅದರಲ್ಲಿ ಮುದ್ರಿತ ಫಾರಂಗಳಲ್ಲದೆ. ಬೆರಳಚ್ಚು ಮಾಡಿದ ಫಾರಂ ಸ್ವೀಕರಿಸುವುದಿಲ್ಲವೆಂಬ ಸೂಚನೆಯೂ ಪ್ರಕಟವಾಗಿತ್ತು!

ಆ ಬಗೆಗೆ ಯೋಜಿಸಲು ಹೆಚ್ಚಿನ ಸಮಯವಿರಲಿಲ್ಲ. ಕೂಡಲೇ ಮುಂದಿನ ಬಸ್ಸಿನಲ್ಲಿ ಮೇಗರವಳ್ಳಿಗೆ ಧಾವಿಸಿದೆ. ಅದಾಗಲೇ ಮುಚ್ಚಿದ ಅಂಚೆ ಕಛೇರಿಯನ್ನು ತೆಗೆಸಿ ಅಂಕಪಟ್ಟಿಯಿದ್ದ ನನ್ನ ಲಕೋಟೆಯನ್ನು ಪಡೆದು ಕೊಂಡು, ಕೂಡಲೇ ತೀರ್ಥಹಳ್ಳಿಗೆ ಹೊರಟೆ. ಅಲ್ಲಿಯ ಹೈಸ್ಕೂಲಿನಲ್ಲಿ ಬೆರಳಚ್ಚುಯಂತ್ರವಿದ್ದುದು ತಿಳಿದಿತ್ತು; ಹಾಗೂ ಬೆರಳಚ್ಚುಗಾರರ ಪರಿಚಯವಿತ್ತು. ನನ್ನ ವಿನಂತಿಯನ್ನು ಮುನ್ನಿಸಿ ಅದನ್ನು ಪ್ರತಿಮಾಡಿಕೊಟ್ಟರು. ಮರುದಿನ ಬೆಳಗ್ಗೆ ಊರಿಗೆ ಹೋಗಿ ಫಾರಂಗೆ ನನ್ನ ಚಿಕ್ಕಪ್ಪನ ಹೆಬ್ಬೆಟ್ಟು ಗುರುತುಹಾಕಿಸಿ, ಎಲ್ಲಾ ಅಳವಡಿಕೆಗಳನ್ನು ಸೇರಿಸಿ ಅದೇ ದಿನ ಸಂಜೆಯ ಒಳಗೆ ಮೇಗರವಳ್ಳಿ ಅಂಚೆ ಕಛೇರಿಗೆ ತಲುಪಿಸಿದೆ.

ಮರುದಿನ ಮನೆಗೆ ಹಿಂದಿರುಗಿದ ನಾನು ಎರಡು ಮೂರು ದಿನಗಳಿಂದ ಜರುಗಿದ ಸಂಗತಿಗಳನ್ನು ವರದಿ ಮಾಡಿದೆ. ಬೇರೆಯವರಿಗೆ ಏನೆಲ್ಲಾ ಅರ್ಥವಾಯಿತೋ ತಿಳಿಯಲಿಲ್ಲ; ಆದರೆ ನನ್ನ ತಾಯಿಗೆ ಆಕಾಶವೇ ಕಳಚಿ ಬಿದ್ದಂತಾಗಿರಬೇಕು. ವೈದ್ಯನಾಗಲು ಮೆಡಿಕಲ್ ಕಾಲೇಜು ಸೇರುವಂತಾದರೆ ಸಮಷ್ಟಿ ಕುಟುಂಬದ ಮೇಲೆ ಅತಿ ಹೆಚ್ಚಿನ ಆರ್ಥಿಕ ಹೊರೆಯಾಗುತ್ತದೆ; ಅದೂ ಅಲ್ಲದೆ ನಾನು ಬಹಳ ಸಮಯ ಅವಳಿಂದ ದೂರವಿರಬೇಕಾಗುತ್ತದೆಂಬ ಸಂಕಟ ಬೇರೆ!

ಮುಂದಿನ ಎಂಟು-ಹತ್ತು ದಿನಗಳಲ್ಲಿ ಮೆಡಿಕಲ್ ಕಾಲೇಜಿನಿಂದ ಆಯ್ಕೆ ಪ್ರಕ್ರಿಯೆಯ ಸಂದರ್ಶನಕ್ಕೆ ಅಂಚೆ ಕಾರ್ಡು ಬಂದಿತು. ಸಂದರ್ಶನದ ಫಲಿತಾಂಶ ಗೊತ್ತಾದನಂತರ ಕಾಲೇಜು ಸೇರುವ ನಿರ್ಧಾರ ಮಾಡಿದರಾಯಿತು ಎಂದು ಯೋಚಿಸಿ ಮೈಸೂರಿಗೆ ಹೋಗುವ ಮೊದಲ ಹೆಜ್ಜೆಯಾಗಿ ಶಿವಮೊಗ್ಗ ತಲುಪಿದೆ. ಅಲ್ಲಿ ಕಡಿದಾಳ್ ಮಂಜಪ್ಪನವರನ್ನು ಭೇಟಿಮಾಡಿ ಮೆಡಿಕಲ್‌ಕಾಲೇಜಿನಿಂದ ಸಂದರ್ಶನದ ಕರೆ ಬಂದಿರುವುದನ್ನು ತಿಳಿಸಿದೆ. ಸಂತಸದಿಂದ ಅವರ ಮುಖ ಅರಳಿತು. ಸ್ವಲ್ಪ ಹೊತ್ತು ಕುಳ್ಳಿರಿಸಿ, ಮೆಡಿಕಲ್ ಕಾಲೇಜು ಆಯ್ಕೆ ಸಮಿತಿಯ ನಾಲ್ಕು ಸದಸ್ಯರಿಗೆ ಪ್ರತ್ಯೇಕ ಪತ್ರಗಳನ್ನು ಬರೆದು ಕೊಟ್ಟರು. ಶುಭವಾಗಲೆಂದು ಹರಿಸಿ ಬೀಳ್ಕೊಟ್ಟರು.

ಅಂದೇ ರಾತ್ರಿ ರೈಲಿನಲ್ಲಿ ಪ್ರಯಾಣ ಮಾಡಿ ಮೈಸೂರನ್ನು ತಲುಪಿದೆ, ರೈಲ್ವೇ ನಿಲ್ದಾಣದ ಹತ್ತಿರದ ಹೋಟೆಲಿನಲ್ಲಿ ಒಂದು ಕೊಠಡಿಯನ್ನು ಹಿಡಿದೆ. ಅದೇ ಕೊಠಡಿಯಲ್ಲಿ ನಮ್ಮ ಕಡೆಯವರೇ ಆದ ಪಿ.ಎಂ. ಶ್ರೀನಿವಾಸ ಎಂಬುವರು ಒಂದೆರಡು ದಿನಗಳಿಂದ ತಂಗಿದ್ದರು. ಕಲಿಕೆಯಲ್ಲಿ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಶ್ರೀನಿವಾಸ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಒಂದೆರಡೂ ಸಾರಿ ಅನುತ್ತೀರ್ಣನಾಗಿದ್ದ. ತೀರ್ಥಹಳ್ಳಿಯಲ್ಲಿದ್ದ ಸಮಯದಲ್ಲಿ ನಿಕಟಪರಿಚಯ ಹಾಗೂ ಸ್ನೇಹ ನಮ್ಮಿಬ್ಬರಲ್ಲಿತ್ತು. ಅವನೂ ಸಹ ಮೆಡಿಕಲ್ ಕಾಲೇಜಿಗೆ ಸೇರುವ ಆಕಾಂಕ್ಷೆಯಿಂದಲೇ ಬಂದವನು. ಬಹುಶಃ ಇಂಟರ್ ಮೀಡಿಯೇಟ್ ಪರೀಕ್ಷೆಯಲ್ಲಿ ಒಂದೆರಡು ಸಾರಿ ಅನುತ್ತೀರ್ಣನಾದ್ದರಿಂದ ಸಂದರ್ಶನಕ್ಕೆ ಪರಿಗಣಿತನಾಗಿರಲಿಲ್ಲವೆನಿಸುತ್ತದೆ. ವಿದ್ಯಾರ್ಥಿದೆಸೆಯಲ್ಲಿ ಸ್ವಾತಂತ್ರ್ಯ ಆಂದೋಳನದಲ್ಲಿ ಭಾಗವಹಿಸಿ ಜೈಲುವಾಸ ಮಾಡಿದ್ದ ಅವನು ಕೆಲವು ರಾಜಕಾರಣಿಗಳ ಪ್ರಭಾವದಿಂದ ಸಂದರ್ಶನ ಪಡೆದು ಕೊಳ್ಳಬಹುದೆಂಬ ನಿರೀಕ್ಷೆಯಿಂದ ಮೈಸೂರಿಗೆ ಬಂದಿದ್ದ. ಆದರೆ ಅದು ಸಾಧ್ಯವಾಗಲಿಲ್ಲ ಮೊದಲನೆ ಪ್ರಯತ್ನದಲ್ಲೇ ತೇರ್ಗಡೆಯಾಗಲು ಕನಿಷ್ಠ ಶೇ. ೫೫ ಅಂಕಗಳನ್ನುಗಳಿಸಿದ್ದ ನನಗೆ ಸಂದರ್ಶನದ ಅವಕಾಶ ಲಭಿಸಿತ್ತು! ಅಂದು ಮಧ್ಯಾಹ್ನದಿಂದಲೇ ಆಯ್ಕೆ ಸಮಿತಿಯ ಸದಸ್ಯರನ್ನು ಭೇಟಿ ಮಾಡುವುದರಲ್ಲಿ ತೊಡಗಿಸಿಕೊಂಡೆ. ಹಾಗೆ ಹೋದೆಡೆಗಳಲ್ಲೆಲ್ಲಾ ಬೆಂಗಳೂರು, ಮೈಸೂರು ಕಡೆಯ ಸೂಟು, ಬೂಟು ಧರಿಸಿದ ಅಭ್ಯರ್ಥಿಗಳೇ ಹೆಚ್ಚಾಗಿರುತ್ತಿದ್ದರು. ಕೇವಲ ಷರಟು, ಪಂಚೆ, ಚಪ್ಪಲಿ, ಧರಿಸಿದ ಹಳ್ಳಿ ಹೈದನಂತಿದ್ದ ನಾನು ಆತಂಕಕ್ಕೊಳಗಾಗುತ್ತಿದ್ದೆ. ಆಯ್ಕೆ ಸಮಿತಿಯ ಸದಸ್ಯರು ಅವರನ್ನೆಲ್ಲಾ ನೋಡಿದ ನಂತರ ನಾನು ಸ್ವಲ್ಪ ಅಂಜಿಕೆಯಿಂದ ಕಡಿದಾಳ್ ಮಂಜಪ್ಪನವರು ಕೊಟ್ಟಿದ್ದ ಲಕೋಟೆಗಳನ್ನು ನೀಡುತ್ತಿದ್ದೆ. ಮಿಕ್ಕವರಿಗೆಲ್ಲಾ ಅವರುಗಳಿಸಿದ ಅಂಕಗಳ, ಅವರ ಹಿನ್ನೆಲೆಗಳನ್ನು ವಿಚಾರಿಸುತ್ತಿದ್ದ ಸದಸ್ಯರು ಕಡಿದಾಳರ ಹೆಸರು ಹೇಳಿದಾಕ್ಷಣ ಅದನ್ನು ತೆರೆದು ಸಹಾ ನೋಡದೆ, ತಮ್ಮ ಕಿಸೆಯಲ್ಲಿಟ್ಟುಕೊಳ್ಳುತ್ತಿದ್ದರು. ಅದರೆ ಒಬ್ಬರು ಮಾತ್ರ ನಾನುಗಳಿಸಿದ್ದು ಕೇವಲ ಶೇ ೩೫ ಅಂಕ ಎಂದು ತಿಳಿದಾಗ ಇನ್ನೊಂದೈದು ಅಂಕಗಳಿಸಿದ್ದರೆ ನಿಮ್ಮಪ್ಪನ ಗಂಟೇನು ಹೋಗುತ್ತಿತ್ತೇ ಎಂದು ಗದ್ದರಿಸಿದ್ದು ಇನ್ನೂ ಜ್ಞಾಪಕವಿದೆ. ಆ ವರ್ಷ ನನ್ನ ವಿಭಾಗದಲ್ಲಿ ತೇರ್ಗಡೆಯಾದವರಲ್ಲಿ ಕೇವಲ ೯ ಜನ ಮಾತ್ರ ಉತ್ತೀರ್ಣರಾಗಿದ್ದು, ಅದರೆ ಹಿಂದಿನ ವರ್ಷ ಅದೇ ತರಗತಿಯಲ್ಲಿ ಪರೀಕ್ಷೆಗೆ ಕೂತಿದ್ದ ಸುಮಾರು ೫೦ ವಿದ್ಯಾರ್ಥಿಗಳಲ್ಲಿ ಯಾರೊಬ್ಬರು ತೇರ್ಗಡೆಯಾಗಿರಲಿಲ್ಲ ಎಂಬುದನ್ನು ಅವರ ಗಮನಕ್ಕೆ ತರಲು ಯೋಚಿಸಿದೆ. ಅಂತಹ ಮಾರುತ್ತರ ಅತಾರ್ಕಿಕ ಕಾರಣವಾಗಬಹುದೆಂದು ತೆಪ್ಪಗಾಗಿ, ತಲೆಬಾಗಿ ನಿಂತೆ!

ಒಂದೆರಡು ದಿನಗಳಲ್ಲಿ ಸಂದರ್ಶನದ ದಿನವು ಬಂತು. ಅಂತಹ ಸಂದರ್ಶನಕ್ಕೆ ಹಾಜರಾಗಲು ನನ್ನ ಹತ್ತಿರ ಪ್ಯಾಂಟು ಷರ್ಟು, ಬೂಟುಗಳಿರಲಿಲ್ಲ. ಪಿ. ಎಂ. ಶ್ರೀನಿವಾಸನೇ ಅವನಲ್ಲಿದ್ದ ಪೋಷಾಕುಗಳನ್ನು ನನಗೆ ತೊಡಿಸಿ ತಯಾರು ಮಾಡಿದ. ಅಜಾನುಬಾಹುವಾಗಿದ್ದ ಅವನ ಧಿರಿಸು, ನನಗೆ ಅದೆಷ್ಟು ಒಪ್ಪುತ್ತಿತ್ತೋ ಗೊತ್ತಿರಲಿಲ್ಲ!

ಸಂದರ್ಶನ ಸಮಯದಲ್ಲಿ ಕೆಲವರು ನನ್ನ ತೂಕ, ಎತ್ತರಗಳ ಬಗ್ಗೆ ಕುತೂಹಲಿಗಳಾಗಿದ್ದಂತೆ ತೋರಿತು. ಮಲೆನಾಡಿನ ಆಗುಂಬೆಯಲ್ಲಿ ಸುರಿಯುವ ಮಳೆ, ಬೆಳೆ ಮುಂತಾದವನ್ನು ಕುರಿತು ಪ್ರಶ್ನಿಸಿದರು. ನನ್ನ ಸಾಮಾನ್ಯ ಜ್ಞಾನ, ತಿಳುವಳಿಕೆಗಳ ಕುರಿತು ಪ್ರಶ್ನೆಗಳಾದವು. ಅದಾಗಲೆ ಮೈಸೂರು ಚಲೋ೯ಳ೭ ಚಳುವಳಿಯಲ್ಲಿ ಭಾಗವಹಿಸಿ ಸ್ವಲ್ಪ ರಾಜಕೀಯ ಪ್ರಜ್ಞೆ ಉಂಟಾಗಿದ್ದರಿಂದ ಸಲೀಸಾಗಿ ಉತ್ತರಿಸಿದೆ. ಸಂದರ್ಶನದಿಂದ ಹೊರ ಬರುವಷ್ಟರಲ್ಲೇ ಮರುದಿನವೇ ಫಲಿತಾಂಶ ಪ್ರಕಟವಾಗುತ್ತೆಂಬ ವಿಷಯ ಗೊತ್ತಾಯಿತು. ಅಂದು ಅಲ್ಲೇ ಉಳಿದುಕೊಂಡೆ. ಮರುದಿನ ಮಧ್ಯಾಹ್ನದ ಹೊತ್ತಿಗೆ ಫಲಿತಾಂಶ ಪ್ರಕಟವಾಯಿತು. ಅದರಲ್ಲಿ ನನ್ನ ಹೆಸರು ಇದ್ದದ್ದು ನನಗೆ ಸಂಪೂರ್ಣ ಆನಂದವಾಯಿತೆಂದು ಹೇಳಲಾರೆ; ಮುಂದಿನ ದಾರಿ ಅದೆಷ್ಟು ಕಠಿಣವಾಗಿತ್ತೆನ್ನುವುದರ ಅರಿವು ನನಗಿತ್ತಷ್ಟೆ!

ರಾತ್ರಿ ರೈಲಿನಲ್ಲಿ ಶಿವಮೊಗ್ಗಕ್ಕೆ ಹಿಂದಿರುಗಿದೆ. ಬೆಳಗ್ಗೆ ಕಡಿದಾಳ್ ಮಂಜಪ್ಪನವರನ್ನು ಕಂಡು ಫಲಿತಾಂಶವನ್ನು ತಿಳಿಸಿ ನನ್ನ ಕೃತಜ್ಞತೆಗಳನ್ನು ಅರ್ಪಿಸಿದೆ. ಹಸನ್ಮುಖಿಯಾಗಿ ತಮಗಾದ ಸಂತಸವನ್ನು ವ್ಯಕ್ತಪಡಿಸಿದರು. ಮುಂದೆ ನನಗಿರುವ ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಯನ್ನು ವಿವರಿಸಿ ನನ್ನ ಅಸಹಾಯಕತೆಯನ್ನು ತೋಡಿಕೊಳ್ಳಲಾರಂಭಿಸಿದೆ. ಹೇಗೋ ಇಷ್ಟಾಯಿತಲ್ಲ, ಸಧ್ಯ ಸುಮ್ಮನಿರು. ಏನಾದರೂ ತಾತ್ಕಾಲಿಕ ವ್ಯವಸ್ಥೆ ಮಾಡಿಕೊಂಡು ಮೆಡಿಕಲ್ ಕಾಲೇಜಿಗೆ ನಿಗದಿತ ಸಮಯದಲ್ಲಿ ಸೇರಿಕೊ. ಮುಂದೆ ನಿನಗೆ ಹಿಂದಿನಂತೆ ವಿದ್ಯಾರ್ಥಿವೇತನ ಹಾಗೂ ಇನ್ನಿತರ ಮೂಲಗಳಿಂದ ಸಹಾಯ ದೊರೆಯುವಂತೆ ಮಾಡೋಣ ಎಂದು ಹರಸಿ ಬೀಳ್ಕೊಟ್ಟರು.

ಅಂದು ನಾನಿದ್ದ ಪರಿಸ್ಥಿತಿಯಲ್ಲಿ ಮೆಡಿಕಲ್ ಪದವೀಧರನಾಗುವ ಕನಸನ್ನು ನಾನೆಂದು ಕಂಡಿರಲಿಲ್ಲ. ಅದು ಅಸಾಧ್ಯವೆನ್ನುವಂತಿದ್ದರೂ, ಒತ್ತಾಯಿಸಿ ಗದರಿಸಿ ಅರ್ಜಿ ಹಾಕುವ ವ್ಯವಸ್ಥೆಯನ್ನು ಅವರೇ ಮಾಡಿದ್ದು. ಅವರ ಸರಳ ನಿರ್ಮಲ ವ್ಯಕ್ತಿತ್ವ, ಆದರ್ಶ, ಪ್ರಾಮಾಣಿಕತೆ, ನಿಸ್ವಾರ್ಥ ಸೇವಾ ಮನೋಭಾವದಿಂದ ವಿಶಿಷ್ಟ ವ್ಯಕ್ತಿಯಾಗಿ ನಾಡಿನ ಎಲ್ಲೆಡೆ ಪ್ರಖ್ಯಾತರಾಗಿದ್ದರು. ಅದರಿಂದಲೇ ಅವರು ಶಿಫಾರಸು ಪತ್ರ ಕೊಟ್ಟದ್ದಾರೆಂದರೆ, ಅದನ್ನು ತೆರೆದು ಓದುವ ಅಗತ್ಯವೇ ಇರಲಿಲ್ಲ! ಅದಕ್ಕೆ

ನಾನೇ ಜ್ವಲಂತ ನಿದರ್ಶನ. ಮುಂದೆ ವಿದ್ಯಾಭ್ಯಾಸ ಮುಗಿಸುವುದು ಕೆಲಸ ಪಡೆದು ಕೊಳ್ಳುವುದೆಲ್ಲಾ ಅಷ್ಟೇನೂ ಸುಗಮವಾಗಿರಲಿಲ್ಲ. ಆದರೂ ಮಾರ್ಗದರ್ಶಕರಾದ ಪೂಜ್ಯ ಕಡಿದಾಳ್ ಮಂಜಪ್ಪ ನನ್ನ ನಡೆ, ನುಡಿ, ಕೆಲಸ ಕಾರ್ಯಗಳಲ್ಲಿ ದಾರಿದೀಪವಾಗಿದ್ದರೆಂದು ವಿನಮ್ರತೆಯಿಂದ ದಾಖಲಿಸುತ್ತಿದ್ದೇನೆ.

ನನಗೆ ಸಹಾಯ ಮಾಡಿದ ರೀತಿಯಲ್ಲೇ ನಾಡಿನ ಸಹಸ್ರಾರು ಜನರಿಗೆ ಯಾವುದೇ ತಾರತಮ್ಯವಿಲ್ಲದೆ ಸಹಾಯ ಹಸ್ತ ನೀಡಿದ ನಿದರ್ಶನಗಳಿವೆ. ಮಂಜಪ್ಪನವರು ತಮ್ಮ ಎಲ್ಲಾ ವೃತ್ತಿಗಳಿಂದ ನಿವೃತ್ತರಾದ ನಂತರ ೧೯೮೩ ರಲ್ಲಿ ಯೂರೋಪು ಇಂಗ್ಲೆಂಡ್ ದೇಶಗಳಿಗೆ ಸಂಸಾರ ಸಮೇತ ಕೆಲ ಸಮಯ ಪ್ರವಾಸ ಹೋಗಿದ್ದರು. ಲಂಡನ್ನಿನಲ್ಲಿದ್ದ ಸಮಯದಲ್ಲಿ ತೀರ್ಥಹಳ್ಳಿ ಕಡೆಯ ಡಾ॥ ಟಿ. ರಾಮಪ್ಪ ಎಂಬುವರು ಅವರನ್ನು ಹುಡುಕಿಕೊಂಡು ಬಂದು ಗೌರವ ಸೂಚಿಸಿದರಂತೆ. ಸಾಯಂಕಾಲ ಬೀಳ್ಕೊಡುವ ಸಮಯದಲ್ಲಿ ಅವರ ಕಾಲಿಗೆ ಬಿದ್ದು ಗಳಗಳನೆ ಅತ್ತರಂತೆ. ಸಂತೈಸಿ ಕಾರಣ ಕೇಳಿದಾಗ ಅನಾಥರಾಗಿದ್ದ ಅವರು ಬೆಂಗಳೂರಿನಲ್ಲಿ ವೈದ್ಯಕೀಯ ಕಲಿಯುತ್ತಿದ್ದಾಗ ಮಂಜಪ್ಪನವರು ಆಗಾಗ್ಗೆ ಹಣ ಸಹಾಯ ಮಾಡಿದ್ದು ಜ್ಞಾಪಕವಾಯಿತಂತೆ! ಅದೇ ರೀತಿ ಇಂದು ಪುರಾಣ ಕೃತಿಗಳ ವ್ಯಾಖ್ಯಾನ ಪಂಡಿತರಾಗಿ ಹೆಸರುಗಳಿಸಿರುವ ಮತ್ತೂರು ಕೃಷ್ಣಮೂರ್ತಿಗಳನ್ನು ಇಂಗ್ಲೆಂಡಿನ ಪ್ರವಾಸ ಮುಗಿಸಿ ಭಾರತಕ್ಕೆ ಹಿಂದಿರುಗುವಾಗ ಭೇಟಿಯಾಗಿದ್ದರಂತೆ. ವಿಮಾನ ಟಿಕೆಟ್ಟುಗಳಲ್ಲಿ ವ್ಯತ್ಯಯವಾಗಿದ್ದರಿಂದ ಅವರನ್ನು ನೋಡಲು ಕಡಿದಾಳರೇ ಹೋಗಿದ್ದರಂತೆ. ಅವರನ್ನು ನೋಡಿದಾಕ್ಷಣ ಕೃಷ್ಣಮೂರ್ತಿಯವರೇ ಬರಮಾಡಿಕೊಂಡರಂತೆ. ಅವರು ಶಿವಮೊಗ್ಗಾದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಪರೀಕ್ಷೆಗೆ ಶುಲ್ಕ ಕಟ್ಟಲು ದುಡ್ಡಿಲ್ಲದೆ ಪೇಚಾಡುತ್ತಿದ್ದ ಸಮಯದಲ್ಲಿ ಮಂಜಪ್ಪನವರು ಶುಲ್ಕ ನೀಡಿ ಸಹಾಯ ಮಾಡಿದ್ದನ್ನು ಕೃತಜ್ಞತಾ ಪೂರ್ವಕವಾಗಿ ನೆನಪಿಸಿಕೊಂಡರಂತೆ, ಅಷ್ಟೆಲ್ಲಾ ಉಪಕಾರ ಮಾಡಿದ್ದರೂ ಅವರು ಅದನ್ನೆಲ್ಲಾ ನೆನಪಿನಲ್ಲಿಟ್ಟುಕೊಳ್ಳುತ್ತಿರಲಿಲ್ಲ ಅವರ ಆತ್ಮ ಚರಿತ್ರೆ 'ನನಸಾಗದ ಕನಸು' ಪ್ರಕಟವಾದಾಗ ಅವರು ನನಗೆ ಡಾಕ್ಟರಾಗಲು ಸಹಾಯ ಮಾಡಿದ ಪ್ರಕರಣವನ್ನು ನೆನಪು ಮಾಡಿ ಪತ್ರ ಬರೆದಿದ್ದೆ. ಮಲೆನಾಡಿನಲ್ಲಿ ಕೆಲವರಿಗೆ ನಿಮಗಿಂತ ಹೆಚ್ಚು ಸಹಾಯ ಮಾಡಿದ್ದೇನೆ. ಅವರಲ್ಲಿ ಹಲವರು ನನ್ನನ್ನು ಮರೆತೇ ಬಿಟ್ಟಿದ್ದಾರೆ. ಎಲ್ಲೋ ಅಲ್ಲಿ ಇಲ್ಲಿ ಕೆಲವರು ನನ್ನ ಉಪಕಾರವನ್ನು ಸ್ಮರಿಸುತ್ತಾರೆ. ಅವರ ಪೈಕಿ ನೀವೂ ಒಬ್ಬರು ಎಂದು ಬರೆದಿದ್ದಾರೆ. ಕಡಿದಾಳರು ಎಂತಹ ನಿಸ್ವಾರ್ಥ, ನಿಷ್ಕಳಂಕ ವ್ಯಕ್ತಿತ್ವ. ಅಂತಹ ಇನೊಬ್ಬರನ್ನು ಕಾಣಲು ಸಾಧ್ಯವೇ?

# ಕುಟುಂಬ ಹಿತೈಷಿ

–ಜಿ.ಎ.ಜಯಾರಾಜಶೇಖರ್

ಶ್ರೀಯುತ ಕಡಿದಾಳ್ ಮಂಜಪ್ಪಗೌಡರು ನನ್ನ ತವರೂರಿನವರು. ಶಿವಮೊಗ್ಗಾದಲ್ಲಿ ನ್ಯಾಯವಾದಿಗಳಾಗಿದ್ದರು. ಅವರು ನನ್ನ ತಂದೆ ಶ್ರೀ ಜಿ.ಎಸ್.ಮರುಳಯ್ಯನವರ ಆತ್ಮೀಯರೂ ಆಗಿದ್ದರು. ನನ್ನ ತಂದೆಯ ಅಡಿಕೆ ಮಂಡಿಯ ಪಕ್ಕದಲ್ಲಿದ್ದ ಕಟ್ಟಡದ ಮಹಡಿಯ ಮೇಲೆ ಲಾಯರ್ ಮಂಜಪ್ಪಗೌಡರ ಆಫೀಸು, ಅವರೆಂದೂ ಜಾತಿ ಸೂಚಕವಾದ "ಗೌಡ" ಎಂಬುದನ್ನು ತಮ್ಮ ಹೆಸರಿನೊಂದಿಗೆ ಸೇರಿಸಿ ಹೇಳಿದ್ದು ನನಗೆ ನೆನಪಿಲ್ಲ. ನನ್ನ ತಂದೆಯ ವ್ಯವಹಾರಕ್ಕೆ ಅವರೇ ಲಾಯರ್.

ನಾನು ಎಳೆಯ ಹುಡುಗಿಯಾಗಿದ್ದಾಗ ಮನೆಗೆ ಹತ್ತಿರದಲ್ಲೇ ಇದ್ದ ನಮ್ಮ ಅಡಿಕೆ ಮಂಡಿಗೆ ಸಮಯ ಸಿಕ್ಕಾಗಲೆಲ್ಲ ಹೋಗುತ್ತಿದ್ದೆ. ಅಲ್ಲಿ ನಮ್ಮ ತಂದೆ, ತಮ್ಮ ಕೆಲಸದಲ್ಲಿದ್ದರೆ, ನಾನು ಒಳಗೆ ಅಂಗಳದಲ್ಲಿ ಅಡಿಕೆ ಆರಿಸುವ ಕಡೆ ಹೋಗುತ್ತಿದ್ದೆ. ಅಲ್ಲಿ ಅಡಿಕೆ ಆರಿಸುವ ಸುಮಾರು ಮೂವತ್ತು ನಲವತ್ತು ಜನ ಹೆಂಗಸರು ಹಾಡುವ ಹಾಡುಗಳು, ಹೇಳುವ ಕತೆ, ಒಗಟು, ಗಾದೆಗಳು ಎಳೆಯರಾದ ನಮ್ಮನ್ನು ತುಂಬಾ ಆಕರ್ಷಿಸುತ್ತಿದ್ದವು, ಮಂಡಿಗೆ ಹೋದಾಗೊಮ್ಮೆ ಮಂಜಪ್ಪಗೌಡರ ಆಫೀಸಿಗೆ ನನ್ನ ಭೇಟಿ!

ಮರದ ಮಹಡಿ ಮೆಟ್ಟಿಲುಗಳನ್ನು ಹತ್ತಿ ಒಳಗೆ ಕಾಲಿರಿಸುವಾಗಲೇ " ಹೋ ನೀನೇ ಬಂದೆ ಅಂತ ಗೊತ್ತಾಯ್ತು ನೋಡಕ್ಕ" ಎಂದು ಮಂಜಪ್ಪಗೌಡರು ನಗುವರು. ಅಲ್ಲಿರುತ್ತಿದ್ದ ಪೇಪರ್ ರಾಶಿಯಿಂದ ಕಾರ್ಬನ್ ಆರಿಸಿ, ಸಂಗ್ರಹಿಸುವುದು ನನ್ನ ಕೆಲಸ. ಅದನ್ನಿಟ್ಟು ಮೇಲಿನ ಕಾಗದದ ಮೇಲೆ ಬರೆದರೆ ಕೆಳಗಿನ ಕಾಗದದ ಮೇಲೂ ಪಡಿಯಚ್ಚು ಮೂಡುತ್ತಿದ್ದುದು ನನಗೆ ಸೋಜಿಗ ತರುತ್ತಿತ್ತು. ಈಗಿನ ಮಕ್ಕಳಂತೆ ಹುಟ್ಟುವಾಗಲೇ ಎಲ್ಲವೂ ನಮಗೆ ತಿಳಿದಿರುತ್ತಿರಲಿಲ್ಲ. ಎಲ್ಲ ಹೊಸ ವಿಷಯಕ್ಕೆ ಬೆರಗು, ಕುತೂಹಲ.

ಹೀಗೆ ಪೇಪರ್‌ಗಳನ್ನು ಸ್ಥಳಾಂತರ ಮಾಡುತ್ತಿದ್ದುದು ಅಲ್ಲಿಯ ಗುಮಾಸ್ತರಾಗಿದ್ದ ಶಾಮಣ್ಣನವರಿಗೆ ಸ್ವಲ್ಪ ನೋವು ತರುತ್ತಿತ್ತು. ಅಲ್ಲೊಂದಿಷ್ಟು ತರಲೆ ಮಾಡಿ ಅವರ ಕೆಲಸಗಳಿಗೊಂದಿಷ್ಟು ತೊಂದರೆ ಕೊಟ್ಟ ಮೇಲೆಯೇ ಅಲ್ಲಿಂದ ನನ್ನ ನಿರ್ಗಮನ.

ಆಗಿನ ಕಾಲದಲ್ಲಿ ನಮ್ಮ ಮನೆಗಳಲ್ಲಿನ್ನೂ ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಅಷ್ಟು ಗಮನ ಕೊಡುತ್ತಿರಲಿಲ್ಲ. ನಮ್ಮ ತಂದೆಯೇ ತಮ್ಮ ಮೊದಲ ಮಗಳಾದ ನನ್ನನ್ನು ಮೊಟ್ಟಮೊದಲು ಹೈಸ್ಕೂಲಿಗೆ ಕಳುಹಿಸಿದ್ದು. ನಮ್ಮ ಬಂಧುಗಳಲ್ಲಿ ನನ್ನ ಸಮವಯಸ್ಕ ಹೆಣ್ಣುಮಕ್ಕಳು ಅಮ್ಮನ ಬಾಣಂತನ ಅಕ್ಕನ ಮಕ್ಕಳನ್ನು ನೋಡಿಕೊಳ್ಳಲು ಅವರ ಮನೆಗೆ ಹೋಗಿರುವುದು ಮುಂತಾಗಿ ಕಾಲಕಳೆಯುತ್ತಿದ್ದರು. ನನ್ನ ತಂದೆಗೆ ವೈಚಾರಿಕ ಮನೋಭಾವ, ಹೆಣ್ಣುಮಕ್ಕಳನ್ನೂ ಪ್ರಗತಿ ಪಥದತ್ತ ಕೊಂಡೊಯ್ಯಬೇಕೆಂಬ ಹಂಬಲವಿದ್ದುದರಿಂದ, ನನಗೆ ಆ ಕಾಲದಲ್ಲಿಯೂ ಇಂತಹ ಸದವಕಾಶ ಸಿಕ್ಕಿ ವಿದ್ಯಾಭ್ಯಾಸ ಮಾಡುವುದು ಸಾಧ್ಯವಾಗಿತ್ತು. ಕೇವಲ ವೇಶ್ಯೆಯರ ಮನೆಯ ಹೆಣ್ಣುಮಕ್ಕಳು ಮಾತ್ರ ಕಲಿಯುವುದು ಎಂಬಂತಿದ್ದ ಶಾಸ್ತ್ರೀಯ ಸಂಗೀತಪಾಠ ನಾನೂ ಕಲಿಯಲು ಏರ್ಪಡಿಸಿದ್ದರು.

ಹೈಸ್ಕೂಲು ೨ನೇ ತರಗತಿ ಮುಗಿದಿತ್ತು. ಎಸ್.ಎಸ್.ಎಲ್.ಸಿ. ತರಗತಿಗೆ ಹೋಗುವ ವೇಳೆಗೆ ನನ್ನ ವಿದ್ಯಾಭ್ಯಾಸ ನಿಂತುಹೋಯ್ತು. ಕಾರಣ ವಯಸ್ಸಿಗೆ ಬಂದದ್ದು! ಎಸ್.ಎಸ್.ಎಲ್.ಸಿ.ಯ ತರಗತಿಗಳು ಪ್ರಾರಂಭವಾಗಿ ಒಂದು ತಿಂಗಳ ಮೇಲೆ ಆಗಿಹೋಗಿತ್ತು.

ಆಗ ಒಂದು ದಿನ ಮಧ್ಯಾಹ್ನದ ಊಟಕ್ಕೆ ನಮ್ಮ ತಂದೆ ಬರುವಾಗ ಶ್ರೀ ಮಂಜಪ್ಪಗೌಡರನ್ನೂ ಜೊತೆಗೆ ಕರೆತಂದರು. ಅಂದು ಅವರ ಪತ್ನಿ ಶ್ರೀಮತಿ ಲಕ್ಷ್ಮೀದೇವಿಯವರು ಊರಿನಲ್ಲಿರಲಿಲ್ಲ. ಅವರಿಗೆ ಊಟಕ್ಕೆ ಬಡಿಸಲು ನಾನು ಹೋದೆ. ನನ್ನನ್ನು ನೋಡಿದವರೇ "ಏನಕ್ಕಾ ಸ್ಕೂಲಿಲ್ಲವಾ ಇವತ್ತು" ಎಂದರು. ನಾನು ದುಃಖದಿಂದ "ನನಗೆ ಸ್ಕೂಲು ಬಿಡಿಸಿದರು" ಎಂದೆ. ಅವರು ಸ್ಕೂಲು ಬಿಡಿಸಿದ ಕಾರಣ ಕೇಳಿ ತುಂಬಾ ಕೋಪಗೊಂಡು, "ಏನ್ರಿ ಮರುಳಯ್ಯನವರೇ, ಈ ಕಾಲದಲ್ಲೂ ಈ ನೆಪದಿಂದ ಹುಡುಗಿಯ ವಿದ್ಯಾಭ್ಯಾಸ ನಿಲ್ಲಿಸುವುದೇ? ಛೇ, ಛೇ, ಸರಿಯಲ್ಲ ಇದು" ಎಂದರು.

ನಮ್ಮ ತಂದೆ "ಏನು ಮಾಡುವುದು, ಹುಡುಗಿ ದೊಡ್ಡವಳಾದ ಮೇಲೂ ಸ್ಕೂಲಿಗೆ ಕಳುಹಿಸಿದರೆ ನಮ್ಮವರೆಲ್ಲಾ ಆಡಿಕೊಂಡು ನಕ್ಕು ಆಕ್ಷೇಪಿಸುತ್ತಾರೆ." ಎಂದರು. ಅವರಿಗೆ ಮತ್ತೂ ಕೋಪ ಬಂದು "ಯಾರ ಆಕ್ಷೇಪಣೆಗೆ ಯಾಕೆ ಕಿವಿಗೊಡಬೇಕು? ನಮ್ಮ ಹುಡುಗಿಯ ಭವಿಷ್ಯ ನಮಗೆ ಮುಖ್ಯ. ಇಂದು ನಿಮ್ಮ ಮಗಳನ್ನು ಸ್ಕೂಲಿಗೆ ಕಳಿಸಿ; ಆಕ್ಷೇಪಿಸಿದವರೇ ನಾಳೆ ನಿಮ್ಮನ್ನು ಅನುಸರಿಸಿ ತಮ್ಮ ಮಕ್ಕಳನ್ನೂ

ಕಳಿಸುತ್ತಾರೆ.ಮೊದಲು ಅವಳನ್ನು ಸ್ಕೂಲಿಗೆ ಕಳಿಸುವ ಏರ್ಪಾಡು ಮಾಡಿ" ಎಂದರು. ನಮ್ಮ ತಂದೆ "ಆಗಲಿ ನೋಡೋಣ" ಎಂದರೆ, ಗೌಡರು "ಅವಳನ್ನು ಸ್ಕೂಲಿಗೆ ಕಳಿಸುವೆನೆಂದು ಒಪ್ಪುವ ತನಕ ನಾನು ಊಟ ಮಾಡುವುದಿಲ್ಲ" ಎಂದು ಕುಳಿತರು! ಬೇರೆ ಮಾತಿಲ್ಲದೆ ನಮ್ಮ ತಂದೆ ಒಪ್ಪಿಕೊಂಡರು. ಅವರಿಗೇನು ಅದು ಅಪ್ರಿಯ ವಿಷಯವೂ ಆಗಿರಲಿಲ್ಲ. ಸಂಪ್ರದಾಯ ಮುರಿದು ಮುಂದುವರಿಯಲು ಹಿಂದೇಟು ಹಾಕಿದ್ದರು ಅಷ್ಟೆ. ಮರುದಿನದಿಂದಲೇ ಶಾಲೆಗೆ ಹೋದೆ. ಎಸ್.ಎಸ್.ಎಲ್.ಸಿ. ಪಾಸು ಮಾಡಿದೆ. ಆಗಿನ ಕಾಲಕ್ಕೆ ಹೆಣ್ಣಿಗೆ ಅದೇ ದೊಡ್ಡ ವಿದ್ಯೆ. ಮೊಮ್ಮಗಳು ಹುಟ್ಟಿ "ಅಜ್ಜಿ" ಅನ್ನಿಸಿಕೊಂಡ ಮೇಲೆ ನನ್ನ ಳಲನೇ ವಯಸ್ಸಿನಲ್ಲಿ ಎಂ.ಎ. ಮಾಡಿದೆ. ಆ ಕತೆ ಬೇರೆ!

ಶಿವಮೊಗ್ಗಾದಲ್ಲಿ ಆಗ ತಾನೇ ದೇಶಿಯ ವಿದ್ಯಾಶಾಲೆ ಪ್ರಾರಂಭವಾಗಿತ್ತು. ಈಗ ಅದು ಬೃಹತ್ತಾದ ವಿದ್ಯಾಸಂಸ್ಥೆಯಾಗಿ ಪ್ರಗತಿ ಸಾಧಿಸಿದೆ. ನಾನು ಆಗ ಆ ಶಾಲೆಯ ವಿದ್ಯಾರ್ಥಿನಿ. ನಾನು ಲೋಯರ್ ಸೆಕೆಂಡರಿ ಕಟ್ಟಿದ ವರ್ಷ. ಶಾಲೆಯ ವಾರ್ಷಿಕೋತ್ಸವ ಸಮಾರಂಭ ಶ್ರೀ ಕಡಿದಾಳ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಸಾರಿಯ ಸ್ಪರ್ಧೆಗಳಲ್ಲಿ ನನಗೆ ಅನೇಕ ಬಹುಮಾನಗಳು ಬಂದಿದ್ದುವು. ನಾನು ಯಾವತ್ತೂ ಆಟಗಳಲ್ಲಿ ಹಿಂದು. ಆದರೆ ಬುದ್ದಿವಂತಿಕೆಯ ಪರೀಕ್ಷೆ, ನೆನಪಿನ ಪರೀಕ್ಷೆ, ಭಾವಗೀತೆಯ ಸ್ಪರ್ಧೆ ಮುಂತಾದವುಗಳಲ್ಲೆಲ್ಲಾ ಮೊದಲ ಬಹುಮಾನಗಳು ಬರುತ್ತಿದ್ದವು. ಇವುಗಳ ಜೊತೆಗೆ ಗಾಂಧೀಜಿಯ ಬಗೆಗೆ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಿ ಇಡೀ ಶಾಲೆಗೆ ಏಕೈಕ ಬಹುಮಾನ ಇಟ್ಟಿದ್ದರು. ಅದು ನನ್ನ ಪಾಲಿಗೆ ಬಂತು! (ತೀರ್ಪುಗಾರರು "ಈ ಪುಟ್ಟ ಹುಡುಗಿ ತುಂಬಾ ಸರಳ ಸುಂದರವಾಗಿ ಪ್ರಬಂಧ ಬರೆದಿದ್ದಾಳೆ. ಒಳ್ಳೆಯ ಸೊಗಸಾದ ಶೈಲಿ. ಮುಂದೆ ಬರವಣಿಗೆಯನ್ನು ರೂಢಿಸಿಕೊಂಡರೆ ನಿಜವಾಗಿಯೂ ಒಳ್ಳೆಯ ಬರಹಗಾರ್ತಿಯಾಗುತ್ತಾಳೆ" ಎಂದಿದ್ದರು. ಮುಂದೆ ದೊಡ್ಡ ಸಂಸಾರಕ್ಕೆ ಮದುವೆಯಾಗಿ ಬಂದು ಮುರುಟಿ ಹೋಗಿದ್ದ ಸಂಗೀತ, ಸಾಹಿತ್ಯದ ಬಳ್ಳಿ ಆಘಾತಗಳನ್ನು ನಿವಾರಿಸಿಕೊಂಡು ಪುನಃ ಪಲ್ಲವಿಸಬೇಕಾದರೆ ಅನೇಕ ಕಾಲ ಬೇಕಾಯ್ತು.)

ಈಗ ಶಾಲೆಗಳಲ್ಲಿ ಒಬ್ಬ ವಿದ್ಯಾರ್ಥಿಗೆ ಹತ್ತು ಬಹುಮಾನಗಳು ಬಂದರೂ ಒಂದೇ ಲಿಸ್ಟ್‌ನಲ್ಲಿ ಅಷ್ಟೂ ಬಹುಮಾನಗಳ ವಿವರವನ್ನು ಓದಿ ಹೇಳಿ, ಪ್ರೈಜ್ ಮಾತ್ರ ಒಂದೇ ಬಾರಿ ಕೊಡುವುದನ್ನು ನೋಡಿದ್ದೇನೆ. ಸರ್ಟಿಫಿಕೇಟ್‌ಗಳನ್ನು ಮಾತ್ರ ಆ ಸಂಖ್ಯೆಗೆ ತಕ್ಕುದಾಗಿ ಕೊಡುತ್ತಾರೆ. ಆಗ ಹಾಗಿರಲಿಲ್ಲ. ಒಂದೊಂದು ಸ್ಪರ್ಧೆಗೂ ಒಂದೊಂದು ಪ್ರೈಜ್ ಕೊಡುತ್ತಿದ್ದರು.

ನಾನು ನನಗೆ ಬಂದ ಬಹುಮಾನಗಳನ್ನು ತೆಗೆದುಕೊಳ್ಳಲು ಆರೇಳು ಬಾರಿ ವೇದಿಕೆ ಹತ್ತಿ ಇಳಿದು ಸರ್ಕಸ್ ಮಾಡಿದ ನಂತರ, ಇಡೀ ಶಾಲೆಗೆ ಇರಿಸಿದ್ದ ಪ್ರಬಂಧ ಸ್ಪರ್ಧೆಯ ಏಕೈಕ ಬಹುಮಾನವನ್ನು ತೆಗೆದುಕೊಳ್ಳಲು, ಸೇರಿದವರೆಲ್ಲರ ಚಪ್ಪಾಳೆಗಳ ಸದ್ದಿನೊಂದಿಗೆ ವೇದಿಕೆ ಏರಿದೆ. ಅದೊಂದು ಗೌರವಾನ್ವಿತ ಬಹುಮಾನ.

ವೇದಿಕೆಯ ಮೇಲೆ ಹೋದಾಗ ಕೈತುಂಬಾ ಬಹುಮಾನದ ಬೆಳ್ಳಿ ಕಪ್‌ಗಳು, ಪುಸ್ತಕಗಳು. ಅಧ್ಯಕ್ಷತೆ ವಹಿಸಿ ಬಹುಮಾನ ವಿನಿಯೋಗ ಮಾಡುತ್ತಿದ್ದ ಮಂಜಪ್ಪನವರಿಗೆ ಸಂತೋಷವೋ ಸಂತೋಷ. "ಪ್ರೈಜ್ ಸಾಕೇನೇ ಅಕ್ಕಾ, ನಿನ್ನ ಕೈಲಿ ಮನೆತನಕ, ಬೀಳಿಸಿಕೊಳ್ಳದೆ ಹೊತ್ತು ಕೊಂಡು ಹೋಗಲು ಆಗುತ್ತೋ ಅಥವಾ ಹೊತ್ತುಕೊಂಡು ನಿನ್ನ ಹಿಂದೆ ನಾನು ಬರಬೇಕೋ" ಎಂದು ತಮಾಷೆ ಮಾಡಿದರು.

ಅವರ ಪತ್ನಿ ಶ್ರೀಮತಿ ಲಕ್ಷ್ಮೀದೇವಿ. ಅದ್ಯಾರು ಅವರಿಗೆ ಅನ್ವರ್ಥವಾದ, ಸಾರ್ಥಕನಾಮವನ್ನಿಟ್ಟರೋ ಕಾಣೆ. ಪ್ರಮಾಣಬದ್ಧ ಅವಯವ, ತೀಡಿ ತಿದ್ದಿದಂತಹ ಮೂಗು, ಹೊಳಪಾದ ಕಣ್ಣುಗಳು, ಮಾಟವಾದ ಬಾಯಿ, ಗುಂಗುರು ಕೂದಲು, ಗುಲಾಬಿಯ ಮೈಬಣ್ಣ – ಒಟ್ಟಿನಲ್ಲಿ ಮತ್ತೆ ಮತ್ತೆ ನೋಡಬೇಕೆನಿಸುವಂತಹ ಅತ್ಯಂತ ಅಪರೂಪದ ಚೆಲುವೆ, ಮುಂದೆ ಅವರೇ "ಮಲ್ಲಿಕಾ" ಎನ್ನುವ ಕಾವ್ಯನಾಮದಿಂದ ಹಲವಾರು ಗ್ರಂಥಗಳನ್ನು ರಚಿಸಿ, ಕನ್ನಡದ ಸುಪ್ರಸಿದ್ಧ ಲೇಖಕಿಯರಲ್ಲಿ ಒಬ್ಬರೆನ್ನಿಸಿಕೊಂಡಿದ್ದಾರೆ.

ಭಾರತದೇಶಕ್ಕೆ ಸ್ವಾತಂತ್ರ್ಯ ಬಂತು. ನಮ್ಮ ಶ್ರೀ ಮಂಜಪ್ಪನವರು ಮಂತ್ರಿಗಳಾದರು; ಬೆಂಗಳೂರಿಗೇ ವಾಸಿಸಲು ಬಂದರು. ನಾನೂ ಮದುವೆಯಾಗಿ ಬೆಂಗಳೂರಿಗೆ ಅತ್ತೆ ಮನೆಗೆ ಬಂದೆ. ನಮ್ಮ ತಂದೆ ಬೆಂಗಳೂರಿಗೆ ಬಂದಾಗೊಮ್ಮೆ ಕಡಿದಾಳ್ ಅವರನ್ನು ಭೇಟಿಯಾಗಿ ಬರುತ್ತಿದ್ದರು. ಒಮ್ಮೆ ನನ್ನನ್ನು ನೋಡಲೆಂದೇ ಮಂಜಪ್ಪನವರು ನಮ್ಮ ಅತ್ತೆ ಮನೆಗೆ ಬಂದರು. ಅವತ್ತು ನಮ್ಮ ಮನೆಯಲ್ಲಿ ಮಂತ್ರಿಗಳೊಬ್ಬರು ಬರುತ್ತಾರೆಂದು ಸಂಭ್ರಮ. ಆದರೆ ಅವರು ಮಂತ್ರಿಗಳಂತೆ ಆಡಂಬರದಿಂದ ಬರಲಿಲ್ಲ; ಅದೇ ವಾತ್ಸಲ್ಯಮಯಿ, ಕುಟುಂಬ ಹಿತೈಷಿ ಮಂಜಪ್ಪಗೌಡರು ಬಂದರು. ನನ್ನನ್ನು ಕಂಡೊಡನೆ ಹಿಂದಿನ ಪದ್ಧತಿಯಂತೆ ಕಿವಿ ಹಿಂಡಿ "ಏನಕ್ಕಾ ಚೆನ್ನಾಗಿದ್ದೀಯಾ?" ಎಂದರು. ಆತಿಥ್ಯ ಸ್ವೀಕರಿಸಿ, ಹೊರಡುವಾಗ "ಬೆಂಗಳೂರು ಏನೆನ್ನುಸುತ್ತೆ? ಅತ್ತೆ ಮನೆಯಲ್ಲಿ ಸುಖವಾಗಿದ್ದೀಯಾ?" ಎಂದು ಕಳಕಳಿಯಿಂದ ವಿಚಾರಿಸಿದರು.

ನಮ್ಮ ಯಜಮಾನರು ಸ್ಯಾನಿಟೋರಿಯಂನಲ್ಲಿ ಸೂಪರಿನ್‌ಟೆನ್‌ಡೆಂಟ್ ಆಗಿದ್ದರು. ಅವರಿಗೆ ಸರ್ಕಾರದಲ್ಲಿ ಆಗಿದ್ದ ಅನ್ಯಾಯವನ್ನು ತಮ್ಮ ಮಿತಿಯಲ್ಲಿ ಸರಿಪಡಿಸಿದರು. ಮುಂದೆ ಅವರು ಕೆಲವೇ ಕಾಲ ಮುಖ್ಯಮಂತ್ರಿಗಳಾಗಿದ್ದಾಗ ನಾವು ಬಳ್ಳಾರಿಯಲ್ಲಿದ್ದೆವು. ನಮ್ಮವರು ಆಗ ಬಳ್ಳಾರಿಯ ಸ್ಯಾನಿಟೋರಿಯಂ ಸೂಪರಿಂಟೆಂಡೆಂಟ್ ಆಗಿದ್ದರು. ಅವರು ಬಳ್ಳಾರಿಗೆ ಬಂದಿರುವುದು ಗೊತ್ತಾದ ಮೇಲೆ ಅವರನ್ನು ನೋಡಲೆಂದು, ಅವರು ಇಳಿದುಕೊಂಡಿದ್ದ ಕಡೆ ಹೋದೆವು. ಆಗ ನನ್ನ ಮೊದಲ ಮಗ ಒಂದು ವರ್ಷದವನು. ನಾವು ಸಂದರ್ಶಕರ ಕೊಠಡಿಯಿಂದ ನಮ್ಮವರ ವಿಸಿಟಿಂಗ್ ಕಾರ್ಡ್ ಕಳುಹಿಸಿದೆವು. ಇದ್ದ ಜನರನ್ನು ಅಲ್ಲಿ ಕೂರಿಸಿ, ನಾವಿದ್ದಲ್ಲಿಗೆ ಧಾವಿಸಿ ಬಂದರು. ನಮ್ಮ ಮಗುವನ್ನೆತ್ತಿಕೊಂಡು ಮುದ್ದಿಸುತ್ತಾ "ನೀನೇ ಮಗು, ನಿನಗೊಂದು ಮಗುವೇನಕ್ಕಾ! ನೀನು ಬೆಳೆದು ದೊಡ್ಡವಳಾಗಿದ್ದೀಯ ಎಂದು ನನಗನ್ನಿಸುವುದೇ ಇಲ್ಲ" ಎಂದರು.

ಅವರೂ ಮುಂದೆ ಕೆಲವು ಪುಸ್ತಕಗಳನ್ನು ಬರೆದರು. ಪುಸ್ತಕಗಳನ್ನು ತಮ್ಮ ಹಸ್ತಾಕ್ಷರದೊಂದಿಗೆ ನನಗೆ ಕೊಟ್ಟು "ನಿನಗೇನನ್ನಿಸುತ್ತೆ ಹೇಳು" ಎಂದು ಕೇಳಿದರು ಸರಳಮನದ ಆ ರಾಜಕಾರಣಿ.

ನಾನೂ ನಮ್ಮವರೂ ಆಗಾಗ ಅವರ ಮನೆಗೆ ಹೋಗುತ್ತಿದ್ದುದ್ದುಂಟು. ಅವರೂ ತಮ್ಮ ಮಾವನವರ ಚಿಕಿತ್ಸೆಗಾಗಿ ನಮ್ಮ ಮನೆಗೆ ಅವರನ್ನು ಕರೆದುಕೊಂಡು ಬರುತ್ತಿದ್ದುದುಂಟು. ಅವರಿರುವತನಕ ಅದೇ ಪ್ರೀತಿ, ಮಮತೆ, ಅದೇ ವಾತ್ಸಲ್ಯ. ನನಗೆ ಐದು ಜನ ಮಕ್ಕಳು, ಏಳು ಜನ ಮೊಮ್ಮಕ್ಕಳು. ಆಗಲೂ ಕಂಡಾಗೊಮ್ಮೆ ಕಿವಿ ಹಿಂಡಿ ನಮ್ಮ ಮಕ್ಕಳಕಡೆ ತಿರುಗಿ, "ನಿಮ್ಮಮ್ಮ ತುಂಬಾ ತುಂಟತನ ಮಾಡುತ್ತಿದ್ದಳು. ನನ್ನ ಆಫೀಸಿಗೆ ಬಂದು ಗಲಾಟೆ ಎಬ್ಬಿಸುತ್ತಿದ್ದಳು" ಎಂದು ನಗುತ್ತಿದ್ದರು. ನನ್ನ ತಂದೆ ತೀರಿಕೊಂಡ ಸಂದರ್ಭದಲ್ಲಿ ತಮ್ಮ ಪತ್ನಿಯೊಂದಿಗೆ ಶಿವಮೊಗ್ಗಾಕ್ಕೆ ಬಂದು ನಮ್ಮ ತಾಯಿಯನ್ನು ಸಂತೈಸಿದರು. ನಾನು ಅವರನ್ನು ಕಂಡೊಡನೆ ಗಳಗಳನೆ ಅಳತೊಡಗಿದೆ. ಆತ್ಮೀಯರನ್ನು ಕಂಡಾಗ ದುಃಖ ಉಕ್ಕುತ್ತೆ. ತಮ್ಮ ಮಾತುಗಳಿಂದ ತಲೆದಡವಿ ಸಾಂತ್ವನ ನೀಡಿದರು. ಅನಂತರ ಕಂಡಾಗೊಮ್ಮೆ ನನ್ನ ತಂದೆಯ ಸಾವಿನಿಂದ ಮನೆಯ ಸ್ಥಿತಿಗೇನೂ ಧಕ್ಕೆ ಬಂದಿಲ್ಲವೇ ಎಂದು ಆತಂಕದಿಂದ ವಿಚಾರಿಸುತ್ತಿದ್ದರು.

ರಾಜ್ಯದ ಮುಖ್ಯಮಂತ್ರಿ, ಮಂತ್ರಿಗಳಾಗಿ ನಿವೃತ್ತರಾದ ಮೇಲೂ ಜೀವನೋಪಾಯಕ್ಕಾಗಿ ಇಳಿವಯಸ್ಸಿನಲ್ಲಿಯೂ ವಕೀಲಿವೃತ್ತಿ ಮಾಡಿದರು,

ಶ್ರೀ ಮಂಜಪ್ಪನವರಂತೆ ತತ್ವಕ್ಕಾಗಿ ಛಲದಿಂದ ಬಾಳಿದ ನಿಷ್ಪೃಹ, ಪ್ರಾಮಾಣಿಕ ವ್ಯಕ್ತಿಯನ್ನು ಕೇವಲ ಲಂಚಪ್ರಪಂಚದಲ್ಲಿಯೇ ಮುಳುಗಿ, ಮಾನವತೆಯನ್ನೇ ಕಳೆದುಕೊಂಡು, ಸ್ವಾರ್ಥಕ್ಕಾಗಿ ದೇಶವನ್ನೇ ಅಧೋಗತಿಗಿಳಿಸುತ್ತಿರುವ ಇಂದಿನ ಬಹುತೇಕ ರಾಜಕಾರಣಿಗಳಲ್ಲಿ ಎಲ್ಲಿಂದ ಹುಡುಕಿ ತರುವುದು? ಅವರಂತಹ ಜನರ ಜೀವನ ಮೌಲ್ಯಗಳೇ ಬೇರೆ. ಕಡಿದಾಳ್ ಮಂಜಪ್ಪನವರು ನಮ್ಮ ಹೃದಯಕ್ಕೆ ಹತ್ತಿರದವರು; ನನ್ನ ತವರೂರಿನವರು. ಇದು ನನಗೆ ಹೆಮ್ಮೆ.

# ಕತ್ತಲೆಯಲ್ಲಿನ ಕೈ ದೀವಿಗೆ

–ಬಿ.ಎಸ್.ವಿಶ್ವನಾಥನ್

ಸರಳ ಜೀವನ, ಸಾತ್ವಿಕ ಮನೋಭಾವ, ಅಬಲರ ಬಗ್ಗೆ ಅನುಕಂಪ, ನಿಸ್ವಾರ್ಥ ಮತ್ತು ಪ್ರಾಮಾಣಿಕ ಗುಣಗಳನ್ನು ಮೈಗೂಡಿಸಿಕೊಂಡು ಎಂಟು ದಶಕಗಳಿಗೂ ಹೆಚ್ಚುಕಾಲ ತುಂಬು ಜೀವನ ನಡೆಸಿದ ಕಡಿದಾಳ ಮಂಜಪ್ಪನವರ ಬಗ್ಗೆ ಅಪಾರ ಗೌರವ, ಅಭಿಮಾನ ಇರಿಸಿಕೊಂಡಿರುವವರಲ್ಲಿ ನಾನೂ ಒಬ್ಬ.

ಕಡಿದಾಳರು ನನಗೆ ಹತ್ತಿರದ ಬಂಧು. ನನ್ನ ತಾಯಿಯ ಸೋದರ ಸಂಬಂಧಿ. ಚಿಕ್ಕ ವಯಸ್ಸಿನಿಂದಲೂ ಅವರ ನಿಕಟ ಸಂಪರ್ಕ ನನಗಿದ್ದು, ಅವರ ಅಪ್ರತಿಮ ಪ್ರಭಾವ ನನ್ನ ಮೇಲಾಗಿರುವುದುಂಟು.

ಸಾಮಾನ್ಯ ರೈತ ಕುಟುಂಬದಿಂದ ಬಂದ ಕಡಿದಾಳರು ಶೈಕ್ಷಣಿಕವಾಗಿ ಪ್ರತಿಭಾನ್ವಿತರು, ರಾಜಕೀಯದಲ್ಲಿ ಮುತ್ಸದ್ಧಿ, ಮಾನವೀಯತೆ ಅವರ ಸಹಜ ಗುಣ. ಸ್ವಾತಂತ್ರ್ಯ ಸಮರವನ್ನು ಕಂಡ ಅವರು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದವರು. ನಿಷ್ಕಪಟ ಮನೋಭಾವದಲ್ಲಿ ನಂಬಿಕೆಯನ್ನಿರಿಸಿಕೊಂಡಿದ್ದರು. ರಾಜಕೀಯ ಅವರ ಆಕಸ್ಮಿಕ ಆಯ್ಕೆಯಷ್ಟೆ. ಕೊನೆ ದಿನಗಳಲ್ಲಿ ರಾಜಕೀಯದ ಬಗ್ಗೆ ಅವರು ಅಸಹ್ಯಪಟ್ಟು ಕೊಂಡಿದ್ದುದನ್ನು ಗಮನಿಸಬಹುದಾಗಿತ್ತು.

ರೈತ ಕುಟುಂಬದಿಂದ ಬಂದರಾಗಿದ್ದರಿಂದ ರೈತರ ಬಗ್ಗೆ ಅಭಿಮಾನ, ಅವರ ಸಂಕಷ್ಟಗಳ ಬಗ್ಗೆ ಅನುಕಂಪ ಕಡಿದಾಳರಲ್ಲಿ ಎದ್ದು ಕಾಣುತ್ತಿತ್ತು. ಅದು ಮುಂದೊಂದು ದಿನ ಉಳುವವನೇ ಒಡೆಯ ಕಲ್ಪನೆಗೆ ದಾರಿ ಮಾಡಿಕೊಟ್ಟು, ಭೂ ಸುಧಾರಣೆ ಜಾರಿಗೆ ಬರಲು ಕಾರಣರೆನಿಸಿದರು. ಕಾಗೋಡು ಸತ್ಯಾಗ್ರಹ, ರೈತ ಚಳುವಳಿ, ಸ್ವಾತಂತ್ರ್ಯ ಹೋರಾಟದಲ್ಲಿ ಕಡಿದಾಳರು ಸಕ್ರಿಯ ಪಾತ್ರ ವಹಿಸಿದ್ದರಲ್ಲದೆ ನಾಯಕತ್ವವನ್ನು ನೀಡಿದ್ದರು. ಅದೊಂದು ಅವಿಸ್ಮರಣೀಯ ಘಟನೆ. ರೈತರನ್ನು ಜಮೀನುದಾರರ ಕಪಿಮುಷ್ಠಿಯಿಂದ ಬಿಡಿಸಲು ಕಡಿದಾಳರು ನಿರಂತರ ಹೋರಾಟವನ್ನೇ ಮಾಡಿದರು. ಭೂ ಸುಧಾರಣೆ ಕಾಯಿದೆ ಜಾರಿಗೆ ಬರಲು ಕಾರಣರೆನಿಸಿದರು. ಬಡ ರೈತರಿಂದ ಶುಲ್ಕವನ್ನು ತೆಗೆದುಕೊಳ್ಳದೆ ಮೊಕದ್ದಮೆಗಳನ್ನು ಹೂಡಿ ಗೆದ್ದು ಕೊಟ್ಟಿರುವ ಹಲವಾರು ಪ್ರಕರಣಗಳು ದಾಖಲೆಯಾಗಿವೆ. ರಾಜಕೀಯದಲ್ಲಿ ಪ್ರಾಮಾಣಿಕವಾಗಿ ಕೆಲಸ ಮಾಡಲು ಸಾಧ್ಯ ಎಂದು ತೋರಿಸಿ ಕೊಟ್ಟವರಲ್ಲಿ ಕಡಿದಾಳರು ಅಗ್ರಗಣ್ಯರೆನಿಸಿಕೊಂಡಿದ್ದಾರೆ.

ರಾಜ್ಯದ ಮಂತ್ರಿಯಾಗಿ, ಅಲ್ಪ ಅವಧಿಗೆ ಮುಖ್ಯಮಂತ್ರಿಯಾಗಿ, ದೀರ್ಘಕಾಲ ಶಾಸಕರಾಗಿ ಅಪ್ರತಿಮ ಸೇವಾಕರ್ತರೆನಿಸಿಕೊಂಡು, ಭ್ರಷ್ಟಾಚಾರದ ವಿರುದ್ಧ ಸಿಡಿದೇಳುತ್ತಾ, ರಾಜಕೀಯ ಮುತ್ಸದ್ಧಿ ಎನಿಸಿಕೊಂಡು ರಾಷ್ಟ್ರ ನಾಯಕರುಗಳ ಸ್ನೇಹ, ಮೆಚ್ಚುಗೆ ಗಳಿಸಿದ ಕಡಿದಾಳರು ರಾಜಕೀಯ ಶುದ್ಧಿಗೆ ಪಣ ತೊಟ್ಟಿದ್ದವರು. ತಮ್ಮ ಶುದ್ಧ ನಡೆ, ನುಡಿಗಳಿಂದ ಎಲ್ಲಾ ವರ್ಗಗಳ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದರು. ಅವರ ರಾಜಕೀಯ ನಿಲುವು, ಮುತ್ಸದ್ಧಿತನ, ನಿಷ್ಠೆ ಮತ್ತು ಪ್ರಮಾಣಿಕತೆ ಎಲ್ಲರಿಗೂ ಮಾದರಿ ಹಾಗೂ ಆದರ್ಶ ಎನಿಸಿವೆ.

ಕಡಿದಾಳ ಮಂಜಪ್ಪನವರು ಸಾಹಿತ್ಯ ಪ್ರೇಮಿಯಾಗಿದ್ದರು. ಅಧ್ಯಯನಶೀಲರಾಗಿದ್ದರು. ಸ್ವತಃ ಪ್ರತಿಭಾವಂತ ಸಾಹಿತಿಗಳಾಗಿದ್ದರು. ಅವರ ಲೇಖನಿಯಿಂದ ಮೂಡಿ ಬಂದ "ಪಂಜರವಳ್ಳಿಯ ಪಂಜು" ಮತ್ತು 'ನನಸಾಗದ ಕನಸು' ಮೊದಲಾದ ಕೃತಿಗಳು ಸಾಕ್ಷಿಯಾಗಿವೆ. ಅವರು ಪ್ರತಿಪಾದಿಸುತ್ತಿದ್ದ ರೀತಿ, ಮಾತಿನ ಓಘ, ಖಚಿತತೆಗೆ ಅವರ ಅಧ್ಯಯನಶೀಲತೆ ಸಾಕ್ಷಿಯಾಗಿದ್ದವು. ಅವರ ಸಾಹಿತ್ಯ ಪ್ರೇಮ ಅವರನ್ನು ಹಲವು ಕನ್ನಡ ಸಾಹಿತಿ, ಬರಹಗಾರರ ಬಳಿಗೆ ಕೊಂಡೊಯ್ದಿದ್ದಿತು. ಹೆಸರಾಂತ ಸಾಹಿತಿಗಳಾದ ಅನಕೃ, ಸಿದ್ಧವನಹಳ್ಳಿ ಕೃಷ್ಣಶರ್ಮ, ಬೀಚಿ ಮುಂತಾದವರ ಬಗ್ಗೆ ಅಪಾರ ಅಭಿಮಾನ ತಳೆದಿದ್ದರು. ಸ್ವತಃ ಅವರ ಧರ್ಮಪತ್ನಿ ಡಾ.ಶ್ರೀಮತಿ ಲಕ್ಷ್ಮೀದೇವಿ (ಮಲ್ಲಿಕಾ) ಅವರು ಪ್ರಖ್ಯಾತ ಬರಹಗಾರರಾಗಿರುವುದಕ್ಕೆ ಕಡಿದಾಳರ ಪ್ರೋತ್ಸಾಹ ಸ್ಮರಣೀಯವಾದುದು. ಬೀಚಿ ಅವರ ನಿಧನದ ನಂತರ ಬೀಚಿ ಬಳಗವನ್ನು ಆರಂಭಿಸಿದಾಗ ಅದರ ಅಧ್ಯಕ್ಷರೂ ಆಗಿದ್ದರು.

ಕಡಿದಾಳರ ಸರಳತೆ, ಸಹೃದಯತೆ, ಪ್ರೀತಿ, ವಿಶ್ವಾಸಗಳು ಜನರ ಮೇಲೆ ಅಪಾರ ಪರಿಣಾಮ ಬೀರಿದ್ದವು. ಸಕ್ರಿಯ ರಾಜಕೀಯದಿಂದ ನಿವೃತ್ತರಾದಾಗಿನಿಂದ ರಾಜಕೀಯ ಸ್ವಚ್ಛತೆ ಬಗ್ಗೆ ಚಿಂತನೆ ಮಾಡುತ್ತಿದ್ದು, ತಿಳುವಳಿಕೆ ನೀಡಿ ಜಾಗೃತಗೊಳಿಸುತ್ತಿದ್ದರು. ಪಂಚಾಯಿತಿ ರಾಜ್ ವ್ಯವಸ್ಥೆ, ಚುನಾವಣಾ ಸುಧಾರಣೆ, ರಾಜಕೀಯ ಭಷ್ಟಾಚಾರ ತಡೆ, ಗ್ರಾಮೀಣ ಅಭಿವೃದ್ಧಿ ಅವರಿಗೆ ಪ್ರಿಯವಾದವುಗಳಾಗಿದ್ದವು. ಇದರ ಹಿನ್ನೆಲೆಯಲ್ಲೇ ಕಡಿದಾಳರ ನಿಧನದ ನಂತರ ಅವರ ನೆನಪಿನಲ್ಲಿ ಕಡಿದಾಳ ಸ್ಮಾರಕ ಟ್ರಸ್ಟ್ ಒಂದನ್ನು ಆರಂಭಿಸಿ ಅವರಿಗೆ ಪ್ರಿಯವಾಗಿದ್ದ ವಿಷಯಗಳ ಬಗ್ಗೆ ಉಪನ್ಯಾಸ, ಚಿಂತನೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಪ್ರಯತ್ನವನ್ನು ನಾನು ನಡೆಸಿದೆ. ಆದರೆ ಪ್ರಯತ್ನ ಅನಿವಾರ್ಯ ಕಾರಣಗಳಿಂದ ಮುಂದುವರಿಯಲಿಲ್ಲ. ಈಗಲೂ ಅಂತಹ ಪ್ರಯತ್ನ ಅತ್ಯಂತ ಅಗತ್ಯ, ಅವಶ್ಯಕ ಎಂದು ಭಾವಿಸುತ್ತೇನೆ.

ಕಡಿದಾಳ ಮಂಜಪ್ಪನವರು ನಮ್ಮ ಕುಟುಂಬದರಾಗಿದ್ದು, ನನಗೆ ಅತ್ಯಂತ ಸಮೀಪದ ಬಂಧುವಾದ ಕಾರಣ ಅವರೊಂದಿಗಿನ ಒಡನಾಟದಲ್ಲಿನ ಕೆಲವು ಘಟನೆಗಳನ್ನು ದಾಖಲಿಸುವುದು ಪ್ರಸ್ತುತ ಎಂದು ಭಾವಿಸುತ್ತೇನೆ. ನಾನು ವಿದ್ಯಾರ್ಥಿಯಾಗಿದ್ದಾಗ ಶಿವಮೊಗ್ಗದಲ್ಲಿ ಅಭ್ಯಾಸ, ಅಧ್ಯಯನಕ್ಕಾಗಿ ಅವರ ಮನೆಯಲ್ಲೇ ವಾಸವಾಗಿದ್ದೆ. ನನ್ನ ವಿದ್ಯಾಭ್ಯಾಸ ತೃಪ್ತಿಕರವಾಗಿ ಮುಂದುವರಿಯದಿದ್ದುದನ್ನು ಗಮನಿಸಿ ಕಡಿದಾಳರು ನನ್ನನ್ನು ವಿದ್ಯಾರ್ಥಿ ನಿಲಯದಿಂದ ಬಿಡಿಸಿ, ತಮ್ಮ ಮನೆಯಲ್ಲೇ ಇರಿಸಿಕೊಂಡು ನನ್ನ ವಿದ್ಯಾಭ್ಯಾಸ ಮುಂದುವರಿಯುವಂತೆ ಉಪಕರಿಸಿದರು. ನಾನು ಅವರ ಹತ್ತಿರದ ಬಂಧು ಎಂಬ ಕಾರಣಕ್ಕಾಗೇ ಹಾಗೆ ಮಾಡಿದುದಲ್ಲ. ಅವರಿಗೆ ವಿದ್ಯಾಭ್ಯಾಸ, ವಿದ್ಯಾರ್ಥಿಗಳ ಮೇಲೆ ತುಂಬಾ ಅಕ್ಕರೆ ಇದ್ದುದರಿಂದ ನನಗೆ ಆಶ್ರಯ ನೀಡಿದರು.

ಮತ್ತೊಂದು ಪ್ರಸಂಗ ತುಂಬಾ ವೈಯಕ್ತಿಕವಾದುದು. ನನ್ನ ಮದುವೆ ನನ್ನ ತಂದೆ, ತಾಯಿ, ಬಂಧು ಬಳಗದವರ ವ್ಯವಸ್ಥೆಯಿಂದ ನಿಶ್ಚಿತವಾಗಿ ಆದುದಲ್ಲ. ನನ್ನದು ಪ್ರೀತಿಯ ವಿವಾಹ. ನೋಂದಣಿ ಕಛೇರಿಯಲ್ಲಿ ವಿವಾಹ ನೋಂದಣಿ ಮಾಡಿಸಿ, ವಿವಾಹ ಸಂಬಂಧವನ್ನು ಅಧಿಕೃತವಾಗಿ ತಿಳಿಸಿ, ಮಡದಿಯೊಂದಿಗೆ ಮನೆ ತಲುಪಿದಾಗ ತಂದೆ, ತಾಯಿ, ಬಂಧು ಬಳಗದವರ ಅಸಮಾಧಾನಕ್ಕೆ ಒಳಗಾಗಬೇಕಾಯಿತು. ಮನೆಯ ವಾತಾವರಣ ಕಲಕಿದಂತಾಗಿ ನಾನು, ನನ್ನ ಮಡದಿ ಮನೆ ಬಿಡಬೇಕಾದ ಪರಿಸ್ಥಿತಿ ಉಂಟಾಯಿತು. ಇದು ನಿಜಕ್ಕೂ ತುಂಬಾ ನೋವಿನ ಸಂಗತಿಯಾಗಿತ್ತು. ಆ ಸಂದರ್ಭದಲ್ಲಿ ಪ್ರಗತಿ ಪರ ಧೋರಣೆಯನ್ನು ಬೆಳೆಸಿಕೊಂಡು ಬಂದಿದ್ದ ಕಡಿದಾಳರು ವಸ್ತು ಸ್ಥಿತಿಯನ್ನು ನನ್ನ ತಂದೆ, ತಾಯಿ, ಬಂಧು, ಬಳಗದವರಿಗೆ ವಿವರಿಸಿ ಅವರ ಮನ ಒಲಿಸಿ, ಪ್ರೇಮ ವಿವಾಹಕ್ಕೆ ಸಮ್ಮತಿಯ ಮುದ್ರೆ ಒತ್ತುವಂತೆ ಮಾಡಿ ನಾನು ನನ್ನ ಮಡದಿ ನಮ್ಮ ಕುಟುಂಬದಲ್ಲೇ ಉಳಿಯುವಂತೆ ಮಾಡಿದರು. ಇದು ಎಂದೆಂದಿಗೂ ಮರೆಯಲಾಗದ ಘಟನೆ, ಇದು ಕಡಿದಾಳರ ಪ್ರಜ್ಞಾವಂತಿಕೆ, ದೂರ ದೃಷ್ಟಿಗೆ ಸಾಕ್ಷಿಯಾಗಿರುವಂತೆ ಬಹುಶಃ ಕುವೆಂಪು ಅವರ ಪ್ರಭಾವವೂ ಇಲ್ಲಿ ಎದ್ದು ಕಾಣುತ್ತದೆ. (ಹಾಗೆ ಮನವೊಲಿಕೆ ಕಾರ್ಯದಲ್ಲಿ ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರ ಸಹೋದರಿ ಶ್ರೀಮತಿ ಕೌಶಲ್ಯಾದೇವಿ ಅವರ ಪ್ರಯತ್ನವೂ ಇಲ್ಲಿ ಉಲ್ಲೇ ಖಾರ್ಹ).

ಇನ್ನು ರಾಜಕೀಯವಾಗಿ ಕಡಿದಾಳರು ನನಗೆ ಹಲವು ಬಾರಿ ಬುದ್ಧಿ ಮಾತು ಹೇಳಿದ್ದುಂಟು. ಮಾಜಿ ಮುಖ್ಯಮಂತ್ರಿ ದಿವಂಗತ ಸಿದ್ಧವನಹಳ್ಳಿ ನಿಜಲಿಂಗಪ್ಪನವರು

ಸಾರ್ವತ್ರಿಕ ಚುನಾವಣೆಯಲ್ಲಿ ಅಂದಿನ ಪ್ರಭಾವಿ ರಾಜಕಾರಣಿ ದಿವಂಗತ ಶಾಂತವೇರಿ ಗೋಪಾಲಗೌಡರ ವಿರುದ್ಧ ಸ್ಪರ್ಧಿಸುವಂತೆ ನನಗೆ ಆಹ್ವಾನ ನೀಡಿದರು. ಕಡಿದಾಳರು ನನ್ನನ್ನು ಕರೆದು ಈಗಲೇ ನಿನಗೆ ರಾಜಕೀಯ ಬೇಡ, ಇನ್ನೂ ಅನುಭವ ಸಾಲದು, ಬಹಳಷ್ಟು ವಯಸ್ಸಿದೆ. ಮುಂದೆ ಪ್ರಯತ್ನಿಸುವಿಯಂತೆ ಎಂದು ಬುದ್ಧಿ ಮಾತು ಹೇಳಿದರು. ಆದರೆ ಒತ್ತಡಗಳ ಅಡಿಯಲ್ಲಿ ಚುನಾವಣೆಗೆ ಸ್ಪರ್ಧಿಸಿದೆ, ಪರಾಭವಗೊಂಡೆ. ಅದು ಬೇರೆ ಮಾತು. ಆದರೆ ಅವರ ಬುದ್ಧಿ ಮಾತು ಕೇಳಲಿಲ್ಲವೆಂದು ನನ್ನ ಮೇಲೆ ಕಡಿದಾಳರು ಸಿಟ್ಟು ಮಾಡಿಕೊಳ್ಳಲಿಲ್ಲ. ಚುನಾವಣಾ ಸಂದರ್ಭದಲ್ಲಿ ನನ್ನ ಪರವಾಗಿ ಪ್ರಚಾರ ಮಾಡಿದರು. ಇದು ಅವರ ದೊಡ್ಡತನವಲ್ಲದೆ ಮತ್ತೇನಲ್ಲ.

ನಾನು ಎರಡು ಬಾರಿ (ಹನ್ನೆರಡು ವರ್ಷಗಳ ಕಾಲ) ವಿಧಾನ ಪರಿಷತ್ತಿಗೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲಾ ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಸ್ಪರ್ಧಿಸಿ ಜಯಶಾಲಿಯಾಗಿ, ಶಾಸಕನಾಗಲು ಕಡಿದಾಳರ ಆಶೀರ್ವಾದ ಮತ್ತು ಬೆಂಬಲವೇ ಕಾರಣವಾಗಿದ್ದವು.

ನಾನು ಶಾಸಕನಾಗಿ ಹಾಗೂ ದೀರ್ಘಕಾಲ ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷನಾಗಿ, ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಲದ ಅಧ್ಯಕ್ಷನಾಗಿ ಕಾರ್ಯ ಮಾಡುವಾಗ ನನ್ನ ಯಶಸ್ಸಿಗೆ ಕಡಿದಾಳರು ಮಹತ್ವದ ಮಾರ್ಗದರ್ಶನ ಮಾಡುತ್ತಿದ್ದುದನ್ನು ಎಂದಿಗೂ ಮರೆಯಲಾರೆ.

ಕಡಿದಾಳರ ದಕ್ಷತೆ, ಅನುಕಂಪ, ಸಮಯ ಪ್ರಜ್ಞೆ, ಸ್ವಚ್ಛ ಮನೋಭಾವ ನನಗೆ ಸದಾ ಮಾರ್ಗದರ್ಶಿ ಎನಿಸಿವೆ. ಕಡಿದಾಳರ ನಡೆ, ನುಡಿ, ಬದುಕು ಕತ್ತಲೆಯಲ್ಲಿನ ಕೈ ದೀವಿಗೆ ಎಂದೇ ಭಾವಿಸಿದ್ದೇನೆ.

# ಶುದ್ಧಚಾರಿತ್ರ್ಯದ ರಾಜಕಾರಣಿ

-ಡಾ. ಮ.ರಾಮಾಜೋಯಿಸ್

ನಾನು ನನ್ನ ಜೀವನದಲ್ಲಿ ಕಂಡಿರುವ ಶುದ್ಧಚಾರಿತ್ರ್ಯದ ಹಲವೇ ರಾಜಕಾರಣಿಗಳಲ್ಲಿ, ನನಗೆ ಅತ್ಯಂತ ಆತ್ಮೀಯರೂ, ನನ್ನ ಅಪಾರ ಗೌರವಕ್ಕೆ ಪಾತ್ರರಾದವರು ನನ್ನ ತಾಲೂಕಿನವರೇ ಅದ ದಿವಂಗತ ಕಡಿದಾಳ್ ಮಂಜಪ್ಪನವರು. ಅಂತಹ ಶ್ರೇಷ್ಠ ವ್ಯಕ್ತಿ ಮತ್ತು ನಾನು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನವರು ಅಗಿರುವುದು ನನಗೆ ಹೆಮ್ಮೆಯ ವಿಷಯ. ನನಗೂ ಅವರಿಗೂ ವಯಸ್ಸಿನಲ್ಲಿ ಬಹು ಅಂತರ. ನಾನು ಶಿವಮೊಗ್ಗ ಸರ್ಕಾರಿ ಪ್ರೌಢಶಾಲೆಯಲ್ಲಿ ೧೯೪೪ ರಿಂದ ೧೯೪೭ ರವರೆಗೆ ವ್ಯಾಸಂಗ ಮಾಡುವ ಸಮಯಕ್ಕೆ ಅವರು ಶಿವಮೊಗ್ಗದಲ್ಲಿ ಪ್ರಸಿದ್ಧ ವಕೀಲರಾಗಿದ್ದರು. ವಕೀಲ ವೃತ್ತಿ ಸಂಹಿತೆಗನುಗುಣವಾಗಿ ವೃತ್ತಿ ನಡೆಸುತ್ತಾ, ಅನೇಕ ಜನ, ಬಡ ರೈತರಿಗೆ ಕಾನೂನು ಮೂಲಕ ನ್ಯಾಯ ಒದಗಿಸಿ ಕೊಟ್ಟ ಕೀರ್ತಿ ಅವರದಾಗಿತ್ತು. ಅದಕ್ಕೆ ಮೊದಲೇ ಅವರು ಜಿಲ್ಲೆಯಲ್ಲಿ ಪ್ರಭಾವಿ ಹಾಗೂ ಜನಾನುರಾಗಿ ಕಾಂಗ್ರೆಸ್ ನಾಯಕರಾಗಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಅವರು ಶಿವಮೊಗ್ಗ ಸರ್ಕಾರಿ ಪ್ರೌಢಶಾಲೆಯ ಶುಲ್ಕ ವಿನಾಯಿತಿ ನೀಡುವ ಸಮಿತಿಯ ಸದಸ್ಯರಾಗಿದ್ದರು. ಅರ್ಥಿಕವಾಗಿ ಬಡತನದಲ್ಲಿದ್ದ ನನಗೆ ಅದೇ ರೀತಿ ಅನೇಕ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ ಕೊಡಿಸಿ ಸಹಾಯ ಮಾಡಿದ್ದರು. ಅವರಿಗೆ ನಾನು ಸದಾಕೃತಜ್ಞ.

ಎರಡನೇ ಬಾರಿ ಅವರ ಹತ್ತಿರದ ಪರಿಚಯವಾಗಿದ್ದು ೧೯೫೨ ರಲ್ಲಿ ನಡೆದ ಮಹಾಚುನಾವಣೆಯ ಸಂದರ್ಭದಲ್ಲಿ. ಈ ಚುನಾವಣೆಗೆ ಕೆಲವು ತಿಂಗಳು ಮೊದಲು ಡಾ. ಶ್ಯಾಮಪ್ರಸಾದ್ ಮುಖರ್ಜಿಯವರು ಭಾರತೀಯ ಜನಸಂಘವನ್ನು ಸ್ಥಾಪಿಸಿದರು. ರಾಷ್ಟ್ರೀಯ ಸ್ವಯಂಸೇವಕ ಸಂಘದ ಬೆಂಬಲವನ್ನು ಪಡೆದಿದ್ದರಿಂದ, ಭಾರತೀಯ ಜನಸಂಘ ಹುಟ್ಟಿನಿಂದಲೇ ಅಖಿಲ ಭಾರತೀಯ ಪಕ್ಷವಾಯಿತು. ಶಿವಮೊಗ್ಗೆಯಲ್ಲಿ ಭಾರತೀಯ ಜನಸಂಘದ ಶಾಖೆಯನ್ನು ನಿವೃತ್ತ ಮುಖ್ಯನ್ಯಾಯಮೂರ್ತಿ ಜಿ. ಪರಮಶಿವಯ್ಯನವರ ಅಧ್ಯಕ್ಷತೆಯಲ್ಲಿ ೧೯೫೨ ರಲ್ಲೆ ಪ್ರಾರಂಭಿಸಲಾಯಿತು. ೧೯೪೪ ರಿಂದ ಸಂಘದ ಸ್ವಯಂಸೇವಕನಾಗಿದ್ದ ನನಗೆ, ಜನಸಂಘದ ಶಿವಮೊಗ್ಗ ಶಾಖೆಯ ಕಾರ್ಯದರ್ಶಿಯಾಗಿರಲು ಸಂಘದ ನಿರ್ದೇಶನ ಸಿಕ್ಕಿತು. ಇದರ ಜೊತೆಯಲ್ಲಿಯೇ ೧೯೫೨ರ ಮೊದಲನೇ ಮಹಾ ಚುನಾವಣೆಯಲ್ಲಿ ಭಾಗವಹಿಸಿಸುವ ಅವಕಾಶ

ದೊರಕಿತು. ಕಡಿದಾಳ್ ಮಂಜಪ್ಪನವರು ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಕಾಂಗ್ರೆಸ್‌ಉಮೇದುವಾರರು. ಕಾಸರವಳ್ಳಿ ರಾಮಕೃಷ್ಣರಾಯರು ಜನಸಂಘದ ಅಭ್ಯರ್ಥಿಯಾಗಿದ್ದರಿಂದ ಅವರ ಪರವಾಗಿ ಕೆಲಸ ಮಾಡುವ ಅವಕಾಶ ನನ್ನದಾಯಿತು. ಅವರ ಭಾವ ಕಾಸರವಳ್ಳಿಯ ಸದಾಶಿವರಾಯರು ಸಮಾಜವಾದಿ ಪಕ್ಷದ ಅಭ್ಯರ್ಥಿಯಾದರು. ನನ್ನ ಭಾವ ಬೆಟ್ಟಮಕ್ಕಿ ಡಾ. ಗುರುಮೂರ್ತಿಯವರು ಕಟ್ಟಾ ಸಮಾಜವಾದಿ ಹಾಗೂ ಅವರು ಕಾಸರವಳ್ಳಿ ಸದಾಶಿವರಾಯರ ಪರವಾಗಿ ಪ್ರಚಾರದಲ್ಲಿ ತೊಡಗಿದರು. ಶಿವಮೊಗ್ಗ ಜಿಲ್ಲೆಯ ವಿಶೇಷವೆಂದರೆ, ವಿವಿಧ ರಾಜಕೀಯ ಪಕ್ಷಕ್ಕೆ ಸೇರಿದವರ ನಡುವೆ ಪರಸ್ಪರ ಗೌರವ ಮತ್ತು ಆತ್ಮೀಯತೆಯ ಸಂಬಂಧ. ಕೀಳು ಮಟ್ಟದ ರಾಜಕೀಯ ಹಾಗೂ ವಿರೋಧ ಪಕ್ಷದವರ ಮೇಲೆ ಅಪಪ್ರಚಾರ, ಅಸಹಿಷ್ಣುತೆಯಿಂದ ಬಲುದೂರ. ಚುನಾವಣೆಯಲ್ಲಿ ಅಜಾತಶತ್ರುವಾಗಿದ್ದ ಹಾಗೂ ಜನಪ್ರಿಯ ನಾಯಕರಾಗಿದ್ದ ಕಡಿದಾಳ್ ಮಂಜಪ್ಪನವರು ೧೬ ಸಾವಿರ ಮತಗಳನ್ನು ಪಡೆದು ವಿಜಯಿಯಾದರು. ಕಾಸರವಳ್ಳಿ ರಾಮಕೃಷ್ಣರಾಯರು ೧೬ ಸಾವಿತ ಮತಗಳಿಸಿ ಎರಡನೇ ಸ್ಥಾನದಲ್ಲಿದ್ದು ಠೇವಣಿ ಉಳಿಸಿಕೊಂಡರು. ಪ್ರಥಮ ಪ್ರಯತ್ನದಲ್ಲಿ ಅಷ್ಟಾಗಿದ್ದು ನಮಗೆ ಭವಿಷ್ಯದ ಬಗ್ಗೆ ಆಶಾಕಿರಣ ಮೂಡಿಸಿತು. ಅದೇನೇ ಇರಲಿ, ಕಡಿದಾಳ್ ಮಂಜಪ್ಪನವರ ಬಗ್ಗೆ ನಮ್ಮ ಗೌರವಕ್ಕೆ ಕಿಂಚಿತ್ತು ಚ್ಯುತಿಯಾಗಲಿಲ್ಲ. ಮಂಜಪ್ಪನವರೂ ನನ್ನ ಬಗ್ಗೆ ಇಟ್ಟುಕೊಂಡಿದ್ದ ಪ್ರೀತಿ, ವಿಶ್ವಾಸಗಳು ಸ್ವಲ್ಪವೂ ಕಡಿಮೆಯಾಗಲಿಲ್ಲ. ಅಂತಹ ದೊಡ್ಡತನ ಅವರದು.

ಕೃಶಶರೀರವನ್ನು ಹೊಂದಿದ್ದ ಕಡಿದಾಳ್ ಮಂಜಪ್ಪನವರು, ಧೃಢವಾದ ಧ್ಯೇಯಉಳ್ಳವರಾಗಿದ್ದರು. ಮಹಾತ್ಮ ಗಾಂಧೀಜೀಯವರ ನಿಜವಾದ ಅನುಯಾಯಿಯಾಗಿದ್ದರು. ಅವರ ಜೀವನದಲ್ಲಿ ಎರಡನೇ ಮುಖ್ಯ ಘಟ್ಟವೆಂದರೆ, ಕಡಿದಾಳ್ ಮಂಜಪ್ಪನವರು ಮೈಸೂರು ರಾಜ್ಯದಲ್ಲಿ ಮಂತ್ರಿಗಳಾಗಿದ್ದು ಅದೇ ಸಮಯಕ್ಕೆ ಶಿವಮೊಗ್ಗದಲ್ಲಿ ಅವರ ಲಾಯರ್ ಕಛೇರಿಯಲ್ಲಿ ಗುಮಾಸ್ತರಾಗಿದ್ದು, ಸತತವಾಗಿ ಶಿವಮೊಗ್ಗ ಪುರಸಭೆಗೆ ಕಾಂಗ್ರೆಸ್ ಪಕ್ಷದಿಂದ ಚುನಾಯಿತರಾಗುತ್ತಿದ್ದ ನನ್ನ ಹತ್ತಿರದ ಸಂಬಂಧಿಕರಾದ ಶ್ರೀ ಎಸ್.ಎನ್. ಶಾಮಣ್ಣನವರು ಪುರಸಭಾಧ್ಯಕ್ಷರಾದರು. ಅಗ ಅವರಿಗೆ ಕಡಿದಾಳರು ಶುಭಾಶಯ ಪತ್ರವನ್ನು ಬರೆದರು. ಅವರು ಬರೆದಿದ್ದ ವಾಕ್ಯ ಮಂಜಪ್ಪನವರ ದೊಡ್ಡತನ ಹಾಗೂ ಉನ್ನತ ಅಧಿಕಾರ ಸಿಕ್ಕಾಗ ಅದನ್ನು ಸ್ವೀಕರಿಸುವ ಮನೋವೃತ್ತಿ ಹೇಗಿರಬೇಕೆಂಬುದರ ಸೂಚಕವಾಗಿತ್ತು. ಅವರು ಹೇಳಿದ್ದು ಹೀಗೆ: "ಶ್ಯಾಮಣ್ಣ ನೀವು ಪುರಸಭಾಧ್ಯಕ್ಷರಾಗಿದ್ದಕ್ಕೆ ನನ್ನ ಧನ್ಯವಾದಗಳು. ಉನ್ನತ ಅಧಿಕಾರ ಸಿಕ್ಕಿದಾಗ ನಮ್ರತೆಯ ಭಾವನೆ ಹೆಚ್ಚಾಗಬೇಕು, ಸಿಕ್ಕ ಸ್ಥಾನವನ್ನು ಜನರಿಗೆ ಉಪಕಾರ

ಮಾಡಲು ಬಳಸಬೇಕು, ಸ್ವಾರ್ಥಕ್ಕಾಗಿ ಅಲ್ಲ" ಈ ವಾಕ್ಯ ಅವರ ಧ್ಯೇಯವಾದಿ ಜೀವನವನ್ನು ಪ್ರತಿಬಿಂಬಿಸುವಂತಿತ್ತು. ಇದೇ ತತ್ವವನ್ನು ತಾವು ಕಂದಾಯ ಸಚಿವರು ಮತ್ತು ಲೋಕೋಪಯೋಗಿ ಸಚಿವರು ಆದಾಗ ಅವರು ಅನುಸರಿಸಿದರು. ಇದು ಅವರ ತ್ರಿಕರಣ ಶುದ್ಧಿಯ ನಿದರ್ಶನವಾಗಿತ್ತು.

ಇಂತಹ ಆದರ್ಶ ಜೀವಿ, ಮುಖ್ಯಮಂತ್ರಿಯಾಗಿದ್ದು ಕೇವಲ ಒಂದೂವರೆ ತಿಂಗಳು ಮಾತ್ರ. ಅಠಾರಾ ಕಛೇರಿಯಲ್ಲಿ ಅವರು ಮುಖ್ಯಮಂತ್ರಿ ಸ್ಥಾನವನ್ನು ಸ್ವೀಕರಿಸಿದ ಸಮರಂಭದಲ್ಲಿ ಭಾಗವಹಿಸುವ ಅವಕಾಶ ನನಗೆ ದೊರಕಿತ್ತು. ಅವರೇನಾದರೂ ೫ ವರ್ಷಗಳ ಕಾಲ ಮುಖ್ಯಮಂತ್ರಿಯಾಗಿದ್ದಿದ್ದರೆ, ರಾಜ್ಯದ ಸರ್ವಾಂಗೀಣ ಪ್ರಗತಿಯನ್ನು ಸಾಧಿಸುತ್ತಿದ್ದರು.

ಕಾಲಕ್ರಮೇಣ ಅವರು ಮಂತ್ರಿ ಪದವಿಯ ಅವಧಿ ಮುಗಿಯಿತು. ಆ ಸಮಯಕ್ಕೆ ನಾನು ವಿದ್ಯಾಭ್ಯಾಸ ಮುಗಿಸಿ ಬೆಂಗಳೂರಿನ ಉಚ್ಚನ್ಯಾಯಾಲಯದಲ್ಲಿ ವಕೀಲ ವೃತ್ತಿ ಪ್ರಾರಂಭ ಮಾಡಿದಾಗ ಅವರು ನನ್ನ ಸಹೋದ್ಯೋಗಿಯಾದುದು ನನಗೆ ಆಶ್ಚರ್ಯ ಉಂಟುಮಾಡಿತು. ಅವರನ್ನು ನ್ಯಾಯಾಲಯದಲ್ಲಿ ಕಂಡಾಗ ಅವರಿಗೆ ವಿನಮ್ರತೆಯಿಂದ ನಮಸ್ಕರಿಸಿ "ಏನು ಮಂಜಪ್ಪನವರೇ ನೀವು ಇಲ್ಲಿ" ಎಂದು ಕೇಳಿದಾಗ "ಜೀವನೋಪಾಕ್ಕಾಗಿ" ಎಂಬುದು ಅವರ ಉತ್ತರವಾಗಿತ್ತು. ಈ ಉತ್ತರ ಅವರ ಬಗ್ಗೆ ನನಗಿದ್ದ ಗೌರವವನ್ನು ಇನ್ನೂ ಹೆಚ್ಚುಮಾಡಿತು.

ಒಬ್ಬ ವ್ಯಕ್ತಿ ಕೆಲವು ಕಾಲ ರೆವಿನ್ಯೂ ಮಂತ್ರಿಗಳಾಗಿದ್ದು, ಇನ್ನು ಕೆಲವು ಕಾಲ ಲೋಕೋಪಯೋಗಿ ಮಂತ್ರಿಗಳಾಗಿದ್ದು, ಪದವಿ ಬಿಟ್ಟಾಗ ನಗರದಲ್ಲಿ ಮನೆಯನ್ನಾಗಲಿ, ನಿವೇಶನವನ್ನಾಗಲಿ ಮಾಡಿಕೊಂಡಿರಲಿಲ್ಲ ಮತ್ತು ಅವರ ಜೀವನೋಪಾಯಕ್ಕಾಗಿ ವಕೀಲ ವೃತ್ತಿಯನ್ನು ನಡೆಸುವುದು ಅವಶ್ಯಕವಾಗಿತ್ತು ಎಂದರೆ ಇಂದು ಜನರು ನಂಬಲಾರದಂತಹ ಪರಿಸ್ಥಿತಿ ಉಂಟಾಗಿದೆ.

ಕೆಲವು ವರ್ಷಗಳ ನಂತರ ಪಂಚಾಯತಿ ಚುನಾವಣೆಗಳು ಸರಿಯಾದ ರೀತಿಯಲ್ಲಿ ನಡೆಯುವಂತೆ ನೋಡಿಕೊಳ್ಳುವ ವೀಕ್ಷಕರ ಜವಾಬ್ದಾರಿ ಅವರಿಗೆ ಹೊರಿಸಲಾಗಿತ್ತು. ಆ ಸಮಯಕ್ಕೆ ನಾನು ನ್ಯಾಯಾಧೀಶನಾಗಿದ್ದೆ. ಉಚ್ಚನ್ಯಾಯಾಲಯದಲ್ಲಿ ನನ್ನನ್ನು ಹತ್ತಿರ ಕರೆದು ಹೀಗೇಂದರು: "ಈ ಚುನಾವಣೆಗಳಲ್ಲಿ ಹೆಂಡ ಎಷ್ಟು ಖರ್ಚಾಗಿದೆ ಎಂಬುದು ನಿನಗೆ ಗೊತ್ತೆ" –ಗಾಂಧೀಜಿಯವರ ಮಧ್ಯಪಾನ ನಿಷೇಧವಾಗಬೇಕೆಂಬ ತತ್ವ ಗಾಳಿಗೆ ತೂರಿದಂತಾಗಿದೆ ಎಂದು ಅತಿ ದುಃಖದಿಂದ ಹೇಳಿದರು. ಅ ಸಮಯಕ್ಕೆ ಆಗಿದ್ದ ನೈತಿಕ ಅಧಃಪತನದಿಂದ ಮನನೊಂದು ನಿರಾಶರಾಗಿದ್ದರು.

ಅವರ ಕೊನೆಯ ದಿನಗಳಲ್ಲಿ, ಅವರಮನೆಯಲ್ಲಾಗಲಿ, ಮಾರ್ಥಾಸ್ ಹಾಸ್ಪಿಟಲ್‌ನಲ್ಲಿಯಾಗಲಿ ಅವರನ್ನು ನಾನು ಭೇಟಿಯಾದಾಗ ಅವರು ಆಡಿದ ಮಾತುಗಳು ಹೃದಯವಿದ್ರಾವಕ. ಅವರು ನನ್ನನ್ನು ಕೇಳಿದ ಪ್ರಶ್ನೆ "ದೇವರು ನನ್ನನ್ನೂ ಏಕೆ ಬದುಕಿಸಿದ್ದಾನೆ? ಈ ದೇಶದಲ್ಲಿ ಆಗಿರುವ ನೈತಿಕ ಅಧಃಪತನ, ಮಹಾತ್ಮ ಗಾಂಧಿಯವರ ಎಲ್ಲ ಅದರ್ಶಗಳ ನಾಶ" ಇದನ್ನು ನೋಡಲೇ? ಎನ್ನುತ್ತಾ ಕಣ್ಣೀರು ಸುರಿಸುತ್ತಿದ್ದರು. ಅದೇ ನೋವಿನಿಂದಲೇ ಅಸು ನೀಗಿದರು.

ಇಂತಹ ಮಹಾನ್ ವ್ಯಕ್ತಿ ಕಡಿದಾಳ್ ಮಂಜಪ್ಪ. ಅವರಂತಹ ಮೌಲ್ಯಧಾರಿತ ರಾಜಕಾರಣಿಗಳನ್ನು ಇಂದು ಕಣ್ಣಿಗೆ ಅಂಜನ ಹಾಕಿಕೊಂಡು ಹುಡುಕಬೇಕಾಗಿದೆ. ಮಹಾತ್ಮ ಗಾಂಧಿಯವರು ಕೊನೆಯಲ್ಲಿ ಬರೆದ "ಮೈ ಪಿಕ್ಚರ್ ಆಫ್ ಫ್ರೀ ಇಂಡಿಯಾ"ದಲ್ಲಿ ಅವರು ಚಿತ್ರಿಸಿಕೊಂಡ ಸ್ವತಂತ್ರ ಭಾರತಕ್ಕೆ ಇಂದಿನ ಚಿತ್ರವನ್ನು ಹೋಲಿಸಿದರೆ, ಮಹಾತ್ಮ ಗಾಂಧಿಯವರು ನೀಡಿದ ಒಂದೊಂದು ಮಾರ್ಗದರ್ಶನವನ್ನು ಧೂಳಿಪಠ ಮಾಡಿರುವ ಕೀರ್ತಿ ಅವರ ಶಿಷ್ಯರಿಗೆ ಸೇರಿದೆ.

ಆಡಳಿತದಲ್ಲಿ ಶುಚಿತ್ವ, ಪ್ರತಿಯೊಂದು ಕ್ಷೇತ್ರದಲ್ಲಿ ಸ್ವದೇಶಿ, ಪೂರ್ಣ ಮಧ್ಯಪಾನ ಹಾಗೂ ಗೋಹತ್ಯಾ ನಿಷೇಧ, ರಾಷ್ಟ್ರದ ಐಕ್ಯತೆಗಾಗಿ ದೇವನಾಗರಿ ಲಿಪಿ, ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ, ಸರಳ ಹಾಗೂ ಕಡಿಮೆ ಖರ್ಚಿನ ಜೀವನ ಶೈಲಿ ಇತ್ಯಾದಿ ಗಾಂಧೀಜಿಯವರು ಇಟ್ಟುಕೊಂಡಿದ್ದ ಚಿತ್ರ ಛಿದ್ರ ವಿಚ್ಛಿದ್ರವಾಗಿದೆ.

"ಐಕ್ಯತೆಯು ಮಣ್ಣೂಡಿ, ನೈತಿಕತೆ ಹಾಳಾಗಿ, ಭಾರತಿಯು ಸೊರಗಿದಳು, ಇವರಿಲ್ಲರಿಗು ಮಾತ್ರ ಬರಲಿಲ್ಲ ಬುದ್ಧಿ" ಎಂಬುದನ್ನರಿತು, ಅಧಿಕಾರದಾಹ ಮತ್ತು ಅಧಿಕಾರ ದುರುಪಯೋಗಕ್ಕೆ ಕಡಿವಾಣ ಹಾಕದೆ, ಭಷ್ಟಾಚಾರದಲ್ಲಿ ತೊಡಗದೆ, ನೈತಿಕ ಅಧಾರವನ್ನು ಭದ್ರಪಡಿಸದೆ, ಸಮಾಜವನ್ನು ಜಾತಿ ಮತಗಳ ಆಧಾರದ ಮೇಲೆ ಕೇವಲ ಓಟಿಗಾಗಿ ಒಡೆಯುತ್ತಿರುವ ವಿನಾಶಕಾರಿ ಹಾಗೂ ಆತ್ಮಹತ್ಯೆಯ ರಾಜಕೀಯವನ್ನು ಬಿಡದೆ, ದೇಶದ ಉದ್ಧಾರ ಖಂಡಿತ ಸಾಧ್ಯವಿಲ್ಲ ಎಂಬ ಸತ್ಯವನ್ನು ಅರ್ಥಮಾಡಿಕೊಂಡು ಗಾಂಧೀಜಿಯವರು ತೋರಿದ ಮಾರ್ಗಕ್ಕೆ ನಾವು ವಾಪಸಾಗದಿದ್ದರೆ, ದೇಶದ ಭವಿಷ್ಯ ನಿಜಕ್ಕೂ ಇನ್ನೂ ಭಯಾನಕ. ಸರಿಯಾದ ಮಾರ್ಗಕ್ಕೆ ಬರಲು ಗಾಂಧೀಜಿಯವರು, ಕಡಿದಾಳ್ ಮಂಜಪ್ಪನವರಂತಹ ಶುದ್ಧ ರಾಜಕಾರಣಿಗಳು ತೋರಿಸಿದ ಮಾರ್ಗ ಅನುಸರಿಸುವುದೊಂದೇ ನಮ್ಮ ರಾಷ್ಟ್ರ ಎದುರಿಸುತ್ತಿರುವ ಎಲ್ಲ ಸಮಸ್ಯೆಗಳಿಗೆ ಪರಿಹಾರ. ಇದೇ ನವಯುವಕರ ರಾಷ್ಟ್ರೀಯ ಜವಾಬ್ದಾರಿ ಮತ್ತು ಕರ್ತವ್ಯ.

# ಆದರ್ಶಪ್ರಾಯರು

–ಆರ್.ಆರ್.ರುದ್ರಪ್ಪ

ಕರ್ನಾಟಕ ಕಂಡ ಕೆಲವೇ ಅಪರೂಪದ ರಾಜಕಾರಣಿಗಳಲ್ಲಿ ದಿ॥ ಕಡಿದಾಳ್ ಮಂಜಪ್ಪನವರು ಒಬ್ಬರು. ಅವರನ್ನು ನಾನು ಬಾಲಕನಾಗಿದ್ದ ೧೯೪೧ ರ ಕಾಲದಿಂದ ನೋಡಿ ಬಲ್ಲೆ. ನೀಳಕಾಯದ ಸದಾ ಹಸನ್ಮುಖರಾಗಿದ್ದ ಅವರು ಉದ್ದನೆಯ ಕೋಟು ಧರಿಸಿ ವಕೀಲರ ಚೀಲವನ್ನು ಕೈಯಲ್ಲಿ ಹಿಡಿದು ಸಣ್ಣ ಊರಾಗಿದ್ದ ಅಂದಿನ ಶಿವಮೊಗ್ಗ ಪಟ್ಟಣದ ದೊಡ್ಡಪೇಟೆ ಇಂದಿನ ಗಾಂಧಿ ಬಜಾರ್‌ನಲ್ಲಿ ನಡೆದು ಬರುತ್ತಿದ್ದ ಅ ಗೌರವಾನ್ವಿತ ದೃಶ್ಯ ಕಣ್ಣಲ್ಲಿ ಇರಿಸಿದಂತಿದೆ. ದೊಡ್ಡೆತ್ತಿನಹಳ್ಳಿ ನಾರಾಯಣಪ್ಪನವರ ಜವಳಿ ಅಂಗಡಿಗೆ ಆಗಾಗ ಭೇಟಿ ನೀಡುತ್ತಿದ್ದ ಅವರನ್ನು ಸಮೀಪದಿಂದ ನೋಡುವ ಅವಕಾಶ ನನಗೆ ಲಭ್ಯವಾಗಿತ್ತು.

೧೯೪೨ ರ ಕಾಲ. ನಾನಾಗ ಶಿವಮೊಗ್ಗದಲ್ಲಿ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿ. "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಚಳುವಳಿಯ ಪ್ರಾರಂಭ. ಅಂದಿನ ರಾಜಕೀಯ ಸ್ಥಿತಿಯ ಅರಿವಿದ್ದ ಅವರು ಕಾಂಗ್ರೆಸ್ ನಾಯಕರ ಒಡಗೂಡಿ ಶಿವಮೊಗ್ಗದ ಐತಿಹಾಸಿಕ ರಾಷ್ಟ್ರೀಯ ಹೋರಾಟದ ಕೇಂದ್ರವಾಗಿದ್ದ ರಾಮಣ್ಣಶೆಟ್ಟಿ ಪಾರ್ಕ್‌ನಿಂದ ನಮ್ಮೂರಿನ ಹಿರಿಯ ಕಾಂಗ್ರೆಸ್ ನಾಯಕರೊಟ್ಟಿಗೆ "ಪ್ರಭಾತ್ ಫೇರಿ"ಯಲ್ಲಿ ಇಂಗ್ಲಿಷರ ವಿರುದ್ಧ ಘೋಷಣೆ ಮಾಡುತ್ತಾ ಕಡಿದಾಳ ಮಂಜಪ್ಪನವರು ಸಾಗುತ್ತಿದ್ದ ದೃಶ್ಯ ನೋಡಲು ಸಿಗುತ್ತಿತ್ತು. ನಾನೂ ಘೋಷಣೆ ಹಾಕಲು ಸೇರುತ್ತಿದ್ದೆ. ಆ ಹಿರಿಯರನ್ನು ಸಮೀಪದಿಂದ ನೋಡುತ್ತಾ ಇದ್ದಿದ್ದು ನನಗೆ ಸಂತೋಷ ಮತ್ತು ಸ್ಫೂರ್ತಿ ನೀಡುತ್ತಿತ್ತು. ಅಂದಿನ ಅಂತಹ ನಿಸ್ವಾರ್ಥ, ಪ್ರಾಮಾಣಿಕ, ಸರಳ, ಹಿರಿಯ ನಾಯಕರಾಗಿದ್ದ ಆವರು ಮುಂಚೂಣಿಯಲ್ಲಿದ್ದರು. ಜೊತೆಗೆ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದವರು.

೧೯೪೫–೪೬ ರಲ್ಲಿ ಕಾಂಗ್ರೆಸ್ ಸಭೆಗಳು ನಡೆಯುತ್ತಿದ ಕಾಲ. ರಾಷ್ಟ್ರೀಯ ನಾಯಕರುಗಳು ಶಿವಮೊಗ್ಗೆಗೆ ಬಂದರೆ ತುಂಗಾ ತೀರದ ಚನ್ನಗಿರಿ ರಾಮಣ್ಣ ಶೆಟ್ಟರ ಪಾರ್ಕಿನ ಮಧ್ಯದಲ್ಲಿದ್ದ ವೇದಿಕೆಯೇ ಸಾರ್ವಜನಿಕ ವೇದಿಕೆ. ಆ ದಿನಗಳಲ್ಲಿ ಸಾರ್ವಜನಿಕ ಸಭೆಗಳಲ್ಲಿ ಮೈಕಿನ ವ್ಯವಸ್ಥೆಯಿರಲಿಲ್ಲ. ಮೆಗಾಫೋನ್ ಬಳಸಿ ರಾಷ್ಟ್ರೀಯ ನಾಯಕರು ಸಭೆಗಳಲ್ಲಿ ಮಾತನಾಡುತ್ತಿದ್ದ ಕಾಲ. ಅಲ್ಲೆಲ್ಲಾ ಕಡಿದಾಳರದ್ದು ಮುಖ್ಯ ಪಾತ್ರ.

೧೯೪೬ ರಲ್ಲಿ ನ್ಯಾಯವಿಧಾಯಕ ಸಭೆಗೆ ಕಡಿದಾಳ್ ಮಂಜಪ್ಪನವರು ಅವಿರೋಧವಾಗಿ ಆಯ್ಕೆಯಾದರು. ಬದುಕಿಗೆ ವಕೀಲ ವೃತ್ತಿ, ನಾಡಿಗಾಗಿ ರಾಜಕೀಯಗಳೆರಡನ್ನೂ ಜೊತೆ ಜೊತೆಯಾಗಿ ಒಪ್ಪಿಕೊಂಡವರವರು. ವಕೀಲ ವೃತ್ತಿಯಲ್ಲಿ ಅವರಿಗಿದ್ದ ನಿಷ್ಠೆ ಅಪೂರ್ವ. ಚಿಕ್ಕ ಬ್ರಾಹ್ಮಣರ ಕೇರಿಯ ಮಂಡಿಯ ಸಾಲಿನಲ್ಲಿ ಮಹಡಿಯೊಂದರಲ್ಲಿ ಅವರ ಕಛೇರಿ. ಸೈಕಲ್ಲೇರಿ ಅಂದು ಜಿಲ್ಲಾ ಕಛೇರಿ ಆವರಣದಲ್ಲಿದ್ದ ನ್ಯಾಯಾಲಯಕ್ಕೆ ಹಾಜರಾಗಿ, ವಿವಿಧ ನ್ಯಾಯಾಲಯಗಳಲ್ಲಿ ವಾದಿಸುತ್ತಿದ್ದ ಕೆಲವು ಹಿರಿ–ಕಿರಿಯ ವಕೀಲರ ಮುಂದಾಳಾಗಿದ್ದ ಅವರನ್ನು ಸೂಕ್ಷ್ಮವಾಗಿ ನೋಡುತ್ತಿದ್ದೆ. ಮೊಣಕಾಲಿನ ತನಕ ಉದ್ದವಿರುವ ಕಪ್ಪು ಕೋಟು ಧರಿಸುತ್ತಿದ್ದ ೮–೧೦ ಜನ ವಕೀಲರಲ್ಲಿ ಅವರೂ ಸೇರಿ ಶ್ರೀ ಟಿ. ವೆಂಕಟಸುಬ್ಬಾ ಶಾಸ್ತ್ರಿಗಳು, ಕುಕ್ಕೆ ಸೀತಾರಾಮ ಶಾಸ್ತ್ರಿಗಳು, ಶ್ರೀ ಗುರುಲಿಂಗಪ್ಪ ಜವಳಿಯಂಥವರು ಇರುತ್ತಿದ್ದುದು, (೧೯೪೬–೪೯ ವರೆಗಿನ ಸಂಗತಿ) ನನ್ನ ನೆನಪಿನಲ್ಲಿ ಅಳಿಸದೇ ಉಳಿದಿದೆ. ನಾನಾಗ ಶಿವಮೊಗ್ಗ ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದ ಕಾಲವದು. ೧೯೪೯–೫೧ ನಾನು ಇಂಟರ್ ಮೀಡಿಯಟ್‌ನಲ್ಲಿದ್ದ ದಿನಗಳು. ಅಗ ಕಡಿದಾಳರು ವಕೀಲ ವೃತ್ತಿಯಲ್ಲಿ ಮೇಲ್ಮಟ್ಟದಲ್ಲಿದ್ದರು. ಅವರ ಕಛೇರಿಯಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ಗೇಣಿದಾರ ಕಕ್ಷಿಗಳ ಹಿಂಡೇ ಇರುತ್ತಿತ್ತು! ಒಂದು ದಿನ ಧೈರ್ಯಮಾಡಿ ಬಂದಿದ್ದ ಕಕ್ಷಿದಾರರು ಖಾಲಿಯಾಗುವವರೆಗೆ ಅವರ ಕಛೇರಿಯಲ್ಲಿದ್ದೆ. ನನ್ನ ಮೇಲೆ ಅವರ ಗಮನ ಬಿತ್ತು. "ನೀನೇತಕ್ಕೆ ಕಾಯುತ್ತಿದ್ದೀ?" ಎಂದು ವಿಚಾರಿಸಿದರು. ನನ್ನ ವಿದ್ಯೆಗೆ ಬಡತನದ ಬಿಸಿ ತಟ್ಟಿದ್ದ ಕಾಲವದು. ಕಡಿದಾಳರು ಆಗ ಶಿವಮೊಗ್ಗದ ಇಂಟರ್ ಮೀಡಿಯೆಟ್ ಕಾಲೇಜಿನ ವಿದ್ಯಾರ್ಥಿ ವೇತನ ಸಮಿತಿಯ ಸದಸ್ಯರಾಗಿದ್ದರು. ಮೊದಲ ಬಾರಿಗೆ ಅವರಲ್ಲಿ ಸಹಾಯಕ್ಕಾಗಿ ನಿವೇದಿಸಿದೆ. ಅಂಕಗಳನ್ನು ಪರಿಶೀಲಿಸಿದ ಅವರು ಶೇಕಡವಾರು ಕಡಿಮೆ ಅಂಕಗಳನ್ನು ಪಡೆದಿದ್ದಕ್ಕಾಗಿ "ಉಚಿತ ವಿದ್ಯಾಭ್ಯಾಸಕ್ಕೆ" ಅನುಕೂಲ ಮಾಡಿ ಕೊಡುವುದಾಗಿಯೂ, ಮುಂದಿನ ವರ್ಷ ಚೆನ್ನಾಗಿ ಓದಿ ಹೆಚ್ಚು ಅಂಕಗಳನ್ನು ಪಡೆದರೆ ವಿದ್ಯಾರ್ಥಿವೇತನವನ್ನು ಕೊಡಿಸುವುದಾಗಿ ಭರವಸೆಯಿತ್ತರು. ೧೬–೧೭ ವರ್ಷದ ಬಾಲಕನಾಗಿದ್ದ ನನ್ನಲ್ಲಿ ವಿಶ್ವಾಸ ತೋರಿ ಆಶೀರ್ವದಿಸಿದರು ಹಾಗೆಯೇ ಮುಂದಿನ ವರ್ಷಗಳಲ್ಲಿ ಸಹಾಯ ಮಾಡಿದರು. ನನ್ನಂತೆಯೇ ಸಹಾಯ ಪಡೆದ ವಿದ್ಯಾರ್ಥಿಗಳ ಸಂಖ್ಯೆ ದೊಡ್ಡದು. ನಾನು ಬೆಳೆಯುತ್ತಾ ಸಾಗಿದಂತೆ ಅವರ ಸದ್ಗುಣಗಳು ನನಗೆ ಗೋಚರವಾದವು.

೧೯೫೨ ನಂತರದಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನನ್ನ ವಿದ್ಯಭ್ಯಾಸ ಸಾಗಿದ್ದ ಕಾಲ. ೧೯೫೫ರಲ್ಲಿ ಬೆಂಗಳೂರಿನ ಸರ್ಕಾರಿ ಕಾನೂನು ಕಾಲೇಜಿನ ವಿದ್ಯಾರ್ಥಿ.

೧೯೫೨ನೇ ಏಪ್ರಿಲ್‌ನಲ್ಲಿ ಶ್ರೀ ಕೆಂಗಲ್ ಹನುಮಂತಯ್ಯನವರು "ಸಂಪುಟ ರಚನೆ" ಮಾಡಿಕೊಂಡ ಸಮಯವದು. ಆಯ್ಕೆಯಾದ ಅರು ಜನ ಮಂತ್ರಿಗಳಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಸೇರಿದ್ದರು. ಅತ್ಯಂತ ದಕ್ಷ ಅಡಳಿತ ನೀಡಿದರು. ವಾಸ ಶಾಂತಿನಗರದ ಸಾಧಾರಣ ಮನೆಯಲ್ಲಿ. ತಮ್ಮ ಕಷ್ಟ ಕಾರ್ಪಣ್ಯಗಳನ್ನು ನಿವೇದಿಸಲು ಅವರ ಮನೆಗೆ ಬರುತ್ತಿದ್ದ ಸಾಮಾನ್ಯರನ್ನು ವಿಚಾರಿಸಿ ವಿವೇಕತನದಿಂದ ಸರ್ಕಾರದ ಮೂಲಕ ಅವರ ಸಮಸ್ಯೆಗಳನ್ನು ಪರಿಹರಿಸುತ್ತಿದ್ದ ಚಿತ್ರ ಇಂದಿಗೂ ನನ್ನ ನೆನಪಿನ ಭಂಡಾರದಲ್ಲಿದೆ. ತಲೆ ಎತ್ತಿಕೊಂಡು ಸ್ವಾಭಿಮಾನದಿಂದ ಕಾರ್ಯತಃ ಬದುಕಿದ ಅವರು ತರುಣರಿಗೆ ಮತ್ತೆಲ್ಲರಿಗೂ ಮಾರ್ಗದರ್ಶನ ನೀಡಿದ್ದ ಅಪ್ಪಟ ಪ್ರಾಮಾಣಿಕ ರಾಜಕಾರಣಿ ವಕೀಲರು.

ರಾಜಕೀಯದಿಂದ ನಿವೃತ್ತಿ ಬಯಸಿ ಉಚ್ಚನ್ಯಾಯಾಲಯದಲ್ಲಿ ೧೯೬೨ ನಂತರ ವಕೀಲ ವೃತ್ತಿಯನ್ನೇ ಅವಲಂಬಿಸಿ ಬದುಕಿದ್ದ ವಿರಳರಲ್ಲಿ ವಿರಳರು. ಮುಖ್ಯ ನ್ಯಾಯಮೂರ್ತಿಗಳಾಗಿದ್ದ ಉಚ್ಚ ನ್ಯಾಯಲಯದ ಶ್ರೀ ಹೊಂಬೇಗೌಡರು ಅವರ ಬೀಗರು. ಗೌರವಾನ್ವಿತ ಉಭಯತರದಲ್ಲಿ ಉತ್ತಮ ಸಂಬಂಧವಿತ್ತು. ಅದರೆ ಕರ್ತವ್ಯ ನಿಷ್ಠರಾದ ಅವರು ಎಲ್ಲವೂ ಸಕಾಲದಲ್ಲಿಯೇ ಅಗಬೇಕೆಂದು ಬಯಸುವವರು. ಶಿವಮೊಗ್ಗದ ಕಕ್ಷಿದಾರರ ಪರವಾಗಿ ಬೇರೊಬ್ಬ ವಕೀಲರು ವಾದಿಸಿ, ಕಟ್ಲೆಯ ವಿಚಾರಣೆ ಮುಗಿದಿತ್ತು. ಅದರೆ, ತೀರ್ಪು ೬-೮ ತಿಂಗಳುಗಳಾದರು ಹೊರಬಂದಿರಲಿಲ್ಲ. ಅ ವ್ಯಕ್ತಿ ಮಾಮೂಲಿನಂತೆ ಕಡಿದಾಳರ ಮನೆಗೆ ಭೇಟಿ ನೀಡಿದಾಗ, ಅ ವಿಷಯ ತಿಳಿದ ಶ್ರೀ ಕಡಿದಾಳ್ ಮಂಜಪ್ಪನವರು ಮುಖ್ಯ ನ್ಯಾಯ ಮೂರ್ತಿಯವರಿಗೆ ದೂರವಾಣಿಯ ಮೂಲಕ ನ್ಯಾಯ ವಿತರಣೆಯಲ್ಲಾಗಿರುವ ಅಪಾರ ವಿಳಂಬದ ಬಗ್ಗೆ ಪ್ರಸ್ತಾಪಿಸಿ "ಶೀಘ್ರ ನ್ಯಾಯ ವಿತರಣೆ ಅಗದಿದ್ದರೆ ಅನ್ಯಾಯವಲ್ಲವೆ?" ಎಂದು ಪ್ರಶ್ನಿಸಿದ ಒಂದೇ ವಾರದಲ್ಲಿ ತೀರ್ಪು ಹೊರಬಿದ್ದಿತ್ತಂತೆ. ಅಂತಹ ನ್ಯಾಯವಾದಿ ಕಾರ್ಯತತ್ಪರತೆಗೆ ಏನನ್ನಬೇಕು ಹೇಳಿ? ನ್ಯಾಯ ನಿಷ್ಠುರತೆ ಮತ್ತು ಪ್ರಾಮಾಣಿಕತೆಗಳಿಗೆ ಅವರನ್ನು ಪ್ರೀತಿಸದವರೇ ಇಲ್ಲ.

ಸುಮಾರು ೨೩ ವರ್ಷಗಳ ಹಿಂದಿನ ಒಂದು ಸಂಗತಿ ಅವರನ್ನು ನೆನೆಯಲು ನನಗೆ ಸೂಕ್ತ ಎನ್ನಿಸುತ್ತದೆ. ೧೯೮೫ ರಲ್ಲಿ ನಾನು ಶಿವಮೊಗ್ಗ "ವಕೀಲರ ಸಂಘದಲ್ಲಿ" ಪದಾಧಿಕಾರಿಯಾಗಿದ್ದೆ. ನಮ್ಮ ಶಿವಮೊಗ್ಗ ನಗರದಲ್ಲಿ ಕರ್ನಾಟಕ ರಾಜ್ಯ ವಕೀಲರ ಸಮ್ಮೇಳನವನ್ನು ಜರುಗಿಸಲು ಉದ್ದೇಶಿಸಲಾಗಿತ್ತು. ದಿ॥ ಶ್ರೀ ಟಿ. ವೆಂಕಟರಾಮ ಶಾಸ್ತ್ರಿಯವರ ಅಧ್ಯಕ್ಷತೆಯಲ್ಲಿ ರಚಿತವಾಗಿದ್ದ ಸಮಿತಿಯು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿದ್ದ ಶ್ರೀ ಇ.ಎಸ್. ವೆಂಕಟರಾಮಯ್ಯ

ಮತ್ತು ಇತರೆ ನ್ಯಾಯಾಧೀಶರುಗಳಿಗೆ ಆಮಂತ್ರಿಸಿತ್ತು. ಉಚ್ಚ ನ್ಯಾಯಾಲಯದ ಹಿರಿಯ ವಕೀಲರಾಗಿದ್ದ, ಮಾಜಿ ಮುಖ್ಯಮಂತ್ರಿಗಳಾಗಿದ್ದ ಶಿವಮೊಗ್ಗದವರೇ ಆದ ಶ್ರೀ ಕಡಿದಾಳ ಮಂಜಪ್ಪನವರನ್ನು ಸರ್ವಾನುಮತದಿಂದ ಸಮ್ಮೇಳನದ ಅಧ್ಯಕ್ಷತೆವಹಿಸಲು ಆಮಂತ್ರಿಸಿತ್ತು. ಆಹ್ವಾನಿತರಲ್ಲಿ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ರಾಮಕೃಷ್ಣ ಹೆಗ್ಗಡೆಯವರೂ ಇದ್ದರು. ೨೭-೧೨-೮೫ ರಿಂದ ೩ ದಿನಗಳ ಕಾಲ ಜರುಗಿದ ಆ ಸಮ್ಮೇಳನ ಪೂರ್ತಿಯಾಗಿ ಅವರ ಅಧ್ಯಕ್ಷತೆಯಲ್ಲೇ ಜರುಗಿತು. ಆಗ ಅವರು ನೀಡಿದ ಅಧ್ಯಕ್ಷೀಯ ಭಾಷಣ ಚಾರಿತ್ರಿಕವೆನಿಸಿಕೊಂಡಿದೆ. ನ್ಯಾಯಾಂಗಕ್ಕಿರುವ ಪ್ರಾಮುಖ್ಯತೆ, ಅಲ್ಲಿರಬೇಕಾದ ಪರಿಶುದ್ಧತೆ, ನಿಷ್ಪಕ್ಷಪಾತ ಮತ್ತು ಅಧ್ಯಯನ ಶೀಲತೆ, ನ್ಯಾಯ ವಿತರಣೆಯಲ್ಲಿ ಹೀಗಿರಬೇಕೆಂದಿದ್ದಾರೆ. ಅದರ ಪಾಠ ಹೀಗಿದೆ:

"ನನ್ನ ಅಧ್ಯಕ್ಷ ಭಾಷಣದಲ್ಲಿ ಇತ್ತೀಚಿನ ವರ್ಷಗಳಲ್ಲಿ ಭ್ರಷ್ಟಾಚಾರದ ಸೋಂಕು ಮತ್ತು ಸ್ವಜನ ಪಕ್ಷಪಾತ ನ್ಯಾಯಾಲಯಗಳಿಗೂ ತಗುಲಿದೆಯೆಂದೂ, ಕೆಲವರು ನ್ಯಾಯಾಧೀಶರು ಹೊರಗಿನ ಪ್ರಭಾವಕೊಳ್ಳಗಾಗುತ್ತಾರೆಂಬುದಾಗಿ ಆಪಾದನೆ ಇದೆಯೆಂದೂ ಹೇಳಿದ್ದಲ್ಲದೇ, ಲಂಚಕೋರ ನ್ಯಾಯಮೂರ್ತಿಗಳನ್ನು ಬಹಳ ಕಟುವಾಗಿ ಟೀಕಿಸಿದ್ದೆ. ಕೆಲವರು ನ್ಯಾಯಮೂರ್ತಿಗಳಾಗಿ ನೇಮಕಗೊಂಡ ನಂತರ ಬಹಳ ಸಂತೃಪ್ತರಾಗಿ ತಾವು ಕಲಿಯಬೇಕಾದುದನ್ನೆಲ್ಲಾ ಕಲಿತಿರುವುದರಿಂದ ಮುಂದೇನೂ ಕಲಿಯಬೇಕಾದುದಿಲ್ಲ ಎಂಬ ಭಾವನೆಯಿಂದ ಜ್ಞಾನ ಸಂಪಾದನೆಗಾಗಿ ಕಷ್ಟ ಪಡುವ ಗೊಡವೆಗೆ ಹೋಗುವುದೇ ಇಲ್ಲವೆಂದೂ, ಕೆಲವು ಕಡೆಗಳಲ್ಲಿ ನ್ಯಾಯಾಧೀಶರು ಸರ್ವಾಧಿಕಾರಿಗಳಂತೆ ವರ್ತಿಸುತ್ತಾ ವಕೀಲರನ್ನು ಶಾಲಾ ಮಕ್ಕಳಂತೆ ಕಾಣುತ್ತಾರೆಂದೂ, ಅಮಲೇರಿಸುವ ಎಲ್ಲಾ ಮಾದಕ ದ್ರವ್ಯಗಳಿಗಿಂತ ಅಧಿಕಾರದ ಅಮಲು ಅಪಾಯಕರವಾದುದೆಂದೂ, ಅಧಿಕಾರದ ಅಮಲಿನಿಂದ ಮೆರೆಯುತಕ್ಕ ನ್ಯಾಯಾಧೀಶರಾಗಲಿ, ಮಂತ್ರಿಗಳಾಗಲೀ ಅಥವಾ ಅಧಿಕಾರಿಗಳಾಗಲೀ ತಮ್ಮ ಸುತ್ತಮುತ್ತಲಿನವರಿಗೆ ತೊಂದರೆಯುಂಟು ಮಾಡುತ್ತಾರೆಂದೂ, ನ್ಯಾಯಾಧೀಶರುಗಳು ತಮ್ಮ ನ್ಯಾಯಾಂಗದ ಅಧಿಕಾರದ ಜೊತೆಗೆ ನೈತಿಕ ಅಧಿಕಾರವನ್ನು ಹೊಂದಿರಬೇಕೆಂದೂ ಮುಂತಾಗಿ ಹೇಳಿದ್ದೆ. ಇತ್ತೀಚೆಗೆ ವಕೀಲ ವೃಂದದಲ್ಲಿ ಕೆಲವು ವಕೀಲರು ವಕೀಲ ಧರ್ಮಕ್ಕೆ ವಿರುದ್ಧವಾದ ಕಾರುಬಾರುಗಳಲಿ ನಿರತರಾಗಿರುತ್ತಾರೆಂದೂ, ಇನ್ನು ಕೆಲವರು ವಕೀಲರುಗಳು ನ್ಯಾಯಾಧೀಶರಿಗೆ ಕೊಡಬೇಕೆಂದು ಹೇಳಿ ತಮ್ಮ ಅಜ್ಞಾನಿಗಳಾದ ಕಕ್ಷಿದಾರರಿಂದ ಅಧಿಕ ಪ್ರಮಾಣದಲ್ಲಿ ಹಣವನ್ನು ವಸೂಲು ಮಾಡುತ್ತಿದ್ದಾರೆಂದೂ, ಖೋಟಾ ವೈದ್ಯರು ರೋಗಿಗಳನ್ನು ಹಾಳು ಮಾಡುವಂತೆ ಕಾನೂನನ್ನು ತಿಳಿಯದ

ವಕೀಲರು ತಮ್ಮ ಕಕ್ಷಿಗಾರರನ್ನು ಹಾಳು ಮಾಡುತ್ತಿದ್ದಾರೆಂದೂ ನನ್ನ ಧೀರ್ಘ ಭಾಷಣದಲ್ಲಿ ಹೇಳಿದ್ದೆ. ಶ್ರೀ ರಾಮಕೃಷ್ಣ ಹೆಗ್ಗಡೆಯವರ ಪ್ರತಿಭೆ, ಜಾಣತನ ಇವುಗಳನ್ನು ಪ್ರಶಂಸಿಸಿದೆ. ಆದರೆ, ಅ ಪ್ರಶಂಸೆಯ ಜೊತೆಯಲ್ಲಿ ಅವರ ಆಡಳಿತದಲ್ಲಿ ಆವರಿಸಿರುವ ಭ್ರಷ್ಟಾಚಾರವನ್ನು ನಿರ್ಮೂಲ ಮಾಡಿ, ಆಡಳಿತವನ್ನು ದುರಸ್ತುಗೊಳಿಸಲು ಯಾವ ಕಾರ್ಯಕ್ರಮಗಳನ್ನು ಕೈಗೊಳ್ಳದಿರುವುದಕ್ಕೆ ನನ್ನ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಲ್ಲದೆ ಅಂತಿಮದಲ್ಲಿ ಅದಷ್ಟು ಜಾಗೃತೆ ರಾಜ್ಯದ ಸಾರ್ವಜನಿಕ ಆಡಳಿತವನ್ನು ಸರಿಪಡಿಸಲು ಮತ್ತು ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಲು ಕ್ರಮ ಕೈಗೊಳ್ಳಬೇಕೆಂದು ಅವರನ್ನು ಪ್ರಾರ್ಥಿಸಿದ್ದೆ. ಆದರೆ, ಆ ಬಗ್ಗೆ ಅವರು ಯಾವ ಕ್ರಮವನ್ನು ಕೈಗೊಳ್ಳಲಿಲ್ಲವೆಂದು ಅತಿ ವಿಷಾದದಿಂದ ಹೇಳಬೇಕಾಗಿದೆ". ಅಂದಿನ ಮತ್ತು ಇಂದಿನ ಸ್ಥಿತಿಗಳಿಗೆ ಅವರ ಮಾತುಗಳು ಕನ್ನಡಿ ಹಿಡಿದಿವೆ!

ಶ್ರೀ ಕಡಿದಾಳ್ ಮಂಜಪ್ಪನವರ ಜೀವನದಲ್ಲಿ ವಕೀಲ ವೃತ್ತಿ ಮತ್ತು ರಾಜಕೀಯಗಳು ದ್ವಂದ್ವದ ಸಂಗತಿಗಳಾಗಿದ್ದವು. ಅಂತಿಮವಾಗಿ ರಾಜಕೀಯದಿಂದ ರಾಜ್ಯಪಾಲ ಹುದ್ದೆಗೂ ಮನಸೋಲದೇ, ನಾಲ್ಕನೇ ಬಾರಿಗೆ ವಕೀಲ ವೃತ್ತಿಯಲ್ಲಿಯೇ ಮುಂದುವರೆಯಲು ತೀರ್ಮಾನಿಸಿದರು. ಉಚ್ಚನ್ಯಾಯಾಲಯದಲ್ಲಿ ಪ್ರಾಮಾಣಿಕವಾಗಿ ಕೆಲಸಮಾಡಿದರು. ಮಂಜಪ್ಪನವರನ್ನು ಬೆಂಗಳೂರಿನಲ್ಲಿ ಸಮೀಪದಿಂದ ಸಾರ್ವಜನಿಕರು, ವಕೀಲರು ಕಾಣಲು ಸಾಧ್ಯವಾದದ್ದು ೧೯೬೨ ರ ನಂತರದಲ್ಲಿ, ಬೆಂಗಳೂರಿನಲ್ಲಿ ನೆಲೆಗೊಂಡ ನಂತರ (೧೯೫೨ ರಿಂದ) ಹಿರಿಯ ರಾಷ್ಟ್ರ ನಾಯಕರಿಗೆ ಮಂಜಪ್ಪನವರ ವ್ಯಕ್ತಿತ್ವದ ಪೂರ್ಣ ಪರಿಚಯವಾಯಿತು. ಅವರು ನಂಬಿ ಬಾಳಿದರು. ಅನಂತರ ರಾಮರಾಜ್ಯದ ಕನಸು ನನಸಾಗದೆ ನೊಂದು ಬಾಳಿದರು.

ಮೌಲ್ಯಗಳಿಗೇ ಹೆಸರಾದ ಹಂಗಾಮಿ ಪ್ರಧಾನಿಗಳಾಗಿದ್ದ ದಿ॥ ಶ್ರೀ ಗುಲ್ಜಾರಿಲಾಲ್ ನಂದಾ ಮತ್ತು ಪ್ರಧಾನಿಗಳಾಗಿದ್ದ ದಿ॥ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿಯವರ ನಿಕಟ ಸಂಪರ್ಕವಿರಿಸಿಕೊಂಡಿದ್ದ ಕಡಿದಾಳರು ಅವರಿಗೆ ಸಮಾನರಾಗಿ ಅವರಂತೆ ಸರಳವಾಗಿ ಬದುಕಿದವರು, ಅವರು ನಮಗೆ ಅದರ್ಶಪ್ರಾಯರು.

# ಪಿತೃ ಸಮಾನರು

**–ಸೋನಕ್ಕ ಗೋಪಾಲಗೌಡ ಶಾಂತವೇರಿ**

ನನಗೆ ಕಡಿದಾಳ ಮಂಜಪ್ಪನವರ ಹೆಸರು ಪರಿಚಯವಾಗಿ ೫೦-೫೨ ವರ್ಷಳೇ ಕಳೆದವು. ಸಮಯ ಸಾಗಿದಂತೆ ಅವರೊಬ್ಬ ಲೇಖಕ, ನ್ಯಾಯವಾದಿ, ಪ್ರಾಮಾಣಿಕ, ಪ್ರಭಾವಶಾಲಿ ರಾಜಕಾರಣಿಯಾಗಿ ಕಂಡಿದ್ದಾರೆ. ರಾಜಕಾರಣದಲ್ಲಿ ಶಿಕ್ಷಣಮಂತ್ರಿ, ಕಾನೂನು ಮಂತ್ರಿ ಮತ್ತು ಕಂದಾಯ ಮಂತ್ರಿ ಪದವಿಗಳನ್ನು ಹೊಂದಿ ನಿಸ್ವಾರ್ಥ ಸೇವೆ ಸಲ್ಲಿಸಿದ್ದಾರೆ. ಭೂಸುಧಾರಣೆಯ ರೂವಾರಿ ಎನಿಸಿಕೊಂಡಿದ್ದಾರೆ. ಹಳೇ ಮೈಸೂರು ರಾಜ್ಯದ ಕೊನೆಯ ತಿಂಗಳುಗಳಲ್ಲಿ ಮುಖ್ಯಮಂತ್ರಿ ಪದವಿಗಳಿಸಿದ ಹೆಗ್ಗಳಿಕೆ ಆವರದು. ಅವರ ಆದರ್ಶ ಜೀವನ ಅನುಕರಣೆಯಿಂದಲೂ, ಅವರ ಆದೇಶಗಳನ್ನು ಪಾಲಿಸುವುದರಿಂದಲೂ ಅನೇಕರು ಸಾರ್ಥಕ ವ್ಯಕ್ತಿಗಳಾಗಿದ್ದಾರೆ. ನಾನೂ ಅವರಿಂದ ವಿಶೇಷ ಸಹಾಯ ಪಡೆದುದಕ್ಕೆ ಖುಶಿ ಪಟ್ಟಿದ್ದೇನೆ.

೧.೧೧.೫೬ ರಿಂದ ಹೊಸ ಮೈಸೂರು ರಾಜ್ಯ ನಿರ್ಮಾಣವಾಯಿತು. ಮುಂಬಯಿ ಕರ್ನಾಟಕ, ಹೈದರಾಬಾದ್, ಹಳೇ ಮೈಸೂರು ಪ್ರಾಂತದೊಡನೆ ಸೇರಿಕೊಂಡವು. ನಾನು ಧಾರವಾಡ, ಅಂದರೆ ಮುಂಬಯಿ ಕರ್ನಾಟಕಕ್ಕೆ ಸೇರಿದವಳು. ನಮ್ಮ ತಂದೆಯವರು ಶ್ರೀ ಡಿ.ಎಲ್.ಪಾಟೀಲರು. ೧೯೪೭ ಆಗಸ್ಟ್ ೧೪ರ ವರೆಗೆ ರಾವಸಾಹೇಬ ಪದವಿ ಹೊಂದಿದ್ದರು. ಅವರು ವಕೀಲರು, ಸಮಾಜ ಸೇವಕರು, ರಾಜಕಾರಣದ ಬಗ್ಗೆಯೂ ಆಸ್ಥೆ ಇದ್ದವರು. ರಾಜ್ಯ ಪುನರ್ವಿಂಗಡಣೆ ನಂತರ, ಕೋರ್ಟು, ಕಛೇರಿ ಕೆಲಸಗಳಿಗಾಗಿ ಮುಂಬಯಿ ಬದಲು ಬೆಂಗಳೂರಿಗೆ ಹೋಗಬೇಕಾಯಿತು. ಡಾ. ಆರ್.ನಾಗನಗೌಡರು, ಮಂತ್ರಿಗಳು ನಮ್ಮ ತಂದೆಯವರ ಆಪ್ತಸ್ನೇಹಿತರು. ಅವರ ಮೂಲಕ ಶ್ರೀ ಕಡಿದಾಳ ಮಂಜಪ್ಪನವರ ಪರಿಚಯವಾಯಿತು. ಅಚಾನಕವಾಗಿ ನನ್ನ ಮದುವೆಯ ವಿಷಯ ಚರ್ಚೆ ನಡೆದಾಗ ಶ್ರೀ ಕಡಿದಾಳರು ಒಬ್ಬ ವರನನ್ನು ಸೂಚಿಸಿದರಂತೆ ಅವರೇ ಶ್ರೀ ಗೋಪಾಲಗೌಡರು, ಕಡಿದಾಳ ಮಂಜಪ್ಪನವರ ಆಪ್ತಶಿಷ್ಯರು, ಸಮಾಜವಾದಿ ಪಕ್ಷದ ಶಾಸಕರು. ಈ ಪ್ರಸ್ತಾಪ ಸಂಭವಿಸಿದ್ದು ೧೯೫೬-೫೭ ರಲ್ಲಿ. ಹಳೇ ಮೈಸೂರು ಪ್ರದೇಶದೊಡನೆ ಹೊಸ ಪ್ರದೇಶಗಳು ಸೇರಿ ಕರ್ನಾಟಕ ಏಕೀಕರಣವಾದ ಘಟನೆ ಹಳೆ ಮತ್ತು ಹೊಸಪ್ರದೇಶಗಳಿಗೆ ಸಂಬಂಧಪಟ್ಟ ನಮ್ಮಿಬ್ಬರನ್ನು ಕೂಡಿಸಲು ನಾಂದಿಯಾಯಿತು. ಆದರೆ ಈ ವಿಷಯ ಮುಂದೆ

೫–೬ ವರ್ಷಗಳ ವರೆಗೆ ಸ್ಥಗಿತವಾಗಿಯೇ ಉಳಿದಿತ್ತು. ಏತನ್ಮಧ್ಯೆ ನನ್ನ ಮನಸ್ಸಿನಲ್ಲಿ ಈ ಬಗ್ಗೆ ಅನಿಸಿಕೆಗಳು. ಭಾವನೆಗಳು ಉಂಟಾಗಿ ವ್ಯಕ್ತಪಡಿಸಲಾಗದೆ ಉಳಿದು ಬಿಟ್ಟವು. ಆ ಸಮಯದಲ್ಲಿ ಸದಾ ಸುದ್ದಿಯಲ್ಲಿರುತ್ತಿದ್ದ ಗೌಡರ ವಿಷಯಕ್ಕೆ ಸಂಬಂಧಪಟ್ಟ ಸಂಗತಿಗಳ ವಿವರಗಳನ್ನು ಪತ್ರಿಕೆ ಮತ್ತು ರೇಡಿಯೋಗಳಿಂದ ತಿಳಿಯುತ್ತಿದ್ದೆ. ಮೇಲಾಗಿ ೧೯೬೨–೬೩ ರಲ್ಲಿ ಬೆಂಗಳೂರಿನ ವಿ.ಹೆಚ್.ಡಿ. ಗೃಹವಿಜ್ಞಾನ ಕಾಲೇಜಿನಲ್ಲಿ ಓದುತ್ತಿದ್ದಾಗ ಮಹಾರಾಣಿ ಕಾಲೇಜಿನ ವಿದ್ಯಾರ್ಥಿನಿ ನಿಲಯದ ಕೊಠಡಿಯಲ್ಲಿ ವಾಸವಾಗಿದ್ದೆ. ಸೆಷನ್ ನಡೆದಾಗ ಒಂದು ದಿನ ವಿಧಾನಸಭೆಗೆ ಹೋಗಿದ್ದೆ. ಗೌಡರನ್ನು ಪ್ರತ್ಯಕ್ಷನೋಡಬೇಕೆಂಬ ಉದ್ದೇಶವಿತ್ತು. ಆಗಲೇ ಇಲ್ಲ, ಸರಿ. ಹೀಗೇ ಒಮ್ಮೆ ಪ್ರಪಂಚ ವಾರಪತ್ರಿಕೆ ಓದುವಾಗ, ಹೆಸರು ಮತ್ತು ಸಾಂದರ್ಭಿಕ ವಿವರಗಳೊಂದಿಗೆ ಅವರ ಭಾವಚಿತ್ರವನ್ನು ನೋಡಿದೆ. ಮತ್ತೊಮ್ಮೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಅವರ ಕಾರ್ಟೂನ್ ಚಿತ್ರವನ್ನು ನೋಡಿದೆ. ಸಂಬಂಧಪಟ್ಟ ವಿವರಗಳನ್ನು ಓದಿದೆ. ಅವರು ಸಮಾಜವಾದಿ ಪಕ್ಷದ ಏಕಮೇವ ಸದಸ್ಯರೆಂತಲೂ, ಜೀವನದಲ್ಲಿಯೂ ಒಂಟಿ, ಎಂದಿತ್ತು. ಅಂದರೆ ಅವರಿಗಿನ್ನೂ ಮದುವೆಯಾಗಿಲ್ಲ. ಒಂದು ಬಗೆಯ ಸಮಾಧಾನ ಯಾಕಂದರೆ ನನ್ನ ಸ್ಥಿತಿಯೂ ಅದೇ ಆಗಿತ್ತು.

ಇದ್ದಕ್ಕಿದ್ದಂತೆ ೧೯೬೩ ರ ಮಧ್ಯದಲ್ಲಿ ಮತ್ತೆ ಅದೇ ಪ್ರಸ್ತಾಪ ಯಾವ ಕಡೆಯಿಂದ ಎಂಬುದು ನನಗೆ ತಿಳಿದಿಲ್ಲ. ೧೮.೧೦.೬೩ ಸಾಯಂಕಾಲ ಕಡಿದಾಳ ಮಂಜಪ್ಪನವರು, ಗೋಪಾಲಗೌಡರು ಜೊತೆಗೂಡಿ ನಮ್ಮ ಮನೆಗೆ ಬಂದು ಹೆಣ್ಣು ನೋಡುವ ಕಾರ್ಯಕ್ರಮವನ್ನು ಮುಗಿಸಿದರು. ಹಿರಿಯರು ನಮ್ಮಿಬ್ಬರನ್ನು ಬೇರೆ ಬೇರೆಯಾಗಿ ಸಹಜಾಯಿಸಿ ಒಪ್ಪಿಸಿದರು. ಇದರಲ್ಲಿ ಮುಖ್ಯಪಾತ್ರ ಕಡಿದಾಳರದು.

ನಮ್ಮದು ರೆಜಿಸ್ಟರ್ಡ್ ಮದುವೆ. ಅದರ ನಿಯಮಗಳಿಗನುಸಾರವಾಗಿ ೨೨.೦೧.೬೪ ರಂದು ಸಬ್‌ರೆಜಿಸ್ಟ್ರಾರ್ ಕಛೇರಿಯಲ್ಲಿ ಮದುವೆಯ ಡೆಕ್ಲರೇಶನ್ ನಂತರ ೫ ವಾರಗಳು ಮುಗಿಸಿ, ೦೨.೦೩.೧೯೬೪ ರಂದು ಧಾರವಾಡದಲ್ಲಿ ಬಾಸೆಲ್‌ಮಿಷನ್ ಪ್ರೌಢಶಾಲೆಯ ಟ್ಯಾಗೋರಹಾಲಿನಲ್ಲಿ ಸರಳ ರೀತಿಯಲ್ಲಿ ನಮ್ಮ ಮದುವೆ ನಡೆಯಿತು. ಸಂಬಂಧಿಕರು, ವಕೀಲರು, ನನ್ನ ವಿದ್ಯಾರ್ಥಿನಿಯರು ಅಷ್ಟೇ ಅಲ್ಲದೆ, ಪ್ರಮುಖರಾದ ಮುಲ್ಕಾ ಗೋವಿಂದರೆಡ್ಡಿ ದಂಪತಿಗಳು, ಶ್ರೀ ಜೆ.ಹೆಚ್.ಪಟೇಲ್, ಶ್ರೀ ಕೆ.ಹೆಚ್.ಪಾಟೀಲ್ ಡಾ. ವಿಷ್ಣುಮೂರ್ತಿ, ಪ್ರೊ. ಚಂದ್ರಶೇಖರ ಪಾಟೀಲ್, ಕಾಗೋಡು ತಿಮ್ಮಪ್ಪ ದಂಪತಿಗಳು ಶ್ರೀ ವೆಂಕಟೇಶ ಮಾಗಡಿ ಮತ್ತು ಎಸ್. ವೆಂಕಟರಾಮ್ ಮುಂತಾದವರು ಆಗಮಿಸಿದ್ದರು. ಅಂದೇ ಗೌಡರ ಜೊತೆಯಲ್ಲಿ ಬೆಂಗಳೂರಲ್ಲಿ

ಒಂದು ವಾರ ಇರಲು ಹೊರಟೆ. ೧೯.೦೩.೬೪ ಸಾಯಂಕಾಲ ವಿಧಾನ ಮಂಡಲದ ಸದಸ್ಯರೆಲ್ಲ ಸೇರಿ ವಿಧಾನಸೌಧದ ಬ್ಯಾಂಕ್ವೆಟ್ ಹಾಲಿನಲ್ಲಿ ನಮಗೆ ಆರತಕ್ಷತೆಯ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಆ ಸಭೆ ರಾಜ್ಯದ ಸಮಸ್ತ ಜನತೆಯನ್ನು ಪ್ರತಿನಿಧಿಸಿದಂತಿತ್ತು. ಸಭೆಗೆ, ಸ್ಪೀಕರ್ ವೈಕುಂಠ ಬಾಳಿಗರದೇ ಅಧ್ಯಕ್ಷತೆ.ಪಿ ಕಾಳಿಂಗರಾಯರಿಂದ ಸಂಗೀತ ಕಛೇರಿ. ಗೋಪಾಲಗೌಡರು ಮಂತ್ರಿಗಳನ್ನು ಶಾಸಕ ಗೆಳೆಯರನ್ನು ಸ್ವಾಗತಿಸಿದರು ಮತ್ತು ತಮ್ಮ ಮದುವೆ ಮಾಡಿಸುವಲ್ಲಿ ವಿಶೇಷ ಆಸ್ಥೆ ವಹಿಸಿದ ಶ್ರೀ ಕಡಿದಾಳ ಮಂಜಪ್ಪ, ಡಾ.ಆರ್.ನಾಗಣ್ಣಗೌಡರು, ಶ್ರೀ ಕೋಣಂದೂರು ಲಿಂಗಪ್ಪ ಮತ್ತು ನನ್ನ ಸಹೋದರ ಶ್ರೀ ಬಿ.ವಿ.ಪಾಟೀಲ್‌ರನ್ನು ಜ್ಞಾಪಿಸಿಕೊಳ್ಳುತ್ತ, ಅವರೆಲ್ಲರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸಿದರು. ನಂತರದಲ್ಲಿ ಅಧ್ಯಕ್ಷರು ಸಂದರ್ಭಕ್ಕನುಸಾರವಾದ ರೋಮಾಂಚಕ ಭಾಷಣ ಮಾಡಿದರು. ಶ್ರೀ ಕಡಿದಾಳರು ಮಂದಹಾಸ, ಪ್ರೀತಿ ತುಂಬಿದ ಕಣ್ಣುಗಳಿಂದ ನಮ್ಮ ಕಡೆಗೆ ನೋಡಿ ಸಂತಸಗೊಂಡಿದ್ದರು.

ಆ ವಾರದಲ್ಲಿ ಶ್ರೀಮತಿ ಯಶೋಧರಮ್ಮ ದಾಸಪ್ಪ, ಶ್ರೀ ಜಿ.ರಾಮೇಗೌಡ ಶ್ರೀ ಬಿ.ವಿ.ನಾರಾಯಣರೆಡ್ಡಿ, ಶ್ರೀ ಕಡಿದಾಳ ಮಂಜಪ್ಪ ನಮ್ಮನ್ನು ತಮ್ಮ ಮನೆಗೆ ಕರೆದು ಊಟ ಮಾಡಿಸಿ, ಆದರಿಸಿ, ತಾಂಬೂಲಕೊಟ್ಟು ಹರಸಿ ಕಳುಹಿಸಿಕೊಟ್ಟಿದ್ದರು. ಕಡಿದಾಳರ ಮನೆಯಲ್ಲಿ ನನ್ನನ್ನು ಕುರಿತು ಹೇಳಿದ್ದು, ನೀನು ಇಲ್ಲಿಗೆ ವರ್ಗ ಮಾಡಿಸಿಕೊಂಡು ಪುಟ್ಟ ಮನೆ ಮಾಡಿ, ಸುಖವಾಗಿ ಇರುವುದು. ಗೌಡರ ಕಡೆಗೊಮ್ಮೆ ನೋಡಿ, "ಇವನು ಬಲು ಕೋಪಿಷ್ಠ, ನಿನಗೇನಾದರೂ ತೊಂದರೆ ಮಾಡಿದರೆ ನನಗೆ ತಿಳಿಸು" ಎಂದು ತಮಾಷೆಯಾಗಿ ಹೇಳಿದ್ದರು. ನಾವು ಮನೆಗೆ ಹೊರಡುವಾಗ ಗೌರವದಿಂದ ಅವರಿಗೆ ಕೈ ಮುಗಿದೆ. ತಕ್ಷಣ ಗೌಡರು ನನ್ನನ್ನು ಕುರಿತು ತುಸು ಗಂಭೀರವಾಗಿಯೇ ಹೇಳಿದ್ದು ಹೀಗೆ. "ಬಾಗಿ ಕಾಲುಮುಟ್ಟಿ ನಮಸ್ಕರಿಸು. ಕಾರಣ ಅವರು ನಿನ್ನ ಮದುವೆ ಮಾಡಿಸಿದ್ದಾರೆ." ಮುಂದೆ ಜೂನ್ ೧೯೬೪ ಧಾರವಾಡದಿಂದ ವರ್ಗ ಮಾಡಿಸಿಕೊಂಡು ಬೆಂಗಳೂರಿನ ಮಲ್ಲೇಶ್ವರದಲ್ಲಿರುವ ಬಾಲಕಿಯರ ಪ್ರೌಢಶಾಲೆಗೆ ಹಾಜರಾದೆ, ಮೊದಲು ನಮ್ಮ ವಾಸ್ತವ್ಯ ಶಾಸಕ ಭವನದಲ್ಲಿ. ಅವರಿಗೆ ಮೊದಲೇ ಮಂಜೂರಾದ ಕೊಠಡಿಯಲ್ಲಿ (೨೨೭) ಆಗಿತ್ತು. ಕೆಲ ಕಾಲದ ನಂತರ ಶ್ರೀಪುರದಲ್ಲಿ ಒಂದು ಬಾಡಿಗೆ ಮನೆ ತೆಗೆದುಕೊಂಡು ಇರಲು ಶುರುಮಾಡಿದೆವು. ಒಂದು ದಿನ (೧೯೬೫-೬೬) ಕಡಿದಾಳ ಮಂಜಪ್ಪನವರ ಮಗಳ ಮದುವೆಯ ಸಮಾರಂಭ, ಲಾಲಬಾಗಿನಲ್ಲಿ ಗ್ಲಾಸ್‌ಹೌಸ್‌ನಲ್ಲಿ ನಡೆಯಿತು. ಮುಹೂರ್ತ ಮತ್ತು ಆರತಕ್ಷತೆಗಳಿಗೆ ನಾವಿಬ್ಬರೂ ಅವರ ಆಹ್ವಾನದ ಮೇರೆಗೆ ಹಾಜರಾಗಿ ಸಂಭ್ರಮ ಪಟ್ಟೆವು.

ಇನ್ನೊಂದು ದಿನ (೧೯೬೫-೬೬) ಕಡಿದಾಳರು ತಮ್ಮ ಕಾರಿನಲ್ಲಿ ನಮ್ಮಿಬ್ಬರನ್ನು ಕರೆದುಕೊಂಡು ಹೊರಟಿದ್ದರು. ಎಲ್ಲಿ ಎಂಬುದು ಈಗ ನನಗೆ ನೆನಪಿಲ್ಲ. ಮಧ್ಯದಲ್ಲಿ ದಾರಿಬದಲಾಯಿಸಿ ಸದಾಶಿವನಗರದ ಕಡೆಗೆ ಹೋಗು ಎಂದು ತಮ್ಮ ಕಾರ್ ಡ್ರೈವರಿಗೆ ಹೇಳಿದಾಗ, ಗೌಡರು ಯಾಕೆ ಅಲ್ಲಿಗೆ ಸ್ವಾಮಿ ಎಂದು ಕೇಳಿದ ತಕ್ಷಣ ಕಡಿದಾಳರು ಹೇಳಿದ್ದು ಹೀಗೆ "ಸೋನಕ್ಕನಿಗೆ ಸದಾಶಿವನಗರದಲ್ಲಿರುವ ನನ್ನ ಮನೆಯನ್ನು ತೋರಿಸಲು". ಮನೆ ಹತ್ತಿರ ಕಾರು ನಿಲ್ಲಿಸಿ, ತೋರಿಸಿ ಇದನ್ನು ಕಟ್ಟಿಸಲು ೩೫೦೦೦/- ರೂ.ಗಳನ್ನು ವೆಚ್ಚ ಮಾಡಿದ್ದೇನೆ ಎಂದರು. ಶ್ರೀಪುರದಲ್ಲಿದ್ದಾಗ ಒಂದು ಸಲ ಕಡಿದಾಳರು ನಮ್ಮ ಮನೆಗೆ ಬಂದು ಹೋದ ನೆನಪು. ನಮ್ಮ ಮಗಳು ಇಳಾಗೀತ ಒಂದೂವರೆ ವರ್ಷದವಳು. ಸ್ವಲ್ಪ ಅಸ್ವಸ್ಥಳಾಗಿದ್ದ ಅವಳನ್ನು ನೋಡಿ ಬೇಜಾರು ಪಟ್ಟಿದ್ದರು. ೩೧.೧೦.೬೮ ನಮ್ಮ ಮಗನಿಗೆ ೬ ತಿಂಗಳು ಆಗಿತ್ತು. ಅವನಿಗೆ ನಾಮಕರಣ ಮಾಡುವುದಿತ್ತು. ಅದರ ಮೇಲ್ವಿಚಾರಣೆಯನ್ನು ಶ್ರೀ ಕೋಣಂದೂರು ಲಿಂಗಪ್ಪ, ಸುಬ್ರಮಣ್ಯ ರವರು ಮಾಡುತ್ತಿದ್ದರು. ಸಂಬಂಧಿತರು, ಸ್ನೇಹಿತರನ್ನು ಕರೆದಿದ್ದೆವು. ಊಟ ತಿಂಡಿಗಳ ವ್ಯವಸ್ಥೆಯೂ ಇತ್ತು. ಶ್ರೀ ಕಡಿದಾಳ ಮಂಜಪ್ಪನವರೂ ಬಂದಿದ್ದರು. ಅವರೇ ಮುಖ್ಯ ಅತಿಥಿಗಳು. ಹೆಸರು ಏನೆಂಬುದನ್ನು ಮೊದಲೇ ಗೊತ್ತುಪಡಿಸಿದ್ದೆವು. ಕಡಿದಾಳರು ಮಗುವನ್ನು ಎತ್ತಿಕೊಂಡು ಇಂದಿನಿಂದ ಇವನು 'ರಾಮಮನೋಹರ' ಎಂದು ಘೋಷಣೆ ಮಾಡಿದರು. ಬೆಳೆದು ದೊಡ್ಡವನಾಗಿ ಕೀರ್ತಿ ತರಲಿ ಎಂದು ಹಾರೈಸಿದರು.

ಏಪ್ರಿಲ್ ೧೯೭೧. ಶ್ರೀ ವೀರೇಂದ್ರಪಾಟೀಲರ ಸರ್ಕಾರ ಪತನವಾಯಿತು. ಹೊಸ ಸರ್ಕಾರ ರಚನೆಯಾಗಬೇಕು. ಅದಕ್ಕೆ ಮುಖ್ಯಮಂತ್ರಿ ಗೋಪಾಲಗೌಡರಾಗಬೇಕು ಎಂದು ಕೆಲ ಶಾಸಕರು ಪ್ರಯತ್ನ ಮಾಡಿದರು. ಗೊಂದಲಮಯ ವಾತಾವರಣ ನಿರ್ಮಾಣವಾಯಿತು. ಸುಮಾರು ಒಂದು ತಿಂಗಳೇ ಕಳೆಯಿತು. ಗೌಡರು ಇದರಿಂದ ಬೇಸತ್ತು "ನಾನಂತೂ ಕಾದು ಕಾದು ಕಬ್ಬಿಣವಾದೆ" ಎಂದಿದ್ದರು. ಆಗ ಕಡಿದಾಳರು ಒಂದೆರಡು ಬಾರಿ ಸದಾಶಿವನಗರದಲ್ಲಿರುವ ನಮ್ಮ ಮನೆಗೆ ಬಂದು ಗೋಪಾಲ ನೀನು ಈ ವಿಷಯದಲ್ಲಿ ತಲೆಬಿಸಿಮಾಡಿಕೊಳ್ಳಬೇಡ, ರಿಲಾಕ್ಸ್ ಮಾಡು ಎಂದಿದ್ದರು.

ಏಪ್ರಿಲ್ ೧೩. ರಾಜ್ಯಪಾಲರಿಂದ ವಿಷಯ ನಿರ್ಣಯವಾಗಬೇಕಿತ್ತು. ಅಲ್ಲಿಯ ವರೆಗೆ ಕಾಯದೆ ಸ್ವಲ್ಪ ಸಮಯದ ಮೊದಲೇ ಗೌಡರು ರಾಜ್ಯಪಾಲರಿಗೆ ತಮ್ಮ ನಿರಾಕರಣೆಯ ಪತ್ರವನ್ನು "ನನ್ನ ಆರೋಗ್ಯ ಸರಿ ಇಲ್ಲ, ರಾಜ್ಯಾಡಳಿತ ಹೊರೆಯ ಜವಾಬ್ದಾರಿಯನ್ನು ವಹಿಸಲು ನನ್ನಿಂದ ಆಗುವುದಿಲ್ಲ" ಕಳಿಸಿದರು. ಸರ್ಕಾರ ರಚನೆ ಆಗಲಿಲ್ಲ. ರಾಜ್ಯವು ರಾಷ್ಟ್ರಪತಿ ಆಡಳಿತಕ್ಕೆ ಒಳಪಟ್ಟಿತು. ಕಡಿದಾಳರ ಸೂಕ್ಷ್ಮ ಉಪದೇಶ

ಸಮಂಜಸವಾಗಿತ್ತು. ಕಾರ್ಯ ನೆರವೇರಿತ್ತು. ಈ ಬೆಳವಣಿಗೆಯಿಂದ ಬೇಸತ್ತ ನಾವು ಬದಲಾವಣೆಗೆಂದು ಮಕ್ಕಳೊಂದಿಗೆ ಸೊರಬ ತಾಲ್ಲೂಕಿನಲ್ಲಿ ಕುಪ್ಪಗಡ್ಡೆಗೆ ಹೋಗಿ ಅಲ್ಲಿಯ ಫಾರೆಸ್ಟ್ ಲಾಡ್ಜ್ ಒಂದು ತಿಂಗಳು ಇರಬೇಕಿತ್ತು. ನಮ್ಮ ವಾಸಕ್ಕಾಗಿ ಲಾಡ್ಜ್, ಊಟ, ತಿಂಡಿ, ಇನ್ನಿತರ ವ್ಯವಸ್ಥೆಯಾಗಿತ್ತು. ಅದಕ್ಕಾಗಿ ಶ್ರೀ ಬಂಗಾರಪ್ಪನವರು ವಿಶೇಷ ಆಸ್ಥೆ ವಹಿಸಿದ್ದರು. ಡಾಕ್ಟರರ ಮೇಲ್ವಿಚಾರಣೆಯೂ ಇತ್ತು. ಗೌಡರ ಮನಸ್ಸು ಸದಾ ಯೋಚನೆಗಳಿಂದ ಕೂಡಿದ್ದು, ನಿದ್ರೆ ಬರದೆ ಬಹಳ ಕಷ್ಟಪಟ್ಟರು. ೧೫ ದಿನಗಳಲ್ಲಿಯೇ ವಾಪಸು ಬೆಂಗಳೂರಿಗೆ ಬಂದೆವು.

ಇದಾದ ಸ್ವಲ್ಪ ಕಾಲದಲ್ಲಿ ಅನಾರೋಗ್ಯದಿಂದ ಆಸ್ಪತ್ರೆ ಸೇರುವಂತಾಯಿತು. ತೀರ್ಥಹಳ್ಳಿಯಲ್ಲಿ, ಮುಂದೆ ಬರಲಿರುವ ಚುನಾವಣೆ ತಯಾರಿಗೋಸ್ಕರ ಮನೆಯೊಂದರಲ್ಲಿ ವಾಸವಾಗಿದ್ದರು. ತಲೆಸುತ್ತಿ ಬಿದ್ದ ನೆಪವೇ ಕಾರಣವಾಗಿತ್ತು. ದಿನೇ ದಿನೇ ಆರೋಗ್ಯ ಕೆಡುತ್ತಲಿತ್ತು. ಔಷಧಿಗಳು ಕೆಲಸಮಾಡಲಿಲ್ಲ. ಸ್ನೇಹಿತರು ಸಂಬಂಧಿಕರು ದಿನವೂ ಬಂದು ಭೇಟಿ ಮಾಡಿ ಸಮಾಧಾನಪಡಿಸಿ ಹೋಗುತ್ತಿದ್ದರು. ಜೊತೆಯಲ್ಲಿ ಯಾರಾದರೂ ಇರಬೇಕಿತ್ತು. ಮಾತೇ ನಿಂತುಹೋಗಿತ್ತು. ಸಂಕಟವನ್ನು ಅಳುವುದರ ಮೂಲಕ ವ್ಯಕ್ತಪಡಿಸುತ್ತಿದ್ದರು. ಅನೇಕ ಸಲ ಕಡಿದಾಳ ಮಂಜಪ್ಪನವರು ಬಂದು ನೋಡಿ ಸಮಾಧಾನ ಪಡಿಸುತ್ತಿದ್ದರು. ನನಗೂ ಧೈರ್ಯದಿಂದಿರಲು ಹೇಳುತ್ತಿದ್ದರು. ೦೯.೦೬.೭೨ ಕರಾಳದಿನ ಬಂದೇ ಬಿಟ್ಟಿತು. ಗೌಡರು ಅಂದು ಇನ್ನಿಲ್ಲವಾದರು. ವಾರ್ಡ್ ಪಕ್ಕದಲ್ಲಿ ಜನದಟ್ಟಣೆ ಸೇರಿತು. ೧೦.೦೬.೭೨ ಅಂತ್ಯಕ್ರಿಯೆ. ಆಸ್ಪತ್ರೆಯಿಂದ ವಿಲ್ಸನ್‌ಗಾರ್ಡನ್ ಚಿತಾಗಾರಕ್ಕೆ ಹೋಗಬೇಕು. ಅಲ್ಲಿಗೆ, ಇನ್ನೂರು ದಿನಗಳ (೨೪.೧೧.೭೧ ರಿಂದ ೧೦.೬.೭೨) ಆಸ್ಪತ್ರೆವಾಸ ಕೊನೆಗೊಂಡಿತು.

ಚಿತಾಗಾರದಲ್ಲಿ ಅನೇಕ ಜನರು ಸೇರಿದ್ದರು. ಪ್ರಮುಖರ ಶ್ರದ್ಧಾಂಜಲಿ ಭಾಷಣಗಳಾದವು. ಸರಕಾರದ ಪರವಾಗಿ ಶ್ರೀ ಎಸ್.ಎಂ.ಕೃಷ್ಣರವರು ಬಂದಿದ್ದರು. ಭಾಷಣ ಮಾಡುತ್ತ "ಹೆಂಡತಿ ಮಕ್ಕಳಷ್ಟೇ ಅಲ್ಲ, ಇಡೀ ನಾಡೇ ತಬ್ಬಲಿಯಾಯಿತು" ಎಂದಿದ್ದರು. ಅದೇ ರೀತಿ ಶ್ರೀ ಕಡಿದಾಳ ಮಂಜಪ್ಪನವರೂ ಮಾತನಾಡುತ್ತ ನನ್ನ ಮತ್ತು ಮಕ್ಕಳ ಅಸಹಾಯಕತೆಯನ್ನು ನೋಡಿ ಕಂಬನಿ ಮಿಡಿದಿದ್ದರು. ನಮ್ಮನ್ನು ಕುರಿತು "ಧೈರ್ಯವಾಗಿರಿ, ನಾವೆಲ್ಲ ನಿಮ್ಮೊಂದಿಗಿದ್ದೇವೆ" ಎಂದು ಸಾಂತ್ವನ ನುಡಿ ಆಡಿದ್ದರು.

ನಂತರದ ದಿನಗಳಲ್ಲಿಯೂ ನಾನು ಕಡಿದಾಳ ಕುಟುಂಬದವರೊಡನೆ

ಸಂಪರ್ಕವಿಟ್ಟುಕೊಂಡಿದ್ದೇನೆ. ಮದುವೆ ಮುಂತಾದ ಸಮಾರಂಭಗಳಲ್ಲಿ ಭೇಟಿ ಮಾಡಿದ್ದೇವೆ. "ನಿವೃತ್ತಿಗೊಳ್ಳುವವರೆಗೆ ಕೆಲಸ ಮಾಡುತ್ತಿರು" ಎಂದು ೧೯೭೩-೭೪ ರ ಸುಮಾರು, ಒಂದು ದಿನ ಉಪದೇಶ ಮಾಡಿದ್ದರ ಬಗ್ಗೆ ನೆನಪಿದೆ.

೨೩.೩.೮೦ ರಂದು ಗೌಡರ ಜನ್ಮ ದಿನಾಚರಣೆಗಾಗಿ, ಶ್ರೀ ಕೋಣಂದೂರು ವೆಂಕಪ್ಪಗೌಡರು ನಗರದ ಸೆಂಟ್ರಲ್ ಕಾಲೇಜು ಸೆನೆಟ್ ಹಾಲಿನಲ್ಲಿ ಸಭೆಯೊಂದನ್ನು ಏರ್ಪಡಿಸಿದ್ದರು. ಸಭಾಂಗಣ ಕಿಕ್ಕಿರಿದು ತುಂಬಿತ್ತು. ಎಲ್ಲರೂ ವಿದ್ಯಾವಂತರು. ವೇದಿಕೆಯ ಮೇಲೆ ಕಡಿದಾಳ ಮಂಜಪ್ಪ, ಜೆ.ಹೆಚ್.ಪಟೇಲ್, ಆರ್.ಎನ್.ಬೈರಾರೆಡ್ಡಿ, ಪಿ.ಲಂಕೇಶ್, ಪರಮೇಶ್ವರಪ್ಪ ಮತ್ತು ಬೀಚಿಯವರು ಇದ್ದರು. ಎಲ್ಲರೂ ಗೌಡರ ಬಗ್ಗೆ ಅವರ ರಾಜಕೀಯ ಜೀವನ, ಅವರ ಅನೇಕ ಸಾಧನೆಗಳ ವಿಚಾರವಾಗಿ ಮಾತನಾಡಿದ್ದರು. ಕಡಿದಾಳ ಮಂಜಪ್ಪನವರೂ ಮಾತನಾಡುತ್ತ, ಗೌಡರ ಮದುವೆಯನ್ನು ತಾವೇ ಮಾಡಿಸಿದ್ದಾಗಿ ಹೇಳಿದರು. ಅವರನ್ನು ಒಪ್ಪಿಸಲು ಅನೇಕ ರೀತಿ ಸಮಜಾಯಿಸಬೇಕಾಯಿತಂತೆ. ಗೌಡರು ಬೇಡವೆಂದು ಹೇಳಲು ಕಾರಣ ಕೊಟ್ಟಾಗ ಚೆನ್ನಾಗಿ ಬೈಯ್ದು ಒಪ್ಪುವಂತೆ ಮಾಡಿದ್ದರಂತೆ. ಕಡಿದಾಳ ಮಂಜಪ್ಪನವರು ಬರೆದ "ಪಂಜರವಳ್ಳಿಯಲ್ಲಿ ಪಂಜು" ಅವರ ಶ್ರೀಮತಿಯವರು ಬರೆದ 'ಜೀವನ ಗಂಗಾ' ಕಾದಂಬರಿಗಳನ್ನು ಬಹಳ ಹಿಂದೆಯೇ ಓದಿಕೊಂಡಿದ್ದೇನೆ. ಇನ್ನುಳಿದವನ್ನು ದೊರಕಿಸಿ ಓದಬೇಕೆಂದಿದ್ದೇನೆ.

೧೯೯೨ ಮಾರ್ಚ್೩೮ ರಂದು ಶ್ರೀ ಕಡಿದಾಳರು ತಮ್ಮ ೮೪ನೇ ವಯಸ್ಸಿನಲ್ಲಿ ನಿಧನರಾದರು. ಸುದ್ದಿ ತಿಳಿದೊಡನೆ, ಅವರ ಪ್ರಾರ್ಥಿವ ಶರೀರದ ಅಂತಿಮದರ್ಶನ ಪಡೆದು, ಕೃತಜ್ಞತೆಯಿಂದ ನಮನ ಮಾಡಿದೆ. ಕೆಲವೇ ದಿನಗಳ ಮೊದಲು ಅವರು ತಮ್ಮ ಸದಾಶಿವನಗರದ ಮನೆಗೆ ಬಂದಿದ್ದರೆಂದು ತಿಳಿಯಿತು. ಶ್ರೀಮತಿ ಲಕ್ಷ್ಮಿದೇವಿಯವರನ್ನು ಮತ್ತು ಮಕ್ಕಳನ್ನು ಭೇಟಿಮಾಡಿದೆ. ಇಂದಿಗೂ ಕಡಿದಾಳ ಕುಟುಂಬದವರು ಮತ್ತು ನಾವು ಪರಸ್ಪರ ಸಂಪರ್ಕ, ಭೇಟಿಗಳಿಂದ ಅದೇ ಪ್ರೀತಿ, ಆತ್ಮೀಯತೆ, ಗೌರವಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುತ್ತಿದ್ದೇವೆ.

# ಕಡಿದಾಳ್ : ನಾನು ತಿಳಿದಂತೆ

–ಡಾ.ಮತ್ತೂರು ಕೃಷ್ಣಮೂರ್ತಿ

ನನಗೆ ತಿಳಿದಂತೆ ನಮ್ಮ ಕಡಿದಾಳ ಮಂಜಪ್ಪನವರು ನಮ್ಮ ಶಿವಮೊಗ್ಗ ಜಿಲ್ಲೆಯ, ತೀರ್ಥಹಳ್ಳಿ ತಾಲ್ಲೂಕು ಹಾರೋಗೊಳಿಗೆ ಗ್ರಾಮದವರು.

ನನಗೆ ಅವರು ಪರಿಚಯವಾದದ್ದು, ನನ್ನ ೧೪–೧೫ನೇ ವಯಸ್ಸಿನಲ್ಲಿ, ಅಂದರೆ ೧೯೪೨–೪೪ ಇಸವಿಯಲ್ಲಿ. ಕಡಿದಾಳ್ ಮಂಜಪ್ಪನವರು ಅಷ್ಟೊತ್ತಿಗಾಗಲೇ ಶಿವಮೊಗ್ಗದ ಹೆಸರಾಂತ ವಕೀಲರಲ್ಲಿ ಒಬ್ಬರಾಗಿದ್ದರು ಹಾಗೂ ಸ್ವಾತಂತ್ರ್ಯ ಚಳುವಳಿಯ ಮಂಚೂಣಿಯಲ್ಲಿದ್ದರು.

ಸಾಹುಕಾರ ಚೆನ್ನಯ್ಯನವರು, ಚಂಗಲರಾಯ ರೆಡ್ಡಿಯವರು, ಭೂಪಾಳಂ ಚಂದ್ರಶೇಖರ್ ಅವರು, ಎಸ್.ವಿ. ಕೃಷ್ಣಮೂರ್ತಿರಾಯರು, ಭಾಷ್ಯಂ ಐಯ್ಯಂಗಾರ್ಯರು, ಮುಂತಾದ ಅಂದಿನ ಸ್ವಾತಂತ್ರ್ಯ ಹೋರಾಟಗಾರರು ಶಿವಮೊಗ್ಗದ ಅವರ ಮನೆಗೆ ಬರುತ್ತಿದ್ದರು.

ನಾನು ೧೯೪೨–೪೪ ರಲ್ಲಿ ಶಿವಮೊಗ್ಗದಲ್ಲಿ ವಾರದ ಊಟ ಮಾಡಿಕೊಂಡು ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದೆ. ಅಗ ನಮಗೆ ಬಹಳ ಬಡತನವಿದ್ದಿತು. ನನಗೆ ಓದಬೇಕೆಂದು ಅಸೆ. ಲೋಯರ್ ಸೆಕೆಂಡರಿ ಪರೀಕ್ಷೆ ಕಟ್ಟಲು ನನ್ನ ಹತ್ತಿರ ಹಣ ಇರಲಿಲ್ಲ. ನಾನು ಕಢಿದಾಳ್ ಮಂಜಪ್ಪನವರಲ್ಲಿ ಈ ವಿಷಯ ನಿವೇದಿಸಿಕೊಂಡಾಗ ಆವರು ಸಂತೋಷದಿಂದ ಪರೀಕ್ಷೆ ಹಣವನ್ನು ಕೊಟ್ಟರು. ನನಗೆ ಈಗಲೂ ಆ ಸಂದಿಗ್ಧ ಪರಿಸ್ಥಿತಿ ಕಣ್ಣಿಗೆ ಕಟ್ಟಿದಂತಿದೆ.

ವೈಯಕ್ತಿಕವಾಗಿ ಕಡಿದಾಳ್ ಮಂಜಪ್ಪನವರು ಬಹಳ ವಿಶಾಲ ಹೃದಯರು. ಅವರಲ್ಲಿ ಇಂದಿನಂತೆ ಜಾತೀಯತೆಯಾಗಲೀ, ಶತಾಯ–ಗತಾಯ ಅಧಿಕಾರ ಹಿಡಿಯಬೇಕೆಂಬ ಹಂಬಲವಾಗಲೀ, ಹಣಮಾಡಬೇಕೆಂಬ ದುರಾಸೆಯಾಗಲಿ ಇರಲಿಲ್ಲ. ಬಹಳ ಉನ್ನತ ಮಟ್ಟದ ಸರಳತೆಯೇ ಮೈವೆತ್ತಿ ಬಂದಂತಿದ್ದ ವ್ಯಕ್ತಿಯಾಗಿದ್ದರು. ಶುಭ್ರವಾದ ಬಿಳಿಯ ಪೈಜಾಮ–ಜುಬ್ಬ, ತೆಳು–ಹಳದಿಯ ವೇಸ್ಟ್–ಕೋಟ್ ಧರಿಸಿದ ಬೆಳ್ಳಗೆ ತೆಳುವಾಗಿದ್ದ ವ್ಯಕ್ತಿತ್ವ ಅವರದು, ನೋಡಿದರೆ ಗೌರವ ಮೂಡಿಸುವಂಥ ನಿಲುವು ಅವರದು.

ಭಾರತಕ್ಕೆ ಮತ್ತು ಅಂದಿನ ಮೈಸೂರು ರಾಜ್ಯಕ್ಕೆ ಸ್ವತಂತ್ರ ಬರಬೇಕೆಂಬುದು ಅವರ ಧ್ಯೇಯವಾಗಿದ್ದಿತು, ಅದಕೋಸ್ಕರ ಹೋರಾಟ ನಡೆಸಿದ್ದರು. ಭಾರತಕ್ಕೆ ಸ್ವತಂತ್ರ ಬಂದಾಗ ಅಂದಿನ ಮೈಸೂರು ರಾಜ್ಯಕ್ಕೆ ಸ್ವತಂತ್ರ ಬರಲಿಲ್ಲ. ಮೈಸೂರಿನ ಮಹಾರಾಜರು ಬಹಳ ಪ್ರಗತಿಪರ ರಾಜರಾದರೂ, ಸ್ವತಂತ್ರ ಭಾರತ ಒಕ್ಕೂಟದ ಒಂದು ರಾಜ್ಯವಾಗಲು ಒಪ್ಪಿಗೆ ನೀಡಿರಲಿಲ್ಲ. ಆ ಕಾರಣದಿಂದ ಹೋರಾಟ ನಡೆಯುತ್ತಲೇ ಇದ್ದಿತು. ರಾಜ್ಯ ಪೋಲೀಸರು ಅಂದಿನ ಸ್ವತಂತ್ರ ಹೋರಾಟಗಾರರ ಜೊತೆ ಕಡಿದಾಳ್ ಮಂಜಪ್ಪನವರನ್ನೂ ಲಾರಿಯಲ್ಲಿ ತುಂಬಿಕೊಂಡು ಬಿಸಲೆ ಘಾಟಿಗೆ ಬಿಟ್ಟು ಬಂದಿದ್ದರು ಎಂದು ನೆನಪು.

ಭೂಮಿಯನ್ನು ಉಳುವವನೇ ಒಡೆಯನಾಗಬೇಕು, ಅನುಪಸ್ಥಿತ ಭೂ ಒಡೆತನ ಹೋಗಬೇಕು ಎಂಬುದು ಕಡಿದಾಳ್ ಮಂಜಪ್ಪನವರ ನಿಲುವು. ಇನಾಮ್ ಅಬಾಲಿಷನ್ ಕಾಯಿದೆ, ಭೂ ಸುಧಾರಣಾ ಕಾಯಿದೆ ಮುಂತಾದ ಜನಪರ ಕಾಯಿದೆಗಳನ್ನು ಜಾರಿಗೆ ತರುವುದರಲ್ಲಿ ಮುಖ್ಯ ಪಾತ್ರವಹಿಸಿದರು.

ಕಡಿದಾಳ್ ಮಂಜಪ್ಪನವರು ಶಿಸ್ತಿನ ಸಿಪಾಯಿ. ಅವರ ಕಾರ್ಯ ನಿಷ್ಠೆ, ಪ್ರಗತಿಪರ ಚಿಂತನೆ, ಭ್ರಷ್ಟಾಚಾರದ ವಿರುದ್ಧದ ಹೋರಾಟ ಸ್ತುತ್ಯಾರ್ಹವಾಗಿದ್ದವು.

ಅವರು ಸ್ವತಂತ್ರ ಮೈಸೂರು ರಾಜ್ಯದಲ್ಲಿ ಸಚಿವರಾಗಿ ಮೈಸೂರು ರಾಜ್ಯದ ಅಭಿವೃದ್ಧಿಗೆ ಕಾರಣರಾದರು. ೧೯-೦೮-೧೯೫೬ ರಿಂದ ೩೧-೧೦-೧೯೫೬ ರವರೆಗೆ ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾಗಿಯೂ ಸೇವೆ ಸಲ್ಲಿಸಿದರು.

ಇಂದಿರಾ ಗಾಂಧಿಯವರು ಹೇರಿದ ತುರ್ತು ಶಾಸನ ಜಾರಿಯ ವೇಳೆಯಲ್ಲಿ ನಡೆದಂತಹ ಅತಿರೇಕಗಳ ಬಗೆಗೆ ವಿರೋಧ ಸೂಚಿಸಿ ೧೯೭೭ ರಲ್ಲಿ ಕರ್ನಾಟಕ ಘಟಕದ 'ಕಾಂಗ್ರೆಸ್ ಫಾರ್ ಡೆಮೊಕ್ರಸಿ' ಮುಖ್ಯಸ್ಥರಾಗಿದ್ದರು.

ನಮ್ಮ ಇಂದಿನ ಜನ ನಾಯಕರು, ರಾಜಕೀಯ ಮುತ್ಸದ್ದಿಗಳು ಕಡಿದಾಳ್ ಮಂಜಪ್ಪನವರು ನಡೆದ ದಾರಿಯಲ್ಲಿ ನಡೆದರೆ ಮತ್ತು ಅವರ ಮೇಲ್ಪಂಕ್ತಿಯನ್ನು ಅನುಸರಿಸಿದರೆ ಬಹಳಷ್ಟು ಸುಧಾರಣೆ ಮತ್ತು ಜನಾನುಕೂಲವಾಗುತ್ತದೆ ಎನ್ನಬಹುದು.

# ಅನನ್ಯ ಅನುಪಮ

–ಡಾ. ಪಾಟೀಲ ಪುಟ್ಟಪ್ಪ

ಅನೇಕರು ಜೀವಿಸಿರುತ್ತಾರೆ. ಆದರೆ ಬದುಕಿರುವುದಿಲ್ಲ. ಶ್ರೀ ಕಡಿದಾಳ ಮಂಜಪ್ಪನವರು ಈಗ ಜೀವಿಸಿಲ್ಲ. ಆದರೆ ಬದುಕಿದ್ದಾರೆ. ನೆನಪಿನಲ್ಲಿ ಉಳಿಯುವಂಥ ಜೀವನವನ್ನು ಅವರು ಬದುಕಿದರು. ಎಂತಲೇ ಅವರು ಜನರ ಮನಸ್ಸಿನಲ್ಲಿ ಸ್ಮರಣೀಯರಾಗಿ ಉಳಿದಿದ್ದಾರೆ.

ಕಡಿದಾಳ ಮಂಜಪ್ಪನವರ ಬಗೆಗೆ ನನ್ನದು ವಿರೋಧ ಪ್ರೀತಿ. ಈ ರಾಜ್ಯ ಆಗುವ ಮೊದಲು ನಾನು ಅವರನ್ನು ಮೆಚ್ಚಲಿಲ್ಲ. ಅವರು ಆಗ ಎರಡು ಕರ್ನಾಟಕಗಳು ಆಗಬೇಕೆಂದು ಹೇಳಿದ್ದರು. ಕನ್ನಡದ ಎಲ್ಲ ಪ್ರದೇಶಗಳು ಒಂದಾಗಬೇಕೆಂದು ಹೋರಾಟ ಮಾಡಿಕೊಂಡು ಬಂದ ನನ್ನಂಥವರಿಗೆ ಅವರ ಮಾತು ಹಿಡಿಸಿರಲಿಲ್ಲ. ಒಂದೇ ಕರ್ನಾಟಕ ಆಗಬೇಕೆಂದು ಪ್ರತಿಪಾದಿಸಿಕೊಂಡು ಬಂದವರಿಗೆಲ್ಲ ಇವರ ಮಾತು ಅಪಥ್ಯವೆನಿಸಿದ್ದಿತು.

ನಾನು ಬಹಳಷ್ಟು ಪ್ರೀತಿಸುತ್ತಿದ್ದ ನನ್ನ ಅಚ್ಚುಮೆಚ್ಚಿನ ಡಿ.ವಿ. ಗುಂಡಪ್ಪ ಅವರು ಆಗ ನಾಲ್ಕು ಕರ್ನಾಟಕಗಳು ಆಗಲೆಂದು ಹೇಳಿದ್ದರು. ಅವರೇಕೆ ಈ ರೀತಿ ಹೇಳುತ್ತಾರೆಂದು ಅವರ ಬಗೆಗೆ ಅಸಮಾಧಾನವೆನಿಸಿದ್ದಿತು. ಮುಂದೆ ಅವರೊಂದಿಗೆ ಮಾತನಾಡಿದಾಗ ನಾಲ್ಕು ಕರ್ನಾಟಕಗಳ ಅವರ ವಿಚಾರ ನನಗೆ ಅರ್ಥವಾಯಿತು.

ನೂತನ ರಾಜ್ಯದಲ್ಲಿ ಕಡಿದಾಳರು ಮಂತ್ರಿ ಆದ ಮೇಲೆ, ಅವರ ನಿವೃತ್ತಿಯ ನಂತರ, ನಾನು ಅವರ ನಿಕಟ ಸಂಪರ್ಕದಲ್ಲಿ ಬಂದ ಮೇಲೆ ಅವರ ಬಗೆಗೆ ನನ್ನ ಪ್ರೀತಿ ಗೌರವಗಳು ಹೆಚ್ಚಾದವು. ಕಲ್ಮಷ ಲವಲೇಶವೂ ಇಲ್ಲದ ಅಪ್ಪಟ ಚಿನ್ನದಂಥ ಮನುಷ್ಯ ಅವರು. ನಾನು ಅವರನ್ನು ಹೆಚ್ಚು ತಿಳಿದಂತೆ ಅವರು ನನಗೆ ಹೆಚ್ಚು ಮೆಚ್ಚುಗೆಯಾದರು.

ಕರ್ನಾಟಕ ಆಗುವ ಮೊದಲು ಕಡಿದು ಆಳುವ ಮಂಜಪ್ಪ ಎಂದು ಅವರನ್ನು ಟೀಕಿಸುತ್ತಿದ್ದ ನಾನು ಅವರ ಸಂಪರ್ಕದಲ್ಲಿ ಬಂದಂತೆಲ್ಲ ಅವರನ್ನು ವಿಶೇಷವಾಗಿ ಹಚ್ಚಿಕೊಂಡೆ. ಎಷ್ಟು ಕಡಿದರೂ ಬಡಿದರೂ ಚಿನ್ನವೂ ತನ್ನ ಮೌಲ್ಯವನ್ನು ಕಳೆದುಕೊಳ್ಳುವುದಿಲ್ಲ.

ನನಗೆ ಆತ್ಮೀಯರಾಗಿದ್ದ ಕಡಿದಾಳರನ್ನು ನೀವು ಎರಡು ಕರ್ನಾಟಕಗಳ ಬಗೆಗೆ ಆಗ ಹೇಳಿದ್ದೇಕೆ? ಎಂದು ಕೇಳಿದಾಗ, ಅವರು ಹೇಳಿದ ಉತ್ತರ ನನಗೆ ಸಮಂಜಸವೆನಿಸಿತು. ಅವರು ಯುರೋಪದ ಆಸ್ಟ್ರಿಯಾ, ಸ್ವಿಡ್ಸರ್‌ಲ್ಯಾಂಡ್‌ಗಳ ಉದಾಹರಣೆಯನ್ನು ನನಗೆ ಕೊಟ್ಟರು. ಭಾರತದಲ್ಲಿಯ ಗೋವಾ ಪಾಂಡೆಚೆರಿಗಳ ನಿರ್ದರ್ಶನ ನೀಡಿದರು. ನಾನು ಕರ್ನಾಟಕ ಅಗುವುದಕ್ಕೆ ವಿರೋಧಿ ಆಗಿರಲಿಲ್ಲ. ಕನ್ನಡ ನಾಡಿನ ಬಗೆಗಿನ ನನ್ನ ಅಭಿಮಾನ ಯಾರಿಗೂ ಎರಡನೆಯದು ಎಂದೆನಿಸಲಾರದು.

ಕಡಿದಾಳ ಮಂಜಪ್ಪ ಅವರು ಜಯಪ್ರಕಾಶ್ ನಾರಾಯಣ ಮಾದರಿಯ ಮನುಷ್ಯರು. ಯಾವ ಅನಿಷ್ಟವೂ ಅವರ ಸಮೀಪಕ್ಕೆ ಸುಳಿಯಲಾರದು. ಒಬ್ಬ ಋಷಿಯ ಶಿಷ್ಯರು ತಾವು ಸುರಿಸಿದ ಬೆವರಿನಲ್ಲಿ ಹೂವಿನ ಬೀಜಗಳನ್ನೇ ಬಿತ್ತುತ್ತ ಹೋದಂತೆ, ಕಡಿದಾಳರು ತಾವು ಬದುಕಿದ್ದ ಕಾಲದುದ್ದಕ್ಕೂ, ಸದ್ವಿಚಾರಗಳನ್ನು ಸತ್ಕಾರ್ಯಗಳನ್ನು ಚೆಲ್ಲುತ್ತ ಹೋದರು. ಒಂದು ಅಲ್ಲದ ಮಾತು ಅವರ ಬಾಯಿಂದ ಎಂದೂ ಬರಲಿಲ್ಲ. ಒಂದು ಅಲ್ಲದ ಕೃತಿ ಅವರ ಕೈಯಿಂದ ಎಂದೂ ಅಗಲಿಲ್ಲ. ಒಂದು ಕೆಟ್ಟ ಕೆಲಸ ಅವರ ಕೈಯಿಂದ ಆಯಿತೆಂದು ಯಾರೊಬ್ಬರೂ ಹೇಳಲಾರರು. ಅವರು ಶೃತಿ ಮಾಡಿಟ್ಟ ವೀಣೆಯಂತೆ. ಆ ವೀಣೆ ಅಪಸ್ವರ ಹೊರಡಿಸುವುದು ಎಂದೂ ಸಾಧ್ಯವಿಲ್ಲ.

ಅವರು ಮಂತ್ರಿಯಾಗಿ ಮುಖ್ಯಮಂತ್ರಿಯಾಗಿ ಒಳ್ಳೆಯ ಹೆಸರನ್ನು ಸಂಪಾದಿಸಿದರು. ಅವರು ಜನಾನುರಾಗಿಯಾಗಿದ್ದರಲ್ಲದೆ, ಧನಾನುರಾಗಿ ಆಗಿರಲಿಲ್ಲ. ನಾವು ಬಹಳಷ್ಟು ಮಂತ್ರಿಗಳನ್ನು ಇಲ್ಲಿ ಅಲ್ಲಿ ಎಲ್ಲೆಲ್ಲಿಯೋ ನೋಡಿದ್ದೇವೆ. ನಿವೃತ್ತಿರಾದ ಮೇಲೆ ಕೂಡ ಅವರಿಗೆ ರಾಜಕೀಯವನ್ನು ಬಿಟ್ಟು ಬೇರೆ ಯಾವ ವ್ಯತ್ತಿಯೂ ಇರುವುದಿಲ್ಲ. ಅವರ ವರ್ತನೆ, ಒಂದು ರೀತಿಯಿಂದ ಸ್ಪೇನ್ ಸೆರೆಯಾಳುವಿನಂತೆ ಇರುತ್ತೆ. ಅವನಿಗೆ ಇಪ್ಪತ್ತು ವರ್ಷಗಳ ಸೆರೆಮನೆವಾಸದ ಶಿಕ್ಷೆ ಆಗಿರುತ್ತದೆ. ಶಿಕ್ಷೆಯ ಅವಧಿ ಮುಗಿದ ನಂತರ ಸೆರೆಮನೆಯಿಂದ ಅವನ ಬಿಡುಗಡೆ ಆಗುತ್ತದೆ. ಆದರೆ ಅಷ್ಟು ಹೊತ್ತಿಗೆ ಅವನಿಗೆ ಹೊರಗೆ ಒಂದು ಜಗತ್ತು ಇದೆ ಎನ್ನುವುದೇ ಮರೆತು ಹೋಗಿರುತ್ತದೆ. ಜೈಲಿನಿಂದ ಹೊರಗೆ ಹೋದ ಅವನು ಪುನಃ ಜೈಲಿನೊಳಕ್ಕೆ ಹೋಗುತ್ತಾನೆ.

ಆದರೆ, ಕಡಿದಾಳ್ ಮಂಜಪ್ಪ ಅವರ ಮಾದರಿಯೇ ಬೇರೆ. ಅನ್ಯರಿಗೆ ಮೇಲ್ಪಂಕ್ತಿ ಹಾಕಿ ಕೊಡುವ ಬದುಕು ಅವರದು. ಮಂತ್ರಿಪದ ಹೋದ ಮರುದಿನವೇ ಅವರು ಕರಿಕೋಟು ಧರಿಸಿ ವಕಾಲತ್ತು ಮಾಡಲು ಕೋರ್ಟಿಗೆ ಹೊರಟೇ ಬಿಟ್ಟರು.

ಅವರು ಬೆಂಗಳೂರಿನಲ್ಲಿ ಹನುಮಂತಯ್ಯ ದ್ವಿಪಥ ರಸ್ತೆಯ ಪಕ್ಕದ ಬೀದಿಯಲ್ಲಿ ಬಾಡಿಗೆಗೆ ತೆಗೆದುಕೊಂಡಿದ್ದ ಒಂದು ಮನೆಯಲ್ಲಿ ವಾಸಿಸುತ್ತಿದ್ದರು. ನಾನು ಬೆಂಗಳೂರಿಗೆ ಹೋದಾಗಲೆಲ್ಲ, ಎರಡು ವಾರಕ್ಕೋ, ಮೂರು ವಾರಕ್ಕೊ ಒಂದು ಸಲ ಅವರನ್ನು ಕಂಡು ಬರುತ್ತಿದ್ದೆ. ಭಾನುವಾರ ಅವರು ಮನೆಯಲ್ಲಿ ಇದ್ದೇ ಇರುತ್ತಿದ್ದರು. ಅವರೊಂದಿಗೆ ನಾನು ಸಮಯ ಹೋದ ಪರಿವೆಯಿಲ್ಲದೆ ಹರಟೆ ಹೊಡೆಯುತ್ತಿದ್ದೆ. ನಮ್ಮ ಹರಟೆಯಲ್ಲಿ ವ್ಯಕ್ತಿಗಳು, ಸಂಗತಿಗಳು ದೇಶ ವಿದೇಶಗಳ ವಿಚಾರಗಳು ಬಂದೇ ಬರುತ್ತಿದ್ದವು.

ರಾಜಕೀಯವನ್ನು ಒಮ್ಮೆ ಬಿಟ್ಟವರು ಅತ್ತಕಡೆಗೆ ಅವರು ಅಪ್ಪಿ ತಪ್ಪಿಯೂ ಕಣ್ಣು ಹಾಕಲಿಲ್ಲ. ಅವರು ನನ್ನೆದುರು ಇಪ್ಪತ್ತೈದು ವರ್ಷಗಳ ಹಿಂದೆ ಹೇಳಿದ ಮಾತು ನಿನ್ನೆ ಮೊನ್ನೆ ಹೇಳಿದಂತೆ ನನ್ನ ಕಿವಿಯಲ್ಲಿ ನಿನದಿಸುತ್ತದೆ. "ನೋಡಿ, ನಾನು ರಾಜಕೀಯವನ್ನು ಬಿಟ್ಟ ಮೇಲೆ ವಕೀಲಿ ವೃತ್ತಿಗೆ ಭದ್ರವಾಗಿ ಅಂಟಿಕೊಂಡಿದ್ದೇನೆ. ಆ ಕಾಲದಿಂದ ಹಿಡಿದು ಇಲ್ಲಿಯವರೆಗೆ ನಾನು ೭೮೯ ಕೇಸುಗಳನ್ನು ನಿರ್ವಹಿಸಿದ್ದೇನೆ. ದುಡಿಯದಿದ್ದರೆ ಹೊಟ್ಟೆಯೊಂದು ಕೇಳಬೇಕಲ್ಲ? ನಮ್ಮ ಊರಿನಲ್ಲಿ ನನ್ನದೊಂದು ಜಮೀನಿದೆ. ಅದು ತುಂಬ ಸ್ವಲ್ಪ. ನನ್ನ ತಮ್ಮ ನನಗೆ ವರ್ಷಕ್ಕೆ ಎರಡು ಸಾವಿರ ರೂಪಾಯಿ ಕಳಿಸುತ್ತಾನೆ. ಆ ಅತ್ಯಲ್ಪ ಹಣದಿಂದ ಏನಾಗಬೇಕು? ಕಾಯಕ ಮಾಡದಿದ್ದರೆ ಉಪವಾಸ ಇರಬೇಕು. ಕೈ ಕೆಸರಾದರೆ ಬಾಯಿ ಮೊಸರಾಗುತ್ತದೆ ಎನ್ನುವ ಗಾದೆಯ ಮಾತು ಇದನ್ನೆ ಹೇಳುತ್ತದೆ.

ಭ್ರಷ್ಟಾಚಾರ ಮಾತು ಬಂದರೆ ಕಡಿದಾಳ್ ಮಂಜಪ್ಪ ಅವರು ಕಿಡಿ ಕಿಡಿ ಆಗುತ್ತಿದ್ದರು ಅಂಥ ಬೆಂಕಿಯನ್ನು ನಾನು ಬೇರೆ ಯಾರೊಬ್ಬರಲ್ಲಿಯೂ ಕಂಡಿಲ್ಲ.

ಅವರು ನನ್ನೆದುರು, ಶಿವಮೊಗ್ಗದಲ್ಲಿದ್ದ ಒಬ್ಬ ಜಿಲ್ಲಾಧಿಕಾರಿಯ ಬಗೆಗೆ ಹೇಳುತ್ತಿದ್ದರು. ಅ ಜಿಲ್ಲಾಧಿಕಾರಿ ಹೆಸರು ಬಂದರೆ ಸಾಕು ಅವರು ಕೋಪದಿಂದ ಕುದಿಯುತ್ತಿದ್ದರು. ಅವರ ಭಾಷೆ ಕೂರಲಗಿನಂತೆ ಭಾರೀ ಹರಿತವಾಗುತ್ತಿತ್ತು. ಆ ಅಧಿಕಾರಿ ಮುಂದೆ ಸರಕಾರದಲ್ಲಿ ಉನ್ನತೋನ್ನತ ಅಧಿಕಾರ ಸ್ಥಾನಗಳನ್ನು ಪಡೆದ.

ಭಾರೀ ಭ್ರಷ್ಟ ಆತ ಎಂದು ಹೇಳುವಾಗ ಅವರ ಮುಖ ಕೆಂಪಗೆ ಅಗುತ್ತಿತ್ತು. "ನಾನು ಅಧಿಕಾರದಲ್ಲಿದ್ದು ಅವನು ನನ್ನ ಕೈಗೆ ಸಿಕ್ಕಿದ್ದರೆ, ಅವನನ್ನು ಸೆರೆಮನೆಯ ಕಂಬಿಗಳ ಹಿಂದೆ ಇರಿಸುತ್ತಿದ್ದೆ. ಹಣ ತಿನ್ನುವುದಕ್ಕೆ ಮಿತಿ ಏನಾದರೂ ಇದೆಯೋ? ಅಂಥಭ್ರಷ್ಟರು ದೊಡ್ಡವರೆಂದು ಅವರಿಗೆ ಸರಕಾರ ಹಾಗೂ ಸಾರ್ವಜನಿಕ ಮನ್ನಣೆ

ನೀಡುತ್ತವೆ. ಗಾಂಧಿ ಕಾಮರಾಜ ಹಾಗೂ ಲಾಲ್ ಬಹಾದ್ದೂರ್ ಬದುಕಿದ ಈ ದೇಶದಲ್ಲಿ ನಾನು ಈಗ ಇನ್ನೇನು ನೋಡಬೇಕಾಗಿದೆಯೋ ಏನೋ!"

ಬಿರುಮಳೆಗೆ ಕಸಕಡ್ಡಿ ಕೊಚ್ಚಿ ಹೋಗುವಂತೆ ಸಮಾಜ ಕಂಟಕರಾದ ಈ ಜನರೂ ಕೊಚ್ಚಿ ಹೋದರೆ, ದೇಶವೂ ಬದುಕೀತು. ಜನರೂ ನೆಮ್ಮದಿಯಿಂದ ಇದ್ದಾರು"

ಕಡಿದಾಳ್ ಮಂಜಪ್ಪ ಅವರು ತಮ್ಮ ಬಗೆಗೆ ಎಂದೂ ಚಿಂತಿಸಿದವರಲ್ಲ. ಅವರ ಆಲೋಚನೆಯೆಲ್ಲವೂ ಸದಾಕಾಲವೂ ನಮ್ಮ ಜನರ ನಿತ್ಯದ ಜೀವನವನ್ನು ಕುರಿತೇ ಆಗಿದ್ದಿತು. ಜನರ ಸುಖಸಂತೋಷಗಳಲ್ಲಿಯೇ ತಮ್ಮ ಸುಖ ಸಂತೋಷಗಳಿವೆಯೆಂದು ಅವರು ತಿಳಿದಿದ್ದರು. ಕಡಿದಾಳ್ ಮಂಜಪ್ಪ ಹೋದರು. ಅವರಂಥ ಇನ್ನೊಬ್ಬರು ಎಲ್ಲಿ?

# ಹೋರಾಟಗಾರ

–ಡಾ. ಹೋ. ಶ್ರೀನಿವಾಸಯ್ಯ

"ಇಡೀ ರಾಷ್ಟ್ರಕ್ಕೆ ಭ್ರಷ್ಟಾಚಾರ, ದುರಾಚಾರ, ಅನಾಚಾರ ಮತ್ತು ಹಿಂಸಾಚಾರಗಳ ಸೋಂಕು ತಗುಲಿರುವಂತೆ ತೋರುತ್ತದೆ. ಇಡೀ ರಾಷ್ಟ್ರದಲ್ಲಿ ಏನೋ ಒಂದು ವಿಧವಾದ ನಿರಾಶೆಯ ಮತ್ತು ಅತೃಪ್ತಿಯ ವಾತಾವರಣ ಕಂಡುಬರುತ್ತಿದೆ. ಇಂದು ಅಧಿಕಾರ ಸ್ಥಾನದಲ್ಲಿರುವ ರಾಜಕಾರಣಿಗಳ ಮತ್ತು ಸರ್ಕಾರಿ ಅಧಿಕಾರಿಗಳ ಪೈಕಿ ಬಹುಮಂದಿ ಸ್ವಾರ್ಥಸಾಧಕ ಭ್ರಷ್ಟರೇ ಇದ್ದಾರೆ. ಅವರಿಗೆ ರಾಷ್ಟ್ರಾಭಿಮಾನವೂ ಇಲ್ಲ. ಬಡವರ ಮೇಲೆ ಮಮತೆಯೂ ಇಲ್ಲ. ರಾಜಕಾರಣಿಗಳು ಓಟಿಗಾಗಿ ಬಡವರ ಹಿತೈಷಿಗಳಂತೆ ನಟಿಸುತ್ತಾರೆ. ಸರ್ಕಾರಿ ಅಧಿಕಾರಿಗಳಿಂದ, ಸಾರ್ವಜನಕರಿಗೆ ಆಗುತ್ತಿದ್ದ ಕಿರುಕುಳ ಮತ್ತು ಆಡಳಿತದಲ್ಲಿದ್ದ ಭ್ರಷ್ಟಾಚಾರ ಇವುಗಳನ್ನು ಬಯಲಿಗೆಳೆಯುವ ಸಲುವಾಗಿ ನಾನೂ, ಇನ್ನು ಕೆಲವರೂ ಸೇರಿ "ರಾಷ್ಟ್ರೀಯ ಜಾಗ್ರತಾ ಮಂಡಲಿ"ಎಂಬ ಒಂದು ಸಂಸ್ಥೆಯನ್ನು ಅಸ್ತಿತ್ವಕ್ಕೆ ೧೯೮೨ರಲ್ಲಿ ತಂದೆವು. ಹೀಗೆಂದು ಧೈರ್ಯವಾಗಿ ಈಗ ದೇಶದಲ್ಲಿ ಆಗುತ್ತಿರುವ ಹಾಗೂ ಆಗು ಹೋಗುಗಳ ಬಗ್ಗೆ ಚಿಂತಿಸಿ, ತಮ್ಮ ಆತ್ಮಕಥೆಯಾದ 'ನನಸಾಗದ ಕನಸು' ಎಂಬ ಗ್ರಂಥದಲ್ಲಿ ಕಟುವಾಗಿ, ತೀಕ್ಷ್ಣವಾಗಿ ಬರೆದುಕೊಂಡು ತಮ್ಮ ದುಃಖವನ್ನು ಆಳವಾಗಿ ತೋಡಿಕೊಂಡಿದ್ದಾರೆ ಖಂಡಿತವಾದಿ ಕಡಿದಾಳ ಮಂಜಪ್ಪನವರು.

ಅವರು, ಸಮಾಜದ ಸುಧಾರಣೆಗಾಗಿ, ಅನೇಕ ಸಂಸ್ಥೆಗಳಲ್ಲಿ ಕೆಲಸ ಮಾಡಿ ಸ್ವರಾಜ್ಯದ ಉಜ್ವಲ ಭವಿಷ್ಯದ ಬಗ್ಗೆ ಕನಸು ಕಾಣುತ್ತಿದ್ದರು. ಭಾರತದ ದೇಶವು ಜಗತ್ತಿನ ಇತರೆ ರಾಷ್ಟ್ರಗಳಿಗೆ ದಾರಿದೀಪವಾಗಿ ಮಾರ್ಗದರ್ಶನ ನೀಡಬಹುದೆಂದು ಕಂಡ ಕನಸು ಸಹ ನನಸಾಗಲಿಲ್ಲವೆಂದೇ ಅವರು ನಿರಾಶರಾಗಿದ್ದರು.

ಕಡಿದಾಳ್ ಮಂಜಪ್ಪನವರು ಹುಟ್ಟು ರೈತರು. ತಾ. ೧೩.೦೭.೧೯೦೭ ರಂದು ಹಾರೋಗೊಳಿಗೆಯಲ್ಲಿ ಮಧ್ಯಮ ರೈತ ಕುಟುಂಬದಲ್ಲಿ ಹುಟ್ಟಿದರು. ಶ್ರೀ ದುಗ್ಗಣ್ಣಗೌಡರು ಮತ್ತು ಶ್ರೀಮತಿ ಚೆನ್ನಮ್ಮನವರೇ ಇವರ ತಂದೆ–ತಾಯಿ, ಇವರ ಬಡತನವು ವಿದ್ಯಾಭ್ಯಾಸಕ್ಕೆ ಬಹಳ ತೊಂದರೆ ಉಂಟು ಮಾಡಿತು. ಅನೇಕ ಅಡ್ಡಿ, ಆತಂಕಗಳು ಬಂದರೂ ಹಿರಿಯರ, ಮಿತ್ರರ, ಸಹಾಯದಿಂದ ತೀರ್ಥಹಳ್ಳಿ–ಶಿವಮೊಗ್ಗ, ಬೆಂಗಳೂರು, ಮೈಸೂರುಗಳಲ್ಲಿ ವಿದ್ಯಾರ್ಥಿಯಾಗಿ, ತಮ್ಮ ಬಿ.ಎ., ಡಿಗ್ರಿಯನ್ನು ಪಡೆದರು. ಅನಂತರ

ಬಿ.ಎಲ್. ಪದವಿಗಾಗಿ ಪೂನಾಕ್ಕೆ ಹೋಗಿ ಬಂದರು. ವಿದ್ಯಾರ್ಥಿ ದೆಸೆಯಿಂದಲೇ ಗಾಂಧೀಜಿಯವರ ಗಾಢವಾದ ಪ್ರಭಾವ ಇವರ ಮೇಲೆ ಬಿತ್ತು. ರಾಜಕೀಯ, ತತ್ವಶಾಸ್ತ್ರ, ಸಾಹಿತ್ಯ, ವಿಷಯಗಳನ್ನು ಆಳವಾಗಿ ಅಭ್ಯಾಸ ಮಾಡಿದರು. ಗೊಬ್ಬರ ಹೊತ್ತು , ಹೊಲ ಉತ್ತು, ದನ ಕಾಯ್ದು, ಬಾಲ್ಯದಲ್ಲಿ ಕಷ್ಟ ಜೀವನ ನಡೆಸಿದುದರಿಂದ, ಬಡತನ ಶೋಷಿತರ ವಿಷಯದಲ್ಲಿ ಅವರು ಸದಾ ಮರುಕ ತಾಳಿದ್ದರು.

೧೯೩೫–೩೬ ರಲ್ಲಿ ಶಿವಮೊಗ್ಗದಲ್ಲಿ ನೆಲೆಸಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ನ್ಯಾಯವಾದ ಮಾರ್ಗದಲ್ಲಿ ಬಾಳಲು ಪಣತೊಟ್ಟು ವಕೀಲಿ ವೃತ್ತಿಯನ್ನು ನಡೆಸಲು ತೊಡಗಿದರು. ೧೯೨೭ರಲ್ಲಿ ಮಹಾತ್ಮ ಗಾಂಧೀಜಿಯವರ ದರ್ಶನ ಪಡೆದು, ಅವರಿಂದ ಪ್ರಭಾವಿತರಾದರು. ಆದ ಕಾರಣ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದ ಕೆಲವೇ ದಿನಗಳಲ್ಲಿ ಕಾಂಗ್ರೆಸ್ ಸದಸ್ಯರಾದರು. ಕಾಂಗ್ರೆಸ್ ಸಂಸ್ಥೆ ಬೆಳೆಯಲು ತಾನು ಗಳಿಸಿದ ಹಣವನ್ನು ಖರ್ಚು ಮಾಡತೊಡಗಿದರು. ೧೯೩೯ರಲ್ಲಿ ಅರಣ್ಯ ಸತ್ಯಾಗ್ರಹವನ್ನು ವ್ಯವಸ್ಥೆ ಗೊಳಿಸಿದುದಲ್ಲದೆ, ಅದರ ಮುಂದಾಳತ್ವವನ್ನು ವಹಿಸಿಕೊಂಡರು.

೧೯೪೨ರ "ಬ್ರಿಟೀಷರೇ ಭಾರತದ ಬಿಟ್ಟು ತೊಲಗಿರಿ" ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದರು. ೧೯೪೭ರಲ್ಲಿ ಮೈಸೂರು ರಾಜ್ಯದ ಜವಾಬ್ದಾರಿಯುತ ಸರ್ಕಾರವನ್ನು ರಚಿಸಬೇಕೆನ್ನುವ ಚಳುವಳಿಯಲ್ಲಿ ಮುಂದಾಳತ್ವವನ್ನು ವಹಿಸಿದರು. ಹಾಗೂ ಸೆರೆಮನೆವಾಸ ಅನುಭವಿಸಿದರು. ಈ ರೀತಿ ಸ್ವಾತಂತ್ರ್ಯ ಚಳುವಳಿಯಲ್ಲಿ ಕಡಿದಾಳ್‌ರವರ ಪಾತ್ರ ಮಹತ್ತರವಾದುದು.

೧೯೪೧ ರಲ್ಲಿ ತೀರ್ಥಹಳ್ಳಿ ಕ್ಷೇತ್ರದಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಚುನಾಯಿತರಾದರು. ೧೯೪೫ರಲ್ಲಿ ನ್ಯಾಯ ವಿಧಾಯಕರ ಸಭೆಗೆ ಅವಿರೋಧವಾಗಿ ಆಯ್ಕೆಯಾದರು. ೧೯೫೨ ರಲ್ಲಿ ತೀರ್ಥಹಳ್ಳಿಯಿಂದ ವಿಧಾನಸಭೆಗೆ ಚುನಾಯಿತರಾದರು. ಆಗಲೇ ಅವರು ಕೆಂಗಲ್ ಹನುಮಂತಯ್ಯನವರ ಸಂಪುಟದಲ್ಲಿ ಕಂದಾಯ ಮತ್ತು ಲೋಕೋಪಯೋಗಿ ಇಲಾಖೆ ಮಂತ್ರಿಗಳಾದರು. ೧೯೫೬ರಲ್ಲಿ ಕೇವಲ ೭೪ ದಿನಗಳು ಮುಖ್ಯಮಂತ್ರಿಗಳಾಗಿ ಸೇವೆ ಸಲ್ಲಿಸಿದರು.

೧೯೫೭ ರಲ್ಲಿ ಮತ್ತೆ ವಿಧಾನಸಭೆಗೆ ಶೃಂಗೇರಿ ಕ್ಷೇತ್ರದಿಂದ ಅವಿರೋಧವಾಗಿ ಚುನಾಯಿತರಾದರು. ೧೯೫೭ ರಲ್ಲಿ ಶ್ರೀಜತ್ತಿಯವರ ಸಂಪುಟದಲ್ಲಿ ಕಂದಾಯ ಮಂತ್ರಿಗಳಾಗಿ ಮತ್ತೆ ಅಧಿಕಾರಕ್ಕೆ ಬಂದರು. ಆಗ ಹೈಕಮ್ಯಾಂಡ್ ವೀಕ್ಷಕರಾಗಿ ಬಂದಿದ್ದ, ಶ್ರೀಮಾನ್ ಲಾಲ್ ಬಹದ್ದೂರ್ ಶಾಸ್ತ್ರಿಗಳು ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಳ್ಳುವಂತೆ ಕೊಟ್ಟ ಸಲಹೆಯನ್ನು ತಾತ್ವಿಕ ದೃಷ್ಟಿಯಿಂದ ವಿನಯವಾಗಿ ನಿರಾಕರಿಸಿದ

ಧೀರರು ಕಡಿದಾಳರು. ರಾಜಕೀಯ ಜೀವನದಲ್ಲಿ ಸತ್ಯವಾದಿಯಾಗಿ ನಾಡಿನ, ಸಮಾಜದ ಸೇವೆ ಸಲ್ಲಿಸಿದರು.

ಕೆಂಗಲ್ ಹನುಮಂತಯ್ಯನವರ ಮಂತ್ರಿಮಂಡಲದಲ್ಲಿ ಕಂದಾಯ ಮಂತ್ರಿಗಳಾಗಿ "ಮೈಸೂರು ಗೇಣಿ ಶಾಸನ" ಜಾರಿಗೆ ತಂದದು ಸರಿಯಷ್ಟೆ. "ಮೈಸೂರು ಇನಾಂ ಪದ್ಧತಿ" (ಮಸೂದೆ ೧೯೫೪) ಮತ್ತು "ಮೈಸೂರು ಇನಾಂ ರದ್ಧಿತಿ" (ಮಸೂದೆ ೧೯೫೪) ಶಾಸನಗಳನ್ನು ರಚಿಸುವುದರಲ್ಲಿ ಅವರು ಯಶಸ್ವಿಯಾದರು. ಈ ಮೂರೂ ಮಸೂದೆಗಳು ಅಂದಿನ ಕಾಲಕ್ಕೆ ಕ್ರಾಂತಿಕಾರಿ ಶಾಸನಗಳು. ಇವು ಸಮಾಜವಾದಕ್ಕೆ ಪೂರಕವಾದವುಗಳೆಂದು ಪರಿಗಣಿತವಾದವು. ಇದರಿಂದ ಮಂಜಪ್ಪನವರು, ಶ್ರೀಮಂತ ವರ್ಗದವರಿಂದ ಇನಾಂಗಳನ್ನು ರದ್ದುಪಡಿಸುವ ವಿಧೇಯ ರಚಿಸಿದ್ದರಿಂದ 'ದೈವದ್ವೇಷಿ' ಎಂದು ಅಪಪ್ರಚಾರಕ್ಕೆ ಒಳಗಾದರು. ಆದರೂ ಕಡಿದಾಳರು ಎದೆಗುಂದಲಿಲ್ಲ. ಅವರು ಆಗಹೇಳಿದ್ದು ಇಷ್ಟೆ. "ನನ್ನ ಅಭಿಪ್ರಾಯದಲ್ಲಿ ಮಠ ಮತ್ತು ದೇವಸ್ಥಾನಗಳಿಗೆ ಸರಕಾರದವರು ಮಾನ್ಯವಾಗಿ ಕೊಟ್ಟಿದ್ದ ಭೂಮಿಯನ್ನು ಬೆವರು ಸುರಿಸಿ ಬೇಸಾಯ ಮಾಡುವ ರೈತನಿಗೆ ಕೊಟ್ಟರೆ ದೇವರು ನನ್ನ ಕಾರ್ಯವನ್ನು ನಿಜವಾಗಿಯೂ ಮೆಚ್ಚುತ್ತಾರೆ" ಗೇಣಿ ಶಾಸನ ರೂಪುಗೊಳ್ಳುವಲ್ಲಿ ಇವರ ಪಾತ್ರ ಬಹಳ ಮಹತ್ವವಾದದ್ದು. ಗೇಣಿದಾರರ ಪರವಾಗಿ ಮಾತನಾಡುತ್ತಿದ್ದವರು ಇವರೊಬ್ಬರೇ. ೧೯೬೧ರಲ್ಲಿ "ಕರ್ನಾಟಕ ಭೂ ಸುಧಾರಣಾ ಮಸೂದೆ" ಜಾರಿಗೆ ತಂದರು. ಬಡ ರೈತ ಕುಟುಂಬದಲ್ಲಿ ಜನಿಸಿದ ಕಡಿದಾಳ್ ಮಂಜಪ್ಪನವರು ಗ್ರಾಮೀಣ ಪ್ರದೇಶದಲ್ಲಿ ಸಮಾಜವಾದವನ್ನು ತರಲು ಪ್ರಯತ್ನಿಸಿ ಸಫಲರಾದವರಲ್ಲಿ ಮೊಟ್ಟ ಮೊದಲಿಗರು. ತತ್ತ್ವ ಮತ್ತು ಕಾರ್ಯಾಚರಣೆ ಇರುವ ಅಂತರ ಕಡಿಮೆಯಾಗಿರುವುದೇ ಇವರ ಯಶಸ್ಸಿಗೆ ಕಾರಣ.

ಇವರ ಜೀವನದಲ್ಲಿ ಅನೇಕ ಕಹಿ, ಸಿಹಿ ಪ್ರಸಂಗಗಳನ್ನು ಎದುರಿಸಿದರು. ಮೊಟ್ಟಮೊದಲು ಪ್ರಭಾವಿತರಾದುದು ಮಹಾತ್ಮಗಾಂಧೀ ದರ್ಶನದಿಂದ. ಅದರ ಪರಿಣಾಮವಾಗಿ ಜೀವನಪರ್ಯಂತ ಸ್ವಾತಂತ್ರ್ಯ ಸಂಗ್ರಾಮ, ಅನ್ಯಾಯದ ವಿರುದ್ಧ ಹೋರಾಟ, ಮತ್ತು ಸಜ್ಜನರಿಗೆ ರಕ್ಷಣೆ ಕೊಡುವ ಮನೋಭಾವವನ್ನು ಬೆಳೆಸಿಕೊಂಡರು. ಸುಭಾಷ್ ಚಂದ್ರ ಭೋಸ್ ಹಾಗೂ ಸರ್ದಾರ್ ವಲ್ಲಬಾಯಿ ಪಟೇಲ್‌ರವರ ಪ್ರಭಾವ ಕೂಡ ಇವರ ಮೇಲೆ ಪರೋಕ್ಷವಾಗಿ ಆಗಿತ್ತು.

ನನಗೆ ಇವರ ಪರಿಚಯವಾದದ್ದು ಶ್ರೀ ಹುಚ್ಚ ಮಾಸ್ತಿಗೌಡರಿಂದ. ಕಡಿದಾಳ್‌ರವರು ಕಂದಾಯ ಮಂತ್ರಿಗಳಾಗಿದ್ದಾಗ, ಶ್ರೀ ಹುಚ್ಚಮಾಸ್ತಿಗೌಡರು ಪರಿಚಯ ಮಾಡಿಸಿದರು. ಮಲ್ಲೇಶ್ವರದ ಶ್ರೀರಾಮಮಂದಿರದ ಪಕ್ಕದಲ್ಲಿ ಇದ್ದ ಮುಜರಾಯಿ

ಇಲಾಖೆಗೆ ಸೇರಿದ ತೋಟವನ್ನು ಶ್ರೀರಾಮಮಂದಿರಕ್ಕೆ ಬಡವರಿಗೆ ಸಮುದಾಯಭವನ ಮತ್ತು ವಿದ್ಯಾರ್ಥಿನಿಲಯ ಕಟ್ಟಲು ಕೊಡಬೇಕೆಂದು ಕೇಳಲು ಹೋಗಿದ್ದೆವು. ತೋಟ ಮಾಡುತ್ತಿದ್ದವನು ಸೈಟುಮಾಡಿ ಮಾರಲು ಪ್ರಯತ್ನಿಸುತ್ತಿದ್ದುದ್ದನ್ನು ತಿಳಿಸಿದೆವು. ಅದಕ್ಕೆ ಅವಕಾಶ ಕೊಡಬೇಡಿ ಎಂದು ಹೇಳಿ, ಮುಜರಾಯಿ ಇಲಾಖೆಯವರಿಗೆ ಪತ್ರಬರೆದರು. ಸ್ವಲ್ಪ ತೊಂದರೆ ಆಗಿ ಕೊನೆಗೆ ಹುಚ್ಚಮಾಸ್ತಿಗೌಡರೇ ಕಂದಾಯ ಮಂತ್ರಿಗಳಾದಾಗ ಮಂಜೂರು ಆಯಿತು.

ಕಡಿದಾಳರು ಸಿದ್ಧವನಹಳ್ಳಿ ಕೃಷ್ಣ ಶರ್ಮರವರ ಆಪ್ತ ಸ್ನೇಹಿತರೂ ಆಗಿದ್ದರು. ಅವರ ಆಹ್ವಾನದ ಮೇಲೆ ಶ್ರೀರಾಮಮಂದಿರದ ನೂತನ ದ್ವಾರ ಪ್ರವೇಶೋತ್ಸವಕ್ಕೆ ಬಂದಿದ್ದರು. ಶ್ರೀರಾಮಮಂದಿರದ ಕಾರ್ಯಕ್ರಮಗಳನ್ನು ಕಂಡು ಪ್ರಶಂಶಿಸಿದರು.

ಕಡಿದಾಳ್‌ರವರು ಗಾಂಧೀ ಅನುಯಾಯಿಗಳಾಗಿ ೧೯೭೫ ರಿಂದ ೧೯೮೫ರವರೆಗೆ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷರಾಗಿದ್ದರು. ಆಗಾಗ ಅಲ್ಲಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಹೋಗುತ್ತಿದ್ದೆ. ನನಗೆ ನಿಧಿಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂದು ಹೇಳಿದ್ದರು. ೧೯೮೫ರಲ್ಲಿ ಒಂದು ದಿನ ಕಡಿದಾಳರು ಫೋನ್ ಮಾಡಿ ಸ್ಮಾರಕ ನಿಧಿಯ ಕಾರ್ಯನಿರ್ವಾಹಕ ಸಭೆಗೆ ಆಹ್ವಾನಿಸಿದರು. ನಾನು ಅಮೇರಿಕಾಗೆ ಆರು ತಿಂಗಳು ಹೋಗುವುದರಿಂದ ಬರಲು ಸಾಧ್ಯವಿಲ್ಲವೆಂದು ತಿಳಿಸಿದೆ. ಯಾವಾಗ ವಾಪಸ್ ಬರುತ್ತೀರಿ ಎಂದು ಕೇಳಿದರು, ಡಿಸೆಂಬರ್‌ನಲ್ಲಿ ಎಂದೆ. ನಾನು ವಾಪಸ್ ಬಂದ ಮೇಲೆ ಡಿಸೆಂಬರ್ ನಲ್ಲಿ ಪುನ: ಫೋನ್ ಮಾಡಿ ಸಭೆಗೆ ಆಹ್ವಾನಿಸಿ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕೆಂದರು. ಆಗ ನಾನು ಹೇಳಿದೆ ಸಭೆಗೆ ಬರುತ್ತೇನೆ, ಆದರೆ ಯಾವ ಜವಾಬ್ದಾರಿಯೂ ಬೇಡ ಎಂದೆ, ಸುಮ್ಮನಾದರು. ಸಭೆಗೆ ಹೋದೆ ಅವರೇ ಅಧ್ಯಕ್ಷತೆ ವಹಿಸಿದರು. ನಿಟ್ಟೂರು ಶ್ರೀನಿವಾಸರಾವ್, ವೆಂಕಟೇಶ್ ಮಾಗಡಿ ಮುಂತಾದ ಹಿರಿಯರು ಇದ್ದರು.

೧೦ ನಿಮಿಷ ಮಾತನಾಡಿ ತನ್ನ ೧೦ ವರ್ಷದ ಅನುಭವನವನ್ನು ಹೇಳಿ, ಇಷ್ಟು ದಿನ ಸಹಕಾರ ಕೊಟ್ಟದ್ದಕ್ಕಾಗಿ ಎಲ್ಲರಿಗೂ ವಂದನೆಗಳನ್ನು ಅರ್ಪಿಸಿ ನನ್ನ ಹೆಸರು ಹೇಳಿ, "ಎಲ್ಲರಿಗೂ ಪರಿಚಯವಿದೆ. ಗಾಂಧೀ ಅನುಯಾಯಿಗಳು, ಒಳ್ಳೆಯ ಕೆಲಸಗಾರರು, ಇಂಜಿನಿಯರ್, ಸಂಸ್ಥೆಗಳನ್ನು ಕಟ್ಟಿದ್ದಾರೆ. ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲು ತಮ್ಮೆಲ್ಲರ ಅಪ್ಪಣೆ ಕೇಳುತ್ತೇನೆ" ಎಂದು ಎದ್ದು ನನ್ನ ಕೈ ಹಿಡಿದು ಅಧ್ಯಕ್ಷರ ಪೀಠದಲ್ಲಿ ಕೂಡಿಸಿ "ತಮ್ಮೆಲ್ಲರ ಸಹಕಾರಕ್ಕೆ ವಂದನೆಗಳು" ಎಂದು ಹೇಳುತ್ತಾ ಹೊರಟೇ ಹೋದರು. ನನಗೆ ಏನೂ ತೋಚಲಿಲ್ಲ, ಮೈ ಬೆವರಿತು. ಇದಕ್ಕೆ ಇದ್ದಂತೆ

ಬಂದ ಸ್ಮಾರಕ ನಿಧಿಯ ಅಧ್ಯಕ್ಷ ಗಿರಿಯನ್ನು ಹೇಗೆ ನಿಭಾಯಿಸುವುದು ಎಂದು ಚಿಂತೆಯಾಯಿತು. ಏನೂ ತೋರಲಿಲ್ಲ. ಮಾತನಾಡಲು ಅವಕಾಶವೇ ನೀಡಲಿಲ್ಲ. ನಿಟ್ಟೂರು ಶ್ರೀನಿವಾಸರಾವ್ ಮತ್ತು ವಿ.ಟಿ ಮಾಗಡಿ, ನಾರಾಯಣಸ್ವಾಮಿಯವರಿಗೆ ಮೊದಲೇ ಗೊತ್ತಿತ್ತು ಎಂದು ಆಗ ತಿಳಿಯಿತು. ಎಲ್ಲರೂ ಮೊದಲೇ ಮಾತನಾಡಿಕೊಂಡಿದ್ದರು. ನನಗೆ ಧೈರ್ಯ ಹೇಳಿ ಪೂರ್ಣ ಸಹಕಾರ ಕೊಡುವುದಾಗಿ ಸಮಾಧಾನ ಮಾಡಿದರು. ಇದು ಶ್ರೀ ಕಡಿದಾಳ್‌ರವರು ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿದ ರೀತಿ.

ಕೆಲವು ದಿನಗಳ ನಂತರ ಮನೆಗೆ ಹೋಗಿ, ಅವರ ಆಶೀರ್ವಾದ ಪಡೆದೆ. "ನನಗೆ ಗೊತ್ತು ನೀವು ಚೆನ್ನಾಗಿ ಕೆಲಸ ಮಾಡುತ್ತೀರಿ ಎಂದು. ನಿಟ್ಟೂರು ಶ್ರೀನಿವಾಸರಾವ್, ಜಿ. ನಾರಾಯಣವರು ನಿಮ್ಮ ಬಗ್ಗೆ ಹೇಳಿದ್ದಾರೆ. ಗಾಂಧೀ ಸ್ಮಾರಕ ನಿಧಿಯನ್ನು ಬೆಳೆಸಿ ಎಂದು ಆಶೀರ್ವದಿಸಿದರು.

ರಾಜಕಾರಣಿಯಾಗಿದ್ದರೂ ಸಾಹಿತ್ಯ ಸೇವೆಯನ್ನು ಮಾಡಿದ ಸಾಹಸಿ, ಆತ್ಮಕಥೆಯನ್ನು ಸೇರಿಸಿ ನಾಲ್ಕು ಪುಸ್ತಕಗಳ ಗ್ರಂಥಕರ್ತರು. ಸಕ್ರಿಯ ರಾಜಕಾರಣಿಗಳಿಗಾಗಿ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ ವಿರಳರಲ್ಲಿ ಅವರು ಒಬ್ಬರು. ಅವರ ಮೊದಲ ಕೃತಿ ರಾಜಕೀಯ ಕಾದಂಬರಿಯಾದ "ಪಂಜರವಳ್ಳಿ ಪಂಜು" ೧೯೬೩ರಲ್ಲಿ ಪ್ರಕಟಣೆ. ಸುಂದರವಾದ ಪ್ರಕೃತಿಯ ವರ್ಣನೆಗಳಿಂದ ಕೂಡಿದೆ. ರಾಜಕೀಯ ಪರಿಸ್ಥಿತಿಯನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಅದನ್ನು ಕಡಿದಾಳರೇ ಇಂಗ್ಲೀಷ್ ಗೆ ಭಾಷಾಂತರ ಮಾಡಿ ಪ್ರಕಟಿಸಿದರು. ಇದು ಮಲೆಯಾಳಿ ಭಾಷೆಯಲ್ಲೂ ಪ್ರಕಟವಾಯಿತು. ಡಾ.ಝಕೀರ್ ಹುಸೇನ್, ವಿ.ವಿ.ಗಿರಿ, ಡಾ.ಸಂಪೂರ್ಣಾನಂದ, ಡಾ.ಸಿ.ಡಿ.ದೇಶಮುಖ್ ಅವರುಗಳ ಮೆಚ್ಚಿಗೆ ಪಡೆಯಿತು. ೧೯೬೬ರಲ್ಲಿ ಪ್ರಕಟವಾದ 'ನಾಳೆಯ ನೆಳಲು' ಎಂಬ ಎರಡನೆಯ ಕಾದಂಬರಿಯಲ್ಲಿ ಅವರು ಹದಗೆಟ್ಟ ಕಾಂಗ್ರೆಸ್ ರಾಜಕಾರಣದ ಭವಿಷ್ಯದ ಬಗ್ಗೆ ಚಿಂತಿಸಿದ್ದಾರೆ. ಮುಂದಿನ ರಾಜಕಾರಣಿಗಳು ಯಾವ ರೀತಿ ಇರುವರೆಂಬುದನ್ನು ವಿವರವಾಗಿ ತಿಳಿಸಿದ್ದಾರೆ. ಇವರ ಮೂರನೆಯ ಕಾದಂಬರಿ ೧೯೭೫ರಲ್ಲಿ ಪ್ರಕಟವಾದ 'ಕ್ರಾಂತಿ ಕೂಟ'.

ಕಡಿದಾಳರು ಬೆಂಗಳೂರು ನಗರದ ಬಿ.ಎಂ.ಎಸ್. ವಿದ್ಯಾಟ್ರಸ್ಟಿನ ಅಧ್ಯಕ್ಷರಾಗಿ ಶಿಕ್ಷಣ ರಂಗಕ್ಕೆ ಅಪಾರ ಸೇವೆ ಸಲ್ಲಿಸಿದರು. ಸಂಸದೀಯ ವ್ಯವಹಾರಗಳ ಸಂಸ್ಥೆಗೆ ಶಾಶ್ವತ ಆಶ್ರಯದಾತರಾಗಿ ಬೆಳೆಸಿದರು.

ಅವರು ೧೯೫೭ರಲ್ಲಿ ಸಾರ್ವತ್ರಿಕ ಚುನಾವಣೆಗಳಲ್ಲಿ ಸರ್ಕಾರದ ಆಡಳಿತದ

ಯಂತ್ರವನ್ನು ಪಕ್ಷಗಳು ದುರುಪಯೋಗ ಪಡಿಸಿಕೊಳ್ಳದಂತೆ ಕಾವಲು ಸಮಿತಿ ಅಧ್ಯಕ್ಷರಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗುವಂತೆ ಕರ್ತವ್ಯ ನಿರ್ವಹಿಸಿದರು.

ಅನೇಕ ರಾಷ್ಟ್ರೀಯ ನಾಯಕರುಗಳೊಡನೆ ನೇರ ಹಾಗು ಸಮೀಪ ಸಂಪರ್ಕವನ್ನು ಹೊಂದಿದ್ದರು. ರಾಷ್ಟ್ರಶಿಲ್ಪಿ ಮತ್ತು ಭಾರತ ರತ್ನ ಸರ್ ಎಂ. ವಿಶ್ವೇಶ್ವರಯ್ಯ, ಪಂಡಿತ ಜವಹರ್‌ಲಾಲ್ ನೆಹರು ಮತ್ತು ಲಾಲ್‌ಬಹದ್ದೂರ್ ಶಾಸ್ತ್ರೀ, ಬಾಬು ರಾಜೇಂದ್ರ ಪ್ರಸಾದ್, ಚಕ್ರವರ್ತಿ ರಾಜಗೋಪಾಲಚಾರಿ, ಜಯಪ್ರಕಾಶ್ ನಾರಾಯಣ, ಗುಲ್ಜಾರಿಲಾಲ್ ನಂದ ಇವರುಗಳೊಡನೆ ಸಂಪರ್ಕ ಇಟ್ಟುಕೊಂಡಿದ್ದರು.

"ರಾಜ್ಯಪಾಲರಾಗಿ" ಎಂದು ಬಂದ ಆಹ್ವಾನವನ್ನು "ಇಂದಿರಾ ಗಾಂಧಿ ಅವರ ಕೈಕೆಳಗೆ ಗುಲಾಮನಾಗಲಾರೆ" ಎಂದು ತಿರಸ್ಕರಿಸಿಬಿಟ್ಟರು.

ಇವರ ನಿಲುವು ಕೋಟು, ಬಿಳಿಯ ಪೈಜಾಮದ ಉಡುಪೇ ಅವರ ಸರಳತೆಗೆ ಸಾಕ್ಷಿ. ಕೊನೆಯವರೆಗೂ ವಕೀಲಿ ಕೆಲಸ ಮಾಡಿ ದುಡಿದು ತಿನ್ನುವ ಬದುಕು ನಡೆಸಿದರು. ಶುದ್ಧ ಚಾರಿತ್ರ್ಯ. ನೇರ ನಡವಳಿಕೆಗೆ ಹೆಚ್ಚು ಪ್ರಾತಿನಿಧ್ಯ ನೀಡಿದರು. ಭ್ರಷ್ಟಾಚಾರದ ಬಗ್ಗೆ ಸದಾ ನೊಂದು ಟೀಕಿಸುತ್ತಿದ್ದರು. ಅವರು ನುಡಿದಂತೆ ನಡೆದ ರಾಜಕಾರಣಿ. ಪದವಿಯ ಮೋಹಕ್ಕೆ ಎಂದೂ ಅಂಟಿಕೊಳ್ಳಲಿಲ್ಲ. ಬಾಡಿಗೆ ಮನೆಯಲ್ಲೆ ವಾಸ. ನಿರ್ಭೀತ ರಾಜಕಾರಣಿ ಅನ್ನಿಸಿಕೊಂಡರು.

ಇವರಿಗೆ ಪತ್ನಿ, ಒಬ್ಬ ಪುತ್ರ ಮತ್ತು ಪುತ್ರಿಯರು. ಇವರು ಕೊನೆ ದಿನಗಳಲ್ಲಿ ಹೊಟ್ಟೆಹುಣ್ಣಿನ ಬಾಧೆಯಿಂದ ನರಳಿದರು.

ಸಾರ್ವಜನಿಕ ಸಮಾರಂಭಗಳಲ್ಲಿ ಕಠಿಣವಾಗಿಯೇ ಮಾತನಾಡುತ್ತಿದ್ದರು. ಅದಕ್ಕೆ ಇವರನ್ನು ಕರೆಯಲು ಕೆಲವರು ಹಿಂಜರಿಯುತ್ತಿದ್ದರು. ಒಮ್ಮೆ ನಾನು "ರಾಷ್ಟ್ರಕವಿ" ಎಂಬ ಪುಸ್ತಕ ಬಿಡುಗಡೆಗೆ ಕರೆದೆವು. ಹಾ.ಮಾ.ನಾಯಕ, ಜೀ.ಶಂ ಪರಮಶಿವಯ್ಯ ಬಂದಿದ್ದರು. ಕುವೆಂಪು ಬಗ್ಗೆ ಬಹಳ ಚೆನ್ನಾಗಿ ಮಾತನಾಡಿದರು. ರಾಜಾಜಿನಗರದಲ್ಲಿ ಕೆಂಪೇಗೌಡ ದಿನಾಚರಣೆಯಲ್ಲಿ ನನ್ನನ್ನು ಸನ್ಮಾನಿಸಿದರು. ಕಡಿದಾಳ್‌ರವರೇ ನನಗೆ ಸನ್ಮಾನ ಮಾಡಿ ನಾಲ್ಕು ಹಿತ ನುಡಿಗಳನ್ನು ಹೇಳಿದರು. ಹೀಗೆ ಅನೇಕ ಸಮಾರಂಭಗಳಲ್ಲಿ ಭೇಟಿಯಾಗಿ ಅವರು ನನ್ನನ್ನು ಒಳ್ಳೆಯ ಕೆಲಸಗಾರ ಎಂದು ಗುರುತಿಸಿದರು.

ತೆಂಗಿನ ಮರದ ರಸ್ತೆಯ ಶ್ರೀ ರಾಮ ಮಂದಿರದ ನೂತನ ದ್ವಾರ ಪ್ರವೇಶೋತ್ಸವ ನಡೆಸಿದವರು ಕಡಿದಾಳ್‌ರವರು. ಸಿದ್ದವನಹಳ್ಳಿ ಕೃಷ್ಣ ಶರ್ಮರು ದೂರವಾಣಿ ಮೂಲಕ ಆಹ್ವಾನ ಕೊಟ್ಟರು. ಬಡ ಜನರು ಸೇರಿ ಒಂದ ಪ್ರಾರ್ಥನಾ ಮಂದಿರವನ್ನು ಕಟ್ಟಿ

ಒಂದಾಗಿ ಬೆಳೆಯುತ್ತಿರುವುದಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

'ನನಸಾಗದ ಕನಸು' ಕನ್ನಡದಲ್ಲಿ ಪ್ರಕಟವಾದ ಅತ್ಯಂತ ಪ್ರಾಮಾಣಿಕ ಆತ್ಮಕಥೆ. ಇದರಲ್ಲಿ ಅವರೊಂದು ಕಡೆ ಬರೆದುಕೊಳ್ಳುತ್ತ ಹೀಗೆ ಹೇಳುತ್ತಾರೆ. "ಪ್ರಾಮಾಣಿಕತೆಯೂ ಅತುಳೈಶ್ವರ್ಯವೂ ಒಟ್ಟಾಗಿರಲು ಸಾಧ್ಯವೇ ಇಲ್ಲ. ಪ್ರಾಮಾಣಿಕರಾಗಿದ್ದವರು ಜೀವನ ನಿರ್ವಹಣೆಗಾಗಿ ಕಷ್ಟ ಪಡಲೇಬೇಕು. ನಾನು ನನ್ನ ಸಾರ್ವಜನಿಕ ಜೀವನದಲ್ಲಿ ಪ್ರಾಮಾಣಿಕವಾಗಿ ಬಾಳಿದ್ದಕ್ಕೆ ಹೆಮ್ಮೆ ಪಡುತ್ತೇನೆಯೇ ಹೊರತು ಪಶ್ಚಾತ್ತಾಪಪಡುವುದಿಲ್ಲ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಾವು ಅಂದು ಕಾಣುತ್ತಿದ್ದ ಕೆಲವು ಕನಸುಗಳು ನನಸಾಗಲಿಲ್ಲ. ಭಾವೀ ಸ್ವರಾಜ್ಯದ ಉಜ್ವಲ ಭವಿಷ್ಯದ ಬಗ್ಗೆ ಕನಸು ಕಾಣುತ್ತಿದ್ದವರ ಪೈಕಿ ನಾನೂ ಒಬ್ಬನಾಗಿದ್ದೆ. ಆ ಕನಸೂ ನನಸಾಗಲಿಲ್ಲ. ಭಾರತ ದೇಶವು ಜಗತ್ತಿನ ಇತರ ರಾಷ್ಟ್ರಗಳಿಗೆ ದಾರಿ ದೀಪವಾಗಿ ಮಾರ್ಗ ದರ್ಶನ ನೀಡಬಹುದೆಂದು ಕನಸನ್ನು ಕಂಡಿದ್ದೆ. ಆದರೆ ಆ ಕನಸು ನನಸಾಗಲಿಲ್ಲ. ಯೋಗ ಸಾಧನೆಯಲ್ಲಿ ನಿರತನಾಗಿರಬೇಕೆಂಬ ನನ್ನ ಕನಸು ಕೂಡ ನನಸಾಗಲಿಲ್ಲ."

ಶ್ರೀ ಪಿ.ಎಸ್.ಜವರಪ್ಪಗೌಡರ ಅಭಿನಂದನಾ ಗ್ರಂಥದಲ್ಲಿ ಅವರು ಬರೆದ ಲೇಖನವೊಂದರಲ್ಲಿ ದೇಶದಲ್ಲಿ ನಡೆಯುತ್ತಿರುವ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿಕೊಂಡಿರುವ ಬಗೆ ಹೀಗೆ : " ಈಚೆಗೆ ಒಂದು ವರ್ಷದಿಂದ ನನ್ನ ಆರೋಗ್ಯ ದಿನೇ ದಿನೇ ನಶಿಸುತ್ತಾ ಇದೆ. ಹೊಟ್ಟೆಯ ಹುಣ್ಣು ನನಗೆ ಬಹಳ ತೊಂದರೆ ಕೊಡುತ್ತಿದೆ. ಆದರೂ ಕೂಡ ಈ ದೇಶದಲ್ಲಿ ರಾಜಕಾರಣ ಮತ್ತು ಆಡಳಿತ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯ ನೋಡಿ, ನನ್ನ ರಕ್ತ ಕುದಿಯುತ್ತಿದೆ. ನನ್ನ ಆರೋಗ್ಯ ಸರಿ ಇದ್ದಿದ್ದರೆ ಈ ರಾಜ್ಯದಲ್ಲೆಲ್ಲಾ ಸಂಚರಿಸಿ ಜನರನ್ನು ಎಚ್ಚರಗೊಳಿಸುತ್ತಿದ್ದೆ. ದುರಾದೃಷ್ಟವಶಾತ್ ನನಗೆ ೧೦ ಮೈಲಿ ದೂರ ಕಾರಿನಲ್ಲಿ ಪ್ರಯಾಣ ಮಾಡುವ ಚೈತನ್ಯವೂ ಇಲ್ಲವಾಗಿದೆ. ಸ್ವಾತಂತ್ರ್ಯ ಹೋರಾಟಗಾರರಾಗಿದ್ದವರು ಈ ದೇಶದಲ್ಲಿ ನಡೆಯುತ್ತಿರುವ ಅನ್ಯಾಯ, ಭ್ರಷ್ಟಾಚಾರಗಳನ್ನು ಸಹಿಸಿಕೊಂಡು ಸುಮ್ಮನಿರುವುದು ಯುಕ್ತವಲ್ಲ".

ಅವರ ಆತ್ಮಕಥೆಯ ಬಗ್ಗೆ ನಾಲ್ಕು ಮಾತು ಪ್ರಶಂಸಿಸಿ ಬರೆದಿದ್ದಕ್ಕಾಗಿ ನನಗೆ ಬಂದ ಉತ್ತರ ಹೀಗೆ ಇದೆ. "ನಾನೊಬ್ಬ ಪರಿಪೂರ್ಣ ಸತ್ಯವಂತನೆಂದು ಹೇಳಿಕೊಳ್ಳುವ ಧೈರ್ಯ ನನಗಿಲ್ಲ. ನನ್ನ ರಾಜಕೀಯ ಜೀವನದಲ್ಲಿ ಪ್ರಾಮಾಣಿಕತೆಯಿಂದ ಬಾಳಲು ಸತತ ಪ್ರಯತ್ನ ಮಾಡುತ್ತಾ ಬಂದಿದ್ದೇನೆ. ನನ್ನ ಆತ್ಮಕಥೆಯನ್ನು ಪರಿಚಿತರಿಂದ ಹಿಡಿದು, ಪಾಮರರವರೆಗೂ ಮೆಚ್ಚಿ ಪತ್ರ ಬರೆದಿದ್ದಾರೆ. ನಾನು ಕಿಬ್ಬೊಟ್ಟೆಯ ಹುಣ್ಣಿನಿಂದ

ಮತ್ತು ಇತರ ಯಾತನೆಗಳಿಂದ  ಬಹಳವಾಗಿ ಆಗಾಗ ನರಳುತ್ತಿದ್ದೇನೆ. ನಾನು ನನ್ನ ಆತ್ಮಕಥೆಯಲ್ಲಿ ಬರೆದಂತೆ "ಆದಷ್ಟು ಜಾಗ್ರತ ನನ್ನ ಜೀವನ ನಾಟಕವನ್ನು ಮುಗಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ. ಅಂತೂ ಈ ಇಳಿವಯಸ್ಸಿನಲ್ಲಿ ನನ್ನ ಆತ್ಮಕಥೆಗೆ ಬಹಳ ಪ್ರಶಂಸೆ ದೊರಕಿರುವುದು ನನಗಂತೂ ಸಮಾಧಾನ. ಕೆಲವರಾದರೂ ಪ್ರಾಮಾಣಿಕತೆಗೆ ಬೆಲೆ ಕೊಡುತ್ತಾರೆಂದು ನನಗೆ ಮನವರಿಕೆಯಾಯಿತು".

ಕಡಿದಾಳ್ ಮಂಜಪ್ಪನವರು ಚಿಂತನಶೀಲರು. ನಿಜವಾದ ಓರ್ವ ರಾಜಕೀಯ ಚಿಂತಕರು. ಅವರು ಕೇವಲ ರಾಜಕಾರಣಿಯಾಗಿ ಜೀವನ ಮಾಡಲಿಲ್ಲ. ಈ ದೇಶದ ಸಮಸ್ಯೆಗಳನ್ನು ಬಹಳವಾಗಿ ಯೋಚಿಸಿದ್ದರು. ಯಾವಾಗ ಹೋದರೂ ಈ ಬಗ್ಗೆ ಹೆಚ್ಚಾಗಿ ಚರ್ಚಿಸುತ್ತಿದ್ದರು. ಈ ರಾಜಕೀಯ ಜೀವನದಲ್ಲಿ ಸ್ವಚ್ಚತೆ, ದಕ್ಷತೆ, ನೈತಿಕ ಬಲವನ್ನು ತರಬೇಕು ಅಂತ ಹೇಳಿ ಯಾವಾಗಲೂ ಪ್ರತಿಪಾದಿಸುತ್ತಿದ್ದರು. ಅವರು ಮನೆಯಲ್ಲಿ ಊಟ ಮಾಡುವಾಗ, ಮಲಗಿದ್ದಾಗಲೂ ಕೂಡ ಈ ದೇಶ ಸಮಸ್ಯೆಗಳೇ ತುಂಬಿಕೊಳ್ಳುತ್ತಿದ್ದವು.

ಮುಖ್ಯಮಂತ್ರಿಗಳಾಗಿದ್ದವರು, ಜೀವನಕ್ಕಾಗಿ ಪುನಃ ನ್ಯಾಯವಾದಿಗಳ ಕೆಲಸವನ್ನು ಮಾಡಿದ್ದು ಒಂದು ವಿಶೇಷ. ನಾನು ಒಂದು ಸಾರಿ ಕೇಳಿದೆ "ಮುಖ್ಯಮಂತ್ರಿಗಳಾದವರು ಪುನಃ ಕೋರ್ಟಿಗೆ ಹೋಗಿ, ವಾದಿಸುವುದು ಸರಿಯೇ?" ಅದಕ್ಕೆ ಅವರ ಉತ್ತರ" ನನ್ನಲ್ಲಿ ಯಾವ ತರಹದ ಹಣವೂ ಇಲ್ಲ. ಮೊದಲಿನಿಂದಲೂ ನ್ಯಾಯವಾದಿಯಾಗಿ ಜೀವನ ನಡೆಸಿದ್ದೇನೆ. ಸಾಯುವವರೆಗೂ ಇನ್ನೊಬ್ಬರ ಹಂಗು ಬೇಡ. ನನ್ನ ಅನ್ನ ನಾನು ಸಂಪಾದಿಸಿಕೊಳ್ಳುತ್ತಿದ್ದೇನೆ. ಅನೇಕ ಹಿರಿಯರು ಸ್ಥಾನದಲ್ಲಿದ್ದವರು ಪುನಃ ಮೊದಲ ಕೆಲಸಕ್ಕೆ ಬಂದಿಲ್ಲವೇ? ಅದರಲ್ಲಿ ಏನು ತಪ್ಪು" ಎಂದರು.

೧೯೬೨ರ ಮಾರ್ಚ್ ೮ ರಂದು ಅವರ ಇಚ್ಛೆಯಂತೆ ಜೀವನ ನಾಟಕವನ್ನು ಮುಗಿಸಿದರು. ಇನ್ನು ಸಮಾಜದ ಶೋಷಣೆ ಬಗ್ಗೆ ಚಿಂತಿಸುವವರು ಯಾರು?

# ಬಂಧು ಹಾಗೂ ಮಾರ್ಗದರ್ಶಿ

**–ಕೆ.ಟಿ.ಕೃಷ್ಣಪ್ಪ, ಕೊಳಾವರ**

ಸನ್ಮಾನ್ಯ ಕಡಿದಾಳ್ ಮಂಜಪ್ಪನವರ ಊರು ನಮ್ಮೂರಿಗೆ ಕೇವಲ ಹತ್ತು ಕಿ.ಮಿ. ದೂರದಲ್ಲಿದೆ. ಅವರು ನಮ್ಮ ಊರಿನವರು, ಬಂಧುಗಳು ಹಾಗೂ ಹಿತೈಷಿಗಳೆಂದು ಹೇಳಿಕೊಳ್ಳಲು ನನಗೆ ತುಂಬಾ ಸಂತೋಷ ಮತ್ತು ಹೆಮ್ಮೆಯಾಗುತ್ತದೆ.

ನಾನು ಕಡಿದಾಳ್ ಮಂಜಪ್ಪನವರನ್ನು ಮೊದಲು ನೋಡಿದ್ದು ೧೯೩೧–೩೨ ರಲ್ಲಿ. ತೀರ್ಥಹಳ್ಳಿಯಲ್ಲಿದ್ದ ಅವರ ಚಿಕ್ಕಪ್ಪ ತುಡ್ಕಿರಾಮಣ್ಣಗೌಡರ ಮನೆಯಲ್ಲಿ.ಅವರು ಪುಣೆಯಲ್ಲಿ ಲಾ ವ್ಯಾಸಂಗ ಮಾಡುತ್ತಿದ್ದಾಗ ಅಲ್ಲಿಗೆ ಬಂದು ಹೋಗುತ್ತಿದ್ದರು. ತುಡ್ಕಿ ರಾಮಣ್ಣಗೌಡರ ಮನೆ ಪಕ್ಕದ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ನಾನಿದ್ದುದರಿಂದ ಅಲ್ಲಿಗೆ ಬಂದಾಗ ಅವರನ್ನು ನೋಡುವ ಅವಕಾಶ ಸಿಗುತ್ತಿತ್ತು. ನಂತರ ಸುಮಾರು ಅರವತ್ತು ವರ್ಷಗಳ ಕಾಲ ಅವರು ಶಿವಮೊಗ್ಗದಲ್ಲಿ ವಕೀಲರಾಗಿದ್ದಾಗ, ಶಾಸಕರಾಗಿದ್ದಾಗ ನಂತರ ಬೆಂಗಳೂರಿನಲ್ಲಿ ಮಂತ್ರಿ, ಮುಖ್ಯಮಂತ್ರಿ ಆಮೇಲೆ ಹೈಕೋರ್ಟ್ ವಕೀಲರಾದ ಸಂದರ್ಭಗಳಲ್ಲಿ ಅನೇಕ ಸಾರಿ ಅವರನ್ನು ಭೇಟಿ ಮಾಡುವ ಸುಯೋಗ ದೊರಕಿತ್ತು

ನಾನು ಉತ್ತಮ ಸಾಹಿತಿ ಅಲ್ಲ. ಬರಹಗಾರನಲ್ಲ ಅಥವಾ ಹೆಸರಾಂತ ರಾಜಕಾರಿಣಿಯೂ ಅಲ್ಲ. ಆದರೂ ಕಡಿದಾಳರ ಬಗ್ಗೆ ಇರುವ ಗೌರವ, ಪ್ರೀತಿ, ಆತ್ಮೀಯತೆ ಮತ್ತು ಅಭಿಮಾನದಿಂದ ಈ ಲೇಖನ ಬರೆಯುವ ಸಾಹಸ ಮಾಡಿದ್ದೇನೆ.

ಕಡಿದಾಳ್ ಮಂಜಪ್ಪನವರು ಅವರ ಆತ್ಮಕಥೆಯಲ್ಲಿ ತಿಳಿಸಿದಂತೆ ಬಡ ಗೇಣಿದಾರನ ಮಗನಾಗಿ ಬಾಲ್ಯ ಜೀವನವನ್ನು ದಟ್ಟ ದಾರಿದ್ರ್ಯದಲ್ಲಿ ಕಳೆದಿದ್ದರು. ಅವರ ಚಿಕ್ಕವಯಸ್ಸಿನಲ್ಲಿ ಮನೆಯಲ್ಲಿ ಗದ್ದೆ ಹೂಡುವುದು, ಅಡಿಕೆ ತೋಟದ ಕಳೆ ಕೀಳುವುದು, ಕೊನೆ ಹೊತ್ತು ತರುವುದು, ಗದ್ದೆ ತೋಟಗಳಿಗೆ ಗೊಬ್ಬರ ಹೊತ್ತು ಹಾಕುವುದು.ಎತ್ತು, ದನ ಕಾಯುವುದು, ಹೀಗೆ ಹಲವಾರು ಕಷ್ಟದ ಕೆಲಸ ಮಾಡಿದ್ದರಿಂದ ಮುಂದೆ ಜೀವನದಲ್ಲಿ ಕಷ್ಟ ಕಾರ್ಪಣ್ಯಗಳನ್ನು ಎದುರಿಸುವ ಶಕ್ತಿ ಧೈರ್ಯ ಅವರಲ್ಲಿ ಮೂಡಿ ಬಂದಿದ್ದವು ಎಂದಿದ್ದಾರೆ.

ಹೀಗೆ ಬಡತನ, ಕಷ್ಟಗಳ ಸರಮಾಲೆಗಳ ಹಿನ್ನೆಲೆಯಿಂದ ಬಂದ ಕಡಿದಾಳರು

ಸತತ ಶ್ರಮದಿಂದ ವಿದ್ಯಾವಂತರಾಗಿ, ಪ್ರಸಿದ್ಧ ವಕೀಲರಾಗಿ, ದಿಟ್ಟ ಸ್ವಾತಂತ್ರ್ಯ ಹೋರಾಟಗಾರರಾಗಿ, ಜನಪ್ರಿಯ ಶಾಸಕರಾಗಿ. ಆದರ್ಶ ರಾಜಕಾರಣಿಯಾಗಿ, ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ, ಸಾಹಿತಿಯಾಗಿ ಅದ್ಭುತ ಸಾಧನೆ ಮಾಡಿದ್ದಾರೆ. ಇಷ್ಟೆಲ್ಲಾ ಅಪ್ರತಿಮ ಸಾಧನೆಗೆ ಅವರ ಪ್ರಾಮಾಣಿಕತೆ, ದಕ್ಷತೆ, ತ್ಯಾಗ ಹಾಗೂ ಸೇವಾ ಮನೋಭಾವ, ರಾಷ್ಟ್ರಭಕ್ತಿ, ಸತ್ಯಸಂಧತೆ, ಸರಳ ಸ್ವಭಾವ, ಹೃದಯ ವೈಶಾಲತೆಗಳೇ ಮೂಲಕಾರಣ. ಯಾವ ಪ್ರಭಾವಕ್ಕೂ ಮಣಿಯದೆ, ಸರ್ಕಾರದ ನೀತಿ ನಿಯಮಗಳಿಗೆ ಚ್ಯುತಿ ಬಾರದಂತೆ ಪ್ರಮಾಣಿಕವಾಗಿ ಆಡಳಿತ ನಿರ್ವಹಿಸಿದ ಮೌಲ್ಯಾಧಾರಿತ ಶ್ರೇಷ್ಠ ಗಣ್ಯ ವ್ಯಕ್ತಿಯಾಗಿದ್ದರು. ಅವರು ತಮ್ಮ ಮನೆಯವರಿಗೇ ಆಗಲೀ ಅಥವಾ ಆತ್ಮೀಯ ಬಂಧು ಬಾಂಧವರಾಗಿರಲಿ, ಯಾವ ದಾಕ್ಷಿಣ್ಯಕ್ಕೂ ಒಳಗಾಗದೇ ತಮ್ಮ ತತ್ವ ಸಿದ್ಧಾಂತ ಬಿಟ್ಟು ಕಾನೂನಿಗೆ ವಿರೋಧವಾಗಿ ಯಾವಾಗಲೂ ನಡೆದುಕೊಂಡವರಲ್ಲ. ಈ ಬಗ್ಗೆ ನನ್ನ ಗಮನಕ್ಕೆ ಬಂದ ಕೆಲವು ಅನುಭವಗಳನ್ನು ತಿಳಿಸಲು ಇಚ್ಛಿಸುತ್ತೇನೆ.

ಸರ್ಕಾರ ಹಿಂದೆ ವ್ಯವಸಾಯ ಯೋಗ್ಯವಾದ ಸರ್ಕಾರಿ ಜಮೀನನ್ನು ಹರಾಜು ಮೂಲಕ ವಿಲೇವಾರಿ ಮಾಡುತ್ತಿದ್ದು ಸಾಮಾನ್ಯವಾಗಿ ಶ್ರೀಮಂತರೇ ಹರಾಜಿನಲ್ಲಿ ಕೊಂಡುಕೊಳ್ಳುತ್ತಿದ್ದರು. ಬಡಬಗ್ಗರಿಗೆ ಜಮೀನು ಸಿಗುತ್ತಿರಲಿಲ್ಲ. ಕಡಿದಾಳ್ ಮಂಜಪ್ಪನವರು ರೆವಿನ್ಯೂ ಮಂತ್ರಿಗಳಾದ ಮೇಲೆ ಸರ್ಕಾರದ ದರ್ಕಾಸ್ತು ಕಾನೂನು ಬದಲಾಯಿಸಿ ಸರ್ಕಾರಿ ಜಮೀನು ಹರಾಜು ಹಾಕುವ ಪದ್ಧತಿಯನ್ನು ನಿಲ್ಲಿಸಿ ಮುಂದೆ ಹರಿಜನ ಗಿರಿಜನರಿಗೂ, ಭೂ ಹೀನ ಕೃಷಿಕರಿಗೂ, ಅಲ್ಪ ಸ್ವಲ್ಪ ಭೂಮಿ ಇರತಕ್ಕ ಸಣ್ಣ ರೈತರಿಗೂ ದರ್ಕಾಸ್ತು ಮೂಲಕ ಕೊಡಬೇಕೆಂದು ನಿಬಂಧನೆ ಮಾಡಲಾಯಿತು. ಅದರಂತೆ ಅನೇಕರಿಗೆ ಸರ್ಕಾರಿ ಭೂಮಿಯನ್ನು ದರ್ಕಾಸ್ತು ಮೂಲಕ ಅರ್ಹರಾದವರಿಗೆ ಮಂಜೂರು ಮಾಡುತ್ತಿದ್ದರು. ಆ ಸಮಯದಲ್ಲಿ ನಡೆದ ಒಂದು ಘಟನೆಯನ್ನು ತಿಳಿಸುವುದು ಸೂಕ್ತವೆನಿಸುತ್ತದೆ. ಕಡಿದಾಳ್ ಮಂಜಪ್ಪನವರ ಮೂರು ಜನ ತಮ್ಮಂದಿರು ಸಂಸಾರ ಸಮೇತ ಅವಿಭಕ್ತ ಕುಟುಂಬದವರಾಗಿದ್ದು, ಕಡಿದಾಳ್‌ನಲ್ಲಿ ತಮಗಿದ್ದ ಬಹಳ ಕಡಿಮೆ ವಿಸ್ತೀರ್ಣದ ಜಮೀನಿನಲ್ಲಿ ವ್ಯವಸಾಯ ಮಾಡಿಕೊಂಡಿದ್ದರು. ಅದರಿಂದ ಅವರಿಗೆ ಸಾಕಷ್ಟು ಆದಾಯವೂ ಬರುತ್ತಿರಲಿಲ್ಲ. ಅವರ ಜಮೀನು ಹತ್ತಿರ ಸ್ವಲ್ಪ ಸರ್ಕಾರಿ ಭೂಮಿ ಇತ್ತು. ಈ ಜಮೀನನ್ನು ದರ್ಕಾಸ್ತು ಮೂಲಕ ಪಡೆದುಕೊಳ್ಳುವ ಅಭಿಪ್ರಾಯದಿಂದ ತಮ್ಮಂದಿರು ಕಂದಾಯ ಸಚಿವರಾಗಿದ್ದ ಅಣ್ಣ ಮಂಜಪ್ಪನವರಲ್ಲಿ ಪ್ರಸ್ತಾಪ ಮಾಡಿದರು. ಅದಕ್ಕೆ ಕಡಿದಾಳ್ ಮಂಜಪ್ಪನವರು ನಾನು ಮಂತ್ರಿಯಾಗಿರುವವರೆಗೂ ನಮ್ಮ ಮನೆಯವರು ಯಾರೂ ಸರ್ಕಾರಿ ಭೂಮಿಗೆ

ದರ್ಕಾಸ್ತು ಅರ್ಜಿ ಹಾಕಕೂಡದೆಂದು ಕಟ್ಟಪ್ಪಣೆ ಮಾಡಿದರು. ಇದು ನಿಷ್ಠಾವಂತ ಸಚಿವರಿಂದ ಮನೆಯವರಿಗಾದ ಅನಾನುಕೂಲ. ಈಚಿನ ದಿನಗಳಲ್ಲಿ ರಾಜಕಾರಣಿಗಳು, ಮಂತ್ರಿಗಳು, ಅಧಿಕಾರಿಗಳು, ಶಾಮೀಲಾಗಿ ನೂರಾರು ಎಕರೆ ಸರ್ಕಾರಿ ಭೂಮಿಯನ್ನು ಬೇನಾಮಿ ಹೆಸರಿನಲ್ಲಿ ಕಬಳಿಸಿ ರಿಯಲ್‌ಎಸ್ಟೇಟ್ ದಂಧೆಯಲ್ಲಿ ತೊಡಗಿಸಿ ಕೋಟ್ಯಾಧೀಶ್ವರರಾಗುತ್ತಿರುವುದನ್ನು ಕೇಳುತ್ತಿದ್ದೇವೆ. ಈ ಮಹನೀಯರಿಗೂ ನಿಸ್ವಾರ್ಥ ಹಾಗೂ ನಿಷ್ಪಕ್ಷಪಾತಿಯಾಗಿದ್ದ ಕಡಿದಾಳರಿಗೂ ಇದ್ದ ಅಜಗಜಾಂತರ ವ್ಯತ್ಯಾಸ ಗಮನಿಸಬಹುದು.

ಇನ್ನೊಂದು ನನ್ನ ಅನುಭವಕ್ಕೆಬಂದ ವಿಷಯವೆಂದರೆ ಕಡಿದಾಳ್ ಮಂಜಪ್ಪನವರ ತಮ್ಮ ಕಡಿದಾಳ್ ತಮ್ಮಯ್ಯಗೌಡರಿಗೂ ನನಗೂ ಬಹಳ ವಿಶ್ವಾಸ. ಅವರ ಮಗ ಕೆ.ಟಿ.ಸುರೇಂದ್ರರಿಗೆ ಮೆಡಿಕಲ್ ಕಾಲೇಜಿನಲ್ಲಿ ಸೀಟು ಕೊಡಿಸಿ, ಡಾಕ್ಟರ್ ಮಾಡಬೇಕೆಂಬ ಆಸೆ ಇರುವುದಾಗಿ ನನ್ನ ಹತ್ತಿರ ಹೇಳಿದರು. ನಾನು ನಿಮ್ಮ ಅಣ್ಣನೇ ಸಚಿವರಾಗಿರುವುದರಿಂದ ನಿಮ್ಮ ಮಗನಿಗೆ ಅವರು ಮೆಡಿಕಲ್ ಸೀಟು ಕೊಡಿಸಬಹುದು. ಬೆಂಗಳೂರಿಗೆ ಹೋಗಿ ಅವರ ಮುಖಾಂತರ ಪ್ರಯತ್ನ ಮಾಡಲು ಹೇಳಿ ಕಳುಹಿಸಿದೆ. ಅವರು ಬೆಂಗಳೂರಿಗೆ ಕೂಡಲೆ ಹೋಗಿ ಅಣ್ಣನ ಹತ್ತಿರ ಮಗನ ಮೆಡಿಕಲ್ ಸೀಟಿನ ಬಗ್ಗೆ ಪ್ರಸ್ತಾಪ ಮಾಡಿದರು. ಅದಕ್ಕೆ ಅವರು ಮೆಡಿಕಲ್ ಸೀಟು ಕೊಡಿಸುವುದು ಕಷ್ಟ. ಅದಕ್ಕೆ ಒಂದು ಸಮಿತಿ ಇದೆ. ಅರ್ಹತೆ ಮೇಲೆ ಕಾನೂನು ಪ್ರಕಾರ ಆಯ್ಕೆ ಮಾಡುತ್ತಾರೆ. ನಾನು ನಮ್ಮ ಮನೆ ಹುಡುಗನೆಂದು ಕಾನೂನಿಗೆ ವಿರೋಧವಾಗಿ ಸ್ವಾಭಿಮಾನ ಬಿಟ್ಟು ಮೆಡಿಕಲ್ ಮೆಡಿಕಲ್ ಸೀಟು ಕೊಡಿ ಎಂದು ಹೇಳಲಾಗುವುದಿಲ್ಲ. ಅವನನ್ನು ಬಿ.ಎಸ್.ಸಿ.ಗೆ ಸೇರಿಸುವಂತೆ ಹೇಳಿ ವಾಪಸ್ಸು ಕಳುಹಿಸಿದರು. ತಮ್ಮಯ್ಯ ಗೌಡರು ನಿರಾಶೆಯಿಂದ ನನ್ನ ಹತ್ತಿರ ಬಂದು ಬೇಜಾರು ಮಾಡಿಕೊಂಡು ನನ್ನ ಮಗನಿಗೆ ಡಾಕ್ಟರ್ ಆಗುವ ಅದೃಷ್ಟವಿದ್ದ ಹಾಗಿಲ್ಲ. ಅದಕ್ಕೆ ಬಿ.ಎಸ್.ಸಿ.ಗೆ ಸೇರಿಸುವುದಾಗಿ ಹೇಳಿದರು. ಅದಕ್ಕೆ ನಾನು ಬೆಂಗಳೂರಿಗೆ ಹೋಗಿ ಮತ್ತೊಂದು ಪ್ರಯತ್ನ ಮಾಡುವ ಭರವಸೆ ಕೊಟ್ಟೆನು. ನಂತರ ನಾನು ಕಡಿದಾಳರನ್ನು ಭೇಟಿಯಾಗಿ ನಾನಾ ರೀತಿಯಲ್ಲಿ ಸತತ ಪ್ರಯತ್ನ ಪಟ್ಟರೂ ಅವರಲ್ಲಿ ರಕ್ತಗತವಾಗಿದ್ದ ನೀತಿ, ನಿಯಮ ಪ್ರಾಮಾಣಿಕತೆಯಿಂದ ಸರ್ಕಾರದ ವತಿಯಿಂದ ಮೆಡಿಕಲ್ ಸೀಟು ಕೊಡಿಸಲಾಗುವುದಿಲ್ಲವೆಂದರು. ಮುಂದೇನು ಮಾಡುವುದೆಂದು ಯೋಚಿಸಿ ಕಾನೂನು ಚೌಕಟ್ಟಿನೊಳಗೆ ಯಾರಿಗೂ ಮುಜುಗರವಾಗದಂತೆ ಖಾಸಗೀ ಮೆಡಿಕಲ್ ಕಾಲೇಜಿನಲ್ಲಾದರೂ ಸೀಟು ಕೊಡಿಸಲು ಒತ್ತಡ ಹೇರಿದ ಮೇಲೆ ಮಣಿಪಾಲ್ ಕಾಲೇಜಿನಲ್ಲಿ ಡೊನೇಷನ್ ಕೊಟ್ಟು ಸೀಟು

ಕೊಡಿಸಿದರು. ಇದರಿಂದ ಅವರ ತಮ್ಮನಿಗೂ ಮತ್ತು ಮಗ ಕೆ.ಟಿ.ಸುರೇಂದ್ರನಿಗೂ ಸಂತೋಷ ಹಾಗೂ ಸಮಾಧಾನವಾಯಿತು. ಡಾ.ಕೆ.ಟಿ.ಸುರೇಂದ್ರ ಇಂಗ್ಲೇಂಡಿನಲ್ಲಿ ಉನ್ನತ ವ್ಯಾಸಂಗ ಮಾಡಿ ಮೂಳೆ ಶಸ್ತ್ರತಜ್ಞರಾಗಿ ಬಹಳ ಕಾಲ ಕಾರ್ಯ ನಿರ್ವಹಿಸಿದರು. ನಂತರ ಬೆಂಗಳೂರಿನ ಸೆಂಟ್ ಮಾರ್ತಾಸ್ ಆಸ್ಪತ್ರೆಯಲ್ಲಿ ಮೂಳೆ ಚಿಕಿತ್ಸಾ ವಿಭಾಗದ ಮುಖ್ಯಸ್ಥರಾಗಿದ್ದರು. ಅನಂತರ ಸ್ವಂತ ಚಿಕಿತ್ಸಾ ಕೇಂದ್ರ ನಡೆಸುತ್ತಿದ್ದರು. ಪ್ರಖ್ಯಾತ ಮೂಳೆ ತಜ್ಞರಾದ ಡಾ.ಕೆ.ಟಿ.ಸುರೇಂದ್ರ ರಾಷ್ಟ್ರಕವಿ ಕುವೆಂಪುರವರ ಅಳಿಯಂದಿರು. ಕಡಿದಾಳರು ಮನೆಯವರೇ ಆಗಲಿ, ಯಾರೇ ಆಗಲಿ ಯಾವ ದಾಕ್ಷಿಣ್ಯಕ್ಕೂ ಒಳಗಾಗದೇ ತಮ್ಮ ತತ್ವ ಸಿದ್ಧಾಂತ ಬಿಟ್ಟವರಲ್ಲ.

ಇನ್ನೊಂದು ಕುತೂಹಲಕಾರಿ ವಿಷಯ ತಿಳಿದರೆ ಕಡಿದಾಳ್ ಮಂಜಪ್ಪನವರ ವ್ಯಕ್ತಿತ್ವ ಎಷ್ಟು ಮಹತ್ವದ್ದೆಂದು ಊಹಿಸಬಹುದು. ಅವರು ಲೋಕೋಪಯೋಗಿ ಸಚಿವರಾಗಿದ್ದಾಗ ಒಮ್ಮೆ ಖಾಯಿಲೆಯಿಂದ ಆಸ್ಪತ್ರೆಯಲ್ಲಿದ್ದು. ಒಂದು ದಿನ ಬೆಳಿಗ್ಗೆ ಅವರ ಯೋಗಕ್ಷೇಮ ವಿಚಾರಿಸಲು ನಾನು ಆಸ್ಪತ್ರೆಗೆ ಹೋಗಿದ್ದೆ. ಅವರು ಮಾತನಾಡುತ್ತಾ ನಿನ್ನೆ ರಾತ್ರಿ ಒಂದು ಆಶ್ಚರ್ಯಕರ ಘಟನೆ ನಡೆಯಿತು. ದೇವರು ಬಹುಶಃ ನನ್ನ ಪರೀಕ್ಷೆಗೆ ಈ ಸನ್ನಿವೇಶ ನಿರ್ಮಿಸಿದನೋ ಏನೋ ಗೊತ್ತಿಲ್ಲ. ರಾತ್ರಿ ಸುಮಾರು ೯ ಘಂಟೆಗೆ ನಾನಿದ್ದ ವಾರ್ಡಿಗೆ ಒಬ್ಬರು ಬಹಳ ದೊಡ್ಡ ಗುತ್ತಿಗೆದಾರರು ನನ್ನ ನೋಡಲು ಬಂದರು. ಅವರು ನನ್ನ ಆರೋಗ್ಯ, ಸುಖ ಕಷ್ಟ, ನನ್ನ ಆರ್ಥಿಕ ಸಮಸ್ಯೆ, ಬಾಡಿಗೆ ಮನೆ ವಾಸ ಇತ್ಯಾದಿ ಎಲ್ಲಾ ವಿಚಾರಿಸಿದರು. ನಂತರ ಅವರು, ತಾವು ಅನ್ಯತಾ ಭಾವಿಸದಿದ್ದರೆ ನನ್ನ ಒಂದು ಸಲಹೆ ಇದೆ. ಏನೆಂದರೆ ತಾವು ಒಪ್ಪುವುದಾದರೆ ಬೆಂಗಳೂರಿನಲ್ಲಿ ನೀವು ಹೇಳಿದ ಕಡೆ ನಾನೇ ಒಂದು ನಿವೇಶನ ಪಡೆದು ನಿಮಗೆ ಒಂದು ಮನೆ ಕಟ್ಟಿಸಿಕೊಡಬೇಕೆಂದಿದ್ದೇನೆ ಎಂದರು. ಆರೋಗ್ಯ ಸರಿಯಿಲ್ಲದೆ, ಆರ್ಥಿಕ ಸಮಸ್ಯೆ ಜೊತೆಗೆ ಬಾಡಿಗೆ ಮನೆಯಲ್ಲಿದ್ದ ನನಗೆ ಅವರ ಸಲಹೆ ಅತ್ಯಾವಶ್ಯಕವಾಗಿ ತೋರಿತು. ಅವರ ಮಾತು ಕೇಳಿ ನಾನು ಬೆವರಿ  ತಲ್ಲಣಗೊಂಡು ಐದು ನಿಮಿಷ ಕಣ್ಣು ಮುಚ್ಚಿ ದೇವರನ್ನು ಪ್ರಾರ್ಥಿಸಿದೆ. ಇದುವರೆಗೂ ಪ್ರಾಮಾಣಿಕತೆಯಿಂದ ನಿಷ್ಕಲ್ಮಶ ಜೀವನ ನಡೆಸಿದ ನನಗೆ ಈಗ ಎಂತಹ ಪರೀಕ್ಷೆಗೆ ಗುರಿ ಮಾಡಿದೆ ಎಂದು ದೇವರನ್ನು ಪ್ರಾರ್ಥಿಸಿದೆ. ನಂತರ ಚೇತರಿಸಿಕೊಂಡು ಗುತ್ತಿಗೆದಾರರಿಗೆ ಅವರ ಸಹಾಯ ನೀಡಲು ಬಂದುದಕ್ಕೆ  ವಂದಿಸಿ, ಇದುವರೆಗೆ ಏನೇ ಕಷ್ಟ ಬಂದರೂ ನಾನು ಯಾರ ಹಂಗಿಗೂ ಒಳಗಾಗಿಲ್ಲ. ಬೇರೆಯವರ ಹಣ ಅಥವಾ ಸಹಾಯಕ್ಕಾಗಿ ನನ್ನ ಆತ್ಮ ಸಾಕ್ಷಿಯನ್ನು ಬಲಿ ಕೊಡಲು ಸಿದ್ಧನಾಗಿಲ್ಲವೆಂದು ಅವರ ಆಕರ್ಷಕ ಸಲಹೆಯನ್ನು

ನಯವಾಗಿ ನಿರಾಕರಿಸಿದೆನೆಂದು ಬಹಳ ಸಂತೋಷ ಹಾಗೂ ಸಂತೃಪ್ತಿಯಿಂದ ಹೇಳಿದರು. ನಾನು ಲೋಕೋಪಯೋಗಿ ಸಚಿವನಾಗಿದ್ದುದರಿಂದ ಆ ದೊಡ್ಡ ಗುತ್ತಿಗೆದಾರರು ಅತ್ಯಾಕರ್ಷಕ ಯೋಜನೆ ಸೂಚಿಸಬೇಕಾದರೆ ಅವರು ನನ್ನಿಂದ ಎಷ್ಟು ಬೃಹತ್ ಕಾಮಗಾರಿ ಮಂಜೂರಾತಿ ಪಡೆಯುವ ಯೋಜನೆ ಹಾಕಿಕೊಂಡಿದ್ದರೊ ಏನೋ ಗೊತ್ತಿಲ್ಲ. ಈಗ ಸಚಿವರು ಗುತ್ತಿಗೆದಾರರೂ, ಇಂಜಿನಿಯರ್‌ಗಳು ಸಾಮೂಹಿಕವಾಗಿ ಕಳಪೆ ಕೆಲಸ ಮಾಡಿ ಸಾರ್ವಜನಿಕರ ಹಣವನ್ನು ಲೂಟಿ ಮಾಡಿ ಕೋಟ್ಯಾಂತರ ರೂಪಾಯಿಗಳನ್ನು ಅಕ್ರಮವಾಗಿ ಸಂಪಾದಿಸಿ ದೇಶ ವಿದೇಶಿ ಬ್ಯಾಂಕುಗಳಲ್ಲಿ ಠೇವಣಿಯಾಗಿಡುವುದರೊಂದಿಗೆ ಇಲ್ಲಿಯೂ ಆಸ್ತಿ, ಮನೆ, ಕೈಗಾರಿಕೆ ಉದ್ಯಮಗಳಲ್ಲಿ ವಿನಿಯೋಗಿಸುವುದು ಸರ್ವೆ ಸಾಮಾನ್ಯ. ಅದೇ ಕಡಿದಾಳರು ಒಂಬತ್ತು ವರ್ಷಗಳ ಕಾಲ ಸಚಿವರಾಗಿ ಫಲವತ್ತಾದ ಕಂದಾಯ, ಲೋಕೋಪಯೋಗಿ ಖಾತೆಗಳನ್ನು ಹೊಂದಿದ್ದರೂ ಅವರು ಪ್ರಾಮಾಣಿಕ ನಿಷ್ಪಕ್ಷವಾದ ಭ್ರಷ್ಟಚಾರ ರಹಿತ ಆಡಳಿತ ನಡೆಸಿದ ಕೀರ್ತಿಗೆ ಪಾತ್ರರಾದರು. ಆದರೆ ಮಂತ್ರಿ ಸ್ಥಾನದಿಂದ ನಿರ್ಗಮಿಸಿದ ನಂತರ ಅವರು ಇಳಿವಯಸ್ಸಿನಲ್ಲಿ ಆರೋಗ್ಯ ಸರಿಯಿಲ್ಲದಿದ್ದರೂ ಜೀವನ ನಿರ್ವಹಣೆಗೆ ವಕೀಲಿ ವೃತ್ತಿಯನ್ನು ನಡೆಸಬೇಕಾಯಿತು. ಹೈಕೋರ್ಟಿನಲ್ಲಿ ಸುಮಾರು ೫,೫೦೦ ಕೇಸುಗಳನ್ನು ನಡೆಸಿದ್ದಾರೆಂದರೆ ಎಲ್ಲರೂ ಆಶ್ಚರ್ಯ ಪಡಬಹುದು. ಜೊತೆಗೆ ಬಿ.ಎಂ.ಎಸ್. ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದರು.

ಕಡಿದಾಳರು ಮನಸ್ಸು ಮಾಡಿದ್ದರೆ ಅವರಿಗೆ ಒದಗಿದ ಅನೇಕ ಸನ್ನಿವೇಶಗಳಲ್ಲಿ ಅಪಾರ ಹಣ ಗಳಿಸಿ ಕೋಟ್ಯಾಧೀಶ್ವರರಾಗಿರಬಹುದಿತ್ತು. ಶ್ರೀ ಜಯಚಾಮರಾಜ ಒಡೆಯರು ಕಡಿಮೆ ಬೆಲೆಗೆ ನೀಡಲು ಬಂದಿದ್ದ ಭೂಮಿಯನ್ನು ನಿರಾಕರಿಸಿದ್ದಾಗಲಿ,ರಾಜ್ಯಪಾಲರ ಹುದ್ದೆಗೆ ಬಂದ ಆಹ್ವಾನವನ್ನು ತಿರಸ್ಕರಿಸಿದ್ದಾಗಲಿ ಅವರ ಘನಗಂಭೀರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಕಡಿದಾಳರು "ಪರೋಪಕಾರಾರ್ಥಮಿದಂ ಶರೀರಂ" ಎಂಬಂತೆ ಹಲವಾರು ಜನರಿಗೆ ನಾನಾ ರೀತಿಯಲ್ಲಿ ಸಹಾಯ ಮಾಡಿದ್ದಾರೆ. ವಕೀಲರಾಗಿದ್ದಾಗ ಬಡವರ ಅನೇಕ ಕೇಸುಗಳನ್ನು ಪಂಚಾಯ್ತಿ ಮೂಲಕ ಬಗೆಹರಿಸಿ ವಾದಿ ಪ್ರತಿವಾದಿಗಳು ಅನಾವಶ್ಯಕ ಖರ್ಚು ಮಾಡುತ್ತಿದ್ದ ಹಣ ಉಳಿಸಿ ಅವರಲ್ಲಿ ವಿಶ್ವಾಸ ಮೂಡಿಸುತ್ತಿದ್ದರು. ಕೆಲವು ಸಾರಿ ಅವರು ಮಾಡಿದ ಉಪಕಾರವನ್ನು ಸ್ಮರಿಸುವ ಕೃತಜ್ಞರಿಗಿಂತ ಉಪಕಾರವನ್ನು ಸ್ಮರಿಸದಿರುವ ಕೃತಘ್ನರೇ ಹೆಚ್ಚು ಎಂದು ನೊಂದು ನುಡಿಯುತ್ತಿದ್ದರು. ಅವರು

ಭೂಸುಧಾರಣಾ ಕಾನೂನು ಜಾರಿಗೆ ತಂದು ಸಹಸ್ರಾರು ಬಡ ಗೇಣಿದಾರ ರೈತರನ್ನು ಸ್ವಂತ ಜಮೀನು ಮಾಲೀಕರನ್ನಾಗಿ ಮಾಡಿ ಹಲವಾರು ದೀನದಲಿತರಿಗೆ ಹರಿಜನ ಗಿರಿಜನರಿಗೆ ಅತಿ ಸಣ್ಣ ರೈತರಿಗೆ ಸರ್ಕಾರಿ ಜಮೀನನ್ನು ದರ್ಕಾಸ್ತು ಮೂಲಕ ಹಂಚಿದರು.

ಒಳ್ಳೆಯ ಕವಿ ಹಾಗೂ ಚಿಂತಕರಾದ ಶ್ರೀ ಕೆ.ಸಿ.ಶಿವಪ್ಪನವರು ಅವರ ಅಮೂಲ್ಯವಾದ ಕಾವ್ಯ ಕೃತಿಯಲ್ಲಿ 'ಮುದ್ದು ರಾಮನ ಮನಸ್ಸು' ಎಂಬ ಕವಿತೆ ಬರೆದು ಅವರನ್ನು ಹೀಗೆ. ಬಣ್ಣಿಸಿದ್ದಾರೆ.

ಬಗ್ಗಿ ತಾ ಕೈಕೊಟ್ಟು ಬಿದ್ದವರನ್ನೆತ್ತಿದರೆ
ಎತ್ತರದ ಮನುಜ ನೀ ನೋವಿನೆಳೆಯಲ್ಲಿ
ನೆರವು ಹರಿಗೋಲಾಗು, ಸಂಕಟದ ನದಿಯಲ್ಲಿ
ಈಜು ಪರಹಿತಕಾಗಿ–ಮುದ್ದು ರಾಮ
ತನಗೆಂದು ಬದುಕಿದರೆ ಆಬಾಳು ಬಾಳಲ್ಲ
ಪರಅಶ್ರು ಒರಸುವುದೇ ನಿಜ ಬಾಳಗುರಿಯೋ
ಪರಪೀಡನೆಯ ಪಾಪ, ಪುಣ್ಯ ಪರ ಉಪಕಾರ
ಮರೆ ನಿನ್ನ, ನೆನೆ ಪರರ–ಮುದ್ದುರಾಮ

# ಕರ್ನಾಟಕದ ಗಾಂಧಿ

–ನ್ಯಾ.ಡಾ. ವಿ.ಎಸ್.ಮಳಿಮಠ

ನನ್ನ ಊರು ಧಾರವಾಡ, ನಾನು ಮುಂಬೈ ಹೈಕೋರ್ಟಿನಲ್ಲಿ ವಕೀಲಿ ಮಾಡುತ್ತಿದ್ದೆ. ನವಂಬರ್ ೧, ೧೯೫೬ ರಂದು ರಾಜ್ಯಗಳ ಪುನರ್ ವಿಂಗಡನೆಯಾಗಿ, ಮುಂಬೈ, ಕರ್ನಾಟಕದ ನಾಲ್ಕು ಜಿಲ್ಲೆಗಳು ವಿಶಾಲ ಮೈಸೂರು ಪ್ರಾಂತಕ್ಕೆ ಸೇರಿದ್ದರಿಂದ ನಾನು ಮೈಸೂರು (ಈಗಿನ ಕರ್ನಾಟಕ) ಹೈಕೋರ್ಟಿನಲ್ಲಿ ವಕೀಲಿ ಮುಂದುವರಿಸಲು ಬೆಂಗಳೂರಿಗೆ ಬಂದೆ. ಆಗ ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದರು. ಅನಂತರ ೧೯೫೮ ರಲ್ಲಿ ಶ್ರೀ ಬಿ.ಡಿ. ಜತ್ತಿಯವರು ಮುಖ್ಯಮಂತ್ರಿಯಾದಾಗ ಶ್ರೀ ಕಡಿದಾಳ ಮಂಜಪ್ಪನವರು ಕಂದಾಯ ಮಂತ್ರಿಗಳಾಗಿ ಅನೇಕ ಜನಪರ ಕಾರ್ಯಗಳನ್ನು ಮಾಡಿದರು. ಅವುಗಳಲ್ಲಿ ಬಹಳ ಮುಖ್ಯವಾದುದು ಭೂ ಸುಧಾರಣೆ ಕಾನೂನು. ಇದರಿಂದ ಶೋಷಿತರಾದ ರೈತರಿಗೆ ಬಹಳ ಉಪಕಾರವಾಯಿತು. ಈ ಕಾನೂನು ಜಾರಿಗೆ ಬಂದ ಮೇಲೆ ಅನೇಕ ಮೊಕದ್ದಮೆಗಳು ಹೈಕೋರ್ಟಿಗೆ ಬರಹತ್ತಿದವು. ಇದರಿಂದ ನೂರಾರು ವಕೀಲರಿಗೆ ಸಾವಿರಾರು ಕೇಸುಗಳು ಬಂದವು. ಹೀಗಾಗಿ ನಾನು ಕಡಿದಾಳ್ ಮಂಜಪ್ಪನವರ ವ್ಯಕ್ತಿತ್ವದ ಬಗ್ಗೆ ಆಕರ್ಷಿತನಾದೆ. ಅವರ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಪ್ರಯತ್ನ ಮಾಡಿದೆ. ಅವರು ಶಿವಮೊಗ್ಗಾ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ 'ಹಾರೋಗೊಳಿಗೆ' ಗ್ರಾಮದವರೆಂದು ತಿಳಿಯಿತು. ಇವರು ಶಿವಮೊಗ್ಗೆಯಲ್ಲಿ ೧೯೩೬ ರಿಂದ ವಕೀಲಿ ಮಾಡುತ್ತಾ ರಾಜಕಾರಣದಲ್ಲಿಯೂ ಭಾಗವಹಿಸಿದರು. ಜೈಲಿನ ಅನುಭವವನ್ನೂ ಪಡೆದರು. ಇವರು ವಿಧಾನ ಸಭೆಯ ಸದಸ್ಯರಾಗಿ ಆಯ್ಕೆಯಾಗಿದ್ದರು. ಹೊಸರಾಜ್ಯ ಅಸ್ತಿತ್ವದಲ್ಲಿ ಬರುವ ಪೂರ್ವದಲ್ಲಿ ಕೆಲವು ತಿಂಗಳು ಮುಖ್ಯಮಂತ್ರಿಯಾಗಿದ್ದನ್ನು ತಿಳಿದು ಅವರ ಬಗ್ಗೆ ಆಸೆ ಮತ್ತು ಗೌರವ ಹೆಚ್ಚಾಗ ತೊಡಗಿತು.

ನನ್ನ ತಂದೆ ಶ್ರೀ ಜಸ್ಟೀಸ್ ಮಳಿಮಠರವರು ಮುಂಬೈ ಪ್ರಾಂತದಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ, ನಂತರ ಮುಂಬೈ ಸಹಕಾರಿ ಟ್ರಿಬ್ಯೂನಲ್‌ದ ಅಧ್ಯಕ್ಷರಾಗಿದ್ದರು. ವಿಶಾಲ ಮೈಸೂರು ರಾಜ್ಯವಾದ ಸಂದರ್ಭದಲ್ಲಿ ನನ್ನ ತಂದೆಯವರನ್ನು ಮುಂಬೈನಿಂದ ಬೆಂಗಳೂರಿಗೆ ವರ್ಗಾಯಿಸಿ ಆಗಿನ ರೆವಿನ್ಯೂ ಬೋರ್ಡಿನ ಅಧ್ಯಕ್ಷರಾಗಿ ನೇಮಿಸಲಾಯಿತು. ಕಡಿದಾಳ ಮಂಜಪ್ಪನವರು ಹಾಗೂ ಅವರ ಪತ್ನಿ ಲಕ್ಷ್ಮೀದೇವಿಯವರು ನನ್ನ ತಂದೆ–

ತಾಯಿಗಳ ಸ್ನೇಹಿತರಾದರು. ನನ್ನ ತಾಯಿ ಶ್ರೀಮತಿ ಶಾಂತಾದೇವಿಯವರು ಸಾಹಿತ್ಯ, ಸಂಗೀತ, ನೃತ್ಯಗಳಲ್ಲಿ ಅಭಿರುಚಿಯಿಟ್ಟುಕೊಂಡಿದ್ದರು. ಶ್ರೀಮತಿ ಲಕ್ಷ್ಮೀದೇವಿಯವರು ಒಳ್ಳೆಯ ಸಾಹಿತಿ ಮತ್ತು ಲೇಖಕಿ, ಹೀಗಾಗಿ ಅವರ ಗೆಳೆತನ ಅನ್ಯೋನ್ಯವಾಗಿ ಬೆಳೆಯಿತು. ನನಗೆ ನೆನಪಿದ್ದ ಹಾಗೆ ೧೯೬೭ರಲ್ಲಿ ಕಡಿದಾಳ ಮಂಜಪ್ಪನವರು ಹೈಕೋರ್ಟಿನಲ್ಲಿ ವಕೀಲಿ ಪ್ರಾರಂಭ ಮಾಡಿದರು. ನಾವಿಬ್ಬರೂ ಹೈಕೋರ್ಟಿನಲ್ಲಿ ವಕೀಲರಾಗಿದ್ದರಿಂದ ಅವರೊಡನೆ ನನ್ನ ಒಡನಾಟ ಬೆಳೆಯಿತು. ಅವರು ನನ್ನ ಮೇಲೆ ಪುತ್ರ ವಾತ್ಸಲ್ಯವನ್ನು ತೋರಿಸುತ್ತಿದ್ದರು. ಅವರು ನನ್ನ ಕಂಡಾಗಲೆಲ್ಲ ನಗುನಗುತ್ತಾ ನನ್ನ ಭುಜದ ಮೇಲೆ ಕೈಯಿಟ್ಟು ನಿನಗೆ ಒಳ್ಳೆಯ ಭವಿಷ್ಯವಿದೆ, ಯಾವ ಕಾರಣಕ್ಕೂ ನಿನ್ನ ಪ್ರಾಮಾಣಿಕ ನಡತೆಯನ್ನು ಬಿಡಬಾರದು ಎಂದು ಹರಸುತ್ತಿದ್ದರು. ನನ್ನನ್ನು ಕಂಡಾಗಲೆಲ್ಲಾ ನನ್ನ ತಂದೆ-ತಾಯಿಯರ ಬಗ್ಗೆ ವಿಚಾರಿಸುತ್ತಿದ್ದರು. ಅವರಿಗೆ ಸಾಹಿತ್ಯ ರಚನೆಯಲ್ಲಿ ವಿಶೇಷ ಆಸಕ್ತಿಯಿತ್ತು. ಅವರು ಬರೆದ ಪುಸ್ತಕಗಳು 'ಪಂಜರವಳ್ಳಿಯ ಪಂಜು', 'ನಾಳೆಯ ನೆಳಲು', 'ಕ್ರಾಂತಿ ಕೂಟ' ಎಂಬ ಕಾದಂಬರಿಗಳ ಪ್ರತಿಗಳನ್ನು ನಮ್ಮ ಮನೆಗೆ ಬಂದು ನನ್ನ ತಾಯಿಗೆ ಕೊಟ್ಟಿದ್ದು ನನಗೆ ನೆನಪಿದೆ.

ಕಡಿದಾಳ ಮಂಜಪ್ಪನವರು ಬಹಳ ದಕ್ಷತೆಯಿಂದ ಕೇಸುಗಳನ್ನು ನಡೆಸುತ್ತಿದ್ದರು. ಅವರು ಕೋರ್ಟಿನಲ್ಲಿ ಎಂಥ ಬಿಸಿಯಾಗುವ ಪ್ರಸಂಗ ಬಂದರೂ ಸಿಟ್ಟಿಗೇಳುತ್ತಿರಲಿಲ್ಲ. ಅವರು ಯಾವಾಗಲೂ ನಗುನಗುತ್ತಾ ತಮ್ಮ ವಾದವನ್ನು ಮಂಡಿಸುತ್ತಿದ್ದರು. ನಗುನಗುತ್ತಲೇ ನ್ಯಾಯಾಧೀಶರ ಪ್ರಶ್ನೆಗಳಿಗೆ ಸಮಾಧಾನದಿಂದ ಉತ್ತರ ಕೊಡುವ ಅವರ ಶೈಲಿಯನ್ನು ಎಲ್ಲ ವಕೀಲರೂ ಕಲಿಯುವಂತಾಹದ್ದು, ಅವರು ಸಾಮಾನ್ಯವಾಗಿ ಕಕ್ಷಿಗಾರನು ಸುಳ್ಳು ವ್ಯಾಜ್ಯವನ್ನು ತಂದಾಗ ಕಕ್ಷಿಗಾರನಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಿ ಹೇಳಿ, ಅವನಿಗೆ ಸುಮ್ಮನೆ ಕೇಸು ಹಾಕಿ ಹಣ ಕಳೆದುಕೊಳ್ಳಬೇಡ ಎಂದು ಉಪದೇಶ ಹೇಳಿ ಕಳಿಸುತ್ತಿದ್ದರು. ಬಡವರ ಕೇಸುಗಳನ್ನು ಪುಕ್ಕಟೆಯಾಗಿ ನಡೆಸುತ್ತಿದ್ದರು. ಅವರು ಕೆಲವೇ ದಿನಗಳಲ್ಲಿ ಒಳ್ಳೆಯ ವಕೀಲರೆಂದು ಹೆಸರುಗಳಿಸಿದರು. ಎಲ್ಲ ನ್ಯಾಯಾಧೀಶರು ಅವರನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಮುಂದೆ ನಾನು ೧೯೭೦ ರಲ್ಲಿ ಹೈಕೋರ್ಟಿನ ನ್ಯಾಯಾಧೀಶನಾದೆ. ಆಗ ಅವರು ನನ್ನನ್ನು ಅಭಿನಂದಿಸಿ ಹೇಳಿದ ಮಾತು "ಬಡವರ ಮೇಲೆ ಕರುಣೆಯಿರಲಿ, ನ್ಯಾಯ ವಿತರಣೆಯನ್ನು ತ್ವರಿತವಾಗಿ ಮಾಡು" ಎಂದು ನನ್ನನ್ನು ಆಶೀರ್ವದಿಸಿದರು. ನಾನು ನ್ಯಾಯಾಧೀಶನಾದ ಮೇಲೆ ಅವರು ಎಷ್ಟೋ ಕೇಸುಗಳನ್ನು ನನ್ನ ಮುಂದೆ ನಡೆಸಿದರು. ಅವರು ಯಾವಾಗಲೂ ಒಳ್ಳೆಯ ತಯಾರಿ ಮಾಡಿಕೊಂಡು ಒಂದು ಸ್ಪಷ್ಟ ರೀತಿಯಲ್ಲಿ ಮನಮುಟ್ಟುವಂತೆ ವಾದ ಮಂಡಿಸುತ್ತಿದ್ದರು. ಬಡವರ ಬಗ್ಗೆ, ದೀನ ದಲಿತರ ಬಗ್ಗೆ

ಶೋಷಿತ ರೈತರ ಬಗ್ಗೆ ಇದ್ದ ಅವರ ಕಳಕಳಿ ಅವರ ವಾದದಲ್ಲಿ ಎದ್ದು ಕಾಣುತ್ತಿತ್ತು ಮತ್ತು ಬಹಳ ಪರಿಣಾಮಕಾರಿಯೂ ಆಗಿರುತ್ತಿತ್ತು.

ಕಡಿದಾಳ ಮಂಜಪ್ಪನಂಥವರನ್ನು ಈಗಿನ ದಿನಮಾನಗಳಲ್ಲಿ ಕಾಣುವುದು ದುರ್ಲಭ. ಸತ್ಯ, ಪ್ರಾಮಾಣಿಕತೆ, ಸ್ವಾಭಿಮಾನ, ದೇಶಾಭಿಮಾನ, ಕಾಯಕ ನಿಷ್ಠೆ ಇವು ಅವರಲ್ಲಿ ಎದ್ದು ಕಾಣುವ ಸದ್ಗುಣಗಳು. ಒಬ್ಬ ರಾಜಕಾರಣಿಯಲ್ಲಿ ಇಂಥ ಸದ್ಗುಣಗಳನ್ನು ಕಂಡಿದ್ದೇವೆ ಎಂದರೆ ಈಗಿನ ಕಾಲದಲ್ಲಿ ನಂಬಲಾಗದ ವಿಷಯ. ಕಡಿದಾಳ ಮಂಜಪ್ಪನವರು ಎಲ್ಲಾ ಸದ್ಗುಣಗಳನ್ನು ಪಡೆದ ಅಪರೂಪದ ವ್ಯಕ್ತಿ. ಅವರ ಜೀವನ ಚರಿತ್ರೆ "ನನಸಾಗದ ಕನಸು" ಓದಿದಾಗ ಕಡಿದಾಳ ಮಂಜಪ್ಪನವರ ತಂದೆ ದುಗ್ಗಣ್ಣ ಗೌಡರು ತಮ್ಮ ಮಗನಲ್ಲಿ ಈ ಸದ್ಗುಣಗಳನ್ನು ಬಿತ್ತಿದ್ದು ಗೋಚರವಾಗುತ್ತದೆ. ತಮ್ಮ ಆತ್ಮ ಚರಿತ್ರೆಯನ್ನು ಕಡಿದಾಳ ಮಂಜಪ್ಪನವರು ಹೇಳಿದ ಮಾತುಗಳು ಹೀಗೆ ಇವೆ. "ನಾನು ಒಂದು ವರ್ಷದ ಹುಡುಗನಿದ್ದಾಗ ನಮ್ಮ ತಂದೆ ರಾತ್ರಿ ಹೊತ್ತು ಲಾಂಟಿನಿನ ಬೆಳಕಿನಲ್ಲಿ ನನ್ನನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡು – ಎಂದೂ ಕದಿಯಬಾರದೆಂದೂ, ಸುಳ್ಳು ಹೇಳಬಾರದೆಂದೂ, ಕದ್ದರೆ ಅಥವಾ ಸುಳ್ಳು ಹೇಳಿದರೆ ದೇವರಿಗೆ ಕೋಪ ಬರುತ್ತದೆಂದೂ, ದೇವರಿಗೆ ಕೋಪ ಬಂದರೆ ಕೇಡು ಉಂಟಾಗುತ್ತದೆಂದೂ ನನಗೆ ಉಪದೇಶ ಮಾಡುತ್ತಿದ್ದರು". ಅವರು ಮಲೆನಾಡಿನ ಜನರ ಬಗ್ಗೆ ಹೇಳಿದ ಮಾತು, "ಮಲೆನಾಡಿನ ಅಂದಿನ ಜನ ಸಾಮಾನ್ಯರು ಅವಿದ್ಯಾವಂತರಾಗಿದ್ದರೂ ಕೂಡ ಬಹಳ ಮುಗ್ಧ ಸ್ವಭಾವದವರಾಗಿ ಸತ್ಯಸಂಧರಾಗಿದ್ದರು. ಅವರಲ್ಲಿ ಕಪಟ, ಕೃತ್ರಿಮಗಳು ಬಹಳ ಅಪರೂಪ". ೧೯೨೭ ರಲ್ಲಿ ಅವರ ಶಾಲೆಗೆ ಗಾಂಧೀಜಿ ಭೇಟಿ ಕೊಟ್ಟರು. ಆಗ ಗಾಂಧೀಜಿಯವರ ಭಾಷಣ ಕೇಳಿ ಅವರ ಪ್ರಭಾವಕ್ಕೆ ಒಳಗಾದರು. ಸತ್ಯ, ಅಹಿಂಸೆ, ಪ್ರಾಮಾಣಿಕತೆ ಅವರ ಜೀವನದ ಉಸಿರಾದವು.

ಮಂಜಪ್ಪನವರು ವಕೀಲಿ ಮಾಡುತ್ತಿದ್ದಾಗ ಒಂದು ಸಾರಿ ಸರ್.ಎಂ. ವಿಶ್ವೇಶ್ವರಯ್ಯನವರು ಅವರನ್ನು ನೋಡಲು ಅವರ ಮನೆಗೆ ಬಂದು ಹೇಳಿದ ಮಾತು ಹೀಗಿದೆ.

"ಬಹಳ ವರ್ಷಗಳ ನಂತರ ಮೈಸೂರು ರಾಜ್ಯದಲ್ಲಿ ಒಬ್ಬ ಪ್ರಾಮಾಣಿಕ ವ್ಯಕ್ತಿಯನ್ನು ಗುರುತಿಸಿದ್ದೇನೆ. ನಿಮ್ಮ ಮನೆಗೆ ಸ್ಫೂರ್ತಿ ಪಡೆಯಲು ಬಂದಿದ್ದೇನೆ" ಎಂದರು. ಅವರ ಗುಣವಂತಿಕೆಗೆ ಇದಕ್ಕಿಂತ ಹೆಚ್ಚಿನ ಮನ್ನಣೆಬೇಕೇ?

ಮಂಜಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಸ್ವಜಾತಿಯುವರನ್ನು

ಅರ್ಹತೆಯಿಲ್ಲವೆಂದು ಹೈಕೋರ್ಟಿನ ನ್ಯಾಯಾಧೀಶರನ್ನಾಗಿ ಮಾಡಲು ನಿರಾಕರಿಸಿದ್ದು ಹಾಗೂ ಮೈಸೂರು ಮಹಾರಾಜರು ಕಡಿಮೆ ಬೆಲೆಗೆ ಒಂದು ಎಕರೆ ಬೆಲೆಬಾಳುವ ಭೂಮಿಯನ್ನು ಬೆಂಗಳೂರಿನಲ್ಲಿ ನೀಡಲು ಬಯಸಿದಾಗ ಅವರ ವಿಶ್ವಾಸವನ್ನು ದುರುಪಯೋಗ ಪಡಿಸಿಕೊಂಡಂತಾಗುತ್ತದೆಂದು ವಿನಯದಿಂದ ತಿರಸ್ಕರಿಸಿದ್ದು, ಅವರ ಮಹಾನ್ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವಂತಿದೆ. ಅವರು ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಜಾತಿ ಸೂಚಕವಾದ 'ಗೌಡ' ಎಂಬ ಪದವನ್ನು ತೆಗೆದು ಹಾಕಿದ್ದನ್ನು ಗಮನಿಸಬೇಕು. ಇಂಥ ಅಪರೂಪದ ಜಾತ್ಯತೀತ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಬಂದದ್ದು ಅಭಿಮಾನದ ಸಂಗತಿ.

ನನಗೆ ಶಿವಮೊಗ್ಗೆಯ ಮಣ್ಣಿನಲ್ಲಿ, ಅಲ್ಲಿಯ ನೀರಿನಲಿ, ಅಲ್ಲಿಯ ಗಾಳಿಯಲ್ಲಿ ಏನೋ ವಿಶೇಷ ಶಕ್ತಿ ಇದೆ ಎಂದು ಅನಿಸುತ್ತದೆ. ಅದು ಕಾರಣವೇ ಶಿವಮೊಗ್ಗ ಜಿಲ್ಲೆ ಹಲವಾರು ಹೆಮ್ಮೆಯ ಪುತ್ರರನ್ನು ಕೊಟ್ಟಿದೆ. ಕುವೆಂಪುರವರು, ಶಾಂತವೇರಿ ಗೋಪಾಲಗೌಡರು, ಹಾ.ಮಾ. ನಾಯಕರು, ಜಿ.ಎಸ್. ಶಿವರುದ್ರಪ್ಪನವರು, ಅನಂತಮೂರ್ತಿ, ಹೀಗೆ ಅನೇಕ ಕರ್ನಾಟಕ ಹೆಮ್ಮೆಯ ಪುತ್ರರನ್ನು ಶಿವಮೊಗ್ಗ ಜಿಲ್ಲೆ ಕೊಟ್ಟಿದೆ. ಈ ಸೆಲೆ ಬತ್ತದಿರಲೆಂದು ಹಾರೈಸುತ್ತೇನೆ.

ಕಡಿದಾಳ ಮಂಜಪ್ಪನವರ ಶತಮಾನೋತ್ಸವಕ್ಕೆ ನನ್ನ ಅಭಿಪ್ರಾಯದ ಉಸಿರನ್ನು ಸೇರಿಸುವ ಅವಕಾಶವನ್ನು ಧನ್ಯತೆಯಿಂದ ನೆನೆಯುತ್ತೇನೆ.

# ಮೌಲ್ಯಾಧಾರಿತ ಆಡಳಿತ

–ಡಿ.ಬಿ.ಚಂದ್ರೇಗೌಡ

ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ನಾಣ್ಣುಡಿಗೆ ಹೇಳಿ ಮಾಡಿಸಿದಂತಹ ವ್ಯಕ್ತಿ ಕಡಿದಾಳ್ ಮಂಜಪ್ಪನವರು. ಸಣಕಲಾದ ದೇಹ, ದಪ್ಪ ತಲೆ, ನಕ್ಕರೆ ಎರಡೂ ಕಿವಿಗಳಿಗೂ ತಗಲುತ್ತಿದ್ದ ಅಗಲವಾದ ಬಾಯಿ, ಉದ್ದವಾದ ಮೂಗು, ಮಿಂಚುವ ಕಣ್ಣುಗಳು, ಕಂಡೊಡನೆ ಎತ್ತಿ ಕೈಮುಗಿಯಬೇಕೆಂದೆನಿಸುವ ವ್ಯಕ್ತಿ. ಸದಾ ಹಸನ್ಮುಖಿ. ಕೋಪಿಸಿಕೊಂಡ ಒಂದು ಸಂದರ್ಭವೂ ನನ್ನ ಗಮನಕ್ಕೆ ಬಂದುದಿಲ್ಲ. ೧೯೫೦ ದಶಕದಲ್ಲಿ ಮೊದಲು ನೋಡಿದ ನೆನಪು. ಕಂದಾಯ ಮಂತ್ರಿಗಳಾಗಿ ನಮ್ಮ ತಾಲ್ಲೂಕಿಗೆ ಬಂದಾಗ ರಾಷ್ಟ್ರಧ್ವಜ ಹಿಡಿದು ಸ್ವಾಗತಿಸಿದ ನೆನಪು. ಆಗಲೆ ಅವರ ಚಿಂತನೆಯ ವಾಸನೆ ಮೂಗುಗಳಿಗೆ ಬಡಿದದ್ದು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿದ್ದು ಭೂ ಮಾಲೀಕರಿಗಷ್ಟೆ ಅಲ್ಲ, ಬಡ ಗೇಣಿದಾರರಿಗೂ ಪಾಲು ಸಿಗಬೇಕು, ಗೇಣಿದಾರರನ್ನು ಮಾಲೀಕರು ಪ್ರೀತಿಯಿಂದ ನೋಡಬೇಕು ಎಂದೆಲ್ಲ ಹೇಳಿದರು. ನಾನು ಮಧ್ಯಮ ವರ್ಗದ ರೈತ ಕುಟುಂಬದಿಂದ ಬಂದವನಾದುದರಿಂದಲೂ, ನನ್ನ ತಂದೆಯವರು ಊರ ಪಟೇಲರಾಗಿದ್ದುದರಿಂದಲೂ, ಮನೆಯಲ್ಲಿ ಗ್ರಾಮಗಳಲ್ಲಿ ಮಂತ್ರಿಗಳ ಭಾಷಣ ಚರ್ಚೆ ಆಗುತ್ತಿತ್ತು. ಮುಂದೊಂದು ದಿನ ಗೇಣಿ ಶಾಸನ ಜಾರಿ ಮಾಡಲು ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರೆಂದು ಆ ಮೇಲೆ ತಿಳಿಯಿತು.

೧೯೬೯ ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಇಬ್ಭಾಗವಾಗಿ ಇಂಡಿಕೇಟ್ ಮತ್ತು ಸಿಂಡಿಕೇಟ್‌ಗಳಾಗಿ ಎರಡು ಭಾಗವಾದಾಗ ನಾನು ವಕೀಲಿ ವೃತ್ತಿಯನ್ನು ಪ್ರಾರಂಭಿಸಿದ ದಿನಗಳು. ಆಗ ಇಂದಿರಾ ಕಾಂಗ್ರೆಸ್‌ನೊಂದಿಗೆ ಗುರುತಿಸಿಕೊಂಡೆ. ಚಿಕ್ಕಮಗಳೂರು ಜಿಲ್ಲೆ ಕಾಂಗ್ರೆಸ್ ಕಾರ್ಯದರ್ಶಿಯಾಗಿ ದಿ. ಶ್ರೀಮಾನ್ ಕೆ.ಎನ್. ವೀರಪ್ಪಗೌಡರ ಅಧ್ಯಕ್ಷತೆಯಲ್ಲಿ ರಾಜಕೀಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡೆ. ೧೯೭೦ ಡಿಸೆಂಬರ್ ಕೊನೆಯವಾರದಲ್ಲಿ ಸಂಸತ್ ವಿಸರ್ಜನೆಯಾಗಿ ಹೊಸ ಚುನಾವಣೆಗೆ ಸಿದ್ಧ ಮಾಡಿಕೊಳ್ಳುತ್ತಿದ್ದ ಸಮಯ, ಚಿಕ್ಕಮಗಳೂರು ಲೋಕ ಸಭೆಗೆ ಅಭ್ಯರ್ಥಿ ಯಾರಾಗಬೇಕೆಂದು ಆಲೋಚನೆ ಮಾಡುತ್ತಿದ್ದಾಗ ನಮಗೆ ಮೊದಲ ನೆನಪಿಗೆ ಬಂದ ಹೆಸರು ಕಡಿದಾಳರದು. ಸರಿ, ಶ್ರೀ ಕೆ.ಎನ್. ವೀರಪ್ಪ ಗೌಡರ ನೇತೃತ್ವದಲ್ಲಿ ಒಂದು ನಿಯೋಗ ಕಡಿದಾಳ್ ಮಂಜಪ್ಪನವರನ್ನು ಕಾಣಲು ಹೋದಾಗಲೆ ಅವರ ಸೂಕ್ಷ್ಮತೆ, ಪ್ರಜಾತಂತ್ರ ವ್ಯವಸ್ಥೆಯಲ್ಲಿ ಅವರಿಟ್ಟಿದ್ದ ಅದಮ್ಯ ವಿಶ್ವಾಸ, ಜೊತೆಗೆ

ಅವರ ಕೆಚ್ಚಿನ ಪರಿಚಯವಾಯಿತು. ನಾನು ಇಂದಿರಾ ಕಾಂಗ್ರೆಸ್ ಅಭ್ಯರ್ಥಿಯೆ? ಅದು ಸಾಧ್ಯವಿಲ್ಲ ಎಂದು ಖಡಾಖಂಡಿತವಾಗಿ ನಿರಾಕರಿಸಿದರು. ಕೆಲ ಹೊತ್ತಿನ ಮೇಲೆ ಸಮಾಧಾನ ಚಿತ್ತರಾಗಿ ನೀನೇ ನಿಂತುಕೊಳ್ಳಪ್ಪ, ನಾನು ಸಹಾಯ ಮಾಡುತ್ತೇನೆ ಎಂದು ಹರಸಿದರು. ಅದರಂತೆಯೇ ನನ್ನ ಗೆಲುವಿನ ರುವಾರಿಗಳಾದರು. ನಾನು ಲೋಕಸಭೆಗೆ ಆಯ್ಕೆಯಾದಾಗ ಅತ್ಯಂತ ಸಂತೋಷದಿಂದ ಮನದುಂಬಿ ಆಶೀರ್ವದಿಸಿದರು. ಆಗಾಗ ಮಾರ್ಗದರ್ಶನ ಮಾಡುತ್ತಲೂ ಇದ್ದರು. ಕರ್ನಾಟಕದ ಮುಖ್ಯಮಂತ್ರಿಯಾಗಿ ಕೆಲವೇ ಕಾಲವಿದ್ದರೂ ರಾಜ್ಯದ ಮುಖ್ಯಮಂತ್ರಿ ಜನಸೇವಕನೆಂದೆ ನಿರೂಪಿಸಿದರು. ಈಗ ಅದು ದಿನೆ ದಿನೆ ಅಸಹ್ಯ ಹುಟ್ಟಿಸುವಂತಹ ಜಾಗವಾಗಿ ಪರಿವರ್ತಿತವಾಗಿದೆ.

ಈಗತಾನೆ ೨೦೦೮ ಮೇ ತಿಂಗಳ ವಿಧಾನಸಭಾ ಚುನಾವಣೆ ಮುಗಿದಿದೆ. ಫಲಿತಾಂಶದಿಂದ ದುಃಖವೂ ಆಗಿಲ್ಲ ಬೇಸರವೂ ಆಗಿಲ್ಲ. ಕಾರಣ ವ್ಯವಸ್ಥೆಯೇ ನೀತಿಹೀನ ವ್ಯವಸ್ಥೆ. ಮಂಜಪ್ಪನವರು ಬದುಕಿದ್ದರೆ, ಬದುಕಿ ಸಾಯುತ್ತಿದ್ದರು. ಅವರ ಸರಳ ಜೀವನ, ಮೌಲ್ಯಧಾರಿತ ಆಳ್ವಿಕೆ, ಪ್ರಾಮಾಣಿಕ ಬದುಕು, ಮುಖ್ಯಮಂತ್ರಿಯಾಗಿದ್ದ ಮಂಜಪ್ಪನವರು ಬದುಕಿಗಾಗಿ ಕರಿಕೋಟು ಹಾಕಿ, ಉಚ್ಛನ್ಯಾಯಾಲಯದಲ್ಲಿ ವಕೀಲರಾಗಿ ಕೆಲಸಮಾಡಿ ಆದರ್ಶ ಬದುಕಿನ ಏಕೈಕ ಉದಾಹರಣೆಯಾಗಿ ಉಳಿದಿದ್ದಾರೆ. ಅವರ ಸ್ವಗ್ರಾಮ ಕಡಿದಾಳಿನಲ್ಲಿ ಒಮ್ಮೆ ಬಹಳ ಬಿಡುವಾಗಿ ಸಿಕ್ಕಿದರು. ಆಗ ತನ್ನ ಬದುಕಿನ ಬವಣೆಯ ಪುಸ್ತಕವನ್ನು ನಿಧಾನವಾಗಿ ಬಿಚ್ಚಿದರು. ನಾನೂ ಒಬ್ಬ ಗೇಣಿದಾರನ ಮಗ. ಅವರ ಕಷ್ಟ ಕಾರ್ಪಣ್ಯಗಳನ್ನು ಬಲ್ಲ ಜನತಂತ್ರ ವ್ಯವಸ್ಥೆಯಲ್ಲಿ ಅವಕಾಶ ಸಿಕ್ಕಾಗ ಅವರ ಕಷ್ಟಗಳನ್ನು ತಿಳಿದವನಾಗಿ ಅವನ್ನು ಪರಿಹರಿಸಲು ಭಗವಂತ ಕೊಟ್ಟ ಅವಕಾಶವೆಂದೇ ಭಾವಿಸಿ ಪರೀಕ್ಷಾರ್ಥವಾಗಿ ಪ್ರಯೋಗಿಸಿದ್ದೇನೆ ಅಂದರು. ಮುಂದೆ ಗೇಣಿದಾರರ ಬದುಕಿನ ದಿಕ್ಕನೇ ಬದಲಾಯಿಸುವ ತಿದ್ದುಪಡಿ ತರಬೇಕೆಂದು ಅಪೇಕ್ಷಿಸಿದ್ದರು. ಅಂತೆಯೇ ಉಳುವವನೆ ಮುಂದೆ ಹೊಲದೊಡೆಯನಾದ.

ಆ ಶಾಸನದಲ್ಲಿದ್ದ ಗೇಣಿದಾರನ ಸ್ವಾಧೀನ ತಪ್ಪಿಸುವ ಅವಕಾಶವನ್ನು ಕೃಷಿ ಭೂಮಿಯ ಮೇಲಿದ್ದ ಮಿತಿ, ನ್ಯಾಯಾಲಯಗಳಲ್ಲಿ ತೀರ್ಮಾನವಾಗಲು ವಿಳಂಬ ಮತ್ತು ಖೊಟ್ಟಿ ಗೇಣಿದಾರರನ್ನು ಗುರುತಿಸಲು ಇರುವ ತೊಡಕನ್ನು ಮುಂದೆ ಡಿ.ದೇವರಾಜ ಅರಸರ ಕಾಲದಲ್ಲಿ ತಂದ ಭೂ ಶಾಸನ ಮಸೂದೆಯಲ್ಲಿ ಅಳವಡಿಸಿಕೊಳ್ಳಲು ಸಹಕಾರಿಯಾಯಿತು. ಕಡಿದಾಳ್ ಮಂಜಪ್ಪನವರು ಒಬ್ಬ ಆದರ್ಶ ರಾಜಕಾರಣಿ, ನಿಜವಾದ ಗಾಂಧಿವಾದಿ, ಪ್ರಾಮಾಣಿಕ ಮತ್ತು ನಿಷ್ಠುರ ವ್ಯಕ್ತಿ, ಬದುಕನ್ನು ಬಂದ ಹಾಗೆ ಸ್ವೀಕರಿಸಿದವರು.

# ಕೆಲವು ನೆನಪುಗಳು

–ಎಂ.ಎಸ್.ಕೃಷ್ಣಮೂರ್ತಿ

ನಾನು ತೀರ್ಥಹಳ್ಳಿಯ ಮೂಲನಿವಾಸಿ. ಕಡಿದಾಳ್ ಮಂಜಪ್ಪನವರನ್ನು ೧೯೫೧ನೆ ಇಸವಿಯಿಂದ ಬಲ್ಲೆ. ಅವರು ಮಲೆನಾಡಿನ ಜಮೀನು ಪದ್ಧತಿ, ಇನಾಂ ಜಮೀನುಗಳ ಪದ್ಧತಿ ರದ್ದಿಯಾತಿ, ವಂಶಪಾರಂಪರ್ಯವಾಗಿ ಬಂದ ಗ್ರಾಮಾಧಿಕಾರಿಗಳ ಪದ್ಧತಿ ರದ್ದಿಯಾತಿ ಇವುಗಳ ರೂವಾರಿ ಎಂಬುದು ಅಕ್ಷರಶಃ ಸತ್ಯಸಂಗತಿ. ಕಡಿದಾಳರು ಬಡಗೇಣಿ ಕುಟುಂಬದಲ್ಲಿ ಜನಿಸಿ ಶ್ರಮಪಟ್ಟು ಕಾನೂನು ಪದವಿಯನ್ನು ಪಡೆದು ಜನತೆಯ ಕಲ್ಯಾಣಕ್ಕೆ ಅವಿರತ ಹೋರಾಟ ನಡೆಸಿದರು. ಅವರು ಸಚಿವರಾಗಿದ್ದಾಗ ಶೋಷಿತ ಗೇಣಿದಾರರ ಜೀವನ ಸುಧಾರಣೆಗಾಗಿ ಅವಿರತ ಶ್ರಮಿಸಿದರು. ಮೊದಲನೆಯದಾಗಿ ಜಮೀನುದಾರರು ಗೇಣಿದಾರರಿಂದ ಪಡೆಯುತ್ತಿದ್ದ ಗೇಣಿ ಪರಿಮಾಣದಲ್ಲಿ ಸುಧಾರಣೆ ದವಸ–ಉತ್ಪನ್ನಗಳ ತೂಕ, ಅಳತೆಯಲ್ಲಿ ಸುಧಾರಣೆ ಮಾಡಿ ಗೇಣಿ ಸ್ಥಿರತೆಯನ್ನು ಒಕ್ಕಲು ಮಸೂದೆಯಿಂದ ದೊರಕಿಸಿಕೊಟ್ಟರು. ನಂತರ ಗೇಣಿ ಜಮೀನುಗಳ ಒಡೆತನವನ್ನು ದೊರಕಿಸಿಕೊಡುವುದರಲ್ಲಿ ಕ್ರಾಂತಿಕಾರಿ ಶಾಸನವನ್ನೇ ರೂಪಿಸಿದರು. ಈ ಶಾಸನವನ್ನು ಜಾರಿಗೆ ತರುವ ಸಂದರ್ಭ ಒಂದು ಸೆಲೆಕ್ಟ್ ಕಮಿಟಿಯನ್ನು ಶಾಸನಬದ್ಧವಾಗಿ ನೇಮಕಮಾಡಿ, ನಮ್ಮ ತಾಲ್ಲೂಕಿನಿಂದ ಜಮೀನುದಾರ ವರ್ಗದವರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶಮಾಡಿಕೊಟ್ಟರು. ನಾನು ತೀರ್ಥಹಳ್ಳಿ ತಾಲ್ಲೂಕಿನಿಂದ ಜಮೀನುದಾರರ ಪರವಾಗಿ ಸೆಲೆಕ್ಟ್ ಕಮಿಟಿ ಮುಂದೆ ಹಾಜರಾಗಿ ಜಮೀನುದಾರರ ಗೇಣಿದಾರರ ಸಮಸ್ಯೆಗಳನ್ನು ಕೂಲಂಕಶವಾಗಿ ತಿಳಿಯ ಹೇಳಲು ಅವಕಾಶ ಮಾಡಿಕೊಟ್ಟರು. ಈ ವಿಚಾರವಾಗಿ ಎಂದೂ ವರ್ಗದ್ವೇಷ, ಜಾತಿದ್ವೇಷವನ್ನು ತೋರ್ಪಡಿಸಲಿಲ್ಲ. ಅನುವಂಶಿಕ ಗ್ರಾಮಾಧಿಕಾರಿಗಳ ಹುದ್ದೆಯನ್ನು ರದ್ದುಪಡಿಸಿದ ನಂತರ ನೇಮಕವಾದ ಗ್ರಾಮಲೆಖ್ಖಾಧಿಕಾರಿಗಳ ವರ್ತನೆಯಿಂದ ಸಮಾಜಕ್ಕೆ ಒಳ್ಳೆಯದಾಗುವ ಬದಲು ಇನ್ನೂ ಹೆಚ್ಚಿನ ಶೋಷಣೆ, ಹಿಂಸೆಯಾಗಿದೆ ಎಂದು ವಿಷಾದವನ್ನು ವ್ಯಕ್ತಪಡಿಸಿದ್ದರು. ಸರಕಾರದಿಂದ ಗ್ರಾಮಾಧಿಕಾರಿಗಳಿಗೆ ಪಾವ್ತಿಸಲಾಗಿದ್ದ ಹೆಚ್ಚುವರಿ ವೇತನವನ್ನು ವಸೂಲ್ಮಾಡಬೇಕೆಂಬ ಸರ್ಕಾರದ ಆದೇಶವಾಗಿತ್ತು. ಆ ವಿಚಾರವಾಗಿ ನಾನು ಗ್ರಾಮಾಧಿಕಾರಿಗಳ ಸಂಘದ ಅಧ್ಯಕ್ಷನಾಗಿ ಮನವಿ ಸಲ್ಲಿಸಿದ್ದನ್ನು ಕರುಣಾರ್ದ ದೃಷ್ಟಿಯಿಂದ ಗಮನಿಸಿ, ತಕ್ಷಣ ಈ ಆದೇಶವನ್ನು

ಹಿಂದಕ್ಕೆ ಪಡೆಯಲು ಆದೇಶಿಸಿ, ಬಡ ಗ್ರಾಮಾಧಿಕಾರಿಗಳಿಗೆ ಪರಿಹಾರವನ್ನು ದೊರಕಿಸಿಕೊಟ್ಟಿದ್ದರು. ಕೆ.ಎಫ್.ಪಾಟೀಲರು ಅರಣ್ಯ ಇಲಾಖಾ ಸಚಿವರಾಗಿದ್ದಾಗ ಮಲೆನಾಡಿನ ರೈತರಿಗೆ ಮನೆ ಕಟ್ಟಿಸಿಕೊಳ್ಳಲು ನಾಟಾ ಪಡೆಯುವ ಸೌಲಭ್ಯವಿದ್ದುದನ್ನು ರದ್ದುಮಾಡಿದ್ದರು. ತೀರ್ಥಹಳ್ಳಿ ತಾಲ್ಲೂಕು ಪರವಾಗಿ ಈ ಸಂಬಂಧ ಮನವಿ ಸಲ್ಲಿಸಿಲಾಗಿತ್ತು. ವಿಷಯ ಕಡಿದಾಳರ ಗಮನಕ್ಕೆ ಬಂದಿತು. ತಕ್ಷಣ ಕೆ.ಎಫ್.ಪಾಟೀಲರನ್ನು ಕಾರ್ಯಾಲಯದಲ್ಲಿಯೇ ಕುಳಿತು ಸಂಪರ್ಕಿಸಿ ಮಲೆನಾಡಿನ ರೈತರಿಗೆ ಇರುವ ಸೌಲಭ್ಯವನ್ನು ರದ್ದುಪಡಿಸುವುದು ನ್ಯಾಯವಲ್ಲ; ಈ ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಮನವೊಲಿಸಿದ್ದರು. ಪರಿಣಾಮ ಮನವಿ ಸಲ್ಲಿಸಿದ ಕೆಲವು ಘಂಟೆಯೊಳಗೆ ಈ ಆದೇಶವನ್ನು ಹಿಂದಕ್ಕೆ ಪಡೆಯಲು ಕಾರಣರಾಗಿ ಮಲೆನಾಡಿನ ರೈತರ ಹಿತವನ್ನು ಕಾಪಾಡಿದರು. ಎಲ್ಲಾ ಸಂದರ್ಭಗಳಲ್ಲಿಯೂ ಶೋಷಣೆಗೆ ಒಳಗಾದವರ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಸೂಕ್ತ ಪರಿಹಾರ ನೀಡುವಲ್ಲಿ ಎಂದೂ ಹಿಂದೆ ಬೀಳಲಿಲ್ಲ. ಭೂಸುಧಾರಣೆ ಕಾನೂನು ಜಾರಿಗೆ ಬಂದ ನಂತರದಲ್ಲಿ ಗೇಣಿ ಜಮೀನನ್ನು ಮಾಲಿಕತ್ವ ಪಡೆದು ಸುಖಜೀವನ ನಡೆಸಲು ಗೇಣಿದಾರರ ವರ್ಗ ಪ್ರಯತ್ನಿಸದೆ, ತಮ್ಮ ಗೇಣಿ ಹಕ್ಕಿನ ಜಮೀನನ್ನು ಉಳ್ಳವರಿಗೆ ಪ್ರತಿಫಲ ಪಡೆದು ವರ್ಗಾಯಿಸಿದ ಸಂಗತಿ ತಿಳಿದು ಭೂಸುಧಾರಣೆ ಕಾನೂನಿನ ಫಲ ಗೇಣಿದಾರರಿಗೆ ಲಭಿಸಲಿಲ್ಲ ಎಂದು ವಿಷಾದ ವ್ಯಕ್ತಪಡಿಸಿದ್ದರು.

# ಕಡಿದಾಳರು : ಒಂದು ನೋಟ

–ಎ.ಪಿ.ಕೃಷ್ಣಪ್ಪ

೨೦ ನೇ ಶತಮಾನದ ಅದಿ ಭಾಗ ಮಲೆನಾಡು ಪ್ರದೇಶದಲ್ಲಿದ್ದ ನಿರಕ್ಷರತೆ, ಬಡತನ, ಅಜ್ಞಾನ ಮತ್ತು ಸಾಮಾಜಿಕ ಕಟ್ಟು ಕಟ್ಟಳೆಗಳಿಂದ ಜನರ ಜೀವನ ದುಸ್ತರ ಹಾಗೂ ದಯನೀಯವಾಗಿದ್ದ ಕಾಲ. ಮನುಷ್ಯರ ಜೀವನ ಕ್ರಮಕ್ಕೂ ಪ್ರಾಣಿಗಳ ಜೀವನ ಕ್ರಮಕ್ಕೂ ಹೆಚ್ಚಿನ ಅಂತರವಿರದಿದ್ದ ಸಮಯ. ಅವರ ಜೀವನಾಧಾರವೇ ಕೃಷಿಯಾಗಿದ್ದಿತು. ಕೃಷಿಯಾಧಾರಿತ ಮತ್ತು ಕೃಷಿಗೆ ಸಂಬಂಧಿಸಿದ ಬಡಗಿ, ಕಮ್ಮಾರ, ಇತ್ಯಾದಿ ಉದ್ಯೋಗಗಳಿಂದ ಬರುವ ಆದಾಯ ಬಿಟ್ಟರೆ ಹೆಚ್ಚಿನ ಜನರಿಗೆ ಬೇರೆ ಜೀವನ ಮಾರ್ಗ ಇರದಂತ ಕಾಲ. ಗಾವುದಕೊಬ್ಬ ಅಥವಾ ಇಬ್ಬರು ಅನ್ನದಾತರ ಕಾರುಬಾರು.

ಇಂತಹ ಹಿನ್ನೆಲೆವುಳ್ಳ ತೀರ್ಥಹಳ್ಳಿ ತಾಲ್ಲೂಕು ಮುತ್ತೂರು ಹೋಬಳಿ ಬಾವಿಕೈ (ದೇವಂಗಿಯ ಹತ್ತಿರ) ದುಗ್ಗಣ್ಣ ಗೌಡರ ಹಿರೇಮಗನಾಗಿ ಹುಟ್ಟಿದವರೇ ಮಂಜಪ್ಪ ಅಂದಿನ ಪದ್ಧತಿಗಳಂತೆ ಒಕ್ಕಲುತನ ಮಾಡುವ ಕುಟುಂಬದವರಂತೆ, ದುಗ್ಗಣ್ಣ ಗೌಡರ ಕುಟುಂಬವೂ ಒಂದು. ಇವರು ಸಹ ತಮ್ಮ ಕುಟುಂಬದ ಜೀವನೋಪಾಯಕ್ಕೆ ಅವರ ಊರಿನ ಹತ್ತಿರದಲ್ಲೇ ಇದ್ದ ಕಡಿದಾಳ್ ಎಂಬ ಊರಿಗೆ ವಲಸೆ ಹೋಗಬೇಕಾಗಿ ಬಂದಿತ್ತು. ಕಡಿದಾಳ್ ಊರಿನಲ್ಲಿ ಅರೇಹಳ್ಳಿ ಶೇಷಮ್ಮ ಹೆಗ್ಗಡ್ತಿಯವರು ಗಂಡನನ್ನ ಕಳೆದುಕೊಂಡು ಜಮೀನನ್ನು ಸಾಗುವಳಿ ಮಾಡಲು ಸಾಧ್ಯವಾಗದೆ ಬೀಳು ಬಿಟ್ಟಿದ್ದರು. ಈ ಬೀಳು ಜಮೀನನ್ನು ಸಾಗುವಳಿ ಮಾಡುವಂತೆ ಒಕ್ಕಲನ್ನು ಅವರು ಹುಡುಕುತ್ತಿದ್ದರು. ಆಗ ಅವರಿಗೆ ಸಿಕ್ಕಿದ ಒಕ್ಕಲೇ ಮಂಜಪ್ಪನವರ ತಂದೆ ದುಗ್ಗಣ್ಣ ಗೌಡರ ಕುಟುಂಬ. ಶೇಷಮ್ಮ ಹೆಗ್ಗಡ್ತಿಯವರ ಜಮೀನು ಸಾಗುವಳಿ ಮಾಡಲು ಸಿಕ್ಕಿದ್ದ ಈ ಕುಟುಂಬಕ್ಕೆ ಊರ ಪದ್ಧತಿಯಂತೆ ಇನ್ನೊಂದು ಕೆಲಸವೂ ಇತ್ತು. ಆದೆಂದರೆ ಈ ಬೀಳು ಜಮೀನಿನ ಅಕ್ಕ–ಪಕ್ಕದ ಜಮೀನುದಾರರ ಇಚ್ಛೆ ಮತ್ತು ಆದೇಶಗಳ ಅಡಿಯಲ್ಲೇ ಬದುಕಬೇಕಾದ ಅನಿವಾರ್ಯತೆ. ತಪ್ಪಿದಲ್ಲಿ ಈ ಜಮೀನಿನ ಒಕ್ಕಲಾಗಿ ಸಾಗುವಳಿ ಮಾಡುವುದು ದುಸ್ತರವಾದ ಕಾರ್ಯ ಮಾತ್ರವಲ್ಲದೆ, ಆ ಸ್ಥಳದಲ್ಲಿ ಇರಗೊಡವುದು ಕೂಡ ಅಸಂಭವವಾದ ಸನ್ನಿವೇಶ.

ಈ ಪದ್ಧತಿಗಳಿಗೆ ಒಪ್ಪಿಕೊಂಡು ಬಾವಿಕೈ ದುಗ್ಗಣ್ಣಗೌಡರು ಕಡಿದಾಳ್ಗೆ ಬಂದು ಕಡಿದಾಳ್ ದುಗ್ಗಣ್ಣ ಗೌಡರಾಗಿ ಬೀಳು ಜಮೀನಿನ ಗೇಣಿದಾರರಾದರು. ಅಲ್ಲದೆ ಒಕ್ಕಲುತನ ನಡೆಸಲು ಎಲ್ಲಾ ಗೇಣಿದಾರರ ಕುಟುಂಬದಂತೆ ಇವರ ಕುಟುಂಬದ ಜೀವನವೂ ಸಹ ಅವರ್ಣನೀಯವಾದ ನರಕಯಾತನೆಯನ್ನು ಅನುಭವಿಸಬೇಕಾದದ್ದು ದುರಂತವಾದರೂ ಸತ್ಯ. ಆದರೆ ಇದೇ ಕುಟುಂಬದ ಮಂಜಪ್ಪ ಭವಿಷ್ಯದಲ್ಲಿ "ಕಡಿದಾಳ್ ಮಂಜಪ್ಪ" ರಾಗಿ ಹೊರಹೊಮ್ಮುವಂತೆ ಮಾಡಿದ ಶ್ರೇಯಸ್ಸು ಈ ಕಡಿದಾಳ್ ಮತ್ತು ಅದರ ಸುತ್ತ ಮುತ್ತಲಿನ ಕುಟುಂಬಗಳಿಗೆ ಸೇರಿದ್ದು ಈಗ ಇತಿಹಾಸ.

ಈ ಹಿನ್ನೆಲೆಯಲ್ಲಿ ಮಂಜಪ್ಪನವರು ದಿ॥ ತುಡ್ಕಿ ರಾಮಣ್ಣ ಗೌಡರಂತ ಪುಣ್ಯಾತ್ಮರ ಸಹಕಾರ ಪಡೆದು ಹಾಗೂ ಹೀಗೂ ತನ್ನ ವಿದ್ಯಾಭ್ಯಾಸ ಮುಂದುವರೆಸಿ, ನಂತರ ವಕೀಲರಾಗಿ, ಶಿವಮೊಗ್ಗ ಸೆಷನ್ಸ್ ವಿಭಾಗಕ್ಕೆ ಸೇರಿದ್ದ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳ ನ್ಯಾಯಾಲಯಗಳಲ್ಲಿ ಶಿವಮೊಗ್ಗ ಜಿಲ್ಲಾ ನ್ಯಾಯಾವಾದಿಗಳ ಸಂಘದ ಸದಸ್ಯರಾಗಿ ತನ್ನ ವೃತ್ತಿಯನ್ನು ಪ್ರಾರಂಭಿಸಿದರು. ಬಡಗೇಣಿದಾರ ರೈತ ಕುಟುಂಬದಲ್ಲಿ ತಾನು ಕಂಡುಂಡ ಹಾಗೂ ಕೇಳಿ ತಿಳಿದ ಅನುಭವಗಳು ವಕೀಲರಾದ ಮಂಜಪ್ಪನವರಲ್ಲಿ ಅದಮ್ಯ ಧೈರ್ಯ, ಉತ್ಸಾಹ, ಸ್ಥೈರ್ಯ ಹಾಗೂ ಜಾಣ್ಮೆಯನ್ನು ತುಂಬಿದ್ದು ಮಾತ್ರವಲ್ಲದೆ ಹೊಟ್ಟೆಪಾಡಿಗಾಗಿ ಹಗಲಿರುಳು ಹೋರಾಡುವವರನ್ನೇ ನೆನಪಿಸಿಕೊಳ್ಳುತ್ತಾ ತನ್ನ ಚಿಂತನೆ ಮತ್ತು ನಡವಳಿಕೆಗಳನ್ನು ರೂಢಿಸಿಕೊಳ್ಳಲು ಸ್ಫೂರ್ತಿಯಾದವು. ಅವರುಗಳಿಗಾಗಿ ಏನಾದರೂ ಮಾಡಬೇಕೆಂದು ಚಡಪಡಿಸುತ್ತಿದ್ದರು. ಸಮಾಜದ ಸುತ್ತ ಮುತ್ತ ಮುತ್ತಿಕೊಂಡಿರುವ ಅನೇಕ ಅನಿಷ್ಟಗಳಿಗೆಲ್ಲ ಒಂದು ಇತಿಶ್ರೀ ಹಾಡಬೇಕೆಂಬ ಉದ್ದೇಶ ಅವರಲ್ಲಿ ಹುಟ್ಟಿಕೊಂಡಿದ್ದು ನಮ್ಮಗಳ ಸೌಭಾಗ್ಯವೇ ಸರಿ. ಅವರ ವಕೀಲಿ ವೃತ್ತಿಯಲ್ಲಿ ಕಂಡು ಬಂದ ಸತ್ಯ ನಿಷ್ಠತೆ , ಪ್ರಾಮಾಣಿಕತೆ, ಕರ್ತವ್ಯ ನಿಷ್ಠೆ, ಸೇವಾ ಮನೋಭಾವ ಇತ್ಯಾದಿ ಗುಣಗಳೇ ಕಕ್ಷಿದಾರರುಗಳನ್ನು ಅವರೆಡೆಗೆ ಆಕರ್ಷಿಸಿದವು. ಕೆಲವೇ ಸಮಯದಲ್ಲಿ ಕಡಿದಾಳ್ ಮಂಜಪ್ಪನವರು ಶಿವಮೊಗ್ಗ ಸೆಷನ್ಸ್ ವಿಭಾಗದ ನ್ಯಾಯಾಲಯಗಳಲ್ಲಿ ಹೆಸರಾಂತ ವಕೀಲರಾಗಿ ಗುರುತಿಸಿಕೊಂಡರು. ಅವರ ಕಾರ್ಯಕ್ಷಮತೆ ಮತ್ತು ಸೇವಾ ಮನೋಭಾವಗಳಿಂದ ಇವರಲ್ಲಿಗೆ ಬಂದಿದ್ದ ಹೆಚ್ಚಿನ ಮೊಕದ್ದಮೆ ಮತ್ತು ವಿವಾದಗಳನ್ನು ಅವರ ಸಹೋದ್ಯೋಗಿ ದಿ॥ ಗುಡ್ಡೇಕೊಪ್ಪ ಕೃಷ್ಣಮೂರ್ತಿಯವರಂತಹ ಅನೇಕ ನ್ಯಾಯವಾದಿಗಳ ಸಹಕಾರದಿಂದ, ರಾಜಿ ಪಂಚಾಯಿತಿ ಮೂಲಕ ವಿವಾದಗಳನ್ನು ಸೌಹಾರ್ದಯುತವಾಗಿ, ಉಭಯ ಪಕ್ಷದವರಿಗೂ ಹೆಚ್ಚಿನ ಅನಾನುಕೂಲವಾಗದಂತೆ ಜಾಗರೂಕತೆ ವಹಿಸಿ ತೀರ್ಮಾನ ಮಾಡುತ್ತಿದ್ದರು. ಕಕ್ಷಿದಾರರ ಮನೆ ಮಠಗಳನ್ನು ವ್ಯಾಜ್ಯಗಳಿಂದ ಮುಕ್ತಗೊಳಿಸಿ ಅವರುಗಳ

ಅಭ್ಯುದಯಕ್ಕೆ ಕಾರಣರಾಗಿದ್ದಾರೆ. ಇಂತಹ ಸಾವಿರಾರು ಕೆಲಸಗಳಿಂದಲೂ ಅಪ್ರತಿಮ ದೇಶ ಭಕ್ತಿಯಿಂದಲೂ ಸೇವಾ ಮನೋಭಾವದಿಂದ ನಡೆಸಿದ ಕಾರ್ಯಕ್ರಮಗಳೂ ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರಿಂದಲೂ ನಡೆಸಿದ ಹೋರಾಟಗಳಿಂದಲೂ ನ್ಯಾಯವಾದಿ ಮಂಜಪ್ಪನವರನ್ನು ಕಡಿದಾಳ್ ಮಂಜಪ್ಪನವರಾಗಿ ಮಲೆನಾಡಿನ ಜಿಲ್ಲೆಗಳಲ್ಲಿ ಮನೆಮಾತಾಗುವಂತೆ ಮಾಡಿದುವು. ಜೊತೆಗೆ ಜನರ ಹೃದಯ ಸ್ಥಾನದಲ್ಲಿ ಖಾಯಂ ಸ್ಥಾನ ಪಡೆಯುವಂತೆ ಅಯಿತು. ಯಾವ ಕಾಲದಲ್ಲೂ, ಯಾವುದೇ ಸಂದರ್ಭದಲ್ಲಿಯೂ, ಹಣ, ಹೆಸರು ಅಥವಾ ಕೀರ್ತಿಗೆ ಅಸೆ ಪಟ್ಟವರಲ್ಲ ಮತ್ತು ಹಣವಂತರಿಗೆ ಎಂದೂ ಸೊಪ್ಪು ಹಾಕದ ಜಾಯಮಾನದವರೆಂದು ಅವರನ್ನು ಬಲ್ಲವರೆಲ್ಲರ ಅಭಿಪ್ರಾಯ. ಸುಳ್ಳು, ಮೋಸ, ವಂಚನೆ ಅವರ ಹತ್ತಿರ ಸಹ ಸುಳಿಯಲಸಾಧ್ಯವಾದ ವ್ಯಕ್ತಿತ್ವ ಅವರದ್ದು.

ಕಡಿದಾಳರ ನೇರ ಮತ್ತು ನಿಷ್ಠುರವಾದ ನಡೆ, ನುಡಿ, ಪ್ರಾಮಾಣಿಕತೆ ದೇಶಭಕ್ತಿ ಹಾಗೂ ವೈಖರಿಗಳ ಕಂಪು ಜಿಲ್ಲೆಗಳ ಹೊರಗು ಹಬ್ಬುತ್ತಾ ರಾಜ್ಯ ಮಟ್ಟದಲ್ಲಿ ಅವರಿಗೆ ಉನ್ನತ ಸ್ಥಾನ ಮಾನಗಳನ್ನು ತಂದಿತ್ತವು. ೧೯೫೨ರ ಸಾರ್ವತ್ರಿಕ ಚುನಾವಣೆಯಲ್ಲಿ ತೀರ್ಥಹಳ್ಳಿ ಕ್ಷೇತ್ರದಿಂದ ಅವರನ್ನು ಗೆಲ್ಲಿಸಿ ಅವರನ್ನು ಚುನಾಯಿತ ಶಾಸಕರನ್ನಾಗಿ ಮಾಡಿದ್ದು ಅವರ ವ್ಯಕ್ತಿತ್ವದ ವಿಶೇಷತೆ.

ಕರ್ನಾಟಕ ರಾಜ್ಯ ಸರ್ಕಾರದ ಮಂತ್ರಿಮಂಡಲಗಳಲ್ಲೂ ವಿಶಿಷ್ಟ ಸ್ಥಾನ–ಮಾನಗಳೂ ಅವರನ್ನು ಹುಡುಕಿಕೊಂಡು ಬಂದಿದ್ದು ಸಮಾಜದ ಪುಣ್ಯವಿರಬೇಕು. ವಿಧಾನಸೌಧ ಕಟ್ಟಡ ನಿರ್ಮಾಣ ಕಾಲದಲ್ಲಿ ಅವರು ಲೋಕೋಪಯೋಗಿ ಸಚಿವರಾಗಿ ಕೈಗೊಂಡು ಮತ್ತು ನಡೆಸಿದ ಕಾರ್ಯಕ್ರಮಗಳು ಹಾಗೂ ಅವರು ಈ ಇಲಾಖೆಯ ಸಚಿವರಾಗಿರುವರೆಗೆ ಸುಮಾರು ೫೬ ಲಕ್ಷ ರೂಗಳನ್ನು ಕಟ್ಟಡ ನಿರ್ಮಾಣ ವೆಚ್ಚಕ್ಕೆ ಬಿಡುಗಡೆ ಮಾಡಿರುವುದನ್ನು ಯಾರೂ ಈವರೆಗೆ ಯಾವುದೇ ರೀತಿಯಲ್ಲಿ ಪ್ರಶ್ನಿಸಿಲ್ಲದಿರುವುದು ಸಾಮಾನ್ಯದ ಸಂಗತಿಯೇ? ವಿಧಾನಸೌಧ ಕಟ್ಟಡ ನಿರ್ಮಾಣಕ್ಕೆ ಇನ್ನು ಹೆಚ್ಚಿಗೆ ಬೇಕಾದ ಖರ್ಚು–ವೆಚ್ಚಗಳ ಪುನರ್ ಅಂದಾಜು ಮಾಡಬೇಕಾಗಿ ಬಂದ ಸಂದರ್ಭವನ್ನು ಮಾತ್ರ ಸ್ವತಂತ್ರ್ಯವಾಗಿ ಪರಿಶೀಲಿಸಿ ತೀರ್ಮಾನ ಕೈಗೊಳ್ಳದಿದ್ದುದು ಮಾತ್ರ ಈ ನಾಡಿನ ದುರ್ದೈವವೇ ಸರಿ.

ಅನೇಕ ಸಾರಿ ಪ್ರತಿಕೂಲ ಸನ್ನಿವೇಶಗಳೇ ವ್ಯಕ್ತಿಯ ಶಕ್ತಿಯಾಗಿ ಮುನ್ನಡೆಸುವುದನ್ನು ಕಂಡಿದ್ದೇವೆ. ಅಂತಹ ಸನ್ನಿವೇಶವೇ ಕಡಿದಾಳ್ ಮಂಜಪ್ಪನವರನ್ನು ಈ ರಾಜ್ಯದ

ಮುಖ್ಯಮಂತ್ರಿಯನ್ನಾಗಿ ಮಾಡಿತ್ತು ಎಂದರೆ ಅತಿಶಯೋಕ್ತಿಯಲ್ಲ ಅಥವಾ ಭತ್ತದ ಸಸಿ ಅಗೇಡಿಗೆ ದನಗಳನ್ನು ನುಗ್ಗಿಸಿ ಸಸಿಯನ್ನು ಸಂಪೂರ್ಣ ನಾಶ ಮಾಡಿ ನಾಟಿ ಮಾಡಲಿಕ್ಕಾಗದಂತಹ ಸನ್ನಿವೇಶ ನಿರ್ಮಾಣವಾದಾಗ ತಂದೆ ದುಗ್ಗಣ್ಣಗೌಡರು, ಮಗ ಮಂಜಪ್ಪನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ತನ್ನ ಕುಟುಂಬದವರೊಡನೆ ಅತಿಯಾದ ದುಃಖದಿಂದ ರಾಮಧ್ಯಾನ ಮಾಡಿದ ಅವರ ಮೊರೆ ಶ್ರೀ ರಾಮನಿಗೆ ತಲುಪಿ ಆತ ಅಂದು ಆಶೀರ್ವದಿಸಿದ್ದ ಫಲವೇ ಈ ಮುಖ್ಯಮಂತ್ರಿ ಪದವಿ ಎಂದರೂ ತಪ್ಪಾಗಲಾರದು.

ಶ್ರೀಯುತ ಮಂಜಪ್ಪನವರು ೧೯೫೨ ರಲ್ಲಿ ಕರ್ನಾಟಕ ಸರ್ಕಾರದ ಸಚಿವರಾದಾಗ ರಾಜ್ಯದಲ್ಲಿ ಸಾಮಾಜಿಕ ಸುಧಾರಣೆ ತಂದು ದುರ್ಬಲರ ಜೀವನವನ್ನು ಉತ್ತಮ ಪಡಿಸಲು ಯೋಚಿಸಿದಾಗ ಹಲವಾರು ಕಾನೂನುಗಳಿಗೆ ತಿದ್ದುಪಡಿ ತರಬೇಕಾದ ಅವಶ್ಯಕತೆಯನ್ನು ಕಂಡುಕೊಂಡರು. ಇನ್ನು ಕೆಲ ಸಂದರ್ಭಗಳಲ್ಲಿ ಸುಧಾರಣೆ ತರಲು ಕಾನೂನುಗಳೇ ಇಲ್ಲದಿರುವುದನ್ನು ಪತ್ತೆ ಹಚ್ಚಿದರು. ಅವರು ಹುಟ್ಟಿಬೆಳೆದು ಬಂದ ಸಮಾಜದ ಹಾಗೂ ನ್ಯಾಯವಾದಿಯಾಗಿ ಶಿವಮೊಗ್ಗದಲ್ಲಿ ಪಡೆದುಕೊಂಡ ಅನುಭವಗಳ ಹಿನ್ನೆಲೆಯಲ್ಲಿ ಹೊಸ ಹೊಸ ಕಾನೂನುಗಳನ್ನು ರಚನೆ ಮಾಡಿ ಜಾರಿಗೊಳಿಸುವುದು ಮತ್ತು ಅಸಮರ್ಪಕವಾಗಿರುವ ಕಾನೂನುಗಳಿಗೆ ತಿದ್ದುಪಡಿ ತಂದು ಜಾರಿಗೊಳಿಸುವುದು ಜರೂರಾಗಿರುವ ಕ್ರಮ ಎಂದು ಮನಗಂಡರು. ಈ ನಿಟ್ಟಿನಲ್ಲಿ ತಮ್ಮ ಪಕ್ಷದ ಕೆಲವು ಹಣವಂತರ ಹಾಗೂ ಸ್ವಾರ್ಥಿ ಶಕ್ತಿವಂತರ ಒತ್ತಡಕ್ಕೆ ಮಣಿಯದೇ ಮೈಸೂರು ರಾಜ್ಯದ ಗೇಣಿದಾರರ ಹಿತ ಕಾಯುವ ಹಾಗೂ ಭೂ ಮಾಲೀಕರ ಕುಟಿಲತೆ ಮತ್ತು ದೌರ್ಜನ್ಯ ತಡೆಯಲು ತಾವು ಹಿಂದೆ ಗೇಣಿದಾರ ರೈತ ಸಂಘದ ಅಧ್ಯಕ್ಷರಾಗಿ ಪಡೆದ ಅನುಭವಗಳನ್ನು ಉಪಯೋಗಿಸಿಕೊಂಡು ಮೈಸೂರು ಟೆನೆನ್ಸಿ ಆ್ಯಕ್ಟ್, ೧೯೫೨ನ್ನೂ, ಇನಾಂದಾರರ ಮೋಸ ಮತ್ತು ದುರಾಸೆಯೇ ಕಡಿವಾಣ ಹಾಕಿ ದೇವರ ದಿಂಡಿರ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆ ನಿಲ್ಲಿಸಲು, ಬಡ ಗೇಣಿದಾರರ ರಕ್ಷಣೆಗಾಗಿ ಇನಾಂ ಅಬಾಲಿಷನ್ ಆ್ಯಕ್ಟ್ ೧೯೫೪ ಮತ್ತು ೧೯೫೬ಗಳನ್ನು ಜಾರಿಗೆ ತಂದರು. ಎಲ್ಲಾ ಗೇಣಿದಾರರ ವರ್ಗದವರ ಭವಿಷ್ಯಕ್ಕೆ ಬೆಳಕನ್ನು ನೀಡಿದರು. ಗೇಣಿ ಶಾಸನ ಜಾರಿಗೆ ಕೊಟ್ಟ ನಂತರ ಅದರಲ್ಲೇ ಇರುವ ಅನೇಕ ಕಲಂಗಳ ದುರುಪಯೋಗ ಪಡಿಸಿಕೊಂಡು ಕೆಲ ಭೂ ಮಾಲೀಕರು ಗ್ರಾಮಾಧಿಕಾರಿ ಶ್ಯಾನುಭೋಗರೊಂದಿಗೆ ಶಾಮೀಲಾಗಿ ಸಾಗುವಳಿ ಮಾಡುತ್ತಿದ್ದ ಜಮೀನಿನ ಫಹಣೆಯನ್ನು ಭೂ ಮಾಲೀಕರ ಹೆಸರಿಗೆ ಬದಲಾಯಿಸಿಕೊಂಡೋ, ಬೇಜವಾಬ್ದಾರಿ ಗೇಣಿದಾರರ ನಿರ್ಲಕ್ಷ್ಯ ಮತ್ತು

ದಂಡಾ ದುಂಡಿ ಜೀವನ ಕ್ರಮದಿಂದಲೋ ಅಥವಾ ಪ್ರಕೃತಿ ವೈಫಲ್ಯದಿಂದ ಸಾಕಷ್ಟು ಮಳೆಯಾಗದೇ ಫಸಲು ನಷ್ಟ ಹೊಂದಿದ ಕಾರಣದಿಂದಲೋ ಗೇಣಿ ಬಾಕಿ ಮಾಡಿಕೊಂಡ ಗೇಣಿದಾರರನ್ನು ಅವರ ಸಾಗುವಳಿ ಜಮೀನಿನಿಂದ ಹೊರದಬ್ಬಿದರು. ತಮ್ಮ ಸ್ವಾಧೀನತೆಗೆ ಪಡೆಯಲು ಭೂ ಮಾಲೀಕರು ರಂಗವನ್ನು ಸಜ್ಜು ಮಾಡಿಕೊಂಡಿರುವುದನ್ನು ಸೂಕ್ಷ್ಮಮತಿಯಾದ ಕಡಿದಾಳರು ಮನಗಂಡರು. ಕರ್ನಾಟಕ ಟೆನೆನ್ಸಿ (ಟೆಂಪರವರಿ ಪ್ರೊಟೆಕ್ಷನ್ ಫ್ರಂ ಇವಿಕ್ಷನ್) ೧೯೬೧ ಕಾಯಿದೆಯನ್ನು ರಚಿಸಿ ಜಾರಿಗೊಳಿಸಿ ಅಗಬಹುದಾದ ದೊಡ್ಡ ಅನಾಹುತದಿಂದ ಬಡಗೇಣಿದಾರರನ್ನು ರಕ್ಷಿಸಿದರು. ಕೂಲಿ ಕಾರ್ಮಿಕರ ಅದರಲ್ಲೂ ರೈತ ಕಾರ್ಮಿಕರ ಮತ್ತು ಬಡ ಜನತೆ ನಿರುದ್ಯೋಗದಿಂದ ನಿರಂತರ ಶೋಷಣೆಗೆ ಒಳಗಾಗುತ್ತಿದ್ದವರಿಗೆ ಉದ್ಯೋಗ ಒದಗಿಸಿ ಬದುಕಿನಲ್ಲಿ ಭರವಸೆ ಮೂಡಿಸುವ ಭೂ ಮಂಜೂರಾತಿ ರೂಲ್ಸ್ ೧೯೬೦ ನ್ನು ತಯಾರಿಸಿ ಜಾರಿಗೊಳಿಸಿದರು. ಪರಿಣಾಮವಾಗಿ ರಾಜ್ಯಾದ್ಯಾಂತ ಲಕ್ಷಾಂತರ ಹರಿಜನ ಗಿರಿಜನ, ಜೀತದಿಂದಲೇ ಜೀವಿಸುತ್ತಿದ್ದ ಕುಟುಂಬಗಳು ಹಾಗೂ ಇತರೇ ಬಡ ಜನರು ದರಖಾಸ್ತಿನಲ್ಲಿ ಜಮೀನು ಪಡೆದು ಉದ್ಯೋಗಸ್ಥರಾದರು ಮತ್ತು ಭೂ ಮಾಲೀಕರ ಪಟ್ಟಕ್ಕೇರಿದರು, ಸ್ವತಂತ್ರ ಬದುಕಿನ ಸತ್ವವನ್ನು ಕಂಡರು, ತಮ್ಮ ಉಡುಗೆ ತೊಡುಗೆಗಳನ್ನು ಬದಲಾಯಿಸಿಕೊಂಡು ಮಾನವಂತ ಜೀವನ ನಡೆಸಲು ಅನುವು ಮಾಡಿಕೊಂಡರು. ಈ ರೀತಿಯಲ್ಲಿ ಕಡಿದಾಳರು ಸಮಾಜದ ಬಲಾಢ್ಯರ ದೌರ್ಜನ್ಯಕ್ಕೆ ತುತ್ತಾಗುತ್ತಿರುವವರ ರಕ್ಷಣೆ ಮಾಡಿದರು. ರಾಜ್ಯಾದ್ಯಂತ ಹಳ್ಳಿ ಹಳ್ಳಿಗಳಲ್ಲಿ ಶಾನುಭೋಗರು ಮತ್ತು ಪಟೇಲರುಗಳೇ ಜನರ ಅಭ್ಯುದಯಕ್ಕೆ ಮಾರಕರಾಗಿದ್ದುದನ್ನು ಮನಗಂಡರು. ಇವರಿಂದ ಸಮಾಜವನ್ನು ರಕ್ಷಿಸಿ ಸ್ವತಂತ್ರವಾದ ಸಮಾಜ ನಿರ್ಮಾಣಕ್ಕೆ ಮುಂದಾದರು. ಈ ದಿಶೆಯಲ್ಲಿ ವಿಲೇಜ್ ಆಫೀಸರ್ಸ್ ಅಬಾಲಿಷಸ್ ಆ್ಯಕ್ಟ್, ೧೯೬೧ ನ್ನು ಜಾರಿಗೆ ತಂದು ಗ್ರಾಮಾಧಿಕಾರಿಗಳ ದೌರ್ಜನ್ಯ ಮತ್ತು ಕುಟಿಲತೆಗಳಿಂದ ಜನರನ್ನು ಪಾರು ಮಾಡಿದರು. ಈ ಎಲ್ಲಾ ಕಾನೂನುಗಳ ಮೂಲಕ ಸಮಾಜ ಸುಧಾರಣೆ ಮಾಡುವ ಅವರ ಪ್ರಯತ್ನ ಸಮಾಜದಲ್ಲಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದವು. ಆದರೆ ಈ ಎಲ್ಲಾ ಕಾನೂನುಗಳಿಂದಲೂ ಸಮಾಜದ ಅನ್ಯಾಯ ಅನೀತಿಗಳನ್ನು ಸುಧಾರಿಸಲು ಸಾಧ್ಯವಾಗದುದನ್ನು ಮನಗಂಡು, ಭೂ ಸುಧಾರಣ ಕಾನೂನು ೧೯೬೧ ನ್ನು ಹುಟ್ಟು ಹಾಕಿ ವಜ್ರಾಯುಧದಂತೆ ಬೀಸಿದರು. ಇದರಿಂದ ರಾಜ್ಯಾದ್ಯಾಂತ ಶೋಷಕ ವರ್ಗದವರ ಆಕ್ರೋಶ ಭುಗಿಲೆದ್ದಿತು. ಕಡಿದಾಳರವರ ಸ್ಥಾನ ಹಾಗೂ ಭವಿಷ್ಯವನ್ನೇ ನಾಶಮಾಡುವ ಪಣತೊಟ್ಟರು. ೧೯೬೨ ರ ಸಾರ್ವತ್ರಿಕ ಚುನಾವಣೆ ಇದಕ್ಕೆ ವೇದಿಕೆಯಾಯಿತು. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ವಿಧಾನಸಭಾ ಕ್ಷೇತ್ರ ಕುರುಕ್ಷೇತ್ರವಾಗಿ ಮಾರ್ಪಟ್ಟಿತ್ತು. ಕಡಿದಾಳರನ್ನು

ಸೋಲಿಸಿಯೇ ತೀರುವೆವೆಂದು ಪಣ ತೊಟ್ಟವರ ಇಚ್ಛೆ ದೈವವಶಾತ್ ನೆರವೇರಲಿಲ್ಲ. ಶೋಷಕ ವರ್ಗದವರ ವಿರುದ್ಧ ಶೋಷಿತ ವರ್ಗ ಜಾತಿ ಮತ ಭೇದವಿಲ್ಲದೆ ಒಂದಾದರು, ಬಂಡೆದ್ದರು, ಕಡಿದಾಳರನ್ನು ಭಾರಿ ಬಹುಮತದಿಂದ ಗೆಲ್ಲಿಸಿಯೇ ಬಿಟ್ಟರು. ಆದರೂ ಸೋಲೊಪ್ಪಿಕೊಳ್ಳದ ಸಮಾಜ ಕಂಠಕರು ಕಾಂಗ್ರೆಸ್ ಪಕ್ಷದ ಕೆಲ ವರಿಷ್ಠರನ್ನು ಒಲಿಸಿಕೊಂಡು ಮಾಡಬಾರದ್ದೆಲ್ಲವನ್ನೂ ಮಾಡುತ್ತಾ ಕಡಿದಾಳರವರ ರಾಜಕೀಯ ಜೀವನಕ್ಕೆ ಮುಸುಕು ಹಾಕಲು ಶಕ್ತರಾದುದು ಈ ನಾಡು ಕಂಡ ಇನ್ನೊಂದು ದುರಂತ.

ಅಂತೂ ಅವರ ರಾಜಕೀಯ ಜೀವನ ೧೯೬೨-೬೩ ಕ್ಕೆ ಕೊನೆಯಾದರೂ ಅವರ ಸಾಮಾಜಿಕ ಹಾಗೂ ಶೈಕ್ಷಣಿಕ ಕಳಕಳಿ ಅವರನ್ನು ಸುಮ್ಮನೆ ಇರಲು ಬಿಡಲಿಲ್ಲ. ಹಿಂದೆ ವಿದ್ಯಾಮಂತ್ರಿಯಾಗಿ ತಂದ ಸುಧಾರಣಾ ಕ್ರಮಗಳು ಹಾಗೂ ನಂತರ ಶಿಕ್ಷಣ ಸಂಸ್ಥೆಗಳಲ್ಲಿ ಅವರು ವಹಿಸಿದ ಪಾತ್ರಗಳು, ಸಾವಿರಾರು ಮಕ್ಕಳನ್ನು ಇಂಜಿನೀಯರ್, ವೈದ್ಯರು ಮತ್ತು ಇತ್ಯಾದಿ ಪದವಿಗಳನ್ನು ಪಡೆದು ಅವರುಗಳು ಮಾತ್ರವಲ್ದೆ ಅವರವರ ಕುಟುಂಬಗಳನ್ನು ಅಭಿವೃದ್ಧಿಪಡಿಸಲು ನೆರವಾದದ್ದು ನಮ್ಮಗಳೆಲ್ಲರ ಪುಣ್ಯ.

ರಾಜಕೀಯ ಜೀವನದಲ್ಲಿ ಈ ವೇಳೆ ಆವರಿಸಿರುವ ಅವನತಿಯನ್ನು ಕಂಡು ಹೇಸಿಗೆ ಮತ್ತು ಜಿಗುಪ್ಸೆಯಿಂದ ಸಮಾಜವನ್ನು ಎಚ್ಚರಿಸಲು ವಿವಿಧ ರೀತಿಯಲ್ಲಿ ಪ್ರಯತ್ನಿಸಿದರು. ತಮ್ಮ ಸಾತ್ವಿಕ ಸಿಟ್ಟಿನಿಂದ ಸಮಾಜದಲ್ಲಿರುವ ಹೊಲಸನ್ನು, ರಾಜಕೀಯದದಲ್ಲಿರುವ ಭ್ರಷ್ಟತೆಯನ್ನು ಹೊರಗೆಡುವುತ್ತಾ ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಾ ಚಡಪಡಿಸುತ್ತಿದ್ದರು. ಈ ವಿಚಾರದಲ್ಲಿ ಅನೇಕ ಸಾರಿ ಭಾವೋದ್ರೇಕಕ್ಕೆ ಒಳಗಾಗಿ ಹೇಳಬೇಕಾದ ವಾಕ್ಯವನ್ನು ಪೂರ್ಣಗೊಳಿಸಲಾಗದ ಸ್ಥಿತಿಗೆ ತಲುಪುತ್ತಿದ್ದರು. ಛೀ.. ಛೀ.. ಛೀ.. ಇವರನ್ನೆಲ್ಲಾ ನೇಣುಗಂಬಕ್ಕೆ... ನೇಣುಗಂಬಕ್ಕೆ ಎಂದು ಹೇಳುತ್ತಾ ಆಕ್ರೋಶಪಡುತ್ತಿದ್ದರು.

೧೯೭೫ ರಲ್ಲಿ ಈ ಸಮಾಜದಲ್ಲಿ ಸತ್ಯ ಪ್ರಾಮಾಣಿಕತೆಯನ್ನು ಪುನರ್ ಸ್ಥಾಪಿಸಲು ಸಾಧ್ಯ ಎನ್ನುವ ಆಶಾಭಾವದಿಂದ "ಕರ್ನಾಟಕ ಪ್ರದೇಶ ಸಮಾಜವಾದಿ ವೇದಿಕೆ" ಯನ್ನು ರಾಜ್ಯ ಮಟ್ಟದಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿ, ಜಿಲ್ಲಾ ಮಟ್ಟಗಳಲ್ಲಿ ಈ ವೇದಿಕೆ ಶಾಖೆಗಳನ್ನು ತೆರೆದು ಅವುಗಳ ಸಂಚಾಲಕರುಗಳನ್ನು ನೇಮಿಸಿದ್ದರು, ಮಾತ್ರವಲ್ಲದೆ ಈ ವೇದಿಕೆಗೆ ಬೇಕಾದ ಲೆಟರ್‌ಹೆಡ್ ಪ್ಯಾಡ್ ಮತ್ತು ರಬ್ಬರ್ ಸೀಲುಗಳನ್ನು ಮಾಡಿಸಿ ಆಯಾಯ ಜಿಲ್ಲೆಗಳಿಗೆ ರಾಜ್ಯದ್ಯಾಂತ ವಿತರಿಸಿ ಸಮಾಜ ಸುಧಾರಣೆ ಮಾಡುವ ಪ್ರಯತ್ನ ಮುಂದುವರಿಸಿದರು. ಈ ವೇದಿಕೆಯ ಶಿವಮೊಗ್ಗ ಜಿಲ್ಲಾ ಸಂಚಾಲಕನನ್ನಾಗಿ

ನನ್ನನ್ನು ನೇಮಿಸಿ, ವೇದಿಕೆಯ ಲೆಟರ್‌ಪ್ಯಾಡ್ ಮತ್ತು ಸೀಲನ್ನು ಒಂದು ಕಾಗದದ ಜೊತೆಯಲ್ಲಿ ಕಳಿಸಿದ್ದರು. ಆದರೆ ಈ ಸಮಾಜ ಯಾವುದೇ ವೇದಿಕೆಗಳಿಂದ ರಿಪೇರಿ ಮಾಡಲಾಗದಷ್ಟು ಕೆಟ್ಟಿದೆ ಎಂದು ತಿಳಿಯಲು ಅವರಿಗೆ ಹೆಚ್ಚಿನ ಸಮಯ ಬೇಕಾಗಲಿಲ್ಲ. ಹಾಗಾಗಿ ಅವರು ಈ ಪ್ರಯತ್ನವನ್ನು ಕೆಲವೇ ಕಾಲದಲ್ಲಿ ಕೈ ಬಿಡಬೇಕಾಗಿ ಬಂತು. ಅವರ ಉಳಿದ ಜೀವನಯಾಪನೆಗೆ ವಕೀಲಿ ವೃತ್ತಿಯನ್ನು ಬೆಂಗಳೂರು ಉಚ್ಚನ್ಯಾಯಾಲಯದಲ್ಲಿ ಕೈಗೊಂಡರು. ಇತಿಹಾಸದಲ್ಲಿ ಒಬ್ಬ ರಾಜ್ಯದ ಮುಖ್ಯಮಂತ್ರಿಯಾದವರು ತನ್ನ ಮತ್ತು ತನ್ನ ಕುಟುಂಬದ ಜೀವನಯಾಪನೆಗೆ ಈ ರೀತಿಯ ವೃತ್ತಿಯನ್ನು ಕೈಗೊಳ್ಳಬೇಕಾಗಿ ಬಂದದ್ದು ಮತ್ತು ಅದರಲ್ಲೇ ತನ್ನ ಕೊನೆ ಉಸಿರಿನವರೆಗೆ ತೊಡಗಿಸಿಕೊಂಡಿದ್ದನ್ನು ನಮ್ಮ ಇತಿಹಾಸ ಯಾವ ರೀತಿಯಲ್ಲಿ ನಮೂದು ಮಾಡುತ್ತದೆಯೋ ನೋಡಬೇಕು. ಆದರೂ ಕೂಡ ಅವರ ಸತ್ಯನಿಷ್ಠತೆ, ಪ್ರಾಮಾಣಿಕತೆ ಹಾಗೂ ಸೇವಾ ಮನೋಭಾವಕ್ಕೆ ಎಂದೂ ಭಂಗ ಬಾರದಂತೆ ಕಾಪಾಡಿಕೊಂಡು ಬಂದಿದ್ದಾರೆ. ಅವರಿಗೆ ರಾಜ್ಯಾದ್ಯಂತ ಕಕ್ಷಿದಾರರಿದ್ದರು. ನಾನೂ ಕೆಲವು ಉಚ್ಛ ನ್ಯಾಯಾಲಯದಲ್ಲಿ ನಡೆಸ ಬೇಕಾದ ಕೆಲವು ಮೊಕದ್ದಮೆಗಳನ್ನು ಅವರಿಗೆ ಕಳಿಸುತ್ತಿದ್ದೆನು, ಯಾವುದೇ ಕೇಸಿನಲ್ಲಿ ಅವರು ಸ್ವೀಕರಿಸುತ್ತಿದ್ದ ಫೀಜು ಅತೀ ಕಡಿಮೆ. ಆರ್ಥಿಕವಾಗಿ ತೊಂದರೆಯಲ್ಲಿದ್ದಾರೆಂದು ಶಕ್ತಿ ಇರುವ ಕಕ್ಷಿದಾರರಿಂದ ಸ್ವಲ್ಪ ಹೆಚ್ಚು ಫೀ ಕೊಡಿಸಿದರೆ ನಮ್ಮ ಮೇಲೆಯೂ ಹರಿಹಾಯುತ್ತಿದ್ದರು. ಇದಕ್ಕೊಂದು ನಿದರ್ಶನ:

ಕೊಪ್ಪ ಕೆಳಪೇಟೆ ಪಕ್ಕದಲ್ಲಿ ಫರ್ನಾಂಡಿಸ್ ಎನ್ನುವರಿಗೆ ಸೇರಿದ ಒಂದು ಕಟ್ಟಡ ಖಾಲಿ ಇತ್ತು. ೧೯೭೭ ರ ಸಾರ್ವತ್ರಿಕ ಚುನಾವಣಾ ಕಾಲದಲ್ಲಿ ಕಾಂಗ್ರೆಸ್ ಕಾರ್ಯಕರ್ತನ ಹೆಸರಿನಲ್ಲಿ ಫರ್ನಾಂಡಿಸ್‌ರವರಿಂದ ಅ ಕಟ್ಟಡವನ್ನು ಕಡಿಮೆ ಬಾಡಿಗೆಗೆ ಪಡೆಯಲಾಗಿತ್ತು. ಚುನಾವಣೆ ಕಳೆದು ಕೆಲವು ತಿಂಗಳುಗಳೇ ಕಳೆದಿದ್ದರೂ ಕೂಡ ಕಾಂಗ್ರೆಸ್ ಕಾರ್ಯಕರ್ತನು ತನ್ನ ಹೆಸರಿನಲ್ಲಿ ಬಾಡಿಗೆಗೆ ಪಡೆದುದನ್ನು ದುರುಪಯೋಗ ಪಡಿಸಿಕೊಂಡು ಅದೇ ಕಟ್ಟಡದಲ್ಲಿ ತಾನು ಹೊಸದಾಗಿ ವ್ಯಾಪಾರ ಪ್ರಾರಂಭಿಸಿದನು. ತಾನೇ ಬಾಡಿಗೆದಾರನೆಂದು ಗಟ್ಟಿಯಾಗಿ ಕುಳಿತುಬಿಟ್ಟನು. ಅನ್ಯಮಾರ್ಗವಿಲ್ಲದೆ ಫರ್ನಾಂಡಿಸ್‌ರವರು ನ್ಯಾಯಾಲಯದ ಮೂಲಕ ಕಟ್ಟಡದ ಸ್ವಾಧೀನತೆ ಪಡೆಯಲು ದಾವಾ ಹೂಡಿದರು. ಕೆಲವಾರು ವರ್ಷಗಳು ನ್ಯಾಯಾಲಯದಲ್ಲಿ ಕೇಸು ನಡೆದು ಬಾಡಿಗೆದಾರನ ಪರವಾಗಿಯೇ ತೀರ್ಮಾನವಾಯಿತು. ಫರ್ನಾಂಡಿಸ್‌ರವರು ಚಿಕ್ಕಮಗಳೂರು ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದರು. ಅಲ್ಲಿಯೋ ಕೆಲವು ಕಾಲದ ನಂತರ ಮೇಲ್ಮನವಿಯೂ ವಜಾ ಆಯಿತು. ಅನಿವಾರ್ಯವಾಗಿ ಬೆಂಗಳೂರು

ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬೇಕಾಯಿತು. ಅ ಕಾಲದಲ್ಲಿ ಶ್ರೀ ಕಡಿದಾಳರು ಉಚ್ಚ ನ್ಯಾಯಾಲಯದಲ್ಲಿ ಹೆಸರಾಂತ ನ್ಯಾಯವಾದಿಯಾಗಿದ್ದುದರಿಂದ ಅವರಲ್ಲಿ ಕರೆದುಕೊಂಡು ಹೋದೆನು. ಕೇಸಿನ ವಿಷಯವನ್ನು ಕಡಿದಾಳ್‌ರವರಿಗೆ ವಿವರವಾಗಿ ತಿಳಿಸಿ ಕೇಸ್ ಪೇಪರ್ಸ್ ಕೊಟ್ಟೆವು. ಎಲ್ಲಾ ಪರಿಶೀಲಿಸಿ ಕೆಳಗಿನ ಎರಡೂ ನ್ಯಾಯಾಲಯದಲ್ಲಿ ವಜಾ ಆದ ಹಿಂಜರಿಕೆ ಇದ್ದರೂ ಕೂಡ ಕೇಸು ನಡೆಸಲು ಒಪ್ಪಿ ಸ್ವೀಕರಿಸಿದರು. ನಾನು ಫರ್ನಾಂಡಿಸ್‌ರವರಿಗೆ ಕೇಸಿನ ಫೀ ಮತ್ತು ಖರ್ಚಿನ ಬಗ್ಗೆ ಐದು ಸಾವಿರ ರೂಪಾಯಿಗಳನ್ನು ಕೊಡಬೇಕಾಗುತ್ತದೆ ಎಂದು ಮೊದಲೇ ತಿಳಿಸಿದ್ದೆನು. ಫರ್ನಾಂಡಿಸರು ಮತ್ತು ಅವರ ಪತ್ನಿ ಇಬ್ಬರೂ ಬ್ಯಾಂಕಿನ ಹಿರಿಯ ನೌಕರರು, ಆರ್ಥಿಕವಾಗಿ ಸ್ಥಿತಿವಂತರೂ ಕೂಡ. ಅವರಿಗೆ ಫೀಜು ಕೊಡಿ ಎಂದು ನಾನು ಸೂಚನೆಯನ್ನು ನೀಡಿದೊಡನೆ ಅವರು ಬ್ಯಾಗಿನಿಂದ ಐದು ಸಾವಿರ ರೂಪಾಯಿನ ಒಂದು ಕಟ್ಟನ್ನು ತೆಗೆದುಕೊಡಲು ಹೋದರು. ಜೊತೆಯಲ್ಲಿ ಅವರ ಪತ್ನಿಯೂ ಇದ್ದರು. ಅ ಹಣದ ಕಟ್ಟನ್ನು ನೋಡಿದೊಡನೆ ಕಡಿದಾಳರವರಿಗೆ ಸಿಟ್ಟು ಬಂದೇ ಬಿಟ್ಟಿತು. ಏನು...? ಏನು..? ಎಷ್ಟಿದೆ..? ಎಂದು ಅಬ್ಬರಿಸಿದರು. ನಾನು ಅವಕ್ಕಾದೆನು. ಫರ್ನಾಂಡಿಸ್ ಫೀಜು ಕೊಟ್ಟದ್ದು ಕಡಿಮೆ ಅಯಿತೊ ಏನೊ ಎಂದು ಕುಳಿತಲ್ಲಿಂದ ಎದ್ದು, ಹೆಂಡತಿಯ ಹತ್ತಿರ ಹೋಗಿ ಮಾತನಾಡಿ ಮತ್ತೆ ಐದು ಸಾವಿರದ ಇನ್ನೊಂದು ಕಟ್ಟು ತಂದು ಒಟ್ಟಿಗೆ ಸೇರಿಸಿ ಕೊಟ್ಟರು. ಕಡಿದಾಳರ ಸಿಟ್ಟು ಇನ್ನೂ ಜಾಸ್ತಿಯಾಯಿತು. ನೀನು ಏನು ಕೆಲಸ ಮಾಡುತ್ತೀ...? ಎಷ್ಟು ಹಣ ಮಾಡಿದ್ದೀ..? ಎಷ್ಟು ಜನರಿಗೆ ಮೋಸ ಮಾಡಿ ಹಣ ಮಾಡಿದ್ದೀಯಾ..? ಎಂದು ಗದರಿಸುತ್ತಾ ಕೊಟ್ಟ ಹಣವನ್ನು ತೆಗೆದುಕೊಂಡು, ಅದರಲ್ಲಿ ಎರಡೂವರೆ ಸಾವಿರ ರೂಪಾಯಿಗಳನ್ನು ಮಾತ್ರ ತೆಗೆದುಕೊಂಡು ಉಳಿದ ಏಳೂವರೆ ಸಾವಿರ ರೂಪಾಯಿಗಳನ್ನು ಫರ್ನಾಂಡಿಸರಿಗೇ ವಾಪಸು ಮಾಡಿ, ತಗೊಳ್ಳಿ ನಿಮಗೆ ಹಣ ಹೆಚ್ಚಾಗಿದ್ದರೆ ಯಾರಾದರು ಬಡ ಹುಡುಗರ ಶಾಲಾ ಕಾಲೇಜು ಫೀ ಕಟ್ಟಲು ಕೊಡಿ ಅಂತ ಮುಖ ಗಂಟಿಕ್ಕಿಕೊಂಡು ಹೇಳಿದರು. ಫರ್ನಾಂಡಿಸ್ ಮತ್ತು ಅವರ ಪತ್ನಿ, ಸ್ವಾಮಿ.. ಸ್ವಾಮಿ.. ನೀವು ಬರೇ ಲಾಯರಲ್ಲ. ದೇವರು... ದೇವರು, ಎಂದು ಹೇಳುತ್ತ, ಇಬ್ಬರೂ ಅವರಿಗೆ ಉದ್ದುದ್ದ ಸಾಷ್ಟಾಂಗ ನಮಸ್ಕಾರ ಮಾಡಿದರು. ಅವರ ಕಿರಿಯ ಲಾಯರು ಮತ್ತು ನಾನು ಏನೂ ತೋಚದೆ ಹಾಗೆಯೇ ನಿಂತೆವು. ನಾನು ಇನ್ನೆಂದೂ ಅವರಿಗೆ ಯಾವುದೇ ಕೇಸುಗಳಲ್ಲಿ ಫೀ ಕೊಡಿಸುವ ಬಗ್ಗೆ ಕಕ್ಷಿದಾರರಿಗೆ ಯಾವುದೇ ಸಲಹೆ ನೀಡಿದ್ದಿಲ್ಲ. ಇಂತಹ ಹಲವಾರು ನಿದರ್ಶನಗಳು ಕಡಿದಾಳರ ಮುಂದೆ ನಮ್ಮನ್ನು ಕುಬ್ಜರನ್ನಾಗಿ ಮಾಡಿವೆ.

ಈತನ್ಮಧ್ಯೆ ಕಡಿದಾಳರವರ ಜೀವನ ಕ್ರಮ, ಸತ್ಯನಿಷ್ಠೆ, ಪ್ರಾಮಾಣಿಕತೆ ಹಾಗೂ ಅವರ ದೇಶಭಕ್ತಿಯ ವಿಚಾರದಲ್ಲಿ ಅಕರ್ಷಿತರಾದ ದಿಲ್ಲಿಯ ಕಾಂಗ್ರೆಸ್ ಪಕ್ಷದ ವರಿಷ್ಠರುಗಳು ಅವರಿಗೆ ರಾಜ್ಯಪಾಲರ ಹುದ್ದೆಯಾದಿಯಾಗಿ ಅನೇಕ ಉನ್ನತ ಸ್ಥಾನಗಳನ್ನು ಕೊಡುವುದಾಗಿ ಕೇಳಿಕೊಂಡರೂ ಕೂಡಾ ಕಡಿದಾಳ್‌ರವರು ಅಷ್ಟೆ ನಯವಾಗಿ ಸ್ವೀಕರಿಸದೆ ತಿರಸ್ಕರಿಸಿದ್ದು ಅವರ ವ್ಯಕ್ತಿತ್ವ ಹೆಚ್ಚುಗಾರಿಕೆ. ಕಾಯಕದಲ್ಲಿಯೇ ಕೈಲಾಸವನ್ನು ಕಾಣಬಯಸಿದ ಮಹಾ ಪುರುಷ ಕಡಿದಾಳರ ಕಾರ್ಯಚಟುವಟಿಕೆ ಸಾಹಿತ್ಯ ಕ್ಷೇತ್ರಕ್ಕೂ ವಿಸ್ತರಿಸಿರುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು. ಅವರು ಸಾಹಿತಿಯಾಗಬೇಕೆಂದು ಇವುಗಳನ್ನು ರಚನೆ ಮಾಡಿದವರಲ್ಲ. ತಮ್ಮ ಅಂತಃಕರಣದ ತೀವ್ರ ಭಾವನೆಗಳನ್ನು, ತತ್ವಾದರ್ಶಗಳನ್ನು ಬರವಣಿಗೆ ಮೂಲಕವೂ ಹೊರ ಹೊಮ್ಮಿಸುವ ತುಡಿತದ್ದಾಗಿರುತ್ತದೆ. ಅವರ ಇತರ ಕಾರ್ಯಕ್ಷೇತ್ರಗಳಲ್ಲಂತೆಯೇ ಇಲ್ಲಿಯೂ ಕೂಡಾ ತನ್ನ ಕನಸು ನನಸಾಗಲಿಲ್ಲವೆಂದು ಹಲಬುವುದನ್ನು ನೋಡಿ ನಾವು ನಿಟ್ಟುಸಿರು ಬಿಡುತ್ತೇವೆ. ಇಂತಹ ಶ್ರೇಷ್ಠ ಜೀವ ತಾನು ನಂಬಿದ ತತ್ವಾದರ್ಶಗಳಿಗೆ ಕೂಡಾ ಯಾರ ಆಮಿಷಕ್ಕೂ, ಹಣಕ್ಕೂ, ಹಂಗಿಗೂ ಒಳಗಾಗದ ತ್ಯಾಗ ಮನೋಭಾವ ಮತ್ತು ಅವರ ಮಹಾ ಸ್ವಾಭಿಮಾನವನ್ನು ಕಂಡು ಹೆಮ್ಮೆ ಪಡುತ್ತೇವೆ. ಸರ್ಕಾರದಿಂದ ತಾನೇ ತಾನಾಗಿ ಒದಗಿ ಬಂದ ಕನಿಷ್ಠ ಚಿಕಿತ್ಸಾ ಸೌಲಭ್ಯಗಳನ್ನು ಕೂಡಾ ಅಷ್ಟೇ ನಿಷ್ಠುರವಾಗಿ ನಿರಾಕರಿಸಿದರು. ಆದರೆ ಆ ಸನ್ನಿವೇಶದಲ್ಲಿ ಸಹೃದಯಿ ಮತ್ತು ಜನನಾಯಕರಾದ ಅಂದಿನ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಶ್ರೀಯುತ ಎಸ್.ಬಂಗಾರಪ್ಪನವರು ತಮ್ಮ ಸರ್ಕಾರದ ಸೌಲಭ್ಯವನ್ನು ಕಡಿದಾಳ್ ಮಂಜಪ್ಪನವರ ಶುಶ್ರೂಷೆಗೆ ಅವರ ಮನೆ ಬಾಗಿಲಿಗೆ ಕೊಂಡೊಯ್ದು ಅವರ ಚಿಕಿತ್ಸೆ ಸಮರ್ಪಕವಾಗಿ ನಡೆಯಲು ಏರ್ಪಾಡು ಮಾಡಿದ್ದರು. ಕಡಿದಾಳರ ಕೊನೆಯ ದಿನಗಳು ನೆಮ್ಮದಿಯಿಂದ ಇರುವಂತೆ ಮಾಡಿ ಕಣ್ಮುಚ್ಚುವುದಕ್ಕೆ ಸಹಕರಿಸಿದ್ದಾರೆ.

ಕಡಿದಾಳ್ ಮಂಜಪ್ಪನವರ ಆದರ್ಶ, ಸತ್ಯ, ನಿಷ್ಠೆ, ಪ್ರಾಮಾಣಿಕತೆ ಮತ್ತು ಬದ್ಧತೆಗಳು ಹಾಗೂ ಅವರ ಜೀವನ ಕ್ರಮ ಇಂದಿನ ಮತ್ತು ಮುಂದಿನ ಪೀಳಿಗೆಗೆ ದಾರಿ ಬೆಳಕಾಗಿ ಮಾರ್ಗದರ್ಶನವಾಗಬೇಕಾದ ಅಗತ್ಯವಿದೆ.

# ಕಾಯಕವೇ ಕೈಲಾಸ

**–ಕೋಣಂದೂರು ಲಿಂಗಪ್ಪ**

ಪೂಜ್ಯ ಕಡಿದಾಳ್ ಮಂಜಪ್ಪನವರನ್ನು ನಾನು ಮೊದಲು ನೋಡಿದ್ದು, ಅವರು ಶ್ರೀ ಕೆಂಗಲ್ ಹನುಮಂತಯ್ಯನವರ ಮಂತ್ರಿ ಮಂಡಲದಲ್ಲಿ ಕಂದಾಯಸಚಿವರಾಗಿ, ಮೊದಲು ನಮ್ಮ ತೀರ್ಥಹಳ್ಳಿಗೆ ಭೇಟಿಕೊಟ್ಟಾಗ ಕೊಪ್ಪ ಸರ್ಕಲ್‌ನಿಂದ ಕಾರಿನಿಂದಿಳಿದು ಡಾ॥ ರಾಮಭಟ್ಟರನ್ನು ಮಾತಾಡಿಸಿಕೊಂಡು, ಮುಂದೆ ಕಾಲ್ನಡಿಗೆಯಲ್ಲಿಯೇ ತೀರ್ಥಹಳ್ಳಿ ತಾಲ್ಲೂಕು ಕಛೇರಿ ಕಡೆಗೆ ಬರುತ್ತಿದ್ದರು.

ನಾನು ಆಗ ತೀರ್ಥಹಳ್ಳಿಯ ಸರ್ಕಾರಿ ಪ್ರೌಢಶಾಲೆಯ ವಿದ್ಯಾರ್ಥಿ. ಮಂತ್ರಿಗಳನ್ನು ನೋಡಲು ನಾವು ಹಲವಾರು ಹುಡುಗರು ಈಗಿನ ತಾಲ್ಲೂಕು ಪಂಚಾಯ್ತಿ ಕಛೇರಿ ಎದುರಿಗೆ ಟಾರ್ ರಸ್ತೆಯ ಇಕ್ಕೆಲದಲ್ಲಿ ಸಾಲಾಗಿ ನಿಂತಿದ್ದೆವು. ಮಂತ್ರಿಗಳನ್ನು ಕರೆತರುತ್ತಿದ್ದವರಲ್ಲಿ ಮುಂಚೂಣಿಯಲ್ಲಿದ್ದು, ಅಂದಿನ ತಾಲ್ಲೂಕು ಕಾಂಗ್ರೆಸ್ಸಿನ ಗಣ್ಯರಾಗಿದ್ದ ಬಿಳುವೆಯ ದಿ॥ ಶ್ರೀ ಬಿ.ಎನ್.ಶಂಕರಪ್ಪನವರು. ಸಾಲಿನಲ್ಲಿ ನಿಂತಿದ್ದ ನಮ್ಮನ್ನೆಲ್ಲ ನೋಡಿದ ಅವರು, ನನ್ನನ್ನು ಹಿಡಿದು ಮುಂದಕ್ಕೆ ಕರೆತಂದು ನಿಲ್ಲಿಸಿ, ಶ್ರೀ ಕಡಿದಾಳರಿಗೆ ಇವನು ಲಿಂಗಪ್ಪ ಅಂತ ಹೈಸ್ಕೂಲ್ ವಿದ್ಯಾರ್ಥಿ. ನಮ್ಮ ರಾಮು ಮಗ, ಚೆನ್ನಾಗಿ ಮಾತಾಡ್ತಾನೆ ಎಂದು ಪರಿಚಯಿಸಿದರು. ಶ್ರೀ ಕಡಿದಾಳರು ಹೌದೇನು ಆಗಲಿ ಚೆನ್ನಾಗಿ ಓದಬೇಕಪ್ಪ ಎಂದು ನನ್ನ ಭುಜ ತಟ್ಟಿ ನಗುತ್ತಾ ಮುಂದೆ ನಡೆದರು.

ನನಗೆ ಅಂದು ಆಕಾಶವೇ ಕಳಚಿ ನನ್ನ ಮೇಲೆ ಬಿದ್ದಂತಾಗಿತ್ತು. ಏಕೆಂದರೆ ನನ್ನ ತಂದೆ 'ರಾಮು' ರಾಮಣ್ಣ 'ರಾಮಪ್ಪ' ಎಂದೆಲ್ಲ ಕರೆಯುತ್ತಿದ್ದ ಅವರು ಬಸ್‌ಸ್ಟ್ಯಾಂಡ್ ಕೂಲಿ ಹಮಾಲಿಯಾಗಿದ್ದರು. ಅಂಥವರ ಮಗನಾದ ನನ್ನನ್ನು ಮಂತ್ರಿಗಳು ಭುಜತಟ್ಟಿ ಮಾತಾಡಿದ್ದು, ಅವರಿಗೆ ದಿ॥ ಬಿ.ಎನ್. ಶಂಕರಪ್ಪನವರು ದಿ॥ ಡಾ. ಬಿ.ಎನ್.ರಂಗಪ್ಪನವರ ತಮ್ಮ) ಎಲ್ಲರನ್ನು ಬಿಟ್ಟು ನನ್ನನ್ನು ಪರಿಚಯಿಸಿದ್ದು – ಇವೆಲ್ಲ ನನಗೆ ಕನಸಿನಲ್ಲಿ ಆದಂತೆ ಆಗಿತ್ತು.

ಪ್ರೌಢಶಾಲೆಯಲ್ಲಿ ಎಸ್.ಎಸ್.ಎಲ್‌ಸಿ ಪಾಸಾಗಿ, ಶಿವಮೊಗ್ಗೆಯಲ್ಲಿ ಆಗಿದ್ದ ಇಂಟರ್‌ಮಿಡಿಯೇಟ್‌ನ್ನು ಮುಗಿಸಿ, ಗೆಳೆಯ – ದಿ॥ ಪೂರ್ಣಚಂದ್ರ ತೇಜಸ್ವಿಯವರ ಹಠದಿಂದ ಮೈಸೂರಿಗೆ ಹೋಗಿ ಅಲ್ಲಿ ಮಹಾರಾಜರವರ ಕಾಲೇಜಿನಲ್ಲಿ ಬಿ.ಎ. ಮುಗಿಸಿದೆ.

ನಂತರ ಕನ್ನಡ ಚಳುವಳಿಯನ್ನು ರಾಜಾಧಾನಿ ಬೆಂಗಳೂರಲ್ಲಿ ಮಾಡಬೇಕೆಂಬ ಛಲದಿಂದ ಬೆಂಗಳೂರಿಗೆ ಹೋಗಿ ಅಲ್ಲಿ ಸರ್ಕಾರಿ ಲಾ ಕಾಲೇಜಿಗೆ ಸೇರಿದೆ. ಅಷ್ಟರಲ್ಲಿ ನಾನು ದಿ॥ ಗೋಪಾಲಗೌಡ ಶಾಂತವೇರಿಯವರ ಪ್ರಭಾವಕ್ಕೆ ಒಳಗಾಗಿ ಸೋಷಿಯಲಿಸ್ಟ್ ಪಾರ್ಟಿಯವನು ಆಗಿದ್ದೆ. ಪೂಜ್ಯ ಗೋಪಾಲಗೌಡರು ನನಗೆ ಅಲ್ಲಿ ಕಾರ್ಪೋರೇಷನ್ ಮೇಯರ್, ಉಪಮೇಯರ್ ಎಲ್ಲರಿಗೂ ಹೇಳಿ ಕಾರ್ಪೋರೇಷನ್ ಪ್ರೌಢಶಾಲೆಯಲ್ಲಿ ಕನ್ನಡ ಪಂಡಿತನ ಕೆಲಸಕೊಡಿಸಿದರು.

ಕೆಲಸ ಸಿಕ್ಕಮೇಲೆ ಅವರ ಅಣತಿಯಂತೆ ನಾನು ಬೆಂಗಳೂರಿನ ಸಿಟಿ–ವೈ.ಎಂ.ಸಿ.ಎ. ನಲ್ಲಿ ಬಾಡಿಗೆ ಕೋಣೆ ಮಾಡಿಕೊಂಡು ವಾಸಿಸುತ್ತಿದ್ದೆ. ಮೂರನೇ ಮಹಾಚುನಾವಣೆಯಲ್ಲಿ ಪೂಜ್ಯ ಶಾಂತವೇರಿಯವರು ಪುನಃ ತೀರ್ಥಹಳ್ಳಿ ಕ್ಷೇತ್ರದಿಂದ ಸೋಷಲಿಸ್ಟ್ ಪಾರ್ಟಿಯ ಉಮೇದುವಾರರಾಗಿ, ಶಾಸಕರಾಗಿ, ಶಾಸಕರ ಭವನದ ಕೊಠಡಿ ಸಂಖ್ಯೆ ೨೨೭ ರಲ್ಲಿ ತಂಗಿದ್ದರು.

ಆಗ ನಿತ್ಯವೂ ನನ್ನ ಶಾಲೆಯ ಕೆಲಸ ಮುಗಿದೊಡನೆ ಶಾಸಕರ ಭವನಕ್ಕೆ ಹೋಗಿ ಶ್ರೀ ಗೌಡರೊಡನಿದ್ದು ರಾತ್ರಿ ನನ್ನ ಕೊಠಡಿಗೆ ಬರುತ್ತಿದ್ದೆ. ಹಾಗೆಯೇ ಆಗಾಗ, ವಾರಕ್ಕೆ ೨–೩ ಸಾರಿಯಾದರೂ ಶಾಂತಿನಗರದಲ್ಲಿದ್ದ ಪೂಜ್ಯ ಕಡಿದಾಳರ ಮನೆಗೂ ಹೋಗಿ ಬರುತ್ತಿದ್ದೆ.

ಇದ್ದಕ್ಕಿದ್ದಂತೆ ಒಂದು ದಿನ ಶ್ರೀ ಕಡಿದಾಳರು ನನ್ನನ್ನು ಕುರಿತು ಏನೋ ಲಿಂಗಪ್ಪ ನಿನ್ನ ಗುರು ಗೋಪಾಲ ಮದುವೆ ಆಗ್ತಾನೆನೋ? ನನ್ನ ಸ್ನೇಹಿತರು ಬಳ್ಳಾರಿಯ ಡಾ॥ ನಾಗನಗೌಡರು ಮೊನ್ನೆ ಬಂದಿದ್ದರು. ಅವರ ಸ್ನೇಹಿತರು ರಾವ್ ಬಹದ್ದೂರ್ ಆರ್.ಎಲ್. ಪಾಟೀಲ್ ಅನ್ನೋ ವಕೀಲರು ಧಾರವಾಡದಲ್ಲಿದ್ದಾರಂತೆ ಅವರ ಮಗಳು ಸರ್ಕಾರಿ ನೌಕರಿಯಲ್ಲಿದ್ದಾರಂತೆ. ಅವರು ಹೇಳಿದರು– ಕೇಳಿ ಹೇಳಿ ಅಂತ. ನಾನು ಕೇಳ್ತೇನೆ ಅಂತ ಹೇಳಿದ್ದೇನೆ. ಆದರೆ ಮದುವೆ ಆದರೂ ಅವರು ಸರ್ಕಾರಿ ನೌಕರಿ ಕಡೇತನಕ ಬಿಡಬಾರದು ಅಂತ ಕೂಡ ಹೇಳಿಕಳಿಸಿದ್ದೇನೆ. ನಿನ್ನ ಗುರು ಹತ್ತಿರ ಕೇಳಿ, ಬಂದು ಹೇಳು" ಎಂದರು. "ಆಗಲಿ" ಎಂದೆ ನಾನು.

ಮರುದಿನ ಶಾಸಕಭವನಕ್ಕೆ ಹೋಗಿ ಶ್ರೀ ಗೌಡರಿಗೆ ವಿಷಯ ತಿಳಿಸಿದೆ. ಅವರು ಕಡಿದಾಳರು ನನಗೆ ಮದುವೆ ಮಾಡಿಸ್ತಾರಂತ? ಯಾರಂತೆ? ಎಲ್ಲಂತೆ? ಎಂದು ಹೀಗೆಲ್ಲ ಕೇಳಿದರು. ನಾನು ಶ್ರೀ ಕಡಿದಾಳರು ಹೇಳಿದ್ದನ್ನೆಲ್ಲ ಹೇಳಿದೆ. ಒಂದು ೩–೪ ದಿನ ಬಿಟ್ಟು ನಾನು ಕಡಿದಾಳರ ಮನೆಗೆ ಹೋದಾಗ ಅವರು "ಏನು ಹೇಳಿದನೋ

ನಿನ್ನ ಗುರು" ಎಂದು ಕೇಳಿದರು. "ಇನ್ನು ಏನೂ ಹೇಳಲಿಲ್ಲ" ಎಂದೆ. ಹೀಗೆ ಕೆಲವು ದಿನಗಳು ಮುಗಿದಾದ ಬಳಿಕ ಶ್ರೀ ಗೌಡರು ಒಂದು ಅಂಚೆ ಕಾರ್ಡನ್ನು ನನ್ನ ಕೈಗೆ ಕೊಟ್ಟು ಓದಿನೋಡು ಎಂದರು. ಓದಿದೆ. ಅದು ಹಿಂದಿಯಲ್ಲಿ ಪ್ರಿಯ ಗೋಪಾಲ್ ತುಮ್ ಸುಖಿ ರಹೋ- ರಾಮಮನೋಹರ ಲೋಹಿಯಾ ಎಂದು ಇತ್ತು. ನಾನು ಓದಿ ಅವರ ಮುಖವನ್ನು ಸಂತೋಷದಿಂದ ನೋಡಿದೆ. ಅವರು "ಸರಿ, ಗುರುಗಳ ಅಪ್ಪಣೆ ಸಿಕ್ಕಿದೆ. ಮುಂದಿನ ಕಾರ್ಯಕ್ರಮಗಳನ್ನು ನಡೆಸಲು ಕಡಿದಾಳರಿಗೆ ತಿಳಿಸು" ಎಂದರು. ಮರುದಿನವೇ ವರದಿ ಒಪ್ಪಿಸಿದೆ. ಕೂಡಲೇ ಪೂಜ್ಯ ಕಡಿದಾಳರು ಒಳಗೆ ಹೋಗಿ ಎಲ್ಲೆಲ್ಲಿಗೋ ದೂರವಾಣಿ ಮೂಲಕ ಮಾತಾಡಿ ಹೊರಬಂದು ಮುಂದಿನ ಒಂದು ದಿನ, ದಿನಾಂಕವನ್ನು ಹೇಳಿ, ಅಂದು ಹೆಣ್ಣು ನೋಡಲು ಹೋಗೋಣ ಅಂತ ಹೇಳು" ಎಂದರು. ಅವರು ಹೇಳಿದ ದಿನ ಶ್ರೀ ಕಡಿದಾಳರೊಂದಿಗೆ ಗೌಡರು ನಾನು ರೈಲಿನಲ್ಲಿ ಹೊರಟು, ಹುಬ್ಬಳ್ಳಿ ತಲುಪಿ ಅಲ್ಲಿ ತೀರ್ಥಹಳ್ಳಿಯ ಕಂಟ್ರಾಕ್ಟರ್ ಚೆಲುವ ಶೆಟ್ಟರ ಮಗ, ಶ್ರೀ ಗೋಪಾಲಗೌಡರ ಸಹಪಾಠಿ ಶಿವರಾಮ ಶೆಟ್ಟರ ಮನೆಗೆ ಹೋದೆವು, ಅಲ್ಲಿ ಸ್ನಾನ ಕಾಫಿ ಮಾಡಿಸಿ ಧಾರವಾಡ ಸರ್ಕಾರಿ ಅತಿಥಿ ಗೃಹಕ್ಕೆ ಬಂದೆವು. ಅಲ್ಲಿಂದ ಶ್ರೀ ಪಾಟೀಲರ ಮನೆಗೆ ಮರುದಿನ ಬೆಳಿಗ್ಗೆ ಹೋಗುವ, ಹೆಣ್ಣನ್ನು ನೋಡುವ ಸಮಯ ನಿಗದಿಯಾಯಿತು. ಎಲ್ಲರೂ ಹೋದೆವು. ಗೌಡರು ಹೆಣ್ಣು ನೋಡಿದ್ದಾಯಿತು? ಅಲ್ಲಿ ಫಲಹಾರ ಮುಗಿಸಿ, ಅತಿಥಿ ಗೃಹಕ್ಕೆ ಬಂದೆವು. ಅಷ್ಟರಲ್ಲಿ ಅಂದಿನ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಡಾ॥ ಡಿ.ಸಿ.ಪಾವಟೆಯವರು, ಅತಿಥಿ ಗೃಹಕ್ಕೆ ಬಂದು ಶ್ರೀ ಕಡಿದಾಳರನ್ನು ಶ್ರೀ ಗೌಡರನ್ನು, ಜೊತೆಯಲ್ಲಿದ್ದ ನನ್ನನ್ನು, ಶಿವರಾಮ ಶೆಟ್ಟರನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಆತಿಥ್ಯ ನೀಡಿದರು. ಅಂದೇ ಬೆಂಗಳೂರಿಗೆ ಹಿಂದಿರುಗಿ ಬಂದೆವು.

ಅದಾದ ಕೆಲವೇ ದಿನಗಳಲ್ಲಿ ಮದುವೆಯ ದಿನಾಂಕ ನಿಶ್ಚಿತವಾಯಿತು. ಅದರ ಹಿಂದಿನ ದಿನ ರೈಲಿನಲ್ಲಿ ನಾವೆಲ್ಲ ಧಾರವಾಡಕ್ಕೆ ಹೋದೆವು. ನಮ್ಮ ಜಿಲ್ಲೆ, ತಾಲ್ಲೂಕು, ಊರುಗಳಿಂದ ಹಲವರು ಬಂದಿದ್ದರು. ಧಾರವಾಡದ ವಿದ್ಯಾವರ್ಧಕ ಸಮಿತಿಯ ಸಭಾಂಗಣದಲ್ಲಿ, ಉಪನೊಂದಣಾಧಿಕಾರಿಯನ್ನು ಕರೆಸಿ (ಸಬ್ ರಿಜಿಸ್ಟ್ರಾರ್) ಅವರ ಮುಂದೆ ಹಾರಗಳನ್ನು ಗಂಡು ಹೆಣ್ಣು ಪರಸ್ಪರ ಕೊರಳಿಗೆ ಹಾಕಿ; ರಿಜಿಸ್ಟರ್‌ನಲ್ಲಿ ಸಹಿ ಹಾಕಿದರು. ಗಂಡಿನ ಕಡೆ ಸಾಕ್ಷಿದಾರರಾಗಿ ಶ್ರೀ ಕಡಿದಾಳರು, ಶ್ರೀ ಶಿವರಾಮ ಶೆಟ್ಟರು ಹೆಣ್ಣಿನ ಕಡೆ ಅವರ ತಂದೆ ಶ್ರೀ ಪಾಟೀಲರು ಮತ್ತು ಅವರ ಸೋದರರೊಬ್ಬರು ಸಹಿ ಹಾಕಿದರು.

ಹೀಗೆ ಶ್ರೀ ಗೋಪಾಲಗೌಡ ಶಾಂತವೇರಿಯವರ ಶ್ರೀಮತಿ ಸೋನಕ್ಕನವರ ವಿವಾಹ ಮಾಡಿಸಿದವರು ಶ್ರೀ ಕಡಿದಾಳರು. ೧೯೭೨ರ ಹೊತ್ತಿಗೆ ಗೋಪಾಲಗೌಡರಿಗೆ ಆರೋಗ್ಯ ತೀರ ಹದಗೆಟ್ಟು, ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸಲಾಯಿತು. ಆಗ ಚುನಾವಣೆ ಸಮಯ–ತೀರ್ಥಹಳ್ಳಿ ಕ್ಷೇತ್ರದಿಂದ, ನಮ್ಮ ಸೋಷಲಿಸ್ಟ್ ಪಾರ್ಟಿಯಿಂದ ಸ್ಪರ್ಧಿಸಲು, ಯಾರನ್ನೆಲ್ಲ ಕೇಳಿಕೊಂಡರೂ ಒಪ್ಪಲಿಲ್ಲ. ಆಗ ಅನಿವಾರ್ಯವಾಗಿ ನಾನೇ ಸ್ಪರ್ಧಿಸಬೇಕಾಯಿತು. ಚುನಾವಣೆ ನಡೆಯಿತು. ಫಲಿತಾಂಶ ಹೊರಬಂದಿತು. ಆಗ ಪೂಜ್ಯ ಗೋಪಾಲ ಗೌಡರ ಹೆಸರಿನ ಬಲದಿಂದ ನಾನು ಗೆದ್ದು ಶಾಸಕನಾದೆ.

ಶಾಸಕನಾದ ಮೇಲೆ, ಅಲ್ಲಿ ವಿಧಾನಸಭೆಯಲ್ಲಿ ಬರುವ ವಿಧೇಯಕಗಳ ಬಗ್ಗೆ ಇನ್ನಿತರ ವಿಷಯಗಳ ಬಗ್ಗೆ, ನಾನು ಸಹಾ ಸಂಜೆ ಶ್ರೀ ಕಡಿದಾಳರಲ್ಲಿಗೆ ಹೋಗಿ ವಿಷಯ ತಿಳಿಸುತ್ತಿದ್ದೆ. ಅವರು ಪಕ್ಕದ ಅವರ ಕೊಠಡಿಯೊಳಗೆ ನನ್ನನ್ನು ಕರೆದುಕೊಂಡು ಹೋಗಿ, ಪ್ರತಿಯೊಂದು ವಿಷಯದ ಬಗ್ಗೆಯೂ ಏನೇನು ಹೇಳಬೇಕು. ಹೇಗೆ ಹೇಳಬೇಕು ಎಂದು ತಿಳಿಸುತ್ತಿದ್ದು, ನಾನು ಅದನ್ನೆಲ್ಲ ಟಿಪ್ಪಣಿ ಮಾಡಿಕೊಂಡು ಬಂದು ಮರುದಿನ ವಿಧಾನ ಸಭೆಯಲ್ಲಿ ಭಾಷಣ ಮಾಡುತ್ತಿದ್ದೆ. ಅಂದಹಾಗೆ, ಚುನಾವಣೆ ಮುಗಿದ ಕೆಲವು ದಿನಗಳಲ್ಲಿ ಶ್ರೀ ಕಡಿದಾಳರು ಊರಿಗೆ ಬಂದಿದ್ದರೆಂದು ತಿಳಿದು, ಅವರ ಆಶೀರ್ವಾದ ಬೇಡಲು ಗೆಳೆಯರೊಂದಿಗೆ ನಾನು ಹೋದೆ. ಅವರಿಗೆ ಸಾಷ್ಟಾಂಗ ನಮಸ್ಕರಿಸಿದೆ. ಅವರು ಲಿಂಗಪ್ಪ ನೀನು ಎಂ.ಎಲ್.ಎ. ಆಗಿದ್ದೀಯಾ. ನಮ್ಮ ರಾಮು ಮಗ, ನೀನು ಚೆನ್ನಾಗಿ ಕೆಲಸ ಮಾಡು, ಯಾರೇ ದುಡ್ಡು–ಕಾಸು ಕೊಟ್ಟರೂ ಮುಟ್ಟಬೇಡ. ಮಂತ್ರಿಗಳಿಗೆ  ಬೇಕಾದಷ್ಟು ಟೀಕೆ ಮಾಡು ಪರವಾಗಿಲ್ಲ. ಆದರೆ ಸರ್ಕಾರಿ ಅಧಿಕಾರಿಗಳನ್ನು ಬಯ್ಯಬೇಡ. ಅವರು ೩೫ ವರ್ಷ ಅಧಿಕಾರದಲ್ಲಿರುತ್ತಾರೆ. ನಾವು ೫ –೫ ವರ್ಷ ಅಷ್ಟೇ. ಈ ಅಧಿಕಾರಿಗಳೇ ಜನರಿಗೆ ಹಚ್ಚಿಕೊಟ್ಟು ಬೆಂಕಿ ಹಚ್ಚುವವರು. ನೆನಪಿರಲಿ ಎಂದು ಬುದ್ಧಿ ಹೇಳಿ ಕಳಿಸಿಕೊಟ್ಟಿದ್ದರು. ಅದನ್ನು ನಾನು ಕಡೆವರೆಗೂ ಪಾಲಿಸಿದ್ದೇನೆ ಎಂಬ ತೃಪ್ತಿ ನನಗಿದೆ. ಆ ಬಗ್ಗೆ ಹೆಮ್ಮೆಯೂ ಇದೆ.

ಪೂಜ್ಯ ಕಡಿದಾಳರ ಕೊನೆಯ ದಿನಗಳವರೆಗೆ ಆಗಾಗ ಅವರಲ್ಲಿಗೆ ಹೋಗಿ ಬರುತ್ತಿದ್ದವರು ನಾವೇ ಕೆಲವರು ಮಾತ್ರ. ಆಗ ಅವರು ಹೇಳುತ್ತಿದ್ದರು. ನೋಡು ಅಧಿಕಾರ ಇದ್ದಾಗ ಇಲ್ಲಿ ಎಷ್ಟು ಜನ ಇರುತ್ತಿದ್ದರು. ಈಗ ನೀವೇ ನಾಲ್ಕಾರು ಜನ ಆಗಾಗ ಬರೋರು. ಸಕ್ಕರೆ ಇದ್ದಲ್ಲಿ ಇರುವೆಗಳ ಸಾಲು ಸಾಲು ಇರುತ್ತೆ. ಸಕ್ಕರೆ ಇಲ್ಲದಾಗ, ಇರುವೆಗಳನ್ನು ನಾವೇ ಹುಡುಕಿದರೂ ಸಿಗೋದಿಲ್ಲ ತಿಳಿದಿರು. ಇದೆಲ್ಲ ಇಂದಿನ ಸಮಾಜ ಎನ್ನುತ್ತಿದ್ದ  ಅವರು ನನ್ನ ಗುರುಗಳ (ಗೋಪಾಲ ಗೌಡರ)

ಗುರುಗಳಾಗಿದ್ದರು. ನನ್ನ ಓರೆ ಕೋರೆಗಳನ್ನು ಯಾರಿಂದಲೋ ತಿಳಿದು, ನನಗೆ ಚೆನ್ನಾಗಿ ಅನ್ನುತ್ತಿದ್ದರು. ಬುದ್ಧಿ ಹೇಳುತ್ತಿದ್ದರು. ನನ್ನನ್ನು ತಮ್ಮ ಮನೆಯ ಒಬ್ಬ ಹುಡುಗನಂತೆ ನಡೆಸಿಕೊಂಡಿದ್ದರು. ನನಗೆ ಅವರು ಹಲವು ಹತ್ತು ವಿಷಯಗಳಲ್ಲಿ ಮಾರ್ಗದರ್ಶಕರಾಗಿ ಆದರ್ಶವಾಗಿದ್ದಾರೆ. ನನ್ನೂರು ಕೋಣಂದೂರಿನಲ್ಲಿ ಶಿವಮೊಗ್ಗದ ರಾಷ್ಟ್ರೀಯ ಶಿಕ್ಷಣ ಸಮಿತಿಯವರು ಆರಂಭಿಸಿದ ಪ್ರೌಢಶಾಲೆಯ ಉದ್ಘಾಟನೆ ಮೈಸೂರಿನ ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರನ್ನು ಕಡಿದಾಳರು ಒಪ್ಪಿಸಿ ಕರೆದುಕೊಂಡು ಬಂದಿದ್ದರು. ಆ ಸಮಾರಂಭದ ಅಧ್ಯಕ್ಷತೆಯನ್ನು ಕಡಿದಾಳರು ವಹಿಸಿದ್ದರು. ಮತ್ತೆ ಕೋಣಂದೂರಿನಲ್ಲಿ ಅದೇ ಸಂಸ್ಥೆಯವರು ಕಡಿದಾಳರ ಶತಮಾನೋತ್ಸವ ವರ್ಷದಲ್ಲಿ ಅವರ ಹೆಸರಿನಲ್ಲಿ ಡಿ.ಇಡಿ. ಕಾಲೇಜನ್ನು ಸ್ಥಾಪಿಸಿರುವುದು ಸೂಕ್ತ ಸ್ಮರಣೆಯೇ ಆಗಿದೆ.

ಅವರ ಕಡೆಯ ದಿನಗಳಲ್ಲಿ ಶ್ರೀ ಜಯಪ್ರಕಾಶ್ ನಾರಾಯಣರ ಅವರ ಮಗನ ಹೆಸರು ಜಯಪ್ರಕಾಶ್ ಸಂಪೂರ್ಣ ಕ್ರಾಂತಿಯಬಗ್ಗೆ ಅಭಿಮಾನಿಗಳಾಗಿದ್ದರು "ನವ ನಿರ್ಮಾಣ ಕ್ರಾಂತಿ"ಯ ಸಭೆಯ ಉದ್ಘಾಟನೆಯನ್ನು (ಕರ್ನಾಟಕ ಶಾಖೆಯ) – ದಿನಾಂಕ : ೧೬–೦೨–೧೯೭೪ ರಂದು ಮಾಡಿದರು. ಹಾಗೇ ' ಜೆಪಿ ಸ್ವಾಗತ ಸಮಿತಿ' ಯ ಅಧ್ಯಕ್ಷರೂ ಆಗಿದ್ದರು.

ಅವರು 'ನವನಿರ್ಮಾಣ ಕ್ರಾಂತಿ'ಯ ಉದ್ಘಾಟನಾ ಭಾಷಣದಲ್ಲಿ ಅವರಲ್ಲಿದ್ದ ಎಲ್ಲಾ ಸತ್ಯ ನಿಷ್ಠೆ ನಿರ್ದಾಕ್ಷಿಣ್ಯ, ಪ್ರಾಮಾಣಿಕತೆಗಳನ್ನು ಉದ್ಘೋಷಿಸಿ ನಮಗೆಲ್ಲ, ಮುಂದಿನ ಯುವಜನರಿಗೆಲ್ಲ ಆದರ್ಶ ಮತ್ತು ಗುರಿಗಳನ್ನು ಸಾರಿ, ಅಮರರಾದರು. ಅವರ ನಾಲ್ಕು ಪುಸ್ತಕಗಳಲ್ಲಿ, ಕಾದಂಬರಿಗಳಲ್ಲಿ ಹೇಳಿರುವುದೆಲ್ಲದರ ಸಾರ ಸಾರಾಂಶ ಈ ಉದ್ಘಾಟನಾ ಭಾಷಣದಲ್ಲಿದೆ ಎಂದರೆ ತಪ್ಪಾಗಲಾರದು.

ಮಂತ್ರಿ, ಮುಖ್ಯ ಮಂತ್ರಿಗಳಾಗಿ – ನಂತರ ಸಕ್ರಿಯ ರಾಜಕಾರಣದಿಂದ ದೂರವಿದ್ದರೂ ಕೂಡ ಅವರು ಕಡೆ ತನಕ 'ಕಾಯಕವೇ ಕೈಲಾಸ' ವೆಂಬಂತೆ ವಕೀಲರಾಗಿ ಹೈಕೋರ್ಟಿನಲ್ಲಿ ಕೆಲಸ ಮಾಡುತ್ತಿದ್ದರು. ಪಾರದರ್ಶಕ ಪ್ರಾಮಾಣಿಕತೆಗೆ, ಕಾಯಕವೇ ಕೈಲಾಸವೆಂಬುದಕ್ಕೆ ಪೂಜ್ಯ ಕಡಿದಾಳರು, ನಾವು ಕಂಡ ಜೀವಂತ ಸಾಕ್ಷಿಯಾಗಿದ್ದಾರೆ.

# ಮಂಜಪ್ಪಣ್ಣಯ್ಯ

– ಕಡಿದಾಳು ಶಾಮಣ್ಣ

ಕಡಿದಾಳು ಎಂದಾಕ್ಷಣ ಅದೊಂದು ಊರಿನ ಹೆಸರಾದರೂ ಅಲ್ಲಿ ಇದ್ದವು ಎರಡೇ ಮನೆಗಳು. ಒಂದು ದೊಡ್ಡ ಕಡಿದಾಳು ಮತ್ತೊಂದು ಸಣ್ಣ ಕಡಿದಾಳು. ನಾನು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅರ್ಥಮಾಡಿಕೊಂಡಂತೆ ಕೇಳಿ ತಿಳಿದುಕೊಂಡಂತೆ ನಾನು ಹುಟ್ಟಿ ಬೆಳೆದ ಮನೆ ದೊಡ್ಡ ಕಡಿದಾಳೆಂತಲೂ ಕಡಿದಾಳು ಮಂಜಪ್ಪನವರದ್ದು ಸಣ್ಣ ಕಡಿದಾಳೆಂತಲೂ ಬೇರೆಯವರಿಂದ ಕೇಳಿ ತಿಳಿದುಕೊಂಡಿದ್ದೆ. ಮೊದಲು ಎಲ್ಲರೂ ದೊಡ್ಡ ಕಡಿದಾಳಿನಲ್ಲಿದ್ದವರು. ನಂತರ ಒಂದು ಬುಡಕಟ್ಟಿನವರು ಸಣ್ಣ ಕಡಿದಾಳಿಗೆ ವರ್ಗಾಯಿಸಿಕೊಂಡು ಬದುಕಲು ಶುರುಮಾಡಿದರೆಂದು ತಿಳಿದುಕೊಂಡಿದ್ದೇನೆ. ಅನಂತರದಲ್ಲಿ ಈ ಮನೆಯವರು ಆ ಮನೆಯವರಿಗೆ ಆಚೆಕಡಿದಾಳಿನವರೆಂತಲೂ, ಈ ಮನೆಯವರಿಗೆ ಈಚೆ ಕಡಿದಾಳಿನವರೆಂತಲೂ ಕರೆಯಲು ಶುರುಮಾಡಿ ಸಣ್ಣ ದೊಡ್ಡ ಕಡಿದಾಳೆನ್ನುವುದು ಪರಸ್ಪರರಿಗೆ ಮರೆತೇ ಹೋಗಿರುತ್ತದೆ. ಒಂದೇ ಕುಟುಂಬದ ಎರಡು ಹಿಸೆದಾರರೆಂತಲೇ ತಿಳಿದುಕೊಂಡಿರುವೆವು. ಪ್ರೀತಿ, ವಿಶ್ವಾಸ, ಹೋಗೋದು ಬರೋದು ಎಲ್ಲದರಲ್ಲಿಯೂ ಕಡಿದಾಳು ಮಂಜಪ್ಪನವರ ತಮ್ಮ ನಾಗಪ್ಪಗೌಡ್ರಿಗೆ ತುಂಬಾ ಆಸಕ್ತಿ. ಅವರಿಗೆ ನನ್ನ ತಂದೆಯ ಅಕ್ಕನ ಮಗಳಾದ ರತ್ನಮ್ಮನವರನ್ನು ಕೊಟ್ಟು ಮದುವೆಯಾದ ಮೇಲಂತೂ ಪರಸ್ಪರ ಎರಡೂ ಮನೆಯವರೂ ಎಲ್ಲದರಲ್ಲಿಯೂ ಮತ್ತೂ ಹತ್ತಿರದವರಾದೆವು.

ಕಡಿದಾಳು ಮಂಜಪ್ಪಣ್ಣಯ್ಯನವರನ್ನು (ನಾನು ಹಾಗೇ ಕರೆಯುತ್ತಿದ್ದೆ) ಕುರಿತು ಗ್ರಂಥ ಒಂದನ್ನು ತರುವಾಗ ಮನೆಯವನಾಗಿ ಕೆಲವು ನೆನಪುಗಳನ್ನು ಮಾಡಿಕೊಳ್ಳಲು ಸಂತೋಷಪಡುತ್ತೇನೆ. ಹಾಗೆ ನೆನಪು ಮಾಡಿಕೊಳ್ಳುವಾಗ ನೂರಾರು ನೆನಪುಗಳು ನಾಮುಂದು ತಾಮುಂದು ಎಂದು ನೆನಪಿಗೆ ಬರುತ್ತವೆ. ಸಾಹಿತಿಯಲ್ಲದ ನನಗೆ ಅವುಗಳಲ್ಲಿ ಸೂಕ್ತವಾದ ಕೆಲವನ್ನು ಆರಿಸಿ ಬರೆದು ಕೊಡುವ ಶಿಸ್ತಿಲ್ಲದವನಾದ್ದರಿಂದ ನೂರಾರರಲ್ಲಿ ಸೂಕ್ತವಾದವನ್ನು ಹುಡುಕಿ ಬರೆಯಲು ಕಷ್ಟವಾಗುತ್ತಿದೆ. ನನಗೆ ನೆನಪಿರುವಂತೆ ಕಡಿದಾಳ್ ಮಂಜಪ್ಪನವರು ಶಿವಮೊಗ್ಗದಲ್ಲಿ ವಕೀಲಿ ಮಾಡುತ್ತಿರುವಾಗ ಆಗಾಗ ಅವರು ಊರಿಗೆ ಬರುತ್ತಿದ್ದರು. ನಾನವರನ್ನು ನೋಡಬೇಕೆಂದು ಅವರ ತಮ್ಮ ತಮ್ಮಯ್ಯ ಗೌಡ್ರ ಮಗ ಸುರೇಂದ್ರ ಮತ್ತು ಮೋಹನ ಇವರ ಜೊತೆಗೆ ಅವರ ಮನೆಗೆ ಹೋಗುತ್ತಿದ್ದೆ.

ಕಡಿದಾಳರು ಆ ಮೊದಲು ನನ್ನನ್ನು ನೋಡಿರಲಿಲ್ಲ. ನಾ ನೋಡಿದಾಗ ಕಡಿದಾಳರು ತೆಳ್ಳಗೆ, ಬೆಳ್ಳಗೆ ಇದ್ದರು. ಖಾದಿಯ ಇಸ್ತ್ರಿಮಾಡಿದ ಬಿಳಿ ಜುಬ್ಬ, ಪಂಚೆ ತೊಟ್ಟಿದ್ದರು. "ಯಾರಿವನು ರಾಮಣ್ಣನ ಮಗನೇನೋ" ಎಂದು ಮೋಹನನನ್ನು ಕೇಳಿದರು. ಅವನು ಹೌದೆಂದು ಹೇಳಿದಾಗ ನನ್ನನ್ನು ಹತ್ತಿರ ಕರೆದು ನನ್ನ ತಲೆಸವರುತ್ತ ಸ್ಕೂಲಿಗೆ ಹೋಗ್ತಿ ಏನೋ ಎಂದು ಕೇಳಿ ತಿಳಿದುಕೊಂಡರು. ನಾನೂ ಧೈರ್ಯವಾಗಿ ಉತ್ತರಿಸಿದ್ದೆ. ಈ ಮೊದಲು ಸ್ಕೂಲಿನಲ್ಲಿ ನಮ್ಮ ಮೇಷ್ಟು ಕಡಿದಾಳರ ವಿಚಾರ ತಿಳಿಸಿದ್ದರು. ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು, ಗಾಂಧಿ ಹೇಳಿದಂತೆ ಖಾದಿ ತೊಡುವವರು, ಪ್ರಾಮಾಣಿಕರು ಎಂದೆಲ್ಲ ಹೇಳಿದ್ದರು. ಯಾಕೆಂದ್ರೆ ಆ ನಮ್ಮ ಮೇಷ್ಟು ಬಯಲು ಸೀಮೆಯವರು. ಇಲ್ಲಿ ಕಡಿದಾಳು ತಮ್ಮಯ್ಯ ಗೌಡ್ರ ಮನೆಯಲ್ಲಿದ್ದುಕೊಂಡು ಶಾಲೆಗೆ ಬಂದು ಹೋಗುತ್ತಿದ್ದರು. ಆದ್ದರಿಂದ ಮಂಜಪ್ಪನವರ ವಿಚಾರ ನಮ್ಮ ಮೇಷ್ಟ್ರಿಗೆ ಚೆನ್ನಾಗಿಗೊತ್ತಿತ್ತು. ಮನೆಗೆ ಹೋಗಿ ಮಂಜಪ್ಪಣ್ಣಯ್ಯ ಮನೆಗೆ ಬಂದಿದ್ದಾರೆ. ನಾನವರನ್ನು ನೋಡಿಬಂದೆ, ಅವರೇ ಮಾತಾಡಿಸಿದರೆಂದು ನಮ್ಮ ಅಮ್ಮ ಅಪ್ಪಯ್ಯನವರಿಗೆ ತಿಳಿಸಿದಾಗ 'ಒಳ್ಳೇದು ಮಾಡಿದೆ' ಅವರು ಮನೆಗೆ ಬರೋದೆ ಕಡಿಮೆ, ಕೋರ್ಟು ಕೆಲ್ಸ ಜಾಸ್ತಿ ಅವರಿಗೆ, ಅವರು ಬಂದಾಗೆಲ್ಲ ಹೋಗಿ ಮಾತಾಡಿಸಿಕೊಂಡು ಬರಬೇಕು' ಎಂದು ಅಪ್ಪಯ್ಯ ತಿಳಿಸಿದರು. ನಾನು ಮೇಗರವಳ್ಳಿಯಲ್ಲಿ ಹೈಸ್ಕೂಲ್ ಓದುತ್ತಿದ್ದ ದಿನಗಳಲ್ಲಿ ಮೂಡುವಳ್ಳಿ ಅಣ್ಣಯ್ಯಹೆಗ್ಡೆಯವರು ಕಡಿದಾಳರನ್ನು ಯಾವುದೋ ಸಮಾರಂಭಗಳಿಗೆ ಕರೆಸಿದಾಗ, ಮಂಜಪ್ಪಣ್ಣಯ್ಯ ಬರ್ತಾರೆ ನೋಡಬೇಕು ಮಾತಾಡಿಸಬೇಕೆಂದುಕೊಂಡಿದ್ದೆ. ಆ ದಿನ ಅವರು ಕ್ಲೋಸ್ ಕಾಲರಿನ ಉದ್ದಕೋಟು ಧರಿಸಿದ್ದರು. ಅವರ ಭಾಷಣ ಮೇಗರವಳ್ಳಿಯ ಬಂಗ್ಲೆ ಉಬ್ಬಿನ ಮುಸಾಫರ್ ಖಾನೆ ಎದುರು ಬಯಲಿನಲ್ಲಿ ಹಸಿರು ಚಪ್ಪರದ ಕೆಳಗೆ ಏರ್ಪಾಡಾಗಿತ್ತು. ಆ ಜನ ಜಂಗುಳಿಯಲ್ಲಿ ನಾನು ಕಡಿದಾಳು ಮಂಜಪ್ಪಣ್ಣಯ್ಯನನ್ನು ಕಂಡು ಮಾತಾಡಿಸಲು ಸಾಧ್ಯವಾಗದೆ ದೂರದಿಂದ ನೋಡಿ ತೆಪ್ಪಗಾಗಿದ್ದೆ. ಮನಸ್ಸಿನಲ್ಲೇ ಖುಷಿ ಪಟ್ಟಿದ್ದೆ. ಮಾರನೆಯ ದಿನ ತರಗತಿಯಲ್ಲಿ ನನ್ನ ಹೆಡ್ಮಾಸ್ಟರ್ ಎನ್. ಕಿಟ್ಟಪ್ಪಗೌಡ್ರು ಬೇರೆ ಹುಡುಗರಿಗೆ ತಿಳಿಯಲೆಂದು 'ನೋಡ್ರೋ ಇವನು ಮಿನಿಸ್ಟರ್ ಮಂಜಪ್ಪನವರು ಮನೆಯವನಪ್ಪ' ಎಂದು ತಮಾಷೆ ಮಾಡಿದಾಗ ಒಳಗೊಳಗೇ ಅತ್ಯಾನಂದಗೊಂಡಿದ್ದೆ. ಅನಂತ್ರ ನಾನವರನ್ನು ಕಂಡದ್ದು ಅವರು ಮಂತ್ರಿಯಾದಾಗ. ಹಾರೋಗೊಳಿಗೆಗೆ ಅವರನ್ನು ಕರೆಸಿದ್ದರು. ಪಟೇಲ್ ಬಸಪ್ಪಗೌಡ್ರು ನನ್ನ ತಂದೆ ರಾಮಪ್ಪಗೌಡ್ರು, ಕಡಿದಾಳು ತಮ್ಮಯ್ಯಗೌಡ್ರು, ಸಸಿ ತೋಟದ ದುಗ್ಗಪ್ಪ ಗೌಡ್ರು, ನೆಂಪೆದುಗ್ಗಣ್ಣ ಗೌಡ್ರು ಕಾರ್ಯಕ್ರಮ ಏರ್ಪಾಡು ಮಾಡಿದ್ದರು. ಊರಿನ ಪ್ರಮುಖರೆಲ್ಲ

ಹಾರೋಗೊಳಿಗೆಯಲ್ಲಿ ತೀರ್ಥಹಳ್ಳಿ ಅಪ್ಪಿಯ ಓಲಗದೊಡನೆ ಮೆರವಣಿಗೆಯಲ್ಲಿ ಕರೆ ತಂದರು. ಹಾರೋಗೊಳಿಗೆ ಶಾಲೆಯ ಹತ್ತಿರ ನಿಂತಿದ್ದ ನಾನು ನನ್ನ ೧೪ ರೂಪಾಯಿಯ ಕೊಡಕ್ ಕ್ಯಾಮೆರಾದಲ್ಲಿ ಫೋಟೋ ತೆಗೆದಿದ್ದೆ. ಮಂಜಪ್ಪಣ್ಣಯ್ಯನವರೂ ಕ್ಯಾಮೆರಾಕ್ಕೆ ಪೋಸ್ ಕೊಟ್ಟು ಫೋಟೊ ತೆಗೆಸಿ ಕೊಂಡಿದ್ದರು. ಆ ಪೋಟೋ ರೆಡಿಮಾಡಿಸಿದ್ದು ತೀರ್ಥಹಳ್ಳಿಯಲ್ಲಿ. ಆ ದಿನಗಳಲ್ಲಿ ಶ್ರೀ ವಾಮನ್‌ಭಟ್ಟರ ಸ್ಟುಡಿಯೋ ಇತ್ತು. ಅಲ್ಲಿಗೆ ಹೋಗಿ ಫಿಲಂ ಡೆವಲಪ್ ಮಾಡಿಸಿ ಫೋಟೋ ಪ್ರಿಂಟಾಕಿಸಿಕೊಂಡು ಬರಲಿಕ್ಕೆ ಇಡೀ ಒಂದು ದಿನ ತೆಗೆದುಕೊಂಡಿತ್ತು. ಅದೂ ನಾನು ಇಡೀ ದಿನ ಕಾದುಕೂತು ಫೋಟೋ ಪಡೆದುಕೊಳ್ಳಬೇಕಾಯ್ತು. ಅಲ್ಲಿಂದ ನಡೆದುಕೊಂಡು ಕಡಿದಾಳಿಗೆ ಬರಬೇಕಾಗಿತ್ತು. ಅಂತೂ ಹೊಸಾ ಕ್ಯಾಮೆರಾದಲ್ಲಿ ಹೊಸಾ ಫಿಲಂ ೧೨೭, ಎಲ್ಲವು ಚೆನ್ನಾಗಿ ಬಂದಿದ್ದವು. ಊರಿಗೆ ಬಂದು ಎಲ್ಲರಿಗೂ ತೋರಿಸಿ ಕಡಿದಾಳರಿಗೂ ತೋರಿಸಿ ೧೪ ರೂಪಾಯಿ ಕ್ಯಾಮೆರದಲ್ಲಿ ಚೆನ್ನಾಗಿ ತೆಗೆದಿದ್ದಾನೆ. ಅದೂ ಮೊದಲನೆ ಸಾರಿಗೆ ಎಂದು ಬೆನ್ನು ತಟ್ಟಿದ್ದರು. ಅದೆಲ್ಲ ನೆನೆಸಿ ಈಗ ನಗು ಬರುತ್ತದೆ.

ಕಡಿದಾಳರು ಮೆರವಣಿಗೆಗೆ ಮುಜುಗರ ಪಟ್ಟುಕೊಂಡಿದ್ದರು. ನನ್ನೂರಿನಲ್ಲಿ ನನಗೆ ಅದೆಲ್ಲ ಬೇಡ ಎಂದು ಊರೊಳಗೆ ಸ್ವಲ್ಪ ದೂರ ನಡೆದುಕೊಂಡು ಬಂದಿದ್ದರು. ದಾರಿ ಬದಿ ನಿಂತಿದ್ದ ಊರಿನವರನ್ನು ಹಾಗೂ ಹರಿಜನ ಕೇರಿಯವರನ್ನು ಕರೆದು ನಮಸ್ಕಾರ ಮಾಡಿ, ಹೇಗಿದ್ದೀರಿ? ಚೆನ್ನಾಗಿದ್ದಿರೇನಪ್ಪ ಎಂದು ಮಾತನಾಡಿಸುತ್ತಾ, ಎಲ್ಲರನ್ನೂ ವಾಪಸ್ ಕಳಿಸಿ ಕಾರು ಹತ್ತಿ ಅವರು ಮನೆಗೆ ಹೋದರು. ಹಾರೋಗೊಳಿಗೆ ಬಸಪ್ಪಗೌಡ್ರು ಮೆರವಣಿಗೆ ಸರಿಯಾಗಲಿಲ್ಲವೆಂದು ನಂತ್ರ ಎಲ್ಲರಿಗೂ ಸರಿಯಾಗಿ ಬೈದರು. ಅವರು ಅಂದು ಇಡೀ ಊರೇ ಮೆರವಣಿಗೆಯಲ್ಲಿದೆ ಎಂಬ ಭ್ರಮೆಯಲ್ಲಿ ಕಡಿದಾಳರ ಜೊತೆಯಲ್ಲಿ ಹೆಜ್ಜೆ ಹಾಕುತ್ತಿದ್ದರು. ನಾ ತೆಗೆದ ಫೋಟೋ ನೋಡಿ ಇವರೇ ಕೆಲವರಿದ್ದರೆಂಬ ಸ್ಥಿತಿ ಅರ್ಥವಾಗಿದ್ದು.

ಕಡಿದಾಳರು ಮತ್ತು ಶಾಂತವೇರಿ ಗೋಪಾಲ ಗೌಡರು ಯಾವತ್ತೂ ಎದುರು ಬದರಾಗಿ ಚುನಾವಣೆಗೆ ನಿಲ್ಲುತ್ತಿರಲಿಲ್ಲ. ನಮ್ಮೂರು ಮುತ್ತೂರು ಹೋಬಳಿ. ಮೊದಲು ಕೊಪ್ಪ ಶೃಂಗೇರಿ ಕ್ಷೇತ್ರಕ್ಕೆ ಸೇರಿತ್ತು. ಕಡಿದಾಳರು ಕೊಪ್ಪ ಶೃಂಗೇರಿಯ ಕ್ಷೇತ್ರಕ್ಕೆ ಚುನಾವಣಾ ಸ್ಪರ್ಧಿಯಾಗುತ್ತಿದ್ದರು. ಶಾಂತವೇರಿಯವರು ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸುತ್ತಿದ್ದರು. ನಮ್ಮ ತಂದೆ ಚುನಾವಣೆ ಬಂದಾಗಲೆಲ್ಲ ಓಡಾಡುತ್ತಿದ್ದರೆ ಹೊರತು ನಾನು ಯಾವಾಗಲೂ ಕಾಂಗ್ರೆಸ್ ಪರ ಕೆಲಸಮಾಡಿದ್ದೇ ಇಲ್ಲ. ಶಾಂತವೇರಿಯವರ ಸಂಪರ್ಕ ಬೆಳೆದ ಮೇಲೆ ಸೋಷಲಿಸ್ಟ ಸಿದ್ಧಾಂತ ನನ್ನ ಮೇಲೆ ಪರಿಣಾಮ ಬೀರಿತು. ನನಗಾಗಲಿ, ತೇಜಸ್ವಿಗಾಗಲಿ,

ಸುಂದ್ರೇಶ್‌ರವರಿಗಾಗಲಿ ಈ ವಿಚಾರದಲ್ಲಿ ಏನೂ ಹೇಳಿದವರಲ್ಲ ಕಡಿದಾಳರರು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಗಾಂಧೀಜಿಯವರ ಜೊತೆ ಕೆಲಸ ಮಾಡಿದ್ದರಿಂದ ನಂತರವೂ ಅದೇ ಪಕ್ಷದಲ್ಲಿ ಉಳಿದು ಅದೇ ಸರ್ಕಾರದಲ್ಲಿ ಸೇರಿಕೊಂಡು ಮಂತ್ರಿ, ಮುಖ್ಯಮಂತ್ರಿ ಆದರು. ಇಲ್ಲದಿದ್ದರೆ ಅವರು ಸಮಾಜವಾದಿ ಸಿದ್ಧಾಂತದಲ್ಲಿ ಗೋಪಾಲಗೌಡರ ರೀತಿಯಲ್ಲಿ ಇರುತ್ತಿದ್ದರೆಂದು ನನ್ನ ಅನಿಸಿಕೆ. ಅವರು ಹಲವಾರು ಸಾರಿ ನನ್ನಂತವನೊಡನೆ ತನ್ನ ಜೀವನದ ಕೊನೆಯ ದಿನಗಳಲ್ಲಿ ಈ ರಾಜಕೀಯ ಭ್ರಷ್ಟಚಾರದ ವಿರುದ್ಧ ಸಂಘ ಕಟ್ಟಿ ಬೆಳೆಸಬೇಕೆನ್ನುತ್ತಿದ್ದರು. ಅದೇ ಅವರ "ಕ್ರಾಂತಿಕೂಟ" ಕಾದಂಬರಿಯ ಆಲೋಚನೆ ಇರಬೇಕು. ಕರ್ನಾಟಕದಲ್ಲಿ ಜೆ.ಪಿ.ಚಳವಳಿ ಪ್ರಾರಂಭವಾದಾಗ ಅವರು ಸ್ವಾಗತ ಸಮಿತಿ ಅಧ್ಯಕ್ಷರಾಗಿ ಇಡೀ ಕರ್ನಾಟಕವನ್ನು ಸುತ್ತಿದ್ದರು. ನಾನು ತೇಜಸ್ವಿ ಮೈಸೂರಿನಲ್ಲಿ ದೊಡ್ಡದೊಂದು 'ನೃಪತುಂಗ ಮುದ್ರಣಾಲಯ' ಎಂಬ ಪ್ರಿಂಟಿಂಗ್ ಪ್ರೆಸ್ ಮಾಡುವಾಗ ವಿದ್ಯುತ್ ಸಿಗದೇ ಸಮಸ್ಯೆಯಾಗಿತ್ತು. ಈ ವಿಚಾರವನ್ನು ಕಡಿದಾಳರು ರೆವಿನ್ಯೂ ಮಂತ್ರಿಗಳಾಗಿದ್ದಾಗ ಹೇಳಿಕೊಂಡಿದ್ದೆ. ಮೊದಲು ವಿದ್ಯುತ್ ಇಲಾಖೆಯ ಬೋರ್ಡಿನವರೊಂದಿಗೆ ಪ್ರಮಾಣಿಕವಾಗಿ ಪ್ರಯತ್ನಿಸಿ, ಆಗದಿದ್ದರೆ ನೋಡೋಣ ಎಂದು ಹೇಳಿ ಕಳಿಸಿದ್ದರು. ಅವರು ಹೇಳಿದಂತೆ ಕ್ರಮವಾಗಿ ಆ ಕೆಲಸವನ್ನು ಮಾಡಿದ್ದರಿಂದ ನಾಲ್ಕು ದಿನ ತಡವಾದರೂ ಕೆಲಸ ಆಯ್ತು. ನಾನು ಭಗವತೀ ಕೆರೆಯಲ್ಲಿ ನೀರಾವರಿ ಜಮೀನು ಕೊಳ್ಳುವಾಗಲೂ ಅವರ ಹತ್ತಿರ ಅಭಿಪ್ರಾಯ ಕೇಳಿದಾಗಲೂ "ಕಾನೂನು ಬಾಹಿರವಾಗಿ ಜಮೀನು ಕೊಳ್ಳಬೇಡ" ಎಂದು ಸಲಹೆ ಕೊಟ್ಟಿದ್ದರು.

ಕಡಿದಾಳರು ಒಮ್ಮೆ ಅಸೆಂಬ್ಲಿ ಚುನಾವಣೆಗೆ ನಿಂತಿದ್ದಾಗ ಎನ್.ಆರ್.ಪುರದ ಎನ್.ಪಿ. ಗೋವಿಂದೇಗೌಡರು ಪ್ರತಿಸ್ಪರ್ಧಿಯಾಗಿದ್ದರು. ಜೈಪುರದಲ್ಲಿ ನಡೆದ ಪ್ರಚಾರಸಭೆಯೊಂದಕ್ಕೆ ಹೋಗಬೇಕಿದ್ದಿತು. ಜೊತೆಗೆ ಯಾರಿರಲಿಲ್ಲವೆಂದು ಹಾಗೂ ರಾತ್ರಿ ವಾಪಾಸ್ ಕಡಿದಾಳಿಗೆ ಬರಬೇಕಾದ್ದರಿಂದ ನನ್ನನ್ನು ಕರೆದರು. ನಾನು ಹೋದಾಗ ನಡೆದೊಂದು ಘಟನೆ ಹೀಗಿದೆ. ಜೈಪುರ ಪ್ರಚಾರ ಸಭೆ ಮುಗಿದ ಮೇಲೆ ಹತ್ತಿರದಲ್ಲಿದ್ದ ಕೌಳಿ ಸುಬ್ಬಯ್ಯಗೌಡ್ರ ಮನೆಗೆ ರಾತ್ರಿ ಊಟಕ್ಕೆ ಹೋಗುವುದೆಂದು ನಿಗದಿಯಾಗಿತ್ತು. ಅದರಂತೆ ಹೋದಾಗ ಕೆಲವು ಮುಸ್ಲಿಂ ಬಂಧುಗಳು ಅಲ್ಲಿಗೆ ಬಂದರು. ಕಡಿದಾಳರೊಂದಿಗೆ ಓಟಿನ ವಿಚಾರವಾಗಿ ಮಾತನಾಡುತ್ತ ಚುನಾವಣೆಯಲ್ಲಿ ತಾವು ಗೆಲ್ಲಬೇಕು. ಅದಕ್ಕೆ ನಾವು ಮಸೀದಿಯ ಕೆಲವು ಸ್ನೇಹಿತರು "ಕಡಿದಾಳ್ ಮಂಜಪ್ಪನವರು ಈ ಚುನಾವಣೆಯಲ್ಲಿ ಗೆದ್ದರೆ ಎರಡು ಕುರಿಗಳನ್ನು ಹಣಗೆರೆ ದೇವರಿಗೆ ಕೊಯ್ಸಿ

ಹರಕೆ ಊಟ ಮಾಡಿಸುತ್ತೇವೆಂದು ದೇವರಲ್ಲಿ ಪ್ರಾರ್ಥಿಸಿಕೊಂಡಿದ್ದೇವೆ. ಗೆಲುವು ನಿಮ್ಮ ಕಡೆಯೆ ಆಗೇ ಆಗುತ್ತದೆ, ನೋಡಿ ಬೇಕಾದ್ರೆ' ಎಂದು ಅತ್ಯಂತ ಉಮೇದಿನಿಂದ ಕಡಿದಾಳರಿಗೆ ಸಂತೋಷವಾಗಲೆಂದು ಹೇಳಿದರು. ಆ ಮತದಾರ ಬಂಧುಗಳಿಗೆ ಕಡಿದಾಳರು ಹೀಗೆ ಎಚ್ಚರಿಸಿದರು. "ನೀವು ನನಗೇ ಎಂದ್ರೆ ಕಾಂಗ್ರೆಸ್ಸಿಗೆ ಓಟು ಕೊಟ್ಟು ಗೆಲ್ಲಿಸಬೇಕು. ಆದ್ರೆ ಕಟ್ಟಿಹಾಕಿದ ಆ ಬಡಪಾಯಿ ಹರಕೆ ಕುರಿಗಳನ್ನು ಈಗಿಂದೀಗಲೇ ಹಗ್ಗ ಬಿಚ್ಚಿ ಬಿಟ್ಟು ಹೊಡೆಯಿರಿ. ಇಂತಹ ಮೂಢನಂಬಿಕೆಗಳನ್ನು ಮಾಡಬಾರದು" ಎಂದು ಹೆದರಿಸಿ ಬುದ್ಧಿವಾದ ಹೇಳಿದ್ದು ನನಗೀಗಲೂ ನೆನಪಿನಲ್ಲಿದೆ. ಮೂಢನಂಬಿಕೆಯಲ್ಲಿ ನಂಬಿಕೆ ಇರುವವರಾಗಿದ್ದರೆ ಬೇರೆ ರೀತಿಯಾಗೇ ಅವರಿಗೆ ಪ್ರಬೋಧಿಸುತ್ತಿದ್ದರು. ಅವರು ೧೯೬೨ರಲ್ಲಿ ಬರೆದ 'ಪಂಜರವಳ್ಳಿಯ ಪಂಜು' ೧೯೬೬ರಲ್ಲಿ ಬರೆದ 'ನಾಳೆಯ ನೆಳಲು' ೧೯೭೫ ರಲ್ಲಿ ಬರೆದ 'ಕ್ರಾಂತಿ ಕೂಟ' ಕಾದಂಬರಿಗಳಲ್ಲಿ ಇಂತಹ ವಿಚಾರಗಳು ತುಂಬಾ ಬರುತ್ತದೆ. 'ನನಸಾಗದ ಕನಸು' (೧೯೯೦) ಅವರ ಜೀವನ ಚರಿತ್ರೆಯಲ್ಲಿಯೂ ಅವರ ಜೀವನದ ಅನುಭವಗಳನ್ನು ಬರೆದಿರುತ್ತಾರೆ.

ನನ್ನ ಮಿತ್ರರಾದ ಬಾಳೂರು ಮಂಜುನಾಥ್ ಸ್ವಲ್ಪ ದಪ್ಪನೆಯ ಆಳು. ಕಡಿದಾಳರ ಹೆಂಡತಿ ಲಕ್ಷ್ಮೀ ದೇವಮ್ಮನವರ ಕಡೆಯಿಂದ ನೆಂಟರಾಗಬೇಕು. ಬೆಂಗಳೂರಿನಲ್ಲಿ ಯಾವಾಗಲಾದರೂ ಕಡಿದಾಳ್‌ರವರ ಮನೆಗೆ ನಾವಿಬ್ಬರೂ ಹೋಗುತ್ತಿದ್ದುದುಂಟು. ಬಾಳೂರು ಮಂಜುನಾಥ್‌ರನ್ನು ಮುಟ್ಟಿ ನೋಡುತ್ತ ತಮ್ಮ ಜುಬ್ಬದ ತೋಳನ್ನು ಮೇಲಕ್ಕೆತ್ತಿ ಏ ಶಾಮಣ್ಣ, ಗಡ್ಡದ ಉಪಾಧ್ಯಾಯ, ಇವನದೊಂದು ತೋಳಿನಷ್ಟು ನನ್ನ ದೇಹವಿದ್ದರೆ ಈ ದೇಶವನ್ನು ಆಳುತ್ತಿದ್ದೆ ಕಣಯ್ಯ ಎಂದು ತಮಾಷೆ ಮಾಡುತ್ತಾ ನಗುತ್ತಿದ್ದರು. ನನಗೂ ಹೌದಲ್ಲ ಇಷ್ಟು ಸಣ್ಣ ದೇಹದ ಈ ಮಂಜಪ್ಪಣ್ಣಯ್ಯ ಏನೆಲ್ಲಾ ಆದರು, ಪ್ರಸಿದ್ಧ ಲಾಯರ್, ಎರಡು ಮಂತ್ರಿಮಂಡಲದಲ್ಲಿ ರೆವಿನ್ಯೂ ಮಂತ್ರಿಗಳು. ಕರ್ನಾಟಕದ ಮುಖ್ಯಮಂತ್ರಿ. ಯಾವುದೋ ಕುತಂತ್ರದಿಂದ ಅಥವಾ ನೆಣಬಲ, ಹಣಬಲದಿಂದಲ್ಲ. ಕೇವಲ ಪ್ರಮಾಣಿಕತೆಯ ಶಕ್ತಿಯಿಂದ ಮತ್ತು ಬುದ್ಧಿ ಶಕ್ತಿಯಿಂದ. ಅವರ ಕುಟುಂಬದವನಾಗಿ ನನಗೆ ಗೊತ್ತು ಅಧಿಕಾರದಿಂದ ತನಗಾಗಲೀ ಮಕ್ಕಳಿಗಾಗಲೀ ತನ್ನ ಮನೆಯವರಿಂದಾಗಲೀ ಒಂದು ಗೆರೆ ನೆಲ ಪಡೆದವರಲ್ಲ. ಮಂತ್ರಿ ಗಿರಿ ಹೋದ ಕೂಡಲೆ ಮತ್ತೆ ವಕೀಲವೃತ್ತಿ ಮಾಡಿ ಜೀವನ ನಡೆಸಿದವರು. ಮೊದಲಿನಿಂದಲೂ ಕಕ್ಷಿದಾರರುಗಳಿಂದ ಕೇಸು ನಡೆಸಿ ಹಣ ಮಾಡುವುದಕ್ಕಿಂತ ಕಕ್ಷಿದಾರರುಗಳಿಗೆ ಪಂಚಾಯ್ತಿ ಮುಖಾಂತರ ಪರಸ್ಪರ ರಾಜಿ ಮಾಡಿಸಿ ಕೇಸು ಬಗೆಹರಿಸಿ ಕಳಿಸಿ ಕೊಡುತ್ತಿದ್ದರೆಂದು

ಅವರ ಹತ್ತಿರದ ಜೂನಿಯರ್ ಲಾಯರ್‌ಗಳಿಂದ ಕೇಳಿ ತಿಳಿದಿದ್ದೇನೆ. ತೇಜಸ್ವಿ ಮುಖಂಡತ್ವದಲ್ಲಿ ಯಾವುದೋ ಒಂದು ಸರಳವಿವಾಹದ ವಿಚಾರದಲ್ಲಿ ಕಡಿದಾಳರ ಮನೆ ಎದುರು ತೀವ್ರವಾದ ಚಳುವಳಿಯನ್ನು ನಡೆಸಿದ್ದೆವು. ಅಲ್ಲಿಂದ ಒಂದು ತಿಂಗಳ ನಂತರ ಬೆಂಗಳೂರಿನಲ್ಲಿ ಕಡಿದಾಳರನ್ನು ಮಾತನಾಡಿಸಲು ಹೋಗಿದ್ದೆವು. ಅವರ "ಪಂಜರವಳ್ಳಿಯ ಪಂಜು" ಕಾದಂಬರಿಯ ಎರಡನೇ ಮುದ್ರಣ ಮಾಡಿಸಬೇಕಿತ್ತು. ಗಡ್ಡದ ಉಪಾಧ್ಯಾಯ ಈ ಮೊದಲ ಕಾದಂಬರಿಯ ೨೦೦೦ ಪ್ರತಿ ಮಾಡಿಸಿ ಕೊಡಯ್ಯ ಎಂದು ಹೇಳುತ್ತಾ, ಅದರ ಹಸ್ತ ಪ್ರತಿ ಮತ್ತು ಮುಂಗಡ ಹಣ ಕೊಟ್ಟು ಕಳಿಸಿದ್ದರು. ಹಳೆಯದನ್ನು ನೆನಪು ಮಾಡಿಕೊಂಡು ಎಲ್ಲಿ ಬಯ್ಯುತ್ತಾರೋ ಎಂದು ಹೆದರಿಕೊಂಡಿದ್ದ ನಾನು ಮತ್ತು ತೇಜಸ್ವಿ ಉಸಿರೆತ್ತದೆ ನಾಚಿಕೊಳ್ಳುವಂತಾ ಗಿತ್ತು.

ಈ ನಡುವೆ ಕಡಿದಾಳರೊಂದು ಎಚ್ಚರಿಕೆಯ ಕಿವಿ ಮಾತು ಹೇಳಿದ್ದರು. ಏನೆಂದ್ರೆ "ನೀನು ಸಮಾಜವಾದಿಯಾಗು. ಆದ್ರೆ ಸಮಾಜವಾದಿ ಪಕ್ಷದಲ್ಲಿರುವವರು ಬಹಳ ಮಂದಿ ತುಂಬಾ ಹೆಂಡ ಕುಡುಕರಾಗಿ ಬಿಡುತ್ತಾರೆ. ಅದರಿಂದ ದೂರ ಇರಲಿಕ್ಕೆ ಪ್ರಯತ್ನಿಸಿ ಎಂದಿದ್ದರು. ಸುಮಾರು ೪೦ ವರ್ಷಗಳ ಹಿಂದೆ ಆಡಿದ ಮಾತು ಅದು. ಈಗಾಗಿದ್ರೆ ಕಡಿದಾಳರು ರಾಜಕೀಯಕ್ಕೆ ಕಾಲಿಡಬೇಡಿ. ಎಲ್ಲಾ ಪಕ್ಷವೂ ಒಂದೇ ಎಂದು ಹೇಳುತ್ತಿದ್ದರೆಂದು ಅನ್ನಿಸುತ್ತೆ.

# ಸರಳ–ಸಜ್ಜನ

– ಹೊಸದುರ್ಗ ಶ್ರೀ ನಾಗರಾಜ

೧೯೪೦ರ ದಶಕದಲ್ಲಿ ನಾನು ಶಿವಮೊಗ್ಗೆಯ ಮಾಧ್ಯಮಿಕ ಶಾಲೆ (ಸ್ಪೆಷಲ್ ಕೋಚಿಂಗ್ ಇನ್‌ಸ್ಟಿಟ್ಯೂಟ್) ಮತ್ತು ಸರ್ಕಾರಿ ಹೈಸ್ಕೂಲುಗಳಲ್ಲಿ ಓದುತ್ತಿದ್ದೆ. ಆಗೆಲ್ಲ ಶಾಲೆಗೆ ನಡೆದೇ ಹೋಗುತ್ತಿದ್ದೆವು. ಅದೇ ಹೊತ್ತಿಗೆ ಕಡಿದಾಳ್ ಮಂಜಪ್ಪನವರು ತಮ್ಮ ಮನೆಯಿಂದ ಸೈಕಲ್ ಮೇಲೆ ಬಾಲರಾಜ್‌ಅರಸು ರಸ್ತೆಯಲ್ಲಿ ಕೋರ್ಟಿಗೆ ಹೋಗುತ್ತಿದ್ದರು. ಶಾಲೆಗೆ ಹೋಗುವಾಗ ನಿತ್ಯ ನಮ್ಮಗಳ ಕಣ್ಮುಂದೆ ಇದ್ದ ಚಿತ್ರ ಅದು.

ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾದ ಮೇಲೂ ಅದೇ ಸರಳತೆ, ವಿನಯ ಪ್ರದರ್ಶಿಸುತ್ತಿದ್ದರು. ಆದರೆ ಆಡಳಿತದಲ್ಲಿ ಕಟ್ಟು ನಿಟ್ಟು, ಶಿಸ್ತಿನ ಸಿಪಾಯಿ. ಮಾಜಿ ಮುಖ್ಯ ಮಂತ್ರಿಯಾದರೂ ತಮ್ಮ ವಕೀಲ ವೃತ್ತಿಯನ್ನು ನಿಲ್ಲಿಸಲಿಲ್ಲ. ಸದಾ ಕಾರ್ಯಶೀಲರಾಗಿರುತ್ತಿದ್ದರು.

ನಂತರ ನಾನು ಅವರನ್ನು ಭೇಟಿಯಾದದ್ದು ನವೆಂಬರ್ ೧೯೭೬ರಲ್ಲಿ, ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ, ಅದು ತುರ್ತು ಪರಿಸ್ಥಿತಿಯ ಕಾಲ, ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಗೆ ಸೇರಿದ ಭಾರತ್ ಅರ್ಥ್ ಮೂವರ್ಸ್ ಸಂಸ್ಥೆಯಲ್ಲಿ ದುಡಿಯುತ್ತಿದ್ದೆ. ಬಿ.ಇ.ಎಂ.ಎಲ್.ನ ಕನ್ನಡ ಸಂಘದ ಅಧ್ಯಕ್ಷನಾಗಿದ್ದೆ. ಹಿಂದಿನ ಬಾರಿ ೧೯೭೫ರ ನವೆಂಬರ್‌ನ ರಾಜ್ಯೋತ್ಸವವನ್ನು ಉದ್ಘಾಟಿಸಿದ ನಮ್ಮ ಕಂಪನಿಯ ಮುಖ್ಯಸ್ಥ ಒಂದೇ ಒಂದು ವಾಕ್ಯದಲ್ಲಿ 'ಕಡಿಮೆ ಮಾತನಾಡಿ ಹೆಚ್ಚು ದುಡಿಯಿರಿ' ಎಂದು ಹೇಳಿ ತುರ್ತು ಪರಿಸ್ಥಿತಿಯ ಸಂದೇಶವನ್ನು ಸಾರಿ ಕುಕ್ಕರಿಸಿದ್ದರು. ಆಗ ಎಲ್ಲೆಡೆ ಒಂದು ರೀತಿಯ ಭಯದ ವಾತಾವರಣ. ಹೆಚ್ಚು ಮಾತನಾಡಿದರೆ ತಮಗೇನಾಗುವುದೋ ಎಂಬ ಆತಂಕ.

ಆದರೆ ಈ ಬಾರಿ ನವೆಂಬರ್ ೧೯೭೬ರ ರಾಜ್ಯೋತ್ಸವವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸಬೇಕೆಂದು ಕಿರಿಯ ಪದಾಧಿಕಾರಿಗಳ ಬಯಕೆ. ಹಿರಿಯ ಸ್ವಾತಂತ್ರ್ಯ ಹೋರಾಟಗಾರರೊಬ್ಬರನ್ನು ಉತ್ಸವದ ಮುಖ್ಯ ಅತಿಥಿಯಾಗಿ ಕರೆಸಬೇಕೆಂದು ಅವರ ಆಶಯ. ನನಗೆ ತಕ್ಷಣ ನೆನಪಾದದ್ದು ಶ್ರೀ ಕಡಿದಾಳರ ಹೆಸರು. ಮುಖ್ಯ ಮಂತ್ರಿಯಾಗಿದ್ದ ಕಾಂಗ್ರೆಸಿಗರು, ಹಿರಿಯರು, ಸಭೆಗೆ ಬರಲು ಒಪ್ಪಿಕೊಳ್ಳುವರೋ ಇಲ್ಲವೋ ಎಂಬ ಅನುಮಾನ.

ಫೋನು ಮಾಡಿ 'ನಾನು ಹೊಸದುರ್ಗ ಶ್ರೀನಿವಾಸರಾಯರ ಮಗ' ಎಂದು ಹೇಳಿ ಕನ್ನಡ ಸಂಘದ ವಿಷಯ ತಿಳಿಸಿದ್ದೆ ತಕ್ಷಣ ತಮ್ಮ ಶಿವಮೊಗ್ಗದ ದಿನಗಳನ್ನು ನೆನೆಸಿಕೊಂಡು ನಮ್ಮ ಹಿರಿಯರ ಬಗೆಗೆ ವಿಚಾರಿಸಿ, ನೀವು ಗೊತ್ತು ಮಾಡುವ ದಿನ ಬಿಡುವಾಗಿದ್ದರೆ ಖಂಡಿತಾ ಬರುವೆ. ಆದರೆ ಮುಕ್ಕಾಲು ಗಂಟೆಗಿಂತ ಹೆಚ್ಚು ಹೊತ್ತು ಕುಳಿತುಕೊಳ್ಳಲಾರೆ ಎಂದು ತಿಳಿಸಿದರು.

ನಮ್ಮ ಕಾರ್ಯಕರ್ತರು ಅವರ ಮನೆಗೆ ಹೋಗಿ ಆವರಿಸಿ ಬಿಡುವಿದ್ದ ದಿನವನ್ನು ತಿಳಿದುಕೊಂಡು, ಸಮಾರಂಭವನ್ನು ನಿಶ್ಚಯಿಸಿದರು. ಸಮಾರಂಭಕ್ಕೆ ಬಂದು ಹೋಗಲು ಯಾವ ವಾಹನ ವ್ಯವಸ್ಥೆ ಬೇಡವೆಂದಿದ್ದರು.

ಕಾರ್ಯಕ್ರಮ ಆರಂಭವಾಗುವುದಕ್ಕೆ ಐದು ನಿಮಿಷ ಮುಂಚಿತವಾಗಿ ಬಂದರು. ತಮ್ಮ ಭಾಷಣದಲ್ಲಿ ಜನರೇಕೆ ಈಗ ಸತ್ವ ಹೀನರಾಗಿದ್ದಾರೆ ಎಂದು ಆತಂಕ ಪಟ್ಟು, ಪ್ರಧಾನಿ ನೆಹರೂ ಅವರ ಅಭಿಪ್ರಾಯವನ್ನು ತಾವು ಖಂಡಿಸಿದ್ದನ್ನು ನೆನಪಿಸಿಕೊಂಡು, ಸ್ವಾತಂತ್ರ್ಯ ಪೂರ್ವದ ತಮ್ಮ ಹೋರಾಟದ ದಿನಗಳನ್ನು ಮೆಲಕು ಹಾಕಿದ್ದರು. "ಇಂತಹ ನರಸತ್ತ ಜನಕ್ಕಾಗಿ ನಾವೇಕೆ ಹೋರಾಡಿದೆವು?" ಎಂದು ಪ್ರಶ್ನಿಸಿದರು. ಅವರ ಅಂದಿನ ಭಾಷಣ ನಮ್ಮೆಲ್ಲರಿಗೂ ಸ್ಫೂರ್ತಿದಾಯಕವಾಗಿತ್ತು.

ಸಮಾರಂಭದ ವಿಷಯ ತಿಳಿದ ನಮ್ಮ ಕಂಪನಿಯ ಆಡಳಿತವರ್ಗ (ಕೇಂದ್ರ ಸರ್ಕಾರದ ಉದ್ಯಮ) ಎಚ್ಚೆತ್ತು ತನ್ನ ಹೊಸ ವರಸೆ ಆರಂಭಿಸಿತು. ಇನ್ನು ಮುಂದೆ ಬಿಇ.ಎಂ.ಎಲ್. ಕನ್ನಡ ಸಂಘವೂ ಸೇರಿದಂತೆ ಎಲ್ಲಾ ಸಾಂಸ್ಕೃತಿಕ ಸಂಘಗಳನ್ನು ತೆಲುಗುವೆಲಗು, ತಮಿಳ್ ಸಂಗಮ್ ಇತ್ಯಾದಿಗಳನ್ನು ಒಗ್ಗೂಡಿಸಿ ಬಿ.ಇ.ಎಂ.ಎಲ್. ಸಾಂಸ್ಕೃತಿಕ ಸಂಘವನ್ನು ಸ್ಥಾಪಿಸುವುದಾಗಿ ಘೋಷಿಸಿತು. ಇದರ ಉದ್ದೇಶ ಬಿ.ಇ,ಎಂ.ಎಲ್. ಕನ್ನಡ ಸಂಘವನ್ನು ಬಗ್ಗು ಬಡಿಯುವುದು. ಇದಕ್ಕಾಗಿ ಎರಡು ಮೂರು ಸಭೆಗಳನ್ನು ಕರೆದೆವು. ಕನ್ನಡಸಂಘದ ಪ್ರತ್ಯೇಕ ಅಸ್ತಿತ್ವವನ್ನು ಸಮರ್ಥಿಸಿಕೊಂಡೆವು.

ಈ ನಡುವೆ ತುರ್ತು ಪರಿಸ್ಥಿತಿ ರದ್ದಾಯಿತು. ಆಡಳಿತ ವರ್ಗ ತನ್ನ ಯೋಜನೆಯನ್ನು ಕೈ ಬಿಟ್ಟಿತು. ಸಂಘದ ಹೋರಾಟಕ್ಕೆ ಸ್ಫೂರ್ತಿದಾತರು ಕಡಿದಾಳರು.

# ಉಡುಪು ತೊಟ್ಟ ದಿಗಂಬರ ಸನ್ಯಾಸಿ

–ಎನ್.ಕಿಟ್ಟಪ್ಪಗೌಡ

"ಮಹಾತ್ಮರ ಪವಿತ್ರ ಬದುಕಿನ ಮಾರ್ಗದಿಂದ ನಮ್ಮ ಬದುಕನ್ನು ಪವಿತ್ರಗೊಳಿಸಿ ಕೊಳ್ಳಬಹುದೆಂದು ನೆನಪು ಮಾಡುತ್ತದೆ" ಎಂದು ಆಂಗ್ಲಕವಿಯೊಬ್ಬರು ಹೇಳಿದ್ದಾರೆ.

ಕಡಿದಾಳ್ ಮಂಜಪ್ಪನವರ ಧೀರ್ಘ ಕಾಲದಸೇವೆ. ಅವರ ಪರಿಶುದ್ಧ ಜೀವನ ಮಾರ್ಗದ ಬಿಳಿ ಬಟ್ಟೆಯಲ್ಲಿ ಒಂದು ಸೂಜಿಮೊನೆಯ ಗಾತ್ರದ ಕಪ್ಪು ಚುಕ್ಕೆಯನ್ನು ಹುಡುಕಲು ಸಾಧ್ಯವಿಲ್ಲ. ಪ್ರಾಮಾಣಿಕತೆಗೆ ಇನ್ನೊಂದು ಹೆಸರೇ ಕಡಿದಾಳ್ ಮಂಜಪ್ಪ.

ದಿವಂಗತರ ಭೂತಕಾಲದ ಬದುಕಿನ ಬಗ್ಗೆ ವರ್ತಮಾನ ಕಾಲದಲ್ಲಿ ಬರೆಯುವಾಗ ಕೆಲವು ವಿಷಯಗಳು ಲೇಖಕರ ಅರಿವಿಲ್ಲದೆ ಸುಳಿ ಬರುತ್ತವೆ. ಅವುಗಳಲ್ಲಿ ಹೆಚ್ಚಿನವು ವರ್ತಮಾನ ಕಾಲಕ್ಕೆ ಸೀಮಿತವಾಗಿರುತ್ತವೆ. ಇಂತಹ ವಿಷಯಗಳು ಅನಿವಾರ್ಯವೆಂದೇ ಭಾವಿಸಬೇಕಾಗುತ್ತದೆ. ಅಂತೆಯೇ ಮಂಜಪ್ಪನವರ ಪ್ರಾಮಾಣಿಕ ರಾಜಕಾರಣವನ್ನು ವಿವರಿಸುವಾಗ ಅವರ ಸಮಕಾಲೀನರಾದ ಮತ್ತೊಬ್ಬ ರಾಜಕಾರಣಿಯನ್ನು ಹೆಸರಿಸಬೇಕಾಗುತ್ತದೆ. ಓದುಗರು ಇವೆರಡನ್ನು ಒಪ್ಪಿಕೊಳ್ಳ ಬೇಕಾಗುತ್ತದೆ.

ನನಗೆ ಶ್ರೀ ಮಂಜಪ್ಪನವರ ಮೊದಲ ದರ್ಶನವಾಗಿದ್ದು, ೧೯೪೨ ರ ಸ್ವಾತಂತ್ರ್ಯ ಚಳವಳಿ ಕಾಲದಲ್ಲಿ. ನಂತರ ನಾನು ಶಿವಮೊಗ್ಗಕ್ಕೆ ಮುಂದಿನ ವ್ಯಾಸಂಗಕ್ಕೆ ಹೋದಾಗ ಪದೇ ಪದೇ ಅವರನ್ನು ಭೇಟಿಯಾಗುತ್ತಿದ್ದೆ. ಸರ್ಕಾರಿ ವಿದ್ಯಾರ್ಥಿವೇತನದ ಸಂಬಂಧ ನನಗೆ ಸಹಾಯ ಮಾಡಲು ಸಿದ್ಧಯ್ಯನವರನ್ನು ಭೇಟಿ ಮಾಡಿಸಲು ಕರೆದುಕೊಂಡು ಹೋದರು. ಇವನು ಸ್ವಾತಂತ್ರ್ಯ ಚಳುವಳಿ ಕಾಲದಲ್ಲಿ ಕಾಂಗ್ರೆಸ್ ಧ್ವಜಾರೋಹಣವನ್ನು ಒಬ್ಬ ಜಾಡಮಾಲಿಯಿಂದ ಮಾಡಿಸಿದ್ದ" ಎಂದು ಪರಿಚಯಿಸಿದ್ದರು. ಇದರಿಂದ ನನಗೆ ವಿದ್ಯಾರ್ಥಿ ವೇತನ ದೊರಕಲು ಸಹಾಯವಾಯಿತು. ಅವರ ಮನೆಯಲ್ಲೆ ಒಂದು ಕೊಠಡಿ ಸಹ ಕೊಟ್ಟಿದ್ದರು. ನನ್ನ ಸ್ವಾತಂತ್ರ್ಯ ಚಳುವಳಿ, ವಿದ್ಯಾರ್ಥಿಜೀವನ, ಬದುಕಿನ ಮಾರ್ಗದರ್ಶನ, ನನ್ನ ಮಗನ ಭವಿಷ್ಯವನ್ನು ರೂಪಿಸಿ, ಹತ್ತು ಹಲವಾರು ವಿಷಯಗಳಲ್ಲಿ ನನ್ನನ್ನು ಹಿಡಿದೆತ್ತಿ ರೂಪಿಸಿದ್ದಾರೆ. ಮಲೆನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ಮಂಜಪ್ಪನವರು ಸಹಾಯ ಮಾಡಿ ಜೀವನ ಮಾರ್ಗತೋರಿಸಿದ್ದಾರೆ.

ಪೂನಾದಲ್ಲಿ ಕಾನೂನು ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ, ಮಂಜಪ್ಪನವರು ಗಾಂಧೀಜಿಯನ್ನು ಮೊದಲ ಬಾರಿಗೆ ಕಂಡು, ಪ್ರಭಾವಿತರಾದರು. ಅವರು ಶಿವಮೊಗ್ಗದಲ್ಲಿ ವಕೀಲವೃತ್ತಿ ಪ್ರಾರಂಭಿಸಿದಾಗ, ಗಾಂಧೀಜಿಯವರ ಆದರ್ಶವನ್ನು ಅನುಸರಿಸಿಕೊಂಡು ಬಂದರು. ಕಕ್ಷಿದಾರರಿಂದ ಪಡೆಯುತ್ತಿದ್ದ ಶುಲ್ಕ ಅತ್ಯಂತ ಕಡಿಮೆಯಾಗಿತ್ತು. ಮಲೆನಾಡಿನ ಜನರ ಬದುಕಿನ ಅರಿವು ಮಂಜಪ್ಪನವರಿಗೆ ಚೆನ್ನಾಗಿತ್ತು. ಕಡು ಬಡವರಿಗೆ ಉಚಿತ ಕಾನೂನುನೆರವು, ಕೆಲವೊಮ್ಮೆ ನ್ಯಾಯಾಲಯದ ಶುಲ್ಕವನ್ನು ಇವರೇ ಪಾವತಿ ಮಾಡಿ, ಮೊಕದ್ದಮೆ ದಾಖಲು ಮಾಡುತ್ತಿದ್ದರು. ಕೆಲವರಿಗೆ ಬಸ್ ಛಾರ್ಜ್‌ಕೊಟ್ಟು ಕಳುಹಿಸುತ್ತಿದ್ದುದೂ ಇದೆ. ಕಕ್ಷಿದಾರರ ಸಂಖ್ಯೆ ಬೆಳೆಯುತ್ತಿತ್ತು. ವಕೀಲರ ವರಮಾನ ಕುಂಟುತ್ತಿತ್ತು. ಆಫೀಸಿನಲ್ಲಿ ಒಬ್ಬ ಗುಮಾಸ್ತರು. ಇವರ ಸಂಬಳ, ಮನೆಯಲ್ಲಿ ಪತ್ನಿ ಇಬ್ಬರು ಮಕ್ಕಳ ಪುಟ್ಟ ಸಂಸಾರ, ಅಷ್ಟೇ ಪುಟ್ಟದಾದ ವರಮಾನ.

ಕಡಿದಾಳರ ಔದಾರ್ಯದಿಂದಾಗಿ ಆರ್ಥಿಕ ತೊಂದರೆಯಾಗುತ್ತಿತ್ತು. ಇದನ್ನು ಗಮನಿಸಿದ ಗುಮಾಸ್ತರಾದ ಶಾಮಣ್ಣನವರೆ ಕಕ್ಷಿದಾರರಿಗೆ ಹೊರೆಯಾಗದಂತೆ, ಮಂಜಪ್ಪನವರಿಗೆ ಜಾಸ್ತಿಯಾಗಿ ಕಾಣದಂತೆ ಕಕ್ಷಿದಾರರಿಂದ ಶುಲ್ಕಪಡೆದು ಆಫೀಸು ನಡೆಸುತ್ತಾ ಹೋದರು.

ಕಡಿದಾಳರು ಗಾಂಧಿವಾದಿ. ಅವರ ವಕೀಲಿ ವೃತ್ತಿ ಜನಪ್ರಿಯವಾಯಿತು. ಶಿವಮೊಗ್ಗದಲ್ಲಿ ಕಡಿದಾಳರು ಹೆಸರುಗಳಿಸಿದರು. ಉನ್ನತ ಹುದ್ದೆಯಲ್ಲಿ ಜಿಲ್ಲಾ ಸರ್ಕಾರಿ ನೌಕರರ, ಇತರ ಅಧಿಕಾರಗಳ ವಿಶ್ವಾಸಕ್ಕೆ ಪಾತ್ರರಾದರು.

ಶಾಂತವೇರಿ ಗೋಪಾಲಗೌಡರು ಕಡಿದಾಳರ ಮೆಚ್ಚಿನ ಶಿಷ್ಯ. ಸಮಾಜಕ್ಕೆ ಅವನು ಸಲ್ಲಿಸುತ್ತಿದ್ದ ನಿಸ್ವಾರ್ಥ ಸೇವೆಗಾಗಿ ಮಂಜಪ್ಪನವರಿಗೆ ಅವನ ಮೇಲೆ ಸಹೋದರ ಭಾವನೆ ಇತ್ತು. ಇಬ್ಬರ ರಾಜಕೀಯ ಪಕ್ಷಗಳು ಬೇರೆ ಬೇರೆಯಾಗಿದ್ದವು. ವಿಭಿನ್ನ ತತ್ವ ಸಿದ್ಧಾಂತಗಳಿದ್ದರೂ ಇಬ್ಬರ ಬಾಂಧ್ಯವ್ಯಕೆ ಅಡ್ಡಿಯಾಗಿರಲಿಲ್ಲ. ಗೇಣಿದಾರರ ಗೋಳಿನ ಸಮಸ್ಯೆ ಇಬ್ಬರಿಗೂ ಅರಿವಾಗಿತ್ತು. ಗೋಪಾಲಗೌಡರು ಈ ಬಗ್ಗೆ ಹೋರಾಡುತ್ತಿದ್ದು, ಮಂಜಪ್ಪನವರಿಗೆ ತುಂಬಾ ಮೆಚ್ಚಿಗೆಯಾಗಿತ್ತು. ಅವರ ಭವಿಷ್ಯದ ಬಗ್ಗೆಯೂ ಮಂಜಪ್ಪನವರಿಗೆ ಕಳಕಳಿಯಿತ್ತು. ಸಮಾಜವಾದಿಪಕ್ಷ ಕಟ್ಟಲು ದೇಶದ ಉದ್ದಗಲಕ್ಕೆ ಓಡಾಡುತ್ತಿದ್ದ ಗೋಪಾಲನ ಬಗ್ಗೆ, ಅವನ ನಿಸ್ವಾರ್ಥ ಪ್ರಾಮಾಣಿಕ ಜೀವಕ್ಕೆ ಮಾರುಹೋಗಿದ್ದರು ಕಡಿದಾಳರು ಅವನಿಗೆ ಮದುವೆ ಮಾಡಿಸಲು ಯೋಚಿಸಿ ಧಾರವಾಡದಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದ ಸೋನಕ್ಕರೊಡನೆ ವಿವಾಹ ಮಾಡಿಸಿದರು.

ಕಡಿದಾಳರು ಕಂದಾಯ ಮಂತ್ರಿಯಾಗಿದ್ದಾಗ ಶಾಂತವೇರಿಯವರಿಗೆ ಅವರ ಅಭಿಮಾನಿಗಳ ಕೋರಿಕೆಯಂತೆ ಐದು ಎಕರೆ ನೀರಾವರಿ ಭೂಮಿಯನ್ನು ದರಖಾಸ್ತು ನೀಡಲು ಒಪ್ಪಿದ್ದರು. ಗೋಪಾಲಗೌಡರನ್ನು ಒಪ್ಪಿಸುವ ಜವಾಬ್ದಾರಿಯನ್ನು ನನಗೆ ವಹಿಸಲಾಗಿತ್ತು. ಶಾಸಕರ ಭವನಕ್ಕೆ ಹೋಗಿ ಈ ವಿಷಯ ಮುಂದಿಟ್ಟಾಗ "ಉಳುವವನೆ ಹೊಲದೊಡೆಯ' ಸಿದ್ಧಾಂತದವನು ಜಮೀನು ಪಡೆದು ನಾನು ಸ್ವಂತ ಸಾಗುವಳಿ ಮಾಡುತ್ತೇನೆಯೆ? ಗೇಣಿ ವಸೂಲುಮಾಡುವ ಭೂಮಾಲೀಕರ ಸಾಲಿಗೆ ಎಂದೂ ಸೇರಲಾರೆ" ಮಂಜಪ್ಪನವರಿಗೆ ತಿಳಿಸು. ಈ ೫ ಎಕರೆ ಜಮೀನನ್ನ ತಲಾ ೧/೨ ಎಕರೆಯಂತೆ ೧೦ ಜನ ಕೃಷಿ ಕಾರ್ಮಿಕರಿಗೆ ಮಂಜೂರು ಮಾಡಲಿ. ಅವರು ಸದಾ ಮಂಜಪ್ಪನವರನ್ನು ನೆನೆಸುತ್ತಾರೆ.

ನಾನು ವಾಪಸ್ಸು ಬಂದು, "ನೀವು ಹೇಳಿದಂತೆ ಆಯಿತು" ಎಂದೆ. ಮಂಜಪ್ಪನವರ ಮನಸ್ಸಿನಲ್ಲಿ ಎಲ್ಲಿಲ್ಲದ ಸಂತೋಷ ಕಂಡೆ. ಆದರೂ "ಅವನಿಗೆ ಹೇಳು ಶ್ರವಣಬೆಳಗೊಳದಲ್ಲಿ ನಿಂತವನ ಜೊತೆಯಲ್ಲಿ ನಿಂತುಕೊಳ್ಳಲಿ" ಎಂದರು.

ಈ ಘಟನೆ ಜ್ಞಾಪಕ ಬಂದು, ಲೇಖನದ ಶಿರೋನಾಮೆ ಬರೆದೆ. ಗೋಪಾಲ ಗೌಡರಿಗೆ ಈ ಮಾತು ಹೇಳುವಾಗ, ಮಂಜಪ್ಪನವರಿಗೆ, ತಾನು ಸಹ ಬಟ್ಟೆ ತೊಟ್ಟ ದಿಗಂಬರನಾಗಿ ಕೆಲಸ ಮಾಡುತ್ತಿರುವುದು ಅರಿವಾಗದಿರುವುದು ಆಶ್ಚರ್ಯ.

ಈಗಿನ ರಾಜಕಾರಣಿಗಳಿಗೆ ದೇಶ ಇರುವುದು ನಮಗೆ, ನಮ್ಮ ಸೋದರರಿಗೆ, ನಮ್ಮ ಮಕ್ಕಳಿಗೆ, ಅಳಿಯಂದಿರಿಗೆ – ಸರ್ಕಾರಿ, ಖಜಾನೆ ನಮ್ಮ ದರೋಡೆಗೆ ಎಂದು ತಿಳಿದಿದ್ದಾರೆ. ಇಂದು, ಸಾಮಾನ್ಯ ಒಬ್ಬ ಶಾಸಕನೂ ಕೆಲವು ಕೋಟಿ ಹಣದ ಧನಿಕನಾಗಿದ್ದಾನೆ.

ಅದೇ ಕಡಿದಾಳರಿಗೆ, ತಮ್ಮ ರಕ್ತ ಸಂಬಂಧಿಗಳಿಗೆ ಸಹಾಯ ಮಾಡುವ ಸ್ವಾರ್ಥ ಭಾವನೆ ಬರಲೇ ಇಲ್ಲ. ಇವರ ೪ ಜನ ಸಹೋದರರೂ ಅಣ್ಣನ ಹೆಸರಿಗೆ ಕಳಂಕತರುವ ಯೋಚನೆ ಮಾಡದೆ ಸಹಕರಿಸಿ, ಅವರ ನಿಸ್ವಾರ್ಥ ಸೇವೆಗೆ ಬೆಂಬಲ ಕೊಟ್ಟರು. ಪಿತ್ರಾರ್ಜಿತ ಆಸ್ತಿಯಲ್ಲದೆ ಒಂದು ಗುಂಟೆ ಹೆಚ್ಚಿಗೆ ಜಮೀನು ಮಾಡದೆ ಇದ್ದುದರಲ್ಲೇ ತೃಪ್ತ ಜೀವನ ನಡೆಸಿದ್ದಾರೆ.

ಇವರ ಜೊತೆಗೆ ಕಡಿದಾಳರ ಪತ್ನಿ, ಪುತ್ರ ಪುತ್ರಿಯರ ಸಂಪೂರ್ಣ ಸಹಕಾರ, ಬೆಂಬಲ ಅವರಿಗಿತ್ತು. ಕವಿವಾಣಿಯಂತೆ ಹೇಳುವುದಾದರೆ ಬಂಗಾರದೊಡವೆಗಳನ್ನು

ಎಂದೆಂದೂ ಬಯಸದ ಬಂಗಾರದಂತ ಪತ್ನಿ, ಮಕ್ಕಳು, ತಂದೆಯ ಪ್ರಾಮಾಣಿಕತೆ, ಸರಳ ಜೀವನಕ್ಕೆ ಅವರು ಒಗ್ಗಿಕೊಂಡು ಸಹಕರಿಸಿದ್ದರು. ಇಂದು ಒಬ್ಬ ಶಾಸಕನ ಮನೆಯಲ್ಲಿರುವ ಕೆ.ಜಿ. ಚಿನ್ನದಷ್ಟು ಅಕ್ಕಿ ಕಡಿದಾಳರ ಮನೆಯಲ್ಲಿರುತ್ತಿರಲಿಲ್ಲ.

ಕಡಿದಾಳರು ಅಜಾತಶತ್ರು, ಎಲ್ಲರನ್ನು ಪ್ರೀತಿಸುತ್ತ ತನ್ನಂತೆ ನೋಡುವ ದೊಡ್ಡಗುಣ ಅವರಲ್ಲಿತ್ತು. ಇಂದು ಚುನಾವಣೆಯಲ್ಲಿ ವಿರೋಧವಾಗಿ ಕೆಲಸ ಮಾಡಿದವರು, ಆ ರಾಜಕಾರಣಿಯ ಆಜನ್ಮ ಶತ್ರು. ಸದಾ ಅವರ ಕೇಡನ್ನೇ ಹಾರೈಸುತ್ತಿರುತ್ತಾರೆ. ಮಂಜಪ್ಪನವರಿಗೆ ಚುನಾವಣೆ ಮುಗಿದ ಮೇಲೆ, ಕ್ಷೇತ್ರದ ಜನರೆಲ್ಲಾ ತಮ್ಮವರು. ಪಕ್ಷ ಬೇಧವಿಲ್ಲದೆ ಸಹಾಯ ಮಾಡುವ ಪ್ರವೃತ್ತಿ ಅವರದು. ಭೂಸುಧಾರಣೆ ಸಮಯದಲ್ಲಿ ಕೆಲವು ಭೂಮಾಲಿಕರು ಶತೃಗಳಂತೆ ವರ್ತಿಸಿದ್ದರೂ ಮಂಜಪ್ಪನವರನ್ನು ಕಂಡಾಗ, ಅವರು ತೋರಿಸುತ್ತಿದ್ದ ಪ್ರೀತಿಯ ಮುಂದೆ ತಮ್ಮ ದ್ವೇಷ ಮರೆತು ಕರಗಿ ನೀರಾಗುತ್ತಿದ್ದರು.

ಮಂಜಪ್ಪನವರು ದ್ವೇಷಿಸುತ್ತಿದ್ದ ಒಬ್ಬನೇ ವ್ಯಕ್ತಿ ಎಂದರೆ, ದೇಶ ವ್ಯಾಪ್ತಿಯಾಗಿ ಬೆಳೆಯುತ್ತಿರುವ ರಾಕ್ಷಸ– ಭ್ರಷ್ಟಾಚಾರ. ಸರ್ಕಾರ ನಡೆಸುವವರೆ ಖಜಾನೆ ದೋಚುವ ದರೋಡೆಕೋರರಾದರೆ, ಸ್ವಾತಂತ್ರ್ಯ ಉಳಿಯತ್ತದೆಯೇ ಎಂದು ಯೋಚಿಸುತ್ತಿದ್ದರು. ಮಂಜಪ್ಪನವರು ಎಂದೂ ಭ್ರಷ್ಟಾಚಾರದೊಡನೆ ರಾಜಿ ಮಾಡಿಕೊಂಡವರಲ್ಲ. ಅಧಿಕಾರಿಗಳ ಮೇಲೆ ಲಂಚದ ದೂರು ಬಂದಾಗ ನಿಷ್ಠುರವಾಗಿ ವರ್ತಿಸುತ್ತಿದ್ದರು. ಮೇಲಧಿಕಾರಿಗಳಿಗೆ ಮುಂದೆ ಹೀಗಾಗದಂತೆ ನೋಡಿಕೊಳ್ಳಲು ಆದೇಶಿಸುತ್ತಿದ್ದರು. ಬಡನೌಕರನೊಬ್ಬ ಲಂಚ ಪಡೆದು ತಪ್ಪು ಒಪ್ಪಿಕೊಂಡಾಗ, ಅವನಿಗೆ ವಿಧಿಸಿದ ಶಿಕ್ಷೆಯಿಂದ ಪಾರು ಮಾಡಿ ಎಚ್ಚರಿಸುತ್ತಿದ್ದರು.

ಸತ್ಯ ಸಾಕ್ಷಿ ಹೇಳುವವರನ್ನು ಹಣಕೊಟ್ಟು ತಪ್ಪಿಸುವುದು, ಚುನಾವಣೆಯಲ್ಲಿ ದುಡ್ಡುಕೊಟ್ಟು ಓಟುಕೊಳ್ಳುವಂತಹ ಹೀನ ಕೃತ್ಯಗಳನ್ನು ಗಾಂಧೀಜಿಯವರು 'ಬುದ್ಧಿವಂತಿಕೆಯ ವ್ಯಭಿಚಾರ' ಎಂದು ಕರೆದಿದ್ದಾರೆ. ನಮ್ಮ ರಾಜ್ಯದಲ್ಲಿ ಚುನಾವಣೆಗೆ ಸ್ಪರ್ಧಿಸಿದ ೧೦೦ ಕ್ಕೆ ೭೫ ಭಾಗ ಈ ರೀತಿಯ ರಾಜಕೀಯ ಬುದ್ಧಿವಂತಿಕೆಯ ವ್ಯಭಿಚಾರಕ್ಕೆ ಒಳಗಾಗಿದಾರೆ ಎನ್ನಬಹುದಲ್ಲವೆ?

ಕಡಿದಾಳರ ಆಡಳಿತ ಕಾಲದಲ್ಲಿ ಇಂತಹ ವ್ಯಭಿಚಾರಗಳಿಗೆ ಅವಕಾಶವೇ ಇರಲಿಲ್ಲ. ಭ್ರಷ್ಟಾಚಾರ ಈ ಮಟ್ಟದಲ್ಲಿ ಬೆಳೆದಿರಲಿಲ್ಲ. ಅಸ್ಪೃಶ್ಯತೆ ಮತ್ತು ಭ್ರಷ್ಟಾಚಾರ ಈ ದೇಶಕ್ಕೆ ಒದಗಿದ ಕಳಂಕ ಎಂದು ಭಾವಿಸಿದ್ದರು ಕಡಿದಾಳರು.

ಶತ್ರುವನ್ನು ಪ್ರೀತಿಸು, ಯಾರಾದರೂ ನಿನ್ನ ಟೋಪಿಯನ್ನು ಕಸಿದುಕೊಂಡರೆ. ನಿನ್ನ ಅಂಗಿಯನ್ನು ಬಿಚ್ಚಿಕೊಡು ಎನ್ನುವ ಮಹಾತ್ಮ ಜೀಸಸ್ ಕ್ರೈಸ್ತನ ತತ್ವವೂ ಕಡಿದಾಳರಲ್ಲಿತ್ತು.

ಇಂದು ಸಹಸ್ರಾರು ಗೇಣಿದಾರರ ಮನೆಯಲ್ಲಿ ಕಡಿದಾಳ್ ಮಂಜಪ್ಪನವರು ಹೊತ್ತಿಸಿದ ಹಣತೆಉರಿಯುತ್ತಿದೆ. ಕಡುಬಡವರು ಕಷ್ಟಗಳಿಗೆ ಗುರಿಯಾದಾಗ ಮಂಜಪ್ಪನವರ ಮನಸ್ಸು ಮಿಡಿಯುತ್ತಿತ್ತು. ಇಲ್ಲೊಂದು ಸಣ್ಣ ಉದಾಹರಣೆ ಇದೆ.ಮುದ್ದಣ್ಣಶೆಟ್ಟಿ ಊರಿನಲ್ಲಿ ಕೊನೆ ತೆಗೆಯುವವರು ಮತ್ತು ಇತರ ಕೂಲಿ ಕೆಲಸ ಮಾಡುವವರು. ನಾಲ್ಕು ಎಕರೆ ಜಮೀನನ್ನು ೧೫-೨೦ ವರ್ಷಗಳಿಂದ ಗೇಣಿಮಾಡಿಕೊಂಡು ದುಡಿದು ತಿನ್ನುತ್ತಿದ್ದ ನಾಲ್ಕು ಮಕ್ಕಳ ಸಂಸಾರವಂದಿಗ, ಗೇಣಿ ಮಾಡಿಕೊಂಡಿದ್ದಕ್ಕೆ ಅವರಲ್ಲಿ ಭೂದಾಖಲೆಗಳಿರಲಿಲ್ಲ. ಭೂ ಸುಧಾರಣೆಯ ಕಾಲದಲ್ಲಿ ಭೂನ್ಯಾಯಮಂಡಳಿ ಅವರ ಅರ್ಜಿ ವಜಾಮಾಡಿತು. ದಿಕ್ಕು ಕಾಣದೆ ಅವರು ಸಾಲ ಮಾಡಿಕೊಂಡು ಮಂಜಪ್ಪನವರನ್ನು ನೋಡಲು ಬೆಂಗಳೂರಿಗೆ ಹೋದರು. ಕಂಡು ತಮ್ಮ ಅಳಲು ತೋಡಿಕೊಂಡರು. ಕೇಸು ಗೆಲ್ಲುವುದು ಕಷ್ಟವೆಂದು ಗೊತ್ತಾದರೂ ಶೆಟ್ಟರ ಮನಸ್ಸಿಗೆ ನೋವಾಗುತ್ತದೆಂದು ಶುಲ್ಕಪಡೆಯದೆ ಮೊಕದ್ದಮೆ ದಾಖಲು ಮಾಡಿದರು. ಶೆಟ್ಟರ ಕೈಗೆ ಬಸ್‌ಛಾರ್ಜ್‌ಗೆ ದುಡ್ಡು ಕೊಟ್ಟು ಕಳಿಸಿದರು.

ಕೆಲವು ತಿಂಗಳುಗಳ ಮೇಲೆ ಕೇಸು ವಿಚಾರಣೆಗೆ ಬಂತು. ಶೆಟ್ಟರು ಗೇಣಿಗೆ ಜಮೀನು ಮಾಡುತ್ತಿದ್ದರೆಂಬುದಕ್ಕೆ ಯಾವ ಆಧಾರವೂ ಇರಲಿಲ್ಲ. ಕೋರ್ಟು ಪುನರ್ ಪರಿಶೀಲನೆಗಾಗಿ ಕೇಸನ್ನು ತೀರ್ಥಹಳ್ಳಿ ಭೂನ್ಯಾಯಮಂಡಳಿಗೆ ವಾಪಸ್ಸು ಕಳುಹಿಸಿತು.

ಶೆಟ್ಟರ ಕುಟುಂಬ ದಾರಿ ಮೇಲೆ ಬೀಳುತ್ತೆ ಎಂದು ಮಂಜಪ್ಪನವರಿಗೆ ಕನಿಕರ. ಕಿರಿಯ ವಕೀಲ ನನ್ನ ಮಗ ರಮೇಶನನ್ನು ಕರೆದು ಊರಿಗೆ ಹೋಗುತ್ತಾ ಇದ್ದೀಯಾ. ನಿನ್ನ ಅಪ್ಪನಿಗೆ ಹೇಳಿ, ರಾಜಿಮಾಡಿಸಿ ಮುದ್ದಣ್ಣ ಶೆಟ್ಟರಿಗೆ ೧-೨ ಎಕರೆ ಕೊಡಿಸುವಂತೆ 'ನಾನು ಹೇಳಿದೆನೆಂದು ಹೇಳು' ಎಂದರು. ಭೂಮಾಲೀಕರು ನನ್ನ ಮಾತಿಗೆ ಬೆಲೆಕೊಡಲಿಲ್ಲ. ಆ ಹೊತ್ತಿಗೆ ಶೆಟ್ಟರು ಗದ್ದೆಯ ಫಸಲನ್ನು ಕೊಯ್ಯಿಸುವ ಪ್ರಯತ್ನದಲ್ಲಿದ್ದರು. ಅವರು ನನ್ನ ಮನೆಗೆ ಬಂದು ಗೋಳಿಟ್ಟರು. ಆಗ ನನಗೆ ಹೊಳೆದ ಒಂದು ಪರಿಹಾರದ ಕ್ರಮವೆಂದರೆ ಭೂನ್ಯಾಯ ಮಂಡಳಿಯ ಸದಸ್ಯರನ್ನು ಭೇಟಿಯಾಗುವುದು. ಅದರಂತೆ ಇಬ್ಬರು ಸದಸ್ಯರನ್ನು ಕಂಡೆ. ಅವರಿಬ್ಬರೂ ಶಾಂತವೇರಿ ಗೋಪಾಲಗೌಡರ ಸಮಾಜವಾದಿ ಪಕ್ಷದವರು. ಅವರನ್ನು ಶೆಟ್ಟರ ಮನೆಗೆ ಸ್ಥಳ

ಪರಿಶೀಲನೆಗಾಗಿ ಕರೆದುಕೊಂಡು ಹೋದೆ. ಅಂಗಳದಲ್ಲಿ ಆಲೆಮಾಡಿದ ಬೆಲ್ಲದ ಡಬ್ಬಗಳು, ನೇಗಿಲು-ನೊಗ, ಗಾಡಿ-ಎತ್ತುಗಳು ಮುಂತಾದ ಕೃಷಿಗೆ ಬೇಕಾದ ವಸ್ತುಗಳು ಅಲ್ಲಿದ್ದವು. ಜೊತೆಗೆ ಶೆಟ್ಟರು ೨೦ ವರ್ಷಗಳಿಂದ ಜಮೀನುಸಾಗುವಳಿ ಮಾಡುತ್ತಿದ್ದರೆಂಬುದಕ್ಕೆ ಅಕ್ಕಪಕ್ಕದವರ ಸಾಕ್ಷಿ ಬೇರೆ ಇತ್ತು. "ಇಲ್ಲಿ ಕಂಡ ವಿಷಯವನ್ನೆ ಭೂನ್ಯಾಯಮಂಡಳಿ ಸಭೆಯಲ್ಲಿಟ್ಟು ಮುದ್ದಣ್ಣಶೆಟ್ಟರು ಗೇಣಿದಾರರೆಂದು ಸಾಕ್ಷಿ ಒದಗಿಸಿ" ಎಂದು ಹೇಳಿ ಕಳುಹಿಸಿಕೊಟ್ಟೆ. ಸಭೆಯಲ್ಲಿ ಅದರಂತೆ ತೀರ್ಮಾನವಾಗಿ ಎರಡು ಎಕರೆಗೆ ಬದಲಾಗಿ ನಾಲ್ಕು ಎಕರೆ ಜಮೀನಿನ ಭೂಮಾಲೀಕರಾದರು. "ನೀನು ವಕೀಲನಾಗಬೇಕಿತ್ತು.". ನನಗೆ ಕಡಿದಾಳರು ಕೊಟ್ಟ ವಕಾಲತ್ತು ಶುಲ್ಕ. ಕಡಿದಾಳು ಮಂಜಪ್ಪನವರ ಹೃದಯ ವೈಶಾಲ್ಯಕ್ಕೆ ಇಂಥ ಅನೇಕ ನಿದರ್ಶನಗಳಿವೆ.

## ಪರಿವರ್ತನೆಯ ಮೊದಲ ಹೆಜ್ಜೆ ಇಟ್ಟ "ಕಡಿದಾಳರು"

– ವಡ್ಡರ್ಸೆ ರಘುರಾಮಶೆಟ್ಟಿ

ಕನ್ನಡ ಜನಸಮೂಹದ ಅಭಿಮಾನಕ್ಕೆ ಪಾತ್ರರಾದ "ಕಡಿದಾಳರು" ತಮ್ಮ ಸುಧೀರ್ಘ ಬದುಕಿನಲ್ಲಿ "ಸಾರ್ವಜನಿಕ ಹಿತದ ಕಾವಲುಗಾರನಾಗಿ" ಕಾಯಕ ಮಾಡಿಕೊಂಡು ಬಂದವರು. ಎಪ್ಪತ್ತೈದರ ಇಳಿ ವಯಸ್ಸಿನಲ್ಲಿ ಜೀವ ಬಹಳಷ್ಟು ಸವೆದಿರುವ ಕಡಿದಾಳ ಮಂಜಪ್ಪನವರನ್ನು ಕರ್ನಾಟಕ ಸರಕಾರ ಚುನಾವಣಾ ಕಾವಲು ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿ ಅವರನ್ನು ಮತ್ತೊಮ್ಮೆ ಸುದ್ದಿಯ ವ್ಯಕ್ತಿಯಾಗಿ ಮಾಡಿದೆ.

ಕಡಿದಾಳರು ತಮ್ಮ ಜೀವನದುದ್ದಕ್ಕೂ ಸುದ್ದಿಯ ವ್ಯಕ್ತಿಯಾಗುವ ಪ್ರಸಿದ್ಧಿ ಬಯಸಿದವರಲ್ಲ. ಬದುಕಿನ ರೀತಿಯೇ ಅವರಿಗೆ ಪ್ರಸಿದ್ಧಿಯನ್ನು ತಂದು ಕೊಟ್ಟಿದೆ. ಪ್ರಸಿದ್ಧಿಯ ಬೆನ್ನು ಹಿಡಿದ ಸಣ್ಣ ಕೆಲಸ ಮಾಡಬೇಕಾದ ಅಗತ್ಯ ಈ ದೊಡ್ಡ ವ್ಯಕ್ತಿಗೆ ಎಂದೂ ಬಿದ್ದಿರಲಿಲ್ಲ. ಕನ್ನಡನಾಡಿನಲ್ಲಿ ಈಗಿರುವ ಹಿರಿಯ ರಾಜಕಾರಣಿಗಳ ಸಣ್ಣ ಸಮೂಹದಲ್ಲಿ ಕಡಿದಾಳ ಮಂಜಪ್ಪನವರೊಬ್ಬರು. ಇವರಷ್ಟು ನಿರ್ಮಲ ಜೀವನ ನಡೆಸಿದ ರಾಜಕಾರಣಿಗಳು ಈ ದೇಶದಲ್ಲಿ ಅನೇಕರಿಲ್ಲ. ಇವರ ರಾಜಕೀಯ ವ್ಯಕ್ತಿತ್ವ ಅಪ್ಪಟವಾಗಿರುವಷ್ಟೇ ಅಪೂರ್ವವು ಹೌದು.

ಎಲ್ಲರಂತೆ ಇವರು ಅಧಿಕಾರ ಸ್ಥಾನದ ಮೇಲೆ ಕಣ್ಣಿಟ್ಟು ರಾಜಕೀಯ ರಂಗಕ್ಕಿಳಿದವರಲ್ಲ. ಆದರೂ ಅಧಿಕಾರ ಅವರ ಕೈಗೆ ಸಿಕ್ಕಿದೆ. ಇಂತ ಅಧಿಕಾರಕ್ಕೆ ಅಂಟಿಕೊಳ್ಳುವ ಆಸೆ ಪ್ರಾಯಶಃ ಅವರ ಮನಸ್ಸಿನ ಯಾವ ಮೂಲೆಗೂ ಪ್ರವೇಶ ಪಡೆದಿರಲಾರದು. ಆದ್ದರಿಂದಲೇ ಎಲ್ಲರೂ ಅಚ್ಚರಿಪಡುವ ರೀತಿಯಲ್ಲಿ ಸಕ್ರಿಯ ರಾಜಕಾರಣದಿಂದ ದೂರನಿಂತು ಅಧಿಕಾರ ಸ್ಥಾನವನ್ನು ಎಡಗಾಲಲ್ಲಿ ಒದೆಯಲು ಅವರಿಂದ ಸಾಧ್ಯವಾಯಿತು.

ಸಾಮಾನ್ಯ ರಾಜಕಾರಣಿಗಳಂತೆ ಅಧಿಕಾರ ಕಳಕೊಂಡು ಅದಕ್ಕಾಗಿ ಅನ್ಯರ ಮೇಲೆ ಅಪವಾದದ ಗೂಬೆ ಕೂರಿಸುವ ಸಣ್ಣತನದಲ್ಲಿ ಕಾಲಕಳೆದವರು ಕಡಿದಾಳ ಮಂಜಪ್ಪನವರಲ್ಲ. ಅವರ ವ್ಯಕ್ತಿತ್ವಕ್ಕೆ ಹಲವು ಆದರ್ಶ ಮುಖಗಳಿವೆ. ಸಾಮಾಜಿಕ ಸ್ವಾಸ್ಥ್ಯ ರಕ್ಷಣೆಗೆ ಆದರ್ಶ ವ್ಯಕ್ತಿಗಳ ಜೀವನ ಉಪಕಾರಿಯೆಂಬ ಮಾತೊಂದಿದೆ. ಆ

ದೃಷ್ಟಿಯಿಂದ ಕಡಿದಾಳರ ಜೀವನ ನಮಗಿಂದು ಅಧ್ಯಯನ ಯೋಗ್ಯ ವಸ್ತುವಾಗಿ ಉಳಿದಿದೆ.

ಕಡಿದಾಳರು ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ "ಕಡಿದಾಳ" ಎಂಬ ಹಳ್ಳಿಯ ಒಂದು ಪ್ರತಿಷ್ಠಿತ ರೈತ ಕುಟುಂಬದಲ್ಲಿ. ಶಿವಮೊಗ್ಗ ಜಿಲ್ಲೆ ಆಧುನಿಕ ಕರ್ನಾಟಕದ ಜನ ಜೀವನವನ್ನು ಹಸನುಗೊಳಿಸಿದ ಹಲವಾರು ಶಕ್ತಿಗಳನ್ನು ಹರಿಸಿದೆ. ನಾಡಿನ ಆರ್ಥಿಕ ಜೀವನಕ್ಕೆ ಚಾಲನೆ ಕೊಡುತ್ತಿರುವ ವಿದ್ಯುಚ್ಛಕ್ತಿ ಹರಿಸುವುದು ಇಲ್ಲಿಂದ, ಆಧುನಿಕ ಕನ್ನಡ ಸಾಹಿತ್ಯಕ್ಕೆ ಮಣ್ಣಿನ ಮಕ್ಕಳ ಬದುಕಿನ ನೇರ ಸಂಬಂಧ ಕಲ್ಪಿಸಿದ ರಾಷ್ಟ್ರಕವಿ ಕುವೆಂಪು ಹುಟ್ಟಿದ್ದು ಈ ಸಿರಿವಂತ ಜಿಲ್ಲೆಯ ಒಡಲಲ್ಲಿ. ಆಗಿನ ಹಳೆಯ ಮೈಸೂರು ರಾಜ್ಯದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಮೊದಲ ಪ್ರೇರಣೆ ಬಂದುದು ಇಲ್ಲಿಂದಲೇ, ೧೯೫೦ರ ದಶಕದಲ್ಲಿ ಸಮಾಜವಾದಿ ವಿಚಾರ ಧಾರೆಗಳನ್ನು ನಾಡಿನ ಉದ್ದಗಲಕ್ಕೂ ಹರಿಸಿದ ಶಾಂತವೇರಿ ಗೋಪಾಲಗೌಡರ ಹುಟ್ಟೂರು ಈ ಮಲೆನಾಡ ಜಿಲ್ಲೆ. ಬೆನ್ನುಬಾಗಿದ ರೈತರನ್ನು ಸೆಟೆದು ನಿಲ್ಲುವಂತೆ ಮಾಡಿರುವ ರೈತ ಚಳುವಳಿಯ ಉಗಮಸ್ಥಾನ ಈ ಜಿಲ್ಲೆ. ಇಲ್ಲಿನ ಜನಮನದಲ್ಲಿ ಕಾವ್ಯದ ಕಲ್ಪನೆ ಇದೆ. ಸಾಹಿತ್ಯದ ಸೆಲೆ ಇದೆ.

ಇಂತಹ ಒಂದು ಅತ್ಯುತ್ತಮ ಪರಿಸರದಲ್ಲಿ ಹುಟ್ಟಿ ಬೆಳೆದ ಕಡಿದಾಳ ಮಂಜಪ್ಪನವರದು ನಿರ್ಮಲ ಮನಸ್ಸು, ವಿಚಾರವಂತಿಕೆ, ಸಮೂಹದ ಹಿತದ ಚಿಂತನೆ, ನುಡಿಯಲ್ಲಿ ಸರಳಶೈಲಿ ಹಾಗೂ ನಡೆಯಲ್ಲಿ ನೇರತನವನ್ನು ಮೈಗೂಡಿಸಿಕೊಂಡು ಬಂದುದು ತೀರಾ ಸಹಜ.

ಅನುಕೂಲಸ್ತ ರೈತ ಕುಟುಂಬದಲ್ಲಿ ಹುಟ್ಟಿದ ಇವರಿಗೆ ಆಧುನಿಕ ವಿದ್ಯೆಯೂ ಲಭ್ಯವಾಯಿತು. ಶಿವಮೊಗ್ಗದಲ್ಲಿ ವಕೀಲ ವೃತ್ತಿಯನ್ನಾರಂಭಿಸಿ ಕೆಲವೇ ವರ್ಷಗಳಲ್ಲಿ ಪ್ರಸಿದ್ಧ ವಕೀಲರ ಅಂತಸ್ತಿಗೆ ಏರಿದರು. ವಕೀಲ ವೃತ್ತಿಗೆ ತೀರಾ ಪ್ರಸ್ತುತವಾಗಿರುವ ರಾಜಕೀಯ ಇವರನ್ನು ಆಕರ್ಷಿಸಿತು. ಸ್ವಾತಂತ್ರ್ಯ ಸಂಗ್ರಾಮಕ್ಕಿಳಿದು ಸಾರ್ವಜನಿಕ ಸೇವೆಗೆ ತಮ್ಮನ್ನು ತೊಡಗಿಸಿಕೊಂಡರು. ಹಳೆಯ ಮೈಸೂರಿನ ಮಲೆನಾಡು ಪ್ರದೇಶದಲ್ಲಿ ಜನಾಭಿಮಾನದ ಕೇಂದ್ರ ಬಿಂದುವಾಗಿ ಕಡಿದಾಳರ ರಾಜಕೀಯ ವ್ಯಕ್ತಿತ್ವ ಬೆಳೆಯಿತು.

ಸಕ್ರಿಯ ರಾಜಕೀಯಕ್ಕಿಳಿದರೂ ಇವರೊಬ್ಬ ಉತ್ತಮ ಓದುಗರಾಗಿ ಉಳಿದರು. ಇವರ ಪರಿಣಾಮವಾಗಿ ಕಡಿದಾಳರು "ರಾಜಕಾರಣಿಗಳಲ್ಲಿ ಒಬ್ಬ ವಿಚಾರವಾದಿ" ಎನಿಸಿಕೊಂಡರು. ಈ ವಿಚಾರವಂತಿಕೆ ಅವರನ್ನು ಮೇಲಕ್ಕೆತ್ತಿತು. ೧೯೫೨ರ ಸಾರ್ವತ್ರಿಕ

ಚುನಾವಣೆಯಲ್ಲಿ ಕಡಿದಾಳರು ಮೈಸೂರು ವಿಧಾನಸಭೆಗೆ ಆಯ್ಕೆಗೊಂಡರು. ಅದೇ ವರ್ಷ ಕೆಂಗಲ್ ಹನುಮಂತಯ್ಯನವರ ಸಂಪುಟದಲ್ಲಿ ಕಂದಾಯ ಸಚಿವರಾದರು.

ಕಂದಾಯ ಸಚಿವರಾಗಿ ಕಡಿದಾಳರು ಸಾಮಾಜಿಕ ಪರಿವರ್ತನೆಗೆ ಚಾಲನೆಕೊಡುವ ಒಂದು ಐತಿಹಾಸಿಕ ಕೆಲಸ ಮಾಡಿದರು. ಅದೆಂದರೆ ಇನಾಮ ರದ್ದಿಯಾತಿ ಕಾನೂನು. ಸಾಮಾಜಿಕ ಸಂಪ್ರದಾಯಗಳು ಮತ್ತು ಪರಂಪರೆಯ ವಿರುದ್ಧ ಸೊಲ್ಲೆತ್ತಲು ಎಲ್ಲರೂ ಹೆದರುತ್ತಿದ್ದ ಆ ಕಾಲದಲ್ಲಿ ಇನಾಂದಾರಿ ಪದ್ಧತಿಯಂತಹ ಪಾಳೇಗಾರಿಕೆಯ ವಿಸರ್ಜನೆಯ ದಿಟ್ಟ ಹೆಜ್ಜೆಯನ್ನು ಕಡಿದಾಳರು ಇಟ್ಟರು.

ಇನಾಂ ರದ್ದಿಯಾತಿ ಕಾನೂನಿನಿಂದ ವಿಸರ್ಜನೆಗೊಂಡ ಇಂತಹ ಜನ ವಿರೋಧಿ ವ್ಯವಸ್ಥೆಗಳಲ್ಲಿ ಶೃಂಗೇರಿ ಮಠದ ಜಹಗೀರು ಬಹಳ ಪ್ರಮುಖವಾದುದು. ಅಂದಿನವರೆಗೆ ಶೃಂಗೇರಿ ಮತ್ತು ಅದರ ಸುತ್ತಮುತ್ತಲಿನ ಕೆಲವು ಹಳ್ಳಿಗಳು ಮಠದ ಒಂದು ಸಾರ್ವಭೌಮ ಅಧಿಕಾರ ಪಡೆದಿತ್ತು. ಅಲ್ಲಿನ ಜನರೆಲ್ಲಾ ಮಠದ ಸೊತ್ತುಗಳಾಗಿದ್ದರು. ಶೃಂಗೇರಿ ಸ್ವಾಮಿಗಳ ಬಾಯಿಯಿಂದ ಬೀಳುವ ಮಾತುಗಳೇ ಕಾನೂನು ಆಗಿದ್ದವು.

ಕಡಿದಾಳರು ಶೃಂಗೇರಿ ಮಠದ ಸಾರ್ವಭೌಮ ಅಧಿಕಾರವನ್ನು ಒಂದೇಟಿನಿಂದ ವಿಸರ್ಜಿಸಿದಾಗ ಪುರೋಹಿತಶಾಹಿ ರೊಚ್ಚಿಗೆದ್ದಿತು. ಅವರ ವಿರುದ್ಧ ಅಲ್ಲ-ಸಲ್ಲದ ಅಪಪ್ರಚಾರ ಮಾಡಿತು. ಇನಾಂದಾರರುಗಳಲ್ಲಿ ಹೆಚ್ಚಿನವರು ಬ್ರಾಹ್ಮಣರಾಗಿದ್ದುದರಿಂದ ಕಡಿದಾಳರಿಗೆ 'ಬ್ರಾಹ್ಮಣ ವಿರೋಧಿ' ಎಂಬ ಹಣೆಪಟ್ಟಿ ಹಚ್ಚಿದರು. ಇನಾಂ ರದ್ದಿಯಾತಿ ಮಸೂದೆ ವಿಧಾನ ಸಭೆಯಲ್ಲಿ ಚರ್ಚೆಗೆ ಬಂದಾಗ ಕೆಲವರು ಬಹಿರಂಗವಾಗಿಯೇ ಅವರ ಮೇಲೆ ಇಂತಹ ಆರೋಪ ಹೊರಿಸಿದರು.

ಆದರೆ ನಿರ್ಮಲ ಮನಸ್ಸಿನ ವಿಚಾರವಂತ ಕಡಿದಾಳರು ಇಂತಹ ಅಪಪ್ರಚಾರಗಳಿಂದ ಎದೆಗುಂದಲಿಲ್ಲ. ಇನಾಂ ರದ್ದಿಯಾತಿ ಮಸೂದೆಯನ್ನು "ಸಾಮಾಜಿಕ ಕ್ರಾಂತಿಯ ಸಣ್ಣ ಹೆಜ್ಜೆ"ಯೆಂದು ಕರೆದು ಅದನ್ನು ಸಮರ್ಥಿಸಿದರು. "ಸ್ವತಂತ್ರ ಭಾರತದಲ್ಲಿ ಸರ್ವ ಸಮಾನತೆಯನ್ನು ಎತ್ತಿ ಹಿಡಿಯುವುದು ನನ್ನ ಕರ್ತವ್ಯ ಜನರ ಮೂಢ ನಂಬಿಕೆ ಆಧಾರಿತವಾದ ಧರ್ಮ ಅಸಮಾನತೆಯನ್ನು ಪೋಷಿಸುವುದಾದರೆ ಆ ಧರ್ಮ ನನಗೆ ಬೇಕಿಲ್ಲ. ಹುಟ್ಟಿನ ಮೂಲವಾದ ಪ್ರತಿಷ್ಠೆಯನ್ನು ಕೆಳಗಿಳಿಸುವುದು ಅಪರಾಧವಾದರೆ ನಾನು ಅಂತಹ ಅಪರಾಧಿ ಅನ್ನಿಸಿಕೊಳ್ಳಲು ತಯಾರಿದ್ದೇನೆ ಎಂದು" ಘೋಷಿಸಿದರು.

ಕಡಿದಾಳ ಮಂಜಪ್ಪನವರ ದೊಡ್ಡ ಗುಣ ಪ್ರಕಟವಾದುದು ೧೯೫೬ರಲ್ಲಿ. ಕರ್ನಾಟಕದ ಏಕೀಕರಣ ಆಗುವುದಕ್ಕೆ ನಾಲ್ಕು ತಿಂಗಳ ಮೊದಲು ಹಳೆಯ ಮೈಸೂರಿನ ಮುಖ್ಯ ಮಂತ್ರಿ ಕೆಂಗಲ್ ಹನುಮಂತಯ್ಯನವರ ಪದಚ್ಯುತಿ ಆಯಿತು. ಅವರ ಸ್ಥಾನದಲ್ಲಿ ಕಡಿದಾಳರು ಮುಖ್ಯಮಂತ್ರಿಯಾದರು.

ಹಳೆಯ ಮೈಸೂರಿಗೆ ಆಗಿನ ಮದ್ರಾಸು, ಮುಂಬೈ ಮತ್ತು ಹೈದ್ರಾಬಾದ್ ಕರ್ನಾಟಕದ ಭಾಗಗಳು ಸೇರಿ ರೂಪುಗೊಂಡುದು ವಿಶಾಲ ಮೈಸೂರು. ರಾಜ್ಯ ಇಂತಹ ಸೇರ್ಪಡೆಯ ಮೂಲ ಶಕ್ತಿ ಹಳೆಯ ಮೈಸೂರು. ಅಂದ ಮೇಲೆ ವಿಸ್ತೃತ ಮೈಸೂರಿನ ಮುಖ್ಯ ಮಂತ್ರಿಯಾಗಿ ಕಡಿದಾಳರೇ ಮುಂದುವರಿಯಬೇಕಿತ್ತು. ಆದರೆ ಅದಾಗಲೇ ತಲೆ ಎತ್ತಿರುವ ಜಾತಿ ರಾಜಕಾರಣದಿಂದ ನಿಜಲಿಂಗಪ್ಪನವರು ಮುಖ್ಯ ಮಂತ್ರಿಯಾದರು. ಆ ಸಂದರ್ಭದಲ್ಲಿ ಕಡಿದಾಳರ ಸ್ಥಾನದಲ್ಲಿ ಇನ್ನೊಬ್ಬ ರಾಜಕಾರಣಿ ಇರುತ್ತಿದ್ದರೆ ದೊಡ್ಡ ರಾಜಕೀಯ ಹಗರಣವೇ ಆಗುತ್ತಿತ್ತು. ಆದರೆ ಕಡಿದಾಳರು ಮುಖ್ಯಮಂತ್ರಿ ಪದವನ್ನು ಸದ್ದಿಲ್ಲದೆ ತ್ಯಜಿಸಿದರು. ಇದರಿಂದ ತನಗೇನೊ ನಷ್ಟವಾಯಿತೆಂಬ ಭಾವನೆ ಎಂದೂ ಅವರನ್ನು ಬಾಧಿಸಿರಲಿಲ್ಲ.

ಕಡಿದಾಳರು ಮತ್ತೆ ೧೯೫೮ರಲ್ಲಿ ಜತ್ತಿ ಸಂಪುಟದಲ್ಲಿ ಕಂದಾಯ ಸಚಿವರಾದರು. ಈ ಅವಧಿಯಲ್ಲಿ ಅವರು ಗೇಣಿದಾರರು ರಕ್ಷಣೆಕೊಡುವ ಒಕ್ಕಲು ಮಸೂದೆಯನ್ನು ತಂದರು. ಅವರ ಪ್ರಗತಿಪರ ಚಿಂತನೆ ಹರಿದ ರೀತಿಗೆ ಈ ಮಸೂದೆ ಒಂದು ಸಾಕ್ಷಿ.

ಸುಮಾರು ೨೮ ವರ್ಷಗಳ ಕಾಲ ಬೆಂಗಳೂರಿನಲ್ಲಿ ಪತ್ರಕರ್ತನಾಗಿ ಕೆಲಸ ಮಾಡಿದ ನಾನು ಅಧಿಕಾರಕ್ಕೇರಿದ ರಾಜಕಾರಣಿಗಳನ್ನೇಕರನ್ನು ಬಹಳ ಹತ್ತಿರದಿಂದ ಕಂಡಿದ್ದೇನೆ. ಕಡಿದಾಳರಷ್ಟು ಶುದ್ಧ ಹಸ್ತರು, ಮುಗ್ಧರು, ನೇರ ನಡೆಯವರು ಮತ್ತು ಸಾಮಾಜಿಕ ಕಳಕಳಿಯುಳ್ಳ ಇನ್ನೊಬ್ಬ ರಾಜಕಾರಣಿಯನ್ನು ನಾನು ಕಂಡಿಲ್ಲ. ವಿಶಾಲ ಮೈಸೂರಿನಲ್ಲಿ ಅದಾಗಲೇ ಹರಡಿದ ಜಾತಿ ರಾಜಕೀಯದ ವಿಷಮತೆಯಿಂದ ಕಡಿದಾಳರು ರೋಸಿ ಹೋಗಿದ್ದರು. ಅವರಂತೆ ನಾನೂ ರೈತ ಕುಲದಲ್ಲಿ ಹುಟ್ಟಿದವನೆಂಬ ಕಾರಣಕ್ಕಾಗಿಯೇ ಏನೋ ಕಡಿದಾಳರು ಪತ್ರಕರ್ತನಾದ ನನ್ನನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಆತ್ಮೀಯತೆಯಿಂದ ಮಾತನಾಡುತ್ತಿದ್ದರು.

ತೆಳ್ಳಗೆ-ಬೆಳ್ಳಗೆ ಇರುವ ಮಂಜಪ್ಪ ಕಲುಷಿತ ರಾಜಕೀಯ ವಾತಾವರಣದಿಂದ ಸಿಟ್ಟಿಗೆದ್ದು ಮುಖ ಕೆಂಪಾಗಿ ಮಾತನಾಡಿ ಕಂಪಿಸುತ್ತಿದ್ದುದನ್ನು ಅನೇಕ ಸಲ ಕಂಡಿದ್ದೇನೆ. ಆ ಸಿಟ್ಟು ಈ ಇಳಿಯ ವಯಸ್ಸಿನಲ್ಲೂ ಅವರಲ್ಲುಳಿದಿದೆಯೆಂದರೆ ಅನೇಕರಿಗೆ ಅಚ್ಚರಿ

ಎನ್ನಿಸಬಹುದು. ಸಕ್ರಿಯ ರಾಜಕಾರಣದಿಂದ ದೂರ ಸರಿದ ಕಡಿದಾಳರು ಬೆಂಗಳೂರಲ್ಲೇ ನೆಲೆಸಿ ನಿರಾಯಾಸವಾಗಿ ಕಪ್ಪು ಕೋಟು ಧರಿಸಿ ಹೈಕೋರ್ಟಿನಲ್ಲಿ ವಕಾಲತು ಆರಂಭಿಸಿದರು. ಎರಡೇ ವರ್ಷಗಳಲ್ಲಿ ಹೈಕೋರ್ಟಿನ ಪ್ರಮುಖ ವಕೀಲರಾದರು. ಕಳೆದ ವರ್ಷದವರೆಗೂ ಅವರೊಬ್ಬ ಬಿಡುವಿಲ್ಲದ ವಕೀಲರಾಗಿದ್ದರು.

ರಾಜಕೀಯ ಬಿಟ್ಟರೂ ಸಾಮಾಜಿಕ ಜೀವನದಿಂದ ವಿಮುಖರಾದವರು ಕಡಿದಾಳರಲ್ಲ. ಅನೇಕ ಸೇವಾ ಸಂಸ್ಥೆಗಳಲ್ಲಿ ಅವರು ಸಕ್ರಿಯರು. ಭ್ರಷ್ಟಾಚಾರದ ವಿರುದ್ಧ ಹೋರಾಟದಲ್ಲಿ ಅವರು ಎಲ್ಲರಿಗಿಂತ ಮುಂದೆ, ನಾಗರಿಕ ಹಕ್ಕು ರಕ್ಷಣೆ ಸಮಿತಿಯಲ್ಲೂ ಅವರು ಮುಂದಾಳು. ೧೯೭೩-೭೪ರಲ್ಲಿ ಜಯಪ್ರಕಾಶ ನಾರಾಯಣರು ಊದಿದ ಸಂಪೂರ್ಣ ಕ್ರಾಂತಿಯ ಕಹಳೆಗೆ ಓಗೊಟ್ಟ ಹಿರಿಯರಲ್ಲಿ ಇವರು ಮೊದಲಿಗರು.

ಇಂತಹ ಇಳಿವಯಸ್ಸಿನಲ್ಲಿ ಅಷ್ಟೇನೂ ದೃಢಕಾಯರಲ್ಲದ ಕಡಿದಾಳರು ಪುರಾತನ ಕಾಲದ "ಐರಾವಣ-ಮೈರಾವಣರ" ಕಾಳಗಕ್ಕೆ ಹೋಲುವ ಈಗಿನ ಚುನಾವಣೆಯ ಕಾವಲಿಗೆ ಹೊರಟಿರುವುದು ಅಚ್ಚರಿಯ ಸಂಗತಿ. ಕಾವಲು ಕೆಲಸ ಅವರಿಂದಾಗುವುದೋ ಇಲ್ಲವೋ ಹೇಳಲಾಗದು. ಆದರೆ ಅವರಲ್ಲಿನ್ನೂ ಉಳಿದಿರುವ ಕಾವಲು ಬುದ್ಧಿಯ ಆತ್ಮಶುದ್ಧಿ ಮೆಚ್ಚತಕ್ಕದ್ದು.

# ಅಂತರಂಗದ ಗುರು

–ಜಿ.ಎ.ಪುರುಷೋತ್ತಮಗೌಡ

ನಾನು ನಮ್ಮ ಊರಿಂದ ೩ಮೈಲು ದೂರವಿರುವ ಆರಗ ಮಿಡಲ್ ಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಸಂದರ್ಭ. ವರ್ತೆಕೇರಿ ಊರಲ್ಲಿ ಗೋಪಿನಾಥ ಎಂಬ ನದಿಗೆ ಸೇತುವೆ ನಿರ್ಮಾಣವಾಗಿ ಅದರ ಉದ್ಘಾಟನೆಗೆ ಮಾನ್ಯ ಲೋಕೋಪಯೋಗಿ ಮಂತ್ರಿಗಳು, ನಮ್ಮ ಊರಿನವರು ಆದ ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಬರುತ್ತಾರೆ ಎಂಬ ಸುದ್ದಿ ಬಂತು. ಅದಕ್ಕಾಗಿ ನಮ್ಮ ಸ್ಕೂಲ್ ಮಕ್ಕಳು ನೀಟಾದ ಉಡುಪು ಧರಿಸಿ, ಗಾಂಧಿಟೋಪಿ ಹಾಕಿಕೊಂಡು ಗೋಪಿನಾಥ್ ಸೇತುವೆ ಬಳಿಗೆ ಮಾನ್ಯ ಮಂತ್ರಿಗಳು ಬರುವುದಕ್ಕೆ ಒಂದು ಗಂಟೆ ಮುಂಚಿತವಾಗಿ ಬರಬೇಕೆಂದು ಸ್ಕೂಲ್ ಮೇಷ್ಟ್ರು ತಿಳಿಸಿದ್ದರು. ನನಗೆ ಮಂತ್ರಿಗಳನ್ನು ನೋಡಬೇಕೆಂಬ ಕಾತುರ ಬಹಳವಾಗಿತ್ತು. ಬಹುಬೇಗನೇ ಶಾಲೆ ತಲುಪಿದೆ. ಅವರು ಕಾರಿನಲ್ಲಿ ಬರುತ್ತಾರೆ ಎಂಬುದನ್ನು ನೋಡುವ ಉತ್ಸಾಹ, ಹೆಮ್ಮೆ, ಕಾತುರದ ಕ್ಷಣ  ಬಂದೇಬಿಟ್ಟಿತು. ಮಾನ್ಯ ಮಂತ್ರಿಗಳ ಕಾರು ಮೊದಲು ಬಂದಿತು. ದೊಡ್ಡವರು ವರ್ಣಿಸುತ್ತಿದ್ದ ಅವರ ರೂಪ ಆಕಾರದಿಂದ ಅವರೇ ಕಡಿದಾಳರು ಎಂದು ತಿಳಿಯುತ್ತಿತ್ತು. ಉದ್ದದ ನಿಲುವಂಗಿ ಆಕಾರದ ಕೋಟು, ಪೈಜಾಮ, ಸಣ್ಣ ಶರೀರದವರು, ಬಹಳ ಕೆಂಪಗೆ ಕಾಣುತ್ತಿದ್ದರು. ಕಾರಿನಿಂದ ಇಳಿದವರೇ ಪೆಂಡಾಲಿಗೆ ಹೋಗದೆ ನೇರವಾಗಿ ಸೇತುವೆ ಬಳಿಗೆಹೋಗಿ ಉದ್ಘಾಟನೆ ಮಾಡಿದರು. ನಂತರ ಹತ್ತಾರು ಕಾರುಗಳು, ಜನಸಮೂಹದ ಮಧ್ಯೆ ಏನೊಂದು ಕಾಣುತ್ತಿರಲಿಲ್ಲ. ಮಂತ್ರಿಗಳು ಹಾಗೂ ಅನೇಕರು ಭಾಷಣ ಮಾಡಿದರು. ಆ ಸಭೆಯಲ್ಲಿ ಹಿಂದೆ ಮುಂದೆ ಎಲ್ಲಾ ಕಡೆ ಓಡಾಡುತ್ತ, ಮಾನ್ಯ ಕಡಿದಾಳರ ಹತ್ತಿರ ಸಲೀಸಾಗಿ ಮಾತಾಡುತ್ತಿದ್ದ, ಪೈಜಾಮ ಶರಟು ಧರಿಸಿದ ವ್ಯಕ್ತಿ ಶ್ರೀ ಪಿ.ಎಮ್.ಶ್ರೀನಿವಾಸರವರನ್ನು ನೋಡುವುದೇ ನನಗೆ ಸಂತೋಷ ಹಾಗೂ ಹೊಸ ವಿಷಯವಾಗಿತ್ತು. ಅಂತಹ ಮಾನ್ಯ ಮಂತ್ರಿಗಳೊಂದಿಗೆ ಒಡನಾಡುವ ಸೌಭಾಗ್ಯ ಮುಂದೊಂದು ದಿನ ನನಗೆ ಲಭ್ಯವಾಗುವುದೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಸಮಾರಂಭ ಮುಗಿದ ಕೂಡಲೆ ಕಾರು ಹತ್ತಿ ಹೋಗುವುದನ್ನು ನೋಡಬೇಕೆಂಬ ಆಸೆ ಈಡೇರಲಿಲ್ಲ. ಸಮಾರಂಭದ ಕೊನೆಯಲ್ಲಿ ಸಿಹಿತಿಂಡಿ ಹಂಚುತ್ತಿದ್ದರು. ಅದೂ ಸಿಗಲಿಲ್ಲ.  ಶ್ರೀ ಕಡಿದಾಳರ ನೆನಪು ಮಾತ್ರ ನನ್ನ ಮನಸ್ಸಿನಲ್ಲಿ ಉಳಿಯಿತು.

ಮಾನ್ಯ ಕಡಿದಾಳರನ್ನು ಎರಡನೇ ಭಾರಿ ಭೇಟಿಯಾಗುವ ಸಂದರ್ಭ ಒದಗಿ ಬಂದಿದ್ದು ನಾನು ಬೆಂಗಳೂರಿಗೆ ಬಂದಾಗ. ಎಸ್.ಎಸ್.ಎಲ್.ಸಿ. ಮುಗಿಸಿ ಇಂಟರ್‌ಮಿಡಿಯೇಟ್‌ಗೆ ಸೇರಿದ ಸಂದರ್ಭದಲ್ಲಿ ತಂದೆ ತೀರಿಹೋದ ದುಃಖ ಒಂದೆಡೆಯಾದರೆ, ಓದನ್ನು ಮುಂದುವರಿಸಲು ಹಣಕಾಸಿನ ತೊಂದರೆ ಇನ್ನೊಂದೆಡೆ. ಆದ್ದರಿಂದ ದುಡಿಯುವ ಮಾರ್ಗ ಹುಡುಕಲು ಹೊರಟೆ. ಗಣ್ಯ ವ್ಯಕ್ತಿಗಳ ಶಿಫಾರಸ್ಸಿದ್ದರೆ ಸರ್ಕಾರದಲ್ಲಿ ಕಿರಿಯ ಸಹಾಯಕನ ಹುದ್ದೆ ಸಿಗುತ್ತದೆ ಎಂದು. ಅದರಲ್ಲೂ ಮಾನ್ಯ ಕಡಿದಾಳ ಮಂಜಪ್ಪನವರ ಶಿಫಾರಸ್ಸಿದ್ದರೆ ಆಗುತ್ತದೆ ಎಂದು ಕೇಳಿಬಂತು. ನನಗೆ ಪರಿಚಿತರಾದ ಕೋಣಂದೂರು ಲಿಂಗಪ್ಪ ಅವರು ಮತ್ತು ನಮ್ಮ ಊರಿನವರೇ ಆದ ಶ್ರೀ ಪಿ.ಎಂ.ಶ್ರೀನಿವಾಸ ಅವರು ನನ್ನನ್ನು ಮಾನ್ಯ ಕಡಿದಾಳ್‌ರ ಹತ್ತಿರ ಕರೆದುಕೊಂಡು ಹೋಗಿ ಈ ಹುಡುಗನಿಗೆ ಒಂದು ಕೆಲಸಕೊಡಿಸಿ ಎಂದು ಕೇಳಿಕೊಂಡರು. ಬಡತನದ ಕಷ್ಟನಷ್ಟಗಳ ಅರಿವು, ಬಡವರ ಬಗ್ಗೆ ದೀನದಲಿತರ ಬಗೆ ಸದಾ ಕಾಳಜಿ ಹೊಂದಿರುವ ವ್ಯಕ್ತಿಯೆಂದರೆ ಮಂಜಪ್ಪನವರು ಎಂಬುದು ಆಗ ಪ್ರತ್ಯಕ್ಷನಾಗಿ ಕಂಡೆ. ನನ್ನ ಬಗ್ಗೆ ಎಲ್ಲಾ ವಿವರ ತಿಳಿದುಕೊಂಡು ವಿಧಾನಮಂಡಲದ ಕಾರ್ಯಾಲಯದ ಕಾರ್ಯದರ್ಶಿ ಶ್ರೀ ವೆಂಕಟರಮಣ ಅಯ್ಯರ್ ಅವರಿಗೆ ಫೋನ್ ಮಾಡಿ ಕೆಲಸ ಕೊಡುವಂತೆ ಶಿಫಾರಸ್ ಮಾಡಿದರು. ವಿಧಾನಸೌಧದಲ್ಲಿ ಕೆಲಸ ಕೊಡಿಸಿ ನನ್ನ ಭವಿಷ್ಯಕ್ಕೆ ಭದ್ರಬುನಾದಿಯನ್ನು ಹಾಕಿಕೊಟ್ಟ ಗುರು ಮಾನ್ಯ ಕಡಿದಾಳರು. ಅವರ ಕಾಲಿಗೆ ನಮಸ್ಕರಿಸಿದ ನನ್ನನ್ನು ಕುರಿತು ನೇರವಾಗಿ ಒಂದು ಮಾತು ಹೇಳಿದರು. "ನಮ್ಮ ಕಡೆ ಹುಡುಗರಿಗೆ ಕೆಲಸ ಕೊಡಿಸಿದರೆ ನಂತರ ತಿರುಗಿ ನನ್ನ ಕಡೆ ಬರೋದೆ ಇಲ್ಲ. ನೀನು ಹಾಗೆ ಮಾಡದೆ ಆಗಾಗ್ಗೆ ಬರುತ್ತಾ ಇರಪ್ಪ. ಕೆಲಸದಲ್ಲೂ ಒಳ್ಳೆ ಹೆಸರು ತರಬೇಕು" ಎಂದು ಬೆನ್ನು ತಟ್ಟಿ ಆಶೀರ್ವದಿಸಿ ಕಳಿಸಿದರು. ಅವರ ಆಶೀರ್ವಾದ ಮಾರ್ಗದರ್ಶನದಿಂದ ಸಂಜೆ ಕಾಲೇಜಿನಲ್ಲಿ ಓದಿ ಡಿಗ್ರಿ ಹಾಗೂ ಲಾ ಪದವಿ ಮುಗಿಸಿ ಹಂತಹಂತವಾಗಿ ಬಡ್ತಿ ಪಡೆದು ವಿಧಾನಪರಿಷತ್ತಿನಲ್ಲಿ ವಿಶೇಷ ಕಾರ್ಯದರ್ಶಿಯ ಹುದ್ದೆವರೆಗೂ ಏರಿ ನಿವೃತ್ತನಾದೆ. ಕೆಲಸಕ್ಕೆ ಸೇರಿದಂದಿನಿಂದ ಅವರಲ್ಲಿಗೆ ಆಗಾಗ್ಗೆ ಹೋಗಿ ಬರುತ್ತಿದ್ದೆ. ಅವರು ಹೇಳಿದ ಮಾತನ್ನು ಅಕ್ಷರಶಃ ಇಂದಿಗೂ ನಡೆಸಿಕೊಂಡು ಬಂದಿದ್ದೇನೆ ಎಂದು ಹೇಳಿಕೊಳ್ಳುವುದರಲ್ಲಿ ನನಗೆ ತೃಪ್ತಿ ಇದೆ. ಅವರ ನಿಷ್ಕಲ್ಮಷ ಮನಸ್ಸು, ಮುಗ್ಧ ನಗು, ತಿಳಿಯಾದ ಮನ-ಮಾತು ನನ್ನ ಅನುಭವಕ್ಕೆ ಬಂದವು. ಆಫೀಸಿನ ವಿಷಯ, ಊರಿನ ವಿಷಯಗಳನ್ನು ಮನಬಿಚ್ಚಿ ಹೇಳಿಕೊಳ್ಳುತ್ತಿದ್ದರು. ಅವರ ಮಾತಿನಲ್ಲಿ ಪ್ರಜಾಪ್ರಭುತ್ವದ ತತ್ವಗಳು, ಗಾಂಧೀ ತತ್ವಗಳು ಎದ್ದು ಕಾಣುತ್ತಿದ್ದವು. ಅನ್ಯಾಯವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಿದ್ದರು. ಪ್ರಾಮಾಣಿಕತೆಯ ರೂಪವೆಂದರೆ

ಮಾನ್ಯ ಮಂಜಪ್ಪನವರು ಎಂಬುದನ್ನು ಕಂಡುಕೊಂಡೆ.

೧೯೬೭ರ ಚುನಾವಣೆಯ ನಂತರ ಶ್ರೀ ಕಡಿದಾಳರು ಮಂತ್ರಿಗಳಾಗಿರಲಿಲ್ಲ. ಆದರೆ ಎಂ.ಎಲ್.ಎ. ಆಗಿದ್ದರು. ಇದೇ ಅವಧಿಯಲ್ಲಿ ನನಗೆ ಅವರು ಕೆಲಸ ಕೊಡಿಸಿದ್ದರು. ಆಗಾಗ್ಗೆ ಅವರ ಮನೆಗೆ ಹೋಗಿ ಬರುತ್ತಿದ್ದ ನನಗೆ ಅಂದಿನ ರಾಜಕೀಯದಿಂದ ಬೇಸತ್ತು ಹೋಗಿರುವ ಅವರ ಅಂತರಾಳದ ಮಾತುಗಳು ಕೇಳಿಬರುತ್ತಿದ್ದವು. ಮಹಾತ್ಮಾಗಾಂಧೀಜಿಯವರ ಕಲ್ಪನೆಯ ಭಾವಿಸ್ವರಾಜ್ಯದ ಉಜ್ವಲ ಭವಿಷ್ಯದ ಬಗ್ಗೆ ಕನಸು ಕಾಣುತ್ತಿದ್ದ ಶ್ರೀ ಕಡಿದಾಳರಿಗೆ ಅಂದಿನ ಹೊಲಸಾಗುತ್ತಿದ್ದ ರಾಜಕಾರಣವನ್ನು ನೋಡುವುದಾಗುತ್ತಿರಲಿಲ್ಲ. ಅದರ ಫಲವೇ 'ಪಂಜರವಳ್ಳಿಯ ಪಂಜು' ಎಂಬ ಕಾದಂಬರಿ. ಅಲ್ಲಿ ತಮ್ಮ ಮನದಾಳದ ನೋವನ್ನು ಹೊರಹಾಕಿದ್ದಾರೆ. ಇದರ ಮುಂದಿನ ಭಾಗವೆನ್ನುವಂತೆ "ಕ್ರಾಂತಿಕೂಟ"ವನ್ನು ಬರೆಯುತ್ತಿದ್ದರು. ಒಂದು ದಿನ ನಾನು ಹೋದಾಗ ಕೊಠಡಿಯಲ್ಲಿ ಬರೆಯುತ್ತಿದ್ದ ಶ್ರೀ ಕಡಿದಾಳರು ಹೊರಗೆ ಬಂದು ಬಿಳಿಹಾಳೆ ಕೊಟ್ಟು ಒಂದು ವಿಷಯ ತೋರಿಸಿ ದುಂಡಗೆ ಇದರಲ್ಲಿ ಬರಿ ಎಂದರು. ನನ್ನ ಅಕ್ಷರಗಳನ್ನು ನೋಡಿ ನಿನ್ನ ಅಕ್ಷರಗಳು ನನ್ನ ತರಹವೇ ಇದೆ. ಶನಿವಾರ, ಭಾನುವಾರಗಳಲ್ಲಿ ಬಂದು ಬರೆದುಕೊಡು ಎಂದರು. ನನಗೆ ಇದರಿಂದ ಖುಷಿಯಾಯಿತು. ಸ್ವಲ್ಪ ದಿನಗಳ ನಂತರ ಒಬ್ಬ ಟೈಪಿಸ್ಟ್‌ನ್ನು ನೇಮಿಸಿಕೊಂಡಾಗ ನನಗೆ ಬಿಡುಗಡೆಯಾಯಿತು. ಅವರ ಮತ್ತೊಂದು ಕಾದಂಬರಿ 'ನಾಳೆಯ ನೆಳಲು' ರಾಜಕೀಯ ಬದುಕಿನ ಸ್ಥಿತ್ಯಂತರಗಳನ್ನು, ಬೇಸರವನ್ನು ವೈರಾಗ್ಯವನ್ನು ಹೊರಹಾಕಿದೆ. ಅವರ ಮೇರುಕೃತಿ "ನನಸಾಗದ ಕನಸು" ಆತ್ಮ ಚರಿತ್ರೆಯ ಪ್ರಾಮಾಣಿಕ ಕೃತಿ. ರಾಜಕೀಯ ಮತ್ತು ಸಾಮಾಜಿಕ ವಿಷಯದೊಂದಿಗೆ ತಮ್ಮ ಜೀವನ ಘಟನೆಗಳನ್ನು ಮನಬಿಚ್ಚಿ ವಿವರಿಸಿದ್ದಾರೆ. ಅವರೊಬ್ಬ ಶ್ರೇಷ್ಠ ಸಾಹಿತಿ ಎನ್ನುವುದರಲ್ಲಿ ಸಂಶಯವಿಲ್ಲ. ಇಷ್ಟು ದೊಡ್ಡ ರಾಜಕಾರಣಿ, ಸಾಹಿತಿಯಾದರೂ ತಮ್ಮ ಪುಸ್ತಕದಲ್ಲಿ ನನ್ನ ಅಳಿಲು ಸೇವೆಯನ್ನು ಗುರುತಿಸಿ ನನ್ನ ಹೆಸರನ್ನು ದಾಖಲಿಸಿರುವುದು ಅವರ ದೊಡ್ಡತನಕ್ಕೆ ಹಿಡಿದ ಕನ್ನಡಿಯಾಗಿದೆ.

ತೀರ್ಥಹಳ್ಳಿ ತಾಲ್ಲೂಕಿನಿಂದ ಬೆಂಗಳೂರಿಗೆ ಬಂದು ಓದುತ್ತಿದ್ದವರು ಮತ್ತು ಉದ್ಯೋಗದಲ್ಲಿದ್ದವರು ಆಗಾಗ್ಗೆ ಒಟ್ಟಾಗುತ್ತಿದ್ದೆವು. ಆ ದಿನಗಳಲ್ಲಿ ನಮಗೊಂದು ವಿಚಾರ ಮೂಡಿಬಂದಿತು. ಮಲೆನಾಡ ಸಂಸ್ಕೃತಿಯ ಪ್ರತೀಕವಾದ 'ಅಂಟಿಗೆ-ಪಂಟಿಗೆ'ಯನ್ನು ಬೆಂಗಳೂರಿನಲ್ಲಿಯೂ ಆಚರಿಸೋಣ ಎಂಬ ವಿಚಾರವನ್ನು ಕಾರ್ಯಗತ ಮಾಡಲು ಸಿದ್ಧರಾದೆವು. ದೀಪಾವಳಿ ಹಬ್ಬದ ದಿನವೇ ಜ್ಯೋತಿ ಬೆಳಗಿಸಿ

ಪ್ರತಿಯೊಬ್ಬರ ಮನೆ ಮನೆಗೂ ತೆರಳಿ ಹಾಡುವ ಜನಪದ ಹಾಡು ಈ ಅಂಟಿಗೆ – ಪಂಟಿಗೆ'. ಆಗ ನಾವುಗಳು ಅಂದರೆ ಪ್ರಮುಖವಾಗಿ ಶ್ರೀ ಕೆ.ಟಿ.ಗುರುದೇವಪ್ರಸಾದ್, ಶ್ರೀ ಹರಿದಾಸ್ ಕುಮಾರ್, ಶ್ರೀ ಜೆ.ಟಿ.ಶಿವಪ್ಪ, ಶ್ರೀ ಎಸ್.ಎಲ್.ಮಂಜಪ್ಪ, ಶ್ರೀ ನೇಮರಾಜ್ ಕಂಠಿ, ಶ್ರೀ ಕುಸರ್ಗಿ ಗೋಪಾಲ್, ಶ್ರೀ ಕಟ್ಟೆಗೋಪಾಲ ಇನ್ನು ಮುಂತಾದವರು ಸೇರಿ ಅಂಟಿಗೆ–ಪಂಟಿಗೆಯ ಹಾಡು ಹಾಡಲು ತರಬೇತಿ ಮಾಡಿಕೊಂಡೆವು. ನಮ್ಮ ಊರಿನ ಹಿರಿಯರು, ಪ್ರಾಮಾಣಿಕ ರಾಜಕಾರಣಿ ಎಂದು ಪ್ರಸಿದ್ಧಿ ಪಡೆದ ಮಾನ್ಯ ಕಡಿದಾಳರ ಮನೆಗೆ ಮೊದಲು ಹೋಗಬೇಕೆಂದು ನಿಶ್ಚಯಿಸಿದೆವು. ಮುಂಚೆಯೇ ನಿಗದಿಪಡಿಸಿದ ವೇಳೆ ರಾತ್ರಿ ೮.೦೦ ಗಂಟೆಗೆ ಅವರ ಮನೆ ಬಾಗಿಲು ಎದುರು ಜ್ಯೋತಿ ಹಿಡಿದು ನಿಂತಿದ್ದ ಹಾಡುಗಾರರು ಒಂದು ಹಾಡು ಹಾಡಿದರು. ಒಂದರ ಮೇಲೆ ಮತ್ತೊಂದು, ಮತ್ತೊಂದು ಹಾಡಿ ಎಂದು ಪ್ರೋತ್ಸಾಹಿಸಿ ನಮ್ಮನ್ನು ಹಾಡುವಂತೆ ಮಾಡಿದರು. ಮಾನ್ಯ ಕಡಿದಾಳರ ಕಣ್ಣುಗಳಲ್ಲಿ ಆನಂದವಿತ್ತು. ಮನೆಯವರನ್ನೆಲ್ಲಾ ಕರೆದು ನಮ್ಮನ್ನು ತೋರಿಸಿ ಅಂಟಿಗೆ–ಪಂಟಿಗೆ ಬಗ್ಗೆ ವಿವರಣೆ ನೀಡಿದರು. ಸಂತೋಷಪಟ್ಟರು. ಅವರು ಚಿಕ್ಕವರಿದ್ದಾಗ ದೀಪಾವಳಿ ಹಬ್ಬದಲ್ಲಿ ಕೇಳಿದ ಹಾಡನ್ನು ಈಗ ನಿಮ್ಮಿಂದ ಕೇಳುವ ಅವಕಾಶ ಬಂತು. ಈ ಮಲೆನಾಡ ಕಲೆಯನ್ನು ಮುಂದುವರೆಸಿ ಎಂಬ ಪ್ರೋತ್ಸಾಹದ ಮಾತನ್ನು ಆಡಿದರು. ಇಷ್ಟಲ್ಲದೆ ತಮ್ಮ ಮಗಳು ಅಳಿಯನ ಮನೆಗೂ ಹೋಗಿ ಇಂದೇ ಹಾಡಬೇಕೆಂದು ದೂರವಾಣಿ ಮೂಲಕ ಅವರಿಗೆ ಅಂಟಿಗೆ–ಪಂಟಿಗೆ ತಂಡ ಬರುತ್ತದೆ ಎಂದು ತಿಳಿಸಿಯೂ ಬಿಟ್ಟರು. ನಮ್ಮ ತಂಡದವರಿಗೆ ಕಾಫಿ–ತಿಂಡಿ ಕೊಡಿಸಿ, ಜ್ಯೋತಿಗೆ ೫೦೦/– ರೂ ಕಾಣಿಕೆಯನ್ನು ಕೊಟ್ಟು ಬೀಳ್ಕೊಟ್ಟರು. ಮಾನ್ಯ ಕಡಿದಾಳರು ಏನೆನ್ನುತ್ತಾರೋ ಎಂಬ ಭಯ, ಆತಂಕ, ಗಾಬರಿಯಿಂದ ನಮ್ಮ ತಂಡದವರಿಗೆ ಉಸಿರು ಕಟ್ಟಿದಂತಾಗಿತ್ತು. ಆದರೆ ಶ್ರೀ ಕಡಿದಾಳರು ನೀಡಿದ ಸ್ವಾಗತ, ಉತ್ಸಾಹ, ಸ್ಫೂರ್ತಿ ತುಂಬಿದ ಅವರ ಸಾಂಸ್ಕೃತಿಕ ಉತ್ತೇಜನ, ಪ್ರಶಂಸೆಯ ನುಡಿಗಳು ಮುಂದೆ ಸಂಘ ಸ್ಥಾಪನೆಗೆ ಕಾರಣವಾಯಿತು.

ಹೀಗೆ ಸಹ್ಯಾದ್ರಿ ಸಂಘದ ಹುಟ್ಟಿಗೆ ಕಾರಣರಾದ ಶ್ರೀ ಕಡಿದಾಳರನ್ನೇ ಅಧ್ಯಕ್ಷರಾಗಬೇಕೆಂದು ಕೇಳಿಕೊಂಡೆವು. ಈ ಸಂಘವನ್ನು ಯಾವುದೇ ಕಾರಣಕ್ಕೂ ನಿಲ್ಲಿಸದೆ ಮುಂದುವರಿಸುತ್ತೇವೆಂದು ನಮ್ಮಗಳಿಂದ ಭರವಸೆ ಪಡೆದುಕೊಂಡರು. ಶ್ರೀ ಕಡಿದಾಳರ ನೇತೃತ್ವದಲ್ಲಿ ಹತ್ತು ವರ್ಷಗಳ ಕಾಲ ಸಂಘವು ಹಲವಾರು ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿತು. ಮಾನ್ಯ ಕಡಿದಾಳರ ನಿಧನಾನಂತರ ಮಂದಗತಿಯಲ್ಲಿ ಸಾಗಿದ ಸಂಘ ಶ್ರೀ ಕೆ.ವಿ. ಆರ್.ಟ್ಯಾಗೂರ್ ಅವರು ಪೋಲೀಸ್ ಅಧಿಕಾರಿಯಾಗಿ ಬೆಂಗಳೂರಿಗೆ ಬಂದಾಗ ಅವರ ಅಧ್ಯಕ್ಷತೆಯಲ್ಲಿ ಸಹ್ಯಾದ್ರಿ ಸಂಘ

ಸಕ್ರಿಯವಾಯಿತು. ವಿಚಾರಾತ್ಮಕ ಹಾಗೂ ಜನಪರ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದು ಜನಪ್ರಿಯವಾಗಿದೆ. ಶ್ರೀ ಕಡಿದಾಳರು ಸ್ಥಾಪನೆ ಮಾಡಿದ ಈ ಸಂಘವು ನಿರಂತರವಾಗಿ ಪ್ರತಿಭೆಗೆ ಮನ್ನಣೆ, ಸಾಧಕರಿಗೆ ಸನ್ಮಾನ, ಸಾಂಸ್ಕೃತಿಕ ಕ್ರೀಡೆಗಳಿಗೆ ಪ್ರೋತ್ಸಾಹವನ್ನು ನೀಡುತ್ತಾ ಬಂದಿವೆ. ಇದು ಮಲೆನಾಡಿಗರ ಹೆಮ್ಮೆಯ ಸಂಘವಾಗಿದೆ.

ನಾನು ಚಿಕ್ಕವನಿದ್ದಾಗ ಗೇಣಿದಾರರ ಬಗ್ಗೆ ಕೇಳಿಬಂದಂತಹ ವಿಷಯಗಳನ್ನು ನೆನಪಿಸಿಕೊಳ್ಳಬಹುದು. ಆ ಸಂದರ್ಭದಲ್ಲಿ ನಮ್ಮ ಕುಟುಂಬವು ಸೇರಿದಂತೆ ಹೆಚ್ಚಿನ ಗೇಣಿದಾರರಾದ ರೈತರು ವರ್ಷವೆಲ್ಲಾ ದುಡಿದು ಬೆಳೆದ ಬೆಳೆಯನ್ನು ವರ್ಷಾಂತ್ಯದಲ್ಲಿ ಜಮೀನಿನ ಒಡೆಯರು ನೇರವಾಗಿ ಬಂದು ತೆಗೆದುಕೊಂಡು ಹೋಗುತ್ತಿದ್ದರು. ರೈತನಲ್ಲಿ ಉಳಿದಿದೆಯೋ ಇಲ್ಲವೋ ಎಂದು ಗಮನಿಸುತ್ತಿರಲಿಲ್ಲ. ಈ ಶೋಷಣೆಯ ವಿರುದ್ಧ ಹೋರಾಟಕ್ಕಿಳಿದವರು ಕಷ್ಟಗಳನ್ನೆಲ್ಲಾ ಸ್ವತಃ ಅನುಭವಿಸಿದ ಶ್ರೀ ಕಡಿದಾಳರು.ಸ್ವಾತಂತ್ರ್ಯ ನಂತರ ಮುಂಚೂಣಿಯಲ್ಲಿದ್ದ ರಾಜಕಾರಣಿಯಾಗಿದ್ದರು. ರಾಜ್ಯದ ರೈತ ಕುಟುಂಬದ ಬವಣೆಯನ್ನು ಹೋಗಲಾಡಿಸಬೇಕೆಂದು ದೃಢವಾಗಿ ರಾಜ್ಯದಾದ್ಯಂತ 'ಉಳುವವನೇ ಹೊಲದ ಒಡೆಯ' ಎಂಬ ಕೂಗನ್ನು ಎಬ್ಬಿಸಿದರಲ್ಲದೆ ಕಾಗೋಡು ಸತ್ಯಾಗ್ರಹ ಎಂಬ ಚಳುವಳಿಯ ಮೂಲಕ ಸರ್ಕಾರದ ಗಮನ ಸೆಳೆದರು. ಆ ಹೊತ್ತಿಗೆ ಸರಿಯಾಗಿ ಶ್ರೀ ಕಡಿದಾಳರು ಶೃಂಗೇರಿಯಿಂದ ಗೆದ್ದು ಬಂದು ರಾಜ್ಯದ ಕಂದಾಯ ಮಂತ್ರಿಗಳಾಗಿದ್ದರಿಂದ ಭೂ ಸುಧಾರಣಾ ಕಾನೂನನ್ನು ತಂದು ಬಡ ಗೇಣಿದಾರರನ್ನು ಭೂ ಮಾಲೀಕರಾಗಿ ಮಾಡುವಲ್ಲಿ ಸಫಲರಾದರು. ಇವರನ್ನು ಭೂಸುಧಾರಣಾ ರೂವಾರಿ ಮತ್ತು ಮಲೆನಾಡಿನ ಗಾಂಧಿ ಎಂದು ಜನರು ಕೊಂಡಾಡಿದರು. ನಮ್ಮ ಭಾಗದ ರೈತ ಕುಟುಂಬದಲ್ಲೂ ಕೂಡ ಶ್ರೀ ಕಡಿದಾಳರು ದೇವರಾಗಿ ಪರಿಣಮಿಸಿದರು. ನನ್ನ ಜೀವನದುದ್ದಕ್ಕೂ ಕಡಿದಾಳರು ಎನ್ನುವಾಗಲೆಲ್ಲಾ ದೇವರ ನಾಮಸ್ಮರಣೆ ಮಾಡಿದಂತೆ ಎಂದು ಇಂದಿಗೂ ನನ್ನ ಭಾವನೆ.

ತುಂಬಾ ಸರಳ ಜೀವಿಯಾದ ಮಾನ್ಯ ಕಡಿದಾಳರು ಗಾಂಧಿತತ್ವವನ್ನು ಜೀವನದುದ್ದಕ್ಕೂ ಪರಿಪಾಲಿಸಿಕೊಂಡು ಬಂದರು. ಅನ್ಯಾಯವನ್ನು, ಭ್ರಷ್ಟಚಾರವನ್ನು ಖಂಡಿಸಿ ನ್ಯಾಯಯುತ ಜೀವನಕ್ಕೆ ತಮ್ಮನ್ನು ಮುಡಿಪಾಗಿಟ್ಟರು. ಪದವಿ, ಅಧಿಕಾರದ ಮೋಹ ಅವರಿಗಿರಲಿಲ್ಲ. ರಾಜಕೀಯದಿಂದ ಹೊರಬಂದು ವಕೀಲವೃತ್ತಿಯಿಂದ ದುಡಿದು ತಿನ್ನುವ ಬದುಕು ಸಾಗಿಸಿದರು. ಮರ್ಯಾದೆಯಿಂದ, ಗೌರವಯುತವಾದ ಬಾಳು ಸಾಗಿಸಬೇಕೆಂಬ ಧ್ಯೇಯ ಅವರದ್ದಾಗಿತ್ತು. ಅವರು ಕಂಡ ರಾಮರಾಜ್ಯದ ಕನಸು ನನಸಾಗಲಿಲ್ಲ. ಅನ್ಯಾಯ, ಅತ್ಯಾಚಾರ, ಭ್ರಷ್ಟಾಚಾರ ಇವುಗಳನ್ನು ನೋಡಿಕೊಂಡು

ಸಹಿಸಿಕೊಂಡು ಇರಲು ಆಗುತ್ತಿರಲಿಲ್ಲ. ಇದೇ ಕಾರಣ ಹೊಟ್ಟೆಹುಣ್ಣಿನಿಂದ ಬಹಳ ತೊಂದರೆ ಅನುಭವಿಸಿದರು. ಅವರ ಕೊನೆಯ ದಿನಗಳು ಬಹಳ ದುಸ್ತರವಾಗಿದ್ದವು. ಊಟ, ಆಹಾರ ಬಿಟ್ಟು ಬರೀ ಗಂಜಿ ಕುಡಿಯುತ್ತಿದ್ದರು. ಸ್ವಲ್ಪ ದಿನಗಳಲ್ಲಿ ಖಾಯಿಲೆ ಜಾಸ್ತಿಯಾಗಿ ಸೈಂಟ್ ಮಾರ್ಥಾಸ್ ಆಸ್ಪತ್ರೆಗೆ ದಾಖಲಾದರು. ದಿನೇ ದಿನೇ ದೇಹಸ್ಥಿತಿ ಕ್ಷೀಣಿಸುತ್ತಾ ಇತ್ತು. ಪ್ರತಿದಿನ ಆಸ್ಪತ್ರೆಗೆ ಹೋಗಿಬರುತ್ತಿದ್ದೆ. ೧೯೬೨ ಮಾರ್ಚ್ ೮ರಂದು ಅವರ ತಮ್ಮ ಕೊನೆಯುಸಿರೆಳೆದರು.ಶ್ರೀ ಕಡಿದಾಳರ ಮನೆಯವರೆಲ್ಲರ ಜೊತೆಯಲ್ಲಿ ನಾನು ಒಬ್ಬನಾಗಿ ದುಃಖಿಸಿದೆ. ಒಬ್ಬ ಆದರ್ಶ ಗುರುವನ್ನು ಮಾರ್ಗದರ್ಶಕನನ್ನು ಕಳೆದುಕೊಂಡು ದಿಕ್ಕೆಟ್ಟೆ. ಶ್ರೀ ಕಡಿದಾಳರ ಅಂತಿಮ ಯಾತ್ರೆ ಸರ್ಕಾರಿ ಗೌರವಗಳೊಡನೆ ನಡೆಯಿತು. ಅವರ ಅಂತ್ಯ ಸಂಸ್ಕಾರ ನಡೆಯುತ್ತಿರುವಾಗ ಒಂದು ತರಹದ ಭಯ, ಆತಂಕ ಆಗುತ್ತಿತ್ತು. ಸ್ವಂತ ತಂದೆಯನ್ನು ಕಳೆದುಕೊಂಡಾಗ ಆದ ದುಃಖಕ್ಕಿಂತ ಇಮ್ಮಡಿ ದುಃಖವಾಯಿತು. ಇದನ್ನು ಹೇಳಿಕೊಳ್ಳಲು ನನಗೆ ಪದಗಳು ಸಿಗುತ್ತಿಲ್ಲ. ಈಗ ಉಳಿದಿರುವುದು ಅವರ ಒಡನಾಟದ ನೆನಪು ಹಾಗೂ ಶ್ರೀ ಕಡಿದಾಳರ ಆಪ್ತ, ಹತ್ತಿರದ ಶಿಷ್ಯ ಎಂಬ ಹೆಮ್ಮೆ ಮಾತ್ರ.

ಈಗ ಮಾನ್ಯ ಕಡಿದಾಳರ ಜನ್ಮ ಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಬೇಕೆಂಬ ಉದ್ದೇಶದಿಂದ ಸಹ್ಯಾದ್ರಿ ಸಂಘವು ವ್ಯವಸ್ಥೆ ಮಾಡಿಕೊಂಡಿತು. ಈ ವಿಷಯವನ್ನು ಕುಟುಂಬದವರ ಜೊತೆಯಲ್ಲಿ ಸರ್ಕಾರದ ಗಮನಕ್ಕೆ ತಂದೆವು. ಮಾಜಿ ಮುಖ್ಯಮಂತ್ರಿಗಳಾದ ಕಡಿದಾಳರ ಜನ್ಮಶತಮಾನೋತ್ಸವವನ್ನು ರಾಜ್ಯ ಸರ್ಕಾರವೇ ಆಯೋಜಿಸಿ ನಡೆಸಿಕೊಡುತ್ತಿದೆ. ಈಗಾಗಲೇ ಬೆಂಗಳೂರು, ಚಿಕ್ಕಮಗಳೂರು, ಶಿವಮೊಗ್ಗಾದಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ನೆರೆದ ಜನಸ್ತೋಮವನ್ನು ನೋಡಿದರೆ ಅವರ ಶುದ್ಧಚಾರಿತ್ರ್ಯದ ರಾಜಕೀಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಅವರ ಸಾರ್ಥಕವಾದ ಬದುಕಿಗೆ ಸಹಸ್ರ ನಮನಗಳು.

# ದಿವ್ಯ ದರ್ಶನ

**–ಡಾ. ಎಂ.ಕೆ.ವೆಂಕಟೇಶ್ ಹೆಗ್ಡೆ**

ಸುಮಾರು ಅರ್ಧ ಶತಮಾನಗಳ ಹಿಂದೆ ಅಂದರೆ ಸರಿ ಸುಮಾರು ನಲವತ್ತೆಂಟು ವರ್ಷಗಳ ಹಿಂದೆ, ನಾನು ನನ್ನ ಜನ್ಮ ಭೂಮಿ ಕೊಡಚಾದ್ರಿಯ ಗಿರಿ ಶೃಂಗದ ತಪ್ಪಲಿನ ಆಗುಂಬೆಯ ಅಭಯಾರಣ್ಯದ ಪಕ್ಕದ ಗ್ರಾಮ ಮೇಗರವಳ್ಳಿಯಿಂದ ೧೯೬೦ ಮಳೆಗಾಲದಂದು ಬೆಂಗಳೂರು ನಗರಕ್ಕೆ ವ್ಯಾಸಂಗಕ್ಕಾಗಿ ಬಂದೆ. ಶಿವಮೊಗ್ಗದಿಂದ ಬಸ್ಸಿನಲ್ಲಿ ಬಂದು ಕಲಾಸಿ ಪಾಳ್ಯಂ ಬಸ್ ನಿಲ್ದಾಣದಲ್ಲಿ ಇಳಿದೆ. ಅಲ್ಲಿಂದ ಸೀದಾ ತೆರಳಿದ್ದು ನನ್ನ ಸ್ನೇಹಿತ ಹಾಗೂ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ವಿದ್ಯಾರ್ಥಿ ಶ್ರೀ ಎಂ.ಬಿ. ಜಯಚಂದ್ರ ಹೆಗ್ಡೆಯವರ ರೂಮಿಗೆ. ಅವನನ್ನು ಪೀಡಿಸಿ ಅಂದಿನ ರೆವಿನ್ಯೂ ಸಚಿವ ಶ್ರೀ ಕಡಿದಾಳ್ ಮಂಜಪ್ಪನವರ ಮನೆಗೆ ಅವನ ಸಹಾಯದಿಂದ ತೆರಳಿದೆ. ಆದರೆ ಅದು ಒಂದು ಷರತ್ತಿನ ಮೇಲೆ. ಮನೆಯನ್ನು ದೂರದಿಂದ ತೋರಿಸಲಾಗುವುದು. ಆದರೆ ಮುಂದಿನ ಆಗು – ಹೋಗುಗಳಿಗೆ ನಾನು ಜವಾಬ್ದಾರನಲ್ಲ ಎಂಬ ಷರತ್ತು. ಅಂದು ಸುಮಾರು ಸಂಜೆ ೬.೦೦ ಗಂಟೆಯ ಸಮಯ. ಅವರು ಸಚಿವರಾಗಿದ್ದ ಮನೆ. ಶಾಂತಿನಗರ ಆಂಡ್ರೂ ರಸ್ತೆಯಲ್ಲಿತ್ತು. ಸೀದಾ ಗೇಟಿನ ಬಳಿ ಬಂದೆ. ಆದರೆ ನನ್ನ ಆಸೆಗೆ ತಣ್ಣೀರು ಎರಚುವಂತೆ ಗೇಟಿನ ಮುಂದೆ ಆ ದಿನ ಭೇಟಿ ಇಲ್ಲ ಎಂಬ ದಪ್ಪ ಅಕ್ಷರದ ಫಲಕವಿತ್ತು. ನನಗೆ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತಾಯಿತು. ಕಾರಣ ಬೆಳಿಗ್ಗೆ ೧೦.೦೦ ಗಂಟೆಗೆ ನನಗೆ ಹೆಬ್ಬಾಳದ ಪಶು ವೈದ್ಯಕೀಯ ಕಾಲೇಜಿನಲ್ಲಿ ಸೀಟಿಗಾಗಿ ಸಂದರ್ಶನವಿತ್ತು. ಸೀದಾ ಗೇಟಿನ ಬಳಿ ಹೋದಾಗ ಅಲ್ಲಿನ ಸಿಬ್ಬಂದಿಗಳ ಹತ್ತಿರ ನಾನು ಕಡಿದಾಳರನ್ನು ನೋಡಲೇಬೇಕೆಂದು ತಿಳಿಸಿದೆ. ಸಿಬ್ಬಂದಿಯಿಂದ ಬೋರ್ಡ್ ಓದಿ ಮನೆಗೆ ಹೋಗಬಹುದು ಎಂಬ ಉತ್ತರ ಬಂತು. ಆದರೆ ಆಗ ನನಗೆ ಯಾವ ಸರ್ಕಾರಿ ಪ್ರೋಟೋಕಾಲ್‌ಗಳ ಅರಿವಿರಲಿಲ್ಲ. ನಾನು ನೋಡಲೇಬೇಕೆಂದು ಹಟ ಹಿಡಿದು, ಗೇಟಿನ ಮುಂದೆ ನಿಂತಾಗ ಮನೆಯ ಮುಂದೆ ಇಬ್ಬರು ಯುವತಿಯರು ನಿಂತಿದ್ದರು. ಈ ಗಲಾಟೆ ನೋಡಿ, ಒಬ್ಬಳು ತೆಳ್ಳಗೆ ಬೆಳ್ಳಗಿನ ಯುವತಿ ಬಂದು ನನ್ನ ಕಷ್ಟ ವಿಚಾರಿಸಿದರು. ಆದರೆ ಅವರು ಮಂಜಪ್ಪನವರಿಗೆ ಆರೋಗ್ಯ ಸರಿಇಲ್ಲದೆ ಹಾಸಿಗೆಯಲ್ಲಿ ಮಲಗಿದ್ದಾರೆ. ಯಾರನ್ನೂ ನೋಡುವುದಿಲ್ಲ ಎಂದು ತಿಳಿಸಿದರು. ಆದರೆ ನಾನು ಅವರನ್ನು ದೈನ್ಯದಿಂದ ನಾಳೆ

ಬೆಳಿಗ್ಗೆಯೇ ಪಶು ವೈದ್ಯಕೀಯ ಕಾಲೇಜಿನಲ್ಲಿ ಸಂದರ್ಶನವಿರುವುದಾಗಿಯೂ ನೋಡಲೇಬೇಕೆಂದು ಹಟ ಹಿಡಿದಾಗ ಒಳಗೆ ಬರಲು ಅನುಮತಿ ಕೊಟ್ಟರು. ಬಹಳ ದಿನಗಳ ನಂತರ ತಿಳಿಯಿತು. ಅವರು ಕಡಿದಾಳ ಮಂಜಪ್ಪನವರ ಹಿರಿಯ ಮಗಳು ಶ್ರೀಲತ ಎಂದು. ಅವರ ಮೇಲೆ ನನ್ನ ಧನ್ಯತಾಭಾವ ಇಮ್ಮಡಿಯಾಯಿತು. ನನ್ನನ್ನು ಶ್ರೀ ಲತಾರವರೇ ಮನೆಯೊಳಗೆ ಕರೆದು ಶ್ರೀ ಮಂಜಪ್ಪನವರ ಬೆಡ್‌ರೂಂಗೆ ಕಳುಹಿಸಿದರು. ನನಗೆ ಪರಮಾಶ್ಚರ್ಯ. ಅಲ್ಲಿ ಮಂಚದ ಮೇಲೆ ಹಾಸಿಗೆಯಲ್ಲಿ ಮೈತುಂಬಾ ಗುಲಾಬಿ ಬಣ್ಣದ ಉಣ್ಣೆಯ ರಗ್ಗನ್ನು ಹೊದ್ದು ಮಲಗಿದ್ದರು. ಆದರೆ ರಾತ್ರಿಯ ಟ್ಯೂಬ್‌ಲೈಟ್ ಬೆಳಕಿನಲ್ಲಿ ಬಿಳಿಯ ಬಣ್ಣದ ಸಣಕಲು ದೇಹದ ದಿವ್ಯ ಚೇತನದ ದರ್ಶನ ನನ್ನ ಜೀವನದಲ್ಲಿ ಮೊದಲ ಬಾರಿಗೆ ಆಯಿತು. ಆದರೆ ಆ ದಿವ್ಯ ಚೇತನ ಕಡಿದಾಳ್ ಮಂಜಪ್ಪನವರು ಸ್ವಲ್ಪವೂ ಬೇಸರಿಸದೇ ನನ್ನನ್ನು ವಿಚಾರಿಸಿದರು. ನನಗೆ ಬೆಳಿಗ್ಗೆ ಪಶು ವೈದ್ಯಕೀಯ ಕಾಲೇಜಿನಲ್ಲಿ ಸೀಟಿಗಾಗಿ ಸಂದರ್ಶನವಿರುವುದಾಗಿಯೂ ತಾವು ಸಂಬಂಧಪಟ್ಟವರಿಗೆ ಶಿಫಾರಸ್ಸು ಮಾಡಬೇಕಾಗಿ ಕಳಕಳಿಯಿಂದ ವಿನಂತಿಸಿದೆ. ಅವರ ಬಾಯಿಂದ ಬಂದಿದ್ದು, ಮಲೆನಾಡಿನ ಹುಡುಗರಿಗೆ ಬುದ್ಧಿ ಇಲ್ಲ, ನಾಳೆ ಸಂದರ್ಶನ ಇದ್ದರೆ, ಇವತ್ತು ರಾತ್ರಿ ಬಂದಿದ್ದೀಯಲ್ಲ ಅಂತ ಮೆದುವಾಗಿ ಗದರಿಸಿ ಅಂದಿನ ಪ್ರಿನ್ಸಿಪಾಲರಾಗಿದ್ದಂತಹ ಡಾ॥ ಕೆ.ಎ.ಶೆಟ್ಟಿಯವರಿಗೆ ನನ್ನ ಸಲುವಾಗಿ ಶಿಫಾರಸ್ಸು ಮಾಡಿದ್ದು, ಈಗಲೂ ನನ್ನ ಕಣ್ಣಮುಂದೆ ಹಸಿರಾಗಿದೆ. ಆದರೆ ಇಲ್ಲಿ ಮುಖ್ಯ ಸಂಗತಿ ಏನೆಂದರೆ ಮುಖ್ಯ ಮಂತ್ರಿಯಾಗಿದ್ದವರು ಮತ್ತು ಹಾಲಿ ರೆವಿನ್ಯೂ ಮಂತ್ರಿಗಳು ಆಗಿದ್ದಂಥ ಸನ್ಮಾನ್ಯ ಕಡಿದಾಳ್ ಮಂಜಪ್ಪನವರನ್ನು ಒಬ್ಬ ಅನಾಮಧೇಯ ಮಲೆನಾಡಿನ ಯುವಕ ಯಾರ ಶಿಫಾರಸ್ಸಿನ ಪತ್ರವೂ ಇಲ್ಲದೇ, ಅವರನ್ನು ಅವರ ಆರೋಗ್ಯ ಸರಿ ಇಲ್ಲದಿದ್ದರೂ ಅವರ ಬೆಡ್ ರೂಮಿನಲ್ಲಿ ಸಂದರ್ಶನ ಮಾಡಿದ ಯೋಗ ನನಗೆ ದೊರೆತಿತ್ತು. ನನಗೆ ಆ ಘಟನೆ ಈಗಲೂ ನಂಬಲು ಅಸಾಧ್ಯವಾಗಿದೆ. ಅಂದರೆ ಆ ದಿನ ನನಗೆ ಯಾವ ಸರ್ಕಾರಿ ಪ್ರೋಟೋಕಾಲ್ ಗೊತ್ತಿರಲಿಲ್ಲ. ಆದರೆ ಏನೇ ಅವಮಾನ ಆದರೂ ಸರಿ ಜೀವನದಲ್ಲಿ ಏನಾದರೂ ಮಾಡಿ ವಿದ್ಯಾವಂತನಾಗಬೇಕೆಂಬ ಛಲವಿತ್ತು. ಆದರೆ ವಿಷಯ ಯಾಕೆ ಒತ್ತಿ ಹೇಳುತ್ತಿದ್ದೇನೆಂದರೆ ಇವತ್ತಿನ ದಿನಗಳಲ್ಲಿ ಒಬ್ಬ ಶಾಸಕರನ್ನು ಭೇಟಿ ಮಾಡಲು ಎಷ್ಟು ಕಷ್ಟವಿದೆ ಎಂಬುದು ನಂತರದ ದಿನಗಳಲ್ಲಿ ನನಗೆ ಅನುಭವವಾಯಿತು. ಇನ್ನೂ ಒಂದು ವಿಷಯ, ೬೦ರ ದಶಕದಲ್ಲಿ ಮಲೆನಾಡಿನಲ್ಲಿ ಯಾರನ್ನಾದರು ಭೇಟಿ ಮಾಡಿದರೆ ನಿನ್ನ ತಂದೆಯ ಹೆಸರೇನು ಎಂದು ಕೇಳಿದ ಬಳಿಕ, ನಿಮ್ಮ ತಂದೆ ಎಷ್ಟು ಮಣ ಅಡಿಕೆ ಬೆಳೆಯುತ್ತಾರೆ ಎಂದು ವಿಚಾರಿಸುವುದು ವಾಡಿಕೆಯಾಗಿತ್ತು. ಕಾರಣ ನನ್ನ ತಂದೆ ಬೆಳೆಯುವ ಅಡಿಕೆಯ

ಮೇಲೆ ನನ್ನ ಯೋಗ್ಯತೆ ನಿರ್ಧಾರವಾಗುತ್ತಿದ್ದಂತಹ ಕಾಲ. ಹಾಗಿರುವಾಗ ಮಲೆನಾಡಿನ ಇದೇ ಪರಿಸರದಿಂದ ಬಂದು ಅತ್ಯುನ್ನತ ಪದವಿಯಲ್ಲಿದ್ದರೂ ಅವರ ಮನಸ್ಸು ಚಿಕ್ಕ ಮಗುವಿನಂತೆ ಪರಿಶುದ್ಧವಾಗಿತ್ತು. ತಮ್ಮ ಬಳಿ ಯಾರೇ ಬಂದರೂ ಅವರಿಗೆ ಏನೂ ಕೇಳದೆ ಸಹಾಯ ಹಸ್ತ ನೀಡುವ ಬೇರಾರಲ್ಲೂ ಇರದ ಈ ಮಹೋನ್ನತ ಗುಣ ಅವರಲ್ಲಿತ್ತು. ಬೇರೆ ರಾಜಕಾರಣಿಗಳು ಅನುಸರಿಸಬೇಕಾದಂತ ಮಾದರಿ ರಾಜಕಾರಣಿಯಾಗಿದ್ದರು.

ಅಂದು ಸಂಜೆ ಭೇಟಿ ಮಾಡಿದ ನಂತರ ನಿರಂತರವಾಗಿ ಭೇಟಿ ಮಾಡುತ್ತಲೇ ಇದ್ದೆ. ಅದೇ ರೀತಿ ಅವರ ನಿವಾಸಕ್ಕೆ ಮಾತ್ರವಲ್ಲ. ವಿಧಾನಸೌಧದ ಕಛೇರಿಗೂ ಅದೇ ರೀತಿ ನುಗ್ಗುತ್ತಿದ್ದೆ. ಒಂದು ನಿದರ್ಶನ ಅಂದರೆ ವಿಧಾನ ಸೌಧದ ದ್ವಾರದಲ್ಲಿ ಯಾರಾದರೂ ತಡೆದರೆ ಕಡಿದಾಳರನ್ನು ನೋಡಬೇಕು ಎಂದರೆ ನನ್ನನ್ನು ತಡೆಯುವವರು ಯಾರೂ ಇರಲಿಲ್ಲ. ಸೀದಾ ವಿಧಾನಸೌಧದ ಮೂರನೇ ಮಹಡಿಗೆ ಹೋಗಿ ಅಲ್ಲಿ ಅವರ ದ್ವಾರ ಪಾಲಕ ನನ್ನನ್ನು ನೋಡಿದ ಕೂಡಲೇ ಒಳಗೆ ಕಳುಹಿಸುತ್ತಿದ್ದ. ಒಂದು ಪ್ರಸಂಗ ಈ ರೀತಿ ನಡೆಯಿತು. ನಾನು ಸೀದಾ ಅವರ ಚೇಂಬರ್ ಒಳಗೆ ನುಗ್ಗಿದೆ. ಅವರ ಮುಂದೆ ಅಂದಿನ ರೆವಿನ್ಯೂ ಕಮೀಷನರ್ ನಿಂತು ಮಾತನಾಡುತ್ತಿದ್ದರು. ನನ್ನನ್ನು ನೋಡಿದಕೂಡಲೇ ಮಾತನ್ನು ಅರ್ಧಕ್ಕೆ ನಿಲ್ಲಿಸಿ, ನಾನು ಬಂದ ಕೆಲಸಗಳ ಬಗ್ಗೆ ವಿಚಾರಿಸಿ, ಅದನ್ನು ನೆರವೇರಿಸಿದ ನಂತರ ರೆವಿನ್ಯೂ ಕಮೀಷನರ್‌ಗೆ ಹೇಳಿದ್ದು ನನ್ನ ಕಣ್ಣ ಮುಂದಿದೆ. ಏನೂ ಬೇಸರಿಸಬೇಡಿ ಈ ಹುಡುಗ ಹಾಗೇನೆ. ಯಾವಾಗ ಬೇಕೆಂದರೆ ಆವಾಗ ನನ್ನ ಮನೆಗಾಗಲೀ ಅಥವಾ ವಿಧಾನಸೌಧಕ್ಕಾಗಲೀ ಬಂದು ಬಿಡುತ್ತಾನೆ. ಅವನ ಕೆಲಸ ಮಾಡಿಕೊಂಡು ಹೋಗುತ್ತಾನೆ. ನಂತರ ಬಂದು ನಿಮ್ಮಿಂದ ಬಹಳ ಉಪಕಾರವಾಯಿತು ಎಂದು ಹೊಗಳುತ್ತಾನೆ. ಆದರೆ ಈಗಿನ ರಾಜಕೀಯ ಧೃವೀಕರಣದಲ್ಲಿ ಮತ್ತು ರಾಜಕೀಯ ಅಧೋಗತಿಯಲ್ಲಿ ಎಷ್ಟು ಜನ ಸಚಿವರನ್ನು ಅನಾಮಧೇಯ ವ್ಯಕ್ತಿಗಳು ಸಂದರ್ಶನ ಪಡೆಯಲು ಸಾಧ್ಯ. ಆದರೆ ಕಡಿದಾಳ್ ಮಂಜಪ್ಪನವರಿಂದ ಇಂದಿನ ರಾಜಕಾರಣಿಗಳು ಕಲಿಯುವುದು ಬಹಳಷ್ಟು ಇದೆ. ನಾನು ಬೆಂಗಳೂರು ನಗರದಲ್ಲಿ ಸುಮಾರು ಅರ್ಧ ಶತಮಾನಗಳಿಂದ ಇದ್ದರೂ ಸಹ ಮತ್ತು ನನ್ನ ಪಶು ವೈದ್ಯಕೀಯ ವೃತ್ತಿಯಿಂದ ಸ್ವಯಂ ನಿವೃತ್ತಿ ಪಡೆದು ಸುಮಾರು ಹತ್ತು ವರ್ಷಗಳಿಂದ ಕರ್ನಾಟಕ ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತನಾಗಿ, ಕೆ.ಪಿ.ಸಿ.ಸಿ. ಸದಸ್ಯನಾಗಿ ನೂರಾರು ಜನ ಹಿರಿಯ ರಾಜಕಾರಣಿಗಳ ಸಂದರ್ಶನ ಯೋಗ ದೊರೆತ್ತಿದ್ದರೂ ಸಹ ಕಡಿದಾಳ್ ಮಂಜಪ್ಪನವರಂತಹ ಸರಳ, ಸಜ್ಜನ, ನಿಸ್ವಾರ್ಥ, ಪರೋಪಕಾರ ಮನೋಭಾವದ ಬೇರೊಬ್ಬ ವ್ಯಕ್ತಿಯ ದರ್ಶನವಾಗಿಲ್ಲ.

ಕಡಿದಾಳರು ರಾಜಕೀಯ ನಿವೃತಿಯ ನಂತರ ವಕೀಲಿ ವೃತ್ತಿ ನಡೆಸುತ್ತಿದ್ದರು. ನಾನು ಹೆಚ್ಚು ಕಡಿಮೆ, ತಿಂಗಳಿನಲ್ಲಿ ಎರಡು ಬಾರಿಯಾದರೂ ಅವರು ಅಧಿಕಾರದಲ್ಲಿಲ್ಲದಿದ್ದೂ ಶಾಂತಿನಗರದ ಮುಖ್ಯರಸ್ತೆಯಲ್ಲಿರುವ ಅವರ ಕಾಂಟಿನೆಂಟಲ್ ಹೋಟೆಲ್ ಮಾಲಿಕರ ಬಾಡಿಗೆ ಮನೆಗೆ ಹೋಗಿ ಬರುತ್ತಿದ್ದೆ. ಅವರನ್ನು ನೋಡಿ ಅವರೊಡನೆ ಅಲ್ಪಕಾಲ ಕಳೆಯುವುದೇ ನಮಗೆ ದೊಡ್ಡ ಭಾಗ್ಯವಾಗಿತ್ತು. ಅವರನ್ನು ಸಂದರ್ಶಿಸಿದಾಗ ಅನೇಕ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ವಿಷಯಗಳನ್ನು ಅವರು ಬಿಡುವಿದ್ದಾಗ ನಮ್ಮ ತಲೆಗೆ ತುಂಬುತ್ತಿದ್ದರು. ಇವನು ಶ್ರೀಮಂತರ ಮಗ, ಇವನು ಬಡಗೇಣಿದಾರನ ಮಗ ಎಂಬ ತಾರತಮ್ಯ ಅವರಲ್ಲಿ ಇರುತ್ತಿರಲಿಲ್ಲ. ನಿಷ್ಕಲ್ಮಷ ಸಹೃದಯತೆಯ ಮಹಾನ್ ವ್ಯಕ್ತಿ. ಶ್ರೀ ಕಡಿದಾಳರು ವಕೀಲಿ ವೃತ್ತಿಯ ಜೊತೆಗೆ ಎಲ್ಲರಿಗೂ ತಿಳಿದಂತೆ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಅವರ ಪುಸ್ತಕಗಳನ್ನು ನಾವು ಮಾರಲು ತೆಗೆದುಕೊಳ್ಳುತ್ತಿದ್ದೆವು. ಆದರೆ ನಾನು ಮಾತ್ರ ಯಾವ ಪುಸ್ತಕವನ್ನು ಬೇರೆಯವರಿಗೆ ಹಣಕ್ಕೆ ಮಾರಲಿಲ್ಲ, ನನ್ನ ಮೇಲಾಧಿಕಾರಿಗಳಿಗೆ, ಸ್ನೇಹಿತರಿಗೆ ಮುಖ್ಯವಾಗಿ ಶ್ರೀ ಕಡಿದಾಳ ಮಂಜಪ್ಪನವರ ಮೇಲೆ ಅಭಿಮಾನವಿರುವವರಿಗೆ ಉಡುಗೊರೆಯಾಗಿ ಕೊಡುತ್ತಿದ್ದೆ. ಹಣವನ್ನು ಪುಸ್ತಕ ಮಾರಿದೆ ಎಂದು ಹೇಳಿ ತಲುಪಿಸುತ್ತಿದ್ದೆ. ಇಂತಹ ಸನ್ನಿವೇಶದಲ್ಲಿ ಕೊನೆಯ ಬಾರಿಗೆ ಪುಸ್ತಕ ತಂದಾಗ ಹಣ ತೆಗೆದುಕೊಂಡು ಹೋಗಿ ಕೊಡಲು ನನ್ನ ಪಶು ವೈದ್ಯಕೀಯ ವೃತ್ತಿಯ ಒತ್ತಡದಿಂದ ಆಗಲಿಲ್ಲ. ಒಂದು ದಿನ ನನ್ನ ವಿಳಾಸಕ್ಕೆ ಒಂದು ಅಂಚೆ ಕಾರ್ಡು ಬಂತು. ಅದರಲ್ಲಿ 'ಪುಸ್ತಕ ಮಾರಾಟವಾಗದಿದ್ದಲ್ಲಿ ಪುಸ್ತಕವನ್ನು ಹಿಂತಿರುಗಿಸುವುದು' ಅಂಥ ನಾಲ್ಕು ಸಾಲುಗಳಲ್ಲಿ ಬರೆಯಲಾಗಿತ್ತು. ಕೂಡಲೇ ತಡಮಾಡದೇ ಅವರನ್ನು ಅವರ ಶಾಂತಿನಗರದ ಮನೆಯಲ್ಲಿ ಹೋಗಿ ನೋಡಿದೆ. ಅದೇ ನೋಟ. ಆದರೆ ಅಜಗಜಾಂತರ ವ್ಯತ್ಯಾಸ. ೬೦ರ ದಶಕದಲ್ಲಿ ರೆವಿನ್ಯೂ ಮಂತ್ರಿ ಕಡಿದಾಳರನ್ನು ಮೊದಲಬಾರಿಗೆ ನೋಡಿದ್ದು, ಈಗ ವಕೀಲ ಸಾಹಿತಿ ಕಡಿದಾಳರನ್ನು ನೋಡಿದೆ. ಅವರಿಗೆ ಪುಸ್ತಕದ ಬಾಬ್ತು ಹಣಕೊಟ್ಟು, ವಿಳಂಬಕ್ಕೆ ಕಾರಣ ತಿಳಿಸಿ, ಕೊನೆಯದಾಗಿ ಅವರ ಪಾದಕ್ಕೆ ನಮಸ್ಕರಿಸಿ ಅವರ ಕಾಲಿನ ಬಳಿ ಕುಳಿತೆ. ಆಗ ತಲೆಯ ಬಳಿ ಕುಳಿತುಕೊಳ್ಳಲು ತಿಳಿಸಿ ಬಹಳ ವಿಷಾದದಿಂದ ನೀವೆಲ್ಲಾ ನನ್ನ ಮೇಲೆ ಈಗಲೂ ಅದೇ ಅಭಿಮಾನ ಇಟ್ಟಿದ್ದೀರಿ. ಆದರೆ ನನ್ನಿಂದ ನಿಜವಾಗಿ ಲಾಭ ಪಡೆದವರು ಮರೆತಿದ್ದಾರೆ ಎಂದು ಕೆಲ ಸಂಗತಿಗಳನ್ನು ನನಗೆ ಮನ ಬಿಚ್ಚಿ ಹೇಳಿದರು. ಅವೆಲ್ಲಾ ಈಗ ಅಪ್ರಸ್ತುತ, ಆದರೆ ಒಂದು ಮಾತು ಹೇಳಲೇಬೇಕು. ಅವರ ತಮ್ಮ ಕಡಿದಾಳ್ ತಮ್ಮಯ್ಯಗೌಡರ ಮಗಳು ಹಾಗೂ ಡಾ॥ ಎನ್.ಡಿ. ಪುರುಷೋತ್ತಮರವರ ಪತ್ನಿ ಶ್ರೀಮತಿ ಗೀತಾರವರ ಬಗ್ಗೆ ಬಾಯಿ ತುಂಬಾ ಹೊಗಳಿದರು.

ಅವರ ನನಸಾಗದ ಕನಸಿನಲ್ಲಿ ಅವರೇ ಹೇಳುವಂತೆ "ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ನಾವು ಅಂದು ಕಾಣುತ್ತಿದ್ದ ಕೆಲವು ಕನಸುಗಳು ನನಸಾಗಲಿಲ್ಲ". ಈ ಮಾತುಗಳಿಂದ ಮಾನ್ಯ ಶ್ರೀ ಕಡಿದಾಳ್ ಮಂಜಪ್ಪನವರ ವ್ಯಕ್ತಿತ್ವ ನಮಗಾಗುತ್ತದೆ. ಅವರು ಎಂದೂ ತಮ್ಮ ಸ್ವಾರ್ಥಕ್ಕಾಗಿ ಕಿಂಚಿತ್ತೂ ಯೋಚಿಸಿರಲಿಲ್ಲ. ಅವರು ಸರ್ಕಾರದ ವೆಚ್ಚದಲ್ಲಿ ಅನೇಕ ಸಾರಿ ವಿದೇಶಗಳಿಗೆ ಹೋಗುವ ಅವಕಾಶವಿತ್ತು. ಆದರೆ ಸರ್ಕಾರದ ಬೊಕ್ಕಸಕ್ಕೆ ಖರ್ಚು ಮಾಡಬಾರದೆಂದು ಅವರು ಪ್ರವಾಸವನ್ನೇ ಕೈಗೊಳ್ಳಲಿಲ್ಲ. ಅವರ ರಾಜಕೀಯ ಜೀವನದಲ್ಲಿ ಎಂದೂ ಯಾರೂ ಅವರ ನಡತೆ, ಕಾರ್ಯದ ಬಗ್ಗೆ ಚಕಾರವೆತ್ತಲಿಲ್ಲ.

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಒಂದು ಘಟನೆ ಬರುತ್ತದೆ. ಸತ್ಯಸಂಧನಾದ ಹರಿಶ್ಚಂದ್ರ ಮಹಾರಾಜ ಸಕಲ ವೈಭವಗಳನ್ನು ಬಿಟ್ಟು ಊರಿಂದ ಹೊರಟಾಗ ಪುರಜನರು 'ಪುರದ ಪುಣ್ಯಂ ಪುರುಷ ರೂಪಿಂದೆ ಪೋಗುತಿದೆ" ಎಂದು ದುಃಖಿಸುತ್ತಾರೆ. ಪುಣ್ಯಜೀವಿ ಕಡಿದಾಳರು ಜನತೆಯನ್ನು ಬಿಟ್ಟು ಮಾರ್ಚ್ ೧೯೯೨ರಲ್ಲಿ ಅಗಲಿದರು. ನಾವೀಗ ಅವರ ಆದರ್ಶಗಳನ್ನು ಮನೆಮನೆಗೆ ತಲುಪಿಸಬೇಕಿದೆ.

# ೧೮.೧೦.೧೯೫೬

–ಡಾ. ಕೆ.ಪದ್ಮನಾಭ ಉಡುಪ

ಶ್ರೀ ಪುರಂದರದಾಸರು ಎಂದೋ ಹಾಡಿದ್ದಾರೆ "ಸತ್ಯವಂತರಿಗಿದು ಕಾಲವಲ್ಲ; ದುಷ್ಟ ಜನರಿಗೆ ಸುಭಿಕ್ಷ ಕಾಲ" ಎಂದು ಕಡಿದಾಳ್ ಮಂಜಪ್ಪನವರ 'ಪಂಜರವಳ್ಳಿ ಪಂಜು' ಕಾದಂಬರಿ ಅಂತೆಯೇ ಪ್ರತಿಪಾದಿಸುವಂತಿದೆ. ಮಲೆನಾಡಿನ ದಟ್ಟಡವಿಯ ಗರ್ಭದಲ್ಲಿ ಅಲ್ಲೊಂದು ಇಲ್ಲೊಂದು ಹಳ್ಳಿಗಳಿರುವುದು ಸಾಮಾನ್ಯ. ಮಲೆನಾಡಿನ ಮಾತಿನಲ್ಲೇ ಹೇಳುವುದಾದರೆ, ನಾನೂ ಸಹ ಮಲೆನಾಡಿನ, ಬಾಳೇಗಡ್ಡೇಬುಡ, ಇಲ್ಲವೇ ಹೈಗನ ಮಟ್ಟಿನ ಬುಡಗಳಲ್ಲೇ ಹುಟ್ಟಿಬೆಳೆದವ. ಸುಮಾರು ಐದಾರು ದಶಕಗಳ ಹಿಂದಿನ ಮಲೆನಾಡಿನ ಜನಜೀವನ ನನಗೆ ಚೆನ್ನಾಗಿಗೊತ್ತು. ಕಡಿದಾಳರು ಇನ್ನೂ ಮೂರು ದಶಕಗಳ ಹಿಂದಿನವರು. ಅಂದಿನ ಮಲೆನಾಡಿನ ಜನಜೀವನದ ಸತ್ಯದರ್ಶನ 'ಪಂಜರವಳ್ಳಿಯ ಪಂಜು'.

ನಾನು ಕಣ್ಣಾರೆ ಕಂಡಿದ್ದೇನೆ. ಧಣಿ, ಗೇಣೀ ವಸೂಲಿಗೆ ಬಂದಾಗ ಬಾಚುವ ರೀತಿ, ಹುಲಿಭತ್ತದ, ಬಡ್ಡಿವಸೂಲಿ ಮಾಡುವ ರೀತಿ, ತಾರತಮ್ಯ, ಮೇಲುಕೀಳು ಭಾವನೆಗಳು, ನ್ಯಾಯಾಲಯುಗಳಿಗೂ ತಪ್ಪುಮಾಹಿತಿ ನೀಡಿ ಆಸ್ತಿಗಳನ್ನು ಲಪಟಾಯಿಸುವುದು ಇವನ್ನೆಲ್ಲ ನಾನೂ ಚೆನ್ನಾಗಿಬಲ್ಲೆ.

ಭೂಮಾಲೀಕರು ಬಾಕಿ ವಸೂಲಿಗಾಗಿ ಗುಂಡಾಗಿರಿಯಲ್ಲಿ ನಿಸ್ಸೀಮರಾದವರನ್ನು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಸಾಮಾನ್ಯ ಜನರು ಈ ವಸೂಲಿ ಜನರನ್ನು ಕಂಡರೆ ಮರಣಕ್ಕಿಂತಲೂ ಹೆಚ್ಚಾಗಿ ಹೆದರುತ್ತಿದ್ದರು'. ಎಂದು 'ಪಂಜರವಳ್ಳಿ ಪಂಜು' ಕಾದಂಬರಿಯಲ್ಲಿ ಉಲ್ಲೇಖಿಸಲಾಗಿದೆ.

ನಮ್ಮೂರಿನ ಹತ್ತಿರದ ದೊಡ್ಡ ಸಾಹುಕಾರರೊಬ್ಬರ ವಸೂಲಿ ಜನ ಒಬ್ಬನಿದ್ದ. ಅವರ ಹೆಸರು 'ಎಬ್ಬೀ'. ಆತ ಕುಳ್ಳಗೆ ದಷ್ಟಪುಷ್ಟವಾಗಿದ್ದ. ಹುರಿಮೀಸೆ, ಕೆಂಪುಕಣ್ಣುಗಳು, ಕೈಯಲ್ಲೊಂದು ರೂಲು ದೊಣ್ಣೆ ಹಿಡಿದುಕೊಂಡು ತಿರುಗಾಡುತ್ತಿದ್ದ. ನಾವು ಚಿಕ್ಕವರು ಮೂರು ನಾಲ್ಕು ಜನ ಯಾರದ್ದೋ ಮನೆಗೆ ಊಟಕ್ಕೆ ಹೋಗುತ್ತಿದ್ದೆವು. ಕಾಡಿನ ಮಧ್ಯ ಆತ ಎದುರು ಬಂದು ನಿಂತು ಗದರಿಸಿದ. ನಾವೆಲ್ಲ ಹೆದರಿ ಕೂಗಿಕೊಂಡು ಹಳು ಹತ್ತಿದೆವು. ಒಂದಿಬ್ಬರು ಮೂತ್ರವಿಸರ್ಜನೆ ಮಾಡಿದರು. ಆತ ಬೀಡಿ ಹಚ್ಚಿಕೊಂಡು

ಮುಂದೆ ಹೋದಮೇಲೆ ರಸ್ತೆಗೆ ಬಂದು ಬೆವತು ಓಡಿದ್ದೆವು.

ಒಮ್ಮೆ ಭೂಸುಧಾರಣೆ ಕಾನೂನಿಗೆ ಸಂಬಂಧಿಸಿದ ಮೊಕದ್ದಮೆ ಬಗ್ಗೆ ನನ್ನ ಆತ್ಮೀಯರೊಡನೆ ಕಡಿದಾಳರ ಕಛೇರಿಗೆ ಹೋಗಿದ್ದೆ. ಕೇಸಿನ ಬಗ್ಗೆ ಮಾತುಕತೆ ನಡೆದ ಮೇಲೆ ನಾವು ಅಲ್ಲಿಂದ ಹೊರ ಹೋಗಬೇಕಾಗಿತ್ತು. ಅವರೊಡನೆ ಒಂದೆರಡು ಮಾತನಾಡಬೇಕೆನಿಸಿತು.

'ತಮ್ಮೊಡನೆ ಒಂದೆರಡು ಮಾತನಾಡ ಬೇಕಿತ್ತು' ಎಂದೆ.

'ಆಯ್ತಲ್ಲ ಕೇಸಿನ ಬಗ್ಗೆ ಅಷ್ಟೇ, ಇನ್ನೇನೂ ಬೇಕಿಲ್ಲ',

'ಅದಲ್ಲ, ನಾನು ತಮಗೆ ಚಿರಋಣಿ ಯಾಗಿದ್ದೇನೆ.

'ಏನದು?" ಪ್ರಶ್ನಿಸಿದರು.

'ಸರ್, ಜೀವಮಾನದಲ್ಲಿ ನನಗೆ ೧೮-೧೦-೧೯೫೬ನೇ ತಾರೀಖು ಅತ್ಯಂತ ಪ್ರಾಮುಖ್ಯವಾದ ದಿನ. ಅದನ್ನೆಂದೂ ನಾನು ಮರೆಯಲಾರೆ' ಎಂದೆ. 'ಏನೋ ಒಂದು ಒಗಟು ಇದ್ಹಾಗೆ ಇದೆಯಲ್ಲ?'.

ಏನದು ?

'ಆಗ ತಾವು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಿರಿ.'

ತುಸು ಯೋಚಿಸಿ, 'ಹೌದು' ಎಂದರು.

ಆ ದಿನವೇ ನಾನು ತಮ್ಮ ಕಂಡು ಮಾತನಾಡಿಸಿದ್ದು, ಶ್ರೀ ಜಯಚಾಮರಾಜೇಂದ್ರ ಆಕ್ಯುಪೇಷನಲ್ ಇನ್ಸಿಸ್ಟಿಟ್ಯೂಟ್‌ನಲ್ಲಿ ಎರಡನೇ ವರುಷದ ಸಿವಿಲ್ ಎಂಜಿನಿಯರಿಂಗ್ ಡಿಪ್ಲೊಮಾ ಓದುತ್ತಿದ್ದೆ. ಅಂದು ತಾವು ಮುಖ್ಯ ಅತಿಥಿಗಳಾಗಿ ಕಾಲೇಜಿಗೆ ಬಂದಿದ್ದಿರಿ. ತಮ್ಮನ್ನು ನಾನೇ ಓಡಿಬಂದು ಕಾರಿನಿಂದ ಕೈಹಿಡಿದು ಕೆಳಗೆ ಇಳಿಸಿದ್ದೆ. ಆ ಸಮಾರಂಭಕ್ಕೆ ಡಾ. ಸರ್.ಎಂ. ವಿಶ್ವೇಶ್ವರಯ್ಯನವರು ಬರುವವರಿದ್ದರು. ಅವರು ಬರುವ ಸಮಯಕ್ಕಿಂತ ಸ್ವಲ್ಪ ಸಮಯದ ಮುಂಚೆಯೇ ತಾವು ಬಂದು ಬಿಟ್ಟಿರಿ. ತಾವು ಬರುವ ಸಮಯ ಆಗಿಲ್ಲವೆಂದು ಕೊಂಡಿದ್ದ, ಪ್ರಿನ್ಸಿಪಾಲ್ ಹೆಚ್.ಸಿ.ಕೆ. ಭಟ್ಟರು, ವೈಸ್ ಪ್ರಿನ್ಸಿಪಾಲ್ ಬಿ.ಎಲ್. ಶಾಂತಮಲ್ಲಪ್ಪನವರು ಮಹಡಿಯ ಮೇಲೆ ಕಛೇರಿಗಳಲ್ಲಿದ್ದರು. ನಾವೆಲ್ಲ ವಿದ್ಯಾರ್ಥಿಗಳು ಗಡಿಬಿಡಿಯಲ್ಲಿ ವೆರಾಂಡದಲ್ಲಿ ಕುರ್ಚಿಗಳನ್ನು ತಂದು ಹಾಕಿದೆವು.

ತಮ್ಮ ಆಗಮನದ ಸುದ್ದಿ ತಿಳಿದ ಪ್ರಿನ್ಸಿಪಾಲರು, ಮತ್ತೆಲ್ಲರೂ ಕೆಳಗೆ ಧಾವಿಸಿ ಬಂದರು. ಆಗ ಪ್ರಿನ್ಸಿಪಾಲರು ಹೇಳಿದರು.

'ತಾವು ಇಷ್ಟು ಬೇಗ ಬರುತ್ತೀರೆಂದು ಭಾವಿಸಿರಲಿಲ್ಲ. ಸರ್.ಎಂ.ವಿಶ್ವೇಶ್ವರಯ್ಯರವರು ಬರುವುದು ಇನ್ನೂ ಅರ್ಧ ಘಂಟೆಯಾಗುತ್ತದೆ. ಅವರು ಸಮಯಕ್ಕೆ ಸರಿಯಾಗಿಯೇ ಬಂದಿಳಿಯುವವರು' ಎಂದರು.

ಆಗ ತಾವು ಹೇಳಿದಿರಿ 'ಆ ಮಹಾನುಭಾವರ ಮುಂದೆ ನಾನೇನು ಮಹಾ. ನಿಮ್ಮೊಡನೆ ಅವರನ್ನು ಸ್ವಾಗತಿಸಲೆಂದೇ ಬೇಗ ಬಂದೆ' ಎಂದು ನಸುನಕ್ಕಿದ್ದಿರಿ ಎಂದೆ. ಆಗವರು ಗಹಗಹಿಸಿ ನಕ್ಕುಬಿಟ್ಟರು.

'ಅಲ್ಲೊಂದು ಸ್ವಾರಸ್ಯ ನಡೆದು ಹೋಯಿತು ಸಾರ್. ನಾನಾಗ ತಮ್ಮ ಪಕ್ಕದಲ್ಲಿ ನಿಂತಿದ್ದೆ. ಸುಮಾರು ಆರು ಅಡಿ ಎತ್ತರದ ನನ್ನನ್ನು ಕಂಡು ಕೇಳಿದ್ದಿರಿ.

'ಯಾವೂರಯ್ಯ ನಿಂದು ?'

'ಸರ್, ನಾನೂ ಮಲೆನಾಡಿನವ, ಮೇಗರವಳ್ಳಿ ಸ್ಕೂಲಿನಲ್ಲಿ ಓದಿದವನು. ಅಲ್ಲಿಂದ ಆರು ಮೈಲಿ ಕುಗ್ರಾಮ ಕಟ್ಟಿನಮನೆ ನಮ್ಮ ಊರು ಎಂದೆ. ಆಗ ಪ್ರಿನ್ಸಿಪಾಲರು, 'ಮಲೆನಾಡಿನ ತುಂಟ, ಇಲ್ಲಿ ಬಂದು ಎಲೆಕ್ಷನ್ನಿನಲ್ಲಿ ನಿಂತು ಪೈಪೋಟಿಯಲ್ಲಿ ಗೆದ್ದುಬಿಟ್ಟ' ಎಂದರು.

'ನಿನ್ನ ಹೆಸರೇನು?' ಎಂದಿರಿ.

'ಪದ್ಮನಾಭ ಉಡುಪ' ಎಂದೆ. ನಾನಾಗ ಬಗ್ಗಿ ನಿಂತಿದ್ದೆ. ತಾವು ನನ್ನ ಬೆನ್ನು ತಟ್ಟಿ, 'ಪರವಾಗಿಲ್ಲ ನಮ್ಮೂರು ಹುಡುಗ' ಎಂದು ತಾವು ಪಿ.ಯೆ.ಯನ್ನು ಕರೆದು, ನೋಡು ಆ ಶಿವಮೊಗ್ಗ ಡಿಸ್ಟ್ರಿಕ್ಟ್ ಬೋರ್ಡು ಸ್ಕಾಲರ್ಶಿಫ್ ಒಂದು ಇದೆ ಎಂದು ಕಾಣುತ್ತದೆ. ಅದನ್ನು ಇವನಿಗೆ ನೋಟ್ ಹಾಕಿ ಕಳುಹಿಸು. ನೀನು ನಾಳೆ ಬಂದು ಪಿ.ಯೆ ಯನ್ನು ಕಾಣು ಎಂದು ನಸುನಕ್ಕಿದ್ದಿರಿ. ನನಗೆ ಆ ಸ್ಕಾಲರ್‌ಶಿಫ್ ಬಂದದ್ದರಿಂದ ತುಂಬಾ ಸಹಾಯವಾಗಿತ್ತು. ತಮ್ಮನ್ನು ದಿನಾ ಜ್ಞಾಪಿಸಿಕೊಳ್ಳುತ್ತೇನೆ.

'ಇದು ಸುಳ್ಳು ಮಾತು, ಮುಖಸ್ತುತಿ ಇರಬೇಕು. ನನ್ನನ್ನೂ ಕಂಡದ್ದಕ್ಕೆ ದಿನಾ ಜ್ಞಾಪಿಸಿಕೊಳ್ಳುತ್ತಿದ್ದೇನೆ ಎಂದು ಹೇಳುತ್ತಿದ್ದೀಯೆ!'

'ಅಲ್ಲ ಸಾರ್ ಖಂಡಿತವಾಗಿಯು ದಿನಕ್ಕೆ ಎಷ್ಟೋ ಬಾರಿ ತಮ್ಮನ್ನೂ, ಸರ್.ಎಂ. ವಿಶ್ವೇಶ್ವರಯ್ಯನವರನ್ನು ಜ್ಞಾಪಿಸಿಕೊಳ್ಳುವಂತಾಗಿದೆ. ಏಕೆಂದರೆ ನಿಮ್ಮೊಡನೆ, ಸರ್ ಎಂ. ವಿಶ್ವೇಶ್ವರಯ್ಯರೊಡನಿರುವ ಆ ಗ್ರೂಪ್ ಫೋಟೋವನ್ನು ನನ್ನ ಮನೆಯಲ್ಲಿ ಎಲ್ಲರಿಗೂ ಕಾಣುವಂತೆ ಗೋಡೆಗೆ ತೂಗು ಹಾಕಿದ್ದೇನೆ. ದಿನದಲ್ಲಿ ಎಷ್ಟೋ ಸಾರಿ ಆ ಫೋಟೋ ನೋಡುತ್ತೇನೆ. ಬಂದವರೆಲ್ಲಾ ಆಶ್ಚರ್ಯಪಡುತ್ತಾರೆ. ವಿಶ್ವೇಶ್ವರಯ್ಯನವರು, ಮುಖ್ಯಮಂತ್ರಿಗಳಾಗಿದ್ದ ತಾವು ಇರುವ ಇದನ್ನು ನೋಡಿದವರು ಇದೊಂದು ಅಮೋಘವಾದ ಫೋಟೋ ಎನ್ನುತ್ತಾರೆ ಎಂದೆ. ಸರ್ ಎಂ. ವಿಶ್ವೇಶ್ವರಯ್ಯನವರ ಬಲ ಭಾಗದಲ್ಲಿ ತಾವು ಕುಳಿತಿದ್ದೀರಿ. ಅದು ಮಧ್ಯಭಾಗದ ಸ್ಥಾನ. ಸರ್.ಎಂ. ವಿಶ್ವೇಶ್ವರಯ್ಯರವರನ್ನು ಅಲ್ಲಿ ಕುಳಿತುಕೊಳ್ಳಲು ಪ್ರಾರ್ಥಿಸಿದರೆ ಅವರು, ಅಲ್ಲಿ ರಾಜ್ಯದ ಮುಖ್ಯಮಂತ್ರಿಗಳು ಕೂರಬೇಕು ನಾನು ಪಕ್ಕದಲ್ಲಿ ಕೂರುತ್ತೇವೆ ಎಂದಿದ್ದರು. ನಮ್ಮ ಪ್ರಿನ್ಸಿಪಾಲರು, ಅಧ್ಯಾಪಕರುಗಳು ಆ ಕಡೆ ಈ ಕಡೆ ಕುಳಿತಿದ್ದಾರೆ, ಹಿಂದುಗಡೆ ನಾವು, ವಿದ್ಯಾರ್ಥಿ ಸಂಘದವರು ನಿಂತಿದ್ದೇವೆ ಎಂದೆ.

ಆಗ ಕಡಿದಾಳರು ಏನೋ ಒಂದು ಅಪರೂಪದ ಭಾವನೆಯಿಂದ ಆನಂದಿಸುತ್ತಿದ್ದಂತೆ ಕಂಡಿತು.

ಸ್ವಲ್ಪ ಸ್ವಲ್ಪ ಜ್ಞಾಪಕವಾಯಿತು. ಆದರೆ ದಿನವೂ ನೋಡುತ್ತಿದ್ದೇನೆ, ಜ್ಞಾಪಿಸಿಕೊಳ್ಳುತ್ತೇನೆ. ಎನ್ನುವ ನಿಮ್ಮ ಮಾತನ್ನು ಪ್ರೂವ್ ಮಾಡಿಬಿಟ್ಟಿರಿ' ಎಂದು ಜೋರಾಗಿ ನಕ್ಕುಬಿಟ್ಟರು. ಖಂಡಿತ ನನಗೆ ಸಂತೋಷವಾಯಿತು ಎಂದು ಹೇಳಿ ಆತ್ಮೀಯತೆಯಿಂದ ನಮ್ಮನ್ನು ಆ ಮಹಾನುಭಾವರು ತಮ್ಮ ಕಛೇರಿಯಿಂದ ಬೀಳ್ಕೊಡುವುದರಲ್ಲಿದ್ದರು.

'ಇನ್ನೊಂದೈದು ನಿಮಿಷ ನನಗೆ ಸಮಯಬೇಕು' ಎಂದೆ.

'ಹೇಳಿ, ಏನಡ್ಡಿಯಿಲ್ಲ ಎಂದರು.

'ಸಾರ್, ತಮ್ಮ ಪಂಜರವಳ್ಳಿ ಪಂಜು ಕಾದಂಬರಿ ಓದಿದ್ದೇನೆ. ಮಲೆನಾಡಿನ ಅನೇಕ ದಶಕಗಳ ಹಿಂದಿನ ಹಳ್ಳಿ ಮಾತುಗಳನ್ನು ಯಥಾವತ್ತಾಗಿ ಬರೆದಿದ್ದೀರಿ, ಮುಂದಿನ ಪೀಳಿಗೆ ನಮ್ಮ ಹಿಂದಿನ ಜನ ಹೀಗೆ ಮಾತನಾಡುತ್ತಿದ್ದರೆಂದು ತಿಳಿದುಕೊಳ್ಳಬಹುದು.

'ಸರ್ ನನಗೊಂದು ಸಂಶಯವಿದೆ' ಎಂದೆ. ಕಾದಂಬರಿ ವಿಷಯ ಪ್ರಸ್ತಾಪ ಮಾಡಿದಾಗ ತುಂಬಾ ಉತ್ಸಾಹಿತರಾದಂತೆ ಕಂಡರು.

‘ಸಾಹುಕಾರರು, ಗೇಣೀದಾರರು, ಗೇಣೀದಾರರ ಬವಣೆ ಇದನ್ನೆಲ್ಲ ಮನೋಜ್ಞವಾಗಿ ಚಿತ್ರಿಸಿದ್ದೀರಿ. ಅವೆಲ್ಲಾ ನೈಜ ಚಿತ್ರಣ. ಅದನ್ನೆಲ್ಲ ನಾನು ಯಥಾವತ್ತಾಗಿ ನೋಡಿದವ. ಆದರೆ ಪಂಜು ಕೊನೆಯಲ್ಲಿ ಬೃಹದಾಕಾರವಾಗಿ ಹೊತ್ತಿಕೊಂಡು ಪ್ರಜ್ವಲಿಸುತ್ತದೆಂದು ನಾನು ಕಲ್ಪಿಸಿಕೊಂಡಿದ್ದೆ. ಆದರೆ ಕೊನೆಯಲ್ಲಿ ಪಂಜು ಆರಿ ಹೋಗುತ್ತದೆ. ಈ ಕಾದಂಬರಿಯ ಕೊನೆ, ಟಾಲ್‌ಸ್ಟಾಯರ ‘God sees the truth, but waits’ ಕಥೆಯಲ್ಲಿ ನಿರಪರಾಧಿ ಆಕ್ಸೆನೋವ್ ಬಂಧೀಖಾನೆಯಲ್ಲಿಯೇ ಕೊನೆಯುಸಿರೆಳೆದಂತೆ, ನಿರಾಪರಾಧಿ ಮೋಹನನ ಅಂತ್ಯವೂ ಹಾಗೇ ಆಗುತ್ತದೆ ಎಂದೆ. ಅದನ್ನವರು ಸಮರ್ಥಿಸಿಕೊಂಡರು.

‘ಹಾಗಲ್ಲಯ್ಯಾ, ದೌರ್ಜನ್ಯದ ಚಿತ್ರಣವನ್ನು ಯಥಾವತ್ತಾಗಿ ಚಿತ್ರಿಸಿದ್ದೇನೆ. ಇದನ್ನು ಓದಿದ ನಿಮ್ಮಂಥಹ ಯುವಕರಿಗೆ ರಕ್ತ ಕುದಿಯಬೇಕು. ಅಂಥ ಓದುಗರೇ ದಿನ ಪಂಜನ್ನು ಬೆಳಗಿಸಿಯಾರು.’ ಇದು ನನ್ನ ಭಾವನೆ ಎಂದಿದ್ದರು.

ಈ ಭೇಟಿಯೂ ಸಹ ನನ್ನ ಜೀವನದಲ್ಲಿ ಎಂದೂ ಮರೆಯಲಾಗದ ಒಂದು ಘಟನೆ. ಮಹಾನುಭಾವ ಕಡಿದಾಳ ಮಂಜಪ್ಪನವರು, ಪರಿಶುದ್ಧ ಹಸ್ತದವರು, ಜನಸೇವೆ ಮಾಡುವ ಕಾಳಜಿ ಇದ್ದವರು, ಬಡವರ ಬಗ್ಗೆ ಅಪಾರ ಅನುಕಂಪವಿದ್ದವರು. ಸತ್ಯಸಂಧರು, ಇಂಥ ರಾಜಕಾರಿಣಿಗಳನ್ನು ಈಗೆಲ್ಲಾದರೂ ಕಾಣುತ್ತಿದ್ದೇವೆಯೇ? ಎಂದು ಪ್ರಶ್ನೆ ನನ್ನೆದುರು ಬಂದು ನಿಂತು ನನ್ನನ್ನೇ ಪ್ರಶ್ನಿಸುತ್ತಿದೆ.

# ಆತ್ಮೀಯ ನೆನಪು

–ಕೆ.ಎಚ್.ಶ್ರೀನಿವಾಸ್

ನಾನು ಮೊದಲು ಕಡಿದಾಳರನ್ನು ನೋಡಿದ್ದು ಮಹಾರಾಜ ಕಾಲೇಜು ವಿದ್ಯಾರ್ಥಿಯಾಗಿದ್ದಾಗ, ಆಗ ತಾನೇ ಕುವೆಂಪು ಅವರು ಉಪಕುಲಪತಿಗಳಾಗಿದ್ದರು, ಕಡಿದಾಳರು ಮಂತ್ರಿಗಳಾಗಿದ್ದರು. ಸಮಾರಂಭದಲ್ಲಿ ಮೊದಲು ಮಾತಾಡಿದ ಕಡಿದಾಳರು ತನ್ನನ್ನು ತಾನೇ 'ಕಡ್ಡೀ ಪೈಲ್ವಾನ್' ಎಂದು ಹಾಸ್ಯಭರಿತವಾಗಿ ಹೇಳಿದರು. ನಂತರ ಮಾತನಾಡಿದ ಕುವೆಂಪುರವರು, ಕಡಿದಾಳರ ಮಾತನ್ನು ನೆನಪಿಸಿಕೊಂಡು ಕಡ್ಡಿಯೇನೊ ಎಲ್ಲರಿಗೂ ಕಾಣುತ್ತಿದೆ, ಆದರೆ ಪೈಲ್ವಾನಿಕೆ ಇನ್ನೂ ತೋರಿಸಬೇಕಷ್ಟೆ ಎಂದು ಮಾರ್ಮಿಕವಾಗಿ ಹೇಳಿದಾಗ ಕಡಿದಾಳರು ಸೇರಿದಂತೆ ಇಡೀ ಸಭೆ ನಗೆಗಡಲಲ್ಲಿ ತೇಲಿತು.

ಕಡಿದಾಳ್ ಮಂಜಪ್ಪನವರೊಡನೆ ನನಗೆ ಆತ್ಮೀಯತೆ ಸ್ಥೂಲವಾಗಿ ಮೂರು ಸಂದರ್ಭಗಳಿಂದಾಗಿ ಒದಗಿಬಂದಿದ್ದು. ನನ್ನ ಮಾವ ಭದ್ರಾವತಿಯಲ್ಲಿ ವಕೀಲರಾಗಿದ್ದ ಬಿ. ಕೃಷ್ಣಭಟ್ಟರು, ತಾಮ್ರ ಪತ್ರ ಪುರಸ್ಕೃತ ಸ್ವಾತಂತ್ರ ಹೋರಾಟಗಾರರು, ಪ್ರಸಿದ್ಧ ವಕೀಲರು ಹಾಗೂ ಲೇಖಕರು. ಅವರೂ ಹಾಗೂ ಕಡಿದಾಳರೂ, ಪ್ರಾಯಶಃ ಒಟ್ಟೊಟ್ಟಿಗೇ ಸೆರೆವಾಸ ಅನುಭವಿಸಿದವರು ಹಾಗೂ ಆತ್ಮೀಯ ಸ್ನೇಹಿತರು. ನಾನು ಕೆಲಕಾಲ ಹೈಕೋರ್ಟಿನಲ್ಲಿ ವಕಾಲತ್ತು ಮಾಡಲು ತೊಡಗಿದ್ದ ಸಂದರ್ಭದಲ್ಲಿ, ಕಡಿದಾಳ ಮಂಜಪ್ಪನವರು ರಾಜಕೀಯದಿಂದ ನಿವೃತ್ತರಾಗಿ, ಹೈಕೋರ್ಟ್‌ನಲ್ಲಿ ವಕಾಲತ್ತು ನಡೆಸುತ್ತಿದ್ದರು. ಆಗ ಅನೇಕ ಬಾರಿ ಅವರನ್ನು ಹತ್ತಿರದಲ್ಲಿ ನೋಡುವ ಮಾತನಾಡುವ ಅವಕಾಶಗಳು ಸಿಕ್ಕದ್ದವು. ತಮ್ಮ ಸ್ನೇಹಿತ, ಬಿ. ಕೃಷ್ಣಭಟ್ಟರ ಅಳಿಯನೆಂಬುದಕ್ಕಾಗಿ ಅವರು ನನ್ನ ಬಗ್ಗೆ ವಿಶೇಷ ಮಮತೆಯನ್ನು ತೋರಿಸುತ್ತಿದ್ದರು. ತದನಂತರ ೧೯೭೮ ರಲ್ಲಿ ನಾನು ಮಂತ್ರಿಯಾದಾಗ, ನನ್ನ ಮಕ್ಕಳು ಸದಾಶಿವನಗರದಲ್ಲಿ ಇದ್ದ ಶಾಲೆಯಲ್ಲಿಯೇ ಓದುತ್ತಿದ್ದುದರಿಂದಾಗಿ ನನಗೆ ಅಲ್ಲಿಯೇ ಸಮೀಪದಲ್ಲಿ ಒಂದು ಮನೆ ಕೊಡಿರೆಂದು ಕೇಳಿಕೊಂಡ ಪ್ರಕಾರ, ಕಡಿದಾಳ್ ಮಂಜಪ್ಪನವರ 'ಕಡಿದಾಳ್ ನಿಲಯ'ವೆಂಬ ಮನೆಯನ್ನು ಸರ್ಕಾರ ಬಾಡಿಗೆಗೆ ಪಡೆದು ನನ್ನ ವಾಸಕ್ಕೆ ಕೊಟ್ಟಿತು. ಸರ್ಕಾರ ನೇರವಾಗಿ ಅವರಿಗೆ ಬಾಡಿಗೆ ಕೊಡುತ್ತಿದ್ದರೂ, ಒಬ್ಬ ಬಾಡಿಗೆದಾರನ ಬಗ್ಗೆ ಇರಬೇಕಾದ ಜವಾಬ್ದಾರಿಯನ್ನು ಸ್ವತಃ ಕಡಿದಾಳರೇ ನಿರ್ವಹಿಸುತ್ತಿದ್ದರು. ಆಗಾಗ ಮನೆಗೆ ಭೇಟಿ

ನೀಡಿ, ಮನೆ ಸಮರ್ಪಕವಾಗಿದೆಯೇ, ಸರಿಯಾಗಿ ನೀರು ಬರುತ್ತಿದೆಯೋ ಮುಂತಾದ ಅನೇಕ ವಿಚಾರಗಳನ್ನು ಅವರ ಮಗಳಂತಿದ್ದ ನನ್ನ ಹೆಂಡತಿ ಶಾಲಿನಿಯ ಹತ್ತಿರ ಅತ್ಯಂತ ಆತ್ಮೀಯತೆಯಿಂದ ವಿಚಾರಿಸಿಕೊಳ್ಳುತ್ತಿದ್ದರು. ನನ್ನ ಮಕ್ಕಳನ್ನು ಮಮತೆಯಿಂದ ಕರೆದು ಅವರ ವಿದ್ಯಾಭ್ಯಾಸದ ಬಗ್ಗೆ ವಿಚಾರಿಸಿಕೊಂಡು ಒಮ್ಮೆ ಅವರಿಗೆ ತಮ್ಮ ಪುಸ್ತಕವನ್ನು ಕೊಟ್ಟಿದ್ದರು. ಒಬ್ಬ ಮಾಜೀ ಮುಖ್ಯಮಂತ್ರಿಯ ಈ ರೀತಿಯ ಕಾಳಜಿ ಹಾಗೂ ನಡವಳಿಗೆ ನನ್ನ ಮೇಲೆ ತುಂಬಾ ಆಳವಾದ ಪ್ರಭಾವವನ್ನು ಬೀರಿದ ವಿಚಾರ. ಕಡಿದಾಳರ ಭಾವಚಿತ್ರದಲ್ಲಿ ಕಾಣುವ ಮಗು ಸದೃಶವಾದ ಮಂದಹಾಸ, ಅವರ ವ್ಯಕ್ತಿತ್ವದಲ್ಲಿ ಅಡಕವಾಗಿರುವ ಅಪಾರ ಮುಗ್ಧತೆಯನ್ನು ಪ್ರತಿಬಿಂಬಿಸುತ್ತದೆ. ಒಮ್ಮೆ ಮನೆಗೆ ಬಂದಾಗ, ಡ್ರಾಯಿಂಗ್ ರೂಮಿಗೆ ನನ್ನ ಹೆಂಡತಿಯನ್ನು ಕರೆದು, ಒಂದು ಗೌಪ್ಯವಾದ ವಿಚಾರ ತೋರಿಸುವುದಾಗಿ ಹೇಳಿ, ಷೋಕೇಸಿನ ಬಾಗಿಲು ತೆಗೆದು, ಅಲ್ಲಿ ಗೊತ್ತಾಗದಂತಿದ್ದ ಒಂದು ಒಳ ಕವಾಟವನ್ನು ತೆಗೆದು ತೋರಿಸಿ, ಅದರಲ್ಲಿ ಯಾರಿಗೂ ಗೊತ್ತಾಗದಂತೆ ಬೀಗದ ಕೈಗಳು ಮುಂತಾದವನ್ನು ಇಡಬಹುದೆಂದು ಹೇಳಿದರಂತೆ. ಆದರೆ ಹಾಗೇ ಅವರು ಹೇಳಿ ತೋರಿಸಿದಾಗ, ಗನ್‌ಮ್ಯಾನ್‌ಗಳೂ ಅಟೆಂಡರುಗಳು ಎಲ್ಲಾ ಎದುರೇ ಇದ್ದರಂತೆ. ಅವರ ಮುಗ್ಧತೆಯಿಂದಾಗಿ ಅವರು ಗುಟ್ಟಾಗಿರಬೇಕೆಂದು ಬಚ್ಚಿಟ್ಟದ್ದು ಎಲ್ಲರಿಗೂ ಗೊತ್ತಾಗಿಹೋಯಿತು.

ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಮುಂಚೂಣಿಗೆ ಬಂದ ನಾಯಕತ್ವ, ವ್ಯಕ್ತಿತ್ವ ಪ್ರಧಾನವಾಗಿತ್ತು. ಅದರಲ್ಲಿ ಯಾರು ಯಾವ ಜಾತಿಗೇಸೇರಿದ್ದರೂ, ಸಂದರ್ಭಾನುಸಾರ ಜಾತಿ ಬೆಂಬಲವನ್ನು ಉಪಯೋಗಿಸಿಕೊಂಡಿದ್ದಾಗ್ಯೂ, ಅದನ್ನು ಮೀರಿದ ಸ್ವಂತ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದರು. ವ್ಯಕ್ತಿತ್ವವೆಂದರೆ ಅದು ನಡೆ ಮತ್ತು ನುಡಿಯಲ್ಲಿನ ಯುಕ್ತತೆಯಿಂದ ಮಾತ್ರ ಪ್ರಾಪ್ತಿಯಾಗುವಂತದ್ದು. ಯಾವ ಅಧಿಕಾರ, ಧನ ಸಂಪತ್ತು. ಇಲ್ಲದಿದ್ದರೂ ಜನರ ಮೇಲೆ ತಾನೇ ತಾನಾಗಿ ಪ್ರಭಾವ ಬೀರುವ ಶಕ್ತಿ ಇರುವಂಥಾದ್ದು, ಬಾಲಗಂಗಾಧರ ತಿಲಕರು ಪೂನಾದ ಮಿಲಿಟರಿ ಪ್ರದೇಶದಲ್ಲಿ, ವಾಯು ಸಂಚಾರಕ್ಕೆ ಹೋಗುತ್ತಿದ್ದಾಗ ಅಲ್ಲಿದ್ದ ಮಿಲಿಟರಿ ಅಧಿಕಾರಿಗಳು ಅವರನ್ನು ಕಂಡಕೂಡಲೇ ತಾವು ಸೇದುತ್ತಿದ್ದ ಚುಟ್ಟಾವನ್ನು ಬೆನ್ನ ಹಿಂದೆ ಅಡಗಿಸಿಕೊಳ್ಳುತ್ತಿದ್ದರಂತೆ. ಇದನ್ನೇ ವ್ಯಕ್ತಿತ್ವದ ಪ್ರಭಾವವೆನ್ನಬಹುದು, ಯಾಕೆಂದರೆ ತಿಲಕರಿಗೆ ಯಾವುದೇ ಅಧಿಕಾರ ಸ್ಥಾನವಾಗಲಿ, ಶ್ರೀಮಂತಿಕೆಯಾಗಲೀ ಇರಲಿಲ್ಲ. ಹಾಗೆಯೇ ಕಡಿದಾಳರೂ, ಸಹ ಕೇವಲ ವ್ಯಕ್ತಿಯಾಗಿರಲಿಲ್ಲ ಬದಲಿಗೆ ಒಬ್ಬ ವ್ಯಕ್ತಿತ್ವವಾಗಿದ್ದರು. ಆ ಕಾರಣಕ್ಕಾಗಿಯೇ ನಾವಿಂದು ಅವರನ್ನು ನೆನಸಿಕೊಳ್ಳುತ್ತೇವೆ.

ಕಡಿದಾಳರು ಬರೆದ ನಾಲ್ಕು ಪುಸ್ತಕಗಳು ಅವರ ಜೀವನ ಹಾಗೂ ಜೀವನಾದರ್ಶಗಳೆರಡನ್ನು ನಮ್ಮ ಮುಂದೆ ಅವರದೇ ಮುಗ್ಧತೆ ತುಂಬಿ ತುಳುಕುವ ಅನನ್ಯ ಶೈಲಿಯಲ್ಲಿ ಬಿಚ್ಚಿಡುತ್ತದೆ. ೧೯೬೨ ರಲ್ಲಿ ಬೇಂದ್ರೆಯವರ ಮುನ್ನುಡಿಯೊಂದಿಗೆ ಪ್ರಕಟವಾದ ಕೃತಿ ಪಂಜರವಳ್ಳಿಯ ಪಂಜು ಅವರ ಬಾಲ್ಯ ಹಾಗೂ ಶತಮಾನದ ಹಿಂದಿನ ಮಲೆನಾಡ ಜನಜೀವನದ ಕಥೆ. ಖಾತೇದಾರರು, ಗೇಣಿದಾರರು, ಉಳ್ಳವರು, ಇಲ್ಲದವರು, ಮೇಲು ಜಾತಿ, ಕೀಳುಜಾತಿ ಮುಂತಾದ ಹಲವು ಹತ್ತು ರೀತಿಯ ವಿಭಜನೆಗೆ ಒಳಗಾಗಿ ನರಳುತ್ತಿದ್ದ ಜನ ಜೀವನ ಮತ್ತು ಅದರ ಬಗ್ಗೆ ಮಂಜಪ್ಪನವರ ದೃಷ್ಟಿಕೋನಗಳೆರಡನ್ನು ನಾವಿಲ್ಲಿ ಗಮನಿಸಿಕೊಳ್ಳಬಹುದು.

"ಮೂವರು ಖಾತೇದಾರರು ತುಂಬಾ ಸ್ನೇಹದಿಂದಿದ್ದರು, ಬಡಜನರ ಶೋಷಣೆಯ ಕಾರ್ಯದಲ್ಲಿ ಅವರು ಒಬ್ಬರನ್ನೊಬ್ಬರು ಎಂದೂ ಬಿಟ್ಟು ಕೊಟ್ಟಿರಲಿಲ್ಲ".

"ಬರಬೇಕಾದ್ದಕ್ಕೆ ಒಂದು ಕೊಳಗ, ಕೊಡಬೇಕಾದ್ದಕ್ಕೆ ಮತ್ತೊಂದು ಕೊಳಗ"

"ಹಿಂದುಸ್ತಾನದಲ್ಲಿ ಜಾತಿ ವಿವಾಹಕ್ಕೆ ಅಡ್ಡಿಯಾಗಿದೆಯೇ ಹೊರತು ಅಕ್ರಮ ಪ್ರೇಮಕ್ಕೆ ಯಾವಾಗಲೂ ಅಡ್ಡಿಯಾಗಿಲ್ಲ".

"ಹಣವಿದ್ದವರು ಎಷ್ಟೇ ದುರ್ಮಾರ್ಗಿಗಳಾಗಿದ್ದರೂ ನಾಗರೀಕರೆಂದೆನಿಸಿಕೊಂಡಿದ್ದರು. ಹಣವಿಲ್ಲದವರು ಎಷ್ಟೇ ಸದ್ಗುಣಿಗಳಾದ್ದರೂ ಅನಾಗರೀಕರೆಂದೆನಿಸಿಕೊಂಡಿದ್ದರು".

"ಜೀವನದಲ್ಲಿ ಕಷ್ಟ ಪರಂಪರೆಗಳನ್ನು ಅನುಭವಿಸಿದವರಿಗೆ ಮಾತ್ರ ಜೀವನ ಸರಿಯಾಗಿ ಅರ್ಥವಾಗುತ್ತದೆ. ಯಾವ ಕಷ್ಟವೂ ಇಲ್ಲದೆ ಸುಖವಾಗಿ ಬೆಳೆದವರಿಗೆ ಜೀವನವೂ ಅರ್ಥವಾಗುವುದಿಲ್ಲ. ಇತರರ ಕಷ್ಟವೂ ಅರ್ಥವಾಗುವುದಿಲ್ಲ". ಈ ಮಾತುಗಳು ಕಡಿದಾಳರ ಬಾಲ್ಯದ ಜೀವನಾನುಭವದಿಂದ ಹೊರಹೊಮ್ಮಿದ ಸತ್ಯಗಳು. ಆದರೂ ಇವು ಒಂದು ರೀತಿಯಲ್ಲಿ ದುರದೃಷ್ಟವಶಾತ್ ತ್ರಿಕಾಲಾಬಾಧಿತವಾಗಿ ಬೇರೆ ಬೇರೆ ರೂಪಗಳಲ್ಲಿ ಇವು ಇಂದಿಗೂ ನಮ್ಮನ್ನು ಕಾಡುತ್ತಿವೆ.

"ಆಂಗ್ಲೇಯರು ಹಿಂದುಸ್ಥಾನ ಬಿಡಲು ತಯಾರಿ ಮಾಡುತ್ತಿದ್ದಂತೆ ಅದೂವರೆಗೂ ಸರ್ಕಾರದ ಪರವಾಗಿ ಇದ್ದು ದೇಶಭಕ್ತರಿಗೆ ಕಿರುಕುಳ ಕೊಡುತ್ತಿದ್ದವರು ಗಾಳಿ ಎತ್ತ ಕಡೆ ಬೀಸುತ್ತಿದೆ ಎಂಬುದನ್ನು ಅರ್ಥಮಾಡಿಕೊಂಡು ತಮ್ಮ ವರ್ತನೆ ಬದಲಾಯಿಸಿಕೊಳ್ಳತೊಡಗಿದರು. ಅಧಿಕಾರಿಗಳ ಜೊತೆ ಮಾತನಾಡುವಾಗ ಆಂಗ್ಲೇಯರ ಮೊಮ್ಮಕ್ಕಳಂತೆ ಮಾತನಾಡುತ್ತಿದ್ದರು. ಕಾಂಗ್ರೆಸ್ಸಿನವರೊಡನೆ ಮಾತನಾಡುವಾಗ ಅಪ್ರತಿಮ

ದೇಶಭಕ್ತರಂತೆ ನಟಿಸುತ್ತಿದ್ದರು".

ಶ್ರೀ ಮಂಜಪ್ಪನವರು ಮೇಲೆಹೇಳಿದಂತೆ, ೧೯೪೭ ರ ಜವಾಬ್ದಾರಿ ಸರ್ಕಾರದ ಚಳುವಳಿಯ ಸಂದರ್ಭದಲ್ಲಿ ಅಲ್ಲಿಯವರೆವಿಗೂ ಮಹಾರಾಜರ ಪಕ್ಷದಲ್ಲಿ ಇದ್ದ ಅನೇಕ ಮುಖಂಡರು ಇದ್ದಕ್ಕಿದ್ದಂತೆ ಬಿಳಿ ಬಟ್ಟೆಯಲಿ ಪಳಪಳಿಸುತ್ತ ಪೇಟಾಬಿಸಾಕಿ ಗಾಂಧಿ ಟೋಪಿ ಧರಿಸಿ ಅವಸರದಲ್ಲಿ ಕಾನೂನು ಭಂಗ ಮಾಡಿ ಜೈಲಿಗೆ ಹೊರಟಿದ್ದನ್ನು ನಾನೇ ನನ್ನ ಬಾಲ್ಯದಲ್ಲಿ ನಮ್ಮ ಹಳ್ಳಿ ಹಾಗೂ ತಾಲ್ಲೂಕಿನಲ್ಲಿ ಸ್ವತಃ ನೋಡಿದ್ದೆ. ಪಕ್ಷಾಂತರ ಶಾಸನ ಜಾರಿಯಲ್ಲಿದ್ದರೂ ಚುನಾವಣೆಯ ಸಂದರ್ಭದಲ್ಲಿ ಹಾಗೂ ನಂತರ ಅನೇಕರು ದಿಢೀರ್ ಎಂದು ಪಕ್ಷ ಬದಲಿಸುವುದನ್ನು ಇಂದಿಗೂ ನಾವು ಅಸಹಾಯಕರಾಗಿ ನೋಡುತ್ತಲೇ ಇದ್ದೇವೆ.

ಶ್ರೀ ಮಂಜಪ್ಪನವರ 'ನಾಳೆಯ ನೆಳಲು' ಹಾಗೂ 'ಕ್ರಾಂತಿಕೂಟ' ಕೃತಿಗಳಲ್ಲೂ ಅನೇಕ ಮೌಲಿಕವಾದ ವಿಚಾರಗಳ ಪ್ರತಿಪಾದನೆಗಳಿವೆ. ಶ್ರೀರಂಗರವರ ಮುನ್ನುಡಿಯಿರುವ ಕ್ರಾಂತಿಯ ಕೂಟ ಕಾದಂಬರಿಯಲ್ಲಿ ೧೯೭೫ ರಲ್ಲೇ ಮಂಜಪ್ಪನವರು ಹಿಂಸೆಯಿಂದ ಸಾಮಾಜಿಕ ಹಾಗೂ ರಾಜಕೀಯ ಬದಲಾವಣೆಯನ್ನು ತರುವುದು ಅಸಾಧ್ಯವೆಂಬುದನ್ನು ಪ್ರಬಲವಾಗಿ ಪ್ರತಿಪಾದಿಸಿದ್ದರು.

೧೯೯೦ ರಲ್ಲಿ ಪ್ರಕಟಗೊಂಡ 'ನನಸಾಗದ ಕನಸು' ಮಂಜಪ್ಪನವರ ಒಂದು ಸಮಗ್ರ ಸ್ವರೂಪದ ಆತ್ಮಚರಿತ್ರೆ, ನೆನಪುಗಳು, ತಪ್ಪೊಪ್ಪಿಗೆ, ಜೀವನ ಚರಿತ್ರೆ ಹಾಗೂ ಆತ್ಮಚರಿತ್ರೆಗಳೆಂಬ ನಾಲ್ಕು ಬಗೆಯ ಕೃತಿಗಳು ೧೮ನೇ ಶತಮಾನದಲ್ಲೇ ಸಾಹಿತ್ಯ ಪ್ರಕಾರಕ್ಕೆ ಸೇರ್ಪಡೆಗೊಂಡವು. ಕೆಲವೊಮ್ಮೆ ಒಂದು ಕೃತಿಯನ್ನು ಮೇಲೆ ಹೇಳಿದಂತೆ ವಿಂಗಡಿಸಲು ಸಾಧ್ಯವಾಗಬಹುದಾದರೂ, ಹಲವು ಸಲ ಆ ವಿಂಗಡಣೆ ಸಾಧ್ಯವಾಗದೆ, ಒಂದೇ ಕೃತಿಯಲ್ಲಿ ನೆನಪುಗಳು, ತಪ್ಪೊಪ್ಪಿಗೆ ಜೀವನ ಚರಿತ್ರೆ ಹಾಗೂ ಆತ್ಮಚರಿತ್ರೆಗಳೆಲ್ಲವೂ, ಒಂದರಿಂದ ಇನ್ನೊಂದನ್ನು ಬಿಡಿಸಲು ಬರದಂತೆ ಸೇರಿಕೊಂಡಿರುತ್ತವೆ. 'ನನಸಾಗದ ಕನಸು' ಅಂಥದೊಂದು ಕೃತಿ. ಕೊಟ್ಟಿಗೆಯಲ್ಲಿ ಜನಿಸಿದ ಒಂದು ಕೂಸು, ಅವಿಭಕ್ತ ಕುಟುಂಬದವರ ಮೋಸಕ್ಕೆ ಶೋಷಣೆಗೆ ದಬ್ಬಾಳಿಕೆಗೆ ತುತ್ತಾಗಿ, ಕಡುಬಡತನದಲ್ಲಿ ವಿದ್ಯಾಭ್ಯಾಸ ಮಾಡಿ, ವಕೀಲನಾಗಿ ಜನರ ಮೇಲಿನ ಪ್ರೀತಿ ಹಾಗೂ ತಾತ್ವಿಕ ಬದ್ಧತೆಯಿಂದಾಗಿ ರಾಜಕೀಯ ಪ್ರವೇಶಿಸಿ ತುರಂಗ ವಾಸಕ್ಕೆ, ಬಡತನಕ್ಕೆ ಎದೆಯೊಡ್ಡಿ ನಿಂತು, ಸ್ವಾತಂತ್ರ್ಯಾನಂತರ ಮಂತ್ರಿ ಮುಖ್ಯಮಂತ್ರಿಯಾಗಿ, ತಾನು ಗೇಣಿದಾರರ ಹಾಗೂ ಬಡವರ ಪರವಾಗಿ ಮಾಡಿದ ಹೋರಾಟವನ್ನು ಸಾರ್ಥಕವಾಗಿಸಿದ ಸ್ಫೂರ್ತಿದಾಯಕ ಕತೆ.

ಈ ಪುಸ್ತಕದಲ್ಲಿ ಪ್ರಸ್ತಾಪಿಸಿರುವ ಮಹಾರಾಜರು ಕೊಡಬಯಸಿದ ಬೆಲೆಬಾಳುವ ಒಂದು ಎಕರೆ ಭೂಮಿಯನ್ನು ನಿರಾಕರಿಸಿದ್ದು, ಅವರ ಪ್ರಾಮಾಣಿಕತೆಗೆ ಸಾಕ್ಷಿ. ಈ ರೀತಿಯ ಪ್ರಾಮಾಣಿಕತೆಯನ್ನು ಈ ಕಾಲದಲ್ಲಿ ಕನಸಲ್ಲೂ ಕಾಣಲು ಸಾಧ್ಯವಿಲ್ಲ. ಕಡಿದಾಳರ ಈ ಮುಂದಿನ ಮಾತುಗಳನ್ನು ನೋಡಿ: "ಈ ದೇಶದಲ್ಲಿ ರಾಜಕಾರಣ ಒಂದು ಲಾಭದಾಯಕ ಕಸುಬಾಗಿದೆ. ರಾಜಕಾರಣಿಗಳು ಮಂತ್ರಿಯಾಗುವುದು, ಶಾಸಕರಾಗುವುದು, ಅಧಿಕಾರ ಮತ್ತು ಹಣಗಳಿಕೆಗಾಗಿ." "ನಾನು ಸಂಪೂರ್ಣ ಸತ್ಯಸಂಧವೆಂದು ಹೇಳಿಕೊಳ್ಳುವ ಧೈರ್ಯ ನನ್ನಲ್ಲಿಲ್ಲ. ಇಂದೂ ನನ್ನ ೮೧ ನೇ ವಯಸ್ಸಿನಲ್ಲಿ ಕೂಡಾ ಜೀವನೋಪಾಯಕ್ಕಾಗಿ ಇತರರ ಹಂಗಿಗೆ ಒಳಗಾಗದೆ ಭಗವಂತನ ಅನುಗ್ರಹದಿಂದ ವಕೀಲ ವೃತ್ತಿಯಿಂದಲೇ ಜೀವನ ಸಾಗಿಸುತ್ತಿದ್ದೇನೆ. "ನಾನು ನನ್ನ ಸಾರ್ವಜನಿಕ ಜೀವನದಲ್ಲಿ ಪ್ರಾಮಾಣಿಕವಾಗಿ ಬಾಳಿದ್ದಕ್ಕೆ ಹೆಮ್ಮೆ ಪಡುತ್ತೇನೆಯೇ ಹೊರತು ಪಶ್ಚಾತ್ತಾಪ ಪಡುವುದಿಲ್ಲ".

"ಮಂತ್ರಿಯಾದಾಗ ಬಂದ ಜನರನ್ನು ನೋಡಿ ವಿವೇಚನಾಶಕ್ತಿಯನ್ನು ಕಳೆದುಕೊಂಡು ನಾನೊಬ್ಬ ಮಹಾನ್ ವ್ಯಕ್ತಿಯೆಂಬ ಅಹಂಭಾವ ನನ್ನಲ್ಲಿ ಉಂಟಾಗಿತ್ತು. ಒಂದು ವರ್ಷದ ನಂತರ ಅದು ನನ್ನಲ್ಲಿದ್ದ ಅಧಿಕಾರಕ್ಕಾಗಿ ಎಂಬ ಗುಟ್ಟು ನನಗೆ ತಿಳಿಯಿತು. ಅಧಿಕಾರಸ್ಥಾನದಲ್ಲಿರುವವರನ್ನು ಪೂಜಿಸುವುದು ನಮ್ಮ ದೇಶದ ಜನರಿಗೆ ರಕ್ತಗತವಾಗಿ ಬಂದ ದುರ್ಗುಣ".

ದೇವರ ಅಸ್ತಿತ್ವದ ಬಗ್ಗೆ ಕಡಿದಾಳರ ಪುಸ್ತಕಗಳಲ್ಲಿ ಕೆಲವೊಂದು ಪ್ರಸ್ತಾಪಗಳಿವೆ. ಅವುಗಳಲ್ಲಿ ಈ ಕೆಳಗಿನದು ಅತಿ ಮುಖ್ಯವಾಗಿರುವುದೆಂದು ನನ್ನ ಅನಿಸಿಕೆ: "ಒಮ್ಮೊಮ್ಮೆ ದೇವರೆಂಬ ವ್ಯಕ್ತಿ ಬುದ್ಧಿವಂತರಾದವರು ದಡ್ಡರನ್ನು ಆಳುವ ಸಲುವಾಗಿ ನಿರ್ಮಿಸಿಕೊಂಡಿರುವ ಕಲ್ಪನೆಯ ಸಾಧನಯೆಂದೆನಿಸುತ್ತದೆ. ಮತ್ತೊಮ್ಮೆ ಯೋಚಿಸಿದರೆ ಮಾನವನಿಗಿಂತ ಮಿಗಿಲಾದ ಶಕ್ತಿಯಾವುದೋ ಇರಬೇಕೆನ್ನಿಸುತ್ತದೆ" ಇದು ಕಡೆವರೆಗೂ ಕಡಿದಾಳರನ್ನು ಕಾಡಿದ ಬಹುಮುಖ್ಯವಾದ ದ್ವಂದ್ವ.

ಕಡಿದಾಳ ಮಂಜಪ್ಪನವರನ್ನು ನನ್ನ ಸ್ವಂತ ಮಾತುಗಳಲ್ಲಿ, ವಿವರಿಸಿ, ವಿಶ್ಲೇಷಿಸಿ, ಶ್ಲಾಘಿಸುವ ಗೋಜಿಗೆ ಹೋಗದೆ ಬೇಕೆಂದೆ ಅವರ ಪ್ರಕಟಿತ ಕೃತಿಗಳಲ್ಲಿರುವ ಕೆಲವೇ ಕೆಲವು ಮಾತುಗಳನ್ನಾಯ್ದು ಪ್ರಸ್ತುತ ಪಡಿಸುವ ಮೂಲಕ, ಆ ಕೆಲಸವನ್ನು ಮಾಡಲು ಪ್ರಯತ್ನಿಸಿದ್ದೇನೆ. ಜನರ ಮೇಲಿನ ಪ್ರೀತಿಗಾಗಿ ರಾಜಕಾರಣ ಮಾಡುವುದು ಬೇರೆ, ರಾಜಕಾರಣದ ಮೇಲಿನ ಪ್ರೀತಿಗಾಗಿ ಜನರನ್ನು ಓಲೈಸುವುದು ಬೇರೆ. ಜನರ ಮೇಲಿನ

ಪ್ರೀತಿ ಬೇರೆ, ಜನಪ್ರಿಯತೆಯ ಮೇಲಿನ ಪ್ರೀತಿ ಬೇರೆ. ಕಡಿದಾಳರು, ಜನರ ಮೇಲಿನ ಅದರಲ್ಲೂ ಗೇಣಿದಾರರು, ಶೋಷಿತರು, ಬಡವರ ಮೇಲಿನ ಪ್ರೀತಿಯಿಂದಾಗಿ ರಾಜಕಾರಣ ಮಾಡಿದವರು. ಅವರ ಪುಸ್ತಕಗಳಲ್ಲಿರುವ ಸ್ಫಟಿಕಸದೃಶ ಪಾರದರ್ಶಕ ಪ್ರಾಮಾಣಿಕ ಮಾತುಗಳಿಂದಾಗಿ ಅವರೆಂದೂ ರಾಜಕಾರಣವನ್ನು ಅಧಿಕಾರವನ್ನು, ಹಣವನ್ನು ಅಥವಾ ಕೀರ್ತಿಯಶಸ್ಸುಗಳನ್ನು ಬೆನ್ನು ಹತ್ತಿ ಹೋದವರಲ್ಲವೆಂಬುದು ಅತ್ಯಂತ ಸ್ಪಷ್ಟ. ನಮ್ಮ ಶಾಸ್ತ್ರಗಳಲ್ಲಿ ರಾಜಕಾರಣವನ್ನು ಅಷ್ಟ ವ್ಯಸನಗಳಲ್ಲಿ ಉಳಿದೆಲ್ಲ ವ್ಯಸನಗಳನ್ನು ಒಳಗೊಂಡ, ಎಂಟನೇ ಅತ್ಯಂತ ಕೆಟ್ಟ ವ್ಯಸನವೆಂದು ಹೇಳಿದ್ದಾರೆ. ಬಹಳಷ್ಟು ರಾಜಕಾರಣಿಗಳ ಸಂದರ್ಭದಲ್ಲಿ ಇದು ನಿಜ. ಆದರೆ ಗಾಂಧೀಜಿಯಂಥವರಿಗೆ ರಾಜಕಾರಣ ವ್ಯಸನವಾಗಿರಲಿಲ್ಲ, ತಪಸ್ಸಾಗಿತ್ತು. ಹಾಗೇಯೇ ಗಾಂಧೀಜಿಯ ಅನುಯಾಯಿಯಾಗಿದ್ದ ಕಡಿದಾಳರಿಗೂ ರಾಜಕೀಯ ಎಂದೂ ವ್ಯಸನವಾಗಿರಲಿಲ್ಲ ಬದಲು ತಪಸ್ಸಾಗಿತ್ತು. ರಾಜಕಾರಣದ ಅತ್ಯಂತ ಸಂದಿಗ್ಧ ಸಮಯದಲ್ಲೂ ಅವರಲ್ಲಿದ್ದ ನಿರ್ಲಿಪ್ತತೆ ಅದಕ್ಕೆ ಸಾಕ್ಷಿ. ನಮ್ಮ ಪುರಾಣ ಪುರುಷೋತ್ತಮರಾದ ರಾಮ, ಭೀಷ್ಮ, ಕರ್ಣ ಮುಂತಾದವರು ಯಶಸ್ಸನ್ನು ಬೆನ್ನು ಹತ್ತಿದವರಲ್ಲ. ನಮ್ಮ ಪುರಾಣಗಳಲ್ಲಿ ಯಶಸ್ಸನ್ನು ಒಂದು ಮೌಲ್ಯವನ್ನಾಗಿ ಪರಿಗಣಿಸಲಾಗಿಲ್ಲ. ಯಾವ ತಾಯಿಗಾಗಿ ಪ್ರತಿಜ್ಞೆ ಮಾಡಿದ್ದನೋ ಆ ತಾಯಿಯೇ ಒಂದು ಮದುವೆಯಾಗಿ, ವಂಶವನ್ನುಳಿಸಿ ಚಕ್ರವರ್ತಿಯಾಗಿರಬೇಕೆಂದಾಗ ಭೀಷ್ಮ ಹಾಗೆ ಮಾಡಬಹುದಿತ್ತು. ಕೈಕೆಯೇ ರಾಮನನ್ನು ವಾಪಸ್ಸು ಬರಲು ಕೇಳಿದಾಗ ಅವನು ಕಾಡಿಂದ ಅರಮನೆಗೆ ಬಂದು ಬಿಡಬಹುದಿತ್ತು. ಕೃಷ್ಣನೇ ಅವನ ಜನ್ಮರಹಸ್ಯವನ್ನು ಹೇಳಿ ಕೌರವ ಪಾಂಡವರು ನಿನ್ನನ್ನು ಓಲೈಸುವಂತೆ ಮಾಡುತ್ತೇನೆಂದಾಗ ಕರ್ಣ ಒಪ್ಪಿಕೊಂಡು ಬಿಡಬಹುದಿತ್ತು. ಸಮಕಾಲೀನ ಮೌಲ್ಯಾಧಾರಿತ ರಾಜಕಾರಣದಲ್ಲಿ ಇವೆಲ್ಲಾ ಸಲ್ಲುವಂಥಾದ್ದು. ಆದರೆ ರಾಮ, ಭೀಷ್ಮ, ಕರ್ಣರವರು ತಮ್ಮ ಮೌಲ್ಯವನ್ನು ತಾವೇ ಸೃಷ್ಟಿಸಿಕೊಂಡು ಅದಕ್ಕೆ ನಿಷ್ಠರಾಗಿ ಯಶಸ್ಸಿನ ಪ್ರಲೋಭನೆಗೆ ಮಣಿಯದೇ ಬದುಕಿದ ಅಸ್ತಿತ್ವವಾದಿ ಪುರಾಣಪುರುಷೋತ್ತಮರು. ಈ ನನ್ನ ಚಿಂತನೆಯ ಬೆಳಕಲ್ಲಿ ನಾನು ಕಡಿದಾಳರ ವ್ಯಕ್ತಿತ್ವವನ್ನು ನೋಡಲು ಬಯಸುತ್ತೇನೆ. ಮಹಾರಾಜರೇ ಸ್ವತಃ ಪ್ಯಾಲೇಸ್ ಆರ್ಚರ್ಡ್ಸ್‌ನಲ್ಲಿ ಒಂದು ಎಕರೆ (ಇಂದು ಅದರ ಬೆಲೆ ಎಣಿಸಲೂ ಸಾಧ್ಯವಿಲ್ಲ). ಜಮೀನನ್ನು ಕೊಡುತ್ತೇನೆಂದಾಗ ಸಾಮಾನ್ಯ ಮೌಲ್ಯ ಕಲ್ಪನೆಯ ಮಾನದಂಡದಿಂದ ನೋಡಿದರೆ ಕಡಿದಾಳರು ಅದನ್ನು ಕೊಂಡಿದ್ದರೆ ಏನೂ ತಪ್ಪೆನ್ನಿಸುತ್ತಿರಲಿಲ್ಲ. ಆದರೆ ಅದು ಕಡಿದಾಳರು ಸ್ವತಃ ಸೃಷ್ಟಿಸಿಕೊಂಡು ಮೌಲ್ಯಕ್ಕೆ ವಿರುದ್ಧವಿತ್ತು ಹಾಗೂ ಅಂತಹಾ ಪ್ರಲೋಭನೆಯನ್ನು ತಿರಸ್ಕರಿಸುವ ಹಾಗೂ ಅದಕ್ಕಾಗಿ ಎಂದೂ ಪಶ್ಚಾತ್ತಾಪ ಪಡದಿರುವ ಮನಃಸ್ಥೈರ್ಯ ಅವರದ್ದಾಗಿದ್ದಿತು. ಕಡಿದಾಳರು

ಯಶಸ್ಸನ್ನೇ ಬೆನ್ನು ಹತ್ತಿ ಹೋಗಿದ್ದರೆ ಈಗ ಅವರು ಆಗಿದ್ದಕ್ಕಿಂತ ಇನ್ನೂ ಏನೇನೋ ಆಗಬಹುದಿತ್ತು. ಲಗನೇ ವಯಸ್ಸಿನಲ್ಲಿ ಜೀವನ ನಿರ್ವಹಣೆಗಾಗಿ ವಕೀಲಿ ಮಾಡುವ ಸಂದರ್ಭವೇ ಇರುತ್ತಿರಲಿಲ್ಲ. ಆದರೆ ಹಾಗೆ ಮಾಡದೆ ಅವರು ನಿಜವಾದ ಅರ್ಥದಲ್ಲಿ ಮೌಲ್ಯಧಾರಿತ ಜೀವನ ಹಾಗೂ ರಾಜಕಾರಣವನ್ನು ಮಾಡಿ ನಮಗೆಲ್ಲ ಪ್ರಾತಃಸ್ಮರಣೀಯರಾಗಿದ್ದಾರೆ.

# ಅಪರೂಪದ ನ್ಯಾಯವಾದಿ

**–ಪ್ರೊ. ರವಿವರ್ಮಕುಮಾರ್**

ನಾನು ಕಾನೂನು ವಿದ್ಯಾರ್ಥಿಯಾಗಿದ್ದಾಗ ನನ್ನ ಗುರುಗಳಾಗಿದ್ದ ಶ್ರೀ ಸಿ.ಬಿ. ಮೋಟಯ್ಯನವರೊಂದು ಪ್ರಸಂಗ ನೆನಪಿಸಿಕೊಂಡು ನಾರ್ಟನ್ ಎಂಬ ಪ್ರಖ್ಯಾತ ವಕೀಲ ಹೇಗೆ ತನ್ನ ವೃತ್ತಿ ಧರ್ಮದ ಕರ್ತವ್ಯ ನಿರ್ವಹಿಸಿದ್ದ ಎಂಬುದಕ್ಕೆ ಉದಾಹರಣೆ ಕೊಟ್ಟಿದ್ದರು. ಮದರಾಸಿನ ಒಬ್ಬ ಪ್ರತಿಷ್ಠಿತ ಧನಿಕನ ಮೇಲೆ ಕೊಲೆ ಆರೋಪ ಹೊರಿಸಿದ್ದ ಮೊಕದ್ದಮೆ ಅದು. ಮದರಾಸಿನಲ್ಲಿ ಇಡೀ ನಗರವನ್ನು ತಲ್ಲಣಗೊಳಿಸಿದ್ದ ಕೊಲೆ ಮೊಕದ್ದಮೆಯಲ್ಲಿ ತುಂಬಾ ಪ್ರಯಾಸಪಟ್ಟು ಕೇಸು ನಡೆಸಿದ್ದ. ಬಹಳ ಸುದ್ದಿಗದ್ದಲದಲ್ಲಿ ನಡೆದ ಆ ಮೊಕದ್ದಮೆಯಲ್ಲಿ ಆರೋಪಿಗೆ ಫಾಸಿ ಕೊಡಲೇಬೇಕೆಂದು ಪ್ರಾಸಿಕ್ಯೂಟರ್ ಪಟ್ಟು ಹಿಡಿದಿದ್ದರು. ಎಲ್ಲರ ಕುತೂಹಲ ಕೆರಳಿಸಿದ ಈ ಮೊಕದ್ದಮೆ ಕೊನೆಗೂ ತೀರ್ಪು ಕೊಡುವ ದಿನವನ್ನು ತಲುಪಿಯೇ ಬಿಟ್ಟಿತು. ಕಿಕ್ಕಿರಿದ ನ್ಯಾಯಾಲಯದಲ್ಲಿ ತೀರ್ಪು ಬಂದು ಆರೋಪಿಯನ್ನು ನಿರ್ದೋಷಿ ಎಂದು ಖುಲಾಸೆ ಮಾಡಲಾಗಿತ್ತು. ತೀರ್ಪನ್ನು ಓದಿ ಹೇಳಿದ ನ್ಯಾಯಾಧೀಶರು ಎದ್ದು ಅವರ ಕೊಠಡಿಗೆ ತೆರಳಿದ್ದರೂ ನಾರ್ಟನ್ ಇನ್ನೂ ನ್ಯಾಯಾಲಯದಲ್ಲಿಯೇ ಕುಳಿತಿದ್ದರು. ಸಾರ್ವಜನಿಕರು, ಪತ್ರಕರ್ತರು, ವಕೀಲ ಮಿತ್ರರು ಬಂದು ಬಂದು ನಾರ್ಟನ್ ಕೈ ಕುಲುಕಿ ಅಭಿನಂದಿಸುತ್ತಿದ್ದರು. ಅದಕ್ಕೆ ಉತ್ತರವಾಗಿ ನಾರ್ಟನ್ ಧನ್ಯವಾದ ಹೇಳುತ್ತಿದ್ದರು. ವಕೀಲ ಮಿತ್ರರು ನಾರ್ಟನ್ ಅವರ ಸಾಮರ್ಥ್ಯವನ್ನು, ವೃತ್ತಿ ಕೌಶಲ್ಯವನ್ನೂ ಆ ಮೊಕದ್ದಮೆಯಲ್ಲಿ ಆವರು ಅನುಸರಿಸಿದ ವಿಶೇಷ ನೈಪುಣ್ಯತೆಯನ್ನೂ ಮುಕ್ತ ಕಂಠದಿಂದ ಹೊಗಳುತ್ತಿದ್ದರು. ಅಷ್ಟರಲ್ಲಿ ಆಗ ತಾನೇ ಕೊಲೆ ಆರೋಪದಿಂದ ಖುಲಾಸೆಯಾಗಿದ್ದ ಆರೋಪಿಯು ಓಡಿ ಬಂದು ಮುಕ್ತ ಕಂಠದಿಂದ ತಮ್ಮ ವಕೀಲರನ್ನು ಹೊಗಳುತ್ತಾ, ಅಭಿನಂದಿಸುತ್ತಾ, ಕೈ ಕುಲುಕಲು ತನ್ನ ಕೈ ಚಾಚಿದನು. ಹಸ್ತಲಾಘವ ಸ್ವೀಕರಿಸುವ ಬದಲು ಎಲೆಕ್ಟ್ರಿಕ್ ಶಾಕ್ ಹೊಡೆದವರಂತೆ, ನಾರ್ಟನ್ ಕೈ ಹಿಂದಕ್ಕೆಳೆದುಕೊಂಡು ಹಸ್ತಲಾಘವ ಕೊಡಲು ಸಾರಾಸಗಟಾಗಿ ನಿರಾಕರಿಸಿಬಿಟ್ಟರು. ನೆರೆದವರೆಲ್ಲರೂ ಅವಾಕ್ಕಾದರು. ಆರೋಪಿಯಂತೂ ನಾರ್ಟನ್ ಕೈ ಕುಲುಕಲು ಇನ್ನಿಲ್ಲದ ಪ್ರಯತ್ನ ಮಾಡುತ್ತಿದ್ದ. ನಾರ್ಟನ್ ಅಂತೂ ಆರೋಪಿಯ ಜೊತೆ ಮಾತನಾಡಲೂ ಹಿಂದೇಟು ಹಾಕುತ್ತಿದ್ದರು. ನೆರೆದ ವಕೀಲ ಮಿತ್ರರೊಬ್ಬರು ಎಲ್ಲರೊಡನೆ ಕೈಕುಲುಕಿದ ನಾರ್ಟನ್ ತಮ್ಮ ಕಕ್ಷಿದಾರನೊಡನೇಕೆ

ಕೈಕುಲುಕಬಾರದೆಂದು ಕೇಳಿದಾಗ ನಾರ್ಟನ್ ತಮ್ಮ ತೀರ್ಪನ್ನು ಕೊಟ್ಟಿದ್ದು ಹೀಗೆ "ನಾನು ಮರ್ಡರರ್ಸ್ ಜೊತೆ ಕೈಕುಲುಕುವುದಿಲ್ಲ". ಅಂತಹುದೇ ವೃತ್ತಿ ನಿಷ್ಠೆಯನ್ನು ಪ್ರದರ್ಶಿಸಿದ ಕಡಿದಾಳರ ವ್ಯಕ್ತಿತ್ವಕ್ಕೆ ನಾನು ಸಾಕ್ಷಿಯಾಗುವ ಪ್ರಸಂಗ ಒದಗಿ ಬಂತು. ಮಂಜಪ್ಪನವರು ಆಗ ತಾನೆ ಕರ್ನಾಟಕ ಹೈಕೋರ್ಟ್‌ನ ಒಂದು ನ್ಯಾಯಾಲಯದಲ್ಲಿ ಒಂದು ಕೊಲೆ ಮೊಕದ್ದಮೆಯ ಮೇಲ್ಮನವಿಯನ್ನು ನಡೆಸಿ ಹೊರಬಂದಿದ್ದರು. ನಾನೂ ಸಹ ಪಕ್ಕದ ನ್ಯಾಯಾಲಯದಲ್ಲಿ ಕೇಸ್ ಮುಗಿಸಿಕೊಂಡು ಹೊರ ಬಂದಿದ್ದೆ. ಸಾಮಾನ್ಯವಾಗಿ ಒಂದು ಸುತ್ತು ಕೇಸುಗಳನ್ನು ಮುಗಿಸಿದ ಮೇಲೆ ವಕೀಲರೆಲ್ಲ ವಕೀಲರ ಸಂಘದ ಆವರಣಕ್ಕೆ ಹಿಂದಿರುಗುವುದು ವಾಡಿಕೆ. ಹಾಗೆ ಹಿಂದಿರುಗಲು ಸುಮಾರು ೧೦೦-೧೫೦ ಮೀಟರ್ ನಡೆದು ನಾನೂ ಮಂಜಪ್ಪನವರೂ ಸಂಘದ ಆವರಣ ತಲುಪಿದೆವು. ಅಷ್ಟರಲ್ಲಿ ಒಬ್ಬ ಧಡೂತಿ ಅಸಾಮಿ ಓಡೋಡಿ ಬಂದು ಮಂಜಪ್ಪನವರ ಕಾಲ ಮೇಲೆ ಬಿದ್ದು ಧನ್ಯವಾದ ಅರ್ಪಿಸಿದ. ಮಂಜಪ್ಪನವರು ಶಾಕ್ ಹೊಡೆದವರಂತೆ ಕಾಲನ್ನು ಹಿಂತೆಗೆದುಕೊಂಡು " ಪಾಪಿ ನನ್ನನ್ನು ಮುಟ್ಟಬೇಡ, ಹೋಗಿ ದೇವರಿಗೆ ಬೇಕಾದರೆ ಅಡ್ಡ ಬೀಳು" ಎಂದು ಸಾರಾಸಗಟಾಗಿ ಅವನನ್ನು ಹೊರ ಕಳುಹಿಸಿದರು. ನಾನು ಕಾರಣ ಕೇಳಿದಾಗ, ನಾರ್ಟನ್ ಹೇಳಿದಂತೆಯೇ ಮಂಜಪ್ಪನವರು ಹೇಳಿದರು. ಅವನ ಮೊಕದ್ದಮೆಯನ್ನೇನೋ ನಾನು ವಾದ ಮಾಡಿದೆ. ನನ್ನ ವೃತ್ತಿ ಕರ್ತವ್ಯ ನಾನು ಮಾಡಬೇಕಾಗಿತ್ತು. ಅವನ ಅದೃಷ್ಟ ಚೆನ್ನಾಗಿತ್ತು. ಕೇಸನ್ನು ಗೆದ್ದು ಆರೋಪದಿಂದಲೂ ಖುಲಾಸೆಯಾಗಿ ಅವನಿಗೆ ಕೊಟ್ಟಿದ್ದ ಜೀವಾವಧಿ ಶಿಕ್ಷೆಯಿಂದ ಬಚಾವಾಗಿದ್ದಾನೆ. ಆದರೆ, ನಾನು ಹೇಗೆ ಒಬ್ಬ ಕೊಲೆಗಡುಕನನ್ನು ಮುಟ್ಟಿಕೊಳ್ಳಲಿ. ನಾರ್ಟನ್ ಶುಲ್ಕ ಪಡದೇ ಕೇಸ್ ನಡೆಸಿರುತ್ತಾನೆ. ಆದರೆ, ಮಂಜಪ್ಪನವರು ಶಿವಮೊಗ್ಗದ ವಕೀಲರು ಅವನು ಬಡವ ಎಂದು ಹೇಳಿ ಕಳುಹಿಸಿದ್ದರಿಂದ ಆ ಮೊಕದ್ದಮೆಯನ್ನು ಪುಕ್ಕಟ್ಟೆಯೇ ನಡೆಸಿದ್ದರು. ಹಾಗೆ ಮಂಜಪ್ಪನವರು ತಮ್ಮ ವೃತ್ತಿಯ ಅತ್ಯಂತ ಶ್ರೇಷ್ಠ ಮೌಲ್ಯಗಳನ್ನು ಮೆರೆದ ಅಪರೂಪ ನ್ಯಾಯವಾದಿ.

## ಪ್ರಾಮಾಣಿಕ ಜೀವನ

ಇತಿಹಾಸದಲ್ಲಿ ಒಬ್ಬ ಮಾಜಿ ಮುಖ್ಯಮಂತ್ರಿ ಜೀವನೋಪಾಯಕ್ಕಾಗಿ ಒಂದು ವೃತ್ತಿ ಆಶ್ರಯಿಸಿ ವಕಾಲತ್ತಿಗೆ ಹಿಂತಿರುಗಿದ್ದು ಭಾರತದಲ್ಲೇ ಅಪರೂಪವಿರಬೇಕು. ರಾಜಕೀಯದಿಂದ ನಿವೃತ್ತಿಯಾದ ನಂತರ ನೇರವಾಗಿ ವಕಾಲತ್ತಿಗೆ ಹಿಂದಿರುಗಿದ್ದರು. ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ ವೈಭವದಿಂದ ಬದುಕಿದ್ದವರು ವಕೀಲವೃತ್ತಿ ಕೈಗೊಳ್ಳುವುದು ನಾಚಿಕೆಗೇಡು. ವಕೀಲರೆಂದು ಬೋರ್ಡ್ ಹಾಕಿದರೆ ಕಿತ್ತು ಹಾಕುತ್ತೇವೆ

ಎಂದು ಅಭಿಮಾನಿಗಳು ಧಮ್ಕಿ ಕೊಟ್ಟರೂ ಹೆದರದೆ ನ್ಯಾಯವಾದಿಯಾಗಿ ಹೈಕೋರ್ಟಿನಲ್ಲಿ ವೃತ್ತಿ ಆರಂಭಿಸಿದರು.ಇದೇ ಅವರ ಸಾರ್ವಜನಿಕ ಜೀವನದ ಆದರ್ಶ ಹಾಗೂ ಪ್ರಾಮಾಣಿಕ ಜೀವನಕ್ಕೆ ಕೈ ಹಿಡಿದಂತಿದೆ. ಅಂತಹ ವ್ಯಕ್ತಿಯ ಜೊತೆ ವೃತ್ತಿ ಬಾಂಧವ್ಯ ಇಟ್ಟುಕೊಳ್ಳುವುದೇ ಒಂದು ಸ್ಫೂರ್ತಿ ಸೆಲೆ. ನನ್ನ ವೃತ್ತಿ ಗುರುಗಳಾದ ಲಕ್ಷ್ಮಣ ಹಾವನೂರರ ವೃತ್ತಿ ಹಿರಿಮೆ ಮತ್ತು ಪ್ರಾಮಾಣಿಕತೆಯಿಂದ ನನ್ನ ವೃತ್ತಿ ಜೀವನವನ್ನು ರೂಪಿಸಿಕೊಳ್ಳುವ ಹೊಸದರಲ್ಲೇ ಮಂಜಪ್ಪನವರ ಒಡನಾಟ ನನಗೆ ದೊರಕಿದ್ದು ನನ್ನ ವೃತ್ತಿ ಆದರ್ಶಮಯವಾಗಿ ರೂಪುಗೊಳ್ಳಲು ಒಳ್ಳೆಯ ಶ್ರೀಮಂತ ಆಯಕಟ್ಟನ್ನು ಒದಗಿಸಿತ್ತು. ಅದೊಂದು ನನ್ನ ಸೌಭಾಗ್ಯವೆಂದೇ ಯಾವಾಗಲೂ ನಂಬಿದ್ದೇನೆ. ಅತ್ಯಂತ ಶಿಸ್ತಿನಿಂದ, ಜೊಕ್ಕವಾಗಿ ಅವರ ವೃತ್ತಿ ಜೀವನ ನಡೆಸಿಕೊಂಡು ಬಂದವರು. ವೃತ್ತಿಯಲ್ಲೆ ಪ್ರಾಮಾಣಿಕರನ್ನು ದುರ್ಬೀನು ಹಾಕಿ ಹುಡುಕುವ ಸಮಯದಲ್ಲಿ ಕಕ್ಷಿಗಾರರಿಗೆ ಮಂಜಪ್ಪನವರು ವಕೀಲರಾಗಿ ದೊರಕಿದ್ದು ಅವರುಗಳಿಗೆಲ್ಲಾ ನಿಧಿ ಸಿಕ್ಕಷ್ಟು ಖುಷಿಯಾಗುತ್ತಿತ್ತು. ಆವರ ಕಕ್ಷಿಗಾರರು ಅವರ ಬಗ್ಗೆ ಎಷ್ಟು ನಂಬಿಕೆ ಮತ್ತು ಮೆಚ್ಚುಗೆ ಇಟ್ಟುಕೊಂಡಿದ್ದರು. ಎಂದರೆ ಬೇರೆಯವರ ವಕಾಲತ್ತಿಗೆ ಪುಕ್ಕಟ್ಟೆ ಕಳುಹಿಸಿದರೂ ಹೋಗುತ್ತಿರಲಿಲ್ಲ. ಆರಂಭದಲ್ಲೇ ಮಡಿವಂತ ವಕೀಲರ ಹುಬ್ಬೇರಿಸಿದ್ದ ಮಂಜಪ್ಪನವರು ಹೈ ಕೋರ್ಟಿನಲ್ಲಿ ವಕಾಲತ್ತು ಹಿಡಿದಾಗ ಏನೆಲ್ಲಾ ಕಷ್ಟಗಳನ್ನು ಎದುರಿಸಿದರು ಎಂಬುದನ್ನು ಅವರ ಆತ್ಮ ಕಥೆಯಲ್ಲಿ ಅವರೇ ವಿಸ್ತಾರವಾಗಿ ಹೇಳಿರುವುದರಿಂದ ನಾನು ಆ ಬಗ್ಗೆ ಹೇಳುವುದಿಲ್ಲ. ಆದರೆ, ಒಂದು ಮಾತು ಸತ್ಯ, ಬ್ರಾಹ್ಮಣ ಜಾತಿಯ ಹಿಡಿತದಲ್ಲಿದ್ದ ವಕೀಲ ವೃತ್ತಿಗೆ ಪ್ರವೇಶ ಸುಲಭವಾಗಿರಲಿಲ್ಲ. ಆದರೆ ಮಂಜಪ್ಪನವರು ಕೇಳಿಸಿಕೊಂಡ ಕುಹಕಗಳು ಮತ್ತು ಮೂದಲಿಕೆಗಳು ಅವರನ್ನು ಕೆಣಕಿ ವೃತ್ತಿಯನ್ನು ಸವಾಲಾಗಿ ಸ್ವೀಕರಿಸಲು ಪ್ರೇರೇಪಿಸಿತ್ತು. ಮುಖ್ಯ ಮಂತ್ರಿಯಾಗಿದ್ದರು. ಕಂದಾಯ ಮಂತ್ರಿಯಾಗಿದ್ದವರು ಸುಲಭವಾಗಿ ದೊಡ್ಡ ದೊಡ್ಡ ಕುಳಗಳನ್ನೇ ಕಕ್ಷಿಗಾರರನ್ನಾಗಿ ಸಂಪಾದಿಸಬಹುದಿತ್ತು. ದೊಡ್ಡ ದೊಡ್ಡ ಕಂಪನಿಗಳನ್ನೂ, ಬೃಹತ್ ಕೈಗಾರಿಕೆಗಳನ್ನೂ, ಸಾರ್ವಜನಿಕ ಕ್ಷೇತ್ರದ ಹೆಚ್.ಎ.ಎಲ್. ಹೆಚ್.ಎಂ.ಟಿ, ಐ.ಟಿ.ಐ ತರಹೆಯ ಉದ್ದಿಮೆಗಳ ಪರವಾಗಿ ವಕಾಲತ್ತು ವಹಿಸುವುದು ಅವರ ಕೈಗೆಟಕುವುದರಲ್ಲಿದ್ದರೂ ಅವರೆಂದೂ ಅದಕ್ಕಾಗಿ ಕೈ ಚಾಚಿದವರಲ್ಲ. ರಾಜಕಾರಣಿಯಾಗಿದ್ದಾಗ ಹೇಗೆ ಬಡ ಬಗ್ಗರ ದೀನ ದಲಿತರ ಸೇವೆ ಮಾಡಿಕೊಂಡು ಬಂದಿದ್ದರೋ ಹಾಗೆಯೇ ವಕೀಲ ವೃತ್ತಿಯಲ್ಲಿಯೂ ಅವರ ಸೇವೆಯನ್ನು ಮುಂದುವರೆಸಿಕೊಂಡು ಹೋಗಲು ಅವರ ಈ ಮನೋವೃತ್ತಿಯೇ ಸಹಕಾರಿಯಾಯಿತು. ಅತ್ಯಂತ ಕನಿಷ್ಠ ವ್ಯಕ್ತಿಗೂ ಸುಲಭವಾಗಿ ಬಹಳಷ್ಟು ಬಾರಿ ಮುಫತ್ತಾಗಿ ವೃತ್ತಿ ಸೇವೆ ನಿರಂತರವಾಗಿ ಒದಗಿಸಿದವರು ಮಂಜಪ್ಪನವರು. ಈ

ದೃಷ್ಟಿಯಲ್ಲಿ ಅವರ ಕಕ್ಷಿಗಾರರೆಲ್ಲಾ ಬಹಳ ಅದೃಷ್ಟವಂತರು. ಪ್ರಾಮಾಣಿಕವಾಗಿ ಅವರ ಸೇವೆ ಮಾಡಿದ್ದೇ ಅಲ್ಲ, ಬಹಳ ಅಚ್ಚುಕಟ್ಟಾಗಿ ಶ್ರದ್ಧೆಯಿಂದ ಮೊಕದ್ದಮೆಗಳನ್ನು ನಡೆಸುತ್ತಿದ್ದರು. ಅವರು ಪೂರ್ಣ ತಯಾರಿ ನಡೆಸದೆ ಯಾವುದಾದರೂ ಪ್ರಕರಣಗಳನ್ನು ನಡೆಸಿದ ಉದಾಹರಣೆಗಳೂ ಇಲ್ಲ. ಮೊಕದ್ದಮೆ ಸಣ್ಣದಿರಲಿ, ದೊಡ್ಡದಿರಲಿ, ಎಲ್ಲದಕ್ಕೂ ಶ್ರದ್ದೆಯಿಂದ ಕಷ್ಟಪಟ್ಟು ತಯಾರಿ ನಡೆಸುತ್ತಿದ್ದರು. ಅವರು ಅಡ್ಜರ್ನ್‌ಮೆಂಟ್ ಕೇಳಿದ್ದೇ ಅಪರೂಪ. ಅವರ ವಿರುದ್ಧ ನೂರಾರು ಮೊಕದ್ದಮೆಗಳನ್ನು ನಡೆಸಿದ ನನಗಂತೂ ಅವರು ಎದುರಾದ ಮೊಕದ್ದಮೆಗಳಲ್ಲಿ ದೊಡ್ಡ ತಲೆ ನೋವೇ ಆಗುತ್ತಿದ್ದರು. ನಾನು ವೃತ್ತಿಗೆ ಪಾದಾರ್ಪಣೆ ಮಾಡುವ ವೇಳೆಗಾಗಲೇ ಮಂಜಪ್ಪನವರು ಮೇರು ಪರ್ವತದ ವ್ಯಕ್ತಿ. ಅವರು ಹೇಳಿದ್ದೇ ವೇದವಾಕ್ಯವೆಂದೇ ನಂಬುತ್ತಿದ್ದರು ನ್ಯಾಯಮೂರ್ತಿಗಳು. ಮಂಜಪ್ಪನವರದೋ ಹಿತ್ತಾಳೆಯ ಕಿವಿ, ಅವರ ಕಕ್ಷಿಗಾರ ಹೇಳಿದ್ದೇ ವೇದವಾಕ್ಯ ಎಂದು ಪ್ರತಿಪಾದಿಸುತ್ತಿದ್ದರು. ಸಾಸಿವೆ ಕಾಳಿನಷ್ಟು ಬಿಟ್ಟುಕೊಡುತ್ತಿರಲಿಲ್ಲ. ತಮ್ಮ ಕಕ್ಷಿಗಾರರೆಲ್ಲಾ ಸತ್ಯ ಹರಿಶ್ಚಂದ್ರರೆಂದೇ ಪ್ರತಿಪಾದಿಸುತ್ತಿದ್ದರು. ಹಾಗಾಗಿ ಅವರ ಎದುರು ಮೊಕದ್ದಮೆ ನಡೆಸುವುದೆಂದರೆ ನಮಗೆಲ್ಲಾ ದುಃಸ್ವಪ್ನ. ಹಾಗಾಗಿ ನೂರಾರು ಮೊಕದ್ದಮೆಗಳಲ್ಲಿ ನನಗೂ ಅವರಿಗೂ ಜಟಾಪಟಿಯಾಗುತ್ತಿತ್ತು.

## ಪುರೋಹಿತಶಾಹಿಯ ಮೂರ್ತಿ ಭಂಜಕ

ಮಂಜಪ್ಪನವರು ಬ್ರಾಹ್ಮಣಶಾಹಿಯ ಹಿಡಿತದಿಂದ ವಕೀಲ ವೃತ್ತಿಯನ್ನು ಬಿಡುಗಡೆ ಮಾಡಿಸಿದ ಶೂದ್ರ ವಕೀಲರುಗಳ ಅಗ್ರ ಪಂಕ್ತಿಯಲ್ಲಿ ನಿಲ್ಲುವರು. ನನ್ನ ತಲೆಮಾರಿನವರಿಗಾಗಲೇ ಈ ಬ್ರಾಹ್ಮಣಶಾಹಿಯ ಏಕಸ್ವಾಮ್ಯತೆ ಬಿಸಿ ತಟ್ಟದಂತೆ ನ್ಯಾಯಾಂಗ ವ್ಯವಸ್ಥೆಯನ್ನೇ ಸಾಕಷ್ಟು ಸುಧಾರಣೆ ಮಾಡಿದ ಕೀರ್ತಿ ಅವರಿಗೆ ಸಲ್ಲಬೇಕು. ನನ್ನ ಪೀಳಿಗೆಯವರಿಗಾಗಲೀ ನಂತರದವರಿಗಾಗಲೀ ಈ ಹಿರಿಯ ನಾಯಕರುಗಳು ಮಾಡಿದ ಹೋರಾಟ, ತ್ಯಾಗ ಮತ್ತು ಬಲಿದಾನ ಗೊತ್ತೇ ಇಲ್ಲ. ಅದನ್ನು ಎಲ್ಲೂ ದಾಖಲಿಸದಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಗಿದೆ. ಆ ವಿಚಾರಗಳು ಕಿರಿಯ ವಕೀಲರುಗಳ ಕಿವಿಗೆ ಬಿದ್ದರೇ ಅವರ ಶಕ್ತಿ ಇಮ್ಮಡಿಯಾಗುತ್ತದೆ. ನನ್ನ ವೃತ್ತಿ ಗುರುಗಳಾದ ದಿ. ಲಕ್ಷ್ಮಣ ಹಾವಾನೂರರನ್ನೇ ತೆಗೆದುಕೊಳ್ಳಿ., ಅವರು ಧಾರವಾಡದಲ್ಲಿ ಪದವಿ ಶಿಕ್ಷಣ ಓದುವಾಗ ಕಾಲೇಜು ಹಾಸ್ಟೆಲ್‌ನಲ್ಲಿದ್ದರು. ಆ ಹಾಸ್ಟೆಲ್‌ನಲ್ಲಿ ಬ್ರಾಹ್ಮಣ, ಲಿಂಗಾಯತರಿಗಲ್ಲದೆ ಬೇರೆಯವರಿಗೆ ಮೊದಲ ಪಂಕ್ತಿಯಲ್ಲಿ ಊಟ ಬಡಿಸುತ್ತಿರಲಿಲ್ಲ. ಅದರಲ್ಲಿ ಬ್ಯಾಡರಾದ ಹಾವನೂರರಿಗೆ ಬಡಿಸುವುದೆಲ್ಲಿ ಬಂತು. ಒಮ್ಮೆ ಹೋರಾಟ ಮಾಡಿ ಮೊದಲ ಪಂಕ್ತಿಯಲ್ಲೇ ಹಾವನೂರು ಕುಳಿತು ಊಟ ಮಾಡಿದಾಗ ಅವರಿಗೆ

ಬಡಿಸಿದ ಭಟ್ಟನಿಗೆ ಮೇಲ್ಜಾತಿ ವಿದ್ಯಾರ್ಥಿಗಳು ಹಿಡಿದು ಹೊಡೆಯಲು ಪ್ರಾರಂಭಿಸಿದರು. ಅದನ್ನು ತಿಳಿದ ಹಾವನೂರರು ಎಂಜಲು ಕೈಯಲ್ಲೇ ಹೋಗಿ, ಆ ಎಲ್ಲಾ ಮೇಲ್ಜಾತಿ ಹುಡುಗರಿಗೆ ಗೂಸಾ ಕೊಟ್ಟು ಮೊದಲ ಪಂಕ್ತಿಯಲ್ಲೇ ಊಟ ಬಡಿಸಿದ ಭಟ್ಟನನ್ನು ರಕ್ಷಿಸಿದರು. ಅದರ ಪರಿಣಾಮವೆಂದರೆ ಅವರನ್ನು ಕರ್ನಾಟಕ ಕಾಲೇಜಿನಿಂದ ವಜಾ ಮಾಡಿದ್ದು, ಪ್ರಯುಕ್ತ ಹಾವನೂರರಿಗೆ ಜೀವನ ಪರ್ಯಂತ ಒಂದು ವಿಶ್ವವಿದ್ಯಾಲಯದ ಮೂಲ ಪದವಿಯಿಂದಲೇ ವಂಚನೆ. ಹಾಗೆಯೇ ಅವರು ವಕಾಲತ್ತು ಪ್ರಾರಂಭಿಸಿದಾಗ ಅವರ ಗುರುಗಳೇ ಆಗಿದ್ದ ಮೇಲ್ಜಾತಿಯ ವಕೀಲರೊಬ್ಬರು ಅವರನ್ನು ಮೂದಲಿಸಿದ್ದರಂತೆ. ಆಗ ತಾನೇ ಹಾವನೂರರು ರಾಣಿಬೆನ್ನೂರಿನಲ್ಲಿ ವಕಾಲತ್ತು ಪ್ರಾರಂಭಿಸಿದ್ದರು. ಈ ಮೇಲ್ಜಾತಿಯ ವಕೀಲರ ಸಂಬಂಧಿ ಹಾವನೂರರಿಗೆ ವಕಾಲತ್ತು ಕೊಟ್ಟಿದ್ದ. ಆಗ ತನ್ನ ಸಂಬಂಧಿಯನ್ನು "ಏನಲೇ ತಳವಾರನಿಗೆ ವಕಾಲತ್ತು ಕೊಟ್ಟಿಯಲ್ಲಾ, ಇನ್ನು ನಿನ್ನ ಕೇಸು ಗೋತಾ ತಿಳಿ, ತಳವಾರನಿಗೆ ವಕಾಲತ್ತು ಕೊಡುತ್ತಾರಾ" ಎಂದು ಮೂದಲಿಸಿದರಂತೆ. ಹಾವನೂರರಿಗೆ ಅಕ್ಷರ ಕಲಿಸಿದ ಗುರು ಬೇರೆ. ಅವರ ಕಕ್ಷಿಗಾರ ಇವರಿಗೆ ಯಥಾವತ್ತಾಗಿ ವರದಿ ಮಾಡಿದ್ದೇ ತಡ ಅವರು ರಾಣಿಬೆನ್ನೂರ ವಕೀಲರ ಸಂಘದ ಹಾಲ್‌ಗೆ ನುಗ್ಗಿ ಅವರನ್ನು ಮೂದಲಿಸಿದ ವಕೀಲನನ್ನು ಕತ್ತಿನಪಟ್ಟಿ ಹಿಡಿದು, ಅವನ ಕೋಟು, ಟೋಪಿ ಎಲ್ಲಾ ಚಿಂದಿಯಾಗುವಂತೆ ಗೂಸಾ ಕೊಟ್ಟು ಕಳುಹಿಸಿದ್ದರು. ಕರ್ನಾಟಕ ಹೈ ಕೋರ್ಟ್ ಮೆಟ್ಟಿಲೇರಿದ ಮೇಲಂತೂ ಹಾವನೂರರ ಹೋರಾಟ ಜಾತಿವಾದಿಗಳ ವಿರುದ್ಧ ತಾರಕಕ್ಕೇರಿತ್ತು. ಈ ಎಲ್ಲಾ ಹೋರಾಟಗಳಲ್ಲಿ ಹಾಗೆಯೇ ನೆನಪಿಸಬೇಕಾದ ಮತ್ತೊಂದು ನ್ಯಾಯವಾದಿಯೆಂದರೆ ೧೯೫೭ ರಲ್ಲಿ ವಿಧಾನಸಭೆಯಲ್ಲಿ ವಿರೋಧಪಕ್ಷದ ನಾಯಕರಾಗಿದ್ದ ಪಿ.ಎಸ್.ಪಿ ಪಕ್ಷದ ಅಧ್ಯಕ್ಷ ದಿ॥ ಕೆ. ಕೆಂಚಪ್ಪನವರು. ಅವರು ಚಿತ್ರದುರ್ಗದಲ್ಲಿ ವಕಾಲತ್ತು ಪ್ರಾರಂಭಿಸಿದಾಗ ದುರ್ಗದ ವಕೀಲರ ಸಂಘ ಪೂರ್ತಿ ಬ್ರಾಹ್ಮಣ ವಕೀಲರ ಹಿಡಿತದಲ್ಲೇ ಇತ್ತು. ನೀರು ಕುಡಿಯಲು ಒಂದು ಮಣ್ಣಿನ ಹರವೆಯಲ್ಲಿ ನೀರು ಇಡಲಾಗಿತ್ತು. ಆ ಮಡಿಕೆಯ ಮೇಲೆ "ಬ್ರಾಹ್ಮಣರಿಗೆ ಮಾತ್ರ" ಎಂದು ಬರೆಯಲಾಗಿತ್ತು. ಕೆಂಚಪ್ಪನವರು ಒಂದು ಚಾಕ್‌ಪೀಸ್‌ನಲ್ಲಿ ಅದನ್ನು ತಿದ್ದಿ "ಬ್ರಾಹ್ಮಣರಿಗೆ ಮೂತ್ರ" ಎಂದು ಮಾಡಿಬಿಟ್ಟರು. ಈ ಬಗ್ಗೆ ಒಂದು ದೊಡ್ಡ ಹೋರಾಟವೇ ನಡೆಯುತ್ತೆ ಎಂದು ನಿರೀಕ್ಷಿಸಿದರು. ಆದರೆ ಏನೂಆಗಲಿಲ್ಲ, ಆದರೇ ಮಾರನೇ ದಿನ ಮಡಕೆಯ ಮೇಲೆ "ಬ್ರಾಹ್ಮಣರಿಗೆ ಮಾತ್ರ" ಎಂದು ಮತ್ತೆ ತಿದ್ದಿ ಬರೆಯಲಾಗಿತ್ತು. ಅದನ್ನು ನೋಡಿದ ಕೆಂಚಪ್ಪನವರಿಗೆ ಸಿಟ್ಟು ತಡೆಯಲಾಗದೆ ಅದನ್ನು ಜಾಡಿಸಿ ಒದ್ದು ಆ ಮಡಿಕೆಯನ್ನು ಚೂರು ಚೂರು ಮಾಡಿದರು. ಹಾಗಾಗಿ ಅಂದಿನಿಂದ ಚಿತ್ರದುರ್ಗದ ವಕೀಲರ ಸಂಘದಲ್ಲಿ 'ಬ್ರಾಹ್ಮಣರಿಗೆ ಮಾತ್ರ' ಬೋರ್ಡ್ ಕಾಣುವುದಿಲ್ಲ.

ಇಲ್ಲದಿದ್ದರೆ ಇಂದಿಗೂ ಮುಂದುವರೆಯುತ್ತಿತ್ತೇನೋ? ಹಾವನೂರರು ಮತ್ತು ಕೆಂಚಪ್ಪನವರಿಬ್ಬರು ಗರಡಿಯಲ್ಲಿ ಪಳಗಿದ ಪೈಲ್ವಾನರಾಗಿದ್ದರು. ಮಂಜಪ್ಪನವರು ಪೈಲ್ವಾನರಲ್ಲ. ಬದಲಾಗಿ ಕಾಂಗ್ರೆಸ್‌ನಲ್ಲಿ ಪಳಗಿದ ಹುಲಿ. ಅದೇ ಹೋರಾಟವನ್ನು ನಯವಾಗಿಯೇ ಆದರೂ ಪರಿಣಾಮಕಾರಿಯಾಗಿ ನಡೆಸಿದರು. ರೆವಿನ್ಯೂ ಮಂತ್ರಿಯಾಗಿ ರೆವಿನ್ಯೂ ಕೋರ್ಟಿನ ಕಲಾಪಗಳ ಬಗ್ಗೆ ಇವರ ಕಾನೂನು ಅರಿವಿನ ಬಗ್ಗೆಯೇ ಆಪಸ್ವರವೆತ್ತಿದವರಿಗೆ 'ಮೈಸೂರಿನ ಉಚ್ಛನ್ಯಾಯಾಲಯದಲ್ಲಿ ಪೈಪೋಟಿ ನಡೆಸಬಲ್ಲೆ' ಎಂದು ತೆರೆದ ನ್ಯಾಯಾಲಯುದಲ್ಲಿಯೇ ಸವಾಲೊಡ್ಡಿದ್ದರು. ಅಂತೆಯೇ ಮಾಡಿತೋರಿಸಿದ್ದರೂ ಕೂಡ.

## ಕಕ್ಷಿಗಾರರ ಆಪದ್ಬಾಂಧನ

ಮಂಜಪ್ಪನವರು ಕೇಸು ನಡೆಸುತ್ತಿದ್ದ ಬಗ್ಗೆ ಮೇಲೆಯೇ ಹೇಳಿದ್ದೇನೆ. ಶ್ರದ್ಧೆ ಅಷ್ಟೇ ಅಲ್ಲ, ಬಹಳ ಜಿಗುಟು ಸ್ವಭಾವ. ಅವರ ಕಕ್ಷಿಗಾರನ ರಕ್ಷಣೆಯಲ್ಲಿ ಸಾಸುವೆ ಕಾಳಿನಷ್ಟು ಬಿಟ್ಟು ಕೊಡುತ್ತಿರಲಿಲ್ಲ. ಅಷ್ಟೇ ಅಲ್ಲ ಸಣ್ಣದಿರಲಿ, ದೊಡ್ಡದಿರಲಿ ಎಲ್ಲ ಮೊಕದ್ದಮೆಗಳನ್ನೂ ಅವರ ಕಕ್ಷಿದಾರರ ಸಮಾಧಾನಕ್ಕೆ ಅವರೇ ಖುದ್ದಾಗಿ ಬಂದು ನಡೆಸಿಕೊಡುತ್ತಿದ್ದರು. ಹಾಗಾಗಿ ಅವರ ಕಿರಿಯ ವಕೀಲರಿಗೆ ಅವಕಾಶಗಳು ಕಮ್ಮಿಯಾಗುತ್ತಿದ್ದವು. ಕಕ್ಷಿಗಾರರಿಗಾದ ಲಾಭ, ಕಿರಿಯ ವಕೀಲರಿಗೆ ಅನುಭವ ನಷ್ಟವಾಗುತ್ತಿತ್ತು. ನನ್ನ ಅವರ ನಡುವೆ ಸುಮಾರು ೧೯೮೦ರ ಆಸುಪಾಸಿನಲ್ಲಿ ನಡೆದ ಮೊಕದ್ದಮೆಯೊಂದರ ಪರಿಚಯ.

ಒಂದು ಮೊಕದ್ದಮೆ–ಮಂಜಪ್ಪನವರು ಮಾಲೀಕನಿಗೆ ಹಾಜರಾದರೆ, ನಾನು ಬಡ ಗೇಣಿದಾರನ ಪರವಾಗಿ ಹಾಜರಾಗಿದ್ದೆ. ನನ್ನ ಕಕ್ಷಿಗಾರನಾದರೋ ಮೊದಲು ಆ ಜಮೀನಿನ ಮಾಲೀಕನಾಗಿದ್ದು, ಬಹಳ ಕಡಿಮೆ ಹಣಕ್ಕೆ ಕಷ್ಟ ಕಾಲದಲ್ಲಿ ಮಾರಿ ನಂತರ ಮೊದಲು ತನ್ನದೇ ಆಗಿದ್ದ ಆ ಜಮೀನಿನಲ್ಲಿ ಜೀವನೋಪಾಯಕ್ಕಾಗಿ ಗೇಣಿದಾರನಾಗಿ ಮುಂದುವರೆದಿದ್ದ. ಕಂದಾಯ, ಖಾತೆ, ದಾಖಲೆ, ಪಹಣಿ ಎಲ್ಲವೂ ಹೊಸದಾಗಿ ಕೊಂಡವನ ಹೆಸರಿಗೆ ಬದಲಾಗಿತ್ತು. ಹಾಗಾಗಿ ನನ್ನ ಕಕ್ಷಿಗಾರನ ಹೆಸರಿಗೆ ಯಾವುದೇ ದಾಖಲೆಯೂ ಇರಲಿಲ್ಲ. ನಂತರ ೧೯೭೪ರಲ್ಲಿ ಉಳುವವನೇ ಭೂ ಒಡೆಯ ಎಂಬ ಕ್ರಾಂತಿಕಾರಕ ಕಾನೂನು ಜಾರಿಗೆ ಬರಲಾಗಿ ಅವನನ್ನು ಗೇಣಿದಾರನಾಗಿ ನೋಂದಾಯಿಸಲು ಭೂ ಮಂಡಳಿಗೆ ಅರ್ಜಿ ಸಲ್ಲಿಸಿದ್ದನು. ಮೊದಲೇ ದಾಖಲೆಗಳಲ್ಲಿ, ತಾನೇ ಮಾರಾಟ ಮಾಡಿ ಜಮೀನಿಗೆ ಈಗ ಗೇಣಿದಾರನೆಂದರೆ ಯಾರು ನಂಬುತ್ತಾರೆ.

ಜಮೀನಾದರೋ ತುಂಬಾ ಬೆಲೆ ಬಾಳುವ ಭತ್ತದ ಗದ್ದೆ. ಜಮೀನ್ದಾರ ಮೇಲ್ಜಾತಿಯವನು, ಬಲಾಢ್ಯ, ತುಂಬಾ ಪ್ರಭಾವಶಾಲಿ. ಸಾಲದ್ದಕ್ಕೆ ರಾಜ್ಯ ಸರ್ಕಾರದ ಅಧಿಕಾರಿ. ಅವನ ಅರ್ಜಿಯನ್ನು ಸುಳ್ಳು ದಾವೆ, ಸ್ವಾಧೀನದಲ್ಲಿಲ್ಲ ಮತ್ತು ಮೋಸ ಮಾಡಲು ಮಾರಿದ್ದ ಜಮೀನನ್ನೇ ಹಿಂದೆ ಪಡೆಯುವ ಹುನ್ನಾರ ಎಂದು ಭೂ ನ್ಯಾಯ ಮಂಡಳಿ ಅವನ ಅರ್ಜಿಯನ್ನು ಸಾರಾಸಗಟಾಗಿ ವಜಾ ಮಾಡಿತ್ತು. ನಮ್ಮ ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ಭೂ ನ್ಯಾಯ ಮಂಡಳಿಯ ಆದೇಶವೇ ಅಂತಿಮ. ಅದರ ಮೇಲೆ ಆಗ ಅಪೀಲುಗಳಿರಲಿಲ್ಲ. ಸಾಕ್ಷ್ಯ, ಪುರಾವೆ ವಿಚಾರಗಳಲ್ಲಿ ಇನ್ನೊಂದು ಅಭಿಪ್ರಾಯ ಸಾಧ್ಯ ಇದ್ದರೂ ಆದೇಶ ಅಂತಿಮ ಎಂದು ಕಾಯ್ದೆಯಲ್ಲಿ ಹೇಳಿರುವುದರಿಂದ ರಿಟ್ ಅರ್ಜಿಯಲ್ಲಿ ಅದನ್ನು ಪುನರ್ವಿಮರ್ಶೆ ಮಾಡಲು ಬರುವುದಿಲ್ಲ. ನನ್ನ ಕಕ್ಷಿಗಾರನನ್ನು ಹಣ್ಣುಗಾಯಿ, ನೀರುಗಾಯಿ ಮಾಡಲು ಆ ಜಮೀನ್ದಾರನೊಬ್ಬನೇ ಸಾಕಾಗಿತ್ತು. ಕಾನೂನೂ ಅವನಿಗೆ ಸಹಕಾರಿಯಾಗಿತ್ತು. ಗಾಯದ ಮೇಲೆ ಬರೆ ಎಳೆದಂತೆ ನನ್ನ ಕಕ್ಷಿಗಾರನ ದುರಾದೃಷ್ಟಕ್ಕೆ ಆ ಜಮೀನ್ದಾರನು ಮಂಜಪ್ಪನವರಿಗೆ ವಕಾಲತ್ತು ಕೊಡಬೇಕೇ? ಮಂಜಪ್ಪನವರಾದರೋ ಕೋರ್ಟಿಗೆ ಹೋಗುವ ಮೊದಲೇ ಅವರ ಕಕ್ಷಿಗಾರನ ಪರವಾಗಿ ಮಾತನಾಡಲು ಶುರು ಮಾಡಿಬಿಟ್ಟರು. ಅದೃಷ್ಟಕ್ಕೆ ಮಂಜಪ್ಪನವರು ಹಾಜರಾಗುವ ಮೊದಲೇ ಹರ ಸಾಹಸ ಮಾಡಿ ರಿಟ್ ಅರ್ಜಿ ವಿಚಾರಣೆಗೆ ಸ್ವೀಕರಿಸುವಂತೆ ಕೋರ್ಟು ಮನವೊಲಿಸಿದ್ದರಿಂದ ರಿಟ್ ಅರ್ಜಿಯ (ಪ್ರಿಲಿಮಿನರಿ ಹಿಯರಿಂಗ್) ಪ್ರಾಥಮಿಕ ವಿಚಾರಣೆ ಹಂತ ದಾಟಿತ್ತು. ಗೇಣಿದಾರನ ದಾವಾ ಸರಳವಾಗಿತ್ತು. "ಮೊದಲಿಗೆ ನಾನೇ ಈ ಜಮೀನಿನ ಮಾಲೀಕನಾಗಿದ್ದ. ಹಣದ ಮುಗ್ಗಟ್ಟಿನಲ್ಲಿ ಸಾಲ ಪಡೆದಾಗ ಮೋಸದಿಂದ ಪ್ರತಿವಾದಿ ತನ್ನ ಹೆಸರಿಗೆ ಈ ಜಮೀನನ್ನು ಬರೆಸಿಕೊಂಡಿದ್ದಾನೆ. ಆ ಜಮೀನಿನ ಬೆಲೆಯನ್ನೂ ಕೊಟ್ಟಿಲ್ಲ, ಎಲ್ಲ ದಾಖಲೆಗಳನ್ನು ಅವನ ಹೆಸರಿಗೆ ಮಾಡಿಸಿಕೊಂಡಾಗ್ಯೂ ನನ್ನನ್ನೇ ಗೇಣಿದಾರನಾಗಿ ಸ್ವಾಧೀನದಲ್ಲಿ ಮುಂದುವರೆಸಿದ್ದಾನೆ. ಪ್ರತಿವರ್ಷ ನಾನೇ ಭತ್ತ ಬೆಳೆಯುತ್ತಿದ್ದೇನೆ. ಅರ್ಧ ಬೆಳೆಯನ್ನು ಗೇಣಿಯಾಗಿ ಪ್ರತಿವಾದಿಗೆ ಕೊಡುತ್ತಿದ್ದೇನೆ. ಪ್ರತಿವಾದಿಯು ಬಲಾಢ್ಯನಾಗಿರುವುದರಿಂದಲೂ, ಸರ್ಕಾರಿ ಅಧಿಕಾರಿಯಾಗಿರುವುದರಿಂದ ಸ್ವಾಧೀನವೂ ಕೂಡ ನನ್ನ ಹೆಸರಲ್ಲಿ ದಾಖಲಾಗದಂತೆ, ಗೇಣಿ ಕಾಣಿಸದಂತೆ ದಾಖಲೆಗಳನ್ನು ತಿರುಚಿದ್ದಾನೆ. ಆತ ೩೦೦ ಕಿಲೋ ಮೀಟರ್ ದೂರದಲ್ಲಿ ಉದ್ಯೋಗದಲ್ಲಿದ್ದಾನೆ. ಹಾಗಾಗಿ ಅವನು ಈ ಜಮೀನನ್ನು ಸ್ವಂತ ಸಾಗುವಳಿ ಮಾಡುತ್ತೇನೆಂದು ಹೇಳುವುದು ವಸ್ತುಸ್ಥಿತಿಗೆ ವಿರುದ್ಧವಾಗಿದೆ. ಪ್ರತಿ ವರ್ಷದಂತೆ ಈ ವರ್ಷವೂ ನಾನೇ ಬೆಳೆ ಬೆಳೆದಿದ್ದೇನೆ. ಇನ್ನು ೧೫ ದಿನಗಳಲ್ಲಿ ಭತ್ತದ ಫಸಲನ್ನು ಕಟಾವು ಮಾಡಬೇಕು. ಭೂ ನ್ಯಾಯ ಮಂಡಳಿಯ ಆದೇಶ ನನ್ನ ವಿರುದ್ಧ ಬಳಸಿ

ಪ್ರತಿವಾದಿ ನನ್ನನ್ನು ಒಕ್ಕಲೆಬ್ಬಿಲು ಪ್ರಯತ್ನದಲ್ಲಿದ್ದಾನೆ. ಅದಕ್ಕೆ ಅವಕಾಶ ಮಾಡಿಕೊಟ್ಟಲ್ಲಿ ನನ್ನ ಸರ್ವ ನಾಶವಾಗುತ್ತೆ. ಇರುವ ಒಂದೇ ಜೀವನೋಪಾಯ ಇಲ್ಲದಂತಾಗುತ್ತದೆ. ನನ್ನ ಸ್ವಾಧೀನಕ್ಕೆ ಧಕ್ಕೆ ಬರದಂತೆ ಮಧ್ಯಂತರ ಆದೇಶ ನೀಡಿ".

ಮೊಕದ್ದಮೆ ವಿಚಾರಣೆಗೆ ಸ್ವೀಕರಿಸಿದ್ದರೂ ಎಕ್ಸ್-ಪಾರ್ಟಿ ಮಧ್ಯಂತರ ಆದೇಶ ಕೊಡುವಷ್ಟು ಒಳ್ಳೆಯ ಕೇಸಿಲ್ಲ ಎಂದು ಪ್ರತಿವಾದಿಗೆ ನೋಟೀಸು ಜಾರಿ ಮಾಡಿತ್ತು. ಆ ಹಂತದಲ್ಲಿ ಮಂಜಪ್ಪನವರು ವಕಾಲತ್ತು ಹಾಕಿ ರಿಟ್ ಅರ್ಜಿದಾರನ ಎಲ್ಲ ಹೇಳಿಕೆಗಳನ್ನೂ ಸಾರಾಸಗಟಾಗಿ ಅಲ್ಲಗಳೆದು ನನ್ನ ಕಕ್ಷಿಗಾರನನ್ನು ಮೋಸಗಾರ, ಮಾರಿರುವ ಜಮೀನನ್ನು ಮತ್ತೆ ವಾಪಸ್ ಪಡೆದುಕೊಳ್ಳುವ ಸಲುವಾಗಿ ಈ ಸುಳ್ಳಿನ ಕಂತೆ ಕಟ್ಟಿದ್ದಾನೆ ಎಂದು ತಕರಾರು ಸಲ್ಲಿಸಿದ್ದರು. ಈ ಹಿನ್ನಲೆಯಲ್ಲಿ ಕೋರ್ಟಿನಲ್ಲಿ ನಡೆದ ವಾದ-ವಿವಾದಗಳನ್ನು ಅಲ್ಲಿ ನಡೆದಂತೆಯೇ ದಾಖಲಿಸಿದ್ದೇನೆ.

ರವಿವರ್ಮ: (ಕೇಸಿನ ವಿವರಗಳನ್ನೆಲ್ಲಾ ಹೇಳಿ) – ಅರ್ಜಿದಾರನೇ ನಿಂತ ಬೆಳೆಯನ್ನು ಬೆಳೆದಿದ್ದಾನೆ. ಆ ಬೆಳೆ ಅವನಿಗೆ ದಕ್ಕದಿದ್ದರೆ ಅವನ ಜೀವನೋಪಾಯಕ್ಕೆ ತೊಂದರೆಯಾಗುತ್ತೆ. ಭೂ ನ್ಯಾಯ ಮಂಡಳಿಯು ಅವನ ವಿರುದ್ಧ ಆದೇಶ ಮಾಡಿರುವುದನ್ನು ಪ್ರತಿವಾದಿ ಬಳಸಿಕೊಂಡು ಅರ್ಜಿದಾರನನ್ನು ಒಕ್ಕಲೆಬ್ಬಿಸುವ ಪ್ರಯತ್ನದಲ್ಲಿದ್ದಾನೆ. ರಿಟ್ ಅರ್ಜಿ ಈಗಾಗಲೇ ವಿಚಾರಣೆಗೆ ಸ್ವೀಕರಿಸಿರುವುದರಿಂದ ವಿಚಾರಣೆಯಾಗುವವರೆಗೂ ಯಥಾ ಸ್ಥಿತಿ ಕಾಯುವ ಸಲುವಾಗಿ ಈ ಮಧ್ಯಂತರ ಆದೇಶ ಮಾಡಿ ಅವನು ಬೆಳೆದ ಬೆಳೆಯನ್ನು ಕೊಯ್ಯಲು ಅನುಕೂಲಮಾಡಿಕೊಡಿ.

ಮಂಜಪ್ಪನವರು : ಪ್ರತಿವಾದಿಯೇ ಭೂ ಮಾಲೀಕನಾಗಿ ಸ್ವಂತ ಸಾಗುವಳಿ ಮಾಡಿದ್ದಾನೆ. ಯಾರಿಗೂ ಗೇಣಿಗೆ ಕೊಟ್ಟಿಲ್ಲ. ಅರ್ಜಿದಾರನಿಗೂ ಗೇಣಿ ಕೊಟ್ಟಿಲ್ಲ. ದಿನನಿತ್ಯದ ವ್ಯವಸಾಯವನ್ನೂ ಪ್ರತಿವಾದಿಯೇ ಸ್ವಂತವಾಗಿ ಮಾಡಿದ್ದಾನೆ (ಜಮೀನು ಮಾರಾಟ ಮಾಡಿರುವುದು, ರೆವಿನ್ಯೂ ದಾಖಲೆಗಳೆಲ್ಲಾ ಪ್ರತಿವಾದಿಯ ಹೆಸರಿನಲ್ಲಿರುವುದು, ವಾದಿಯ ಹೆಸರು ಎಲ್ಲೂ ದಾಖಲಾಗದಿರುವುದು ಮತ್ತು ತಕರಾರಿನಲ್ಲಿ ಹೇಳಿರುವ ಎಲ್ಲ ವಿಚಾರಗಳನ್ನು ಸವಿವರವಾಗಿ ವಿವರಿಸಿದರು) ಯಾವುದೇ ಕಾರಣಕ್ಕೂ ಮಧ್ಯಂತರ ಆದೇಶ ಮಾಡಬಾರದು. ಹಾಗೇನಾದರೂ ಮಾಡಿದರೆ ಪ್ರತಿವಾದಿಗೆ ತುಂಬಾ ನಷ್ಟವಾಗುತ್ತದೆ.

ನ್ಯಾಯಮೂರ್ತಿ : Mr. Kumar, your client is a fraud. He wants to knock off the property he has already sold. I cannot go against

the revenue records. I will dismiss your prayer for interim Injuction.

ರವಿವರ್ಮ: ವಿಚಾರಣೆಗೆ ಮೊದಲೇ ತೀರ್ಮಾನಕ್ಕೆ ಬರಬೇಡಿ. ಪೂರ್ಣ ವಿಚಾರಣೆಯಾದ ಮೇಲೂ ನಿಮಗೆ ಇದೇ ಅಭಿಪ್ರಾಯ ಮೂಡಿದಲ್ಲಿ ರಿಟ್ ಅರ್ಜಿ ವಜಾ ಮಾಡಬಹುದು. ಈಗಾಗಲೇ ಅದನ್ನು ವಿಚಾರಣೆಗೆ ಸ್ವೀಕರಿಸಿದ್ದೀರಿ. ನನ್ನ ಸನ್ಮಿತ್ರರು ನುಡಿದಂತೆ ಪ್ರತಿವಾದಿ ಸ್ವಂತ ಸಾಗುವಳಿ ಮಾಡಲು ಹೇಗೆ ಸಾಧ್ಯ. ಜಮೀನಿರುವ ಊರಿನಿಂದ ೩೦೦ ಕಿ.ಮೀ. ದೂರದಲ್ಲಿ ಉದ್ಯೋಗದಲ್ಲಿದ್ದಾನೆ. ದಿನನಿತ್ಯದ ವ್ಯವಸಾಯ ಮಾಡಲು ಸಾಧ್ಯವಿಲ್ಲ. ಅರ್ಜಿದಾರನೇ ಸ್ವತಃ ಈ ಬೆಳೆ ಬೆಳೆದಿದ್ದಾನೆ. ಅವನ ಬೆಳೆಯನ್ನು ವಿಚಾರಣೆಯಾಗುವವರೆಗೆ ರಕ್ಷಿಸಿ.

ನ್ಯಾಯಮೂರ್ತಿ: Oh! your Client is a satya Harishchandra ! How can I believe his claim when there is not an iota of documentary evidence in his favour.

ರವಿವರ್ಮ : ಅರ್ಜಿದಾರ ನಿರಕ್ಷರ ಕುಕ್ಷಿ. ಅವನ ಹಕ್ಕುಗಳ ಬಗ್ಗೆಯೇ ಅವನಿಗೆ ತಿಳುವಳಿಕೆ ಇಲ್ಲ. ಹಾಗಾಗಿ ಪಹಣಿ ಅವನ ಹೆಸರಿಗೆ ಬರೆಸಿಕೊಳ್ಳಲು ಸಾಧ್ಯವಾಗಿಲ್ಲ. ಭೂನ್ಯಾಯ ಮಂಡಳಿಗಳು ಒಂದು ರೀತಿಯ ಪೀಪಲ್ಸ್ ಕೋರ್ಟ್. ಅಲ್ಲಿಯೂ ಸಹ ಇಂತಹವರಿಗೆ ನ್ಯಾಯ ಸಿಗದಿದ್ದಲ್ಲಿ ಅವರೆಲ್ಲಿ ಹೋಗಬೇಕು?

(ಹೀಗೆಯೇ ನನ್ನ ಮತ್ತು ನ್ಯಾಯಮೂರ್ತಿಗಳ ನಡುವೆ ವಾದ-ವಿವಾದಗಳು ನಡೆಯುತ್ತಿರುವಲ್ಲಿ ಒಮ್ಮೆ ನನ್ನ ಒತ್ತಡ ತೀವ್ರವಾದಾಗ ಮಂಜಪ್ಪನವರಿಗೆ ಇವನು ಬಿಡುವ ಪೈಕಿಯಲ್ಲ ಇಬ್ಬರಿಗೂ ಅನ್ಯಾಯವಾಗದಂತೆ ಒಂದು ಆದೇಶ ಮಾಡಿಸೋಣ ಎನ್ನಿಸಿರಬೇಕು. ಆಗ ಅವರೆಂದರು)

ಮಂಜಪ್ಪನವರು : ಸ್ವಾಮಿ, ಬೆಳೆ ನಿಂತಿರುವುದು ನಿಜ. ಕುಯ್ಲು ಆಗಲೇಬೇಕು. ಯಾವ ಕಾರಣಕ್ಕೂ ನನ್ನ ಕಕ್ಷಿಗಾರನ ವಿರುದ್ಧ ತಾಕೀತು ಮಾಡಬೇಡಿ, ಬದಲಾಗಿ ಇಬ್ಬರಿಗೂ ಅನ್ಯಾಯವಾಗದಂತೆ ತಹಶೀಲ್ದಾರ್‌ರವರನ್ನು ರಿಸೀವರ್ ಆಗಿ ನೇಮಕ ಮಾಡಿಬಿಡಿ. ಅವರು ಭತ್ತವನ್ನು ಕೊಯ್ದು ಮಾರಿ ಹಣವನ್ನು ಠೇವಣಿಯಲ್ಲಿಡಲಿ. ಮೊಕದ್ದಮೆ ಗೆದ್ದವರು ಪಡೆಯುತ್ತಾರೆ.

ನ್ಯಾಯಮೂರ್ತಿ : Manjappa, now the cat is out of the bag. ಭತ್ತ ಬೆಳೆದ ಯಾವ ರೈತನೂ ತಹಶೀಲ್ದಾರ್ ಬಾಯಿಗೆ ಇಡುವುದಿಲ್ಲ. ನಿಮ್ಮ

ಹೇಳಿಕೆಯಿಂದಲೇ ಸ್ಪಷ್ಟವಾಗುತ್ತೆ. ನಿಮ್ಮ ಕಕ್ಷಿಗಾರ ಈ ಬೆಳೆಯನ್ನು ಬೆಳೆದವನಲ್ಲ. ಎದುರುದಾರನಿಗೆ ತಪ್ಪಿಸಲೆಂದ ಅವನು ತಹಶೀಲ್ದಾರ್‌ಗೂ ಬೆಳೆ ಕೊಡಲು ಸಿದ್ಧನಾಗಿರುವನು. ಈಗ ನನಗೆ ಮನದಟ್ಟಾಯಿತು (ಆಗ ನ್ಯಾಯ ಮೂರ್ತಿಗಳು ಸಾಲೋಮನ್ ದೊರೆ ಒಂದು ಮಗು ಕೊಯ್ಯುವುದಕ್ಕೆ ಮುಂದಾದಾಗ ನಿಜವಾದ ತಾಯಿಯನ್ನು ಪತ್ತೆ ಹಚ್ಚಿದ ಕಥೆಯನ್ನು ಹೇಳಿದರು) ಅರ್ಜಿದಾರನೇ ಈ ಬೆಳೆಯನ್ನು ಬೆಳೆದಿದ್ದಾನೆ. ಈ ಬೆಳೆ ಅವನಿಗೆ ಧಕ್ಕದಿದ್ದರೆ ಅವನ ಇಡೀ ಕುಟುಂಬ ಉಪವಾಸ ಮಲಗಬೇಕಾಗುತ್ತದೆ. ನಿಮ್ಮ ಕಕ್ಷಿಗಾರ ಉದ್ಯೋಗದಲ್ಲಿ ಹಾಯಾಗಿದ್ದಾನೆ. ಅರ್ಜಿದಾರನ ಪರವಾಗಿಯೇ ತಾಕೀತು ಮಾಡುತ್ತೇನೆ (ಇಂಜೆಂಕ್ಷನ್ ಅರ್ಡರ್ ನೀಡಿದರು)

ಮಂಜಪ್ಪನವರು ಅವರ ಕಕ್ಷಿದಾರನ ಪರವಾಗಿ ಉಗ್ರವಾಗಿ ಹೋರಾಟ ಮಾಡಿದಾಗ್ಯೂ ಒಂದು ನ್ಯಾಯಯುತವಾದ ಆದೇಶ ಬಂದಾಗ ಅದನ್ನು ಗೌರವಿಸಿದರು. ಅಷ್ಟೇ ಅಲ್ಲ ಅವರ ಕಕ್ಷಿಗಾರನಿಗೆ ಅಪೀಲು ಹಾಕುವುದು ಬೇಡ ಅಂತ ಸಹ ಹೇಳಿದರು. ಈ ಒಂದು ಮೊಕದ್ದಮೆ ಮಂಜಪ್ಪನವರು ಅವರ ಕಕ್ಷಿಗಾರರ ಹಿತ ರಕ್ಷಣೆಗೆ ಮಾಡುತ್ತಿದ್ದ ಸರ್ವಪ್ರಯತ್ನದ ಬಗ್ಗೆಯೂ ಮತ್ತು ಅವರು ನ್ಯಾಯದ ಪರವಾಗಿ ಕೊನೆಗೂ ನಿಲ್ಲುತ್ತಿದ್ದುದರ ಬಗ್ಗೆ ಒಳ್ಳೆಯ ನಿದರ್ಶನ. ಈ ಮೊಕದ್ದಮೆಯನ್ನು ತೀರ್ಮಾನಿಸಿದವರು ಕರ್ನಾಟಕಕ್ಕೆ ನಂತರ ಮುಖ್ಯ ನ್ಯಾಯಾಧೀಶರಾಗಿದ್ದ ಲೇಟ್ ಜಸ್ಟೀಸ್ ಕೊರಟಗೆರೆ ಭೀಮಯ್ಯನವರು. ಅವರ ರೊಬಸ್ಟ್ ಕಾಮನ್ ಸೆನ್ಸ್‌ಗೂ ಸಹ ಈ ಮೊಕದ್ದಮೆ ಒಂದು ಉದಾಹರಣೆಯಾಗಿದೆ.

## ಭೂಸುಧಾರಣೆ : ಇನಾಂ ರದ್ದಿಯಾತಿ

ಮಹಾರಾಜರ ಕಾಲದಲ್ಲಿ ಜಮೀನುಗಳನ್ನು ಅಥವಾ ಇಡೀ ಗ್ರಾಮಗಳನ್ನೇ ಬಳುವಳಿಯಾಗಿ ಕೊಡುತ್ತಿದ್ದರು. ಪ್ರಾರಂಭದಲ್ಲಿ ಯುದ್ಧದಲ್ಲಿ ಮಡಿದ ಅಥವಾ ದುಡಿದ ಸೈನಿಕನಿಗೆ ಪ್ರಾರಂಭವಾದ ಈ ಬಳುವಳಿಗಳು ಕ್ರಮೇಣ ದೇವಸ್ಥಾನಗಳನ್ನು ನಿರ್ವಹಿಸಲು ಮತ್ತು ಇತರೆಯವರಿಗೆ ಒಮ್ಮೊಮ್ಮೆ ತನ್ನ ನಾಯಿಗಳಿಗೂ ಸಹ ಅಂತಹ ಬಳುವಳಿಗಳನ್ನು ಕೊಟ್ಟಿದ್ದು ಇದೆ. ಇವುಗಳೇ ವಿವಿಧ ರೀತಿಯ ಇನಾಮುಗಳು– ನೆತ್ತರ ಕೊಡುಗೆಗಳು, ಅಗ್ರಹಾರಗಳು ಮತ್ತು ಉಂಬಳಿಗಳು. ಉಳಿದ ಜಮೀನುಗಳನ್ನು ವ್ಯವಸಾಯವನ್ನು ಮಾಡಿಸಿ ತನಗೆ ಕಂದಾಯವನ್ನೋ, ತೆರಿಗೆಯನ್ನೋ ವಸೂಲು ಮಾಡಿಕೊಡಲು ಮಧ್ಯವರ್ತಿಗಳನ್ನು ರಾಜನು ನೇಮಿಸಿದ. ಜೋಡಿದಾರರು, ಜಹಗೀರುದಾರರು, ದೇಸಾಯಿಗಳು, ಹೆಗ್ಗಡೆಗಳು, ಹೀಗೆ ಮಹಾರಾಜ ವಹಿಸಿಕೊಟ್ಟ

ಜಮೀನುಗಳ, ಗ್ರಾಮಗಳ ಸೀಮಿತ ಒಡೆಯರಾದರು. ಇಂತಹ ಮಧ್ಯವರ್ತಿಗಳು ಜಮೀನುಗಳ ಲೆಕ್ಕಪತ್ರಗಳನ್ನಿಡಲು ಮತ್ತು ಕಂದಾಯ ವಸೂಲಿಯಲ್ಲಿ ಸಹಾಯ ಮಾಡಲು ಶ್ಯಾನುಭೋಗರು, ಕುಲಕರ್ಣಿಗಳು, ಪಟೇಲರು, ಉಗ್ರಾಣಿಗಳು, ಕುಳವಾಡಿಗಳು, ತೋಟಿ ತಳವಾರರು ಹೀಗೆ ಗ್ರಾಮ ಮಟ್ಟದ ಒಂದು ಪಡೆಯನ್ನೇ ಸೃಷ್ಟಿಸಿದರು. ಇವರ್‍ಯಾರೂ ನೇರವಾಗಿ ವ್ಯವಸಾಯಗಾರರಾಗಿರಲಿಲ್ಲ. ಜಮೀನುಗಳನ್ನು ವ್ಯವಸಾಯ ಮಾಡಲು ಇಷ್ಟ ಬಂದವರನ್ನು ನೇಮಿಸಿಕೊಳ್ಳುತ್ತಿದ್ದರು. ನಿಜವಾದ ಈ ವ್ಯವಸಾಯಗಾರರನ್ನು ಗೇಣಿದಾರರೆಂದು ಕರೆಯುತ್ತಿದ್ದರು. ಅವರಿಗೆ ಬೆಳೆಯಲ್ಲಿ ಒಂದು ಪಾಲನ್ನೋ ಅಥವಾ ಸ್ವಲ್ಪ ಹಣವನ್ನೋ ಕೊಟ್ಟು ಕೈ ತೊಳೆದುಕೊಳ್ಳುತ್ತಿದ್ದರು. ಬೇಸಾಯ ಮಾಡುತ್ತಿದ್ದ ಈ ಗೇಣಿದಾರರಿಗೆ ಇನ್ನಾವುದೇ ಹಕ್ಕುಗಳಿರುತ್ತಿರಲಿಲ್ಲ. ಈ ಮಧ್ಯವರ್ತಿಗಳ ಹಿಡಿತದಲ್ಲಿ ಗೇಣಿದಾರರ ಶೋಷಣೆ ನಿರಂತರವಾಗಿ ನಡೆದು ದೇಶದಲ್ಲೆಲ್ಲಾ ಹಾಹಾಕಾರವೆದ್ದಿತ್ತು.

ಮಂಜಪ್ಪನವರು ಕಂದಾಯ ಮಂತ್ರಿಯಾದ ಕೂಡಲೇ ೧-೪-೧೯೫೩ ರಲ್ಲಿ ವೈಯಕ್ತಿಕ ಮತ್ತು ಇತರೆ ವಿಧವಾದ ಸಣ್ಣಪುಟ್ಟ ಇನಾಂಗಳನ್ನು ರದ್ದುಪಡಿಸುವ ಸಲುವಾಗಿ ಒಂದು ವಿಧೇಯಕವನ್ನು ವಿಧಾನ ಸಭೆಯಲ್ಲಿ ಮಂಡಿಸಿದರು. ನಂತರ ೦೧-೦೩-೧೯೫೪ ರಲ್ಲಿ ದೇವಾಲಯ ಮತ್ತು ಧರ್ಮದಾಯ ಇನಾಂಗಳನ್ನು ರದ್ದು ಮಾಡಲು ಪ್ರತ್ಯೇಕ ಮಸೂದೆ ರಚಿಸಿ ವಿಧಾನ ಸಭೆಯಲ್ಲಿ ಮಂಡಿಸಿದರು. ಈ ಎರಡು ಕ್ರಾಂತಿಕಾರಕ ಹೆಜ್ಜೆಗಳು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ಘಟನೆಗಳು.

ಇನಾಂದಾರರಲ್ಲಿ ಬಹು ಮಂದಿ ಬ್ರಾಹ್ಮಣರಾಗಿದ್ದರಿಂದಲೂ, ಶೃಂಗೇರಿ ಜಹಗೀರಿ ಮಠಕ್ಕೆ ಸೇರಿದ್ದರಿಂದಲೂ ಮಂಜಪ್ಪನವರನ್ನು " ಬ್ರಾಹ್ಮಣ ವಿರೋಧಿ" ಎಂದು ಬಣ್ಣಿಸಲಾಯಿತು. ಪತ್ರಿಕೆಗಳು ಅವರ ಕೈಯಲ್ಲೇ ಇದ್ದುದರಿಂದ ಈ ಮಸೂದೆಗಳು ಪ್ರಗತಿಪರ ಶೋಷಣಾಯುಕ್ತ ಗ್ರಾಮೀಣ ಆರ್ಥಿಕ ವ್ಯವಸ್ಥೆಗೆ ನಾಂದಿ ಎಂದು ಬಣ್ಣಿಸುವುದರ ಬದಲು ಇನಾಂ ರದ್ದುಪಡಿಸಿದ ಪಾಪಕ್ಕೆ ಮಂಜಪ್ಪನವರು ಜನ್ಮ ಜನ್ಮಾಂತರಕ್ಕೂ ಹುಳುವಾಗಿ ಹುಟ್ಟುವರೆಂದು ವ್ಯಾಪಕವಾಗಿ ಅಪಪ್ರಚಾರ ಮಾಡಲಾಯಿತು.

ಈ ಎರಡೂ ಮಸೂದೆಗಳ ಮೇಲಿನ ಚರ್ಚೆ, ಅವಿರತ ಕೆಲಸ, ನಿರಂತರ ಟೀಕೆಗಳ ಹಿನ್ನೆಲೆಯಲ್ಲಿ ಮಂಜಪ್ಪನವರ ಆರೋಗ್ಯ ಕ್ಷೀಣಿಸುತ್ತಾ ಬಂದು ಹೈದರಾಬಾದ್‌ಗೆ ಒಂದು ಸಭೆಗೆ ಹೋಗಿದ್ದಾಗ ಪ್ರಜ್ಞೆ ತಪ್ಪಿ ಬಿದ್ದಿದ್ದರು. ಬೆಂಗಳೂರಿಗೆ ಹಿಂತಿರುಗಿದ

ಮೇಲೆ ವಾಂತಿಯಾಗಿ ಹೃದಯದ ನೋವು ಕಾಣಿಸಿಕೊಂಡಿತು. ಕಾಂಗ್ರೆಸ್ ನಾಯಕರುಗಳೇ ಆದಿಯಾಗಿ ಇನಾಂ ರದ್ದಿಯಾತಿ ಮಸೂದೆಗೂ ಈ ಬೆಳವಣಿಗೆಗಳಿಗೂ ತಲೆ ಹಾಕುವ ಕೆಲಸವನ್ನೂ ಮಾಡಿದ್ದರು. ಬೆವರು ಸುರಿಸಿ ಬೇಸಾಯ ಮಾಡುವ ರೈತನಿಗೇ ಭೂ ಒಡೆತನ ಕೊಟ್ಟರೆ ದೇವರು ಮೆಚ್ಚುವನು ಎಂದು ಸಮಾಧಾನ ಹೇಳಿ ಮಂಜಪ್ಪನವರು ಉತ್ತರ ಕೊಡುತ್ತಿದ್ದರು. ಧೈರ್ಯದಿಂದ ಇನಾಂ ರದ್ದಿಯಾತಿಗೆ ಹೋರಾಟ ಮಾಡಿದರು.

ಈ ಕ್ರಾಂತಿಕಾರಕ ಮಸೂದೆಗಳೇ ನಂತರ ಇನಾಂ ಅಬಾಲಿಷನ್ ಕಾಯ್ದೆಗಳಾಗಿ ಜಾರಿಗೊಂಡವು. ಈ ಜಮೀನುಗಳನ್ನು ಬೇಸಾಯಗಾರರಾಗಿದ್ದ ಗೇಣಿದಾರರಿಗೇ ಮಂಜೂರು ಮಾಡಲಾಯಿತು. ಇದಕ್ಕಾಗಿ ಜಿಲ್ಲೆಗಳಲ್ಲಿ ಇನಾಂ ಅಬಾಲಿಷನ್ ವಿಶೇಷ ಜಿಲ್ಲಾಧಿಕಾರಿಗಳನ್ನು ನೇಮಕ ಮಾಡಲಾಯಿತು. ಈ ಮೂಲಕ ಕರ್ನಾಟಕದಲ್ಲಿ ರೈತರನ್ನು ಮಧ್ಯವರ್ತಿಗಳ ಶೋಷಣೆಯಿಂದ ಬಿಡುಗಡೆ ಮಾಡಲು ಭದ್ರ ಬುನಾದಿ ಹಾಕಲಾಯಿತು.ಹಾಗೆಯೇ ಖಾಸಗಿ ಒಡೆತನದ ಜಮೀನುಗಳಲ್ಲಿಯೂ ಸಹ ಸ್ವಂತ ಬೇಸಾಯ ಮಾಡದೆ ಗೇಣಿದಾರನ ಮೂಲಕ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಈ ಬಡ ಗೇಣಿದಾರರನ್ನು ನಿರಂತರವಾಗಿ ಶೋಷಣೆ ಮಾಡಲಾಗುತ್ತಿತ್ತು. ಅವರಿಂದ ಗೇಣಿ ಅಳೆಯುವುದರಲ್ಲಿಯೂ ತುಂಬಾ ಮೋಸಮಾಡಲಾಗುತ್ತಿತ್ತು. ಕಾನೂನಿನಲ್ಲಿ ಗೇಣಿದಾರನಿಗೆ ಯಾವುದೇ ರಕ್ಷಣೆ ಇರಲಿಲ್ಲ. ಇಂತಹ ಶೋಷಣೆಯ ವಿರುದ್ಧ ನಡೆದ ಕ್ರಾಂತಿಕಾರಕ ಸತ್ಯಾಗ್ರಹವೇ ಕಾಗೋಡು ಸತ್ಯಾಗ್ರಹ. ಸ್ವತಂತ್ರ ಭಾರತದಲ್ಲಿ ನಡೆದ ಮೊದಲ ಸತ್ಯಾಗ್ರಹ. ರಾಷ್ಟ್ರದ ಸಮಾಜವಾದಿ ನಾಯಕ ಡಾ॥ ರಾಮಮನೋಹರ ಲೋಹಿಯಾರವರು ಖುದ್ದಾಗಿ ಸತ್ಯಾಗ್ರಹ ನಡೆಸಿ ಸಾಗರದಲ್ಲಿ ಸೆರೆವಾಸಕ್ಕೆ ತುತ್ತಾಗಿದ್ದರು. ಕಾಂಗ್ರೆಸ್ ಸರ್ಕಾರದ ವಿರುದ್ಧವೇ ನಡೆದ ಹೋರಾಟವಾದರೂ ಈ ಹೋರಾಟಕ್ಕೆ ಮಂಜಪ್ಪನವರ ಪರೋಕ್ಷ ಬೆಂಬಲ ಇತ್ತು. ಸ್ವತಃ ಗೇಣಿದಾರನ ಮಗನಾದ ಅವರಿಗೆ ಗೇಣಿದಾರನ ಶೋಷಣೆಯ ಪೂರ್ಣ ಪರಿಚಯ ಮತ್ತು ಅನುಭವವಿತ್ತು. ಈ ಸತ್ಯಾಗ್ರಹ ನಂತರ ಬಂದ ಭೂಸುಧಾರಣಾ ಕಾಯ್ದೆಗೆ ಮೂಲ ಸೆಲೆ. ಮಂಜಪ್ಪನವರ ಕಾಲದಲ್ಲೇ ಈ ಬಗ್ಗೆ ಕಾಯ್ದೆ ಜಾರಿಗೊಳಿಸಲಾಯಿತು. ನಂತರ ದೇವರಾಜ ಅರಸರು ಮುಖ್ಯಮಂತ್ರಿಯಾದ ಮೇಲೆ ಹೆಚ್ಚು ಪರಿಣಾಮಕಾರಿಯಾಗಿ ತಿದ್ದುಪಡಿಯಾಯಿತು.

ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಭೂ ಸುಧಾರಣಾ ಕ್ರಮಗಳು ಜಾರಿಯಾಗಿ ಉಳುವವನೇ ಭೂ ಒಡೆಯ ತತ್ವ ಜಾರಿಯಾಯಿತು. ಗ್ರಾಮೀಣ ಆರ್ಥಿಕ ವ್ಯವಸ್ಥೆ ಸಮಾಜವಾದಿ ತತ್ವಗಳ ಆಧಾರದ ಮೇಲೆ ಶೋಷಣಾ ರಹಿತವಾಯಿತು. ಈ ಎಲ್ಲಾ ಭೂ ಸುಧಾರಣಾ

ಕ್ರಮಗಳು ಜಾರಿಯಾಗಿ ಉಳುವವನೇ ಭೂ ಒಡೆಯ ತತ್ವ ಜಾರಿಯಾಯಿತು. ಗ್ರಾಮೀಣ ಆರ್ಥಿಕ ವ್ಯವಸ್ಥೆ ಸಮಾಜವಾದಿ ತತ್ವಗಳ ಆಧಾರದ ಮೇಲೆ ಶೋಷಣಾ ರಹಿತವಾಯಿತು.

ಈ ಎಲ್ಲಾ ಭೂ ಸುಧಾರಣಾ ಕಾಯ್ದೆಗಳ ಜಾರಿಯ ಒಂದು ಹಿನ್ನೋಟ ಹೀಗಿದೆ.

೧) ಕರ್ನಾಟಕ ಗ್ರಾಮ ಹುದ್ದೆಗಳ ರದ್ದಿಯಾತಿ ಕಾಯ್ದೆ ೧೯೬೧: ೬,೮೧,೧೭೩ ವಿಸ್ತೀರ್ಣದ ಜಮೀನನ್ನು ಒಂದು ಲಕ್ಷ ಮೂವತ್ತೇಳು ಸಾವಿರ ರೈತರಿಗೆ ಮಂಜೂರು ಮಾಡಲಾಗಿದೆ. ಇನ್ನೂ ೧೦,೦೦೦ ಪ್ರಕರಣಗಳು ಬಾಕಿ ಇವೆ.

೨) ಭೂ ಸುಧಾರಣಾ ಕಾಯ್ದೆ :

೨೧,೦೩,೫೬೬ ಎಕರೆ ಜಮೀನನ್ನು ೫ ಲಕ್ಷ ಗೇಣಿದಾರರಿಗೆ ಮಂಜೂರು ಮಾಡಲಾಗಿದೆ. ೧೨೦೦೦ ಪ್ರಕರಣಗಳು ಬಾಕಿ ಇವೆ.

೨,೬೮,೪೭೮ ಎಕರೆ ಜಮೀನನ್ನು ಹೆಚ್ಚುವರಿ ಜಮೀನೆಂದು ನಿರ್ಧರಿಸಲಾಗಿದೆ. ಇದರಲ್ಲಿ ೧,೨೩,೩೯೯ ಎಕರೆಗಳನ್ನು ಭೂ ರಹಿತ ಕಾರ್ಮಿಕರಿಗೆ ಹಂಚಲಾಗಿದೆ. ಅದರಲ್ಲಿ ೨೧,೫೫೫ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡದ ಜನರಿಗೆ ೭೮,೪೦೦ ಎಕರೆ, ೧೨,೦೦೦ ಇತರೆಯವರಿಗೆ ೪೫೦೦೦ ಎಕರೆಯನ್ನು ಇದುವರೆಗೆ ಹಂಚಲಾಗಿದೆ.

ಹೀಗೆ ೩೦ ಲಕ್ಷ ಎಕರೆಗೂ ಮಿಗಿಲಾದ ಕ್ಷೇತ್ರವನ್ನು ಎಂಟು ಲಕ್ಷ ಬಡ ರೈತ ಕುಟುಂಬಗಳ ಜೀವನೋಪಾಯಕ್ಕೆ ದಾರಿದೀಪವಾಗುವ ಭೂ ಸುಧಾರಣಾ ಕ್ರಮಗಳಿಗೆ ಮಂಜಪ್ಪನವರು ಭದ್ರ ಬುನಾದಿ ಹಾಕಿದ್ದರು.

ಹೀಗೆ ಕಡಿದಾಳ್ ಮಂಜಪ್ಪನವರು ಕರ್ನಾಟಕದ ಒಬ್ಬ ಪ್ರಾಮಾಣಿಕ, ರಾಜಕೀಯ ಮುತ್ಸದ್ದಿಯಷ್ಟೇ ಅಲ್ಲ, ಒಬ್ಬ ಉತ್ತಮ ನ್ಯಾಯವಾದಿ ಹಾಗೂ ಬಡ ರೈತರ ಏಳಿಗೆಗಾಗಿ ಶ್ರಮಿಸಿದ ಶ್ರೇಷ್ಠ ನಾಯಕ ಎಂಬುದು ಸ್ಪಷ್ಟವಾಗುತ್ತದೆ. ಯುವ ಪೀಳಿಗೆಗೆ ಒಬ್ಬ ಆದರ್ಶಪ್ರಾಯವಾದ ನ್ಯಾಯವಾದಿ.

# ಶ್ರೀಮತಿ ಮಲ್ಲಿಕಾ ಕಡಿದಾಳ್ ಅವರ ಸಂದರ್ಶನ

**ಸಂದರ್ಶಕರು : ಪ್ರೊ. ಶಿವರಾಮಯ್ಯ**

'ಬದುಕು ಜಟಕಾ ಬಂಡಿಯಲ್ಲ; ಚೈತನ್ಯ ರಥ' ವೆಂಬ ಕಟುಸತ್ಯಕ್ಕೆ ಸಾಕಾರವೆಂಬಂತೆ ಬದುಕಿದ ಕಡಿದಾಳ್ ಮಂಜಪ್ಪನವರು, ಭೂಹೀನ ಗೇಣಿದಾರನೊಬ್ಬನ ಮಗನಾಗಿ ಹುಟ್ಟಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯ ಪಾಲ್ಗೊಂಡು, ರಾಜ್ಯದ ಮುಖ್ಯಮಂತ್ರಿ ಪದವಿಯನ್ನು ಅಲಂಕರಿಸಿ ನಂತರ ಜೀವನ ನಿರ್ವಹಣೆಗಾಗಿ ಕೊನೆತನಕ ವಕೀಲ ವೃತ್ತಿಯನ್ನು ಅವಲಂಬಿಸಿ ನಿಷ್ಠಾವಂತ ರಾಜಕಾರಣಿಯಾಗಿದ್ದವರು.

ಶ್ರೀಮತಿ ಲಕ್ಷ್ಮೀದೇವಿಯವರು ಇಂಥವರ ಧರ್ಮಪತ್ನಿ, ಅವರೀಗ ೯೦ ವರ್ಷಗಳ ಗಡಿಯುಲ್ಲಿರುವ ವಯೋವೃದ್ಧೆ. ಒಳ್ಳೇ ಕಾದಂಬರಿಕಾರರೆನಿಸಿದಂತಹ ಮಂಜಪ್ಪನವರಂತೆಯೇ ಲಕ್ಷ್ಮೀದೇವಿಯವರೂ ಹೆಸರಾಂತ ಸಾಹಿತಿಗಳು. ಇವರ ಜನ್ಮಸ್ಥಳ ಮೂಡಿಗೆರೆ ತಾಲ್ಲೂಕಿನ ಕಳಸದ ಹತ್ತಿರದ 'ಅತ್ತಿಕೊಂಡ ಎಸ್ಟೇಟ್'. ಇವರ ತಂದೆ ಚನ್ನೇಗೌಡರು. ಅವರ ಮನೆ ಒಂದು ರಮಣೀಯ ಸ್ಥಳದಲ್ಲಿತ್ತು. ಮಲೆನಾಡಿನ ನಿಸರ್ಗ ಸೌಂದರ್ಯ, ಬಾಲೆಯಾದ ದಿನದಿಂದಲೂ ಲಕ್ಷ್ಮೀದೇವಿಯವರ ಮೇಲೆ ಪ್ರಭಾವ ಬೀರಿತು. ಅವರು ಕಡಿದಾಳ್ ಮಂಜಪ್ಪನವರನ್ನು ಕೈ ಹಿಡಿಯುವ ಮೊದಲೇ 'ವಿಶ್ವಕರ್ನಾಟಕ' ಪತ್ರಿಕೆಗೆ ಸಣ್ಣ ಕತೆಗಳನ್ನುಬರೆಯುತ್ತಿದ್ದರೆಂದು ತಿಳಿದುಬರುತ್ತದೆ. ಲಕ್ಷ್ಮೀದೇವಿ ಮತ್ತು ಮಂಜಪ್ಪನವರ ವಿವಾಹ ೧೭-೦೫-೧೯೪೦ರಲ್ಲಿ ನಡೆಯಿತು. ಶ್ರೀಮತಿ ಲಕ್ಷ್ಮೀದೇವಿಯವರ ಕಾವ್ಯ ನಾಮ 'ಮಲ್ಲಿಕಾ' ಎಂದು.

ಕಡಿದಾಳ್ ಮಂಜಪ್ಪನವರಂತಹ ನಿಷ್ಠಾವಂತ, ಪ್ರತಿಭಾವಂತ ರಾಜಕಾರಣಿ ಕೈ ಹಿಡಿದ ಲಕ್ಷ್ಮೀದೇವಿಯವರು ತಮ್ಮ ಬಿಡುವಿಲ್ಲದ ಮನೆವಾರ್ತೆಯ ನಡುವೆಯೂ ಮತ್ತು ಈವರೆಗೆ ೫೫ ಸಾಹಿತ್ಯಕೃತಿಗಳನ್ನು ಪ್ರಕಟಿಸಿದ್ದಾರೆ.  ಅವುಗಳಲ್ಲಿ ೧೧ ಕಾದಂಬರಿಗಳು. ೧೧ ಕಥಾ ಸಂಕಲನಗಳು, ೭ ಶಿಶು ಸಾಹಿತ್ಯ ಕೃತಿಗಳು ಹಾಗೂ ೧೦ ಸಂಕೀರ್ಣ ಕೃತಿಗಳೂ ಆಗಿವೆ. ಅಲ್ಲದೇ ಅವರ ಸಾಹಿತ್ಯ ರಚನೆಯ ಮೇರು ಕೃತಿ ಎಂದರೆ ಶ್ರೀ ಸ್ವಾಮಿ ವಿವೇಕಾನಂದರ ಜೀವನವನ್ನು ಕುರಿತ "ಶ್ರೀ ವಿವೇಕಾನಂದ ವಿಜಯಂ". ಒಟ್ಟು ೧೨೭೪ ಪುಟಗಳ ೪೩ ಅಧ್ಯಾಯಗಳನ್ನೊಳಗೊಂಡ ಈ ಕೃತಿ ಮಂಡಕೋಪನಿಷತ್ ಛಂದೋಶೈಲಿಯುಲ್ಲಿದೆ. ಲಕ್ಷ್ಮೀ ಪ್ರಕಾಶನವೆ ಸ್ವಂತ ಸಂಸ್ಥೆವತಿಯಿಂದ ತಮ್ಮೆಲ್ಲಾ ಕೃತಿಗಳನ್ನು ಪ್ರಕಟಿಸಿರುವ ಮಲ್ಲಿಕಾ ಅವರು,

೧೯೯೮ ರಲ್ಲಿ 'ಶ್ರೀ ವಿವೇಕಾನಂದ ವಿಜಯಂ' ಪ್ರಕಟಿಸಿದ್ದಾರೆ. ಮಲ್ಲಿಕಾ ಅವರ ಸಾಹಿತ್ಯ ಸೇವೆಗಾಗಿ ಪ್ರತಿಷ್ಠಿತ 'ಅತಿಮಬ್ಬೆ' ಪ್ರಶಸ್ತಿ ಗೌರವವು ಸಂದಾಯವಾಗಿದೆ. ಇವರ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಇವರ ಕೊಡುಗೆಯಿಂದ 'ಮಲ್ಲಿಕಾ ದತ್ತಿ' ಯೊಂದನ್ನು ಸ್ಥಾಪಿಸಿ, ಪ್ರತಿವರ್ಷ ಅರ್ಹ ಸೃಜನಶೀಲ ಮಹಿಳಾ ಕೃತಿಗೆ ಪ್ರಶಸ್ತಿಯೊಂದನ್ನು ನೀಡಲಾಗುತ್ತಿದೆ.

ಪ್ರಸ್ತುತ ಕಡಿದಾಳ್ ಮಂಜಪ್ಪನವರ ಶತಮಾನೋತ್ಸವ (೨೦೦೮) ಸಂದರ್ಭದಲ್ಲಿ ಕಡಿದಾಳರ ಸ್ಮರಣಾರ್ಥ ತರುತ್ತಿರುವ ಗ್ರಂಥಕ್ಕಾಗಿ ಅವರ ಶ್ರೀಮತಿ ಮಲ್ಲಿಕಾ ಕಡಿದಾಳರ ವಿಶೇಷ ಸಂದರ್ಶನ ನಡೆಸಲಾಯಿತು. ಆ ಸಂದರ್ಶನದ ಆಯ್ದ ಕೆಲವು ಸಂಗತಿಗಳನ್ನು ಇಲ್ಲಿ ಕೊಡಲಾಗಿದೆ.

ಸಂದರ್ಶಕ : ಮೇಡಂ, ಕಡಿದಾಳ್ ಮಂಜಪ್ಪನವರು ಶಿವಮೊಗ್ಗೆಯಲ್ಲಿ ವಕೀಲಿ ವೃತ್ತಿ ಶುರು ಮಾಡಿದಾಗ ಅವರು ಆರ್ಥಿಕವಾಗಿ ಅನುಕೂಲಕರವಾಗಿ ಇರಲಿಲ್ಲ. ನೀವು ಶ್ರೀಮಂತ ಕುಟುಂಬದಿಂದ ಬಂದವರು. ಅದು ಹೇಗೆ ಅವರನ್ನು ಮದುವೆಯಾಗಲು ಒಪ್ಪಿದಿರಿ ? ನಿಮ್ಮ ಮನಸ್ಸು ಒಪ್ಪಿತೆ ?

ಮಲ್ಲಿಕಾ: ನಮ್ಮದು ಬಹುದೊಡ್ಡ ಕುಟುಂಬ. ನಮ್ಮ ತಂದೆಗೆ ೧೧ ಜನ ಮಕ್ಕಳು. ೮ ಜನ ಅಕ್ಕತಂಗಿಯರು ಮತ್ತು ೩ ಜನ ಗಂಡು ಮಕ್ಕಳು. ಕಡಿದಾಳ್ ಮಂಜಪ್ಪನವರು ಕಾಂಗ್ರೆಸ್ ಪಾರ್ಟಿ ವತಿಯಿಂದ ನಮ್ಮ ತಂದೆ ಚನ್ನೇಗೌಡರಲ್ಲಿ ಫಂಡ್ ಸಂಗ್ರಹಕ್ಕಾಗಿ ನಮ್ಮ ಮನೆಗೆ ಬಂದಿದ್ದರು. ಆಗ ಅವರನ್ನು ಮೊದಲು ನೋಡಿದ್ದು, ಆ ಮೇಲೆ ಮದುವೆ ಪ್ರಸ್ತಾಪ ಬಂದಾಗ ದೊಡ್ಡವರು ಮದುವೆ ಆಗಲು ಹೇಳಿದರು. ನನಗೂ ಅವರ ಇಷ್ಟವಾದರು.ಆಮೇಲೆ ಅವರು ತನ್ನ ಆರ್ಥಿಕ ಪರಿಸ್ಥಿತಿ ಬಗ್ಗೆ ವಿವರಿಸಿ ನನಗೆ ಪತ್ರವನ್ನು ಬರೆದಿದ್ದರು. (ಆ ಪತ್ರ ಕಡಿದಾಳ್ ಮಂಜಪ್ಪನವರ 'ನನಸಾಗದ ಕನಸು' ಆತ್ಮ ಚರಿತ್ರೆಯಲ್ಲಿದೆ) ನಾನೂ ಕೂಡ ಒಂದು ಪತ್ರ ಬರೆದಿದ್ದೆ. ಆ ಬಗ್ಗೆ ಮಂಜಪ್ಪನವರು ಅಲ್ಲಿ ಪ್ರಸ್ತಾಪಿಸಿದ್ದಾರೆ. ಆ ಪತ್ರ ನನ್ನಲ್ಲಿ ಇಲ್ಲ. ಆದರೆ ವಿವಾಹಕ್ಕೆ ನನ್ನ ಒಪ್ಪಿಗೆ ಇತ್ತು.

ಸಂದರ್ಶಕ: ಕಡಿದಾಳರು ಶಿವಮೊಗ್ಗೆಯಲ್ಲಿ ವಕೀಲಿ ಮಾಡುವಾಗ ಸ್ವಾತಂತ್ರ್ಯ ಹೋರಾಟ, ಕಾಗೋಡು ಸತ್ಯಾಗ್ರಹ, ರೈತ ಸಂಘ ಎಂದು ಬಿರುಸಿನ ಚಟುವಟಿಕೆಯಲ್ಲಿರುತ್ತಿದ್ದರು. ಆಗ ಮನೆಯಲ್ಲಿ ಒಬ್ಬರೆ ಇರಲು ಬೇಸರ ಆಗಲಿಲ್ಲವೇ? ಅವರ ಚಟುವಟಿಕೆಗಳಿಗೆ ನಿಮ್ಮ ಸಹಕಾರವಿತ್ತೆ ?

ಮಲ್ಲಿಕಾ: ನನ್ನ ಸಹಕಾರ ಇರುತ್ತಿತ್ತು. ಆದರೆ ಬೇಸರಪಟ್ಟುಕೊಂಡರೆ ಅವರು

ತನ್ನ ಚಟುವಟಿಕೆಗಳನ್ನು ನಿಲ್ಲಿಸುತ್ತಿದ್ದರೇ? ಇಲ್ಲ. ಆದ್ದರಿಂದ ನನ್ನ ಒಬ್ಬಂಟಿತನವನ್ನು ನಾನು ನನ್ನದೇ ರೀತಿಯಲ್ಲಿ ತುಂಬಿಕೊಳ್ಳಲು ಬಯಸಿದೆ. ಎಂದರೆ ನಾನು ಇನ್ನೂ ಹೆಚ್ಚೆಚ್ಚು ಸಾಹಿತ್ಯ ಕೃತಿಗಳನ್ನು ಅಭ್ಯಾಸ ಮಾಡುವ ಮತ್ತು ರಚಿಸುವ ಕೆಲಸದಲ್ಲಿ ತೊಡಗಿರುತ್ತಿದ್ದೆ. ಜೊತೆಗೆ ಮಕ್ಕಳ ಲಾಲನೆ ಪಾಲನೆ ಇದ್ದೇ ಇರುತ್ತಿತ್ತಲ್ಲ ಮತ್ತು ಸಾಹಿತ್ಯ ಬರವಣಿಗೆಯನ್ನು ಇಂಪ್ರೂವ್ ಮಾಡಿಕೊಳ್ಳುತ್ತಿದ್ದೆ.

ಸಂದರ್ಶಕ: 'ಲೋಕ ಸೇವಾ ನಿರತ, ಮನೆ ಮಡದಿ ಮಕ್ಕಳ ಮರೆತ' ಎಂಬ ಗಾದೆ ಇದೆ ಕನ್ನಡದಲ್ಲಿ. ಕಡಿದಾಳರು ಹಾಗೇನಾದರೂ ವರ್ತಿಸುತ್ತಿದ್ದರೆ? ಯಾಕೆಂದರೆ ಇಂಥ ಆರೋಪದಿಂದ ಗಾಂಧೀಜಿ ಕೂಡ ಹೊರತಾದವರಲ್ಲ. ಹಾಗೇನಾದರೂ........

ಮಲ್ಲಿಕಾ : ಹೌದು, ಒಮ್ಮೊಮ್ಮೆ ಬೇಜಾರಾಗುತ್ತಿತ್ತು. ನೀವು ಕಾಂಗ್ರೆಸ್ ಕಟ್ಟೋದು ಸಾಕು. ವಕೀಲಿ ವೃತ್ತಿಯನ್ನು ಮುಂದುವರೆಸಿ ಎಂದು ಹೇಳುತ್ತಿದ್ದೆ. ಆದರೆ ಅದು ಅವರ ಕಿವಿಗೆ ಬೀಳುತ್ತಿತ್ತೇ? ಇಲ್ಲ. ಆದ್ದರಿಂದ ಬೇಸರ ಬಂದರೂ ಹೇಗೋ ಸಂಸಾರ ನಡೆದು ಹೋಗುತ್ತಿತ್ತು. ಆರಂಭದಲ್ಲಿ ಮಕ್ಕಳ ಓದು-ಬರಹ ಮುಂತಾಗಿ ನೋಡಿಕೊಳ್ಳುವ ಕೈತುಂಬಾ ಕೆಲಸವಿರುತ್ತಿತ್ತು.

ಸಂದರ್ಶಕ: ಸ್ವಾತಂತ್ರ್ಯ ಹೋರಾಟಗಾರರಿಗೆ ಸಿಗುವ ಪಿಂಚಣಿ ಸೌಲಭ್ಯ ಕಡಿದಾಳರಿಗೆ ಸಿಗಲಿಲ್ಲ. ಅವರು ಅರ್ಜಿ ಕೂಡ ಹಾಕಿರಲಿಲ್ಲ. ನೀವೇನಾದರೂ ಅವರಿಗೆ ಪಿಂಚಣಿಗೆ ಅರ್ಜಿ ಹಾಕಿ, ಸರ್ಕಾರದಿಂದ ಬರುವ ಸೌಲಭ್ಯ ತೆಗೆದುಕೊಳ್ಳಿ ಎಂದು ಒತ್ತಡ ಹಾಕಿದ್ದೀರಾ ?

ಮಲ್ಲಿಕಾ: ಇಲ್ಲ, ನಾವು ಆ ಪ್ರಸ್ತಾಪವನ್ನೇ ಮಾಡಲಿಲ್ಲ. ನನ್ನ 'ಜೀವನ ಗಂಗಾ' ಕಾದಂಬರಿಯನ್ನು ಮಾರಿ ಬಂದ ಹಣದಲ್ಲಿ ಮುಂದಿನ ಪ್ರಕಟಣೆಗಳನ್ನು ತರಲಾಯಿತು. ೧೯೬೨ರಲ್ಲಿ ಚೈನಾ ಆಕ್ರಮಣ ಸಂದರ್ಭದಲ್ಲಿ ನನ್ನ ತವರು ಮನೆಯವರು ಮಾಡಿಸಿಕೊಟ್ಟಿದ್ದ ಒಡವೆಗಳನ್ನೂ ಸಹ ರಕ್ಷಣಾ ನಿಧಿಗೆ ಕೊಟ್ಟುಬಿಟ್ಟೆ.

ಸಂದರ್ಶಕ: ಮಂಜಪ್ಪನವರು ಒಡವೆಗಳನ್ನು ಏನಾದರೂ ಮಾಡಿಸಿದ್ದರೆ ?

ಮಲ್ಲಿಕಾ:(ಕೈ ತಿರುವುತ್ತಾ ನಗು) ಅಂಥಾದ್ದು ಏನಿಲ್ಲ, ನಾನು ಎಂದೂ ಅದಕ್ಕಾಗಿ ಆಸೆ ಪಟ್ಟವಳೂ ಅಲ್ಲ.

ಸಂದರ್ಶಕ : ಬಿ.ಡಿ. ಜತ್ತಿಯವರು ಮುಖ್ಯ ಮಂತ್ರಿಗಳಾಗಿ ತಮ್ಮ ಸಂಪುಟಕ್ಕೆ ಸೇರಿಸಿಕೊಳ್ಳಲು ಕಡಿದಾಳರನ್ನು ಕೇಳಿದಾಗ, ಮುಖ್ಯ ಮಂತ್ರಿಗಳೇ ಮನೆಗೆ ಬಂದು ಕೇಳುತ್ತಿರುವಾಗ ನೀವು ಅವರ ಸಂಪುಟಕ್ಕೆ ಸೇರಿಕೊಳ್ಳಿ' ಎಂದು ಸಲಹೆ ಕೊಟ್ಟಿದ್ದೀರಿ.

ನಿಜಲಿಂಗಪ್ಪನವರು ಮೊದಲಬಾರಿ ಮುಖ್ಯ ಮಂತ್ರಿಗಳಾಗಿದ್ದಾಗ ಕಡಿದಾಳರನ್ನು ಸಂಪುಟಕ್ಕೆ ತೆಗೆದುಕೊಂಡಿದ್ದರು. ಆದರೆ ಅವರು ಎರಡನೇ ಬಾರಿ ಮುಖ್ಯಮಂತ್ರಿಗಳಾದಾಗ ಇವರನ್ನು ತೆಗೆದುಕೊಳ್ಳಲಿಲ್ಲ. ಆಗ ನೀವೇನಾದರೂ ಮಂಜಪ್ಪನವರಿಗೆ ಮಂತ್ರಿ ಪದವಿ ಕೇಳಿ ಪಡೆಯಿರಿ ಎಂದು ಸಲಹೆ ಕೊಟ್ಟಿದ್ದೀರಾ ?

ಮಲ್ಲಿಕಾ: ಇಲ್ಲ, ಇಲ್ಲ, ಹಾಗೆಂದೂ ನಾನೂ ಹೇಳಿದವಳಲ್ಲ. ಮಂತ್ರಿ ಪದವಿ ನಂತರ ನೀವು ವಕೀಲಿ ವೃತ್ತಿಗೆ ಹೋಗಬೇಕು ಎಂದು ಹೇಳುತ್ತಾ ಬಂದವಳು ನಾನು.

ಸಂದರ್ಶಕ: ಸುಮಾರು ೧೦ ವರ್ಷಗಳ ಕಾಲ (೧೯೫೨–೧೯೬೨) ಕಡಿದಾಳರು ಮಂತ್ರಿ ಪದವಿಯಲ್ಲಿದ್ದರು. ೫ ವರ್ಷಗಳ ಕಾಲ ಶಾಸಕರಾಗಿದ್ದರು, ಆಮೇಲೆ ಅವರು ವೃದ್ಧಾಪ್ಯದಲ್ಲಿಯೂ ಕೂಡ ಹೈಕೋರ್ಟ್‌ನಲ್ಲಿ ವಕೀಲಿ ನಡೆಸಿದ್ದರು. ಅವರು ವಕೀಲಿ ಮಾಡುವುದು ನಿಮಗೆ ಏನಾದರೂ ಅವಮಾನ ಅನ್ನಿಸಿತೇ ?

ಮಲ್ಲಿಕಾ: ಖಂಡಿತ ಹಾಗನ್ನಿಸಲಿಲ್ಲ. ನಾನು ನಮ್ಮ ಮಕ್ಕಳೂ ಸಹ ಅವರಿಗೆ ವಕೀಲಿ ವೃತ್ತಿ ಮಾಡಿ ಎಂದು ಹೇಳಿದವರೇ ? ಆದರೆ ವೃದ್ಧಾಪ್ಯದಲ್ಲಿ ಕೂಡ ವಕೀಲಿ ವೃತ್ತಿ ಅನಿವಾರ್ಯವಾಗಿ ಹೋಗುತ್ತಿದ್ದರು. ಆ ಬಗ್ಗೆ ನಾವೇನೂ ಹೇಳುವಂತಿರಲಿಲ್ಲ. ಅವರು ಶಿಸ್ತಿನ ಮನುಷ್ಯ.

ಸಂದರ್ಶಕ: ಶಾಸಕರು ಮಂತ್ರಿಗಳೂ ಮುಖ್ಯಮಂತ್ರಿಗಳು ಕೋಟ್ಯಾಂತರ ಹಣವನ್ನು ಮಾಡಿಕೊಂಡು ಮೆರೆಯುವುದನ್ನು ನಾವು ಈಗ ಕಾಣುತ್ತಿದ್ದೇವೆ. ನಿಮ್ಮ ಯಜಮಾನರು ಯಾವ ಆಸ್ತಿಯನ್ನೂ ಮಾಡಲಿಲ್ಲ, ಭ್ರಷ್ಟಾಚಾರವನ್ನು ಎಸಗಲಿಲ್ಲ. ನಿಮಗೆ ಅವರ ನಿಲುವು ಸರಿಕಂಡಿತೆ ? ಅವರು ಈ ಮನೆ (ಸದಾಶಿವನಗರ)ಯನ್ನು ಸಾಲ ಮಾಡಿ ಕಟ್ಟಿದರೆ ?

ಮಲ್ಲಿಕಾ: ನೋಡಿ, ಕಡಿದಾಳರು ಗಾಂಧಿವಾದಿಗಳು. ಅವರು ಯಾವತ್ತೂ ಆಸ್ತಿ–ಪಾಸ್ತಿ ಎಂದು ಅದರ ಹಿಂದೆ ಬಿದ್ದವರಲ್ಲ. ನಾವೂ ಕೂಡ ಅವರಿಗೆ ಆ ಬಗ್ಗೆ ಬಲವಂತಪಡಿಸಲಿಲ್ಲ. ಕೆಲವೊಮ್ಮೆ ಮಕ್ಕಳ ಪುಸ್ತಕ, ಸಮವಸ್ತ್ರ, ಸ್ಕೂಲ್ ಫೀಜ್ ಇತ್ಯಾದಿಗಳಿಗೆ, ನನ್ನ ಪುಸ್ತಕಗಳನ್ನು ಮಾರಿ ಬಂದ ಹಣದಿಂದ ಸರಿದೂಗಿಸಿದ್ದೇನೆ. ಮತ್ತು ಅವರ ಹಿಂದೆ ಮುಂದೆ ಬಂದು ಹೋಗುವ ರಾಜಕೀಯ ಜನರಿಗೆ ಕಾಫಿ–ತಿಂಡಿ ವಗೈರೆ ಮಾಡುವುದರಲ್ಲಿಯೇ ನಮ್ಮ ಸಮಯ ಬಹಳ ಹೋಗುತ್ತಿತ್ತು. ಯಾಕೆಂದರೆ ಸಹಾಯಕ್ಕೆ ಹೆಚ್ಚು ಆಳು ಕಾಳುಗಳು ಇರಲಿಲ್ಲವಲ್ಲ.

ಸಂದರ್ಶಕ : ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಇಂದಿರಾಗಾಂಧಿಯವರು ಕೊಲ್ಲೂರು ಮಲ್ಲಪ್ಪನವರ ಮೂಲಕ ನಿಮ್ಮ ಯಜಮಾನರನ್ನು ಇಂದಿರಾ ಕಾಂಗ್ರೆಸ್ ನಾಯಕತ್ವವನ್ನು ವಹಿಸಿಕೊಳ್ಳಲು ಕೇಳಿಕೊಂಡಿದ್ದರು. ಆದರೆ ಕಡಿದಾಳರು ಒಪ್ಪಿಕೊಳ್ಳಲಿಲ್ಲ. ಅವರು ಒಪ್ಪಿಕೊಂಡಿದ್ದರೆ ದೇವರಾಜ ಅರಸರು ಮುಖ್ಯ ಮಂತ್ರಿ ಆಗುತ್ತಿರಲಿಲ್ಲ. ಆಗ ನೀವು ಯಜಮಾನರಿಗೆ ಯಾವ ಸಲಹೆಯನ್ನಾದರೂ ಕೊಡಲಿಲ್ಲವೇ ? ಹೇಗೆ?

ಮಲ್ಲಿಕಾ: ಕಡಿದಾಳರು ೧೯೬೭ರ ತರುವಾಯ ರಾಜಕೀಯದಿಂದ ಬೇಸರಗೊಂಡು ದೂರವೇ ಉಳಿದರಲ್ಲ. ಅಂಥಾದ್ದರಲ್ಲಿ ನಮ್ಮ ಸಲಹೆ, ಸೂಚನೆಯಿಂದ ಇನ್ನೇನು ? ಮತ್ತು ನಮ್ಮ ಕುಟುಂಬ ಅವರನ್ನು ರಾಜಕಾರಣದಲ್ಲಿಯೇ ಮುಂದುವರಿಯಿರಿ ಎಂದು ಯಾವತ್ತೂ ಹೇಳಲಿಲ್ಲ. ಯಾಕೆಂದರೆ ರಾಜಕಾರಣದಲ್ಲಿದ್ದರೆ ಯಾರಿಗಾದರೂ ನೆಮ್ಮದಿ ಇರಬಲ್ಲದೇ ?

ಸಂದರ್ಶಕ: ೧೯೭೭ರಲ್ಲಿ ಕಡಿದಾಳರಿಗೆ ಇಂದಿರಾ ಕಾಂಗ್ರೆಸ್‌ನ ವತಿಯಿಂದ ಚಿಕ್ಕಮಗಳೂರು ಅಥವಾ ಶಿವಮೊಗ್ಗ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಲು ಕೇಳಿದಾಗ ನೀವು ತಾಯಿ ಮಕ್ಕಳು ಬೇಡಿ ಎಂದು ಯಾಕೆ ಹೇಳಿದಿರಿ ? ಅವರು ಸ್ಪರ್ಧಿಸಿ ಗೆದ್ದಿದ್ದರೆ ಕೇಂದ್ರದಲ್ಲಿ ಮಂತ್ರಿ ಆಗುತ್ತಿದ್ದರಲ್ಲ ?

ಮಲ್ಲಿಕಾ :ನಾವೇನೂ ಸಕ್ರಿಯ ರಾಜಕಾರಣಕ್ಕೆ ಆಗ ಅಡ್ಡಿ ಪಡಿಸಲಿಲ್ಲ. ಅವರೇ ನಿವೃತ್ತಿ ಬಯಸಿದರು, ಅಷ್ಟೆ.

ಸಂದರ್ಶಕ : ಮೇಡಂ, ಸಾಹಿತ್ಯದ ರಚನೆ ಮಾಡಲು ನಿಮಗೆ ಪ್ರೇರಣೆ......... ಸ್ಫೂರ್ತಿ, ಆ ಬಗ್ಗೆ.

ಮಲ್ಲಿಕಾ: ನಾನು ಮಲೆನಾಡಿನ ಅಯ್ಯಗಳ ಮಠದಲ್ಲಿ ಕಲಿತದ್ದು, ಅದು ಬಿಟ್ಟರೆ ಸ್ವಂತವಾಗಿಯೆ ಓದುವುದು ಬರೆಯುವುದು ರೂಢಿಸಿಕೊಂಡೆ. ಸಾಧ್ಯವಾದಷ್ಟು ಕನ್ನಡ ಸಾಹಿತ್ಯವನ್ನು ಓದಿಕೊಂಡೆ. ಹಾಗೇ ಸಂಸ್ಕೃತವನ್ನು ಸ್ವಂತ ಪಾಠವಾಗಿ ಹೇಳಿಸಿಕೊಂಡು ಅಭ್ಯಾಸ ಮಾಡಿದೆ. ಕೆಲವು ಹಳೆಗನ್ನಡ ಕೃತಿಗಳನ್ನು ಓದಿಕೊಂಡಿದ್ದೇನೆ. ನಮ್ಮ ತಂದೆ ಚನ್ನೇಗೌಡರಿಗೂ ಸಾಹಿತ್ಯದ ಆಸಕ್ತಿ ಇತ್ತು. 'ಮಲೆನಾಡಿನ ಮಾಣಿಕ್ಯಗಳು' ಎಂಬ ಕೃತಿ ಪ್ರಕಟಿಸಿದ್ದು. ಅದು ಈಗ ಲಭ್ಯವಿಲ್ಲ.

ಸಂದರ್ಶಕ : ಮೇಡಂ, ನಿಮ್ಮ ಮಹಾಕಾವ್ಯ 'ಶ್ರೀ ವಿವೇಕಾನಂದ ವಿಜಯಂ' ಬಗ್ಗೆ ಏನಾದರೂ ಹೇಳುವುದಿದೆಯೇ ?

ಮಲ್ಲಿಕಾ :'ಶ್ರೀ ವಿವೇಕಾನಂದ ವಿಜಯಂ' ನನ್ನ ಜೀವ ಬಸಿದ ಮಹತ್ಕೃತಿ. (ಹೀಗೆಂದು ಹೇಳುತ್ತಾ ಅವರು ಅದನ್ನು ಕೈಯಲ್ಲಿ ಹಿಡಿದು ಎತ್ತಲಾರದೆ, ತೊಡೆ ಮೇಲಿಟ್ಟುಕೊಂಡು ಮುಟ್ಟಿ ಮುಟ್ಟಿ ನೋಡಿ ಸ್ಪರ್ಶಾನುಭವ ಪಡೆಯುತ್ತಿದ್ದರು) ಕನ್ನಡದಲ್ಲಿ ಸ್ವಾಮಿ ವಿವೇಕಾನಂದರ ಬಗ್ಗೆ ಪದ್ಯ ರೂಪದ ಮಹಾಕಾವ್ಯ ರಚಿತವಾಗಿಲ್ಲ. ಕೆ.ವಿ. ಪುಟ್ಟಪ್ಪನವರು 'ನಾನು ಬರೆದಂತೆ ಬರೆಯಬೇಡಿ' ಎಂದು ಹೇಳುತ್ತಿದ್ದರು. ಆದರೂ ನಾನು ಮಹಾಕಾವ್ಯ ಬರೆದೆ.

ಸಂದರ್ಶಕ : ಪುಟ್ಟಪ್ಪನವರು ಹಾಗೆಂದಿರಲಾರರು ಮೇಡಂ. ಇಲ್ಲಿ ಏನೋ ತಪ್ಪು ಗ್ರಹಿಕೆ ಇರಬಹುದು.

ಮಲ್ಲಿಕಾ :ಇಲ್ಲ, ಇಲ್ಲ ಅವರು ಹಾಗೇ ಹೇಳಿದ್ದುಂಟು. (ಹೀಗೆಂದವರು ಬಹಳ ಆಯಾಸಗೊಂಡವರಾಗಿ ತಮ್ಮ ಮಗಳು ಶ್ರೀ ಕಲಾ ಅವರತ್ತ ಹಾಗೆ ಒರಗಿಕೊಂಡು ವಿಶ್ರಮಿಸಿದರು).

ವಿ.ಸೂ.: ಕುವೆಂಪು 'ಸ್ವಾಮಿ ವಿವೇಕಾನಂದ' ಎಂದು ಗದ್ಯ ಕೃತಿಯನ್ನು ರಚಿಸಿದ್ದಾರೆ. ಕನ್ನಡ ವಿಮರ್ಶೆ ಆ ಗದ್ಯವನ್ನು ಪ್ರಶಂಸಿಸಿದೆ. ಬಹುಶಃ ಕುವೆಂಪು ನನ್ನ ಹಾಗೆ ಬರೆಯಬೇಡಿ ಎಂದು ಹೇಳಿರುವಾಗ ಪುನಃ ಗದ್ಯದಲ್ಲಿ ಅವರ ಜೀವನ ಚರಿತ್ರೆ ಬರೆಯುವುದು ಬೇಡವೆಂದಿರಬೇಕು. ಇಷ್ಟು ಮಾತು ನಡೆಯುವಾಗ ಶ್ರೀಮತಿ ಮಲ್ಲಿಕಾ ಅವರು ಆಯಾಸಗೊಂಡರು. ತನ್ನ ಜರ್ಝರಿತ ದೇಹದತ್ತ ತೋರಿಸುತ್ತ 'ನನಗೆ ಇನ್ನು ಬದುಕಲು ಇಷ್ಟವಿಲ್ಲ. ಸುಖ ಮರಣಕೊಡು ಎಂದು ದೇವರಲ್ಲಿ ಬೇಡುತ್ತಿದ್ದೇನೆ' (ಇದೇ ಮಾತನ್ನು ಕಡಿದಾಳ್ ಮಂಜಪ್ಪನವರೂ ಕೂಡ ತಮ್ಮ ಆತ್ಮ ಚರಿತ್ರೆ ಬರೆದು ಮುಗಿಸಿ ಕೊನೆಯಲ್ಲಿ 'ನನ್ನ ಜೀವನ ನಾಟಕವನ್ನು ಆದಷ್ಟು ಜಾಗ್ರತೆಯಿಂದ ಮುಗಿಸಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತಾ ಇದ್ದೇನೆ. ಎಂಬುದಾಗಿ ಹೇಳಿದ್ದಾರೆ (ನೋಡಿ, ನನಸಾಗದ ಕನಸು. ಪುಟ ೩೫೬) ಎಂದು ಪಿಸುಗುಟ್ಟುತ್ತಿದ್ದರು. ನಾವು ಅವರ ಸದಾಶಿವನಗರದ ಮನೆಯಿಂದ ಹೊರಬಿದ್ದೆವು.

[ಈ ಸಂದರ್ಶನಕ್ಕೆ ಏರ್ಪಡಿಸಿ, ಸಲಹೆ, ಸೂಚನೆ ನೀಡಿ ಸಹಕರಿಸಿದ ಗೆಳೆಯ ಕಾದಂಬರಿಕಾರ ಬಿಳುಮನೆ ರಾಮದಾಸ್ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಮತ್ತು ನಾನು ಕೇಳಿದ ಅನೇಕ ಸಂಶಯಗಳಿಗೆ ಸೂಕ್ತ ಉತ್ತರ ನೀಡಿ, ಮಾಹಿತಿಗಳನ್ನು ಕೊಟ್ಟ ಮಲ್ಲಿಕಾ, ಅವರ ಮಗಳು ಶ್ರೀ ಕಲಾ ಅವರ ಸಹಕಾರವನ್ನು ಸ್ಮರಿಸುತ್ತೇನೆ.]

# REMEMBERING
# SRI. KADIDAL MANJAPPA

**-D.J. Balaraj**

When Kadidal Manjappa was Minister for revenue and public works departments in Sri K. Hanumanthaih's ministry during 1952 to 1956. I had occasion to work under him , both when I was home, forever and agricuture secretary in attara kacheri as well as deputy commissioner in Mandya and chitradurga districts.

It was indeed a pleasure to work for him due to his amiable and generous attitude towards officials . He used to guide his officers, rather than giving directions and this attitude made officers give their full co-operation in implementing Govt. policies.

Even when kadidal manjappa held change as chief minister for some months before the reorganisation of states, he held his officers in high esteem, which brought out their loyalty and co-operation to government to the fullest extent .

I have no doubt that Sri Kadidal Manjappa was one of the finest and efficient ministers under whom I have worked.

# THE GENTLE POLITICIAN I KNEW

**-K.S. Chandrashekar**

"The thing of ultimate effect is character, not intellect"

**Hillaire bellac.**

It was on the cusp of change of values that Kadidal Mnjappa had decided to quit politics. Post freedom struggle, in the fifties, sacrifice for the sake of the county and its people was the biggest value that guided men in politics . The next decade was witnessing a new value system and clash of ideologies i.e ., socialist ideals on one side and laissez- faire on the other. While the old Gandhian values were collapsing , new principles of development were yet to take its place. It resulted in nebulous and vague generalizations on social , political and economic fields of the nation. And along side , there appeared a non- chalant approach to issues of malfeasance. In such a transient period, Manjappa had decided to quit politics , for there was no alternative for him, who could visualize the on coming collapse of morals and ethics in the society in general and among the political leaders in particular.

For over a score of years , we had together evaluated the moral collapse that was occurring and were bothered about the alternatives. What could be the remedies ? That was the question that haunted us . He was not in power politics. But could never quit politics which he viewed as a vehicle of service and sacrifice.

Two decades rolled by. On evening he was in a reminiscent mood . " I have decided to quit power politics and politics too. I have had a career of nine years as minister and a brief period as Chief Minister . I have decided to be self – reliant in running my family. When I look in to my financial position it depresses me no end. At the end of my ministerial career, I had a debt of Rs. 40,000/- (Rupees forty thousand ). I had no option. I sold my home in shimoga . I had constructed it during my practicing days as an advocate . By selling the house , I have cleared my debt . having decided to fall back on my practice in the high court for a livelihood , what money remained after clearing the loan , I used for buying a second hand car and books and other need to set up practice . The first month would decide my future , was the warning that echoed in me . fortunately, the very first month, I earned Rs. 500/- which was at that time, a sufficient sum to run a family with frugal habits".

This is how he started his career as a high court lawyer for the second time . In his practice, he strictly followed the moral code he set for himself and advised others to follow. He was inveterate admirer of literature and proved to be a voracious reader. He himself was a writer. He tried his hand in fiction writing and authored books like Naleya Nelalu, Panjaravalliya Panju, Kranthikoota and his autobiography Nanasagada kanasu.

He had some experience with authors. He learnt to his bitterness that it was impossible to separate literary people from their vaulting egos . On paper they were models of every virtue , in business they were pugnacious and sentimental , unable to debate without loosing their tempers and treating differences of

opinion as personal insults. A majority of them who styled themselves, as intellectuals were sycophants of politicians in power.

He was a freelancer journalist who wrote feature articles on issues moral and was bitter against corruption in political life . He liberally contributed to professional dailies. He believed journalism was a social activity which civilizes men. His botheration was only about the romancers who sit above and arrange the world out of their own heads , un contradicted and unedited, unless they have a strong sense of humour, never learn how to live in a political society. They always have to be indulged in by political leaders. Though Manjappa had rural roots , he never was an unintellectual bucolic. He never indulged in democratic begging like officially recognized " great men"

Now I have to confine myself to events that I know and a few personal vignettes. on his political life and social activity and as a freedom fighter , several colleagues of his have written extensively necessitating , no need to recapitulate them . on morals and ethics we shared ideas that were wholesome and complete. Hence I was a visitor and a friend who frequented his home at least twice a month. He had a peaceful family life. He loved his children so much that he never allowed them to contribute to his family expense . He felt as a parent that running the house was his responsibility. In seventies and eighties, the two children who were at home with him were Jayaprakash, his son and Sreekala . his youngest daughter. They were well educated. Despite the good status the family enjoyed in society, they never were boorish or snooty. From Langford road residence, they were taking

permission from their father to go out for mere 30minutes. Manjappa within 15 minutes used to await them. Of course they never disappointed him. They used to reach home ten minutes early.

Kadidal was living in a rented house on Langford Road . after exceptional professional striving , he built a house of his own. He thought of shifting the family to his own house. But the generosity of the chinaman who owned the house nonplussed him. The Chinese landlord said " Mr Manjappa. Please for my sake, you should not vacate the house. For a living I have several sources, so have no fear about it. A man of your stature and exemplary character to live in our home itself is a great honour to me" This was the respect he commanded among ordinary non-political people.

After 18 month of imposition of internal emergency, there was an announcement by Mrs Indira Gandhi , the prime minister of India at the time , that general elections would be held in the month of march 1977 without of course lifting the emergency until the elections were concluded. Suddenly there was burst of political activity all over the country .

Though I had quit politics of years earlier, some friends in Banglore pressed me to go to Delhi with them and help them procure party tickets. They though that the residual influence, whatever, I commanded would come to their aid . I told them I had lost touch with leaders at the centre. Still they persisted. So I accompanied them reluctantly.

On 30th January 1977 we alighted from the train and lodged

with friends at Delhi. the whole of the capital city was agog with political activity. The same day an amazing thing happened. Morarji Desai who was in detention was released and in the evening he addressed a vast concourse of people at the Delhi Ramleela maidan. There was excitement in the air. The next day with friends I started the rounds. Menwhile, Jagjivan ram , H.N . Bahuguna, K.R. Ganesh , Nandini Sathpathi, Mishra from Bihar who was a life time associate of Jag Ivan Ram along with Amrit Nahatha announced their intended resignation from the congress party.

We were curious over the turn of events. Hence we headed to Jagivan Ram's residence at Krishna Menon Marg. There was a large gathering in the garden listening to his speech . As we joined the crowds Amrit Nahatha recognized me and suggested I go into the house for a talk. Suddenly, Ganesh and Nandini Sathpahti with Bahuguna in toe, led me into the drawing room where all the stalwarts of the opposition were exchanging notes on the political developments.

The opposition leaders who were known to me for over a decade requested my help to form the CFD (congress for democracy) in Karnataka . I expressed my reluctance but before I could totally turn down their request, over twenty MLAs and MLCs from the Karnataka legislative assembly and council arrived in Delhi. They pleaded with me to stay on in Delhi and negotiate issues with Jagjeevan Ram (who was by then president of congress for democracy), with the assistance of Bhahuguna Bhattacharya and others. The legislators stayed on at Delhi till 7th February 1977. Before they returned to Bangalore , I told

them that they should convince Kadidal Manjappa to head the Karnataka CFD as chairman. In those days, there was a pall of the gloom enveloping Karnataka politics. Manjappa's presence would electrify the political atmosphere of the state. Despite complicated cross currents which is part of political life, we succeeded in persuading Kadidal to head congress for democracy in Karnataka. After a lot of deliberations he agreed to be its chief. The whole gamut of affairs concerning election in the immediate aftermath of emergency went with a lightening speed. Jagjivan ram in a week's time came to Bangalore . He addressed a congregation at the national college grounds in Basavanagudi over which fittingly Kadidal Manjappa presided. And thus the inauguration of Karnataka CFD was done under the auspices of stalwart of statesmen Jagjivan Ram and Kadidal Manjappa .

Ideologically for Karnataka, the CFD principles which could be described as left of centre suited like hand to glove. Within a short period of three months district and taluk committees were formed and very active leaders with impeccable image joined the organization. Once the elections were over, CFD merged with Janatha party on 1st may 1977. Kadidal Manjappa refused to join the Janatha party . Thus although CFD headed by Manjappa had the potential in Karnataka to develop into a regional party, due to reasons beyond control, there was no trace of the organizational structure in Karnataka , after the merger. And the rest is history.

# LIVING WITH GRAND FATHER

**-Akhil Kadidal**

A recollection of life with my grandfather is one that is inevitably laden with reminisces of simpler times , of easy going days that eventually gave way to different times.

If asked to say what I enjoyed best about those days, I would not know where to begin. I would . no doubt, recall climbing the tall guava trees that surrounded our Langford road bungalow; our two German shepherds that were a dear part of the family and two work hands , Murthy and Brahma , who were rather akin to being my older brothers than servants. Yet , these reminiscences are all ancillary to the center figure that of my grandfather, who being a practicing lawyer at that time, spent vast stretches of the day seated on a large , white painted cane chair, conferring with clients and visitors who came to see him on a variety of issues. I, being a young boy and caught in the throes of childhood, knew nothing of the matters that were discussed or their importance, but I remember spending long hours seated on an arm of his chair, my heading resting on his shoulder, playing with the lobes of his ears and trying to make some sense of the legal discourses . They were, no doubt important, grandfather played in the proceedings escaped me.

I knew that thatha ,as I called him, had once been the chief minister of the state. But to me, he was only " thatha" who gave me chocolates whenever I asked him. I remember the long hours

spent in his company in which nothing was ever said but ours was a rapport in which nothing needed to be said . on summer days, I would be chauffeured up with him to the Bangalore court house, but I was never allowed to enter the premises itself . Not that I had any desire to. Instead , I would return home with the driver and would wait the hours for his return roaming the grounds with the dogs or conduct " snowball" fights but with bloated , overripe guavas with murthi and brahma, occasionally hammering the stiff, ill tempered driver in the process. These were happy days coupled with some great years at frank Anthony's school, all of which gave me a sense of happiness in those formative childhood years.

When I was about seven, my parents moved to an independent house in a neighborhood that I despised, miles away from the Langford town house I loved and Thatha. Used to a certain way of life. I, now barely seven was asked to adapt to another . My instant safe world of the past was gone. My behavior invariably become erratic-a fact exacerbated by the fact that I was locked in a tyrannical absurdly bleak new school, in which teacher seemed more proficient at abusing students than education them. Not surprisingly my grades slipped and I found myself withdrawing into another world of my own making.

I had one pressing desire: to live with my grandfather so that I could reclaim the life that I knew. To this end, I spent the afternoons after school at the bungalow. Yet, even this was unable to ease my condition, not yet ten, I engaged in debilitating behavior smoking and drinking wine. These vices were discovered soon enough. My father in typical style, reacted angrily. My grandfather, for his part, quietly told me that I would spend each afternoon in

his study.

In his seventies I suppose he wanted my company as he wanted to steer me back to the right path. He instructed me to read a book aloud while he rested in bed. That long study, with its rows of bookshelves was in its own way another world. It was here that I read my first serious bit of literature-lord Tennyson's " charge of the light brigade," the story of ill fated British light cavalry at balaclava 1854. Later he gave me two leather bound volumes of the English writer, Somerset Maugham, titled " Ashenden" and "Cakes and Ale" which I devoured with great interest. The idle days soon passed and with them my bad habits. In their place, these works instilled a love for history literature that refuses to be lost. Aside from these he gave me Kenneth Anderson's " Man eaters and jungle, killers " which gave me a deep respect for Indian nature and wildlife.

But these days too, were running short. In 1990 when I was about eleven , my parents, my brother and I moved to New York . I was eager for the new life. Yet, at the same time. I did not look forward to leaving my grandfather. But we did, with assurances that we would soon return. My last memory was of him scrambling to buy me a pair of shoes before I left. In our daily readings in his study, I had come to admire a pair of lounge shoes that he owned; a childhood fascination. He was eager to buy me a pair before I left and at the time I did not understand his eagerness. But I think it was his way of showing that he was going to miss me. Someone eventually talked him out of the idea and I left without the shoes, but with a promise that I would see him soon.

That promise failed dismally. About a year later and five days after my twelfth birthday , he passed away. When I was told the news, I did not know what to say. There was nothing to say. I certainly did not express any grief of any kind . I thought of myself as being inured to any sort of pain, but the truth was that I simply could not believe he was gone.

When I eventually returned to Bangalore , it was if my recollections of it belonged to a different life. The old Langford bungalow that I had grown up in was gone - in its place was a monstrosity of an apartment building. Bangalore was no longer the city that I remembered. It no longer felt like home. I had hard time grasping this idea. The spirit of my grandfather seemed truly gone. But I was wrong. It no longer inhabited the places that I knew because these had changed, but I could feel its presence in the forested ranges around Shimoga and the family's ancestral home in Kadidal.

With my grandfather's passing, the age of simplicity and service to the poor, that he embodied faded for me in a very personal way. The generations to come after mine will never know that it existed except. In books such as these. With the irreverence indifference today, I can see the values that were once exhorted, fading away.

Looking back, I can recognize that the persona of my grandfather was in many ways unifying force in our extended family of countless relatives. With his passing. The patriarchal force that held sway over the family weakened. The sense of unity that I felt strongly in my childhood had diminished but

perhaps that is the way of the modern world. Yet I cannot help but feel that we are losing something in the process.

Growing up, I was often told that I had no fear of anyone except my grand father. With him gone, what was there left fear? Nothing. yet a remnant fear persists that I will fail to live up to his expectations or his codes. But perhaps, that's not such a bad thing. Its a fear that I welcome gladly.

# ಸ್ವಾತಂತ್ರ್ಯೋತ್ತರ ಸಮಾಜದ ಮೌಲ್ಯ ಪತನ ಹಾಗೂ ಭ್ರಮನಿರಸನಗಳ ಕಥನ

–ಡಾ. ಬಂಜಗೆರೆ ಜಯಪ್ರಕಾಶ್

'ಪಂಚರವಳ್ಳಿಯ ಪಂಜು' ಕಡಿದಾಳ್ ಮಂಜಪ್ಪನವರು ಬರೆದ ಮೂರು ಕಾದಂಬರಿಗಳಲ್ಲಿ ಒಂದು. ಈ ಕಾದಂಬರಿಗೆ ಕವಿ ದ.ರಾ.ಬೇಂದ್ರೆಯವರ ಮುನ್ನುಡಿಯಿದೆ. ಕಾದಂಬರಿಯಲ್ಲಿ ನಡೆದಿರುವ ಸಾತ್ವಿತ–ತಾಮಸಿಕ ಗುಣಗಳ ನಡುವಿನ ಸಂಘರ್ಷದಲ್ಲಿ ತಾಮಸಿಕ ಗುಣಗಳದ್ದೆ ಮೇಲ್ಗೈಯಾದಂತೆ ಕಂಡು ಬರುವುದು, ಸಮಾಜದ ವಾತಾವರಣದಲ್ಲಿ ಕೂಡ ಅದೇ ಬಗೆಯ ಸನ್ನಿವೇಶ ಬಲಗೊಳ್ಳುತ್ತಿರುವುದು ವಿಷಾದಕರವಾದ ಸಂಗತಿ ಎಂಬುದನ್ನು ದ.ರಾ.ಬೇಂದ್ರೆ ಸೂಚಿಸುತ್ತಾರೆ.

ಕಡಿದಾಳ್ ಮಂಜಪ್ಪನವರು ಗಾಂಧೀವಾದಿ ರಾಜಕಾರಣಿ. ಕರ್ನಾಟಕ ರಾಜಕಾರಣದಲ್ಲಿ ಅವರ ಹೆಸರು ಆದರ್ಶವಾದಿ ರಾಜಕಾರಣಿಗಳ ತಲೆಮಾರಿನ ಪ್ರತಿನಿಧಿಯಾಗಿದ್ದು ಕರ್ನಾಟಕದಲ್ಲಿ ಕಣ್ಮರೆಯಾಗುತ್ತಾ ಬಂದಿರುವ ಸರಳ, ಸ್ವಚ್ಛ ಜೀವನಾದರ್ಶಗಳ ಮಾದರಿಯಂತಿದ್ದುದು ಆ ಭಾಗದ ಜನರಿಗೆ ಸುಪರಿಚಿತ. ಅವರೀಗ ತೀರಿ ಹೋಗಿ ಒಂದೂವರೆ ದಶಕಗಳಾಗಿವೆ. ಈ ಒಂದೂವರೆ ದಶಕದಲ್ಲಿ ರಾಜಕಾರಣದ ನದಿಯಲ್ಲಿ ಸೇರಿಕೊಂಡಿರುವ ಭ್ರಷ್ಟತೆ, ಸ್ವಜನ ಪಕ್ಷಪಾತದ ಕಲ್ಮಷ ಈ ಹಿಂದಿನವರು ಊಹಿಸಲಾರದಷ್ಟಿದೆ.

ಕಾದಂಬರಿಯಲ್ಲಿ ಒಂದು ಕಡೆ ಪ್ರಜಾಪ್ರಭುತ್ವದ ಪ್ರತಿನಿಧಿಗಳಾಗುವ ಸ್ಪರ್ಧೆಯಲ್ಲಿ ಮುಂದೊಂದು ದಿನ ಕೋಟ್ಯಾಧೀಶರು ಮಾತ್ರ ಸ್ಪರ್ಧಿಸಲು ಸಾಧ್ಯ ಎಂಬ ಕಾಲ ಬರಬಹುದು ಎಂಬ ಆತಂಕವನ್ನು ವ್ಯಕ್ತಪಡಿಸಲಾಗಿದೆ. ಮಂಜಪ್ಪನವರು ತೀರಿ ಹೋಗಿ ಒಂದೂವರೆ ದಶಕ ಕಳೆದಿರುವ ಈ ಸಂದರ್ಭದಲ್ಲಿ ನಡೆದ ಚುನಾವಣೆಗಳು ಕಾದಂಬರಿಯಲ್ಲಿ ಬರುವ ಭವಿಷ್ಯದ್ವಾಚಕ ಆತಂಕವನ್ನು ಅಕ್ಷರಶಃ ನಿಜ ಮಾಡಿದಂತಿವೆ.

ಇಂತಹ ಸನ್ನಿವೇಶ ಸುತ್ತಲಲ್ಲಿರುವಾಗ ಕಡಿದಾಳ್ ಮಂಜಪ್ಪನವರ ಶತಮಾನೋತ್ಸವ ನಡೆಯುತ್ತಿರುವುದು, ಅವರ ಸಂಸ್ಮರಣೆಗಾಗಿ ಗ್ರಂಥವನ್ನು ತರುತ್ತಿರುವುದು, ಆ ಗ್ರಂಥದಲ್ಲಿ 'ಪಂಜರವಳ್ಳಿಯ ಪಂಜು' ಕಾದಂಬರಿಯ ಪರಿಚಯಾತ್ಮಕ ಸಮೀಕ್ಷೆ ಸೇರುತ್ತಿರುವುದು ಒಂದರ್ಥದಲ್ಲಿ ಧ್ವನ್ಯಾತ್ಮಕ ಕ್ರಿಯೆಯಾಗಿದೆ.

ಅತ್ಯಂತ ವೇಗವಾಗಿ ಅಧಃಪತನಗೊಳ್ಳುತ್ತಿರುವ ಮಲೆನಾಡಿನ ಸಾಮಾಜಿಕ ರಾಜಕೀಯ ಮೌಲ್ಯಗಳನ್ನು ಚಿತ್ರಿಸುವುದು ಈ ಕಾದಂಬರಿಯ ಮುಖ್ಯ ಉದ್ದೇಶ. ತಮ್ಮ ರಾಜಕೀಯ ಬದುಕಿನಲ್ಲಿ ಉಂಟಾದ ಏರುಪೇರುಗಳ ನಡುವೆ ಸಿಕ್ಕ ಬಿಡುವನ್ನು ಸದುಪಯೋಗ ಮಾಡಿಕೊಳ್ಳುವ ಉದ್ದೇಶದಿಂದ ಈ ಕಾದಂಬರಿಯನ್ನು ಬರೆದೆ ಎಂದು ಕಡಿದಾಳ್ ಮಂಜಪ್ಪನವನರು ಹೇಳಿಕೊಂಡಿದ್ದಾರೆ.

ತಮ್ಮ ವಿದ್ಯಾರ್ಥಿ ಜೀವನ ಮುಗಿದೊಡನೆ ಸ್ವಾತಂತ್ರ್ಯ ಸಂಗ್ರಾಮದ ರಾಜಕೀಯದೊಳಕ್ಕೆ ಪ್ರವೇಶಿಸಿದ ತರುಣರಾಗಿದ್ದ ಕಡಿದಾಳ್ ಮಂಜಪ್ಪ, ಅದರಿಂದಾಗಿ ಸೆರೆವಾಸ ಅನುಭವಿಸಿ, ಗಾಂಧಿವಾದಿ ಆದರ್ಶಗಳ ಸಮೇತ ತಮ್ಮ ಸ್ವಂತ ತಾಲ್ಲೂಕಾದ ತೀರ್ಥಹಳ್ಳಿಯಲ್ಲಿ ನೆಲೆಸಿ ಕಾಂಗ್ರೆಸ್ ಪಕ್ಷದ ಚಟುವಟಿಕೆಗಳ ಮೂಲಕ ಸಮಾಜ ಸೇವೆ ಮಾಡಲು ಆರಂಭಿಸಿದವರು.

'ಪಂಜರವಳ್ಳಿಯ ಪಂಜು' ಕಾದಂಬರಿ ಎಷ್ಟೇ ಕಾಲ್ಪನಿಕವೆಂದುಕೊಂಡರೂ, ಒಬ್ಬ ನೈಜ ಗಾಂಧೀವಾದಿ ಧುರೀಣರಾಗಿ ಕಡಿದಾಳು ಮಂಜಪ್ಪನವರು ಕಂಡು, ಕೇಳಿದ, ಸಾಕ್ಷಿಯಾಗಿದ್ದ ಹಲವಾರು ಅನುಭವಗಳೇ ಈ ಕಾದಂಬರಿಯ ಕಥಾ ವಸ್ತುವಿನ ಹಿನ್ನೆಲೆಯಲ್ಲಿ ಕ್ರಿಯಾಶೀಲವಾಗಿರುವುದನ್ನು ಊಹಿಸಬಹುದು. ಕಾದಂಬರಿಯ ಪಾತ್ರಗಳು ನಿಜ ಜೀವನದ ವ್ಯಕ್ತಿಗಳಲ್ಲವಾಗಿರಬಹುದಾದರೂ ವಾಸ್ತವ ಜೀವನದ ಹಲವಾರು ಜೀವಂತ ವ್ಯಕ್ತಿತ್ವಗಳು ಇಲ್ಲಿನ ಪಾತ್ರಗಳ ಜೀವದ್ರವ್ಯವಾಗಿರುವುದು ಸಾಧ್ಯ.

ಈಗ ಆ ತಲೆಮಾರಿನ ವ್ಯಕ್ತಿಗಳು ಯಾರೂ ರಾಜಕಾರಣದಲ್ಲಿ ಸಕ್ರಿಯವಾಗಿ ಉಳಿದಿರುವ ಸಾಧ್ಯತೆಗಳಿಲ್ಲ. ಹಾಗಾಗಿ ಕಾದಂಬರಿ ಚಿತ್ರಿಸುವ ಸನ್ನಿವೇಶಗಳು ಈಗ ಒಟ್ಟಾರೆ ಸಂದರ್ಭದ ಅವನತಿಯನ್ನು ಬಿಂಬಿಸುವ ಸಾಂಕೇತಿಕ ಘಟನೆಗಳಾಗುವ ಸಾಧ್ಯತೆಯನ್ನು ಪಡೆದುಕೊಂಡಿದೆ.

ಕಾದಂಬರಿಯು ಒಂದು ಕುಟುಂಬದ ಮೂರು ತಲೆಮಾರಿಗೆ ಸೇರಿದ ವ್ಯಕ್ತಿಗಳ ಜೀವನ ವೃತ್ತಾಂತವನ್ನು ಮಂಡಿಸುತ್ತದೆ. ಆಯಾ ತಲೆಮಾರಿನ ಸಂಸಾರಗಳು ಅನುಭವಿಸುವ ಸಾಫಲ್ಯ-ವೈಫಲ್ಯಗಳ ವೃತ್ತಾಂತ ಮಂಡಿಸುವಾಗ ಅದಕ್ಕೆ ಕಾರಣವಾಗುವ ಸಮಾಜದ ದುಷ್ಟ ಪ್ರವೃತ್ತಿಗಳ ವರ್ತನೆಗಳನ್ನು, ಪಿತೂರಿಗಳನ್ನು ಚಿತ್ರಿಸುತ್ತದೆ.

ಕಾದಂಬರಿಯುದ್ದಕ್ಕೂ ಈ ಸಾತ್ವಿಕ-ತಾಮಸಿಕ ಶಕ್ತಿಗಳ ಸಂಘರ್ಷ ಬೇರೆ ಬೇರೆ ಪ್ರಮಾಣದಲ್ಲಿ ಮುಂದುವರಿಯುತ್ತದೆ. ದುಷ್ಟ ಶಕ್ತಿಗಳ ಕುತಂತ್ರಗಳು ವಿಫಲವಾಗಿ ಅಂತಿಮವಾಗಿ ಸತ್ಯವೇ ಗೆಲ್ಲುತ್ತದಾದರೂ, ಆ ಸತ್ಯದ ಪರವಾದ ಹೋರಾಟಕ್ಕೆ

ತಮ್ಮನ್ನು ಅರ್ಪಿಸಿಕೊಂಡ ವ್ಯಕ್ತಿಗಳು ಮಾತ್ರ ಸೋತು ಸುಣ್ಣವಾಗುವ, ಈ ಲೋಕದಿಂದಲೇ ಕಣ್ಮರೆಯಾಗುವ ಪ್ರಸಂಗಗಳು ಈ ಕಾದಂಬರಿಯ ಕಥಾಹಂದರವೆಂಬಂತೆ ಪುನರಾವರ್ತಿತವಾಗುತ್ತವೆ.

ಸ್ವಾತಂತ್ರ್ಯ ಸಂಗ್ರಾಮ ನಡೆಸಿ, ಅದರ ನಾಯಕತ್ವ ವಹಿಸಿ ಯಶಸ್ವಿಯಾದ ಮಹಾತ್ಮಾ ಗಾಂಧೀಜಿ ನಂತರ ಬಹುಬೇಗನೆ ದುಷ್ಟ ಶಕ್ತಿಗಳ ಕೈಯಲ್ಲಿ ಹತರಾಗಿದ್ದನ್ನು, ಗಾಂಧೀವಾದದ ಆಶಯಗಳು ಕಾಂಗ್ರೆಸ್ಸಿನವರ ಕೈಯಿಂದಲೇ ನಾಶಗೊಂಡಿದ್ದನ್ನು ಕಂಡು ಅನುಭವಿಸಿದ ಲೇಖಕರು ಬಹುಶಃ ತಮ್ಮ ಕಾದಂಬರಿ ಬರವಣಿಗೆಯಲ್ಲಿ ಆ ವಿದ್ಯಮಾನಗಳಿಂದ ಪ್ರಭಾವಿತರಾಗಿರುವ ಸಾಧ್ಯತೆಯನ್ನು ಇಲ್ಲಿ ಊಹಿಸಬಹುದಾಗಿದೆ.

ಗಾಂಧೀಜಿ ತಾವು ಇಟ್ಟುಕೊಂಡಿದ್ದ 'ಸ್ವಾತಂತ್ರ' ಎಂಬ ಗುರಿ ತಲುಪಿದರು. ಆದರೆ ವ್ಯಕ್ತಿಯಾಗಿ ಬಲಿದಾನವಾದರು ಎಂಬ ಘಟನಾಸರಣಿ 'ಪಂಜರವಳ್ಳಿಯ ಪಂಜು' ಕಾದಂಬರಿಯ ಕೇಂದ್ರಪಾತ್ರವಾದ ಮೋಹನನ ವೃತ್ತಾಂತಕ್ಕಿರುವ ಸೂತ್ರವಾಗಿರುವಂತಿದೆ. ಕಥಾ ನಾಯಕ ಮೋಹನನ ಹೆಸರು ಕೂಡ ಗಾಂಧೀಜಿಯವರ ಹೆಸರಿನ ಪ್ರಭಾವದಲ್ಲಿರುವುದನ್ನು ಇಲ್ಲಿ ಗಮನಿಸಬಹುದು.

ಕಥೆಯ ಆರಂಭದಲ್ಲಿ ಒಂದು ನೂರು ವರ್ಷಗಳ ಹಿಂದಿನ ಮಲೆನಾಡಿನಲ್ಲಿ ಇದ್ದ ಸಾಕಷ್ಟು ದೊಡ್ಡ ಕುಟುಂಬಕ್ಕೆ ಸೇರಿದವನಾಗಿದ್ದ, ಋಜು ಸ್ವಭಾವದ ಗಿರಿಯಪ್ಪಗೌಡನ ಬದುಕಿನ ಕಥೆ, ವಿಷಾದಪೂರ್ಣ ಎನ್ನಬಹುದಾದ ಈ ಕಾದಂಬರಿಯ ದುಃಖಪೂರಿತ ಕಥನಕ್ಕೆ ನಾಂದಿ ಹಾಡುತ್ತದೆ.

ಬಿಟ್ಟಿ ಚಾಕರಿಗೆ ಒದಗಬೇಕಾಗುತ್ತದೆ ಎಂಬ ಭಯದಿಂದ, ಬಿಟ್ಟಿ ಚಾಕರಿಯ ಕಾಟದಿಂದ ಬಿಡುಗಡೆಗೊಳ್ಳುವ ಒಂದು ದಾರಿಯೆಂಬಂತೆ ಹಲವಾರು ಖಾತೆದಾರ ರೈತರು ತಮ್ಮ ಜಮೀನುಗಳನ್ನು ಬೇರೆಯವರಿಗೆ ಬರೆದುಕೊಟ್ಟು ತಮ್ಮನ್ನು ತಾವು ಗೇಣಿದಾರರ ಸ್ಥಿತಿಗೆ ಇಳಿಸಿಕೊಂಡ ವಿಪರ್ಯಾಸವನ್ನು ಕಾದಂಬರಿಯ ಆರಂಭ ಸೂಚಿಸುತ್ತದೆ. ಕಾದಂಬರಿಯ ಕಥೆ ಆರಂಭವಾದಾಗ ಈ ಪ್ರಾಂತ್ಯದಲ್ಲಿ ಇರುವ ಖಾತೇದಾರ ಕುಟುಂಬಗಳು ಕೇವಲ ಮೂರು. ಅವರಲ್ಲಿ ಒಂದು ಗಿರಿಯಪ್ಪಗೌಡ ಮತ್ತು ಕಾಳೇಗೌಡರದು. ಮತ್ತೊಂದು ಬೆಳ್ಳೇಗೌಡರದು. ಮೂರನೆಯದು ತಿರುಮಲಭಟ್ಟರದು.

ತಿರುಮಲಭಟ್ಟರ ಅಪ್ಪ ರೈತರಿಂದ ಭೂಮಿಯನ್ನು ಬೇರೆ ಬೇರೆ ಮಾರ್ಗದಲ್ಲಿ

ಕಸಿದುಕೊಂಡು ಶ್ರೀಮಂತನಾದ ಬಗೆಯನ್ನು ಕ್ವಚಿತ್ತಾಗಿ ಕಾದಂಬರಿ ವಿವರಿಸುತ್ತದೆ. ತಿರುಮಲಭಟ್ಟನಿಗೆ ಜಮೀನುಗಳಿಂದ ಬೇಕಾದಷ್ಟು ಗೇಣಿ ಆದಾಯವಿದ್ದರೂ, ಮನೆತನದ ಕಸುಬಾದ ಶ್ಯಾನುಬೋಗಿಕೆಗೆ ರೈತರು ಕೊಡಬೇಕಾದ ಕಾಣಿಕೆ ಬಾಬ್ತುಗಳನ್ನು ವಸೂಲಿ ಮಾಡದೆ ಬಿಟ್ಟವನಲ್ಲ. ತಂದೆ ತಾತರ ಕಾಲದಿಂದ ಶ್ರೀಮಂತಿಕೆಯಲ್ಲೇ ಬೆಳೆದ ತಿರುಮಲಭಟ್ಟ ಉಳಿದಿಬ್ಬರು ಖಾತೇದಾರರಿಗೆ ಹೋಲಿಸಿದರೆ ತುಸು ಕಡಿಮೆ ಆಸೆಬುರುಕ ಎಂಬುದು ಕಾದಂಬರಿಕಾರರ ಸೂಚನೆ.

ಅದಕ್ಕೆ ಬದಲಿಯಾಗಿ ಈಗೀಗ ಸ್ಥಿತಿವಂತರಾಗುತ್ತಿರುವ ಬೆಳ್ಳೇಗೌಡ ಮತ್ತು ಕಾಳೇಗೌಡರಿಗೆ ದುರಾಶೆ ಹೆಚ್ಚು. ಅದನ್ನು ಕಾದಂಬರಿಕಾರರು ಸೂಚಿಸುವುದು ಹೀಗೆ–

"ಬೆಳ್ಳೇಗೌಡರೂ, ಕಾಳೇಗೌಡರೂ, ತಿರುಮಲಭಟ್ಟರಂತೆ ತಾವೂ ಶ್ರೀಮಂತರಾಗಬೇಕೆಂಬ ಒಬ್ಬರ ಮೇಲೊಬ್ಬರು ಪೈಪೋಟಿ ಮಾಡುತ್ತಿದ್ದರು. ಭಟ್ಟರ ಬಳಿ ಅಪ್ಪನ ಕಾಲದಿಂದಲೂ ಕೊಳ್ಳೆ ಹೊಡೆದ ಐಶ್ವರ್ಯವಿತ್ತು. ಆದ್ದರಿಂದ ಭಟ್ಟರಿಗೆ ಕೊಳ್ಳೆಹೊಡೆಯುವುದರಲ್ಲಿ ಅಷ್ಟು ಆಸಕ್ತಿಯಿರಲಿಲ್ಲ. ಗೌಡರುಗಳಿಬ್ಬರೂ ಹೊಸದಾಗಿ ಕೊಳ್ಳೆ ಹೊಡೆಯುವ ಉದ್ಯಮಕ್ಕೆ ಕೈ ಹಾಕಿದ್ದರು. ಅವರ ದಾಹಕ್ಕೆ ಮಿತಿಯೇ ಇರಲಿಲ್ಲ. ಕಾಳೇಗೌಡರಿಗೆ ಹೋಬಳಿಯ ಸ್ವತ್ತೆಲ್ಲಾ ತಮಗೇ ಸೇರಬೇಕೆಂದು ಆಶೆ ಇದ್ದರೆ, ಬೆಳ್ಳೇಗೌಡರಿಗೆ ತಾಲ್ಲೂಕಿನ ಸ್ವತ್ತೆಲ್ಲಾ ತಮಗೇ ಸೇರಬೇಕೆಂದು ಆಸೆಯಿತ್ತು"

ಹೀಗೆ ಒಂದು ನೂರು ವರ್ಷಗಳ ಹಿಂದಿನ ಮಲೆನಾಡು ಪ್ರದೇಶದ ಕತೆಯನ್ನು 'ಪಂಜರವಳ್ಳಿಯ ಪಂಜು' ಆರಂಭಿಸುತ್ತದೆ. ಕಾದಂಬರಿಯಲ್ಲಿ 'ಒಂದು ಶತಮಾನದ ಹಿಂದಿನ ಮಾತು' ಎಂಬ ಮೊದಲ ಅಧ್ಯಾಯ ಚಿಕ್ಕದು. ಹತ್ತು ಪುಟಗಳಷ್ಟು ವ್ಯಾಪ್ತಿಯನ್ನು ಮಾತ್ರ ಹೊಂದಿದೆ. ಆದರೆ ಅದು ಸೂಚ್ಯವಾಗಿ ಅಂದಿನ ಆ ಪ್ರದೇಶದ ಸಾಮಾಜಿಕ ಆರ್ಥಿಕ ಸ್ಥಿತಿಗಳನ್ನು ಬಿಂಬಿಸುತ್ತದೆ. ಖಾತೆದಾರರಾಗಿದ್ದ ರೈತರು ಗೇಣಿದಾರರಾಗುವ ಪರಿಸ್ಥಿತಿ ಬಂದಿದ್ದಕ್ಕೆ ಕಾದಂಬರಿ ನೀಡುವ ವಿವರಣೆ ಆಸಕ್ತಿದಾಯಕವಾಗಿದೆ.

"ಆಗ ಬಿಟ್ಟಿ ಅಥವಾ ಕಡ್ಡಾಯ ಕೆಲಸದ ಪದ್ಧತಿ ಜಾರಿಯಲ್ಲಿತ್ತು. ಕೊತ್ವಾಲ ಅಥವಾ ಶೇಕದಾರ ಕರೆದಾಗ ಖಾತೆದಾರರಾದವರು ತಪ್ಪದೆ ಕಡ್ಡಾಯದ ಕೆಲಸಕ್ಕೆ ಹೋಗಬೇಕಾಗಿತ್ತು. ಕಡ್ಡಾಯ ಕೆಲಸದ ದೆಸೆಯಿಂದ ಅಂದಿನ ಬಹು ಮಂದಿ ಖಾತೆದಾರರಿಗೆ ಕೊತ್ವಾಲರ ಮತ್ತು ಶೇಕದಾರರ ಕಾಟ ತಪ್ಪಿದರೆ ಸಾಕಾಗಿತ್ತು. ಇದನ್ನರಿತ ಕೆಲವರು ಬುದ್ಧಿವಂತರು ಖಾತೆಯಿಲ್ಲದವರಿಗೆ ಕೊತ್ವಾಲ ಮತ್ತು ಶೇಕದಾರರ

ಕಾಟವಿರುವುದಿಲ್ಲವಾದ್ದರಿಂದ ಭೂಮಿ ಖಾತೆಯನ್ನು ತಮ್ಮ ಹೆಸರಿಗೆ ವರ್ಗಾಯಿಸಿದರೆ ಬಿಟ್ಟಿ ಕೆಲಸದ ಹೊರೆಯನ್ನು ತಾವು ಹೊರುವುದಾಗಿ ಹೇಳಿ, ರೈತರ ಭೂಮಿಯ ಖಾತೆಯನ್ನು ತಮ್ಮ ಹೆಸರಿಗೆ ಮಾಡಿಸಿಕೊಂಡರು. ಮುಗ್ಧರಾದ ರೈತರನೇಕರು ಬುದ್ಧಿವಂತರೊಡ್ಡಿದ ಬಲೆಗೆ ಬಿದ್ದು ಖಾತೆದಾರರಾಗಿರುವ ಬದಲು ಗೇಣಿದಾರರಾದರು".(ಪು.೮)

ಕಾದಂಬರಿ ಮುಂದುವರಿದು ಅಂದಿನ ರೈತರ ಪಾಲಿಗೆ ಉರುಳಾಗಿದ್ದ ಲೇವಾದೇವಿಯ ವಹಿವಾಟನ್ನು ವಿವರಿಸುತ್ತದೆ. ಶೇಕಡಾ ಹದಿನೆಂಟರಿಂದ ಇಪ್ಪತ್ತನಾಲ್ಕು ರೂಪಾಯಿಗಳವರೆಗೆ ಬಡ್ಡಿ ದರ ಇದ್ದು ಗೇಣಿದಾರರಾಗಲಿ, ಕೂಲಿಕಾರರಾಗಲಿ ಭೂ ಮಾಲೀಕರಿಂದ ಅಥವಾ ಸಾಹುಕಾರರಿಂದ ಸಾಲ ಪಡೆಯುತ್ತಿದ್ದರು. "ಸಾಲ ತೆಗೆದುಕೊಂಡವನು ಋಣ ಮುಕ್ತನಾಗುವುದು ಬಹಳ ವಿರಳವಾಗಿತ್ತು" (ಪು.೮) ಎಂಬುದನ್ನು '...ಪಂಜು' ದಾಖಲಿಸುತ್ತದೆ.

ಹೊಲೆಯರೆಂದು ಕರೆಯಲ್ಪಡುತ್ತಿದ್ದ ಹರಿಜನರ ಬಾಳು– ಹುಲ್ಲಿನ ಅಥವಾ ಸೋಗೆಯ ಗುಡಿಸಲು ಮಣ್ಣಿನ ಮಡಕೆಗಳು ಮಾತ್ರ ಸರ್ವಸ್ವವಾಗಿದ್ದ ಆ ಜನರು ಒಡೆಯರ ಆಸ್ತಿಯಾಗಿದ್ದರು. ಅವರಿಗೆ ಕೂಲಿ ಕೊಡುವಾಗ ಒಂದು ಅಳತೆಯ ಕೊಳಗವನ್ನು, ತಮಗೆ ಬರಬೇಕಾದ ಭತ್ತ ಪಡೆಯುವಾಗ ಒಂದು ಅಳತೆಯ ಕೊಳಗವನ್ನೂ ಬಳಸುತ್ತಿದ್ದ ಶೋಷಣಾಪೂರಿತ ಅಭ್ಯಾಸವನ್ನು ಕಾದಂಬರಿ ಮಂಡಿಸುತ್ತದೆ. ಜೀತವೆನ್ನುವುದು ಹೊಲೆಯರ ಬಾಳನ್ನು ತಲೆತಲಾಂತರದವರೆಗೆ ಆವರಿಸಿಕೊಂಡಿದ್ದ ರೀತಿಯ ಬಗ್ಗೆಯೂ ಸಂಕ್ಷಿಪ್ತ ಸೂಚನೆಯಿದೆ.

"ಜೀತದ ಆಳುಗಳಿಗೆ ಒಡೆಯರ ಮನೆ ಒಳಗೆ ಪ್ರವೇಶವಿರಲಿಲ್ಲ; ಒಡೆಯರನ್ನು ಮುಟ್ಟುವಂತೆಯೂ ಇರಲಿಲ್ಲ. ಆದರೆ ಜೀತದ ಹೆಣ್ಣು ಸುಂದರಿಯಾಗಿದ್ದರೆ ಒಮ್ಮೊಮ್ಮೆ ಒಡೆಯರೇ ಆಳನ್ನು ಮುಟ್ಟುತ್ತಿದ್ದರು" (ಪು.೯) ಎಂದು ಮಾರ್ಮಿಕವಾಗಿ ಕಾದಂಬರಿ ಅಂದಿನ ಜಾತಿ ಶೋಷಣೆಯ ವಿವರಗಳನ್ನು ನೀಡುತ್ತದೆ. ದಲಿತರಲ್ಲಿ ಸುಂದರಿಯಾದ ಹೆಣ್ಣು ಹುಟ್ಟಿದರೆ ಅವಳಿಗೆ ಮಣಿ ಕಟ್ಟಿಸಿ 'ಗೊರಬಿ' ಬಿಡುವಂತೆ ಮೇಲ್ಜಾತಿಯ ಮುಖಂಡರು ಪ್ರೋತ್ಸಾಹಿಸುತ್ತಿದ್ದ ಅನಿಷ್ಟವನ್ನು ಇಲ್ಲಿ ದಾಖಲಿಸಲಾಗಿದೆ.

"ಸಾಹುಕಾರರೂ, ಭೂ ಮಾಲೀಕರೂ ತಮಗೆ ಬರಬೇಕಾದ ಬಾಕಿಯನ್ನು ವಸೂಲ್ಮಾಡುವುದಕ್ಕಾಗಿ ವಸೂಲಿ ಜನರನ್ನು ನೇಮಿಸಿಕೊಂಡಿದ್ದರು. ಸಾಮಾನ್ಯವಾಗಿ ಗೂಂಡಾಗಿರಿಯಲ್ಲಿ ನಿಸ್ಸೀಮರಾದವರನ್ನು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಸಾಮಾನ್ಯ

ಜನರು ಈ ವಸೂಲಿ ಜನರನ್ನು ಕಂಡರೆ ಮರಣಕ್ಕಿಂತಲೂ ಹೆಚ್ಚಾಗಿ ಹೆದರುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಅಂದಿನ ಕಾಲದಲ್ಲಿ ಸಾಮಾನ್ಯ ಜನರ ಬಾಳು ನರಕಪ್ರಾಯವಾಗಿತ್ತು". (ಪು.೧೦)

ಕಾಡಿನಲ್ಲಿ ಹುಲಿ, ಕುರ್ಕಗಳ ಊರಲ್ಲಿ ಸಾಹೇಬರ ಮತ್ತು ಕೊತ್ವಾಲರ ಆರ್ಭಟ, ಒಂದು ಕಡೆ ಕಣ್ಣಿಗೆ ಕಾಣುತ್ತಿದ್ದ ಸಾಹುಕಾರರ ಕಾಟ ಇನ್ನೊಂದು ಕಡೆ ಕಣ್ಣಿಗೆ ಕಾಣದ ದೆವ್ವಗಳ ಕಾಟ- ಇವುಗಳ ನಡುವೆ ಮಲೆನಾಡಿನ ಜನ ಸಾಮಾನ್ಯರು ಪಡುತ್ತಿದ್ದ ಬವಣೆಯನ್ನು ಈ ಅಧ್ಯಾಯ ಚೊಕ್ಕವಾಗಿ ಮಾಡಿದೆ. ಅನಗತ್ಯವಾಗಿ ಲಂಬಿಸದೆ, ಹೇಳಬೇಕಾದುದನ್ನು ಸಂಕ್ಷಿಪ್ತವಾಗಿ, ಮನ ಮುಟ್ಟುವಂತೆ ಬರೆಯುವುದರಲ್ಲಿ ಕಡಿದಾಳ್ ಮಂಜಪ್ಪನವರಿದ್ದ ಕೌಶಲಕ್ಕೂ ಈ ಅಧ್ಯಾಯ ಒಂದು ನಿದರ್ಶನದಂತಿದೆ.

ಎರಡನೇ ಅಧ್ಯಾಯ ಗಿರಿಯಪ್ಪಗೌಡರ ಕುಟುಂಬದ ದುರಂತ ಕತೆಯನ್ನು ಹೇಳುವುದಕ್ಕೆ ಮೀಸಲಾಗಿದೆ. ಆ ಪ್ರದೇಶದ ಮೂರು ಶ್ರೀಮಂತ ಕುಟುಂಬಗಳಲ್ಲಿ ಒಂದಾಗಿದ್ದ ಮನೆತನದ ಹಿರಿ ಮಗನಾಗಿದ್ದ ಗಿರಿಯಪ್ಪ ಗೌಡನನ್ನು ಆತನ ತಮ್ಮ ಕಾಳೇಗೌಡ ತಮ್ಮ ಧೂರ್ತ ಬುದ್ಧಿಯ ಮುಖಾಂತರ ಮನೆಯಿಂದ ಆಸ್ತಿ ಪಾಲು ಕೊಡದೆ ಹೊರ ಹಾಕುವ ವಿವರಗಳೊಂದಿಗೆ ಆರಂಭವಾಗಿ ಕಡೆಗೆ ಗಿರಿಯಪ್ಪನ ಕುಟುಂಬ ಅನುಭವಿಸುವ ಆರ್ಥಿಕ ಸಂಕಷ್ಟಗಳು, ಮಗನೊಬ್ಬ ಹುಲಿ ಬಾಯಿಗೆ ಬಲಿಯಾಗುವುದು, ಆ ಹುಲಿ ಬೇಟೆಯಾಡಲು ಹೋದ ಗಿರಿಯಪ್ಪನೂ ಹುಲಿಯ ದಾಳಿಯಿಂದ ಹುಲಿಯೊಂದಿಗೇ ಮರಣ ಹೊಂದುವ ದುರಂತದೊಂದಿಗೆ ಮುಕ್ತಾಯವಾಗುತ್ತದೆ.

ಮಲೆನಾಡಿನ ಪ್ರದೇಶಗಳಲ್ಲಿ ವ್ಯಕ್ತಿ ಸ್ವಾರ್ಥ ಎನ್ನುವುದು ಸೋದರ ಸಂಬಂಧಗಳಿಗಿಂತ ಮುಖ್ಯವಾಗತೊಡಗಿರುವುದು, ಸಾತ್ವಿಕ ಸ್ವಭಾವದ ವ್ಯಕ್ತಿಗಳ ಮೇಲೆ ಕುಯುಕ್ತಿ ವ್ಯಕ್ತಿಗಳು ನಡೆಸುವ ಮೋಸ, ಅ ಮೋಸದ ವಿರುದ್ಧ ನ್ಯಾಯ ಕೊಡಿಸಲು, ಇತರೆ ಬಲಿಷ್ಠರು ಮುಂದಾಗದೆ ಒಂದು ಬಗೆಯಲ್ಲಿ ಅಕ್ರಮ ವಿಧಾನ ಹಾಗೂ ಸ್ವಭಾವಗಳ ನಡುವೆ ಏರ್ಪಡುವ ಅನೈತಿಕ ಒಪ್ಪಂದಗಳು, ನೊಂದವರನ್ನುನಾಶ ಮಾಡುವ ಪ್ರಕ್ರಿಯೆಗಳ ಆರಂಭವನ್ನು ಸೂಚಿಸಲು ಈ ಕುಟುಂಬದ ಕತೆಯನ್ನು ಕಾದಂಬರಿಕಾರರು ಬಳಸಿಕೊಂಡಿದ್ದಾರೆ.

ದುಡಿದು ಬದುಕುವ ಸ್ವಭಾವದ ಗಿರಿಯಪ್ಪಗೌಡನ ಋಜು ಸ್ವಭಾವ, ಅವನ ಮೇಲೆ ದರ್ಪ ಚಲಾಯಿಸುವ ತಮ್ಮ ಕಾಳೇಗೌಡನ ಸ್ವಭಾವ ತೋರಿಸುವುದಕ್ಕೆ

ಒಳಸಿಕೊಂಡಿರುವ ಸಂಭಾಷಣೆಯ ಭಾಗಗಳು ಮಂಜಪ್ಪನವರ ಕಥನ ಸಾಮರ್ಥ್ಯವನ್ನು ಚೆನ್ನಾಗಿಯೇ ನಿದರ್ಶಿಸುತ್ತವೆ. ಗಿರಿಯಪ್ಪಗೌಡನ ಹೆಂಡತಿ ಈರಮ್ಮನ ದೈಹಿಕ ಸ್ಥಿತಿಯ ವರ್ಣನೆ, ಅದುವರೆಗೆ ಹತ್ತು ಮಕ್ಕಳಾಗಿ ಆ ಪೈಕಿ ಐದು ಮಕ್ಕಳು ತೀರಿಹೋಗಿದ್ದ ವಿವರಗಳು, ಗ್ರಾಮೀಣ ಕುಟುಂಬಗಳ ಅಂದಿನ ಮಹಿಳೆಯ ಪರಿಸ್ಥಿತಿಯನ್ನು ಕಟ್ಟಿಕೊಡುತ್ತವೆ.

ಮನೆಯಿಂದ ಬಿಡಿಗಾಸಿಲ್ಲದೆ ಹೊರಬಿದ್ದ ಗಿರಿಯಪ್ಪಗೌಡ, ಆತನ ಹೆಂಡತಿ ಹಾಗೂ ಐದು ಮಕ್ಕಳು ನೆಲೆಕಂಡುಕೊಳ್ಳುವುದು ಈರಮ್ಮನ ತೌರಾದ ಸೈದಳ್ಳಿಯ ಹತ್ತಿರ. ಈರಮ್ಮನ ತಮ್ಮ ತಿಮ್ಮಣ್ಣ ತೌರಿಗೆ ಬಂದ ಅಕ್ಕನ ಕುಟುಂಬಕ್ಕೆ ಆಶ್ರಯ ಕೊಡಲು ಬಯಸುತ್ತಾನಾದರೂ, ಆತನ ಹೆಂಡತಿ ಗೌರಮ್ಮನಿಗೆ ಅದು ಸಮಾಧಾನವಿಲ್ಲ. ಹಾಗಾಗಿ ದೆವ್ವದ ಕಾಟವಿದೆ ಎಂದು ಪ್ರತೀತಿಯಿದ್ದ, ತಿರುಮಲಭಟ್ಟರಿಗೆ ಸೇರಿದ್ದ ಪಾಳು ಜಮೀನೊಂದಕ್ಕೆ ಗೇಣಿದಾರನಾಗಿ ಗಿರಿಯಪ್ಪಗೌಡ ನೆಲೆ ನಿಲ್ಲಬೇಕಾಗಿ ಬರುತ್ತದೆ.

ಆ ಕುಟುಂಬದ ಮನೆ ಮಂದಿಯೆಲ್ಲ ದುಡಿದು ಹೇಗೋ ಒಂದು ದಡ ತಲುಪುತ್ತೇವೆಂದು ಅಂದುಕೊಳ್ಳುವ ಹೊತ್ತಿಗೆ ಆ ಕುಟುಂಬದ ಗಂಡು ಮಗುವೊಂದು ಹುಲಿಯ ಬಾಯಿಗೆ ಆಹಾರವಾಗುತ್ತದೆ. ನಂತರ ಆ ಹುಲಿಯನ್ನು ಬೇಟೆಯಾಡಲು ಇತರ ಒಕ್ಕಲುಗಳ ಸಹಾಯದಿಂದ ಹೋದ ಗಿರಿಯಪ್ಪ ಹುಲಿಯನ್ನು ಕೊಲ್ಲುತ್ತಾನಾದರೂ ಅದರ ಪಂಜದ ಹೊಡೆತಕ್ಕೆ ಆತನೂ ಬಲಿಯಾಗುತ್ತಾನೆ. ಇಡೀ ಕುಟುಂಬ ಅನಾಥವಾಗುತದೆ. ಅರೂಪವಾಗಿದ್ದ ಆ ಜಮೀನನ್ನು ರೂಢಿಸಲು ಈಗ ಈರಮ್ಮ ಮತ್ತು ಆಕೆಯ ದೊಡ್ಡ ಮಗ ಚಿಕ್ಕ ವಯಸ್ಸಿನ ಸಿದ್ದಣ್ಣ ದುಡಿಯಬೇಕಾಗುತ್ತದೆ. ತಮ್ಮ ಗೇಣಿ ಜಮೀನಿನ ದುಡಿಮೆ ಸಾಲದೆ, ಬೇರೆಯವರ ಹೊಲಗದ್ದೆಗಳಲ್ಲಿ ಕೂಲಿಯಾಳುಗಳಾಗಿಯೂ ಅವರು ದುಡಿಯುತ್ತಾರೆ.

ಗಂಡನ ಪಾಲಿಗೆ ಬರಬೇಕಿದ್ದ ಆಸ್ತಿ ಪಾಲನ್ನು ಪಡೆಯಲು ನಡೆಯುವ ಪ್ರಯತ್ನ ಗಿರಿಯಪ್ಪನ ತಮ್ಮ ಕಾಳೇಗೌಡನ ಧೂರ್ತತೆಯಿಂದಾಗಿ ಫಲ ಕೊಡುವುದಿಲ್ಲ. ಸಿದ್ದಣ್ಣನ ಬೆನ್ನಲ್ಲಿ ಹುಟ್ಟಿದ ಸುಬ್ಬಿ ಹಾಗೂ ಇತರೆ ಇಬ್ಬರು ತಂಗಿಯರು ವಿಷಮಶೀತ ಜ್ವರಕ್ಕೆ ಬಲಿಯಾಗುತ್ತಾರೆ. ಆ ಮಕ್ಕಳ ಕಾಯಿಲೆ ವಾಸಿ ಮಾಡಲು ಔಷಧಿ ಹಾಗೂ ಮಾಟಮಂತ್ರಗಳ ಖರ್ಚಿಗಾಗಿ ಈರಮ್ಮ ತನಗೆ ತೌರಿನಿಂದ ಬಂದಿದ್ದ ಬಂಗಾರದ ಗೆಜ್ಜೆಡ್ಡಿಕೆಯನ್ನು ಸಾಹುಕಾರ್ ಬೆಳ್ಳೀಗೌಡನ ಬಳಿ ಅಡವಿಡುತ್ತಾಳೆ. ಸಾಲವನ್ನು ವಾಯಿದೆಗೆ ಕಟ್ಟಲಿಲ್ಲವೆಂದು ನೆಪದಲ್ಲಿ ಆ ಗೆಜ್ಜೆಡ್ಡಿಕೆಯನ್ನು ಬೆಳ್ಳೀಗೌಡ ಮುಟ್ಟುಗೋಲು ಹಾಕಿಕೊಳ್ಳುತ್ತಾನೆ.

ಗಿರಿಯಪ್ಪನ ಕುಟುಂಬದಲ್ಲಿ ಉಳಿದಿರುವ ಈರಮ್ಮ ಹಾಗೂ ಮಗ ಸಿದ್ದಣ್ಣ ಪೂರ್ಣ ಬರಿಗೈನವರಾಗಿ ಕಡು ಕಷ್ಟದಿಂದ ತಮ್ಮ ಕುಟುಂಬವನ್ನು ಸಾಕಿಕೊಂಡು ಹೋಗುತ್ತಿರುವ ನಡುವೆ ಈರಮ್ಮನಿಗೆ ಮಾನಸಿಕ ಆಘಾತವಾಗಿ ಅರೆ ಹುಚ್ಚಿಯಂತಾಗುತ್ತಾಳೆ. ಅಸಹಾಯಕ ಮಗ ಅರೆ ಹುಚ್ಚಿ ಅಮ್ಮನನ್ನು ಸಂಬಾಳಿಸುತ್ತಾ ತಕ್ಕ ಮಟ್ಟಿಗೆ ಪರವಾಗಿಲ್ಲ ಎನ್ನುವಂತಹ ಗೇಣಿದಾರನ ಸ್ಥಿತಿ ತಲುಪುವ ಕಷ್ಟಕರ ವಿದ್ಯಮಾನಗಳನ್ನು ಎರಡರಿಂದ ನಾಲ್ಕನೇ ಅಧ್ಯಾಯಗಳು ಚಿತ್ರಿಸುತ್ತವೆ. ಕುಟುಂಬದ ಕಥೆ ಹೇಳುವ ನಡುವೆಯೇ, ಕಾಡು, ಕಾಡಿನ ಪ್ರಾಣಿಗಳು, ಬೇಟೆಗಾರರ ವಿಧಾನಗಳು ಮುಂತಾದವುಗಳನ್ನು ಕಾದಂಬರಿ ಪರಿಣಾಮಕಾರಿಯಾಗಿ ಮಂಡಿಸುತ್ತದೆ.

ಸಿದ್ದಣ್ಣ ಬೆಳೆದು ಯುವಕನಾಗಿ, ಇರುವುದರಲ್ಲೇ ಪರವಾಗಿಲ್ಲ ಎಂಬ ಸ್ಥಿತಿಯ ಗೇಣಿದಾರನ ಮಗಳಾದ ಚೆನ್ನಮ್ಮನನ್ನು ವಿವಾಹವಾಗಿ ತನ್ನ ಬುದ್ಧಿವಂತಿಕೆ ಹಾಗೂ ಸ್ಥಿತಿವಂತಿಕೆಯಿಂದಾಗಿ ಉಳಿದ ಗೇಣಿದಾರರ ಮುಖಂಡನಂತೆ ರೂಪುಗೊಂಡಿದ್ದನ್ನು ಐದನೇ ಅಧ್ಯಾಯ ಚಿತ್ರಿಸುತ್ತದೆ.

ಮೊದಲು ಖಾತೆದಾರನೊಬ್ಬನನ್ನು ಮದುವೆಯಾಗಬೇಕೆಂದು ಬಯಕೆ ಹೊಂದಿದ್ದ ಚೆನ್ನಮ್ಮನಿಗೆ ಮದುವೆ ಪ್ರಸ್ತಾಪ ಬರುವುದು ಶ್ರೀಮಂತ ಮುದುಕನಾದ ಸಿರಿವಂತೆ ಪಟೇಲ ದ್ಯಾವೇಗೌಡನ ಕಡೆಯಿಂದ. ಆತನ ಮೂರು ಹೆಂಡತಿಯರು ತೀರಿ ಹೋಗಿರುವುದರಿಂದ ನಾಲ್ಕನೆಯವಳಾಗಿ ಚೆನ್ನಮ್ಮನನ್ನು ಮದುವೆ ಮಾಡಿಕೊಳ್ಳಲು ದ್ಯಾವೇಗೌಡ ಪ್ರಯತ್ನಿಸುತ್ತಾನೆ. ಚೆನ್ನಮ್ಮನ ತಂದೆ ಅಮೃತೂರು ಚಿನ್ನಪ್ಪಗೌಡ, ದ್ಯಾವೇಗೌಡನ ಆಮಿಷಗಳಿಗೆ ಮನಸೋತು ಮಗಳನ್ನು ಕೊಡಲು ಮಾತುಕೊಟ್ಟುಬಿಟ್ಟಿರುತ್ತಾರೆ. ಆ ನಿರ್ಧಾರವನ್ನು ಚೆನ್ನಮ್ಮ ಹಾಗೂ ಅವಳ ತಾಯಿ ವಿರೋಧಿಸಿ, ಸಿದ್ದಣ್ಣನ ಜೊತೆ ಮದುವೆ ಮಾಡುವ ಏರ್ಪಾಡು ಮಾಡಲಾಗುತ್ತದೆ.

ಕಥೆ ಹೇಳುವ ಅಂಗವಾಗಿ ಕಾದಂಬರಿಯಲ್ಲಿ ಈ ಪ್ರಸಂಗಗಳೆಲ್ಲ ಬಂದರೂ ಅವು ಒಟ್ಟಾರೆಯಾಗಿ ಅಂದಿನ ಮಲೆನಾಡಿನ ಸಾಮಾಜಿಕ ಜೀವನದ ರೀತಿ ರಿವಾಜುಗಳನ್ನು, ವೈಚಿತ್ರಗಳನ್ನು ಬಿಂಬಿಸುವುದರಲ್ಲಿ ಯಶಸ್ವಿಯಾಗಿವೆ. ಸಿದ್ದಣ್ಣ ಮತ್ತು ಚೆನ್ನಮ್ಮನಿಗೆ ಮಗನಾಗಿ ಮೋಹನ ಹುಟ್ಟುತ್ತಾನೆ. ಈ ಮೋಹನನೇ 'ಪಂಜರವಳ್ಳಿಯ ಪಂಜು' ಕಾದಂಬರಿಯ ಕಥಾನಾಯಕ. ಮೋಹನನ ಜನ್ಮ ನಾಮ ಗಿಡ್ಡಣ್ಣ. ನಂತರ ಅದನ್ನು ಮೈಸೂರಿನಲ್ಲಿ ವಿದ್ಯಾಭ್ಯಾಸಕ್ಕೆಂದು ಹೋದಾಗ ಮೋಹನ ಎಂದು ಬದಲಾಯಿಸಿಕೊಳ್ಳುತ್ತಾನೆ.

ಸಿದ್ದಣ್ಣ, ಚೆನ್ನಮ್ಮರ ಪಾಲನೆ, ಅರೆ ಹುಚ್ಚಿಯಂತಿದ್ದ ಅಜ್ಜಿ ಈರಮ್ಮನ ಆರೈಕೆಯಲ್ಲಿ ಮೋಹನ ಬೆಳೆದಂತೆಯೇ ಅವರ ಕುಟುಂಬದ ಎದುರು ಗುಂಪಿನ ಕುಟುಂಬಗಳಾದ ತಿರುಮಲಭಟ್ಟರ ಮಗನಾಗಿ ನಾಗೇಂದ್ರ, ಬೆಳ್ಳೇಗೌಡರ ಮಗನಾಗಿ ಸಣ್ಣೇಗೌಡ, ಕಾಳೇಗೌಡರ ಮಗನಾಗಿ ನೀಲೇಗೌಡ ಬೆಳೆಯುತ್ತಾರೆ. ಮೋಹನನ ತಂದೆ ಸಿದ್ದಣ್ಣ, ಸಿದ್ದಣ್ಣನ ತಂದೆ ಗಿರಿಯಪ್ಪಗೌಡರ ಮೇಲೆ ದಾಯಾದಿ ಮತ್ಸರವನ್ನು, ಎದುರಾಳಿ ಈರ್ಷ್ಯೆಯನ್ನು ಸಾಧಿಸಿದ ಆ ಕುಟುಂಬಗಳ ಹಿರಿಯರಂತೆಯೇ, ಹೊಸ ತಲೆಮಾರಿನ ಈ ವ್ಯಕ್ತಿಗಳು, ತಮ್ಮ ವಾರಗೆಯ ಮೋಹನನ ಮೇಲೆ ಜಿದ್ದು ಸಾಧಿಸಲು ಆರಂಭಿಸುತ್ತಾರೆ.

ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸಮಯ ಹಾಗೂ ಸ್ವಾತಂತ್ರ್ಯ ಬಂದ ತರುಣದಲ್ಲಿ ನಡೆಯುವ ಘಟನಾವಳಿಗಳ ಮುಖ್ಯ ಪಾತ್ರಗಳು ಮೋಹನ, ನಾಗೇಂದ್ರ, ಸಣ್ಣೇಗೌಡ, ನೀಲೇಗೌಡ ಆಗಿದ್ದಾರೆ. ಮೋಹನ ತನ್ನ ಮನೆತನದ ಹಿಂದಿನ ಗುಣ ಸ್ವಭಾವಗಳ ಅನುಸಾರ ಜನಾನುರಾಗಿಯೂ, ಮೌಲ್ಯದರ್ಶನಗಳ ಪ್ರತಿನಿಧಿಯೂ ಆಗಿ ನಿಂತರೆ, ನಾಗೇಂದ್ರ, ಸಣ್ಣೇಗೌಡ, ನೀಲೇಗೌಡ ಭೂಮಾಲೀಕ ಶ್ರೀಮಂತ ಕುಟುಂಬಗಳ ವಾರಸುದಾರಿಕೆ ಪಡೆದು, ಜನಪೀಡಕರಾಗಿ, ಮೋಸ ಕುಟಿಲಗಳನ್ನು ಹೆಣೆಯುವುದರೊಂದಿಗೆ ಮೋಹನನ ಮೇಲೆ, ಈ ಮೂಲಕ ಜನಪರ ಆಶಯಗಳ ಮೇಲೆ ಕತ್ತಿ ಮಸೆಯುವವರಾಗಿ ಬೆಳೆಯುತ್ತಾರೆ.

ಬಡ ಗೇಣಿದಾರನ ಮಗನಾದ ಮೋಹನ ವೆಸ್ಲಿಯನ್ ಮಿಷನ್ ಶಾಲೆಯ ಮುಖ್ಯಸ್ಥ ಜಾನ್‌ನ ನೆರವಿನಿಂದ ವಿದ್ಯಾಭ್ಯಾಸ ಮುಂದುವರಿಸುತ್ತಾನೆ. ವೆಸ್ಲಿಯನ್ ಮಿಶನ್ ಶಾಲೆಗೆ ಸೇರಿದ ಮೋಹನನು ಕ್ರಿಶ್ಚಿಯನ್ ಆಗಿ ಮತಾಂತರಗೊಂಡನೆಂದು ಕೂಡ ಕುಹಕದ ಸುದ್ದಿ ಹಬ್ಬಿಸಲಾಗುತ್ತದೆ. ಆ ಮೂಲಕ ಸಿದ್ದಣ್ಣನ ಹೆಸರಿಗೆ ಮಸಿ ಬಳಿಯಲು ಯತ್ನಿಸಲಾಗುತ್ತದೆ.

ಈ ನಡುವೆ ಸಿದ್ದಣ್ಣ ಗೇಣಿ ಮಾಡುತ್ತಿದ್ದ ಜಮೀನಿನ ಮಾಲೀಕನಾದ ತಿರುಮಲಭಟ್ಟ ತೀರಿ ಹೋಗಿ, ಅವನ ಮಗ ನಾಗೇಂದ್ರ ಉಸ್ತುವಾರಿ ವಹಿಸಿಕೊಂಡಿರುತ್ತಾನೆ. ಸಿದ್ದಣ್ಣ ಕೊಡುತ್ತಿರುವ ಗೇಣಿ ಸಾಲದು, ಜಮೀನು ಬಿಟ್ಟು ಬಿಡು ಎಂದು ನಾಗೇಂದ್ರ ಒತ್ತಾಯ ತರುತ್ತಾನೆ. ಗೇಣಿ ಪ್ರಮಾಣ ಹೆಚ್ಚಿಸಿ ಅದಕ್ಕೊಂದು ಕರಾರು ಬರೆಸಿಕೊಂಡು ಸಿದ್ದಣ್ಣ ತನ್ನನ್ನು ಗೇಣಿ ಭೂಮಿಯಿಂದ ಹೊರ ಹಾಕಲು ಸಂಚು ಮಾಡುತ್ತಿದ್ದ ನೀಲೇಗೌಡ ಮತ್ತು ಸಣ್ಣೇಗೌಡನ ಹಂಚಿಕೆಯನ್ನು ವಿಫಲಗೊಳಿಸುತ್ತಾನೆ.

ಇತ್ತ ಮೈಸೂರಿನಲ್ಲಿ ವೆಸ್ಲಿಯನ್ ಮಿಷನ್ ಆಶ್ರಯದಲ್ಲಿ ಕಾಲೇಜು ವಿದ್ಯಾಭ್ಯಾಸ

ಮುಂದುವರಿಸಿದ್ದ ಮೋಹನ ಗಾಂಧೀಜಿಯುವರ ಸ್ವಾತಂತ್ರ್ಯ ಚಳವಳಿಯ ಪ್ರಭಾವಕ್ಕೊಳಗಾಗಿದ್ದ. ದೇಶ ಸೇವೆ ಮಾಡಬೇಕೆಂದು ಹುಮ್ಮಸ್ಸು ಅವನಲ್ಲಿ ತುಂಬಿಕೊಂಡಿತ್ತು. ಅವನ ತಾಲ್ಲೂಕಾದ ಪವಿತ್ರಪುರದ ಹಲವಾರು ಯುವಕರು ಆಗಲೇ ಅವರ ಅನುಯಾಯಿಗಳಾಗಿದ್ದರು. ತನ್ನ ಸ್ನೇಹಿತರಾದ ಹರಿಜನ ಕೋಮಿನ ಕರಿಯಪ್ಪ ಮತ್ತು ಮೂರ್ತಿ ಇವರ ಸಹಾಯದಿಂದ ಕಾಂಗ್ರೆಸ್ ಕಮಿಟಿಯನ್ನು ರಚಿಸುತ್ತಾನೆ. ಇವರಲ್ಲಿ ಕರಿಯಪ್ಪ ಮೋಹನನಿಗೆ ಪ್ರಾಥಮಿಕ ಶಾಲೆಯ ಸಹಪಾಠಿಯಾದರೆ, ಮೂರ್ತಿ ಮೈಸೂರಿನ ವಿದ್ಯಾಭ್ಯಾಸದಲ್ಲಿ ಸಹಪಾಠಿಯಾಗಿದ್ದವನು.

ಮೋಹನ ಮತ್ತು ಅವನ ಗೆಳೆಯರ ಕಾಂಗ್ರೆಸ್ ಕಾರ್ಯಕಲಾಪಗಳೂ, ಅದಕ್ಕೆ ಎದುರಾಗಿ ಬ್ರಿಟಿಷ್ ಸರ್ಕಾರದ ಬೆಂಬಲಿಗರ ಕಾರ್ಯ ಚಟುವಟಿಕೆಗಳಿಗೂ ಅಗ ಏರುಗತಿಯ ಕಾಲ. ವ್ಯಾಪಾರಿ ಹಾಗೂ ಕಂಟ್ರ್ಯಾಕ್ಟರ್ ಆದ ರಂಗನಾಥ, ಶೀತೂರು ಕಲ್ಲಪ್ಪ, ಸೇಂದಿ ಕಂಟ್ರಾಕ್ಟರ್ ಸಂಕ ಪೂಜಾರಿಗಳು ಹಾಗೂ ಮೋಹನನಿಗೆ ಎಂದಿನ ಎದುರಾಳಿಗಳಾದ ಪಂಜರವಳ್ಳಿಯ ನಾಗೇಂದ್ರ, ನೀಲೇಗೌಡ, ಸಣ್ಣೇಗೌಡ ಇವರೆಲ್ಲ ಜೊತೆಗೂಡಿ ಸರ್ಕಾರಿ ಏಜೆಂಟರಂತೆ, ಆಂಗ್ಲರ ಸಾಕು ಮಕ್ಕಳಂತೆ ವರ್ತಿಸತೊಡಗುತ್ತಾರೆ.

ಮೋಹನನು ಕಾಲೇಜು ವಿದ್ಯಾಭ್ಯಾಸ ಮಾಡುತ್ತಿದ್ದುದನ್ನೇ ಒಂದು ಮಾತ್ಸರ್ಯದ ವಿಷಯವಾಗಿ ಮಾಡಿಕೊಂಡ ನಾಗೇಂದ್ರ, ನೀಲೇಗೌಡ ಹಾಗೂ ಸಣ್ಣೇಗೌಡರು ಸ್ಥಳೀಯ ಪೊಲೀಸರೊಂದಿಗೆ ಹಲವು ವಿಧದ ದೂರುಗಳನ್ನು ಕೊಡುತ್ತಾರೆ. ಅವನು ಸಮಾಜವನ್ನು ಬುಡಮೇಲು ಮಾಡುವ ಕಾರ್ಯದಲ್ಲಿ ತೊಡಗಿದ್ದಾನೆಂಬುದು ಅವರ ಪ್ರಮುಖ ಆಪಾದನೆ.

ರಜೆಯ ದಿನದಲ್ಲಿ ಊರಿಗೆ ಬಂದಿದ್ದ ಮೋಹನ ನಂತರ ಫಲಿತಾಂಶ ತಿಳಿದು ಮುಂದಿನ ತೀರ್ಮಾನ ಕೈಗೊಳ್ಳಲು ಮೈಸೂರಿಗೆ ಹೋದವನು. ಗಾಂಧಿ ಪ್ರೇರಿತ ಸತ್ಯಾಗ್ರಹವೊಂದರಲ್ಲಿ ಪಾಲ್ಗೊಳ್ಳುತ್ತಾನೆ. ಸರ್ಕಾರವನ್ನು ವಿರೋಧಿಸಿ ಭಾಷಣ ಮಾಡಿ ಬಂಧಿತನಾಗಿ ಸೆರೆಮನೆ ಸೇರುತ್ತಾನೆ. ಇದರಿಂದ ತಂದೆ ಸಿದ್ದಣ್ಣ ಕುಗ್ಗಿ ಹೋಗುತ್ತಾನೆ. ಮಗ ದೊಡ್ಡ ಓದು ಓದಿ ಉತ್ತಮ ನೌಕರಿಗೆ ಸೇರಲೆಂಬುದು ಅವನ ನಿರೀಕ್ಷೆಯಾಗಿರುತ್ತದೆ. ಆದರೆ ಸೆರೆಮನೆ ಪಾಲಾದ ಮಗನ ದೆಸೆ ನೋಡಿ ಆತ ಜರ್ಜರಿತನಾಗುತ್ತಾನೆ.

ಮೋಹನನ ತಂದೆ ಸಿದ್ದಣ್ಣನು ಕೊಟ್ಟ ಪ್ರೋತ್ಸಾಹದಿಂದಲೇ ಮಗನು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾನೆಂದೂ, ಕಾಂಗ್ರೆಸ್ ಚಟುವಟಿಕೆಗಳಿಗೆ ಸಿದ್ದಣ್ಣ ಕುಮ್ಮಕ್ಕು ಕೊಡುತ್ತಿದ್ದಾರೆಂದೂ ದಾಯಾದಿ ನೀಲೇಗೌಡ, ಸಾಹುಕಾರ್ ಸಣ್ಣೇಗೌಡ ಸ್ಥಳೀಯ

ಅಧಿಕಾರಿಗಳಿಗೆ ವರದಿ ಮಾಡುತ್ತಾರೆ.

ಇವರ ಚಿತಾವಣೆಯಿಂದ ರಾಜದ್ರೋಹದ ಆಪಾದನೆಯಡಿ ಸಿದ್ದಣ್ಣ ಸೆರೆಮನೆಗೆ ನೂಕಲ್ಪಡುತ್ತಾನೆ. ಏಕಾಂಗಿ ಚೆನ್ನಮ್ಮ ತೌರಾದ ಅಮೃತೂರಿಗೆ ಸೇರುತ್ತಾಳೆ. ಚೆನ್ನಮ್ಮನೂ ಊರಿಗೆ ಹೋದ ಮೇಲೆ ಮನೆ ಶೋಧಿಸುವ ನೆಪದಲ್ಲಿ ಪೊಲೀಸರು ಬೀಗ ಒಡೆದು ಮನೆಯಲ್ಲಿ ಇದ್ದುದನ್ನೆಲ್ಲಾ ದೋಚುತ್ತಾರೆ. ಆ ಮನೆಯನ್ನೂ ಜಮೀನನ್ನೂ ಸಿದ್ದಣ್ಣನ ದಾಯಾದಿ ಎಂಬ ನೆಪದಲ್ಲಿ ನೀಲೇಗೌಡ ವಶಪಡಿಸಿಕೊಳ್ಳುತ್ತಾನೆ. ಸೆರೆಮನೆಯಲ್ಲಿ ಆರೇಳು ತಿಂಗಳು ವಾಸ ಮಾಡಿ ಕೃಶನಾದ ಸಿದ್ದಣ್ಣ ಜ್ವರ ಬಂದು ಮರಣ ಹೊಂದುತ್ತಾನೆ. ಅವನ ಸಾವಿನ ವಿಚಾರ ಬೇರೊಂದು ಸೆರೆಮನೆಯಲ್ಲಿದ್ದ ಮೋಹನನಿಗೆ ಎಂಟು ಹತ್ತು ದಿನಗಳ ನಂತರ ಗೊತ್ತಾಗುತ್ತದೆ. ಮೋಹನನ ತಾಯಿ ಚೆನ್ನಮ್ಮನ ಶೋಕಕ್ಕೆ ಕೊನೆಯಿಲ್ಲದಂತಾಗುತ್ತದೆ.

ಮೋಹನ ನಾಲ್ಕು ವರ್ಷಗಳಷ್ಟು ಕಾಲ ಸೆರೆಮನೆಯಲ್ಲಿ ಕಳೆಯುತ್ತಾನೆ. ಆ ಸಮಯದಲ್ಲೇ ಸ್ವಾತಂತ್ರ್ಯ ದೊರೆಯುವ ಕಾಲ ಹತ್ತಿರವಾಯಿತು. ಆಗ ಮೋಹನ ವಿರೋಧಿ ಪಾಳೆಯದವರ ವರ್ತನೆಯೂ ಬದಲಾಗತೊಡಗುತ್ತದೆ. "ಅದುವರೆಗೂ ಸರ್ಕಾರದ ಪರವಾಗಿದ್ದು ದೇಶಭಕ್ತರಿಗೆ ಕಿರುಕುಳ ಕೊಡುತ್ತಿದ್ದವರು ಗಾಳಿ ಎತ್ತ ಕಡೆ ಬೀಸುತ್ತಿದೆಯೆಂಬುದನ್ನು ತಿಳಿದುಕೊಂಡು ತಮ್ಮ ವರ್ತನೆಯನ್ನು ಬದಲಾಯಿಸ ತೊಡಗಿದರು. ಅದರಲ್ಲಿ ಕೆಲವರು ಅಧಿಕಾರಿಗಳೊಡನೆ ಮಾತನಾಡುವಾಗ ಆಂಗ್ಲೇಯರ ಮೊಮ್ಮಕ್ಕಳಂತೆ ಮಾತನಾಡುತ್ತಿದ್ದರು. ಕಾಂಗ್ರೆಸ್ಸಿನ ದೇಶಭಕ್ತರಂತೆ ನಟಿಸುತ್ತಿದ್ದರು" (ಪು.೮೧)

"ಆಂಗ್ಲೇಯರು ದೇಶವನ್ನು ಬಿಟ್ಟು ಹೋಗುತ್ತಾರೆಂಬ ಸುದ್ದಿ ಬಲವಾದ ನಂತರ ಕೆಲವರು ನಿಜವಾದ ಕಾಂಗ್ರೆಸ್ಸಿನವರನ್ನು ಮೀರಿಸುವ ರೀತಿಯಲ್ಲಿ ಬಿಳಿಯ ಬಟ್ಟೆಯಲ್ಲಿ ಫಳಫಳನೆ ಹೊಳೆಯುತ್ತಿದ್ದರು. ರಾಜಕೀಯ ಬಂದಿಗಳನ್ನೆಲ್ಲಾ ಬಿಡುಗಡೆ ಮಾಡುತ್ತಾರೆಂಬ ವದಂತಿ ಹಬ್ಬಿದ ನಂತರ ಕೆಲವರು ಅವಸರವಸರವಾಗಿ ಕಾನೂನು ಭಂಗ ಮಾಡಿ ಸೆರೆ ಮನೆಯನ್ನು ಸೇರಿದರು". (ಪು. ೮೨)

ಇಂತಹ ಸನ್ನಿವೇಶದಲ್ಲಿ ಸ್ವಾತಂತ್ರ್ಯ ದೊರೆಯುತ್ತದೆ. ಮೋಹನ ಸೆರೆಮನೆಯಿಂದ ತನ್ನ ತಾಲ್ಲೂಕಿಗೆ ಮರಳುತ್ತಾನೆ. ಮೆರವಣಿಗೆ, ಭಾಷಣ ಮುಂತಾದ ಕಾರ್ಯಕ್ರಮಗಳು ಏರ್ಪಾಡಾಗಿರುತ್ತದೆ. ನೆನ್ನೆಯವರೆಗೆ ದೇಶ ದ್ರೋಹಿಗಳಾಗಿದ್ದ ಅನೇಕರು ಇಂದು ದೇಶಭಕ್ತರಂತೆ ವೇದಿಕೆ ಏರಿ ಕುಳಿತಿರುವ ವಿಪರ್ಯಾಸವನ್ನು ಮೋಹನ ನೋಡುತ್ತಾನೆ.

ತೌರು ಅಮೃತೂರಿನಲ್ಲಿದ್ದ ತಾಯಿಯನ್ನು ಕರೆ ತಂದು ಪಂಜರವಳ್ಳಿಯಲ್ಲಿ ಮತ್ತೆ ನೆಲೆಗೊಳ್ಳುತ್ತಾನೆ ಮೋಹನ.

ಸ್ವಾತಂತ್ರ್ಯ ಗಳಿಸಿದ ಒಂದು ದಶಕದ ಅವಧಿಯೊಳಗೇ ನಿಜವಾದ ಗಾಂಧಿ ಅನುಯಾಯಿ ಕಾಂಗ್ರೆಸ್ಸಿಗರಿಗೂ, ಅವಕಾಶವಾದಿಗಳಾದ ಶ್ರೀಮಂತ ಕುಳಗಳಾದ ಕಾಂಗ್ರೆಸ್ಸಿಗರಿಗೂ ವೈಮನಸ್ಸು, ರಾಜಕೀಯ ಸ್ಪರ್ಧೆ ಏರ್ಪಡುತ್ತದೆ.

ಅದಕ್ಕೆ ಕಾರಣಗಳನ್ನು ಕಾದಂಬರಿ ಹೀಗೆ ಮಂಡಿಸುತ್ತದೆ. "(ಮೋಹನ) ತಾಲ್ಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗಿ, ಶಾಸನ ಸಭೆಯ ಸದಸ್ಯನಾಗಿ ನಿಜವಾದ ಗಾಂಧಿ ಭಕ್ತನಾಗಿ ಜೀವನ ನಡೆಸುತ್ತಿದ್ದನು. ಬಡಬಗ್ಗರ ಪಕ್ಷಪಾತಿಯಾಗಿದ್ದುದರಿಂದ ಕೆಲವು ಶ್ರೀಮಂತರಿಗೆ ಅವನ ಮೇಲೆ ಸ್ವಾಭಾವಿಕವಾಗಿ ಅಸಮಾಧಾನವಿತ್ತು. ಕೆಲವು ಭೂ ಮಾಲೀಕರು ಅವರ ಗೇಣಿದಾರರನ್ನು ಅಕ್ರಮವಾಗಿ ಉಚ್ಚಾಟನೆ ಮಾಡುತ್ತಿದ್ದರು. ಮೋಹನನು ಅಂತಹ ಗೇಣಿದಾರರಿಗೆ ರಕ್ಷಣೆ ನೀಡುವ ಕಾರ್ಯದಲ್ಲಿ ಸದಾ ನಿರತನಾಗಿರುತ್ತಿದ್ದನು. ತಮ್ಮ ಅಕ್ರಮ ವ್ಯವಹಾರಗಳಿಗೆ ಅವನು ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಾನೆಂಬ ಕಾರಣದಿಂದ ಕೆಲವರು ಮಾಲೀಕರೂ, ಪವಿತ್ರಪುರದ ಮಠಾಧಿಪತಿಗಳೂ ಮೋಹನನ ಮೇಲೆ ಕುಪಿತರಾಗಿದ್ದರು.

ಸ್ವರಾಜ್ಯಕ್ಕೆ ಪೂರ್ವ ಯಾರಾರು ಕಂಟ್ರಾಕ್ಟು, ಪರ್ಮಿಟ್ಟು ಮುಂತಾದ ವಿಶೇಷ ಸವಲತ್ತುಗಳಿಗಾಗಿ ಅಂದಿದ್ದ ಆಡಳಿತಗಾರರನ್ನು ಆಶ್ರಯಿಸಿಕೊಂಡಿದ್ದರೋ ಅವರೆಲ್ಲರೂ ಸ್ವರಾಜ್ಯ ಬಂದ ನಂತರ ಕಾಂಗ್ರೆಸ್‌ನ ಹಿತೈಷಿಗಳಂತೆ ನಟಿಸುತ್ತಾ ಹೊಸ ಆಡಳಿತಗಾರರನ್ನು ಅಶ್ರಯಿಸಲಾರಂಭಿಸಿದರು. ಅವರಲ್ಲಿ ಕೆಲವರು ಕಾಲಕ್ರಮೇಣ ಕಾಂಗ್ರೆಸ್ ಸದಸ್ಯರಾದರು" (ಪು.೯೦).

ಕಾಂಗ್ರೆಸ್ ಪಕ್ಷದ ಸಂರಚನೆಯೊಳಕ್ಕೆ ತೂರಿಕೊಳ್ಳುವ ಈ ಬಗೆಯ ಜನ ವಿರೋಧಿ ಶಕ್ತಿಗಳು ಒಟ್ಟಾರೆಯಾಗಿ ಸ್ವಾತಂತ್ರ್ಯೋತ್ತರ ಭಾರತದ ಆಡಳಿತದಲ್ಲಿ ಮೇಲ್ಗೈ ಪಡೆಯತೊಡಗಿದ್ದ ಜನ ವಿರೋಧಿ ಶಕ್ತಿಗಳು ಪ್ರತೀಕದಂತೆ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತವೆ.

ಪಂಜರವಳ್ಳಿಯ ಪಂಜು ಒಂದು ಕಡೆ ಮಲೆನಾಡು ಪ್ರದೇಶದ ರಾಜಕೀಯ ಸ್ಥಿತ್ಯಂತರಗಳನ್ನು ಸ್ಥಳೀಯವಾಗಿ ಚಿತ್ರಿಸುತ್ತಿರುವಂತೆ ಕಂಡು ಬಂದರೂ ಒಟ್ಟಾರೆಯಾಗಿ ದೇಶದ ಆಡಳಿತದಲ್ಲಿ, ಕಾಂಗ್ರೆಸ್‌ನ ರಾಜಕೀಯ ವಿನ್ಯಾಸದಲ್ಲಿ ಕಂಡು ಬರತೊಡಗಿದ ಜನಪರ ಹಾಗೂ ಜನವಿರೋಧಿ ಪಂಗಡಗಳ ಪೈಪೋಟಿಯನ್ನು ನೇಪಥ್ಯದಲ್ಲಿ

ಬಿಂಬಿಸುತ್ತಿರುವಂತೆ ಕಾಣಿಸುತ್ತದೆ.

ಹೀಗೆ ಆರಂಭವಾದ ರಾಜಕೀಯ ಮೌಲ್ಯಗಳ ಪತನ ಮತ್ತು ಆದರ್ಶಗಳ ಕ್ಷೀಣಿಸುವಿಕೆ, ಕಾದಂಬರಿಯ ಪ್ರಧಾನ ಕಥನವಾಗಿ ಚಿತ್ರಣಗೊಳ್ಳುತ್ತಾ ಒಂದು ಹಂತದಲ್ಲಿ ಗಾಂಧಿ ಮೌಲ್ಯ ವಿರೋಧಿಗಳಾದ ವ್ಯಕ್ತಿಗಳೇ ತಮ್ಮ ಭ್ರಷ್ಟಾಚಾರದಿಂದ ಆಡಳಿತ ವ್ಯವಸ್ಥೆಯಲ್ಲಿ ಪ್ರಭಾವಿಗಳೂ, ನಿರ್ಣಾಯಕರೂ ಆಗಿಬಿಡುವ ಹಂತ ತಲುಪುತ್ತದೆ.

ಮೋಹನನ ಗೆಳೆಯನಾದ ಮೂರ್ತಿ, ಮೋಹನ ನಂಬಿದ ಗಾಂಧಿ ಆದರ್ಶಗಳಿಗೆ ಇನ್ನು ಉಳಿಗಾಲವಿಲ್ಲವೆಂದೂ, ಬಡವರನ್ನು ಕಾಪಾಡಲು ಬೇರೆ ಉಗ್ರ ಮಾರ್ಗಗಳನ್ನು ಅನುಸರಿಬೇಕೆಂದೂ ವಾದವಾಡುವಂತಹ ಅನಿವಾರ್ಯ ಸನ್ನಿವೇಶ ನಿರ್ಮಾಣಗೊಳ್ಳತೊಡಗುತ್ತದೆ.

ಗಾಂಧೀವಾದಿ ಮೋಹನ ಕುಡಿತದ ಚಟಕ್ಕೆ ಸಿಲುಕಿದ್ದಾನೆಂದು ಆಪಾದನೆ ಹೊರಿಸಲಾಗುತ್ತದೆ. ದುಷ್ಟರ ಕೃಪಾಶ್ರಯದಲ್ಲಿದ್ದ ಸ್ಥಳೀಯ ಸುದ್ದಿ ಪತ್ರಿಕೆ ಮೋಹನನ ಚಾರಿತ್ರ್ಯ ವಧೆ ಮಾಡುವಂತಹ ಲೇಖನ, ಹೇಳಿಕೆಗಳನ್ನು ಪ್ರಕಟಿಸುತ್ತದೆ. ಕುತಂತ್ರದಿಂದ ಮೋಹನನ ಮನೆಯಲ್ಲಿ ವಿದೇಶೀ ಮಧ್ಯದ ಬಾಟಲಿ ಇರಿಸಿ, ಪಾನ ನಿಷೇಧ ಉಲ್ಲಂಘಿಸಿದ ಆರೋಪವನ್ನು ಮಾಡಲಾಗುತ್ತದೆ. ಪೊಲೀಸರು ಶಾಮೀಲಾಗಿ ಮೋಹನನನ್ನು ಬಂಧಿಸುತ್ತಾರೆ. ಕಡೆಗೆ ಮೋಹನನ ಬೆಂಬಲಿಗರ ಆಕ್ರೋಶಪೂರಿತ ಪ್ರತಿಭಟನೆಗೆ ಮಣಿದು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗುತ್ತದೆ.

ಮೋಹನನ ವಿರೋಧಿಗಳು, ಕಾಫಿಯಲ್ಲಿ ವಿಷ ಬೆರೆಸಿ ಮೋಹನನನ್ನು ಕೊಲ್ಲಲು ನಡೆಸುವ ಸಂಚು ಅಕಸ್ಮಾತ್ ವಿಫಲವಾಗುತ್ತದೆ.

ನಿಷ್ಠಾವಂತ ಕಾಂಗ್ರೆಸ್ಸಿಗ, ಸ್ವಾತಂತ್ರ್ಯ ಹೋರಾಟಗಾರ ಕರಿಯಪ್ಪನಿಗೆ ದರಕಾಸ್ತಿನಲ್ಲಿ ಜಮೀನು ಕೂಡ ದೊರೆಯದಂತೆ ಮಾಡಲಾಗುತ್ತದೆ. ಆತ ಮದುವೆಯಾಗಬಯಸಿದ್ದ ತರುಣಿಯನ್ನು ಬಸವಿ ಬಿಡುವಂತೆ ಪಟ್ಟಭದ್ರ ಶಕ್ತಿಗಳು ಒತ್ತಡ ತಂದಾಗ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಕಡೆಗೆ ಸ್ಥಳೀಯ ವೈಷಮ್ಯದಿಂದ ಉಂಟಾದ ಕೊಲೆಯಲ್ಲಿ ಆರೋಪಿಯನ್ನಾಗಿಸಿ ಮೋಹನನನ್ನು ಜೈಲಿಗೆ ಹಾಕಲಾಗುತ್ತದೆ. ಆತನ ವಿರೋಧಿಗಳು ಷಡ್ಯಂತ್ರ ಹೂಡಿ ಕೊಲೆ ಮೊಕದ್ದಮೆಯಲ್ಲಿ ಮೋಹನನನ್ನು ಸಿಲುಕಿಸಿರುವಾಗ, ಆತನ ತಾಯಿ ಚೆನ್ನಮ್ಮ ಕೊನೆಯುಸಿರೆಳೆಯುತ್ತಾನೆ. ಸ್ನೇಹಿತನಾದ ಶಾಸ್ತ್ರಿಯ ನೆರವಿನಿಂದ, ಮೂರ್ತಿಯ

ಬೆಂಬಲದಿಂದ ಮೋಹನ ಕಾನೂನಿನ ಬಲೆಯಿಂದ ಬಿಡುಗಡೆಗೊಳ್ಳುತ್ತಾನೆ. ಕೊಲೆ ಆಪಾದನೆ ನಿರಾಧಾರವೆಂದು ಕೋರ್ಟು ತೀರ್ಪು ನೀಡುತ್ತದೆ. ಬಿಡುಗಡೆಯಾದ ಮೋಹನ ಸೆರೆಮನೆಯಲ್ಲಿ ತೀವ್ರ ಖಿನ್ನತೆ, ಹತಾಶೆ ಹಾಗೂ ವೈರಾಗ್ಯದಿಂದ ಜರ್ಜರಿತನಾಗಿರುತ್ತಾನೆ. ಆತ ಸೆರೆಮನೆಯಿಂದ ಬಿಡುಗಡೆಯಾಗುವ ವೇಳೆಯಲ್ಲೇ ಆತ ಇಹಲೋಕ ವಾಸದಿಂದಲೂ ಬಿಡುಗಡೆ ಹೊಂದುವ ದೃಶ್ಯದೊಂದಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

ಪಂಜರವಳ್ಳಿಯ ಪಂಜು ಒಟ್ಟು ೨೨೩ ಪುಟಗಳ ಕಾದಂಬರಿ. ಕುಟುಂಬವೊಂದರ ಮೂರು ತಲೆಮಾರುಗಳ ಕಥೆ ಒಳಗೊಂಡಿರುವ ಕಥಾನಕ. ಮೂರನೇ ತಲೆಮಾರಿನ ಮೋಹನನ ಕಥೆ ಬರುವ ಹೊತ್ತಿಗೆ ಒಂದು ಸಾಮಾಜಿಕ ರಾಜಕೀಯ ಕಾದಂಬರಿಯಾಗಿ ರೂಪುಗೊಳ್ಳುತ್ತದೆ. ಕುಟುಂಬ ಕಲಹ, ಪಾರಂಪಾರಿಕ ಮಾತ್ಸರ್ಯಗಳ ಅಂಶಗಳು ಕಾದಂಬರಿಯ ಕಥಾ ಹಂದರದಲ್ಲಿ ಹಾಸುಹೊಕ್ಕಾಗಿ ಸೇರಿದ್ದರೂ, ರಾಜಕೀಯ ಸ್ಥಿತ್ಯಂತರಗಳು, ಸಮಾಜದಲ್ಲಿ ಏರ್ಪಡುವ ಮೌಲ್ಯ ವ್ಯವಸ್ಥೆಯ ಪತನಗಳ ವಿವರಗಳೇ ಪ್ರಮುಖವಾದ ಕಥಾ ವಸ್ತುವಾಗಿದೆ.

ಅವಕಾಶವಾದಿಗಳು, ಸ್ವಾರ್ಥಿಗಳು, ಜನಪೀಡಕರು ಕಾಂಗ್ರೆಸ್ ಪಕ್ಷದ, ಸ್ವಾತಂತ್ರ್ಯೋತ್ತರ ಭಾರತದ ಆಡಳಿತ ವ್ಯವಸ್ಥೆಯ ಮುಖ್ಯಸ್ಥರೆಂಬಂತೆ ಬಲಗೊಳ್ಳುತ್ತಾ ಜನಹಿತಕ್ಕೆ ಮಾರಕರಾಗುವುದನ್ನು ಈ ಕಾದಂಬರಿ ವಸ್ತುನಿಷ್ಠವಾಗಿ ಚಿತ್ರಿಸಿದೆ.

ಮೋಹನನಂತಹ ಆದರ್ಶವಾದಿ ರಾಜಕಾರಣಿಗಳ ತಲೆಮಾರು ಒಂದು ದಶಕದ ಹಿಂದಿನವರೆಗೂ ಹಲವಾರು ಜಿಲ್ಲೆಗಳಲ್ಲಿ ಉಸಿರಾಡಿಕೊಂಡಿತ್ತು. ಆದರೆ ೭೦ ರ ದಶಕದಿಂದೀಚೆಗೆ ಅಂತಹ ತಲೆಮಾರಿನ ರಾಜಕೀಯ, ಸಾಮಾಜಿಕ ಶಕ್ತಿ ತೀವ್ರವಾಗಿ ದುರ್ಬಲಗೊಂಡಿದ್ದನ್ನು ಕರ್ನಾಟಕ ಸನ್ನಿವೇಶದ ಪರಿಚಯವುಳ್ಳವರೆಲ್ಲರೂ ಬಲ್ಲರು.

ಅಧಿಕಾರಿಗಳನ್ನು ಓಲೈಸುವವರು, ಲಂಚಕೋರತನವನ್ನು ಪೋಷಿಸುವವರು, ಅಕ್ರಮ ಅನ್ಯಾಯದ ಮಾರ್ಗದಲ್ಲಿ ಹಣ ಗಳಿಸುವವರು, ಸ್ವಜನ ಪಕ್ಷಪಾತ, ಅನೈತಿಕ ಗುಂಪುಗಾರಿಕೆ, ಜನರನ್ನು ವಂಚಿಸುವುದು, ಅಧಿಕಾರ ಬಲದಿಂದ ನ್ಯಾಯವನ್ನು ಮಣಿಸಿ ಅನ್ಯಾಯವನ್ನು ಬೆಳೆಸುವುದು ಮುಂತಾದ ಪ್ರವೃತ್ತಿಗಳು ಭಾರತದ ಸಾಮಾಜಿಕ ಸನ್ನಿವೇಶದಲ್ಲಿ ಮಾಮೂಲಿ ವಿದ್ಯಮಾನ ಎಂಬಂತೆ ಬೆಳೆದು ನಿಂತವು. ಸ್ವಾತಂತ್ರ್ಯ ಬಂದ ಎರಡು ದಶಕಗಳೊಳಗೇ ಈ ಬಗೆಯ ವಿಪರೀತ ಬೆಳವಣಿಗೆಗಳು ಉಂಟಾಗಿ ಸ್ವಾತಂತ್ರ್ಯ ಬಂದ ಮೇಲೆ ಆದರ್ಶಮಯ ವಾತಾವರಣವೊಂದು ನೆಲೆಗೊಂಡು

'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬಂತಹ ಪರಿಸ್ಥಿತಿ ಉಂಟಾಗುತ್ತದೆಂದು ಭಾವಿಸಿದ್ದವರಿಗೆ ಉಂಟಾದ ಭ್ರಮೆ ನಿರಸನಕ್ಕೆ ಇರುವ ಕಾರಣಗಳನ್ನು ಈ ಕಾದಂಬರಿ ವಿವರವಾಗಿ ಚಿತ್ರಿಸುತ್ತಿದೆ.

ಒಟ್ಟು ೨೦ ಅಧ್ಯಾಯಗಳಿರುವ 'ಪಂಜರವಳ್ಳಿಯ ಪಂಜು' ಸರಳ ಸುಂದರ ಕಾದಂಬರಿ. ಜೈಲಿನಲ್ಲಿದ್ದ ಮೋಹನ, ಕೊಲೆ ಮೊಕದ್ದಮೆಯಿಂದ ಖುಲಾಸೆಯಾಗಿ, ಆತನ ಬಿಡುಗಡೆ ಸ್ವಾಗತಿಸಲು ಸೇರಿದ್ದ ಅಪಾರ ಅಭಿಮಾನಿಗಳ, ಹಿತೈಷಿಗಳ ವಂದನೆ ಸ್ವೀಕರಿಸಿ ಪ್ರತಿವಂದಿಸುತ್ತಲೇ ಪ್ರಾಣ ತೊರೆಯುವ ಉತ್ಕಟ ಹಂತದಲ್ಲಿ ಕತೆ ಮುಗಿಯುತ್ತದೆ.

"ಪಂಜರವಳ್ಳಿಯ ಪಂಜು ನಂದಿ ಹೋಯಿತು. ಸತ್ಯಕ್ಕೆ ಸೋಲಾಯಿತೆಂದು ಪವಿತ್ರಪುರದ ತಾಲ್ಲೂಕಿನ ಜನರು ನಿಟ್ಟುಸಿರು ಬಿಟ್ಟರು" ಎಂಬ ವಾಕ್ಯದೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯ ಯಾವ ಹಂತದಲ್ಲು ಮೋಹನನ ಧ್ಯೇಯ ನಿಷ್ಠೆಗಳನ್ನು ಜನ ಅನುಮಾನಿಸಿದಂತೆ ಕಾಣುವುದಿಲ್ಲ. ಹಾಗೆ ಅನುಮಾನ ಹುಟ್ಟಿಸಲು ಪ್ರಯತ್ನಿಸುವವರು ಪಟ್ಟಭದ್ರರಾದ ದುಷ್ಟ ವ್ಯಕ್ತಿಗಳು. ಹೀಗಿದ್ದರೂ ಮೋಹನನ ಜನಪ್ರಿಯತೆ 'ಕುಗ್ಗಿದಂತೆ ಕಾಣಿಸುವ ಪ್ರಸಂಗಗಳಿಲ್ಲ. ವಿದೇಶೀ ಮದ್ಯದ ಬಾಟಲು ಹೊಂದಿದ್ದಾನೆಂಬ ಕೃತಕ ಆರೋಪವನ್ನು ದುಷ್ಟ ವ್ಯಕ್ತಿಗಳು ಹೊರಿಸಲು ಯತ್ನಿಸಿದಾಗ, ಮೋಹನನ ಬೆಂಬಲಿಗರ ಆಕ್ರೋಶ ಕಂಡು ಪಿತೂರಿಯಲ್ಲಿ ಶಾಮೀಲಾಗಿದ್ದ ಪೊಲೀಸರು ಜಾಮೀನಿನ ಮೇಲೆ ಸ್ಥಳದಲ್ಲೇ ಬಿಡುಗಡೆ ಮಾಡುವ ಅನಿವಾರ್ಯತೆಗೆ ಈಡಾಗುತ್ತಾರೆ.

ಮೋಹನನಿಗೆ ವಿಷಪ್ರಾಶನ ಮಾಡಿಸಿ ಕೊಲ್ಲುವ ಸಂಚು ಕೂಡ ದೈವವಶಾತ್ ಎಂಬಂತೆ ತಪ್ಪಿಹೋಗುತ್ತದೆ. ಸುಳ್ಳು ಕೊಲೆ ಮೊಕದ್ದಮೆಯಲ್ಲಿ ಬಂಧಿತನಾದರೂ ಕೂಡ ವಿಚಾರಣೆಯಲ್ಲಿ ಆಪಾದನೆ ಧೃಢಪಡದೆ ಖುಲಾಸೆಯಾಗುತ್ತದೆ.

ತಾಲ್ಲೂಕು ಕಾಂಗ್ರೆಸ್ ಕಮಿಟಿಯಲ್ಲಿ ಕಪಟ ದೇಶಭಕ್ತರೇ ತುಂಬಿಕೊಂಡು, ಮೋಹನನನ್ನು ಕಾಂಗ್ರೆಸ್ಸಿಂದ ವಜಾ ಮಾಡಿಸಲು ನಡೆಸುವ ಪ್ರಯತ್ನದಲ್ಲಿಯೂ ಮೋಹನನ ಪಕ್ಷ ನಿಷ್ಠೆ ಬಲ್ಲ ರಾಜ್ಯ ಸಮಿತಿಯವರು, ಕಪಟಿಗಳಿಗೆ ಮುಖ ಭಂಗ ಮಾಡುತ್ತಾರೆ.

ಒಟ್ಟು ಕಥೆಯ ನಡಿಗೆಯಲ್ಲಿ ಸತ್ಯವಂತರಿಗೆ ಸೋಲಾದ ಘಟನಾವಳಿಗಳು ಕಮ್ಮಿ. ಹಾಗೆ ನೋಡಿದರೆ ಸಜ್ಜನ ಪಾತ್ರಗಳು ಅನುಭವಿಸುವ ಸಂಕಷ್ಟಗಳು ಹೆಚ್ಚು.

ಗಿರಿಯಪ್ಪಗೌಡನ ಜೀವನ ಸುಖ ಕಾಣದೆ ಕೊನೆಗೊಳ್ಳುತ್ತದೆ. ಅದಕ್ಕೆ ಕಾರಣ ನರಭಕ್ಷಕ ಹುಲಿ. ಮನೆ ತೊರೆದು ಬಂದು ಕಾಡಲ್ಲಿ ಒಂಟಿಯಾಗಿ ಬದುಕಬೇಕಾದ ದುರ್ಭರ ಸ್ಥಿತಿಯನ್ನು ದುರಾಶಾಪೀಡಿತ ತಮ್ಮನಾದ ಕಾಳೇಗೌಡ ಒಡ್ಡಿದ್ದರಿಂದಲೇ ಗಿರಿಯಪ್ಪ ಅಂತಹ ದುರಂತ ಅಂತ್ಯ ಕಾಣಬೇಕಾಗಿ ಬಂತು ಎಂಬ ಕಾರ್ಯಕಾರಣ ಸಂಬಂಧ ಹುಡುಕಲು ಸಾಧ್ಯವಿದೆಯಾದರೂ ಆತ ಬಲಿಯಾಗಿದ್ದು ಮಾತ್ರ ನೈಸರ್ಗಿಕ ಶಕ್ತಿಗೆ.

ಹೀಗಿದ್ದರೂ ಗಿರಿಯಪ್ಪನ ಮುಂದಿನ ತಲೆಮಾರುಗಳು ಉಪವಾಸ ಬೀಳಲಿಲ್ಲ. ಸಿದ್ದಣ್ಣ ಗೇಣಿದಾರರ ನಾಯಕನಾಗಿ ರೂಪುಗೊಂಡ. ದೇಶದ್ರೋಹದ ಆಪಾದನೆಯಲ್ಲಿ ಕೊರಗಿ ಜೈಲಿನಲ್ಲಿ ತೀರಿಕೊಂಡರೂ ಸಿದ್ದಣ್ಣನ ವ್ಯಕ್ತಿತ್ವ ಘನತೆಗೇನೂ ಚ್ಯುತಿ ಬರಲಿಲ್ಲ. ಸಾಮಾನ್ಯ ಗೇಣಿದಾರ ಸಿದ್ದಣ್ಣನ ಮಗ ಗಾಂಧೀವಾದಿಯಾಗಿ, ಇಡೀ ತಾಲ್ಲೂಕಿಗೇ ಜನನಾಯಕನಾಗಿ ರೂಪುಗೊಂಡ. ದುಷ್ಟ ಶಕ್ತಿಗಳು ಹೆಣೆದ ಪಿತೂರಿಗಳಿಂದ ದುಃಖಿತನಾಗಿ ಆತ ದಣಿದನೇ ಹೊರತು, ಆತ ನಂಬಿದ ಜನ ಸಾಮಾನ್ಯರೇನೂ ಮೋಹನನನ್ನು ಪರಿತ್ಯಜಿಸಲಿಲ್ಲ. ಸಾತ್ವಿಕ ಮನಃಸ್ಥಿತಿಯ ಈ ಸಜ್ಜನ ಪಾತ್ರಗಳು ಬದಲಾಗುತ್ತಿರುವ ಸಮಾಜ ಒಡ್ಡುವ ತೀವ್ರತರ ಮೌಲ್ಯ ಸಂಘರ್ಷದಲ್ಲಿ, ಅಧಿಕಾರ ಸಂರಚನೆಗೂ–ಬಡ ಜನರಿಗೂ ಏರ್ಪಡುವ ತಿಕ್ಕಾಟದಲ್ಲಿ ಸಿಲುಕಿ ಬವಣೆ ಪಟ್ಟಿದ್ದು ಹೌದಾದರೂ ಸತ್ಯಕ್ಕೆ ಸೋಲಾಯಿತು ಎಂಬುದಕ್ಕಿಂತಲೂ ಸತ್ಯವಂತರಿಗಿದು ಕಾಲವಲ್ಲ ಎಂಬುದನ್ನು ಮಾತ್ರ ಈ ಕಾದಂಬರಿ ದೃಢವಾಗಿ ಬಿಂಬಿಸುತ್ತದೆ.

ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶದಲ್ಲಿ ದುಷ್ಟ ಶಕ್ತಿಗಳು, ಜನರ ಸಂಪತ್ತು ಕಬಳಿಸಿ ಸಿರಿವಂತರಾದವರು, ಸಮಾಜ ನಿಷ್ಠೆಯಿಲ್ಲದಿದ್ದರೂ ವಂಚನೆಯಿಂದ ಅಧಿಕಾರ ಅನುಭವಿಸುವವರು ಮುಂತಾದವರು ತಮ್ಮ ಪ್ರಾಬಲ್ಯದಿಂದ ವಿಜೃಂಭಿಸಲು ಪ್ರಯತ್ನಿಸುತ್ತಿರುವ ವಾಸ್ತವವನ್ನು ಇಲ್ಲಿ ಕಾಣಬಹುದು. ಸಮಾಜದೊಳಗೆ ಅಂತಹವರ ಬಗ್ಗೆ ಇರಬೇಕಾದ ತಿರಸ್ಕಾರ ಬಹಿರಂಗವಾಗಿ ಕಂಡುಬರದೆ, ಜನರೂ ಕೂಡ ಸಂದರ್ಭ ಸಾಧಕರಂತೆ ಅವರ ಹಿಂದೆ ಬೀಳುವುದನ್ನು ರೂಢಿ ಮಾಡಿಕೊಳ್ಳುತ್ತಿರುವ ಪ್ರವೃತ್ತಿಯನ್ನೂ ಕಾದಂಬರಿ ಗುರುತಿಸುತ್ತಿದೆ.

ಸ್ವಾತಂತ್ರ್ಯ ಹೋರಾಟ ಮತ್ತು ಆ ನಂತರ ದೊರಕಿದ ಸ್ವಾತಂತ್ರ್ಯದ ಬಗ್ಗೆ ತೀವ್ರ ನಿರೀಕ್ಷೆಗಳನ್ನು ಹೊಂದಿದ್ದ ಆದರ್ಶವಾದಿ ತಲೆಮಾರಿನ ಮನೋಭಾವದ ಪ್ರಕಟರೂಪದಂತೆ 'ಪಂಜರವಳ್ಳಿಯ ಪಂಜು' ಕಾದಂಬರಿ ಕಾಣಿಸುತ್ತದೆ. ಮೋಹನನಿಗೆ ದೊಡ್ಡ ಅಧಿಕಾರದ ಹುದ್ದೆಗಳು ದೊರೆಯುವುದಿಲ್ಲ. ಮೋಹನನ ತಾಯಿ ಮರಣ ಶಯ್ಯೆಯಲ್ಲಿರುವಾಗ ನೋಡಲು ಬಂದ ಮೋಹನನ ಗೆಳೆಯ ಶಾಸ್ತ್ರೀಯ ಬಳಿ

‘ಮಗ ಮಂತ್ರಿಯಾಗುತ್ತಾನೆಂದು ಕನಸು ಕಂಡಿದ್ದೆ. ಅವನು ಜೈಲು ಪಾಲಾದ’ ಎಂಬ ಹತಾಶೆ ವ್ಯಕ್ತಪಡಿಸುತ್ತಾಳೆ.

ಅದೊಂದು ಬಗೆಯಲ್ಲಿ ಸಾಂಕೇತಿಕ ಅಭಿವ್ಯಕ್ತಿ ಎನ್ನಬಹುದು. ಒಳ್ಳೆಯವರು, ಜನರ ಹಿತಕ್ಕಾಗಿ ತ್ಯಾಗ ಮಾಡಿದವರು ನಿಸ್ವಾರ್ಥ ಸ್ವಭಾವದವರು ರಾಜ್ಯ ಸೂತ್ರಗಳನ್ನು ಹಿಡಿದು ಸುಖೀ ಸಮಾಜ ನಿರ್ಮಿಸುತ್ತಾರೆ ಎಂದು ರಮ್ಯವಾಗಿ ಕನಸು ಕಂಡಿದ್ದ ಜನ, ಅದಕ್ಕೆ ಭಿನ್ನವಾದ ಬೆಳವಣಿಗೆಗಳು ಸಮಾಜದಲ್ಲಿ ಉಂಟಾದಾಗ ಅನುಭವಿಸುವ ಭ್ರಮನಿರಸನವನ್ನು ಒಟ್ಟಾರೆಯಾಗಿ ಈ ಕಾದಂಬರಿ ಧ್ವನಿಸುತ್ತಿದೆ.

ಮೋಹನನ ಪಾತ್ರ ಸ್ವಾತಂತ್ರ್ಯಾನಂತರದ ಕಾಲದಲ್ಲಿ ಹೆಚ್ಚು ಕಾಲ ಪ್ರಭಾವವುಳಿಸಿಕೊಳ್ಳಲು ಸಾಧ್ಯವಾಗದೇ ಹೋದ ಚಾರಿತ್ರ್ಯವಂತ ರಾಜಕಾರಣ, ಸಮಾಜ ಸೇವಕರ ತಲೆಮಾರಿನ ಪ್ರತಿನಿಧೀಕರಣವಾಗಿದೆ.

ಜಾತಿ ಬಲ, ಅಕ್ರಮ ಸಂಪತ್ತಿನ ಬಲ, ಲಂಚ ರಿಷುವತ್ತುಗಳು, ಸ್ವಜನ ಪಕ್ಷಪಾತಗಳು ಒಟ್ಟಾರೆಯಾಗಿ ಕಾಂಗ್ರೆಸ್‌ನಂತಹ ಪಕ್ಷದೊಳಗೆ ಬೇರು ಬಿಡತೊಡಗಿದೊಡನೆ, ಗಾಂಧೀವಾದ, ಗಾಂಧಿ ಮಾದರಿಗಳು ಅಪ್ರಸ್ತುತವಾಗತೊಡಗಿದವು. ಇಂತಹ ಸನ್ನಿವೇಶವನ್ನು ಮೋಹನನ ಜೀವನಾನುಭವ ಮಂಡಿಸುವ ಮುಖಾಂತರ ‘ಪಂಜರವಳ್ಳಿಯ ಪಂಜು’ ಅತ್ಯಂತ ವಿಷಾದದಿಂದ, ಭ್ರಮನಿರಸನದ ತೀವ್ರತೆಯಿಂದ ಕಟ್ಟಿಕೊಡುತ್ತಿದೆ.

‘ಪಂಜರವಳ್ಳಿಯ ಪಂಜು’ ಒಂದು ಅನುಭವನಿಷ್ಠ ವಾಸ್ತವವಾದಿ ಕಾದಂಬರಿಯಾಗಿ ಹಲವು ಮಗ್ಗಲುಗಳಿಂದ ಅರ್ಥಪೂರ್ಣ ಓದಿನ ಅನುಭವ ಕೊಡುತ್ತದೆ. ಬರವಣಿಗೆಯ ಶೈಲಿ ಅಚ್ಚುಕಟ್ಟಾಗಿದ್ದು, ಕಥಾ ನಿರೂಪಣೆ, ಪ್ರಸಂಗಗಳ ಚಿತ್ರಣ ಎಲ್ಲವೂ ಇದೇ ಅಚ್ಚುಕಟ್ಟುತನವನ್ನು ಪಡೆದುಕೊಂಡಿದೆ. ವರ್ಣನೆ ಅಥವಾ ವಿವರಣೆ ಎಲ್ಲೂ ಹದ ತಪ್ಪಿ ಲಂಬಿತವಾಗಿಲ್ಲ. ನವೋದಯ ಕಾಲಘಟ್ಟದ ಬರವಣಿಗೆಯ ಶೈಲಿಯ ಪ್ರಭಾವವನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಕಡಿದಾಳ್ ಮಂಜಪ್ಪನವರು ಸ್ವತಃ ರಾಜಕಾರಣಿಯಾಗಿದ್ದರು ಎಂಬುದನ್ನು ಮರೆತು ಓದಿದರೆ ಒಂದು ಕಾಲಘಟ್ಟದ ರಾಜಕೀಯ-ಸಾಮಾಜಿಕ ಸನ್ನಿವೇಶದಲ್ಲಿ ಉಂಟಾಗತೊಡಗಿರುವ ಪಲ್ಲಟಗಳ ಕಲಾತ್ಮಕ ದಾಖಲಾತಿಯಾಗಿ ಇದು ಯಶಸ್ವಿಯಾಗಿದೆ.

ಒಂದು ತಾಲೂಕಿನ ಕಾಂಗ್ರೆಸ್ ಕಮಿಟಿಯ ವಿದ್ಯಮಾನಗಳನ್ನು ವಿವರಿಸುತ್ತಲೇ, ಒಟ್ಟಾರೆಯಾಗಿ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸ್ವಭಾವ ಹಾಗೂ ಸಂರಚನೆಯಲ್ಲಿ

ಕಂಡು ಬರತೊಡಗಿದ್ದ ಅಧಃಪತನವನ್ನು ಗ್ರಹಿಸಲು ಅಗತ್ಯವಾದ ವಸ್ತುನಿಷ್ಠ ನಿರೂಪಣೆಯನ್ನು ಇದು ಹೊಂದಿದೆ. ಸ್ವತಃ ಕಾಂಗ್ರೆಸ್ಸಿಗರಾಗಿದ್ದ ಕಡಿದಾಳ್ ಮಂಜಪ್ಪನವರು ಅದರ ವಿದ್ಯಮಾನಗಳನ್ನು ಹತ್ತಿರದಿಂದ ಬಲ್ಲವರು. ಹಾಗಾಗಿ ಕಾದಂಬರಿಯ ವಿವರಗಳು ಉತ್ಪ್ರೇಕ್ಷೆಯಂತೆ ಎಲ್ಲೂ ಭಾಸವಾಗುವುದಿಲ್ಲ.

ಹಾಗೆ ನೋಡಿದರೆ ಇವತ್ತಿನ ರಾಜಕಾರಣ, ಇವತ್ತಿನ ರಾಜಕೀಯ ಪಕ್ಷಗಳು, ಕಾಂಗ್ರೆಸ್ಸೂ ಸೇರಿದಂತೆ ಬೇರೆ ಬೇರೆ ಪಕ್ಷಗಳ ಧುರೀಣರ, ಮಂತ್ರಿ ಮಾನ್ಯರ ಗುಣ ಸ್ವಭಾವ ಹಾಗೂ ವ್ಯಕ್ತಿತ್ವಗಳ ಬಗೆಯನ್ನು ನೋಡಿದರೆ 'ಪಂಜರವಳ್ಳಿಯ ಪಂಜು' ಈ ಬೃಹದಾಕಾರಿ ಅಧಃಪತನದ ಆರಂಭಿಕ ಪರ್ವವನ್ನು ಅತ್ಯಂತ ಸಮರ್ಥವಾಗಿ ಮಂಡಿಸಿ, ಆ ಮೂಲಕ ಭವಿಷ್ಯದಲ್ಲಿ ಸಂಭವಿಸಬಹುದು ಎಂದು ಭಾವಿಸಿದ ಬೆಳವಣಿಗೆಗಳನ್ನು ಶುದ್ಧ ರಾಜಕೀಯ ಘಟನಾವಳಿಗಳ ಮುಖಾಂತರವಾಗಿಯೇ ನಿರೂಪಿಸಿದೆ.

ಇದೊಂದು ಕುಟುಂಬ ತಲೆಮಾರುಗಳ ಕಥನವಾಗಿ, ನಿರ್ದಿಷ್ಟ ಸಾಮಾಜಿಕ ಸಂದರ್ಭದ ವಸ್ತುನಿಷ್ಠ ದಾಖಲಾತಿಯಾಗಿ, ಕಾಂಗ್ರೆಸ್ ಪಕ್ಷ ಹಾಗೂ ಗಾಂಧಿ ಆದರ್ಶಗಳು ನಿರ್ಬಲಗೊಳ್ಳುವ ಪ್ರಕ್ರಿಯೆಯ ವಿವರಣೆಯಾಗಿ, ಆದರ್ಶವಾದಿ ಧುರೀಣರ ಭ್ರಮನಿರಸನದ ನಿರೂಪಣೆಯಾಗಿ, ಒಂದು ಪ್ರದೇಶದ ಜನಜೀವನದಲ್ಲಿ ಬರುವ ಮೌಲ್ಯ ವ್ಯವಸ್ಥೆಯ ಪಲ್ಲಟಗಳ ರೇಖಾಚಿತ್ರವಾಗಿ ಓದುಗರಿಗೆ ಅರ್ಥಪೂರ್ಣವಾಗುತ್ತದೆ.

ಅದು ನೈಜೀರಿಯಾ, ಕೆನ್ಯಾಗಳ ಆಫ್ರಿಕಾ ಖಂಡದಲ್ಲಾಗಬಹುದು ಅಥವಾ ಬಾಂಗ್ಲಾ, ಭಾರತ, ಪಾಕಿಸ್ತಾನಗಳ ಏಷ್ಯಾ ಖಂಡದಲ್ಲಾಗಬಹುದು – ಅಪಾರ ಶ್ರಮದಿಂದ, ತ್ಯಾಗ ಬಲಿದಾನಗಳಿಂದ, ಆದರ್ಶಗಳ ಕನಸುಗಾರಿಕೆಯಿಂದ ಗಳಿಸಿಕೊಂಡ ಸ್ವಾತಂತ್ರ್ಯವೆಂಬುದು, ಸ್ವಾತಂತ್ರ್ಯದ ಆಶಯಗಳನ್ನೇ ವಿರೋಧಿಸಿದ್ದ ಜನ ವಿರೋಧಿ ಶಕ್ತಿಗಳ ಕೈಯೊಳಗಿನ ದಾಳವಾಗಿ, ಜನರ ನಿರೀಕ್ಷೆಗಳೆಲ್ಲ ನಿರಾಶೆಯಾಗಿ ಮಾರ್ಪಟ್ಟ ದಿಸೆಯಲ್ಲಿ ಹಲವಾರು ಮಾಜಿ ವಸಾಹತು ದೇಶಗಳ ಸಾಮಾಜಿಕ ರಾಜಕೀಯ ಅನುಭವಗಳಲ್ಲಿ ಬಹಳಷ್ಟು ಸಾಮ್ಯತೆ ಇದೆ. ಗೂಗಿ ವಾ ಥಿಯಾಂಗೋನ 'ದೇಗುಲದಲ್ಲಿ ದೆವ್ವ' (Devil on the Cross ಅನುವಾದ) ಕಾದಂಬರಿ ೧೯೭೦ ರಲ್ಲಿ ಬರೆಯಲ್ಪಟ್ಟಿದ್ದು ಹೆಚ್ಚೂ ಕಮ್ಮಿ ಇಂತಹುದೇ ವಿಪರ್ಯಾಸಕರ ರಾಜಕೀಯ-ಸಾಮಾಜಿಕ ಬೆಳವಣಿಗೆಯನ್ನು ಸೂಚಿಸುತ್ತದೆ. ಸರಿ ಸುಮಾರು ಅದೇ ಅವಧಿಯಲ್ಲಿ ಬರೆಯಲ್ಪಟ್ಟ 'ಪಂಜರವಳ್ಳಿಯ ಪಂಜು' ಭಾರತದ ಕರ್ನಾಟಕದ ಘಟ್ಟಗಳ ನಡುವಿನ ತಾಲ್ಲೂಕೊಂದರ ಕಥೆ ಹೇಳುತ್ತಿದೆಯಾದರೂ ಜಗತ್ತಿನ ಮಾಜಿ ವಸಾಹತು ಸಮಾಜಗಳ ಸಮಾನ ವ್ಯಥೆಯನ್ನು ಇದು ನುಡಿಸುತ್ತಿದೆ ಎಂಬ ಅಂಶವನ್ನು ನಾವಿಲ್ಲಿ ಗಮನಿಸಬಹುದು.

# ವರ್ತಮಾನದ ಅಲಿಗರಿ 'ನಾಳೆಯ ನೆಳಲು'

–ಡಾ.ವಿ.ಚಂದ್ರಶೇಖರ ನಂಗಲಿ

ಕವಿ ಮತ್ತು ಸಹೃದಯರ ನಡುವೆ ಜಾಡಿಗೆ ಬಿದ್ದಿರುವ ಸಂವಹನ ವ್ಯವಸ್ಥೆಯನ್ನು 'ಕಾವ್ಯ ಸಂಪ್ರದಾಯ' ಗಳೆಂದು ಕರೆಯುವುದುಂಟು. ಹಂಸಕ್ಷೀರ, ಹಂಸಗೀತೆ ಎಂದೊಡನೆ ಅವುಗಳ ಅರ್ಥವ್ಯಾಪ್ತಿ ಏನೆಂಬುದು ನಿಘಂಟುವಿನ ಶಬ್ದಾರ್ಥಗಳಂತೆ ಪೂರ್ವ ಸಿದ್ಧವಾಗಿರುತ್ತದೆ, ಇದನ್ನು ವಿವರಿಸಲು ಕವಿಯಾಗಲಿ, ಸಹೃದಯರಾಗಲಿ ವಿಶೇಷ ಸಿದ್ಧಿಯನ್ನು ಗಳಿಸಬೇಕಾಗಿಲ್ಲ .ಕಾವ್ಯಮೀಮಾಂಸೆಯಲ್ಲಿ 'ಅಲಿಗರಿ' ಅಥವಾ 'ಅಲಿಗರೀಕರಣ' ವೆಂದು ಕರೆಯಲ್ಪಡುವ ಅಭಿವ್ಯಕ್ತಿ ವಿಧಾನವು ಕೂಡ ಕಾವ್ಯಸಂಪ್ರದಾಯವೇ ಆಗಿದೆ. ನಮ್ಮಲ್ಲಿ ಪ್ರಚಲಿತವಿರುವ 'ಆತ್ಮರಾಮಾಯಣ' ಮತ್ತು ಶಿಶುಮಾಯಣನ 'ತ್ರಿಪುರದಹನ ಸಾಂಗತ್ಯಗಳು ಅಲಿಗರೀಕರಣದ ಅಭಿವ್ಯಕ್ತಿಗಳಾಗಿವೆ, ಇಂಥ ಕಡೆಗಳಲ್ಲಿ ಕಾವ್ಯಾರ್ಥವು ರಿಮೋಟ್ ಕಂಟ್ರೋಲಿಗೆ ಒಳಪಟ್ಟಂತೆ ಏಕರೂಪಿಯಾಗಿರುತ್ತದೆ ,ಎಲ್ಲ ಕಾಲ–ದೇಶಗಳಲ್ಲಿ, ಎಲ್ಲ ಸಹೃದಯ ಸಮುದಾಯಕ್ಕೆ ನಿರ್ದಿಷ್ಟವಾದ ಏಕಾರ್ಥವೊಂದನ್ನು ಬಿಂಬಿಸುತ್ತಾ, ಸಿಗ್ನಲ್ ಲೈಟುಗಳಂತೆ ಸ್ಥಾವರವಾಗಿರುತ್ತದೆ. ಈ 'ಕಾವ್ಯ ಸಂಪ್ರದಾಯ' ಮಾರ್ಗದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಲೇಖಕರನ್ನು ಇಕ್ಕಟ್ಟಿಗೆ ಸಿಲುಕಿಸುವ ಇಂಥ ಮಾರ್ಗಗಳಿಂದ ಪ್ರಜ್ಞಾಪೂರ್ವಕವಾಗಿ ವಿಮುಖವಾಗಬೇಕು. ಇಲ್ಲದಿದ್ದರೆ ವಿಶಿಷ್ಟವಾದ ಜೀವನಾನುಭವಗಳು 'ಅಲಿಗರಿ'ಗಳೆಂಬ ಕುಂಡಗಳಲ್ಲಿ 'ಸಿದ್ಧವಸ್ತು'ಗಳಾಗಿ ಉಳಿದುಬಿಡುತ್ತವೆ. ಅಧ್ಯಾತ್ಮವಿಚಾರಗಳನ್ನು ಸಿದ್ಧತತ್ವಗಳನ್ನಾಗಿ ಮಾಡಿ ಅಲಿಗರೀಕರಣಕ್ಕೆ ಒಳಪಡಿಸಿರುವಂತೆಯೇ, ರಾಜಕೀಯ ವಿಚಾರಗಳನ್ನು ಸಿದ್ಧಕ್ರಿಯೆ ಮತ್ತು ಸನ್ನಿವೇಶಗಳಲ್ಲಿ ಅಳವಡಿಸಿ, ಅಲಿಗರೀಕರಣದ ಮೂಲಕ ಕಾದಂಬರಿಯೊಂದನ್ನು ಬರೆಯಬಹುದೆಂಬುದಕ್ಕೆ ಶ್ರೀಯುತ ಕಡಿದಾಳ್ ಮಂಜಪ್ಪ ಅವರ 'ನಾಳೆಯ ನೆಳಲು'–ಎಂಬ ಕೃತಿ ನಿದರ್ಶನವಾಗಿದೆ.

"ನನ್ನಲ್ಲಿ ಸಾಹಿತ್ಯ ಸಂಪತ್ತಿಲ್ಲ ಅನುಭವ ತಕ್ಕಷ್ಟಿದೆ. ನನ್ನ ಅನುಭವವನ್ನು ನನಗೆ ತೋಚಿದ ರೀತಿಯಲ್ಲಿ ಕಾದಂಬರಿಗೆ ಅಳವಡಿಸಿದ್ದೇನೆ ." (ಮುನ್ನುಡಿಯಿಂದ) ಎಂಬ ಮಾತುಗಳಲ್ಲಿ ಕಾದಂಬರಿಕಾರನ ನಮ್ರತೆ ಮತ್ತು ಮಿತಿ ಎರಡೂ ಬಿಂಬಿತವಾಗುತ್ತದೆ.

'ಸಂಗತಿ ಸತ್ಯ' ಮತ್ತು ' ಕಲ್ಪನಾ ರಮ್ಯತೆ'ಗಳು ಎರಡು ವಿರುದ್ಧ ಧ್ರುವಗಳೆಂದು ತಿಳಿಯಬಾರದು. ಹಸುರು ತಿಂದು ತೆವಳುವ ಕಂಬಳಿ ಹುಳು ಕೋಶಾವಸ್ಥೆಯನ್ನು ದಾಟಿದ ಬಳಿಕ ಹೂವಿಂದ ಹೂವಿಗೆ ಹಾರಾಡುತ್ತಾ ಮಧುರ ಮಕರಂದವನ್ನು ಹೀರುವ ಚಿಟ್ಟೆಯಾಗುವಂತೆಯೇ, ಸಂಗತಿ ಸತ್ಯಗಳು ಕವಿ ಹೃದಯದ ಕೋಶಾವಸ್ಥೆಯನ್ನು ದಾಟಿದ ಬಳಿಕ ಕಲ್ಪನಾ ರಮ್ಯವಾದ ಕ್ರಿಯೆ ಮತ್ತು ಸನ್ನಿವೇಶಗಳಾಗಿ ಪರಿವರ್ತನೆಗೊಳ್ಳುತ್ತವೆ. ಇದಕ್ಕೆ ಕುವೆಂಪು ಕಾದಂಬರಿಗಳು ಅತ್ಯುತ್ತಮ ನಿದರ್ಶನಗಳಾಗಿವೆ. ಹೂವಯ್ಯ–ಸೀತೆ, ಸೇರೆಗಾರ ರಂಗಪ್ಪ ಸೆಟ್ಟರು– ಮಾಯಕಾರ್ತಿ ಗಂಗೆ, ಚಂದ್ರೇಗೌಡರು–ಸುಬ್ಬಮ್ಮ, ನಾಯಿಗುತ್ತಿ–ತಿಮ್ಮಿ, ಐತ–ಪೀಂಚಲು, ಬಾಡುಗಳ್ಳ ಸೋಮ, ದೈತ್ಯ ಪುಟ್ಟಣ್ಣ ಮುಂತಾದ ಪಾತ್ರಗಳು ಸಂಗತಿ ಸತ್ಯ ಮತ್ತು ಕಲ್ಪನಾ ರಮ್ಯತೆಯ ಅದ್ವೈತ ಸಿದ್ಧಿಯಾಗಿದೆ. ಆದರೆ, ಸಂಗತಿ ಸತ್ಯಗಳನ್ನು ಪ್ರಜ್ಞಾಪೂರ್ವಕವಾಗಿ ಕಲ್ಪನಾ ರಮ್ಯತೆಗೊಳಪಡಿಸುವ ರಭಸಮತಿಗೆ 'ಅಲಿಗರೀಕರಣ' ಮಾರ್ಗವೇ ಕಾಲ್ತೊಡಕಾಗುತ್ತದೆ.

"ಇಂದು ಕೆಲವು ಕಡೆಗಳಲ್ಲಿ ಸಾರ್ವಜನಿಕ ಜೀವನದಲ್ಲಿ ನಡೆಯುತ್ತಿರುವ ಅನಾಚಾರಗಳನ್ನೂ, ಅಕೃತ್ಯಗಳನ್ನೂ ತ್ವರಿತವಾಗಿ ತಡೆಗಟ್ಟದಿದ್ದರೆ, ಇನ್ನು ಕೇವಲ ಹತ್ತು ವರ್ಷಗಳಲ್ಲಿ ಅಹಿತ ಪೈಪೋಟಿ ಯಾವ ರೂಪವನ್ನು ತಾಳಬಹುದೆಂಬುದನ್ನು ಈ ಕಾದಂಬರಿಯು ನಿರೂಪಿಸುತ್ತದೆ. ಇದೊಂದು ಭವಿಷ್ಯವನ್ನು ಕುರಿತು ಬರೆದ ಕಾಲ್ಪನಿಕತೆ. ಕತೆಯಲ್ಲಿ ಕಾಣುವ ವ್ಯಕ್ತಿಗಳು ಕಾಲ್ಪನಿಕ ವ್ಯಕ್ತಿಗಳೆಂಬುದು ಕತೆಯನ್ನು ಓದಿದವರಿಗೆ ವೇದ್ಯವಾಗುತ್ತದೆ " (ಮುನ್ನುಡಿಯಿಂದ)

ಶ್ರೀಯುತ ಕಡಿದಾಳ್ ಮಂಜಪ್ಪನವರದು ಕುವೆಂಪು ಮಾರ್ಗವಲ್ಲ! ಶಿಶು ಮಾಯಣ್ಣನ 'ತ್ರಿಪುರ ದಹನ ಸಾಂಗತ್ಯ'ದ ಮಾರ್ಗವನ್ನು ಆಯ್ಕೆ ಮಾಡಿಕೊಂಡಿರುವ ಕಡಿದಾಳ್ ಮಂಜಪ್ಪನವರು ಕಾದಂಬರಿಯ ಪಾತ್ರಗಳಿಗೆ ಅದೇ ಮಾದರಿಯ ಹೆಸರುಗಳನ್ನಿಟ್ಟಿದ್ದಾರೆ ! ಹೇಮಾವತಿ ರಾಜ್ಯದ ಎರಡು ಊರುಗಳು : ಜಿತೇಂದ್ರಪುರ ಮತ್ತು ನಿಂಬೂರು. ಜಿತೇಂದ್ರಪುರದವರಾದ ದುರ್ಗಾದಾಸ ನಿರ್ಮಲಾದೇವಿಯವರ ಮಗ ಜಯಸಿಂಪ. ನಿಂಬೂರಿನವರಾದ ಶಂಭು ಮತ್ತು ದಾಮೋದರ ಕ್ರಮೇಣ ಹೇಮಾವತಿ ರಾಜ್ಯವನ್ನು ಆಕ್ರಮಿಸಿಕೊಳ್ಳುತ್ತಾರೆ. ಹೇಮಾವತಿ ರಾಜ್ಯವೆಂಬ ಕೊಡಹಾಲಿಗೆ ಕಾಲವೇ ಹಿಂಡಿದ ನಿಂಬೂರಿನ ಹುಳಿಯ ಎರಡು ತೊಟ್ಟುಗಳಂತೆ ಶಂಭು–ದಾಮೋದರ ಕಾಣುತ್ತಾರೆ. ಇವರ ಪರಿವಾರದ ನಾಮಕರಣವೂ ಹೀಗೆ ಇದೆ.ಅನಿಷ್ಟಕೂಟದ ಅಂಗಾರಕರು: ದಾಮೋದರ, ಶಂಭು, ಹೆಮ್ಮರ, ಕೆಮ್ಮಾರ, ಜಲೋದರ, ಗಾಂಢೀವ,

ಪಟವಾರ, ಮಹೋದರ ಮುಂತಾದವರು ರಾಜಕೀಯ ಮುಂಚೂಣಿ ವರ್ಗದವರಾಗಿದ್ದರೆ, ದುರ್ಗದಾಸ, ನಿರ್ಮಲಾದೇವಿ, ಜಯಸಿಂಹ, ಭಾರ್ಗವದಾಸ, ಅಮರ್‌ಚಂದ್, ಪ್ರತಾಪ್‌ರಾಜ್, ಸೋಮಶೇಖರ್, ಭಗವಾನ್‌ದಾಸ್ ಮುಂತಾದವರು ಕ್ರಮೇಣ ಹಿನ್ನೆಲೆಗೆ ಸರಿದು ಹಿಂಚೂಣಿ ವರ್ಗದವರಾಗಿ ಬೀಡುತ್ತಾರೆ, ಇಂಥ ಮುಂಚೂಣಿ ಮತ್ತು ಹಿಂಚೂಣಿ ವರ್ಗದ ಮೇಲಾಟ-ಹೋರಾಟಗಳೇ ಇಡೀ ಕಾದಂಬರಿಯಲ್ಲಿ ದುರ್ಜನ-ಸಜ್ಜನ ಸಂಗ್ರಾಮವಾಗಿ ವಿಸ್ತರಿಸಿಕೊಂಡಿದೆ.

ಭವಿಷ್ಯ ರಾಜಕಾರಣದ ಭಯಾನಕತೆಯ ಸ್ವರೂಪಕ್ಕೆ ಕನ್ನಡಿ ಹಿಡಿದಂತೆ ರೂಪುಗೊಂಡಿರುವ 'ನಾಳೆಯ ನೆಳಲು' ಎಂಬ ಕಾದಂಬರಿಗೆ ಸಂಬಂಧಪಟ್ಟಂತೆ ಕುವೆಂಪು ಅವರ ಬದುಕಿನಿಂದ ಉದಾಹರಣೆಯೊಂದನ್ನು ಕೊಡಬಹುದು.. ಇದನ್ನು ಹೇಳಿದವರು ಕುವೆಂಪು ಅವರ ಷಡ್ಡಕರು ಮತ್ತು ನ್ಯಾಯ ಮೂರ್ತಿಗಳಾದ ಶ್ರೀಯುತ ಎನ್.ಡಿ. ವೆಂಕಟೇಶ್‌ಅವರು. ಕುವೆಂಪು ಅವರಿಗೆ ತೊಂಬತ್ತು ವರ್ಷಗಳಾದ ಸಂದರ್ಭದಲ್ಲಿ ೧೨.೩.೧೯೯೪ ರಂದು ಕುಪ್ಪಳಿಯಲ್ಲಿ ವಿಶಿಷ್ಟವಾದ ಸಮಾರಂಭ ಮತ್ತು ವಿಚಾರಸಂಕಿರಣಗಳನ್ನು ಅಣಿಗೊಳಿಸಲಾಗಿತ್ತು. ಆಗ ಉದ್ಘಾಟನೆ ಮಾಡುತ್ತಾ ಮಾತನಾಡಿದ ಎನ್.ಡಿ.ವೆಂಕಟೇಶ್ ಅವರು ಒಮ್ಮೆ ಕುವೆಂಪು ಅವರೊಂದಿಗೆ ಕಾರಿನಲ್ಲಿ ಹೋಗುತ್ತಿದ್ದಾಗ ಮಾವುತನೊಬ್ಬ ಸಾಕಿಕೊಂಡಿದ್ದ ಕುರುಡಾನೆಯೊಂದು ಎದುರಾದದ್ದು, ಆ ಆನೆಯ ಎರಡೂ ಕಣ್ಣುಗಳಲ್ಲಿ ರೊಯ್ಯನೆ ಮುತ್ತಿಕೊಂಡಿದ್ದ ನುಸಿಗಳು. ಕುರುಡಾನೆಯ ಮೇಲೆ ಸಣಕಲು ಮಾವುತ ಕುಳಿತದ್ದು ಇತ್ಯಾದಿ ವಿವರಗಳನ್ನು ಕೊಟ್ಟು ಇದಕ್ಕೆ ಕುವೆಂಪು ಅವರು ತಕ್ಷಣ ಕೊಟ್ಟ ಪ್ರತಿಕ್ರಿಯೆಯನ್ನು ಎನ್.ಡಿ.ವೆಂಕಟೇಶ್ ತಮ್ಮ ಭಾಷಣದಲ್ಲಿ ನೆನಪು ಮಾಡಿಕೊಂಡರು. ಕುವೆಂಪು ಪ್ರತಿಕ್ರಿಯೆ ಹೀಗಿದೆ.

" ಇದು ನಮ್ಮ ಭಾರತದ ಹಣೆಬರಹ, ರಾಜಕೀಯದ ಕುದಿಯಾಟದಲ್ಲಿ ಒಮ್ಮೆ ಬೆಂಡೂ ಮೇಲೆ ಬರುತ್ತದೆ. ಬದನೆಕಾಯೂ ಮೇಲೆ ಬರುತ್ತದೆ " (ಕುವೆಂಪು ಹೇಳಿದ್ದು)

ಕುವೆಂಪು ಅವರ ಮೇಲಿನ ಮಾತುಗಳಿಗೆ ಕಲ್ಪಿಸಿರುವ ಕಥನವೋ ಎಂಬಂತೆ ಕಡಿದಾಳ್ ಮಂಜಪ್ಪನವರ 'ನಾಳೆಯ ನೆಳಲು' ಕಾದಂಬರಿ ಮೂಡಿಬಂದಿದೆ, ಅತ್ಯಂತ ಬಲಿಷ್ಠವಾದ ಆನೆಯ ಬೆನ್ನಮೇಲೆ ಸಣಕಲು ಮಾವುತನೂ, ಕಾಣದ ಕಣ್ಣುಗಳಲ್ಲಿ ಮುತ್ತಿದ ನುಸಿಗಳೂ ಭಾರತದ ರಾಜಕೀಯ ಭವಿಷ್ಯಕ್ಕೆ ಸಮರ್ಥವಾದ ಸಂಕೇತಗಳಾಗಿವೆ, ರಾಜಕೀಯ ಕುದಿಯಾಟದಲ್ಲಿ ಬೆಂಡು- ಬದನೆಕಾಯಿ ಮೇಲೆ ಬಂದಂತೆ ಈ

ಕಾದಂಬರಿಯಲ್ಲಿ ಶಂಭು- ದಾಮೋದರರು ಮೇಲೆಬರುತ್ತಾರೆ. ದುರ್ಗಾದಾಸರ ಪರಿಸ್ಥಿತಿ ನುಸಿಮುತ್ತಿದ ಕುರುಡಾನೆಯಂತಾಗಿ ಫಜೀತಿಗೀಡಾಗುತ್ತಾರೆ. ದುರ್ಗಾದಾಸರ ಮುಗ್ಧತೆಯನ್ನು ಕುರಿತು ಕಾದಂಬರಿಕಾರರೇ ಹೀಗೆ ವರ್ಣಿಸಿದ್ದಾರೆ;

"ತಮ್ಮ ಆಶ್ರಯದಲ್ಲಿ ಬೆಳೆಯುತ್ತಿದ್ದ ಶಂಭು ಮುಂದೆ ತಮ್ಮ ವೈರಿಯಾಗುತ್ತಾನೆಂಬುದನ್ನು ದುರ್ಗದಾಸರು ಕನಸಿನಲ್ಲಿಯೂ ಯೋಚಿಸಿರಲಿಲ್ಲ, ತಾವು ಹಾಲೆರೆದು ಸಾಕುತ್ತಿದ್ದ ಹಾವಿನ ಮರಿ ಕೆಲವೇ ವರ್ಷಗಳಲ್ಲಿ ಘಟಸರ್ಪವಾಗಿ ಬೆಳೆದು ತಮ್ಮನ್ನೇ ಕಚ್ಚುತ್ತದೆಯೆಂಬ ಕಲ್ಪನೆ ಮುಗ್ಧರಾದ ಅವರಿಗೆ ಹೇಗೆ ತಾನೇ ಬಂದೀತು?" (ಪುಟ೭೯) ಮುಂಗಾಣ್ಕೆಯಿಲ್ಲದ ಮುಗ್ಧತೆಯಿಂದಾಗಿಯೇ ದುರ್ಗಾದಾಸರು, ಭಾರ್ಗವದಾಸರು ರಾಜಕೀಯದಿಂದ ಹಿಂದೆಸರಿದು ಶಂಭು- ದಾಮೋದರರ ಕೈಗೆ ಅಧಿಕಾರವನ್ನು ಒಪ್ಪಿಸುವಂತಾಗುತ್ತದೆ.

ಹಿಟ್ಲರನ ಪ್ರಚಾರ ಮಂತ್ರಿ ಗೋಬೆಲ್ಸ್ ಮಾದರಿಯಲ್ಲಿ ದುರ್ಗಾದಾಸರ ವಿರುದ್ಧ ವ್ಯವಸ್ಥಿತವಾದ ಅಪಪ್ರಚಾರವನ್ನು ಮಾಡುತ್ತಿದ್ದ ಶಂಭು-ದಾಮೋದರರು ನಡೆಸುತ್ತಿದ್ದ ಕಾರ್ಯಾಚರಣೆಯ ಸ್ವರೂಪ ಇದು. 'ನಾವು ಮಾಡೊದನ್ನೆಲ್ಲಾ ಬೇರೆಯವರಿಂದಲೇ ಮಾಡಿಸ್ಬೇಕು. ನಾವು ಮಾತ್ರ ಬಹಳ ಸಭ್ಯರಂತೆ ತೋರಿಸ್ಕೊಳ್ಬೇಕು. ನಮ್ಮ ಗುಂಪಿಗೆ ನಮಗಿಂತ ಬುದ್ಧಿವಂತರನ್ನ ಯಾರನ್ನೂ ಸೇರಿಸ್ಲೇಬಾರ್ದು. ಆ ಮಡಿ ಕಾಂಗ್ರೆಸ್‌ನವರಿದ್ದಾರೆ ನೋಡು-ಗಾಂಧಿ ಭಕ್ತರು, ಅವರನ್ನ ಮಾತ್ರ ಹತ್ರ ಸೇರಿಸ್ಲೇಬಾರ್ದು" (ಪುಟ ೪೯) ಇಂಥ ತಂತ್ರಜ್ಞಾನಿಗಳಾಗಿದ್ದರಿಂದಲೇ ಶಂಭು-ದಾಮೋದರ ಅಧಿಕಾರದ ಗದ್ದುಗೆಗೆ ಏರುತ್ತಾರೆ.

ಶಂಭುವಿನ ವಿರುದ್ಧ ಚುನಾವಣೆಗೆ ಸ್ಪರ್ಧಿಸಿದ್ದ ಕಮಲಶಿಲೆಯ ಸೋಮಶೇಖರನ ಕಗ್ಗೊಲೆ ಪ್ರಕರಣ, ಪೊಲೀಸ್ ಇಲಾಖೆಯ ಯತೀಂದ್ರ ಮತ್ತು ರಣಧೀರರು ರಹಸ್ಯವಾಗಿ ನಡೆಸಿದ ಜಂಟಿ ಪತ್ತೆದಾರಿಕೆ, ದುರ್ಗಾದಾಸರ ಕೊನೆಯ ದಿನಗಳು, ಕ್ರಾಂತಿ ಮಾರ್ಗ ಹಿಡಿಯುವ ಪ್ರತಾಪ್ ರಾಜನ ಗುಪ್ತ ಸಂಘಟನೆ, ದುರ್ಗಾದಾಸರ ಮಗ ಜಯಸಿಂಹನು ಯೋಗಿವರ್ಯ ಅಮಿತಾನಂದರ ಸಂದರ್ಶನ ಪಡೆಯುವುದು; ಮಿಲಿಟರಿ ಸೇವೆಯಲ್ಲಿ ಸೇರುವುದು, ಷಷ್ಟಿ ಪೂರ್ತಿಗಾಗಿ ಸನ್ಮಾನ ಮಾಡಿಸಿಕೊಳ್ಳುವ ಶಂಭು ವಿಲಾಸ, ಶತ್ರುಗಳನ್ನು ಸದೆಬಡಿದು ಒಂದು ಕೈ ಕಳೆದುಕೊಂಡರೂ ಪರಮವೀರಚಕ್ರ ಪಡೆದು ಹಿಂದಿರುಗುವ ಜಯಸಿಂಹನು ಚುನಾವಣೆಯಲ್ಲಿ ಗೆದ್ದು ಬರುವುದು, ಜನತೆಯೇ ಸಾರ್ವಭೌಮರೆಂಬ ಅರಿವು ಮೂಡುವುದು, ತನಿಖೆಗೆ ಹೆದರಿ ದಾಮೋದರನು

ನಿದ್ದೆ ಮಾತ್ರೆಗಳನ್ನು ಸೇವಿಸಿ ಆತ್ಮ ಹತ್ಯೆ ಮಾಡಿಕೊಳ್ಳುವುದು, ಅನಿಷ್ಟ ಕೂಟದ ಅಂಗಾರಕರಿಗೆ ಜೀವಾವಧಿ ಶಿಕ್ಷೆ ಜಾರಿಯಾಗುವುದು, ಯೋಗಿವರ್ಯರಾದ ಅಮಿತಾನಂದರ ಭವಿಷ್ಯವಾಣಿ ಮತ್ತು ಆಶೀರ್ವಚನಗಳಿಂದ ಕಾದಂಬರಿ ಮುಕ್ತಾಯವಾಗುವುದು – ಇತ್ಯಾದಿ ವಿವರಗಳೆಲ್ಲ ಗಮನಿಸಿದರೆ ಇದೊಂದು ರಾಜಕೀಯ ಕಾದಂಬರಿಯೆಂಬುದು ಯಾರಿಗಾದರೂ ಅರಿವಾಗುತ್ತದೆ. ರಾಜಕೀಯವಾದ ಕ್ರಿಯೆಗಳು ಮತ್ತು ಸನ್ನಿವೇಶಗಳನ್ನು ನೇಯ್ದು, ಸಂಗತಿ ಸತ್ಯ ಸಂಗತಿಗಳಿಗೆಲ್ಲ ಕಾಲ್ಪನಿಕತೆಯ ಮುಖವಾಡ ತೊಡಿಸಿದಂತಿರುವ ಈ ಕಾದಂಬರಿ ಪಾತ್ರಗಳನ್ನೆಲ್ಲ ಕೀಲಿಯಿತ್ತ ಕೈಗೊಂಬೆಗಳಂತೆ ಮಾಡಿದೆ. ರಾಜಕೀಯ ಜೀವನದ ಅನುಭವಗಳು 'ಅಲಿಗರಿ' ಗಳೆಂಬ ಕುಂಡಗಳಲ್ಲಿ ಬೆಳೆಯುತ್ತಾ ಭೂಮಿಯ ಸಂಪರ್ಕ ಕಳೆದುಕೊಳ್ಳುವ ಪರಿಯೊಂದು ನಮ್ಮ ಕಣ್ಮುಂದೆ ನಿಲ್ಲುತ್ತದೆ.

ಈ ಲೇಖನವನ್ನು ಬರೆದು ಪೂರೈಸಿದ ಮೇಲೆ, ಕಡಿದಾಳ್ ಮಂಜಪ್ಪನವರ ಆತ್ಮಚರಿತ್ರೆ 'ನನಸಾಗದ ಕನಸು' ಓದಿದೆ. ಅದರಲ್ಲಿ 'ನಾಳೆಯ ನೆಳಲು' ಕಾದಂಬರಿಗೆ ಸಂಬಂಧಪಟ್ಟಂತೆ ವಿವರಣೆಯೊಂದಿದೆ. "ಸಹಸ್ರಾರು ಜನರ ತ್ಯಾಗ ಮತ್ತು ಬಲಿದಾನಗಳಿಂದ ಕಟ್ಟಿದ್ದ ಕಾಂಗ್ರೆಸ್ ಪಕ್ಷವನ್ನು ಅಧಿಕಾರಲಾಲಸೆಯ ರಾಜಕಾರಣಿಗಳು ತಮ್ಮ ಸ್ವಾರ್ಥಕ್ಕಾಗಿ ದಿನೇದಿನೇ ಅಧೋಗತಿಗೆ ತಳ್ಳುತ್ತಾರೆಂಬ ಕೊರಗು ನನ್ನನ್ನು ಆಗಾಗ ಕಾಡುತ್ತಿತ್ತು. ಇದೇ ರೀತಿ ದಿನೇ ದಿನೇ ಕಾಂಗ್ರೆಸ್ ರಾಜಕಾರಣ ಯಾವ ಸ್ವರೂಪ ತಾಳಬಹುದೆಂಬುದನ್ನು ಚಿತ್ರಿಸುವ ಸಲುವಾಗಿ 'ನಾಳೆಯ ನೆಳಲು' ಎಂಬ ನನ್ನ ಎರಡನೆಯ ರಾಜಕೀಯ ಕಾದಂಬರಿಯನ್ನು ಬರೆಯಲಾರಂಭಿಸಿದೆ" . (ಪುಟ ೨೮೧) ಈ ಮಾತುಗಳಿಂದ ಸಮಕಾಲೀನ ರಾಜಕೀಯದ ವಾಸ್ತವಿಕ ಸಂಗತಿಗಳೇ ಕಾದಂಬರಿಯ ರಚನೆಗೆ ಪ್ರೇರಣೆಯನ್ನು ನೀಡಿದೆಯೆಂಬುದು ಸ್ಪಷ್ಟವಾಗುತ್ತದೆ.

'ಪಂಜರವಳ್ಳಿಯ ಪಂಜು' ಕಾದಂಬರಿಗೆ ದ.ರಾ.ಬೇಂದ್ರೆಯವರ ಮುನ್ನುಡಿ ಇದೆಯೆಂದೂ, ಬೇಂದ್ರೆಯವರ ಮುನ್ನುಡಿಯನ್ನು ಓದಿ "ನಾನೊಬ್ಬ ಕಾದಂಬರಿಕಾರನಾದೆನೆಂದು ಮನಸ್ಸಿನಲ್ಲೇ ಹಿಗ್ಗಿದೆ. ಅವರ ಮುನ್ನುಡಿಯಲ್ಲಿ –'ಸತ್ಯ ಧರ್ಮಗಳಿಗೆ ಚ್ಯುತಿ ಬಂದಾಗ, ಸತ್ಯದ ಹೆಸರಿನಲ್ಲಿ ಅಸತ್ಯ ನಡೆಯುವಾಗ ಧರ್ಮದ ಹೆಸರಿನಲ್ಲಿ ಅಧರ್ಮ ನಡೆಯುವಾಗ ಸುಮ್ಮನಿರುವುದು ಹೇಡಿತನ, ಎಂದು ಬರೆದಿರುವ ಮಾತುಗಳು ನನಗೆ ಇಂದೂ ಸಹ ಸ್ಫೂರ್ತಿಯನ್ನು ನೀಡುತ್ತಾ ಇವೆ" (ಪುಟ ೨೭೦) ಎಂದು ಕಡಿದಾಳ್ ಮಂಜಪ್ಪನವರು ಸ್ಮರಿಸಿಕೊಂಡಿದ್ದಾರೆ. ಈ ಸಿಹಿಯ ಜೊತೆಗೆ ಕಹಿಯನ್ನು ಕೂಡ ಮೆಲುಕು ಹಾಕಿದ್ದಾರೆ. "ನಾನು ಬರೆದಿದ್ದ 'ಪಂಜರವಳ್ಳಿಯ ಪಂಜು' ಮತ್ತು 'ನಾಳೆಯ ನೆಳಲು' ಕಾದಂಬರಿಗಳನ್ನು ಸಾಹಿತಿಯೆನಿಸಿ

ಕೊಂಡವರೊಬ್ಬರು ರಾಜಕೀಯ ವರದಿಗಳೆಂದು ವಿಮರ್ಶಿಸಿದ್ದರು. ಆದ್ದರಿಂದ ನಾನೂ ಕಾದಂಬರಿ ಬರೆದೆ. ಸಾಹಿತಿಗಳು ನನ್ನನ್ನು ಸಾಹಿತಿಯೆಂದು ಪರಿಗಣಿಸದಿರಬಹುದು; ಕಾದಂಬರಿಕಾರನೆಂದು ಪರಿಗಣಿಸದಿರಬಹುದು. ನಾನು – 'ಹಾವು ಸಾಯಬಾರದು, ಕೋಲು ಮುರಿಯಬಾರದು' – ಎಂಬ ರೀತಿಯಲ್ಲಿ ಬರೆಯುವವನಲ್ಲ. ಇಂದಿನ ಕೆಲವು ಸಾಹಿತಿಗಳು ಒಬ್ಬರನ್ನೊಬ್ಬರು ಪರಸ್ಪರ ಹೊಗಳಿ ಸಾಹಿತಿಯಾಗಿ ಪ್ರಶಸ್ತಿಗಳನ್ನು ಗಿಟ್ಟಿಸಿಕೊಂಡವರು. ನಮ್ಮ ದೇಶದ ಕೆಲವು ಸಾಹಿತಿಗಳಿಗೂ ಪತ್ರಕರ್ತರಿಗೂ ರಾಷ್ಟ್ರದ ಭವಿಷ್ಯದ ಬಗ್ಗೆ ಚಿಂತಿಸುವ ಪ್ರವೃತ್ತಿಯೂ ಇಲ್ಲ; ಕಂಡದ್ದನ್ನು ಕಂಡ ಹಾಗೆ ಬರೆಯುವ ದಿಟ್ಟತನವೂ ಇಲ್ಲ" (ಪುಟ ೩೦೧) ಎಂದು ಕಡಿದಾಳ್ ಅವರು ಹೇಳಿಕೊಂಡಿದ್ದಾರೆ.

'ಸಾಹಿತ್ಯ ಸೃಷ್ಟಿ' ಜುಗಲ್ ಬಂದಿ ಅಥವಾ ಸವಾಲ್ ಜವಾಬ್ ಶೈಲಿಯ ರಚನೆಯಲ್ಲ. ನೈಜ ಪ್ರತಿಭೆಯೊಂದನ್ನು ಯಾವೊಬ್ಬ ವಿಮರ್ಶಕನೂ ತುಳಿಯಲು ಸಾಧ್ಯವಿಲ್ಲ. ಹುಸಿ ಪ್ರತಿಭೆಯೊಂದನ್ನು ಎತ್ತಿ ಮೆರೆಸಲು ಕೂಡ ಸಾಧ್ಯವಿಲ್ಲ. ಕಾಲದ ಅಗ್ನಿ ಪರೀಕ್ಷೆಯಲ್ಲಿ ಮಿಂದು 'ಸೀತೆ'ಯಂತೆ ಎದ್ದು ಬರುವ ಕಲಾಕೃತಿಗಳೇ ಎಲ್ಲ ಕಾಲಕ್ಕೂ ನಿಲ್ಲುವ, ಸಲ್ಲುವ ರಚನೆಗಳಾಗಿರುತ್ತವೆ. ಎಲ್ಲ ರಚನೆಗಳು ಸೀತಾ–ರಾಮರೇ ಆಗಿಬಿಟ್ಟರೆ, "ರಾಮಾಯಣ" ಎನಿಸಿಕೊಳ್ಳಲು ಹೇಗೆ ಸಾಧ್ಯ? ಕಡಿದಾಳ್ ಮಂಜಪ್ಪನವರು ಆಯ್ಕೆ ಮಾಡಿಕೊಂಡಿರುವ ಕಾದಂಬರಿ ಮಾರ್ಗದ ಇಕ್ಕಟ್ಟುಗಳೇನು? ಎಂಬುದನ್ನು 'ನಾಳೆಯ ನೆಳಲು' ಕಾದಂಬರಿಗೆ ಬರೆದಿರುವ ವಿಮರ್ಶೆಯಲ್ಲಿ ವಿವರಿಸಿದ್ದೇನೆ. 'ಪಂಜರವಳ್ಳಿಯ ಪಂಜು' ಮತ್ತು 'ಕ್ರಾಂತಿಕೂಟ' ಕಾದಂಬರಿಗಳನ್ನು ನಾನು ಓದಿಲ್ಲವಾದ್ದರಿಂದ ನನ್ನ ವಿಮರ್ಶೆಯನ್ನು 'ನಾಳೆಯ ನೆಳಲು' ಕಾದಂಬರಿಗಷ್ಟೆ ಪರಿಮಿತಗೊಳಿಸಿ, ಸ್ವೀಕರಿಸಬೇಕೆಂದು ಸಹೃದಯರನ್ನು ಕೋರುತ್ತೇನೆ.

'ನನಸಾಗದ ಕನಸು' – ಕಡಿದಾಳ್ ಅವರ ಆತ್ಮಚರಿತ್ರೆಗೆ ತನ್ನದೇ ಆದ ವಿಶಿಷ್ಟತೆಯಿದೆ. ದನ ಕಾಯುವ ಹುಡುಗನೊಬ್ಬ ಮೈಸೂರಿನಲ್ಲಿ ಬಿ.ಎ. ಪಾಸು ಮಾಡಿ, ಪೂನಾದಲ್ಲಿ ಎಲ್.ಎಲ್.ಬಿ. ಪೂರೈಸಿ, ಮುಂದೆ ಕಾಂಗ್ರೆಸ್‌ನ ಕಾರ್ಯಕರ್ತನಾಗಿ ಸೇವೆ ಸಲ್ಲಿಸುತ್ತಾ ಕ್ರಮೇಣ ರಾಜ್ಯವೊಂದರ ಮುಖ್ಯಮಂತ್ರಿಯಾಗಿ ಮಾತ್ರವಲ್ಲ ! ರಾಷ್ಟ್ರ ರಾಜಕಾರಣದ ನೆಲೆಯಲ್ಲಿ ಒಬ್ಬ ವಿಐಪಿಯಾಗಿ ವಿಕಾಸಗೊಂಡ ಬಗೆಯನ್ನು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಇದರ ವಿಮರ್ಶೆ ಪ್ರಸ್ತುತ ವಿಷಯಕ್ಕೆ ಹೊರತಾದುದು.

# ಕ್ರಾಂತಿಕೂಟ-ಪರಿಚಯಾತ್ಮಕ ಪರಾಮರ್ಶೆ

-ಡಾ. ಜೆ.ಕೆ.ರಮೇಶ

ನಿಷ್ಠಾವಂತ ದೇಶ ಸೇವಕರೂ ನಿಸ್ಪೃಹ ಜನ ನಾಯಕರೂ ಆಗಿದ್ದ ಕಡಿದಾಳ್ ಮಂಜಪ್ಪನವರ ಸಾಹಿತ್ಯ ಸೇವೆಯನ್ನೂ ಮಾಡಿರುವ ಅಪರೂಪದ ರಾಜಕಾರಣಿ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಅದು ದಕ್ಕಿದ ನಂತರ, ಜನಾದೇಶದ ಮೇರೆಗೆ ಮೈಸೂರು ಪ್ರಾಂತ್ಯದ ಮಂತ್ರಿ, ಮುಖ್ಯಮಂತ್ರಿಯಾಗಿ ಮತ್ತೆ ವಿಶಾಲ ಕರ್ನಾಟಕ ರಾಜ್ಯದ ಸರಕಾರದಲ್ಲಿ ಮಂತ್ರಿಯಾಗಿ, ದೀರ್ಘಕಾಲ ದುಡಿದವರು. ಅವರು ಕನ್ನಡ ಸಾರಸ್ವತ ಲೋಕಕ್ಕಾಗಿಯೂ ತಮ್ಮ ಶಕ್ತಿಯನ್ನು ವಿನಿಯೋಗಿಸಿದ್ದು ವಿಶೇಷ ಸಂಗತಿ. ಕಡಿದಾಳರು ಕಾದಂಬರಿಕಾರರಾಗಿ ಕನ್ನಡ ಸಾಹಿತ್ಯದ ಹಾದಿಯಲ್ಲಿ ತಮ್ಮ ಹೆಜ್ಜೆ ಗುರುತು ಮೂಡಿಸಿ ಹೋಗಿದ್ದಾರೆ. ಈಚೆಗೆ ಮಾನ್ಯ ವೀರಪ್ಪ ಮೊಯಿಲಿಯವರು ಕಾದಂಬರಿ, ಮಹಾಕಾವ್ಯಗಳನ್ನು ರಚಿಸುವ ಮೂಲಕ ಕರ್ನಾಟಕದ ಮತ್ತೊಬ್ಬ ಮುಖ್ಯಮಂತ್ರಿ ಸಾಹಿತಿಯಾಗಿ ಪ್ರಸಿದ್ಧರಾಗಿರುವರಾದರೂ ಈ ಪರಂಪರೆ ಪ್ರಾರಂಭಗೊಂಡಿದ್ದು ಕಡಿದಾಳರಿಂದಲೇ.

ಬ್ರಿಟೀಷರ ಆಡಳಿತ ಕೊನೆಗೊಂಡು ಭಾರತದಲ್ಲಿ ಪ್ರಜಾಪ್ರಭುತ್ವ ಸ್ಥಾಪನೆಯಾಗಿ ಕೆಲವೇ ವರ್ಷಗಳಲ್ಲಿ ಕಡಿದಾಳರಂಥ ಪ್ರಾಮಾಣಿಕ ದೇಶ ಭಕ್ತರ ಕನಸು ಕಮರಿ ಹೋಗತೊಡಗಿತ್ತು. ನಾಡನ್ನು ಮುನ್ನಡೆಸಬೇಕಾದ ಜನನಾಯಕರು ಸ್ವಾರ್ಥಸಾಧನೆ, ಸ್ವಜನ ಪಕ್ಷಪಾತ, ಭ್ರಷ್ಟತನಗಳನ್ನು ರೂಢಿಸಿಕೊಂಡಿದ್ದರು. ಸತ್ಯನಿಷ್ಠೆ ಪ್ರಾಮಾಣಿಕತೆಗಳನ್ನು ಬಿಟ್ಟು ಸಮಯ ಸಾಧಕ ಗೋಸುಂಬೆಗಳಾಗಿ ಮೋಸ ವಂಚನೆ ಕೊಲೆ ಸುಲಿಗೆಗಳಲ್ಲಿ ತೊಡಗಿಕೊಂಡರು. ದೇಶದ ಅಭಿವೃದ್ಧಿಯ ಹಾದಿ ತಪ್ಪಿಸಿ ಜನ ಸಾಮಾನ್ಯರ ಬದುಕು ದುರ್ಬರವಾಗುವಂತೆ ಮಾಡಿ ಸ್ವಾತಂತ್ರ್ಯ ಪ್ರಜಾಪ್ರಭುತ್ವಗಳನ್ನೇ ಜನರು ದ್ವೇಷಿಸುವಂತೆ ಮಾಡಿದ್ದರು. ಇದು ಇತಿಹಾಸವಾಗಿ ಉಳಿಯದೆ ನಿರಂತರ ಮುಂದುವರಿದು ವರ್ತಮಾನದಲ್ಲಿ ಉನ್ನತ ಮೌಲ್ಯ ಕರ್ತವ್ಯಗಳನ್ನು ರಾಜಕಾರಣಿಗಳಿಂದ ನಿರೀಕ್ಷಿಸುವುದು, ಆ ಕುರಿತು ಪ್ರಶ್ನಿಸುವುದು ಅಪ್ರಸ್ತುತವೆನ್ನುವಷ್ಟರ ಮಟ್ಟಿಗೆ ಭಾರತ ದೇಶವಾಸಿಗಳು ವಿಪರ್ಯಾಸ ಸ್ಥಿತಿಗೆ ಒಗ್ಗಿ ಹೋಗಿದ್ದಾರೆ. ಈ ವಿದ್ಯಮಾನಗಳಿಗೆ ಕರ್ನಾಟಕ ಹೊರತಾಗಿ ಉಳಿದಿಲ್ಲ.

ಬಡ ಗೇಣಿದಾರ ರೈತರ, ಕೂಲಿಕಾರ ಕಾರ್ಮಿಕರ ಉದ್ಧಾರದ ಹಂಬಲ ಹೊತ್ತಿದ್ದು ನಿಸ್ವಾರ್ಥ ರಾಜಕಾರಣಿ ಕಡಿದಾಳ್ ಮಂಜಪ್ಪನವರಿಗೆ ಸ್ವಾತಂತ್ರ್ಯ ಪಡೆದ ಹೊಸತರಲ್ಲೇ ಹತೋಟಿ ಮೀರಿ ಹೋಗುತ್ತಿದ್ದ ಸ್ಥಿತಿಯನ್ನು ಕಂಡು ದೇಶದ ರಾಜಕಾರಣ ಮತ್ತು ರಾಜಕಾರಣಿಗಳ ಬಗ್ಗೆ ತೀವ್ರ ಅಸಮಧಾನ, ಆಕ್ರೋಶ, ಹತಾಶೆಗಳುಂಟಾದವು. "ಸತ್ಯದ ಹೆಸರಿನಲ್ಲಿ ಅಸತ್ಯ ನಡೆಯುವಾಗ ಧರ್ಮದ ಹೆಸರಿನಲ್ಲಿ ಅಧರ್ಮ ನಡೆಯುವಾಗ ಸುಮ್ಮನಿರುವುದು ಹೇಡಿತನ" ಎಂದು ದೃಢವಾಗಿ ನಂಬಿದ್ದ ಕಡಿದಾಳರು ಸಾತ್ವಿಕ ಕ್ರೋಧದಿಂದ ಕುದಿದು ಹದಗೆಟ್ಟ ಸ್ಥಿತಿಯನ್ನು ಸುಧಾರಿಸಬೇಕೆಂಬ ಛಲದಿಂದ ಲೇಖನಿಯನ್ನು ಹೋರಾಟದ ಆಯುಧವನ್ನಾಗಿ ಬಳಸಲು ನಿರ್ಧರಿಸಿದರು. ದಾರಿ ತಪ್ಪಿದ ರಾಜಕಾರಣವನ್ನು ಸರಿದಾರಿಗೆ ತರುತ್ತೇನೆಂಬ ವಿಶ್ವಾಸ, ಹಟ, ಶ್ರೀಸಾಮಾನ್ಯರ ಬದುಕನ್ನು ಸಹನೀಯವಾಗಿಸಬೇಕೆಂಬ ಹಂಬಲ, ಶ್ರದ್ಧೆ, ಒಟ್ಟಾರೆ ರಾಜಕೀಯ ಶುದ್ಧೀಕರಣ ಮತ್ತು ಸಮಾಜ ಜಾಗೃತಿಯ ಆಶಯಗಳು ಅವರನ್ನು ಲೇಖನಿ ಹಿಡಿಯುವಂತೆ ಪ್ರಬಲವಾಗಿ ಪ್ರೇರಪಿಸಿದ ಸಂಗತಿಗಳಾದುವು. ಗೇಣಿದಾರ ಕುಟುಂಬದ ಹಿನ್ನೆಲೆಯಿಂದ ಬಂದ ತಮ್ಮ ಮತ್ತು ಹಿರಿಯರ ಕಾರ್ಪಣ್ಯದ ಬದುಕಿನ ನೆನಪು, ದೀರ್ಘಕಾಲ ರಾಜಕೀಯ ಕ್ಷೇತ್ರದಲ್ಲಿ ಹೆಣಗಿದ ಅನುಭವ, ಶಾಲಾ ದಿನಗಳಲ್ಲಿ ಹೆಗಲ್, ಕ್ಯಾಂಟ್, ವಾಲ್ಟೇರ್, ಪರಮಹಂಸ, ವಿವೇಕಾನಂದ ಮುಂತಾದ ದಾರ್ಶನಿಕರನ್ನೂ ಹೋಮರ್, ಟಾಲ್‌ಸ್ಟಾಯ್, ಬರ್ನಾಡ್‌ಷಾ, ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಟ್ಯಾಗೂರ್ ಮುಂತಾದ ಸಾಹಿತಿಗಳನ್ನು ಅಭ್ಯಾಸ ಮಾಡಿದ ಸಂಸ್ಕಾರ, ಕಾದಂಬರಿಕಾರ ಅ.ನ.ಕೃ. ಅಂಥವರ ಒಡನಾಟ ಇವೆಲ್ಲ ಕಡಿದಾಳರ ಸಾಹಿತ್ಯವನ್ನು ರೂಪಿಸುವಲ್ಲಿ ನೆರವಾದವು.

ಸಾಹಿತ್ಯಕ್ಕೆ ಬದ್ಧತೆ ಇದ್ದೇ ಇದೆ. ಅದು ಬರಿಯ ಮನರಂಜನೆಗಾಗಿಯಂತೂ ಖಂಡಿತ ಅಲ್ಲ. ಅದು ಮನುಷ್ಯನ ಮನಃಪರಿವರ್ತನೆಗಾಗಿ ತನ್ಮೂಲಕ ಅವನ ಬದುಕನ್ನು ಹಸನುಗೊಳಿಸುವುದಕ್ಕಾಗಿ ಎಂಬುದು ನಿಜವಾದಲ್ಲಿ ಸಾರ್ವತ್ರಿಕ ಜೀವನದ ಶುದ್ಧಿಕರಣವನ್ನು ಉದ್ದೇಶವಾಗುಳ್ಳ ಕಡಿದಾಳರ ಸಾಹಿತ್ಯ ಕೃತಿಗಳು ಶ್ರೇಷ್ಠ ದರ್ಜೆಯವಾಗುತ್ತವೆ. "ನನ್ನಲ್ಲಿ ಸಾಹಿತ್ಯ ಸಂಪತ್ತಿಲ್ಲ ಸಾಹಿತಿಯಾಗಬೇಕೆಂಬ ಆಕಾಂಕ್ಷೆಯಿಂದ ಈ ಕಾರ್ಯಕ್ಕೆ ಕೈ ಹಾಕಲಿಲ್ಲ" ಎನ್ನುತ್ತ ವಿನಯವನ್ನು ಮೆರೆಯುವ ಮಂಜಪ್ಪನವರು "ಬರೆಯಬೇಕೆಂಬ ಒತ್ತಡ ಮನಸ್ಸಿನಲ್ಲಿ ಹೆಚ್ಚಿದ್ದರಿಂದ ಬರೆದಿದ್ದೇನೆ" ಎಂದೂ ಹೇಳುತ್ತಾರೆ. ಅಕ್ಷರ ರೂಪಕ್ಕಿಳಿಸದೇ ಶಮನವಾಗದ ಇಂಥ ಆಂತರಿಕ ಒತ್ತಡದಿಂದ ಹುಟ್ಟುವುದೇ ನಿಜವಾದ ಸಾಹಿತ್ಯದ ಮುಖ್ಯ ಲಕ್ಷಣವಾಗಿರುವುದರಿಂದ ತಾವಾಗಿ ಬಯಸದಿದ್ದರೂ ಅವರೊಬ್ಬ ಸಹಜ ಸಾಹಿತಿಯಾಗಿದ್ದಾರೆ. ಮೂರು ಕಾದಂಬರಿಗಳನ್ನು ರಚಿಸಿದ್ದಲ್ಲದೆ ತಮ್ಮ ಆತ್ಮಕಥೆ ಬರೆದಿದ್ದಾರೆ. ತಮ್ಮ ಭಾಷಣ

ಲೇಖನಗಳನ್ನು ಒಳಗೊಂಡ ಎರಡು ಕಿರು ಹೊತ್ತಿಗೆಗಳನ್ನು ಪ್ರಕಟಿಸುವ ಮೂಲಕ ಇದಕ್ಕೆ ಸಾಕ್ಷಿ ಒದಗಿಸಿದ್ದಾರೆ.

'ಕ್ರಾಂತಿಕೂಟ' ಮಂಜಪ್ಪನವರ ಮೂರನೇ ಕಾದಂಬರಿ . ಪಂಜರವಳ್ಳಿಯ ಪಂಜು (೧೯೬೩) ನಾಳೆಯ ನೆರಳು (೧೯೬೬) ಗಳ ನಂತರ ೧೯೭೫ರಲ್ಲಿ ಇದನ್ನು ಹೊರತರುವ ಹೊತ್ತಿಗೆ ಬರಹಕ್ಕೆ ಅವರ ಕೈ ಕುದುರಿಕೊಂಡಿತ್ತು. ಸಂಪೂರ್ಣ ಕೆಟ್ಟುಹೋಗಿದ್ದ ದೇಶಿಯ ರಾಜಕಾರಣವೇ ಅವರ ಎಲ್ಲಾ ಕಾದಂಬರಿಗಳ ವಸ್ತು. ಅವುಗಳಲ್ಲಿ ನೆಪಕ್ಕೆ ಕಥೆಗಳಿವೆ. ಮುಖ್ಯವಾಗಿ ಅವು ರಾಜಕೀಯ ಘಟನಾವಳಿಗಳ ನಿರೂಪಣೆಗಳಾಗಿವೆ. ರಾಜಕೀಯ ಕಾದಂಬರಿಗಳೆಂದೇ ಅವುಗಳನ್ನು ಕರೆದಿದ್ದಾರೆ. ಈ ಕಾದಂಬರಿಯ ಪ್ರಕಾರದ ಪ್ರವರ್ತಕರೂ ಕಡಿದಾಳರೇ ಆಗಿದ್ದಾರೆ. ಹೀಗಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರಿಗೊಂದು ವಿಶಿಷ್ಟ ಸ್ಥಾನ ದೊರಕೊಂಡಿದೆ. ಬೇಂದ್ರೆಯವರಂಥ ಹಿರಿಯ ಸಾಹಿತಿಗಳ ಮುನ್ನುಡಿ, ಮೆಚ್ಚುಗೆಗಳನ್ನು ಪಡೆದ ಅವರ ಮೊದಲ ಕಾದಂಬರಿಗಳು ಬಂದ ಹೊಸತರಲ್ಲಿ ಅನೇಕ ಗಣ್ಯ ಸಾಹಿತಿಗಳೂ, ಜನನಾಯಕರೂ ಸಂತೋಷದಿಂದ ಪ್ರಶಂಶಿಸಿ ಸಾಹಿತ್ಯ ಲೋಕಕ್ಕೆ ಸಂಭ್ರಮದಿಂದ ಅವರನ್ನು ಸ್ವಾಗತಿಸಿದರು. ಅಂತೆಯೇ ಒಬ್ಬಿಬ್ಬರು ವಿಮರ್ಶಕರು ಕಡಿದಾಳ್ ಕಾದಂಬರಿಗಳು ಕೇವಲ ರಾಜಕೀಯ ವರದಿಗಳೆಂದು ಹೀಗಳೆದರು. ಈ ಕಟು ಟೀಕೆಯನ್ನು ಸವಾಲಾಗಿ ಸ್ವೀಕರಿಸಿದ ಕಡಿದಾಳರು ತಾನೂ ಕಾದಂಬರಿ ಬರೆಯಬಲ್ಲೆನೆಂಬುದನ್ನು ತೋರಿಸುವುದಕ್ಕಾಗಿ 'ಕ್ರಾಂತಿಕೂಟ'ವನ್ನು ರಚಿಸಿದಾಗಿ ಹೇಳಿದ್ದಾರೆ. ಅದೇನೇ ಇದ್ದರೂ ಸಾಹಿತಿಗಾಗಿ ಕಡಿದಾಳರ ನೆಲೆಯನ್ನು ಈ ಎರಡು ಅತಿಗಳ ನಡುವೆ ಗುರುತಿಸಬೇಕಾಗಿದೆ.

ಪಂಜರವಳ್ಳಿಯ ಪಂಜು ತಾನು ಒಳಗೊಂಡಿದ್ದ ಹೊಸ ಬಗೆಯ ವಸ್ತು (ರಾಜಕೀಯ) ಮತ್ತು ಮಲೆನಾಡಿನ ಬಡ ಜನರ ಬದುಕಿನ ವಾಸ್ತವ ಚಿತ್ರಣದಿಂದ ಓದುಗರಲ್ಲಿ ಒಂದು ಬಗೆಯ ಸಂಚಲವನ್ನುಂಟು ಮಾಡಿತ್ತು. ನಂತರದ ನಾಳೆಯ ನೆರಳು ಶುಷ್ಕ ರಾಜಕೀಯ ವಿವರದಂತಾಗಿ ಕೊಂಚ ನಿರಾಶೆ ಉಂಟು ಮಾಡಿತು. ಕ್ರಾಂತಿಕೂಟ ರಾಜಕಾರಣ, ರಸವತ್ ಕಥಾನಕ ಎರಡನ್ನು ಒಳಗೊಂಡು ವಿಚಾರಪ್ರದವೂ ರಂಜನೀಯವೂ ಆಗಿ ಹೊಮ್ಮಿ ಬಂದಿದೆ. ಕಾದಂಬರಿಯಲ್ಲಿ ಅಲ್ಲಲ್ಲಿ ತಾವು ನಿಷ್ಠೆ ಹೊಂದಿದ್ದ ಕಾಂಗ್ರೆಸ್ ಪಕ್ಷದ ನಾಯಕರನ್ನು ಕುರಿತ ಕೋಪ ಕಾಣುತ್ತದೆ. ಇಲ್ಲ ಕಮ್ಯುನಿಸಂ ಕುರಿತ ವಿಶ್ಲೇಷಣೆ, ಎಡಪಂಥೀಯ ನಾಯಕರ ವರ್ತನೆಗಳ ವಿವೇಚನೆ ಇದೆ. ಮುಖ್ಯವಾಗಿ ಕ್ರಾಂತಿಕಾರಿ ಪಕ್ಷಗಳ ನಾಯಕರೆನಿಸಿಕೊಂಡವರ ಕ್ರೌರ್ಯ,

ಹಿಂಸಾಚಾರ, ವಂಚನೆ ಸ್ವಾರ್ಥಗಳನ್ನೂ ಇವರನ್ನು ನಿಯಂತ್ರಿಸಲಾರದ ಸರಕಾರದ ನಿಷ್ಕ್ರಿಯತೆಯನ್ನೂ, ಜನರ ಬಗೆಹರಿಯದ ಬವಣೆಗಳನ್ನೂ ಬಿಂಬಿಸುವ ಇದನ್ನು ಕಲಾತ್ಮಕ ಸಾಹಿತ್ಯ ಕೃತಿಯಾಗಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಜಿದ್ದಿನಲ್ಲಿ ಗೆದ್ದಿದ್ದಾರೆ.

ಶಂಕರ ಎಂಬ ಕ್ರಾಂತಿ ಸೇನೆಯ ಕಮಾಂಡರ್ ಗೋಮುಖ ವ್ಯಾಘ್ರ ಹಿಂಸೆಯಲ್ಲಿ ತೊಡಗಿಕೊಳ್ಳುತ್ತಾನೆ. ತನಗಾಗದವರನ್ನೆಲ್ಲ ಬಂಡವಾಳಗಾರರು, ಬೂರ್ಜ್ವಾಗಳು ಎಂಬ ನೆಪವೊಡ್ಡಿ ಕೊಲೆ ಮಾಡಿಸುತ್ತಾನೆ. ಧನ ಸಂಪಾದನೆಗಾಗಿ ಶ್ರೀಮಂತರ ಮನೆಗಳನ್ನು ಲೂಟಿ ಮಾಡಿಸುತ್ತಾನೆ. ಈ ಹಣದಿಂದ ಮಧ್ಯ ಮದಿರೆ ಮುಂತಾಗಿ ಸುಖಲೋಲುಪ್ತಿಯಲ್ಲಿ ತೇಲುತ್ತಾನೆ. ನಿರಂಕುಶನಾದ ಇವನನ್ನು ಶಿಕ್ಷಿಸುವ ಶಕ್ತಿ ಸರಕಾರಕ್ಕೂ ಇರುವುದಿಲ್ಲ. ರಕ್ಷಣಾ ಸಚಿವನಿಗೆ ಈತ ಆಪ್ತ ಮಿತ್ರನಾಗಿರುತ್ತಾನೆ. ಇದನ್ನೆಲ್ಲಾ ಸಹಿಸದ, ಅವನ ನಿಜ ಬಣ್ಣವನ್ನು ಕಂಡ ಅವನ ಅನುಯಾಯಿಗಳು ಕೆಲವರು ಕ್ರಾಂತಿ ಸೇನೆಯನ್ನು ತೊರೆದು ಕ್ರಾಂತಿಕೂಟವೆಂಬ ಹೊಸ ಗುಂಪು ಕಟ್ಟುತ್ತಾರೆ. ಪುರುಷೋತ್ತಮ ಬಾಬು ಎಂಬ ಗಾಂಧಿವಾದಿಯ ಮಗನಾಗಿದ್ದೂ ಎಡಪಂಥೀಯ ನಿಲುವುಗಳಿಗೆ ಒಲಿದ ಚಂದ್ರಹಾಸನೆಂಬ ಸಾಹಸಿಯೊಬ್ಬ ಇದರ ನಾಯಕನಾಗುತ್ತಾನೆ. ಇದೂ ಅನಿವಾರ್ಯವೆನಿಸಿದಾಗ ಹಿಂಸಾ ಮಾರ್ಗವನ್ನು ಹಿಡಿಯುವ ಪಂಗಡವೇ, ಅಂದಾಗ್ಯೂ ಅನಗತ್ಯ ಹಿಂಸೆ ರಕ್ತಪಾತವನ್ನು ಒಪ್ಪುವ ಗುಂಪಲ್ಲ. ಹೀಗಾಗಿ ಜನ ಮನ್ನಣೆ ಇದರ ಕಡೆಗಿರುತ್ತದೆ. ಎರಡೂ ತಂಡಗಳು ಪರಸ್ಪರ ಪೈಪೋಟಿ ನಡೆಸುತ್ತದೆ. ಸಾತ್ವಿಕ ರಾಜಕಾರಣಿ, ಕಾಂಗ್ರೆಸ್ ಮುಖಂಡ, ಜನಾನುರಾಗಿ ಜಮೀನ್ದಾರ, ಗೋಪಾಲ್ ಮತ್ತವನ ಸಂಸಾರ ಈ ಹಿಂಸಾಚಾರಿಗಳ ಮೇಲಾಟಕ್ಕೆ ಬಲಿಯಾಗುತ್ತದೆ. ಕ್ರಾಂತಿಕಾರಿ ಗುಂಪುಗಳ ಸ್ಪರ್ಧೆಗೆ ಜನ ತಮ್ಮ ಜೀವ ಮತ್ತು ಜೀವನಗಳ ಬೆಲೆ ತೆರಬೇಕಾಗುತ್ತದೆ. ಕ್ರಾಂತಿ ಸೇನೆಯ ಶಂಕರನನ್ನು ಸಾಯಿಸುವುದರೊಂದಿಗೆ ಕ್ರಾಂತಿಕೂಟದ ಚಂದ್ರಹಾಸನನ್ನು ಉಳಿಸುವುದರೊಂದಿಗೆ ಮುಕ್ತಾಯವಾಗುವ ಕಾದಂಬರಿ ಕ್ರಾಂತಿಕೂಟದ ವಿಜಯವನ್ನು ಸೂಚಿಸುತ್ತದೆ.

ಅವ್ಯವಸ್ಥೆ, ಅಶಾಂತಿ, ಕ್ರೂರತನ, ದುಃಖಗಳಿಗೆ ಕಡಿದಾಳರು ಆಧ್ಯಾತ್ಮದಲ್ಲಿ ಪರಿಹಾರ ಕಂಡಿದ್ದಾರೆ. ಕಾದಂಬರಿಯಲ್ಲಿ ಅನಿಲಗಿರಿಯ ಮೇಲಿರುವ ಸೌಮ್ಯಾಶ್ರಮದ ಬೈರಾಗಿ ಸಿದ್ಧಾನಂದರು ನೊಂದ ಸಂದರ್ಶಕರಿಗೆ ನೆಮ್ಮದಿ ನೀಡುತ್ತಾರೆ. ದುಷ್ಟ ಶಂಕರನ ವಿರುದ್ಧ ಸಿದ್ಧಿ ಮಹಾರಾಜರು ಜನ ಜಾಗೃತಿ ಉಂಟು ಮಾಡುತ್ತಾರೆ. ಅಲ್ಲದೇ ಅಪಮಾರ್ಗ ಹಿಡಿದ ಕ್ರಾಂತಿಕಾರಿಗಳನ್ನು ಬಗ್ಗು ಬಡಿಯುವ ಸಾಮರ್ಥ್ಯವನ್ನು ತೋರುತ್ತಾರೆ. ಯಾರೂ ಎಂದೂ ಎದುರಿಸದಿದ್ದ ಶಂಕರನನ್ನು 'ಏಕಾಂಗಿಯಾಗಿ

ಎದುರಿಸಿ ಅಸ್ತ್ರಧಾರಿಯಾಗಿದ್ದ ಆತ ಸೋತು ಶರಣಾಗುವಂತೆ, ಅವಮಾನಿತನಾಗಿ ಹಿಂದಿರುಗುವಂತೆ ಮಾಡುತ್ತಾರೆ. ಈ ಮೂಲಕ ಕಾದಂಬರಿ ಆಧ್ಯಾತ್ಮದಲ್ಲಿ ಅರಾಜಕತೆಗೆ ಉತ್ತರವಿದೆ ಎಂಬ ಸಂದೇಶ ನೀಡುತ್ತದೆ. ಇಂಥ ಒಲವಿರುವ ಕಾರಣದಿಂದಾಗಿಯೇ ಲೇಖಕರು ನಾಸ್ತಿಕತೆ ವಿಚಾರವಂತಿಕೆಗಳಿಗೂ ದುಷ್ಟತನ ಕ್ರೌರ್ಯಗಳಿಗೂ ನಂಟನ್ನು ಅಂಟಿಸಿದಂತೆ ತೋರುತ್ತದೆ. ರಾಜಕೀಯ ತತ್ವ ಸಿದ್ಧಾಂತಗಳ ಪ್ರತಿಪಾದನೆ, ನಡುವೆ ಪ್ರಾಸಂಗಿಕವಾಗಿ ಬರುವ ದೈವ ಶ್ರದ್ಧೆ ನಾಸ್ತಿಕತೆಗಳ ಕುರಿತಾದ ವಿವಾದ ಮುಂತಾದವು ಒಣ ಚರ್ಚೆಗಳಾಗದಂತೆ, ಬೇಸರ ತರಿಸದಂತೆ ಹದವರಿತು ಬರೆದಿದ್ದಾರೆ. ಆದರೆ ನಡು ನಡುವೆ ನಿರ್ದಿಷ್ಟ ರಾಜಕೀಯ ಪಕ್ಷ ಮತ್ತು ನಾಯಕರ ಹೆಸರುಗಳನ್ನು ಬಳಸಿರುವುದರಿಂದ ಕಥೆಯ ಕಾಲ್ಪನಿಕತೆಗೆ ಧಕ್ಕೆಯೊದಗಿ ಕಥೆ ಪೂರ್ಣ ಕಲ್ಪಿತವೂ ಆಗದೆ, ಪೂರ್ಣ ಸತ್ಯಕತೆಯ ನೆಲೆಯಲ್ಲಿಯೂ ನಿಲ್ಲದೆ ಗೊಂದಲಕ್ಕೆಡೆಯಾಗಿದೆ. ಹೀಗಾಗಿ ವಸ್ತು ನಿರ್ವಹಣೆಯಲ್ಲಿ ಲೇಖಕರು ಎಡವಿದ್ದಾರೆನಿಸುತ್ತದೆ.

ಆದಾಗ್ಯೂ ಕಲ್ಪನೆಗಳಾಗಿ ಮೂಡಿ ಬಂದಿರುವ ಪ್ರಣಯ, ದರೋಡೆ, ಕಗ್ಗೊಲೆಗಳ ವರ್ಣನೆಗಳು ಸಹಜವಾಗಿ ಸೊಗಸಾಗಿವೆ. ಇವುಗಳಲ್ಲಿ ರತಿ, ಕ್ರೋಧ, ಶೋಕ ಮುಂತಾದ ಭಾವಗಳ ಮತ್ತು ಮಾನವೀಯ ಸಂಬಂಧಗಳ ಕೌಟುಂಬಿಕ ಬದುಕಿನ ಬಣ್ಣನೆ, ಕೃಷ್ಣಕಾಂತ, ಕಮಲೆಯರ ವಿರಸ ದಾಂಪತ್ಯ, ಗೋಪಾಲಚಂಚಲೆಯವರ ಸುಖೀ ದಾಂಪತ್ಯ, ಚಂದ್ರಹಾಸಗೌರಿಯವರ ಆದರ್ಶ ದಾಂಪತ್ಯ ಇವುಗಳು ವ್ಯಕ್ತಿಗಳ ವೈವಾಹಿಕ ಜೀವನದ ವೈವಿಧ್ಯಗಳ ದರ್ಶನ ಮಾಡಿಸುತ್ತವೆ. ಇವುಗಳಲ್ಲೊಂದು ಅಂತರ್ಜಾತಿಯ ವಿವಾಹವಾಗಿದ್ದೂ ಸಮಾಜ ಸುಧಾರಣೆಯ ಆಶಯವೂ ವ್ಯಕ್ತವಾಗಿದೆ. ಸಾಂಸಾರಿಕ ಸನ್ನಿವೇಶಗಳು ಎಲ್ಲೂ ಅತಿರಂಜಿತವಾಗದೆ ಮನ ಮುಟ್ಟುವಂತೆ ಚಿತ್ರಿತವಾಗಿದೆ.

ಕಡಿದಾಳರ ಲೇಖನಿಯಿಂದ ಪಾತ್ರಗಳು ತನ್ನಿಂತಾನೆ ರೂಪು ಪಡೆದಂತೆ ಕಾಣುತ್ತವೆ. ಕೃಷ್ಣಕಾಂತ, ಶಂಕರ, ಚಂದ್ರಹಾಸ, ಗೋಪಾಲ. ಚಂಚಲೆ, ಕಮಲೆ ಮುಂತಾದ ಮುಖ್ಯ ಪಾತ್ರಗಳು ನೆನಪಿನಲ್ಲುಳಿದು ಕಾಡುತ್ತವೆ. ಕೃಷ್ಣಕಾಂತನ ಒಳ್ಳೆತನ, ಕಮಲೆಯ ಕೆಟ್ಟತನ, ಶಂಕರನ ದೌಷ್ಟ್ಯ, ಚಂದ್ರಹಾಸ ಸ್ಥೈರ್ಯ, ಚಂಚಲೆಯ ಅಪಕ್ವತನ, ಗೋಪಾಲನ ದೃಢತೆ ಹೀಗೆ ಪರಸ್ಪರ ವಿರುದ್ಧ ಗುಣದ ವ್ಯಕ್ತಿಗಳನ್ನು ಮುಖಾಮುಖಿಯಾಗಿಸುತ್ತಾ ಮನುಷ್ಯ ಸ್ವಭಾವಗಳ ಚೆನ್ನಾದ ಪರಿಚಯ ಮಾಡಿಸುತ್ತಾರೆ. ಚಿಕ್ಕ ಪಾತ್ರಗಳ ವಿಚಾರದಲ್ಲಿಯೂ ಇದು ಹೀಗೇ ಸಾಗಿದೆ. ಇಲ್ಲಿ ನಾರಾಯಣನಂಥ ವಿಧೇಯ, ಕೃತಜ್ಞ ಸೇವಕನಂತೆ ರಾಮಿಯಂಥ ಕೃತಘ್ನ ಕೇಡಿಗ ಸೇವಕಿಯಿದ್ದಾಳೆ. ಕೇಸರಿಸಿಂಗ್, ಇಸ್ಮೇಯಿಲ್‌ರಂಥ ಕೊಲೆಗಡುಕರಿರುವಂತೆ ಗಂಗಾಧರ ಅನಿಕುಮಾರರಂಥ

ಮುಗ್ಧ ಮಕ್ಕಳಿದ್ದಾರೆ. ಸ್ವರೂಪರಾಣಿ, ಶಾರದೆಯರಂಥ ಸದ್ಗೃಹಿಣಿಯರಿದ್ದಾರೆ. ಹೀಗೆ ಬಹು ಬಗೆಯ ವ್ಯಕ್ತಿಗಳ ಪರಿಚಯ ನಮಗಿಲ್ಲಿ ಆಗುತ್ತದೆ. ಇಲ್ಲಿನ ರಾಜಕೀಯ ಮತ್ತು ಸಾಂಸಾರಿಕ ಸನ್ನಿವೇಶ ಪಾತ್ರಗಳ ಮೂಲಗಳನ್ನು ಕಡಿದಾಳರ ಆತ್ಮಕಥೆ ಮತ್ತಿತರ ಬರಹಗಳಲ್ಲಿ ಗುರುತಿಸಬಹುದಾಗಿದೆ. ಶಂಕರ ನಡೆಸುವ ಕೊಲೆ ಸುಲಿಗೆಗಳಿಗೆ ಬಂಗಾಳದ ನಕ್ಸಲೈಟರ ಇಂಥ ಕ್ರಿಯೆಗಳ ಪತ್ರಿಕಾ ವರದಿಗಳು ಆಧಾರವೆಂದು ಲೇಖಕರೇ ಹೇಳಿದ್ದಾರೆ. ಪ್ರಾಮಾಣಿಕವಾಗಿ ದುಡಿದುಣ್ಣುವ ವಕೀಲ ಕೃಷ್ಣಕಾಂತನಲ್ಲಿ ಸ್ವತಃ ಕಡಿದಾಳರೇ ಕಾಣುತ್ತಾರೆ. ಮೊದಲ ಕಾದಂಬರಿ ಪಂಜರವಳ್ಳಿಯ ಪಂಜುವಿನಲ್ಲಂತೂ ಕಡಿದಾಳ್ ಕುಟುಂಬದ ಹಲವು ಹಿರಿಯ ವ್ಯಕ್ತಿಗಳನ್ನು ಗುರುತಿಸಬಹುದು. ಹೀಗಾಗಿ ದಟ್ಟವಾದ ಅನುಭವ ದ್ರವ್ಯವೇ ವ್ಯುತ್ಪತ್ತಿ ಶಕ್ತಿಯಾಗಿ ಕಡಿದಾಳರ ಸಾಹಿತ್ಯ ಸೃಷ್ಟಿಯ ಹಿನ್ನೆಲೆಯಲ್ಲಿ ಕೆಲಸ ಮಾಡಿದೆ. ಇದನ್ನು ಕಥೆಯಾಗಿ ಹೆಣೆಯುವ ಕಲೆ ಅವರಿಗೆ ಸಿದ್ಧಿಸಿತ್ತೆಂಬುದಕ್ಕೆ ಕ್ರಾಂತಿಕೂಟ ಸಾಕ್ಷಿಯಾಗಿದೆ.

ತೋಚಿದಂತೆ ಬರೆಯುತ್ತೇನೆನ್ನುತ್ತಾ ನೇರ ನಿರೂಪಣೆಯಲ್ಲಿ ತೊಡಗುವ ಕಡಿದಾಳರು ಕಾದಂಬರೀ ತಂತ್ರಗಳನ್ನು ಕುರಿತು ಚಿಂತಿಸಿದಂತೆ ತೋರುವುದಿಲ್ಲ. ಸಾಹಿತ್ಯಿಕ ಮೌಲ್ಯಗಳ ಬಗ್ಗೆಯೂ ಅವರು ತಲೆ ಕೆಡಿಸಿಕೊಳ್ಳುವುದಿಲ್ಲ. ಆದಾಗ್ಯೂ ಅನಿಲಗಿರಿಯಲ್ಲಿ ಶಂಕರ ಚಂಚಲೆಯರ ದಿಡೀರ್ ಪ್ರಣಯದಿಂದ ಆರಂಭವಾಗುವ ಕ್ರಾಂತಿಕೂಟ ಕಾದಂಬರಿ ಅದೇ ಸ್ಥಳದಲ್ಲಿ ಅವೇ ಪಾತ್ರಗಳು ಅದೇ ನೆಪದಲ್ಲಿ ಸಂಧಿಸಿ ದುರಂತಕಾಣುವ ಸನ್ನಿವೇಶದೊಂದಿಗೆ ಮುಕ್ತಾಯವಾಗುವಲ್ಲಿ, ಆ ನಡುವೆ ಈ ಎರಡು ಮುಖ್ಯ ಪಾತ್ರಗಳ ಸುತ್ತಲೇ ಕಥೆಯ ಹಂದರ ಹೆಣೆದುಕೊಳ್ಳುವಲ್ಲಿ,' "ನಮ್ಮವರೇ ನಮ್ಮ ಶತ್ರುಗಳು" ಎಂಬ ಕಾದಂಬರಿಯ ಮೊದಲ ವಾಕ್ಯಕ್ಕೆ ಪುರಾವೆಗಳಂತೆ ಎಲ್ಲಾ ಘಟನಾವಳಿಗಳು ನಡೆಯುವಲ್ಲಿ ಸುಪ್ತವಾದ ಕಥಾ ತಂತ್ರವೊಂದು ಈ ಕೃತಿಯ ರಚನೆಯಲ್ಲಿ ಕೆಲಸ ಮಾಡಿರುವಂತೆ ಭಾಸವಾಗುತ್ತದೆ.

ವರ್ಣನೆಗಳ ವಿಚಾರಕ್ಕೆ ಬಂದಾಗ ಕಡಿದಾಳರು ಕವಿಯಾಗುತ್ತಾರೆ. ಅನಿಲಗಿರಿಯ ಸಂಜೆಯ ಸೌಂದರ್ಯ ಅವರ ಲೇಖನಿಯಿಂದ ಸುಂದರವಾಗಿ ಮೂಡಿ ಬರುತ್ತದೆ.

'ಸೂರ್ಯಾಸ್ತ ಸಮಯ ಕೋಟೆಯ ಸುತ್ತಲೂ ನಾಲ್ಕೈದು ಮೈಲುಗಳ ದೂರದವರೆಗೆ ಆಕಾಶ ವರ್ತುಲಾಕಾರವಾಗಿ ಭೂಮಿಗೆ ಬೆಸೆದುಕೊಂಡಿರುವಂತೆ ಕಾಣಿಸುತ್ತಿತ್ತು. ಹಕ್ಕಿ ಪಕ್ಷಿಗಳು ತಮ್ಮ ಹಕ್ಕೆಗಳ ಕಡೆಗೆ ಧಾವಿಸುತ್ತಿದ್ದವು. ಇರುಳು ಹಗಲನ್ನು ಅಟ್ಟಿಸಿಕೊಂಡು ಹೋಗುತ್ತಿರುವುದೋ ಎಂಬಂತೆ, ಅಸ್ತಂಗತವಾಗುತ್ತಿದ್ದ ನೇಸರು ನಿಶಾದೇವಿಯೊಡನೆ ಸರಸವಾಡುತ್ತಿರುವನೋ ಎಂಬಂತೆ ಬಾಳಿನ

ಜಂಜಾಟದಿಂದ ಹಗಲೆಲ್ಲವೂ ಬಳಲಿದ್ದ ಜಗದ ಜೀವಿಗಳಿಗೆ ಶಾಂತಿ ವಿಶ್ರಾಂತಿಗಳನ್ನಿಯಲು ಕಾಲ ಪುರುಷನು ಮಾಯಾ ದಂಡವನ್ನು ಬೀಸುತ್ತಿರುವನೋ ಎಂಬಂತೆ ಭಾಸವಾಗುತಿತ್ತು" (ಕ್ರಾಂತಿಕೂಟ ಪುಟ ೪) ಎಂದು ಬಣ್ಣಿಸುತ್ತಾ ಲೇಖಕರು ಕಲ್ಪನಾ ಲೋಕದಲ್ಲಿ ಮುಳುಗಿ ಹೋಗುತ್ತಾರೆ. ಕಡಿದಾಳರ ಪ್ರಕೃತಿ ವರ್ಣನೆಗಳು ವಿಶಿಷ್ಟವೆನಿಸುತ್ತವೆ.

ಕಡಿದಾಳರ ಭಾಷಾ ಶೈಲಿ ಸರಳ ನಿರಾಡಂಬರ. ಪಂಜರವಳ್ಳಿ ಪಂಜುವಿನಲ್ಲಿ ಬಹು ಸಂಖ್ಯೆಯಲ್ಲಿ ಗಾದೆ ಮಾತುಗಳನ್ನು ಬಳಸುತ್ತಾರೆ ಮತ್ತು ಅಲ್ಲಿನ ಸಂಭಾಷಣೆ ಮಲೆನಾಡಿನ ಸೊಗಡಿನಿಂದ ಕೂಡಿ ಸೊಗಸಾಗಿದೆ. ಕ್ರಾಂತಿಕೂಟದಲ್ಲೂ ಅಪರೂಪಕ್ಕೆ, ದೂರದ ಬೆಟ್ಟ ನುಣ್ಣಗೆ, ಎಲ್ಲಾ ಬಿಟ್ಟು ಮಗ ಭಂಗಿನೆಟ್ಟ, ಮಂಗನ ಕೈಯ್ಯಾಗೆ ಮಾಣಿಕ್ಯ ಕೊಟ್ಟ ಹಾಗೆ,ಆಡೂ ಮಕ್ಕಳಸಿರಿ ಅಂಗಳದಾಗೆ ಕಾಣ್ತದೆ, ಮುಂತಾದ ಮಲೆನಾಡಿನ ಜನಜನಿತ ಗಾದೆಗಳನ್ನು ಬಳಸಿದ್ದಾರೆ. ಇಲ್ಲಿನ ಸಂಭಾಷಣೆಯಲ್ಲಿಯೂ ಮಲೆನಾಡಿನ ಗ್ರಾಮ್ಯ ಭಾಷೆಯ ಧ್ವನಿ ಸ್ವನಗಳು ಸೇರಿಕೊಂಡಿವೆ. 'ಈಗ ಸುಮಾರು ನಾಲ್ಕು ತಿಂಗಳು ಆಗಿರ್‍ಬೇದು. ಒಂದಿನ ರಾತ್ರಿ ಕೋವಿ ತಗುಂಡು ಮೊಲ ಹೊಡಿಯಾಕೆ ಅಂತ ಕ್ವಾಟೀಗೆ ಹೋಗಿದ್ದೆ, ಅಲ್ಲಿ ಕೊಳ ಅದಿಯಲ್ಲಾ ಅದ್ರ ದಂಡೆ ಮ್ಯಾಲೆ ಉಂದು ಮರ್ದ ಬುಡ್ದಾಗೆ ಕೂತಿದ್ದೆ.. (ಕ್ರಾಂತಿಕೂಟ ಪುಟ. ೧೮) ಹಳ್ಳಿಗನೊಬ್ಬ ಆಡುವ ಇಂಥ ಮಾತುಗಳು ಮಲೆನಾಡ ಗ್ರಾಮ್ಯ ಕನ್ನಡವನ್ನೇನೋ ಚೆನ್ನಾಗಿ ಪ್ರತಿನಿಧಿಸುತ್ತವೆ. ಆದರೆ ಇವು ಇಲ್ಲಿ ಒಂದು ಬಗೆಯ ಅಸಾಂಗತ್ಯವನ್ನು ಸೃಷ್ಟಿಸುತ್ತದೆ. ಕ್ರಾಂತಿಕೂಟದ ಕಥೆಯ ಸನ್ನಿವೇಶ ಪಾತ್ರಗಳು ನಿರ್ದಿಷ್ಟ ಪ್ರದೇಶದ ಹೊಲಬು ನೀಡುವುದಿಲ್ಲ. ಕೃಷ್ಣಕಾಂತ, ಪುರುಷೋತ್ತಮಬಾಬು, ರುಮದೇವಿ, ಸ್ವರೂಪವಾಣಿ, ರಮೇಶ್ಚಂದ್ರ ಮುಂತಾದ ಇಲ್ಲಿನ ಹೆಸರುಗಳು ಬಂಗಾಳದ ವ್ಯಕ್ತಿಗಳನ್ನು ಪ್ರತಿನಿಧಿಸುವಂತಿವೆ. ಸಿರಿಯಾವತಿ ನದಿ, ಅನಿಲಪುರ ಇತ್ಯಾದಿ ಹೆಸರುಗಳೂ ಮಲೆನಾಡಿನವೆನಿಸುವುದಿಲ್ಲ. - ಬಂಕಿಮಚಂದ್ರ ಮುಂತಾದ ಬಂಗಾಳಿ ಕಾದಂಬರಿಕಾರ ಪ್ರಭಾವವನ್ನೂ ಇಲ್ಲಿ ಕಾಣಬಹುದು. ಪಶ್ಚಿಮ ಬಂಗಾಳವೇ ಲೇಖಕರ ಮನದಲ್ಲಿದೆ. ಹೀಗಿರುವಾಗ ರೈತರು ಆಳು ಕಾಳುಗಳು ಕೆಲವೊಮ್ಮೆ ಶಿಷ್ಟ ಪಾತ್ರಗಳೂ ಮಲೆನಾಡಿನ ಪ್ರಾದೇಶಿಕ ಭಾಷೆಯಲ್ಲಿ ಮಾತನಾಡುವುದು ಕಥೆಗೆ ಪರಕೀಯವಾಗುತ್ತದೆ. ಹೀಗಾಗಿ ಲೇಖಕರ ಆಡುಭಾಷೆಯ ಮೇಲಿನ ಪ್ರೀತಿ ಅಸಮಂಜಸ ಸಂಭಾಷಣಾ ರಚನೆಯಲ್ಲಿ ಪರ್ಯವಸಾನವಾಗಿದೆ. ಅಲ್ಲಲ್ಲಿ ಕೆಲವು ಅಶುದ್ಧ ಪದ ಪ್ರಯೋಗಗಳಿವೆಯಾದರೂ ಅವನ್ನು ನಿರ್ಲಕ್ಷಿಸಬಹುದಾಗಿದೆ. ಹೀಗಿದ್ದೂ ಕ್ರಾಂತಿಕೂಟ ಒಂದು ಒಳ್ಳೆಯ ಕಾದಂಬರಿ ಎಂಬ ಪ್ರಶಂಸೆಗೆ ಅರ್ಹವಾಗುತ್ತದೆ.

"ಎಲ್ಲ ಕಾಲಕ್ಕೂ ಎಲ್ಲಾ ದೇಶಕ್ಕೂ ಎಲ್ಲ ಸನ್ನಿವೇಶಗಳಿಗೂ ಸರಿ ಹೋಗತಕ್ಕ ರಾಜಕೀಯ ಸಿದ್ಧೌಷಧವನ್ನು ಇದುವರೆಗೆ ಯಾರೂ ಕಂಡು ಹಿಡಿದಿಲ್ಲ"ವೆಂಬುದನ್ನು ಚೆನ್ನಾಗಿ ಬಲ್ಲ ಕಡಿದಾಳರು ಇಲ್ಲಿ ಯಾವ ಸಿದ್ಧಾಂತಗಳನ್ನು ನಿರಾಕರಿಸುವುದಿಲ್ಲ. ಕಾಂಗ್ರೆಸ್ ತತ್ವಗಳಂತೆಯೇ ಕಮ್ಯುನಿಸ್ಟ್ ತತ್ವಗಳು, ಗಾಂಧಿಯಂತೆ ಕಾರ್ಲ್‌ಮಾರ್ಕ್ಸ್‌ನ ವಿಚಾರಗಳೂ ಅವರಿಗೆ ಪಥ್ಯವೇ. ಆದರೆ ಈ ಸಿದ್ಧಾಂತಗಳ ಹೆಸರಿನಲ್ಲಿ ರಾಜಕೀಯ ಮಾಡುತ್ತಿರುವ ವ್ಯಕ್ತಿಗಳ ಭ್ರಷ್ಟತೆ ಹಿಂಸಾಚಾರಗಳ ಬಗ್ಗೆ ಅವರು ಆಕ್ರೋಶಗೊಳ್ಳುತ್ತಾರೆ. ಖೋಟಾ ಕಾಂಗ್ರೆಸ್ಸಿಗರು, ಇಲ್ಲಿ ಮುಖ್ಯವಾಗಿ ಕ್ರೂರಿ ಕಮ್ಯುನಿಷ್ಟರು ದೇಶ ವಿನಾಶಗೈಯ್ಯುತ್ತಿದ್ದಾರೆ ಎಂಬ ಕೊರಗು ಅವರನ್ನು ಕಾಡುತ್ತಿದೆ. ಆದ್ದರಿಂದಲೇ ಇಂಥವರನ್ನು ಉಗ್ರವಾಗಿ ವಿರೋಧಿಸುತ್ತಾರೆ. ವಿರೋಧಿಗಳ ಹನನಕ್ಕೆ ಅವರು ಬಳಸಿದ ಅಸ್ತ್ರ ಲೇಖನಿ. ಆ ಲೇಖನಿಗೆ ಓದುಗರಲ್ಲಿ ವೈಚಾರಿಕ ಜಾಗೃತಿ ಉಂಟು ಮಾಡುವ, ಕೆಡುಕಿನ ವಿರುದ್ಧ ಉರಿದೇಳಿಸುವ ಶಕ್ತಿ ಇದೆ.

ಹೀಗೆ ಸ್ಫೋಟಗೊಳ್ಳುವುದಕ್ಕೂ ಸ್ಥೈರ್ಯ ಬೇಕು. ಗಾಂಧಿಯಂತೆ ಸೊಣಕಲು ಶರೀರಿಯಾಗಿದ್ದ ಕಡಿದಾಳರಲ್ಲಿ ಅಂಥ ಮನೋಬಲ ಇತ್ತು. ನೈತಿಕ ಶಕ್ತಿ ಇತ್ತು. ಕಂಡದ್ದನ್ನು ಕಂಡ ಹಾಗೆ ಬರೆಯುವ ದಿಟ್ಟತನವಿತ್ತು. ಪ್ರಖರವಾದ ದೇಶಭಕ್ತಿಯಿಂದ ಪ್ರೇರಿತವಾದ ಈ ದಿಟ್ಟತನ ಅವರ ಪುಸ್ತಕಗಳ ಪುಟ ಪುಟಗಳಲ್ಲೂ ಪುಟಿಯುವುದನ್ನು ಕಾಣಬಹುದು. ದೇಶದ ಇಂದಿನ ಪಿಡುಗುಗಳಾದ, ಕೋಮುವಾದ, ಭಯೋತ್ಪಾದನೆ, ನೈತಿಕ ಅಧಃಪತನ, ಅಜ್ಞಾನ, ಅಂಧ ಶ್ರದ್ಧೆಗಳನ್ನು ಕುರಿತು ಧೈರ್ಯದಿಂದ ಬರೆಯುವ ಲೇಖಕರು ಈಗ ಬೇಕಾಗಿದ್ದಾರೆ. ಅಂಥವರಿಗೆ ಕಡಿದಾಳರ ಕಾದಂಬರಿಗಳು ಮಾದರಿಯಾಗಿವೆ.

ದೇಶಭಕ್ತಿ, ದೈವಭಕ್ತಿ, ಸತ್ಯನಿಷ್ಠೆ, ಸೌಂದರ್ಯ ಪ್ರಜ್ಞೆ, ಸರ್ವೋದಯ, ಸಮಾನತೆ ಮುಂತಾದ ಆದರ್ಶಗಳ ಬೆನ್ನು ಹತ್ತಿದ್ದ ಕಡಿದಾಳರು ಪ್ರಗತಿಪರ ಧೋರಣೆಯ ನವೋದಯ ಮನೋಭಾವದ ಲೇಖಕರಾಗಿದ್ದಾರೆ. ಕನ್ನಡದ ಗಣನೀಯ ಸಾಹಿತಿಯಾಗಿದ್ದ ಅವರು ಹುಟ್ಟಿ ಶತ ಸಂವತ್ಸರಗಳಾಗಿರುವ ಈ ಹೊತ್ತಿನಲ್ಲಿ ಅವರ ಕೃತಿಗಳ ಪುನರ್ ಪರಾಮರ್ಶೆ ನಡೆಯುತ್ತಿರುವುದು ಸ್ವಾಗತಾರ್ಹ ಸಂಗತಿ.

# "ನನಸಾಗದ ಕನಸು"

–ಪಿ.ಲಂಕೇಶ್

ಈತ ತೆಳ್ಳನೆಯ ಮನುಷ್ಯ, ಎಷ್ಟು ತೆಳ್ಳನೆ ಮನುಷ್ಯನೆಂದರೆ ಸರಳ ರೇಖೆಯನ್ನು ಜಾಮಿಟ್ರಿಯಲ್ಲಿ ವರ್ಣಿಸುವಂತೆ 'ಎರಡು ಚುಕ್ಕೆಗಳ ನಡುವಿನ ನೇರ ದೂರ' ಎಂದು ಹೇಳಬಹುದು; ಹಂಚಿಕಡ್ಡಿ , ಬಡಕಲು ಪ್ರಾಣಿ ಇತ್ಯಾದಿ ಏನೆಂದರೂ ಆದೀತು. ಇವರು ಒಮ್ಮೆ ಕಾಮಗಾರಿ ಮಂತ್ರಿಯಾಗಿದ್ದಾಗ ಅನೇಕ ಕಡೆಯ ಕಾಮಗಾರಿ ಕೆಲಸಗಳನ್ನು ನೋಡಲು ಹೋದರು, ಧೂಳು, ಸುಸ್ತು, ವೀಕ್ಷಣೆಯ ಕೆಲಸದಿಂದಾಗಿ ಆಸ್ಪತ್ರೆ ಸೇರಬೇಕಾಯಿತು. ಕೆಮ್ಮಿದರೆ ಕಫ ಲೋಳೆಲೋಳೆಯಾಗಿ ಸುರಿಯತೊಡಗಿತು. ಜ್ವರ ಏರತೊಡಗಿತು. ವೈದ್ಯಕೀಯ ಅಷ್ಟು ಆಧುನಿಕವಲ್ಲದ ಆಗ ವೈದ್ಯರು ಇವರಿಗೆ ಕ್ಷಯವಾಗಿರಬಹುದೆಂದು ಅನುಮಾನಿಸಿದರು. ಸುದ್ದಿ ಎಲ್ಲೆಲ್ಲೂ ಹಬ್ಬಿ ಇವರ ಅಭಿಮಾನಿಗಳು ಕೊನೆಯ ದರ್ಶನಕ್ಕಾಗಿ ಬರತೊಡಗಿದರು. ಇವರಿಗಿಂತ ತೀರಾ ಭಿನ್ನ ವ್ಯಕ್ತಿತ್ವದ ಇವರ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರು ಆಸ್ಪತ್ರೆಗೆ ಬಂದು ರೋಗಿಯ ಹಾಸಿಗೆಯ ಪಕ್ಕದಲ್ಲಿ ನಿಂತು ತಮ್ಮ ಸಹೋದ್ಯೋಗಿಯನ್ನು ಬೀಳ್ಕೊಡುವ ದುಗುಡದಲ್ಲಿ ಮುಳುಗಿಸಿದರು. ರೋಗಿಯೇ ಅವರಿಗೆ ಸಮಾಧಾನ ಹೇಳಬೇಕಾಯಿತು. ಆಗ ವೈದ್ಯರು ಪರೀಕ್ಷೆಗಳನ್ನು ಮುಂದುವರೆಸಿದರು, ಕ್ಷಯವಲ್ಲ. ಆಯಾಸ ಮಾತ್ರ ಎಂಬ ತೀರ್ಮಾನಕ್ಕೆ ಬಂದರು. ಬಡಕಲು ಆಸಾಮಿ ಗುಣಮುಖರಾದರು. ಪೂರ್ತಿ ಗುಣವಾಗುವಲ್ಲಿ ತಿಂಗಳುಗಳೇ ಆಯಿತು. ಆಸ್ಪತ್ರೆಯಿಂದ ಹೊರ ಬಂದ ಕೆಲವೇ ದಿನಗಳಲ್ಲಿ ಮುಖ್ಯಮಂತ್ರಿಯಾದರು. ಮೂರು ತಿಂಗಳ ಮುಖ್ಯಮಂತ್ರಿ; ಈ ವ್ಯಕ್ತಿಯೇ 'ಮೂರು ತಿಂಗಳ ಸುಲ್ತಾನನಾದೆ' ಎಂದು ತಮಾಷೆ ಮಾಡುತ್ತಿತ್ತು.

ಇವರು ಕಡಿದಾಳು ಮಂಜಪ್ಪ. 'ನನಸಾಗದ ಕನಸು' ಎಂಬ ಆತ್ಮ ಚರಿತ್ರೆಯನ್ನು ಈಚೆಗೆ ತಮ್ಮ ೮೨ನೇ ವಯಸ್ಸಿನಲ್ಲಿ ಬರೆದಿರುವ ಕಡಿದಾಳು ಮಂಜಪ್ಪನವರ ಬಗ್ಗೆ ಹೊಸ ಜನಾಂಗದ ತರುಣ ತರುಣಿಯರಿಗೆ ಅಷ್ಟು ಗೊತ್ತಿಲ್ಲವಾದ್ದರಿಂದ ಈ ಆತ್ಮ ಚರಿತ್ರೆಯನ್ನು ಓದಿದ ಹುಮ್ಮಸ್ಸು, ಖುಷಿಯಲ್ಲಿ ಬರೆಯುತ್ತಿದ್ದೇನೆ. ನಾವೆಲ್ಲಾ ತಿಳಿದುಕೊಂಡಿದ್ದು. ಕಡಿದಾಳ್ ಮಂಜಪ್ಪನವರು ಮಲೆನಾಡಿನ ಶ್ರೀಮಂತ ಅಥವಾ ಮಧ್ಯಮವರ್ಗದಿಂದ ಬಂದವರೆಂದು; ಈ ವಂಶವೃಕ್ಷಕ್ಕೆ ಸೇರಿದ ಎನ್.ಡಿ. ವೆಂಕಟೇಶ್, ಸುಂದರೇಶ್, ಸುರೇಂದ್ರ ಮುಂತಾದ ಗಣ್ಯರನ್ನು, ಶ್ರೇಷ್ಠ ವ್ಯಕ್ತಿಗಳನ್ನು ಗಮನಿಸಿದರೆ ಹಾಗೆನ್ನಿಸುವುದು ಸಹಜ. ಆದರೆ ಕಡಿದಾಳು ಮಂಜಪ್ಪ ಶಿವಮೊಗ್ಗೆಯ ಮಲೆನಾಡಿನ

ಗರ್ಭದಿಂದ, ಅತ್ಯಂತ ಬಡ ಕುಟುಂಬವೊಂದರಿಂದ ಬಂದವರೆಂದು ತಿಳಿಸುವ ಮಂಜಪ್ಪನವರ ಸಂವೇದನೆಯ ಬಗ್ಗೆ ಗಾಢ ಕುತೂಹಲ ಮೂಡುತ್ತದೆ, ಇವರು ಹೆಚ್ಚು ಕಮ್ಮಿ ನನ್ನ ಜನಾಂಗವನ್ನು ಹೋಲುವಂಥವರು. ಶತಮಾನಗಳ ಕಾಲ ಒಂದೇ ರೀತಿಯಲ್ಲಿ ಬದುಕಿದ ಕುಟುಂಬವೊಂದು ಅಕ್ಷರ ಜ್ಞಾನ, ಲೋಕಜ್ಞಾನ ಗಳಿಸಿಕೊಂಡೊಡನೆ ಹೊಸ ಪೀಳಿಗೆಯೊಂದು ಸೃಷ್ಟಿಯಾಯಿತು. ನಮ್ಮ ಗ್ರಾಮಗಳಲ್ಲಿ ಶತಮಾನಗಟ್ಟಲೆ ಸುಪ್ತವಾಗಿದ್ದ ಸಂಸ್ಕೃತಿ, ಸನ್ನಡತೆ, ಜಿಗುಟು, ನೈಸರ್ಗಿಕತೆ ಈ ಅಕ್ಷರಸ್ಥ ಮೊದಲ ತಲೆಮಾರಿನಲ್ಲಿ ತೋರಿಸಿಕೊಳ್ಳತೊಡಗಿದವು. ಇದನ್ನು ಸರಳಗೊಳಿಸಿ ಹೇಳುತ್ತೇನೆ. ಕಡಿದಾಳು ಮಂಜಪ್ಪನವರ ತಂದೆ, ಅಜ್ಜರಾಗಲಿ ಇವರ ಮಕ್ಕಳು, ಮೊಮ್ಮಕ್ಕಳಾಗಲಿ ಇವರ ಸಂಕೀರ್ಣ ವ್ಯಕ್ತಿತ್ವ ತೋರುವುದು ಸಾಧ್ಯವಿಲ್ಲ. ಗ್ರಾಮದ ಬಾಲ್ಯ ನಗರದ ಯೌವನ, ಸಾರ್ವಜನಿಕ ಬದುಕಿನ ವಾನಪ್ರಸ್ಥ– ಇವೆಲ್ಲ ಇವರಿಗೇ ವಿಶಿಷ್ಟವಾದವು.

ಕಡಿದಾಳು ಮಂಜಪ್ಪನವರು ಮೂರು ಕಾದಂಬರಿ ಬರೆದಿದ್ದರೆ, ಅವೆಲ್ಲ ಮಂಜಪ್ಪನವರು ರಾಜಕೀಯ ಅನ್ನಿಸಿಕೆ ಹೇಳಲು ಬಳಸಿಕೊಂಡ ಕೃತಿಗಳಾದ್ದರಿಂದ, ಕಾದಂಬರಿಕಾರನ ಕಲೆ ಮತ್ತು ಗ್ರಹಿಕೆಯ ಕೊರತೆಯಿಂದಾಗಿ ನನಗೆ ಹಿಡಿಸಿರಲಿಲ್ಲ. ಆದರೆ ಈ ಕಾದಂಬರಿಗಳ ಹಿಂದಿನ ಚೇತನ ಅನನ್ಯವೆನಿಸುತ್ತದೆ; ಸದ್ಭಾವನೆ ಕುತೂಹಲಕರವೆನ್ನಿಸುತ್ತದೆ. ಇವರ ಆತ್ಮ ಚರಿತ್ರೆ 'ನನಸಗಾದ ಕನಸು' ಕೂಡ ದೋಷಗಳಿಂದ ಕೂಡಿದೆ; ಇಡೀ ಕೃತಿ ಒಳ್ಳೆಯವರು, ಕೆಟ್ಟವರನ್ನು ಕಪ್ಪು ಬಿಳುಪಿನಲ್ಲಿ ಕೊಡುತ್ತದೆ, ಆದರೂ ಇದು ಕನ್ನಡದ ಅತ್ಯುತ್ತಮ ಆತ್ಮಚರಿತ್ರೆಗಳಲ್ಲಿ ಒಂದೆಂದು ನನಗನಿಸುತ್ತದೆ. ಯಾಕೆಂದರೆ ಹಣ್ಣು ಹಣ್ಣು ಮುದುಕ ಮಂಜಪ್ಪ ತಮ್ಮ ಎಂಭತ್ತೆರಡು ವರ್ಷದ ಅನುಭವವನ್ನು ವಿನಯದಿಂದ, ಸರಳವಾಗಿ ಅಧ್ಯಾಯವಾಗಿ ಕೂಡ ವಿಂಗಡಿಸುವ ಗೋಜಿಗೆ ಹೋಗದೆ ದಾಖಲೆಗೊಳಿಸಿದ್ದಾರೆ, ಕರ್ನಾಟಕದ ಬದುಕಿನ ಮೂರು ಯುಗಗಳನ್ನು ಸಾರ್ವಜನಿಕ ಜೀವನದ ಹಲವು ಶೈಲಿಗಳನ್ನು ಬಲ್ಲ ಮಂಜಪ್ಪ, ತಮ್ಮ ಹಿನ್ನೆಲೆ ಮತ್ತು ಒಳತೋಟಗೆ ನಮ್ಮನ್ನು ಕರೆದೊಯ್ಯುತ್ತಾರೆ.

ಮಂಜಪ್ಪನವರು ತಮ್ಮ ಬಾಲ್ಯದಲ್ಲಿ ಏನೇನನ್ನು ನೋಡಿದರು ? ತೀರ್ಥಹಳ್ಳಿ ತಾಲೂಕಿನ ಹಾರೋಗೊಳಿಗೆ ಎಂಬ ನೂರು ಮನೆಯ ಯಾವೊಂದು ಮನೆಯೂ ಕಾಣದಂತೆ ಮರಗಳಿಂದ ಮುಚ್ಚಿಹೋಗಿದ್ದ, ಒಂದು ಕಡೆ ಕಣ್ಣೋಡುವವರೆಗೆ ಕಾಡು, ಇನ್ನೊಂದು ಕಡೆ ಕತ್ತಲುಗುಡಿಸುವ ಅಡಿಕೆತೋಟವಿದ್ದ ಪರಿಸರ. ಕೋರ್ಟಿನ ವ್ಯಾಜ್ಯ ಯಜಮಾನರ ಅನ್ಯಾಯದಿಂದ ನೆಲಕಚ್ಚಿ ಮಕ್ಕಳಿಗೆ ಹೊಟ್ಟೆ ತುಂಬ ಉಣ್ಣಲೂ

ನೀಡಲಾಗದ ಗೇಣಿದಾರರ ಕುಟುಂಬ, ಅಲ್ಲಿ ಹುಟ್ಟಿದ ಮಂಜಪ್ಪನವರಿಗೆ ನಗೆ ಸಲೀಸಾಗಿ ಬರುವುದಿಲ್ಲ. ಪಾಳೇಗಾರರಿಗೆ ಹೊಂದುವ ಜೀವನೋತ್ಸಾಹ ಕೂಡ ದಕ್ಕುವುದಿಲ್ಲ. "ಲೇವಾದೇವಿ ಮಾಡುತ್ತಿದ್ದ ಸಾಹುಕಾರರು, ವ್ಯಾಪಾರಿಗಳೂ, ಲಂಚಕೋರ ಸರ್ಕಾರಿ ಅಧಿಕಾರಿಗಳೂ ಜನರನ್ನು ನಾನಾ ವಿಧದಲ್ಲಿ ಶೋಷಣೆ ಮಾಡುತ್ತಿದ್ದರು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯೆಲ್ಲವೂ ಕೆಲವೇ ಜನ ಶ್ರೀಮಂತರ ಕೈಸೇರಿ ಹೋಗಿತ್ತು. ಕೃಷಿಕರಲ್ಲಿ ಶೇಕಡ ತೊಂಭತ್ತರಷ್ಟು ಜನ ಗೇಣಿದಾರರಾಗಿದ್ದರು. ಅಂದು ಮಲೆನಾಡಿನಲ್ಲಿ ಹಳ್ಳಿಯ ಜನರು ಒಂದು ವಿಧವಾದ ಭಯೋತ್ಪಾದಕ ವಾತಾವರಣದಲ್ಲಿ ಬದುಕಿದ್ದರು. ಒಂದು ಕಡೆ ಕಾಡು ಪ್ರಾಣಿಗಳ ಕಾಟ; ಮತ್ತೊಂದು ಕಡೆ ವಸೂಲಿ ಸಾಹೇಬರ ಕಾಟ' ಎಂದು ಬರೆಯುತ್ತಾರೆ.

ಬದುಕುವುದಕ್ಕಾಗಿ ತಾಪತ್ರಯ ಅನುಭವಿಸದೆ ಸಕಲಸಂಪತ್ತಿನಲ್ಲಿ ಬದುಕುವ ಮನುಷ್ಯ ಪ್ರಾಮಾಣಿಕನಾಗಿರುವುದಿಲ್ಲ ಎಂದು ನಂಬುವ ಮಂಜಪ್ಪ ತಮ್ಮ ಮಲೆನಾಡನ್ನು ವರ್ಣಿಸುವಾಗ ಕೇವಲ ರಮ್ಯವಾಗದೆ, ವ್ಯಾಮೋಹಿತರಾಗದೆ ವಾಸ್ತವದ ಕಹಿ ಅನುಭವಿಸಿ ಬರೆಯುತ್ತಾರೆ. ತಮ್ಮ ವಂಶದ ನಾಲ್ಕು ತಲೆಮಾರನ್ನು ಚಿತ್ರದೊಂದಿಗೆ ಕೊಟ್ಟಿರುವ ಮಂಜಪ್ಪ ತಾವು ಹುಟ್ಟಿದ್ದು ೧೦.೭.೧೯೧೦ರಲ್ಲಿ ಎಂದು ಬಹುಕಾಲ ತಿಳಿದಿದ್ದರು. ಇದ್ದಕ್ಕಿದ್ದಂತೆ ಬಾಲ್ಯದಲ್ಲಿ ಬರೆಸಿದ ಜಾತಕ ಅವರ ಜನ್ಮ ದಿನವನ್ನು ೧೩.೭.೧೯೦೭ ಎಂದು ತೋರಿಸಿತು. ಇದು ಅವರು ವರ್ಣಿಸುವ ಮಲೆನಾಡಿನ ನಿಗೂಢತೆ ಕ್ರೌರ್ಯಕ್ಕೆ ತಕ್ಕಂತೆಯೇ ಇದೆ. ಅಜ್ಜಿ ಮಳೆಗಾಲದಲ್ಲಿ ಹಳ್ಳ ದಾಟಲು ಹೋಗಿ ನೀರಿನಲ್ಲಿ ಬಿದ್ದು ಬುದ್ಧಿಮಾಂದ್ಯ ಪಡೆದು ಅನೇಕ ವರ್ಷ ನೊಂದು ಸತ್ತಿದ್ದು, ಸಂಬಂಧಿ ಹೆಂಗಸರಲ್ಲಿ ಒಬ್ಬಳ ಕಿವಿ ಸೋರುತ್ತಿದ್ದು, ಇನ್ನೊಬ್ಬಳಿಗೆ ಗುಣವಾಗದ ಗಾಯವಾಗಿ ಗಬ್ಬು ನಾರುತ್ತಿದ್ದುದು, ಅತ್ಯಂತ ಸತ್ಯ ಸಂಧರೂ ಮುಗ್ಧರೂ ಆದ ತಂದೆ ದುಗ್ಗಣ್ಣಗೌಡರು ಆಗಾಗ ಅಕ್ಕಿಯ ಹೆಂಡ, ಸಾಧ್ಯವಾದಾಗ ಸಾರಾಯಿ ಕುಡಿಯುತ್ತಿದ್ದುದು, ತಾವು ಕೂಡ ಅಕ್ಕಿ ಹೆಂಡದ ರುಚಿ ನೋಡಿದ್ದು ಇವೆಲ್ಲ ಪ್ರಾಸಂಗಿಕ. ಬಹು ಮುಖ್ಯವಾದದೇನೆಂದರೆ ಮಂಜಪ್ಪ ಈ ಶತಮಾನದ ಆದಿ ಭಾಗದಲ್ಲಿ ಬಡತನ, ಅಸಹಾಯಕತೆ ಲೆಕ್ಕಿಸದೆ ಶಿಕ್ಷಣ ಪಡೆದದ್ದು. ಆರೋಗ್ಯ, ಶಿಕ್ಷಣ ಎರಡೂ ಆಕಸ್ಮಿಕವೆನ್ನಿಸುವ ವಾತಾವರಣದಲ್ಲಿ ಸಣ್ಣ ಕಾರಣಕ್ಕೆ ಸ್ಕೂಲು ಬಿಡಿಸುವ ಶೂದ್ರರ ಮನೆತನದಲ್ಲಿ ಮಂಜಪ್ಪನಂತ ಹಲವರು ಛಲ, ಏಕಾಗ್ರತೆಯಿಂದ ಓದಿದ್ದು, ಈ ಓದಿನ ಸಮಯದಲ್ಲೇ ಭಾಗವತರ ಕತೆಗಳ ಮೂಲಕ ಸ್ವಾತಂತ್ರ್ಯ ಸಂಗ್ರಾಮದ ನೇರ ಪರಿಣಾಮದ ಮೂಲಕ ದೇಶದ ಬಗ್ಗೆ ಚಿಂತಿಸತೊಡಗಿದ್ದು, ಮಂಜಪ್ಪ ಚಿಕ್ಕಂದಿನಲ್ಲಿ

ಅನುಭವಿಸಿದ್ದು, ತಮ್ಮ ಸುತ್ತ ಕಂಡದ್ದು, ಜನಕ್ಕೆ ಏನನ್ನಾದರೂ ಒಳ್ಳೆಯದನ್ನು ಮಾಡುವ ಹಂಬಲವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಅವರನ್ನು ತೊಡಗಿಸುತ್ತದೆ.

ಮಂಜಪ್ಪನವರ ಅಲಂಕಾರ ರಹಿತ ಆತ್ಮ ಚರಿತ್ರೆಯ ಕೆಲವು ಸನ್ನಿವೇಶಗಳತ್ತ ಓದುಗರ ಗಮನ ಸೆಳೆಯುವ ಮುನ್ನ ಈ ಪುಸ್ತಕದಿಂದ ಮತ್ತು ನಮ್ಮ ತಿಳವಳಿಕೆಯಿಂದ ಮಂಜಪ್ಪನವರ ವ್ಯಕ್ತಿತ್ವದ ಬಗ್ಗೆ ಹೇಳುವುದು ಒಳ್ಳೆಯದು. ರಾಜಕೀಯದಲ್ಲಿ ದೊಡ್ಡದು ಸಾಧಿಸಿರುವ ಮಂಜಪ್ಪನವರಲ್ಲಿ ವಿಚಿತ್ರ ರೀತಿಯ ಗುಮಾಸ್ತೆ ಗುಣವಿದೆ. ಇದು ದೋಷವೆನ್ನಿಸುವ ಮುನ್ನ ಕಾಣಿಸಬೇಕಾದ್ದು, ಬಡಕುಟುಂಬದಿಂದ ಬಂದವನ ಹಿಂಜರಿಕೆ, ಹುಶಾರು, ಸಂದೇಹಗಳು ಇವರ ವ್ಯಕ್ತಿತ್ವದ ಭಾಗವಾಗಿದೆ. ಹಾಗೆಯೇ ಮಂಜಪ್ಪನವರಲ್ಲಿ ಸ್ವಂತ ಕಷ್ಟದಿಂದ ಮುಂದೆ ಬಂದವನ ಸ್ವಾಭಿಮಾನ, ಆತ್ಮವಿಶ್ವಾಸ ಎರಡೂ ಇವೆ. ಇಷ್ಟೇ ಮುಖ್ಯವಾಗಿ ಸಾರ್ವಜನಿಕ ಬದುಕಿನಲ್ಲಿ ಭ್ರಷ್ಟತೆ ಎಂತಹ ಆತ್ಮಘಾತಕವಾದದ್ದು ಎಂಬ ತೀವ್ರ ಪ್ರಜ್ಞೆ ಇದೆ. ರಾಜಕೀಯದಲ್ಲಿ ಮುಂದೆ ಬರುವ ಮಹತ್ವಾಕಾಂಕ್ಷೆಯ ಜೊತೆಗೇ ಬರಡು ಅಧಿಕಾರದ ಬಗ್ಗೆ ತಾತ್ಸಾರ ಇದೆ. ಬಿಯರ್, ಸ್ಟೌಟ್ ಜೊತೆಗೆ ಪ್ರಯೋಗ ನಡೆಸಲೆತ್ನಿಸುತ್ತಲೇ ತಮ್ಮ ಚಾರಿತ್ರದ ಬಗ್ಗೆ ಎಚ್ಚರವಿದೆ.

ಮೇಲಿನ ಎಲ್ಲಾ ಗುಣಗಳು ಮಂಜಪ್ಪನವರನ್ನು ಅತ್ಯುತ್ತಮ ವ್ಯಕ್ತಿಯನ್ನಾಗಿ ಮಾಡುವ ಜೊತೆಗೇ ಅವರ ಮುನ್ನಡೆಗೆ ಕಡಿವಾಣ ಹಾಕುತ್ತವೆ. ಮೇಲಿನದನ್ನು ಹೇಳಲು ಈ ಪುಸ್ತಕದಿಂದ ಕೆಲವು ನಿದರ್ಶನ ಕೊಡುತ್ತೇನೆ.

ಕೆಂಗಲ್ ಹನುಮಂತಯ್ಯ ಮತ್ತು ಮಂಜಪ್ಪ, ದೇವರಾಜ ಅರಸು ಮತ್ತು ಮಂಜಪ್ಪ ವಿಭಿನ್ನ ವ್ಯಕ್ತಿತ್ವಕ್ಕೆ ನಿದರ್ಶನವಾಗುತ್ತಾರೆ. ಹನುಮಂತಯ್ಯ ಮಂಜಪ್ಪನವರಷ್ಟೇ ಹಣಕಾಸಿನ ದೃಷ್ಟಿಯಲ್ಲಿ ಪ್ರಾಮಾಣಿಕರು, ಇಬ್ಬರೂ ದಕ್ಷ ಆಡಳಿತಗಾರರು. ಆದರೆ ಹನುಮಂತಯ್ಯ ಪ್ರಾಮಾಣಿಕತೆಯೊಂದಿಗೇ ರಸಿಕರು, ದಕ್ಷರಾಗಿರುವಂತೆಯೇ ಸವಾಲೆತ್ತಿಕೊಳ್ಳುವ ದಿಟ್ಟರು, ಪರಂಪರಾಗತ ಮೌಲ್ಯಗಳಲ್ಲಿ ನಂಬಿಕೆ ಇಟ್ಟವರಂತೆಯೇ ಆಧುನೀಕತೆಯನ್ನು ಅವಸರದಲ್ಲಿ ಪ್ರದರ್ಶಿಸುವವರು. ಹನುಮಂತಯ್ಯನವರು ವಿಧಾನಸೌಧ ಕಟ್ಟುತ್ತಿದ್ದಾಗ ಅವರ ಮಂತ್ರಿಮಂಡಲದಲ್ಲಿ ಮಂಜಪ್ಪ ಕಾಮಗಾರಿ ಮಂತ್ರಿಯಾಗಿದ್ದರು. ಹನುಮಂತಯ್ಯ ವಿಧಾನಸೌಧಕ್ಕೆ ಬಜೆಟ್ ಮೀರಿ ಖರ್ಚು ಮಾಡತೊಡಗಿದೊಡನೆ ಮಂಜಪ್ಪ ಮೆತ್ತಗೆ ತಮ್ಮ ಇಲಾಖೆಯಿಂದ ವಿಧಾನಸೌಧ ನಿರ್ಮಾಣವನ್ನು ಬೇರ್ಪಡಿಸಿ ಆಮೇಲೆ ಹನುಮಂತಯ್ಯನವರ ಮೇಲೆ ಬಂದ ಆಪಾದನೆಗಳಿಂದ ತಪ್ಪಿಸಿಕೊಂಡರು. ಹನುಮಂತಯ್ಯನವರನ್ನು ಹತೋಟಿಯಲ್ಲಿಡಲು

ಬೇಕಾದ ಛಾತಿಯಾಗಲಿ ಅವರೊಂದಿಗಿದ್ದು ಟೀಕೆಗಳನ್ನು ಎದುರಿಸುವ ಹುಂಬತನವಾಗಲಿ ಮಂಜಪ್ಪನವರಲ್ಲಿ ಇರಲಿಲ್ಲ.

ಇಷ್ಟೇ ಮುಖ್ಯವಾದ ಇನ್ನೊಂದು ಪ್ರಕರಣ ಮಂಜಪ್ಪ ಮುಖ್ಯಮಂತ್ರಿಯಾದದ್ದು, ಒಂದು ರೀತಿಯಲ್ಲಿ ಲಾಲ್‌ಬಹದ್ದೂರ್ ಶಾಸ್ತ್ರಿಯಂತೆ ಇನ್ನೊಂದು ಈಚಿನ ಲಕ್ಷ್ಮೀಸಾಗರದಂತೆ ಕಾಣುತ್ತಿದ್ದ ಮಂಜಪ್ಪನವರನ್ನು ಕಾಂಗ್ರೆಸ್ಸಿನ ಗುಂಪುಗಾರಿಕೆ ಬಳಸಿಕೊಂಡಿತು. ಸಾಹುಕಾರ ಚೆನ್ನಯ್ಯನವರು ಕೆಂಗಲ್‌ರವರನ್ನ ದ್ವೇಷಿಸಿ ಅವರ ವಿರುದ್ಧ ಗುಂಪು ಕಟ್ಟಿದ್ದು ಎಲ್ಲರಿಗೆ ಗೊತ್ತಿದೆ. ವಿಧಾನಸೌಧ ಕಟ್ಟಲು ಕೆಂಗಲ್ ತೋರಿದ ದುಂದುಗಾರಿಕೆ, ದುರಹಂಕಾರ, ಸಿಡುಕು, ರಸಿಕತೆ ಇಷ್ಟನ್ನು ಆಧಾರವಾಗಿಟ್ಟುಕೊಂಡಿದ್ದ ಸಾಹುಕಾರ ಚೆನ್ನಯ್ಯ ಹನುಮಂತಯ್ಯನವರನ್ನು ಬೀಳಿಸುವ ತಂತ್ರ ಹೂಡಿದರು. ಆದರೆ ಅವರನ್ನು ಬೀಳಿಸಿದರೆ ಯಾರು ಮುಖ್ಯಮಂತ್ರಿಯಾಗಬೇಕು ಎಂಬ ಪ್ರಶ್ನೆ ಎದ್ದಿತು. ಸಾಹುಕಾರ ಚೆನ್ನಯ್ಯ ಮುಖ್ಯ ಮಂತ್ರಿಯಾಗುವ ದುಸ್ವಪ್ನದಿಂದ ಇಡೀ ಕಾಂಗ್ರೆಸ್ ಪಕ್ಷ ಬೆಚ್ಚಿ ಮಂಜಪ್ಪನವರ ಹೆಸರು ಹೇಳತೊಡಗಿತು. ಇಡೀ ಪ್ರಕರಣವನ್ನು ಮಂಜಪ್ಪ ಮನಮುಟ್ಟುವಂತೆ ವರ್ಣಿಸಿದ್ದಾರೆ. ದಿಲ್ಲಿಯ ಕಾಂಗ್ರೆಸ್ ವರಿಷ್ಠರಿಗೆ ಮಂಜಪ್ಪ ಮಾತ್ರ ಇಷ್ಟ. ಆದರೆ ಮಂಜಪ್ಪನವರಿಗೆ ಇದು ಮಿತ್ರದ್ರೋಹ–ಹನುಮಂತಯ್ಯನವರ ಪಾಳೇಗಾರಿಕೆ ಮನಸ್ಸಿಗೆ ಸ್ವಾಮಿದ್ರೋಹ. ಬೇಡವೆಂದು ಎಷ್ಟೇ ಪಟ್ಟು ಹಿಡಿದರೂ ಮಂಜಪ್ಪನವರನ್ನು ಮುಖ್ಯಮಂತ್ರಿ ಮಾಡುತ್ತಾರೆ. ಒಂದು ರೀತಿಯಲ್ಲಿ ಮುಗ್ಧರೂ, ಹುಂಬರೂ, ಮೇಧಾವಿಗಳು ಒಟ್ಟಾಗಿಯೇ ಆಗಿದ್ದ ಕೆಂಗಲ್ ಅಳುತ್ತ ಕೂರುತ್ತಾರೆ. ಮಂಜಪ್ಪನವರ ಸಮಾಧಾನ ಅವರಿಗೆ ತಾಗುವುದೇ ಇಲ್ಲ.

ಆದರೆ ಮಂಜಪ್ಪ ತಮ್ಮ ಆತ್ಮ ಕಥನದ ನಿರೂಪಣೆಯಲ್ಲಿ ಯಾರಿಗೂ ಅನ್ಯಾಯ ಮಾಡುವುದಿಲ್ಲ. ಕೆಂಗಲ್ ವ್ಯಕ್ತಿತ್ವ ಅವರಿಗೆ ಗೊತ್ತಿದೆ. ಒಮ್ಮೆ ಕೆಂಗಲ್‌ರ ಮೇಲೆ ಹಲವಾರು ಆಪಾದನೆಗಳು ಬರುತ್ತಿದ್ದಾಗ ಅವನ್ನೆಲ್ಲ ಕೇಳಿ ಸಾಮರಸ್ಯ ಉಂಟುಮಾಡಲು ಹನುಮಂತಯ್ಯನವರ ಪರ ಮಂಜಪ್ಪ, ಎ.ಜಿ.ರಾಮಚಂದ್ರರಾವ್, ಟಿ.ಸಿದ್ಧಲಿಂಗಯ್ಯನವರೂ ಅವರ ವಿರೋಧಿಗಳಾಗಿ ಸಾಹುಕಾರ ಚೆನ್ನಯ್ಯ, ವೀರಣ್ಣಗೌಡ, ಟಿ.ಸುಬ್ರಹ್ಮಣ್ಯರವರೂ ಸೇರುತ್ತಾರೆ. ಕೆಂಗಲ್ ಬಗ್ಗೆ ಆಪಾದನೆಗಳಲ್ಲೊಂದನ್ನು ಮುಂದಿಡುತ್ತಾ "ಹನುಮಂತಯ್ಯನವರು ವಿಷಯಲಂಪಟರೆಂದು ತೋರಿಸುವ ಸಲುವಾಗಿ ಕೆಲವು ಮಹಿಳೆಯರ ಹೆಸರುಗಳನ್ನು ಹೇಳಿ ಅವರುಗಳೊಡನೆ ಹನುಮಂತಯ್ಯನವರ ಅಕ್ರಮ ಸಂಪರ್ಕವಿದೆಯೆಂದು ಒಂದೊಂದಾಗಿ ಆಪಾದನೆ ಮಾಡಿದರು. ಆಗ ಮಂಜಪ್ಪ ಶಾಂತ ರೀತಿಯಲ್ಲಿ ಅವರನ್ನು ಕೇಳಿದರು. "ಪ್ರಣಯಕ್ಕೆ

ಸಂಬಂಧಪಟ್ಟ ವಿಚಾರದಲ್ಲಿ ತಾವು ಮೂವರ ಪೈಕಿ ಯಾರು ಪರಿಶುದ್ಧರಾಗಿದ್ದೀರಿ?" ಆಗ ಮೂವರೂ ಬಾಯಿಬಿಡದೆ ತೆಪ್ಪಗಾದರು.

ಇಂಥ ನೂರಾರು ಘಟನೆಗಳಿರುವ ಈ ಪುಸ್ತಕದಲ್ಲಿ ಇನ್ನೊಂದು ಮಾತ್ರ ಹೇಳುತ್ತೇನೆ. ಒಮ್ಮೆ ಮಂಜಪ್ಪ ಮತ್ತು ಆಗ ರಾಜ್ಯಪಾಲರಾಗಿದ್ದ ಜಯಚಾಮರಾಜೇಂದ್ರ ಒಡೆಯರು ಒಂದೇ ವೇದಿಕೆಯಿಂದ ಮಾತಾಡಿದರು. ಇಬ್ಬರಿಗೂ ಪರಸ್ಪರ ಗೌರವ, ಪ್ರೀತಿ ಚಾಮರಾಜ ಒಡೆಯರು ತಮ್ಮ ಅಪರೂಪದ ವಿನೋದದ ಶೈಲಿಯಲ್ಲಿ "ಮಂಜಪ್ಪನವರೇ ನೀವು ಇಷ್ಟು ತರುಣರಾಗಿ ಕಾಣುವ ಗುಟ್ಟೇನು?" ಎಂದು ಕೇಳಿದರು. ಸಭೆ ಮುಗಿದ ಮೇಲೆ ವೈಯಕ್ತಿಕವಾಗಿ ವಿವರಿಸುವುದಾಗಿ ಹೇಳಿದ ಮಂಜಪ್ಪ ಖಾಸಗಿಯಾಗಿ "ನಾನು ತಡವಾಗಿ ವಿವಾಹವಾದೆನೆಂದೂ, ವಿವಾಹಕ್ಕೆ ಪೂರ್ವ ಕಟ್ಟುನಿಟ್ಟಿನ ಬ್ರಹ್ಮಚರ್ಯೆಯನ್ನು ಕಾಪಾಡಿಕೊಂಡು ಬಂದಿದ್ದೇನೆಂದೂ, ವಿವಾಹವಾದ ನಂತರವೂ ಕೂಡ ರತಿಕ್ರಿಯೆಯಲ್ಲಿ ಸಂಯಮದಿಂದ ವರ್ತಿಸುತ್ತಿದ್ದೇನೆಂದೂ, ಈ ಎಲ್ಲಾ ಕಾರಣದಿಂದ ನನ್ನ ಮುಖದಲ್ಲಿ ಯುವಕರ ವರ್ಚಸ್ಸು ಇದೆಯೆಂದೂ ಅವರಿಗೆ ಹೇಳಿದೆ" ಅನ್ನುತ್ತಾರೆ ಮಂಜಪ್ಪ. ಅಷ್ಟರಲ್ಲಿ ಅವರ ಅಭಿಮಾನದ ಮೂರ್ತಿ ಮತ್ತು ವರ್ಚಸ್ವಿಗಳಲ್ಲಿ ವರ್ಚಸ್ವಿ ಗಾಂಧೀಜಿ ಬಾಲ್ಯ ವಿವಾಹವಾದವರೆಂದು ಅವರಿಗೆ ಮರೆತಿರುತ್ತದೆ.

ಮಂಜಪ್ಪನವರ ಮಧ್ಯಮ ವರ್ಗದ ಸುವರ್ಣ ಮಧ್ಯಮ, ಹಾಗೆಯೇ ಗುಮಾಸ್ತ ಸಹಜ ಅಂಜಿಕೆ ವಿನೋದರಾಹಿತ್ಯ ಮತ್ತು ಆತ್ಮಜ್ಞಾನ – ತಮ್ಮ ಮಿತಿಯ ಪರಿವೆ – ಇವೆಲ್ಲವುಗಳೊಂದಿಗೆ ಅವರ ನಿಷ್ಠುರತೆ, ಜಾತ್ಯತೀತ ನಿಲುವು, ಬೆಚ್ಚನೆಯ ಅಕ್ಕರೆ, ಇವನ್ನೆಲ್ಲ ಕಾಣಿಸದಿದ್ದರೆ ಅವರಿಗೆ ಅನ್ಯಾಯವಾಗುತ್ತದೆ. ಮುಖ್ಯಮಂತ್ರಿಯಾಗಿದ್ದೂ ಕೇವಲ ಮಂತ್ರಿಯಾಗಲು ಒಪ್ಪಿಕೊಂಡದ್ದು, ಇವೆಲ್ಲವೂ ಹೋದಮೇಲೆ ಜೀವನ ನೀಗಿಸುವ ದಾರಿ ತೋಚದೆ ವಕೀಲ ವೃತ್ತಿ ಆರಂಭಿಸಿದ್ದು, ಇವೆಲ್ಲವುಗಳ ಆಳದಲ್ಲಿನ ಬದುಕಿನ ಉದ್ದೇಶ. ಮೌಲ್ಯದ ಬಗ್ಗೆ ಚಿಂತಿಸುವುದು ಮಂಜಪ್ಪನವರ ವೈಶಿಷ್ಟ್ಯ ತುಂಬು ಜೀವನ ನಡೆಸಿದ ಮಂಜಪ್ಪ ಅಸಹಾಯಕರೆಲ್ಲರಿಗೆ ಆದರ್ಶ, ಭ್ರಷ್ಟರೆಲ್ಲರಿಗೆ ಎಚ್ಚರಿಕೆ. ಕಳೆದ ಎಂಭತ್ತು ವರ್ಷದಿಂದ ಕಾತರಿಸುವ, ತಲ್ಲಣಿಸಿರುವ, ಪರಿಪಕ್ವ ವ್ಯಕ್ತಿಯಾಗಿ ಬೆಳೆದಿರುವ ಮಂಜಪ್ಪನವರಿಗೆ ನಮ್ಮ ರಾಜಕೀಯ ಅಧೋಗತಿಗಿಳಿದಿರುವುದನ್ನು ನೋಡಿ ಆತಂಕ ವಿಷಾದವಾಗಿದೆ. ಕಾಂಗ್ರೆಸ್ ಪಕ್ಷ ಗಾಂಧೀಜಿಯ ದೀವಿಗೆಯೊಂದಿಗೆ ಹೊರಟು ದಾರಿಯಲ್ಲಿ ಆ ದೀವಿಗೆ ಕಳೆದುಕೊಂಡು ರಾಕ್ಷಸತ್ವ ಬೆಳೆಸಿಕೊಂಡಿರುವ ಬಗ್ಗೆ ಖೇದ ಅವರಿಗೆ. ಗತಕಾಲದ ತಮ್ಮ ಅವಧೂತ

ಧ್ವನಿಯಲ್ಲಿ ಭ್ರಷ್ಟರ ಬಗ್ಗೆ ಹೇಳುತ್ತಾರೆ. "ಮಾನವನಿರ್ಮಿತ ಕಾನೂನುಗಳನ್ನು ಉಲ್ಲಂಘಿಸಿ ತಪ್ಪಿಸಿಕೊಳ್ಳಬಹುದು. ದೈವ ನಿರ್ಮಿತ ಕಾನೂನುಗಳನ್ನು ಉಲ್ಲಂಘಿಸಿ ತಪ್ಪಿಸಿಕೊಳ್ಳಲಾಗುವುದಿಲ್ಲವೆಂಬ ವಿಚಾರ ಈ ಭ್ರಷ್ಟರಿಗೆ ಇನ್ನೂ ಗೊತ್ತಾಗಿಲ್ಲ"

**"ಇವರ ಪುಸ್ತಕದ ಕೆಲವು ಭಾಗಗಳನ್ನು ಪ್ರಕಟಿಸುವ ಉದ್ದೇಶ ನಮಗಿದೆ"**

# ಟೆನೆನ್ಸಿ ಆ್ಯಕ್ಟನ ಮೇಲೆ ಚರ್ಚೆ

## (ಶ್ರೀ ಪಿ. ಸೀತಾರಾಮಯ್ಯನವರು ಅತೀ ಮಬ್ಬಾದ ರೀತಿಯಲ್ಲಿ ಟೆನೆನ್ಸಿ ಆಕ್ಟನ್ನು ಮಂಡಿಸಿರುವುದರ ಬಗ್ಗೆ ಶ್ರೀ ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ (೨೭ನೇ ಮಾರ್ಚ್, ೧೯೫೩)

**ಶ್ರೀ ಕಡಿದಾಳ ಮಂಜಪ್ಪ (ಕಂದಾಯ ಮಂತ್ರಿ) :**

ಮಾನ್ಯರೇ, ನನ್ನ ಮಿತ್ರರಾದ ಶ್ರೀ ಪಿ. ಸೀತಾರಾಮಯ್ಯನವರು, ಶ್ರೀರಂಗಪಟ್ಟಣದ ತಾಲ್ಲೂಕಿನಲ್ಲಿ ಜಾರಿಯಲ್ಲಿರುವ ಟೆನೆನ್ಸಿ ಕಾಯ್ದೆಯ ಬಗ್ಗೆ ಮಬ್ಬಾದ ಚಿತ್ರವನ್ನು ಮಂಡಿಸಿದ್ದಾರೆ.

ಮಾನ್ಯರೇ, ಆ ಕಾಯ್ದೆಯನ್ನು ಕೆಳಮನೆಯಲ್ಲಿ ಚರ್ಚಿಸಿದ್ದಾಗ ತಾವು ಕಾನೂನು ಸದಸ್ಯರಿದ್ದೀರಿ. ನನ್ನ ಜೊತೆ, ತಾವು ಕೂಡ ಸೆಲೆಕ್ಟ್ ಸಮಿತಿಯ ಸದಸ್ಯರಿದ್ದೀರಿ. ರಾಯರೇ, ಈ ಕಾಯ್ದೆಯು ಭಾರತದಲ್ಲಿ ಜಾರಿಯಲ್ಲಿದ್ದ ಅತೀ ಸೌಮ್ಯದ ಟೆನೆನ್ಸಿ ಕಾಯ್ದೆಯೆಂದು ನಾನು ಹೇಳಲೇ ಬೇಕಾಗುತ್ತದೆ. ಆ ಕಾಯ್ದೆಯನ್ನು, ಬೊಂಬೈ ಟೆನಾನ್ಸಿ ಕಾಯ್ದೆಯ ಮಾದರಿಯ ಆಧಾರದ ಮೇಲೆ ರಚಿಸಲಾಗಿದೆ. ಆದರೆ, ಬೊಂಬೈ ಕಾಯ್ದೆಯಲ್ಲಿ ಗೇಣಿದಾರರಿಗೆ ಅನುಕೂಲವಾಗುವಂಥ ಅನೇಕ ಉಪಬಂಧಗಳು ಈ ಕಾಯ್ದೆಯಲ್ಲಿ ಕಂಡು ಬರುವುದಿಲ್ಲ. ಅದಕ್ಕಾಗಿಯೇ, ಸಮಿತಿಯ ಕೆಲವು ಶಿಫಾರಸ್ಸುಗಳಿಗೆ ನಾನು ವಿರೋಧಿಸಿದೆ. ಭಾರತದ ಸ್ವಾತಂತ್ರ್ಯದ ನಂತರ, ಭೂ ಸುಧಾರಣೆಗಳ (ಸಂಪತ್ತಿನ ಹಂಚುವಿಕೆ), ಕಡೆ ಜನರ ಗಮನ ಸೆಳೆಯಿತು. ಕೆಲವು ವರ್ಷಗಳ ಹಿಂದೆ ಸ್ಥಾಪಿಸಿದ ಕಾಂಗ್ರೆಸ್ ಕೃಷಿ ಸಮಿತಿಯು, ಕೆಲವು ಷರತ್ತುಗಳ ಪ್ರಕಾರ "ಉಳುವವನೇ ಭೂಮಿಯ ಒಡೆಯ" ನೆಂದು ಅಭಿಪ್ರಾಯ ವ್ಯಕ್ತಪಡಿಸಿತು. ಪುನಃ ಇತ್ತೀಚೆಗೆ ಯೋಜನಾ ಆಯೋಗವು, ಭೂಮಿಯ ಬಗ್ಗೆ ಇದ್ದ ಸಮಸ್ಯೆಯನ್ನು ಕೂಡಲೇ ಬಗೆಹರಿಬೇಕೆಂದು ಸೂಚಿಸಿತು. ಜಮೀನುದಾರರಿಗೆ ನನ್ನ ಕಳಕಳಿಯ ವಿನಂತಿಯೇನೆಂದರೆ, ಅವರು ಸಮಯಕ್ಕನುಸಾರವಾಗಿ ನಡೆಯಬೇಕು. ಇಲ್ಲದಿದ್ದರೆ, ಅವರ ಅಧೋಗತಿಯೇ ಸರಿ. ಅದಕ್ಕಾಗಿಯೇ, ಶ್ರೀಮಾನ್ಯ ಸೀತಾರಾಮಯ್ಯನವರು "ಗೇಣಿದಾರರ ಮತ್ತು ಜಮೀನುದಾರರ ನಡುವೆ ಸಾಮರಸ್ಯ ಇಲ್ಲ" ವೆಂಬ ಹೇಳಿಕೆ ಸತ್ಯವಾದದ್ದು. ಪ್ರಾರಂಭಿಕ ಹಂತದಲ್ಲಿ ಇಂಥ ಸನ್ನಿವೇಶಗಳು ಬಂದೊದಗುವುದು ಸಹಜ. ಆದರೆ ಕ್ರಮೇಣ, ಈ

ಕಾಯ್ದೆಯ ಉಪಬಂಧಗಳ ಪ್ರಕಾರ, ಜಮೀನುದಾರರು ಮತ್ತು ಗೇಣಿದಾರರು ಹೊಂದಿಕೊಂಡು ಹೋಗಬೇಕು.

ನನ್ನ ಮಿತ್ರರು "ಕೆಲವು ಜನರು ಈ ಕಾಯ್ದೆಯ ವಿರುದ್ಧ ಇದ್ದಾರೆ" ಎಂಬುದು ಸತ್ಯ. ಏಕೆಂದರೆ ಕಾಯ್ದೆಯ ವಿರುದ್ಧ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಕೆಲಸ ಮಾಡುವುದು ಸಹಜ. ಮತ್ತು ಸ್ವಾಭಾವಿಕ. ಕಾಯ್ದೆಯಲ್ಲಿ ಮಾರ್ಪಾಡು ಮಾಡಬೇಕಾಗುತ್ತದೆ. ನನಗೂ ಕಾಯ್ದೆಯಲ್ಲಿನ ಕೆಲವು ಉಪಬಂಧಗಳು ಅಷ್ಟು ಸ್ಪಷ್ಟ ರೀತಿಯಲ್ಲಿಲ್ಲ ಅನಿಸುವುದು, ಅದನ್ನು ತಿದ್ದುಪಡಿಮಾಡಬೇಕಾಗುತ್ತದೆ. ಈ ದಿಶೆಯಲ್ಲಿ ಸರಕಾರವು ಗಂಭೀರವಾಗಿ ಪರಿಶೀಲಿಸುತ್ತಿದೆ.

ಮಾನ್ಯ ಸದಸ್ಯರ ಗಮನಕ್ಕೆ ನಾನು ತರುವುದೇನೆಂದರೆ, ಭಾರತದಲ್ಲಿ ಅತೀ ಉತ್ತಮವಾದ ಕಾಯ್ದೆ, ಎಂದು ಹೆಸರು ಪಡೆದ, ಬಾಂಬೆ ಟೆನಾನ್ಸಿ ಕಾಯ್ದೆಯು ೧:೬ ದಷ್ಟು ಉತ್ಪನ್ನವು ಬಾಡಿಗೆಗೆ ಅವಕಾಶ ಮಾಡಿಕೊಡುತ್ತದೆ. ಶ್ರೀರಂಗಪಟ್ಟನ ತಾಲ್ಲೂಕಿನಲ್ಲಿ ಬಾಡಿಗೆಯ, ಉತ್ಪನ್ನದ ಅರ್ಧದಷ್ಟು ಇರುತ್ತದೆ. ಮಲೆನಾಡು ತಾಲೂಕುಗಳಲ್ಲಿ, ಬಾಡಿಗೆಯು ೧:೩ರಷ್ಟು ಇರುತ್ತದೆ. ಕೆಲವು ರೈತರ ಪ್ರಕಾರ, ಕಾಯ್ದೆಯನ್ನು ಇಡೀ ರಾಜ್ಯಕ್ಕೆ ಅನ್ವಯವಾಗುವಂತಾಗಬೇಕು ಮತ್ತು ಗೇಣಿದಾರರಿಗೆ ಕೆಲವು ರಕ್ಷಣೆಗಳು ಸಿಗುವಂತಾಗಬೇಕು. ಶ್ರೀ ಸೀತಾರಾಮಯ್ಯನವರು ಹೇಳಿದಂತೆ, ಭೂಮಿಯ ಕಿಮ್ಮತ್ತು ಇಳಿಮುಖವಾಗಿರುತ್ತದೆ. ರಾಯರೇ, ಕಾಯ್ದೆಯು ಕೇವಲ ಶ್ರೀರಂಗಪಟ್ಟಣ ತಾಲ್ಲೂಕಿಗೆ ಅನ್ವಯಿಸುವುದಿಲ್ಲ. ಅದು ಉಳಿದ ತಾಲ್ಲೂಕುಗಳಿಗೂ ಅನ್ವಯಿಸುತ್ತದೆ, ಶ್ರೀರಂಗಪಟ್ಟಣ ತಾಲ್ಲೂಕು ಬಿಟ್ಟರೆ, ಬೇರೆ ಯಾವ ತಾಲ್ಲೂಕುಗಳಲ್ಲಿ ಜಮೀನುದಾರರು, ಕಾಯ್ದೆಯ ವಿರುದ್ಧ ಆಕ್ಷೇಪಣೆ ಮಾಡಿಲ್ಲ. ಕಾಯ್ದೆಯು ಜಮೀನುದಾರರ ಹಿತಾಸಕ್ತಿಗಳನ್ನು ಕಾಪಾಡಲು ಅವಕಾಶ ನೀಡುತ್ತದೆ. ಗೇಣಿದಾರನು, ಬಾಡಿಗೆ ಕೊಡದಿದ್ದಲ್ಲಿ ಮಾತ್ರ ಅವನ ಸ್ವಾಧೀನತೆಯನ್ನು ತಪ್ಪಿಸಲಾಗುತ್ತದೆ, ಒಂದು ವೇಳೆ ಅವನು ಸಮರ್ಪಕವಾಗಿ ಭೂಮಿಯನ್ನು ಸಾಗುವಳಿ ಮಾಡದಿದ್ದಲ್ಲಿ, ಅವನ ಭೂ ಸ್ವಾಧೀನತೆಯನ್ನು ಕಸಿದುಕೊಳ್ಳಲಾಗುತ್ತದೆ.

ನನ್ನ ಮಿತ್ರರು ಹೇಳಿದಂತೆ, ಗೇಣಿದಾರನು, ಭೂಮಿಯನ್ನು ೧೨ ವರ್ಷಗಳವರೆಗೆ ಸಾಗುವಳಿ ಮಾಡಿದರೆ, ಅವನು ಆ ಭೂಮಿಯ ಖಾಯಂ ಒಡೆಯನಾಗುವನು. ಅದು ಸತ್ಯ. ಒಂದು ವೇಳೆ ನೀವು ಭೂಮಿಯನ್ನು ಸಾಗುವಳಿ ಮಾಡಬೇಕಾದರೆ, ನೀವು ಅಮಲದಾರರಿಗೆ ಅರ್ಜಿ ಸಲ್ಲಿಸಿ, ಭೂಮಿಯ ಮೇಲೆ ನಿಮ್ಮ ಸೊತ್ತನ್ನು

ತೆಗೆದುಕೊಳ್ಳಬಹುದು (ಅರ್ಧಕ್ಕಿಂತ ಹೆಚ್ಚು ಇಲ್ಲದ) ಆ ಉಪಬಂಧವನ್ನು ತಿದ್ದುಪಡಿ ಮಾಡಬೇಕಾಗುತ್ತದೆ. ಶ್ರೀರಂಗಪಟ್ಟಣದ ಜಮೀನುದಾರರ ಪ್ರತಿನಿಧಿಗಳು ನನಗೆ ಅರ್ಜಿ ಸಲ್ಲಿಸಿದ್ದಾರೆ. ನಾನು ಅದನ್ನು ಪರಿಶೀಲಿಸುತ್ತಿದ್ದೇನೆ. ವಿಧಾನ ಪರಿಷತ್ತಿನ ಮುಂದಿನ ಅಧಿವೇಶನದಲ್ಲಿ ಟೆನಾನ್ಸಿ ಕಾಯ್ದೆಯನ್ನು ತಿದ್ದುಪಡಿ ಮಾಡುವ ಮಸೂದೆಯನ್ನು ಮಂಡಿಸಲಾಗುತ್ತದೆ. ಶ್ರೀ ಸೀತಾರಾಮಯ್ಯನವರು ಹೇಳಿದಂತೆ, ಕಾಯ್ದೆಯು ಜನರನ್ನು ಸೋಮಾರಿಯನ್ನಾಗಿ ಮಾಡುತ್ತದೆ. ಅದು ಅವರ ಅನುಭವದ ಮಾತು ಎಂದು ಅವರು ಹೇಳುತ್ತಾರೆ.

ಆದರೆ, ನನ್ನ ಪ್ರಕಾರ, ಆ ರೀತಿಯ ಹೇಳಿಕೆ ಮಾಡುವವರು ಪಟ್ಟಭದ್ರ ಹಿತಾಸಕ್ತಿಗಳು ಮಾತ್ರ. ಕಾಯ್ದೆಯನ್ನು ಗೇಣಿದಾರನಿಗೆ ಸಹಾಯ ಮಾಡಲು, ಕೆಲವು ಪ್ರದೇಶಗಳಿಗೆ ಅನ್ವಯಿಸಲಾಗಿದೆ. ಕೆಳಮನೆಯಲ್ಲಿ ಈ ಹಿಂದಿನ ದಿನ ಈ ಕಾಯ್ದೆಯನ್ನು ಸಮಸ್ತ ರಾಜ್ಯಕ್ಕೆ ಅನ್ವಯಿಸದೇ ಇರುವುದರ ಸರಕಾರದ ಕ್ರಮವನ್ನು ಬಹುತೇಕ ಸದಸ್ಯರು ಟೀಕಿಸಿದ್ದಾರೆ. ರಾಯರೇ, ಅಲ್ಲಿ ನಾನು ಕಾಯ್ದೆಯನ್ನು ಸಂಪೂರ್ಣ ರಾಜ್ಯಕ್ಕೆ ಅನ್ವಯವಾಗುವಂತೆ ಸರಕಾರ ವ್ಯವಸ್ಥೆ ಮಾಡುತ್ತದೆಯೆಂದು ಪ್ರಮಾಣ ಮಾಡಿದ್ದೇನೆ. ಈಗ ಪ್ರಶ್ನೆ ಇರುವುದು ಇದನ್ನು ಈಗ ಮಾಡಬೇಕೋ ಅಥವಾ ತಿದ್ದುಪಡಿಯ ನಂತರ ಸರಕಾರವು ಈ ಪ್ರಶ್ನೆಯನ್ನು ಗಂಭೀರವಾಗಿ ಪರಿಶೀಲಿಸುತ್ತಿದೆ.

ಮಾನ್ಯ ಸದಸ್ಯರು ತಿಳಿಸಿದಂತೆ, ಹಿಡುವಳಿಗಳಿಗೆ ಗರಿಷ್ಠ ಮಿತಿ ನಿಗದಿಗೊಳಿಸಬೇಕು. ನಮ್ಮ ರಾಜ್ಯ ಸರಕಾರ ಅಲ್ಲದೇನೇ, ಕೇಂದ್ರ ಸರಕಾರವೂ ಈ ಪ್ರಶ್ನೆಯನ್ನು ಪರೀಶೀಲಿಸುತ್ತದೆ. ಗರಿಷ್ಠ ಮಿತಿ ನಿಗದಿಗೊಳಿಸಲು, ರಾಜ್ಯ ಸರಕಾರದ ನಡುವೆ ಪತ್ರ ವ್ಯವಹಾರ ನಡೆದಿದೆ. ಈ ಪ್ರಶ್ನೆ, ತಿಳಿದುಕೊಂಡಷ್ಟು ಸುಲಭವಲ್ಲ. ಅದು ಒಂದು ಬಹಳ ಜಟಿಲವಾದ ಪ್ರಶ್ನೆಯಾಗಿದೆ. ಎಲ್ಲಾ ಪ್ರದೇಶಗಳಲ್ಲಿ, ಒಂದೇ ತೆರನಾದ ಗರಿಷ್ಠ ಮಿತಿ ನಿಗದಿಗೊಳಿಸಲು ಸಾಧ್ಯವಿಲ್ಲ. ಆ ಮಿತಿಯು ಪ್ರದೇಶ, ಭೂಮಿಯ ಸ್ವರೂಪ ಮತ್ತು ಇತರ ಸನ್ನಿವೇಶ ಅಥವಾ ಸಂದರ್ಭಗಳ ಮೇಲೆ ಅವಲಂಬಿಸಬೇಕು. ಕಾಫಿ ಅಥವಾ ಅಡಿಕೆ ಅಥವಾ ಚಹಾ ಎಸ್ಟೇಟುಗಳ ಮೇಲೆ ನಿಗದಿಪಡಿಸುವ ಮಿತಿಯು ಕೃಷಿಯ ಭೂಮಿಗಿಂತ ಭಿನ್ನವಾಗಿರುತ್ತದೆ. ಈಗ ಸಧ್ಯ, ನಾವು ಕೃಷಿಯ ಭೂಮಿಗಳ ಮೇಲೆ ಮಿತಿ ನಿಗದಿಪಡಿಸುವುದು ಸಮರ್ಪಕ. ಆ ದಿಶೆಯಲ್ಲಿ ಕೂಡಲೇ, ಒಂದು ನಿರ್ಧಾರ ತೆಗೆದುಕೊಳ್ಳಲಾಗುವುದು, ನಮ್ಮ ಸ್ನೇಹಿತರು, ಸೂಚಿಸಿದಂತೆ, ಸ್ವತ್ತಿನ ಹಂಚುವಿಕೆಯು ಕೇವಲ ಕೃಷಿ ಭೂಮಿಗಳಿಗೆ ಸೀಮಿತವಾಗದೇ, ಅದು ಮನೆ ಮತ್ತು ಇತರ ಸ್ವತ್ತುಗಳಿಗೆ ವಿಸ್ತರಿಸಬೇಕು. ನಾನು ಅವರ ಅಭಿಪ್ರಾಯಕ್ಕೆ ಒಪ್ಪುತ್ತೇನೆ. ಶ್ರೀಮಂತ

ಮತ್ತು ಬಡವರ ಮಧ್ಯೆಯಿರುವ ವೈಷಮ್ಯತೆ ನಿರ್ಮೂಲವಾದರೆ, ದೇಶದ ಅಭಿವೃದ್ಧಿ ಸಾಧ್ಯ.

ಕೊನೆಯದಾಗಿ, ನಾನು ಸೀತಾರಾಮಯ್ಯನವರಿಗೆ, ಅರಿಕೆ ಮಾಡಿಕೊಳ್ಳುವುದೇನೆಂದರೆ, ಪುನಃ ಈ ಸಮಸ್ಯೆಯನ್ನು ದೇಶದ ಮತ್ತು ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ, ಪರಿಗಣಿಸಬೇಕು. ಭೂ ಸುಧಾರಣೆಗಾಗಿ, ಇಷ್ಟು ಭರದಿಂದ ನಾವು ಪರಿಶೀಲಿಸುವಾಗ, ಜಮೀನುದಾರರನ್ನು ಅನಾವಶ್ಯಕವಾಗಿ ಯಾವುದೇ ಹಾನಿಗೆ ಗುರಿ ಮಾಡಬಾರದು. ಒಂದು ವೇಳೆ ಜಮೀನುದಾರರು, ಭೂಮಿಯನ್ನು ಒಂದು ಮಿತಿಯವರೆಗೆ ಸಾಗುವಳಿ ಮಾಡಲು ಬಯಸಿದರೆ, ಅವರಿಗೆ ಆ ರೀತಿಯ ಅನುಮತಿ ಕೊಡಬೇಕು. ಅಂಥ ವೇಳೆಯಲ್ಲಿ ಸದನದಲ್ಲಿ ಕಾಯ್ದೆಯ ತಿದ್ದುಪಡಿಯನ್ನು ಮಂಡಿಸಬೇಕಾಗುತ್ತದೆ. ಕಾಯ್ದೆಯನ್ನು ತಿದ್ದುಪಡಿ ಮಾಡುವಾಗ, ಶ್ರೀ ಸೀತಾರಾಮಯ್ಯನವರ ಎಲ್ಲಾ ಸೂಚನೆಗಳನ್ನು ಗಮನದಲ್ಲಿಡುತ್ತೇನೆ. ನಂತರ ಕೂಡಲೇ ಆದಷ್ಟು ಬೇಗನೆ, ತಿದ್ದುಪಡಿಯ ಮಸೂದೆಯನ್ನು ಸದನದಲ್ಲಿ ತರುತ್ತೇನೆ.

**ವಿಧಾನ ಪರಿಷತ್ತು–ಮೈಸೂರು ಇನಾಂರದ್ದತಿಯ ಮಸೂದೆಯ ಮೇಲೆ ಜಂಟಿ ಸೆಲೆಕ್ಟ್ ಸಮಿತಿಗೆ ಒಪ್ಪಿಗೆ ಕುರಿತು ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ. ೧೧ನೇ ಏಪ್ರಿಲ್ ೧೯೫೫**

**ಸಭಾಧ್ಯಕ್ಷರು ;**

ಮಸೂದೆಯ ತತ್ವಗಳಿಗೆ ಎಲ್ಲಾ ಸದಸ್ಯರು ಒಪ್ಪಿಕೊಂಡಿದ್ದಾರೆಂಬುದು ನನಗೆ ಅನಿಸುತ್ತದೆ. ಈಗ ಮಾನ್ಯ ಮಂತ್ರಿಗಳು ಉತ್ತರ ನೀಡುವರು.

**ಶ್ರೀ ಕಡಿದಾಳ ಮಂಜಪ್ಪ :**

ಮಾನ್ಯರೆ, ಎಲ್ಲಾ ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿ, ಕಾಯ್ದೆಯಲ್ಲಿನ ಕೆಲವು ಉಪಬಂಧಗಳಿಗೆ, ಸ್ವಾಗತ ಕೋರಿ, ಅದರ ಕೆಲವು ಉಪಬಂಧಗಳ ಬಗ್ಗೆ ಕೆಲವು ಆಕ್ಷೇಪಣೆಗಳನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್ ಅವರು ಕಾಯ್ದೆಯ ಎಲ್ಲಾ ಉಪಬಂಧಗಳ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಅದರ ಬಗ್ಗೆ ನಾನು ಈ ಹಂತದಲ್ಲಿ ಹೆಚ್ಚಿಗೆ ಏನೂ ಹೇಳುವ ಅವಶ್ಯಕತೆಯಿಲ್ಲ. ಏಕೆಂದರೆ, ಮಸೂದೆಯು ಸೆಲೆಕ್ಟ ಸಮಿತಿಯ ಎದುರು ಹೋಗಲಿದೆ. ಸಂಕ್ಷಿಪ್ತವಾಗಿ, ನಾನು ಇಲ್ಲಿ ನನ್ನ ಉತ್ತರ ನೀಡುತ್ತೇನೆ. ಶ್ರೀ ರಾಜಗೋಪಾಲ ಅಯ್ಯಂಗಾರರು

ಮಸೂದೆಯ ಬಗ್ಗೆ ಪ್ರಸ್ತುತ ಪಡಿಸಿದಂತೆ, ಅದರಲ್ಲಿನ ಕೆಲವು ಮಧ್ಯವರ್ತಿಗಳನ್ನು ತೆಗೆದುಹಾಕಿ. ಸಾಗುವಳಿ ಮಾಡುವವನೇ ಭೂಮಿಯ ಒಡೆಯನನ್ನಾಗಿ ಮಾಡಬೇಕು. ಮಸೂದೆಯಲ್ಲಿ ಕೆಲವು ದೋಷಗಳಿರುವುದು ಸತ್ಯ. ಸೆಲೆಕ್ಟ ಸಮಿತಿಯು, ಅವುಗಳನ್ನೆಲ್ಲ, ಕೂಲಂಕುಷವಾಗಿ ಪರಿಶೀಲಿಸಿ, ಕೆಲವು ಅವಶ್ಯಕ ತಿದ್ದುಪಡಿಗಳನ್ನು ಮಾಡುತ್ತದೆ. ನನ್ನ ಮಿತ್ರ ಶ್ರೀ ರಾಜಗೋಪಾಲ ಅಯ್ಯಂಗಾರರು "ಸರಕಾರವು ಹಂಚಿಕೆದಾರನ ಮತ್ತು ದಳ್ಳಾಳಿಯ ಪಾತ್ರ ತೆಗೆದುಕೊಳ್ಳುವುದೆಂದು" ಹೇಳಿದ್ದಾರೆ. ಮಸೂದೆಯ, ಗೇಣಿದಾರರಿಂದ ವಿಮಾ ಕಂತು (ಪ್ರೀಮಿಯಮ್) ಪಡೆಯುವ ಉಪಬಂಧಗಳಿಗೆ, ಅವರು ಆಕ್ಷೇಪಣೆ ಹಾಕಿದ್ದಾರೆ.

ಮಾನ್ಯರೆ, ಗೇಣಿದಾರರನ್ನು ಕಡಿಮೆ ಗೇಣಿದಾರರೆಂದು, ಖಾಯಂ-ಕ್ವಾಸಿ (ಅರೆ) ಅರೆ ಸ್ವರೂಪದ ಗೇಣಿದಾರರೆಂದು ಮತ್ತು ಸಾಮಾನ್ಯ ಗೇಣಿದಾರರೆಂದು ವರ್ಗೀಕರಿಸಲಾಗಿದೆ. ಅಲ್ಲದೆ, ಭೂಮಿಯ ಖಾಸ್ ಸ್ವಾಧೀನತೆಗಾಗಿ, ಅಲ್ಲಿ ಇನಾಮದಾರನಿರುವನು. ಕಡಿಮೆ ಗೇಣಿದಾರನು, ಬೇರ್ಪಡೆ ಹೊಂದಿದ ಗ್ರಾಮಗಳಲ್ಲಿ, ತನ್ನ ಸ್ಥಾನ ಹೊಂದಿ, ಅವನಿಗೆ ಭೂಮಿಯನ್ನು 'ಇನಾಮ'ವಾಗಿ ಕೊಡಲಾಗಿದೆ. ಕಾರಣ, ಅವನು ಭೂಮಿಗೆ ಯಾವ ಪ್ರೀಮಿಯಮ್ ಕೊಡಲು ನಾವು ನಿರೀಕ್ಷಿಸಲು ಸಾಧ್ಯವಿಲ್ಲ. ಅವನು ಕೇವಲ ಸಾಮಾನ್ಯ ಭೂ-ಕಂದಾಯ ಕೊಟ್ಟರೆ ಸಾಕು. ಒಬ್ಬ ವ್ಯಕ್ತಿಯು ೧೨ ವರ್ಷಗಳವರೆಗೆ, ಭೂಮಿಯ ಸ್ವಾಧೀನತೆಯನ್ನು ಹೊಂದಿದರೆ, ಅವನು ಖಾಯಂ ಗೇಣಿದಾರನು. ಖಾಯಂ ಗೇಣಿದಾರನ ಪ್ರಸಂಗದಲ್ಲಿ, ಮಸೂದೆಯ ಪ್ರಕಾರ ೫೦ ಪ್ರತಿಶತ ಮಾರುಕಟ್ಟೆಯ ಭೂಮಿಯ ಬೆಲೆ (ಮೌಲ್ಯ) ಯನ್ನು ಸರಕಾರಕ್ಕೆ ಕೊಡಬೇಕಾಗುತ್ತದೆ. ನಮಗೆ ಗುರ್ತಿದ್ದ ಹಾಗೆ, ಸರಕಾರದ ಗ್ರಾಮಗಳಲ್ಲಿ, ಜಮೀನುದಾರರ ಅಡಿಯಲ್ಲಿ, ಭೂಮಿ ಸಾಗುವಳಿ ಮಾಡಲು ಖಾಯಂ ಗೇಣಿದಾರರಿದ್ದಾರೆ.

# ಸಂವಿಧಾನದ (ಏಳನೆ ತಿದ್ದುಪಡಿ)

## ಮಸೂದೆ ೧೯೫೬ರ ಕುರಿತು ಅಧಿಕೃತ ನಿರ್ಣಯದ ಬಗ್ಗೆ ಮುಖ್ಯಮಂತ್ರಿಗಳಾದ ಶ್ರೀ ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ (೨೬ನೇ ಸೆಪ್ಟಂಬರ್ ೧೯೫೬)

**ಶ್ರೀ ಕಡಿದಾಳ ಮಂಜಪ್ಪ (ಮುಖ್ಯ ಮಂತ್ರಿಗಳು) :**

ನಿಮ್ಮ ಅನುಮತಿಯ ಮೇರೆಗೆ, ನಾನು ೩೬೮ ವಿಧಿಯ ಬಗ್ಗೆ ಮಾನ್ಯ ಸದಸ್ಯರ ಗಮನಕ್ಕೆ ತರುತ್ತೇನೆ. ಮಾನ್ಯ ಸದಸ್ಯರಿಗೆ ಗೊತ್ತಿರುವ ಹಾಗೆ, ರಾಜ್ಯಗಳ ಮರು ವಿಂಗಡಣಾ ಮಸೂದೆಯು ಕಾಯ್ದೆಯಾಗಿ ಅಂಗೀಕರಿಸಲಾಗಿದೆ. ಆದರೆ ರಾಜ್ಯಗಳ ಮರು ವಿಂಗಡಣೆಯ ಕಾರ್ಯ ಯೋಜನೆಯನ್ನು ಅನುಷ್ಠಾನಕ್ಕೆ ತರಲು, ಪ್ರಥಮ ಮತ್ತು ೭ನೇ ಅನುಸೂಚಿಗಳನ್ನೊಳಗೊಂಡ ಸಂವಿಧಾನದ ಕೆಲವು ಉಪಬಂಧಗಳನ್ನು ತಿದ್ದುಪಡಿ ಮಾಡಲು ಅನವಶ್ಯಕವಾಗಿದೆ. ಮರು ವಿಂಗಡಣೆಯ ಕಾರ್ಯ ಯೋಜನೆಯು, ರಾಜ್ಯಗಳ ಪ್ರದೇಶದಲ್ಲಿ, ಅನೇಕ ರಾಜ್ಯಗಳ ಸರಹದ್ದುಗಳಲ್ಲಿ ಬದಲಾವಣೆಯನ್ನು ಮಾಡಲು ಮತ್ತು ರಾಜ್ಯಗಳ ವಿವಿಧ ವರ್ಗಗಳ ವ್ಯತ್ಯಾಸವನ್ನು ರದ್ದು ಮಾಡಲು ತಿಳಿಸುತ್ತದೆ. ಕೆಲವು ರಾಜ್ಯಗಳನ್ನು ಹೊಸದಾಗಿ ರಚಿಸುವ ಬಗ್ಗೆಯು ಅದು ತಿಳಿಸುತ್ತದೆ. ಕಾರಣ, ಸಂವಿಧಾನವನ್ನು ತಿದ್ದುಪಡಿ ಮಾಡುವ ಅವಶ್ಯಕತೆ ಇದೆ. ೩೬೮ನೇ ವಿಧಿ ಪ್ರಕಾರ, ಸಂವಿಧಾನ ತಿದ್ದುಪಡಿ ಮಾಡಲು, ಆ ಉದ್ದೇಶಕ್ಕಾಗಿ, ಮೊದಲು ಮಸೂದೆಯನ್ನು ಸಂಸತ್ತಿನ ಯಾವುದೇ ಸದನದಲ್ಲಿ ಮಂಡಿಸಬೇಕು. ಸಂಸತ್ತು ಅಂಗೀಕರಿಸಿದ ಆ ಮಸೂದೆಯು ರಾಷ್ಟ್ರಪತಿಯವರ ಒಪ್ಪಿಗೆ ಪಡೆಯಬೇಕು. ಒಂದು ವೇಳೆ, ಅಂಥ ತಿದ್ದುಪಡಿಯು, ಸಂವಿಧಾನದ ಕೆಲವು ವಿಧಿಗಳಲ್ಲಿ ಬದಲಾವಣೆಗಳನ್ನು ಮಾಡಬೇಕಾದರೆ, ಅಂಥ ತಿದ್ದುಪಡಿಯನ್ನು ಒಂದು ಅರ್ಧದಷ್ಟು ರಾಜ್ಯಗಳು, ಅನುಮೋದಿಸಿದರೆ, ರಾಷ್ಟ್ರಪತಿಯ ಒಪ್ಪಿಗೆ ಪಡೆಯಬೇಕು. ಅದಕ್ಕಾಗಿಯೇ, ಈ ನಿರ್ಣಯವನ್ನು ಮಂಡಿಸಲಾಗಿದೆ.

**ಶ್ರೀ ಎ. ಭೀಮಪ್ಪ ನಾಯಕ (ಮೊಳಕಾಲ್ಮೂರು) :**

ಅದು ಕೂಡ ಪೂರ್ಣವಾಗಿದೆ. ಅರ್ಧಕ್ಕಿಂತ ಹೆಚ್ಚು ರಾಜ್ಯಗಳು ಅದಕ್ಕೆ ಅನುಮೋದನೆ ನೀಡಿದೆ.

**ಶ್ರೀ ಕಡಿದಾಳ ಮಂಜಪ್ಪ :** ೩೬೮ವಿಧಿಯ ಪ್ರಕಾರ, ಆ ನಿರ್ಣಯವನ್ನು ರಾಜ್ಯ ಶಾಸಕಾಂಗದ ಎದುರು ಮಂಡಿಸಲಾಗಿದೆ. ಆ ತಿದ್ದುಪಡಿಯು ರಾಜ್ಯಗಳಿಂದ ಅನುಮೋದಿಸಲ್ಪಡಬೇಕು. ಅದಕ್ಕಾಗಿಯೇ, ಮಾನ್ಯರೆ, ಆ ನಿರ್ಣಯವನ್ನು ಸದನದಲ್ಲಿ ಪ್ರಸ್ತಾಪಿಸಿದ್ದೇನೆ.

**ಸಂವಿಧಾನದ (ಏಳನೆ ತಿದ್ದುಪಡಿ) ಮಸೂದೆ ೧೯೫೬ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಶ್ರೀ ಕಡಿದಾಳ ಮಂಜಪ್ಪ (ಮುಖ್ಯಮಂತ್ರಿ)ನವರ ಉತ್ತರಗಳ ಸ್ಪಷ್ಟೀಕರಣ. (೨೬ನೇ ಸೆಪ್ಟಂಬರ್ ೧೯೫೬)**

ಮಾನ್ಯ ಅಧ್ಯಕ್ಷರೇ, ಈ ಸಂದರ್ಭದಲ್ಲಿ ಮಾನ್ಯ ಸದಸ್ಯರು, ಅನಾವಶ್ಯಕವಾಗಿ ಕೆಲವು ವಿಷಯಗಳನ್ನು ವ್ಯಕ್ತಪಡಿಸಿದ್ದಾರೆ. ನನ್ನ ಮಿತ್ರರಾದ ಶ್ರೀ ಇಮಾಮರು ತಮ್ಮ ಅಂಶಗಳನ್ನು ವ್ಯಕ್ತಪಡಿಸುವಾಗ, ಸಂವಿಧಾನ ಬಾಹಿರದ ಮನೋವೃತ್ತಿಯನ್ನು ತಾಳಿದ್ದಾರೆ. ಆ ಎಲ್ಲಾ ಅಂಶಗಳಿಗೆ ನನ್ನ ಮಿತ್ರ ಶ್ರೀ ಪಟ್ಟಾಭಿರಾಮನ್‌ರು ಸ್ಪಷ್ಟೀಕರಣ ನೀಡಿದ್ದಾರೆ. ಯಾವಾಗ, ಒಂದು ರಾಜ್ಯ ರಚಿಸಬೇಕಾದರೆ, ಅಥವಾ ರಾಜ್ಯಗಳ ಸರಹದ್ದುಗಳನ್ನು ಬದಲಿಸಬೇಕಾದರೆ ಅಥವಾ ಒಂದು ರಾಜ್ಯವನ್ನು ನಾಮಕರಣ ಮಾಡಬೇಕಾದರೆ, ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸುವ ಮೊದಲು, ಸಂಬಂಧಪಟ್ಟ ರಾಜ್ಯದ ಶಾಸಕಾಂಗದೊಡನೆ ಸಮಾಲೋಚಿಸಬೇಕಾಗುತ್ತದೆ. ಸಂವಿಧಾನವನ್ನು ತಿದ್ದುಪಡಿ ಮಾಡಲು, ೩೬೮ನೇ ವಿಧಿಯ ಪ್ರಕಾರ, ವಿಧಾನವನ್ನು ಅನುಸರಿಸಬೇಕಾಗುತ್ತದೆ ಎಲ್ಲಾ ತಿದ್ದುಪಡಿಗಳ ಅನುಮೋದನೆ ಅವಶ್ಯವಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ, ತಿದ್ದುಪಡಿಗಳು ರಾಜ್ಯ ಶಾಸಕಾಂಗದಿಂದ ಅನುಮೋದನೆ ಪಡೆಯಬೇಕಾಗುತ್ತದೆ. ೩೬೮ನೇ ವಿಧಿ ಪ್ರಕಾರ, "ಸಂವಿಧಾನದ ತಿದ್ದುಪಡಿಯ ಮಸೂದೆಯನ್ನು ಸಂಸತ್ತಿನ ಯಾವುದೇ ಸದನದಲ್ಲಿ ಮಂಡಿಸಬೇಕು. ಮಸೂದೆಯು ಪ್ರತಿದಿನದ ಒಟ್ಟು ಸದಸ್ಯರ ಬಹುಮತದಿಂದ ಅಂಗೀಕರಿಸಬೇಕು. ಮತ್ತು ೨:೩ಕ್ಕೆ ಕಡಿಮೆ ಇಲ್ಲದಂತೆ ಆ ಸದನದ ಬಹುಮತದಿಂದ ಅಂಗೀಕರಿಸಲ್ಪಡಬೇಕು. ನಂತರ ಆ ಮಸೂದೆಯನ್ನು ರಾಷ್ಟ್ರಪತಿಯವರ ಒಪ್ಪಿಗೆಗೆ ಕಳುಹಿಸಿ ಅದು ಅವರ ಒಪ್ಪಿಗೆಯನ್ನು ಪಡೆಯಬೇಕು.

"ತಿದ್ದುಪಡಿಯು ಒಂದು ವೇಳೆ ವಿಧಿ ೫೪, ೫೫, ೭೩, ೧೬೨ ಅಥವಾ ೨೪೧ ಅಥವಾ ಭಾಗ ೫ರ ಅಧ್ಯಾಯ೪, ಭಾಗ ೬ರ ಅಧ್ಯಾಯ ೫, ಭಾಗ ೧೧ರ ಅಧ್ಯಾಯ ೧, ಅಥವಾ ೭ನೇ ಅನುಸೂಚಿಯಲ್ಲಿನ ಯಾವುದೇ ಪಟ್ಟಿ ಅಥವಾ ಸಂಸತ್ತಿನಲ್ಲಿ ರಾಜ್ಯಗಳ ಪ್ರಾತಿನಿಧ್ಯತೆಯ ಉಪಬಂಧಗಳನ್ನು ಬದಲಾವಣೆ

ಮಾಡಬೇಕಾದರೆ, ಒಂದು ಅರ್ಧದಷ್ಟು ರಾಜ್ಯ ಶಾಸಕಾಂಗಗಳ ಅನುಮೋದನೆ ಅವಶ್ಯಕತೆಯಿರುತ್ತದೆ. ನಂತರ ರಾಷ್ಟ್ರಪತಿಗಳ ಒಪ್ಪಿಗೆ ಪಡೆಯಬೇಕು.

ಈ ದಿಶೆಯಲ್ಲಿ ಈ ನಿರ್ಣಯಕ್ಕೆ ನಮ್ಮ ಅಭಿಪ್ರಾಯಗಳನ್ನು ನಾವು ವ್ಯಕ್ತಪಡಿಸಬೇಕಾಗುತ್ತದೆ, ನನ್ನ ಸ್ನೇಹಿತರಾದ ಶ್ರೀ ಇಮಾಮರು ಸಾಕಷ್ಟು ಟೀಕೆ ಟಿಪ್ಪಣಿಗಳನ್ನು ಮಾಡಿದ್ದಾರೆ. ಅವರ ಹೇಳಿಕೆಯ ಪ್ರಕಾರ, ರಾಜ್ಯಗಳಲ್ಲಿ ವಿಧಾನ ಪರಿಷತ್ತಿನ ಅವಶ್ಯಕತೆಯಿಲ್ಲ. ವಿಧಾನ ಪರಿಷತ್ತು ಇರಬೇಕೋ ಅಥವಾ ಬೇಡವೋ ಎಂಬುದರ ಬಗ್ಗೆ ಬಹಳಷ್ಟು ಭಿನ್ನಾಭಿಪ್ರಾಯಗಳಿವೆ. ಆದರೆ ಬಹಳಷ್ಟು ಜನರ ಅಭಿಪ್ರಾಯದ ಪ್ರಕಾರ, ತಾತ್ಕಾಲಿಕವಾಗಿ, ವಿಧಾನಪರಿಷತ್ತು ಇರಬೇಕು.

ಶ್ರೀ ಇಮಾಮರು, ನ್ಯಾಯಾಧೀಶರನ್ನು, ತಮ್ಮ ವೃತ್ತಿಯನ್ನು ಪ್ರಾರಂಭಿಸುವ (ನಿವೃತ್ತಿ ಹೊಂದಿದ ನಂತರ) ಬಗ್ಗೆ ಆಕ್ಷೇಪಣೆ ಮಾಡಿದ್ದಾರೆ ರಾಯರೇ, ನ್ಯಾಯಾಧೀಶರು (ಅದರಲ್ಲಿ ಹೈಕೋರ್ಟುಗಳು), ಆಳವಾದ ಅನುಭವ ಮತ್ತು ಪಾಂಡಿತ್ಯ ಹೊಂದಿರುವುದರಿಂದ, ಅವರಿಗೆ ವೃತ್ತಿಯನ್ನು ಪ್ರಾರಂಭಿಸಲು ಅನುಮತಿ ಕೊಡಬೇಕಾಗುತ್ತದೆ. ಆದರೆ ಯಾವ ಹೈಕೋರ್ಟಿನಲ್ಲಿ ನ್ಯಾಯಾಧೀಶರು ಸೇವೆ ಸಲ್ಲಿಸಿರುತ್ತಾರೆಯೋ, ಅಲ್ಲಿ ಅವರನ್ನು ವೃತ್ತಿ ಪ್ರಾರಂಭಿಸಲು ಅನುಮತಿ ಕೊಡಬಾರದು.

ಶ್ರೀ ಲಿಂಗಾರೆಡ್ಡಿಯವರು ತಿಳಿಸಿದಂತೆ, ಹೈಕೋರ್ಟ್‌ಗಳ ನ್ಯಾಯಾಧೀಶರಿಗೆ ಒಂದೇ ತೆರನಾದ ಸಂಬಳವಿರಬೇಕು. ಸರಕಾರಿ ನೌಕರರ ಸಂಬಳದಲ್ಲಿ ಏರುಪೇರುಗಳಿರಬಾರದೆಂಬುದನ್ನು ನಮ್ಮ ಮಿತ್ರರು ತಿಳಿಸಿದ್ದನ್ನು ನಾನು ಒಪ್ಪುತ್ತೇನೆ, ಈ ಪ್ರಶ್ನೆಯ ಇತ್ಯರ್ಥಕ್ಕೆ ವೇತನ ಆಯೋಗದ ನೇಮಕದಿಂದ ಪರಿಹಾರ ಸಿಗುತ್ತದೆ. ನನ್ನ ವೈಯಕ್ತಿಕ ಅಭಿಪ್ರಾಯದ ಪ್ರಕಾರ, ನಮ್ಮ ದೇಶದಲ್ಲಿ ಯಾರಿಗೂ ೧೫೦೦ ಕ್ಕಿಂತ ಹೆಚ್ಚಿನ ಸಂಬಳ ಕೊಡುವ ಅವಶ್ಯಕತೆಯಿಲ್ಲ. ಈ ಪ್ರಶ್ನೆಯನ್ನು, ಆ ಮೇಲೆ ಪರಿಹರಿಸಬೇಕು.

ನಮ್ಮ ಸ್ನೇಹಿತರ ಅಭಿಪ್ರಾಯದ ಪ್ರಕಾರ, ಹೈಕೋರ್ಟಿನ ನ್ಯಾಯಾಧೀಶರು ಉತ್ತಮ ರೀತಿಯಾಗಿ ಪರಿಗಣಿಸಲು ಅರ್ಹರಿರುವರು. ಅವರು ಕೆಲವು ಉತ್ತಮ ಸಂಪ್ರದಾಯಗಳ ಮೂಲಕ, ತಮ್ಮ ಹುದ್ದೆಗಳಿಗೆ ಅತ್ಯಂತ ಗೌರವ ಮತ್ತು ಘನತೆಗಳನ್ನು ಹೆಚ್ಚಿಸಿದ್ದಾರೆ. ಸದನದಲ್ಲಿ ತಿಳಿಸಿದ ಈ ವಿಷಯವನ್ನು ಕೇಂದ್ರ ಸರಕಾರ ಗಣನೆಗೆ ತೆಗೆದುಕೊಳ್ಳುವುದೆಂಬ ಭರವಸೆ ನನಗಿದೆ.

ಶ್ರೀ ಹೆಚ್.ಸಿ.ಲಿಂಗಾರೆಡ್ಡಿಯವರ ಪ್ರಕಾರ, ಈ ರಾಜ್ಯವನ್ನು ದಕ್ಷಿಣ ವಲಯದಲ್ಲಿ ಸೇರಿಸಬಾರದಾಗಿತ್ತು. ಈ ಪ್ರಶ್ನೆಯ ಮೇಲೆ ಕೆಲವು ಭಿನ್ನಾಭಿಪ್ರಾಯಗಳಿವೆ. ಆದರೂ ಇದಕ್ಕೆಲ್ಲ ಸಂಸತ್ತಿನ ಕಾಯ್ದೆಯಿದೆ. ಅದಕ್ಕಾಗಿ ನಾವು ಸ್ವಲ್ಪ ಕಾದು ನೋಡೋಣ. ಒಂದು ವೇಳೆ ಪಶ್ಚಿಮವಲಯವು ನಮ್ಮ ಹಿತಾಸಕ್ತಿಯ ಪ್ರಕಾರ ಇಲ್ಲದಿದ್ದರೆ ಅದನ್ನು ಅನಂತರ ಪರಿಶೀಲಿಸೋಣ. ಕಾಯಿದೆಗೆ ಸೂಕ್ತವಾದ ಮಾರ್ಪಾಡು ಮಾಡಲು ನಾವು ಕೇಂದ್ರ ಸರ್ಕಾರಕ್ಕೆ ವಿನಂತಿಸಿಕೊಳ್ಳಬಹುದು. ಮುಂದುವರೆದು,

ಶ್ರೀ ಪಟ್ಟಾಭಿರಾಮನ್‌ರವರು ಸೂಕ್ತ ಅಭಿಪ್ರಾಯ ವ್ಯಕ್ತಪಡಿಸಿದಂತೆ ಹೊಸ ರಾಜ್ಯದ ಉದ್ಘಾಟನೆಯನ್ನು ಒಳ್ಳೆಯ ಸದ್ಭಾವನೆಯಿಂದ ಮತ್ತು ಭಾತೃತ್ವದಿಂದ ಆಚರಿಸಬೇಕು. ಅವರ ಅಭಿಪ್ರಾಯಕ್ಕೆ ನಿಜವಾಗಿಯೂ ನಾನು ಒಪ್ಪುತ್ತೇನೆ. ನಮ್ಮ ಹೊಸ ರಾಜ್ಯವು ಒಳ್ಳೆಯ ಸದ್ಭಾವನೆಯ ಸನ್ನಿವೇಶದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಅದನ್ನು ಸಂಭ್ರಮದಿಂದ ಮತ್ತು ಅತೀ ಸಂತೋಷದಿಂದ ಉದ್ಘಾಟನೆ ಮಾಡಲು, ನವೆಂಬರ್ ೧ ರಂದು ನಮ್ಮ ರಾಷ್ಟ್ರಪತಿಗಳು ಒಪ್ಪಿದ್ದಾರೆ. ಕೆಲವು ನನ್ನ ಮಿತ್ರರು ಭಾಷಾ - ಅಲ್ಪಸಂಖ್ಯಾತರ ರಕ್ಷಣೆಗಳ ಉಪಬಂಧದ ಬಗ್ಗೆ ತಿಳಿಸಿರುವರು. ಎಲ್ಲಾ ರಾಜ್ಯ ಸರಕಾರಗಳು (ಮೈಸೂರು) ತಮ್ಮ ಜವಾಬ್ದಾರಿಗಳನ್ನು ಅರಿತು, ಭಾಷಾ ಅಲ್ಪ ಸಂಖ್ಯಾತರ ಹಿತಕ್ಕಾಗಿರುವ ಎಲ್ಲಾ ಉಪಬಂಧಗಳನ್ನು ಅನುಷ್ಠಾನಕ್ಕೆ ತರುವೆವೆಂದು ನನಗೆ ವಿಶ್ವಾಸವಿದೆ. ಸರಕಾರವು ೬ನೇ ತಿದ್ದುಪಡಿಯ ಮಸೂದೆಯ ಬಗ್ಗೆ ನಿರ್ಣಯವನ್ನು ಮಂಡಿಸದೇ ಆಕ್ಷೇಪಣೆ ವ್ಯಕ್ತಪಡಿಸಿದ್ದಾರೆ, ಅದು ನಿಜ. ಸದನದಲ್ಲಿ ಆ ತಿದ್ದುಪಡಿಯ ಮಸೂದೆಯನ್ನು ಸದನದಲ್ಲಿ ಮಂಡಿಸಲು, ನಾವು ವಿಫಲರಾದೆವು. ಸಂಸತ್ತು ಆ ಮಸೂದೆಯನ್ನು ೨೯ಮೇ, ೧೯೫೬ರಲ್ಲಿ ಅಂಗೀಕರಿಸಿತು. ಅದನ್ನು ವಿಧಾನ ಪರಿಷತ್ತಿನಲ್ಲಿ ೩೧ನೇ ಮೇ, ೧೯೫೬ರಲ್ಲಿ ಅಂಗೀಕರಿಸಲಾಯಿತು.

ಅದರ ಪ್ರಕಾರ, ನಾವು ೨ ಜೂನ್, ೧೯೫೬ರಂದು ಪ್ರಥಮ ಸುವಾರ್ತೆ ಪಡೆದೆವು. ನಂತರ, ೨೦ ಜೂನ್ ೧೯೫೬ರಂದು, ನಾವು ಕಾರ್ಯಕಲಾಪಗಳ ಪ್ರತಿಗಳನ್ನು ಪಡೆದೆವು. ಸದನದ ಅಧಿವೇಶನದಲ್ಲಿ, ಈ ನಿರ್ಣಯಗಳನ್ನು ಮಂಡಿಸಬೇಕೆಂದು ವಿಚಾರ ಮಾಡಿದೆವು. ಆದರೆ, ೧೧ನೇ ಸೆಪ್ಟಂಬರ್ ೧೯೫೬ರಂದು, ಮಸೂದೆಯು ರಾಷ್ಟ್ರಪತಿಯವರ ಅಂಕಿತ (ಒಪ್ಪಿಗೆ) ಪಡೆದಿತ್ತು. ಕಾರಣ, ಆ ಮಸೂದೆಯನ್ನು ಸದನದಲ್ಲಿ ಮಂಡಿಸಲು ಸಾಧ್ಯವಾಗಲಿಲ್ಲ.

ಶ್ರೀ ಗೋಪಾಲಗೌಡರ ಪ್ರಕಾರ, ಬೊಂಬೈ ಮತ್ತು ಇತರ ಸ್ಥಳಗಳಲ್ಲಿ ಕಾಂಗ್ರೆಸ್ಸಿನ

ಸರ್ವಾಧಿಕಾರದ ಮೂಲಕ, ಕೆಲವು ಅಹಿತಕರ ಘಟನೆಗಳು ಸಂಭವಿಸಿವೆ. ಕಾಂಗ್ರೆಸ್ಸಿನ ಅಂಥ ಆಡಳಿತವು ಇತಿಹಾಸದಲ್ಲಿ ದಾಖಲಾತಿಯಾಗುತ್ತದೆ ಎಂದು ಟೀಕಿಸಿದ್ದಾರೆ. ಆದರೂ, ನಾನು ಅತೀ ಸಂತೋಷದಿಂದ ಹೇಳುವುದೇನೆಂದರೆ "ಇತಿಹಾಸವು ಕಾಂಗ್ರೆಸ್ಸಿನ ವೈಭವದ ಆಳ್ವಿಕೆಯನ್ನು ದಾಖಲಾತಿ ಮಾಡುತ್ತದೆ."

# ಅಧಿಕೃತ ನಿರ್ಣಯ–ಸಂವಿಧಾನದ ಅನುಮೋದನೆ (೭ನೇ ತಿದ್ದುಪಡಿ) ಮಸೂದೆ ಬಗ್ಗೆ ಮುಖ್ಯಮಂತ್ರಿ ಶ್ರೀ ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ (ವಿಧಾನ ಪರಿಷತ್ತು ೨೭ನೇ ಸೆಪ್ಟೆಂಬರ್ ೧೯೫೬)

**ಶ್ರೀ ಕಡಿದಾಳ್ ಮಂಜಪ್ಪ (ಮುಖ್ಯಮಂತ್ರಿಗಳು):**

"ಸಂಸತ್ತಿನ ಎರಡೂ ಸದನಗಳು ಅಂಗೀಕರಿಸಿದ ಸಂವಿಧಾನಕ್ಕೆ ಮಾಡಿದ ಏಳನೇ ತಿದ್ದುಪಡಿ ಮಸೂದೆಗೆ, ೧೯೫೬ ಈ ಸದನವು ಅನುಮೋದಿಸುತ್ತದೆ" ಎಂದು ಮಂಡಿಸುತ್ತೇನೆ.

ಈ ಮಸೂದೆಯನ್ನು ಮಂಡಿಸಲು ಇರುವ ಕಾರಣಗಳನ್ನು ತಿಳಿಸುವುದು ನನಗೆ ಅನಾವಶ್ಯಕವೆನಿಸುತ್ತದೆ. ರಾಜ್ಯಗಳ ಮರುವಿಂಗಣೆಯ ಮಸೂದೆ ಉಪಬಂಧಗಳನ್ನು ಚರ್ಚಿಸುವಾಗ, ಮಾನ್ಯ ಸದಸ್ಯರು ಅದರ ಬಗ್ಗೆ ತಿಳಿದುಕೊಂಡಿದ್ದಾರೆ. ಕೆಲವು ವಿಷಯಗಳಲ್ಲಿ, ರಾಜ್ಯಗಳ ಏಕೀಕರಣದ ಕಾರ್ಯ ವಿಧಾನವು ಸಂವಿಧಾನದ ತಿದ್ದುಪಡಿ ಮಾಡುವ ಅವಶ್ಯಕತೆಗೆ ಅವಕಾಶ ನೀಡುತ್ತದೆ. ರಾಜ್ಯಗಳ ಮರುವಿಂಗಡಣಾ ಕಾರ್ಯವಿಧಾನದಲ್ಲಿ ಹೊಸ ರಾಜ್ಯಗಳ ರಚನೆಗೆ ಮತ್ತು ಅವುಗಳ ಸರಹದ್ದುಗಳನ್ನು ಬದಲಿಸುವ ಅವಕಾಶವಿದೆ. ಹಾಗೆಯೇ, ವಿವಿಧ ರಾಜ್ಯಗಳಲ್ಲಿಯ ವೈಷ್ಯಮ್ಯತೆಯನ್ನು ರದ್ದುಪಡಿಸಲು ಸೂಚಿಸಲಾಗಿದೆ. ಇನ್ನು ಮೇಲೆ. ಒಂದೇ ವರ್ಗದ ರಾಜ್ಯಗಳು ಮತ್ತು ಕೆಲವು ಕೇಂದ್ರಾಡಳಿತ ಪ್ರದೇಶಗಳಿರುತ್ತವೆ. ರಾಜ್ಯಗಳ ಅಖಂಡತೆಗಾಗಿ ಸಂವಿಧಾನದ ಕೆಲವು ಉಪಬಂಧಗಳನ್ನು ತಿದ್ದುಪಡಿ ಮಾಡಬೇಕು. ಅದಕ್ಕಾಗಿಯೇ ಸಂಸತ್ತಿನಲ್ಲಿ ಆ ಮಸೂದೆಯನ್ನು ಮಂಡಿಸಲಾಗಿತ್ತು. ಮಸೂದೆಯನ್ನು ಸಂಸತ್ತಿನ ಎರಡೂ ಸದನಗಳು ಅಂಗೀಕರಿಸಿದವು. ಸಂವಿಧಾನದ ೩೬೮ನೇ ವಿಧಿ ಪ್ರಕಾರ, ತಿದ್ದುಪಡಿ ಮಾಡುವ ಮಸೂದೆಯನ್ನು ರಾಷ್ಟ್ರಪತಿಯವರ ಒಪ್ಪಿಗೆಗಾಗಿ ಕಳುಹಿಸುವ ಮುನ್ನ ಅದಕ್ಕೆ ಒಂದು ಅರ್ಧದಷ್ಟು ಕಡಿಮೆ ಇಲ್ಲದೆ ರಾಜ್ಯಗಳು, ಅಂಥ ಸೂಚಿಸಿದ ತಿದ್ದುಪಡಿಗಳಿಗೆ ಅನುಮೋದಿಸಬೇಕು. ರಾಜ್ಯ ಮರುವಿಂಗಡಣಾ ಮಸೂದೆಯ ವಿಷಯದಲ್ಲಿ ವಿಧಿ ೩ರ ಪ್ರಕಾರ, ಸಂಸತ್ತಿನಲ್ಲಿ ಈ ಮಸೂದೆಯನ್ನು ಮಂಡಿಸುವ ಮೊದಲು, ಈ ಸದನದೊಡನೆ ಸಮಾಲೋಚಿಸಲಾಗಿತ್ತು. ಈ ಸದನವು ರಾಜ್ಯಗಳ ಮರು ವಿಂಗಡಣಾ

ಮಸೂದೆಯ ಉಪಬಂಧಗಳನ್ನು ಚರ್ಚಿಸುವ ಅವಕಾಶ ಹೊಂದಿತ್ತು. ಸಂಸತ್ತು ಅಂಗೀಕರಿಸಿದ ತಿದ್ದುಪಡಿಯು ರಾಜ್ಯಗಳ ಮರು ವಿಂಗಡಣೆಯ ಕಾಯ್ದೆಯ ಕಾರ್ಯವಿಧಾನವನ್ನು ಅನುಷ್ಠಾನಕ್ಕೆ ತರಲು, ಅವಕಾಶ ಮಾಡಿಕೊಡುತ್ತದೆ. ಈ ನಿರ್ಣಯದ ಬಗ್ಗೆ ಯಾವ ತರಹದ ವಾದ-ವಿವಾದಗಳಿರುವುದಿಲ್ಲವೆಂಬುದು ನನ್ನ ಆಶ್ವಾಸನೆ. ಸದನವು ಈ ನಿರ್ಣಯವನ್ನು ಒಪ್ಪಿಕೊಂಡಿದ್ದಾಗಿ ನಾನು ಹೆಮ್ಮೆ ಪಡುತ್ತೇನೆ.

**ಎಂ.ಪಿ.ಎಲ್. ಶಾಸ್ತ್ರಿಗಳ ಪ್ರಶ್ನೆಗೆ ಉತ್ತರಿಸುತ್ತ :**

ಮಾನ್ಯ ಸದಸ್ಯರು, ರಾಜ್ಯಗಳ ಮರು ವಿಂಗಡಣೆಯ ಸಮಿತಿಯ ವರದಿಯ ಸಂಬಂಧದ ಕೆಲವು ಸೂಚನೆಗಳ ಬಗ್ಗೆ ಕೆಲವು ಘಟನೆಗಳು ಸಂಭವಿಸಿದರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಕೆಲವು ಸ್ಥಳಗಳಲ್ಲಿ ಸಂಘರ್ಷವಾದ ವಿವಾದಗಳು ಮತ್ತು ಬಲದ ಪ್ರಯೋಗವಾಗಿದ್ದುಂಟು. ಆ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು ಸಹಜ. ನನ್ನ ಮಿತ್ರ ಶಾಸ್ತ್ರೀಯವರು ತಿಳಿಸಿದಂತೆ, ನಾವು ಮೈಸೂರಿನಲ್ಲಿ, ಅತೀ ಘನತೆಯಿಂದ ನಡೆದೆವು. ನಾವು ನಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ, ಅಧಿಕಾರಗಳ ಸಂಗಡ ವಾದ ವಿವಾದ ಮಾಡಿದೆವು. ನಮ್ಮ ವಿಚಾರಗಳನ್ನು ಸಾರ್ವಜನಿಕರ ಮುಂದೆ ಇಟ್ಟೆವು. ಕೊನೆಗೆ, ಅಂತಿಮ ನಿರ್ಧಾರಕ್ಕಾಗಿ, ನಾವು ಬದ್ಧರಾದೆವು. ಇದಕ್ಕಾಗಿ ನಾನು ಬಹಳ ಹೆಮ್ಮೆ ಪಡುತ್ತೇನೆ. ಶ್ರೀ ಶಾಸ್ತ್ರಿ ಮತ್ತು ಇತರ ಸದಸ್ಯರು ತಿಳಿಸಿದಂತೆ, ನಮ್ಮ ನೂತನ ಮೈಸೂರು ರಾಜ್ಯದಲ್ಲಿ, ವಿಧಾನ ಪರಿಷತ್ತಿನಲ್ಲಿ ನಿಗದಿಪಡಿಸಿದ ಸ್ಥಾನಗಳು ಸಂವಿಧಾನದಲ್ಲಿನ ಉಪಬಂಧಗಳಲ್ಲಿ, ತಿಳಿಸಿದ್ದಕ್ಕಿಂತಲೂ, ಬಹಳ ಕಡಿಮೆ. ವಿಧಾನಸಭೆಯ ಸ್ಥಾನಗಳ ಸಂಖ್ಯೆಯನ್ನು ೧೮೨ ರಿಂದ ೨೦೮ಕ್ಕೆ ಏರಿಸಲಾಯಿತು. ಆದರೆ ವಿಧಾನ ಪರಿಷತ್ತಿನ ಸ್ಥಾನಗಳಿಗಾಗಿ ಏನನ್ನೂ ಮಾಡಲಾಗಲಿಲ್ಲ. ಕಾರಣ, ಎಲ್ಲ ಸದಸ್ಯರ ನ್ಯಾಯಬದ್ಧವಾದ ಬೇಡಿಕೆ ಏನೆಂದರೆ, ಈ ಸದನದ ಸ್ಥಾನಗಳನ್ನು ಹೆಚ್ಚಿಸಬೇಕು. ಈ ದಿಶೆಯಲ್ಲಿ, ಪರಿಷತ್ತಿನ ಸ್ಥಾನಗಳನ್ನು ೬೦ ರಿಂದ ೬೫ರ ನಡುವೆ ಏರಿಸಲು, ಕೇಂದ್ರ ಸರಕಾರದ ಮೇಲೆ ಪ್ರಭಾವ ಬೀರಲಾಗುತ್ತದೆ.

ನ್ಯಾಯಧೀಶರ ಸಂಬಳ ಕುರಿತು ಪ್ರಶ್ನೆಗಳಿಗೆ ಉತ್ತರಿಸುತ್ತ, ನ್ಯಾಯಾಧೀಶರ ಸಂಬಳ ಕುರಿತು ನನ್ನ ಸ್ನೇಹಿತರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ನಾನು ಒಪ್ಪುತ್ತೇನೆ. ಅವರ ಹೇಳಿಕೆಯ ಪ್ರಕಾರ, ನಮ್ಮ ದೇಶದಲ್ಲಿ ಶ್ರೀ ಸಾಮಾನ್ಯನ ಜೀವನಮಟ್ಟ ಬಹಳ ಕೆಳಮಟ್ಟದ್ದು. ಸಾಮಾನ್ಯ ಮನುಷ್ಯನ ಜೀವನಮಟ್ಟದಲ್ಲಿ ಮತ್ತು ಸಾರ್ವಜನಿಕ ನೌಕರರ ನಡುವೆ ಸ್ವಲ್ಪ ಸಂಬಂಧವಿರಬೇಕು. ನನ್ನ ಅಭಿಪ್ರಾಯದ ಪ್ರಕಾರವೂ, ಕಡಿಮೆ ಸಂಬಳದ ಸರಕಾರಿ ನೌಕರರ ಮತ್ತು ಹೆಚ್ಚು ಸಂಬಳದ ಸರಕಾರಿ ನೌಕರರ ನಡುವೆ,

ಬಹಳ ವೈಷಮ್ಯ ಇರಬಾರದು. ಶ್ರೀ ಶಾಸ್ತ್ರೀಯವರ ಪ್ರಕಾರ, ಪ್ರತಿ ತಿಂಗಳಿಗೆ, ೨೦೦೦ ರೂ ಕ್ಕಿಂತ ಹೆಚ್ಚು ಸಂಬಳ ಯಾರಿಗೂ ನೀಡಬಾರದು. ಆದರೆ ಈಗ ಸಂಬಳದ ಬಗ್ಗೆ ಚರ್ಚಿಸುತ್ತಿಲ್ಲ. ಅದನ್ನು ಅನಂತರ ಪರಿಶೀಲಿಸೋಣ. ನನ್ನ ಅಭಿಪ್ರಾಯದ ಪ್ರಕಾರ, ದೇಶದಾದ್ಯಂತ, ಒಂದೇ ತೆರನಾದ ಸಂಬಳವಿರಬೇಕು. ಅದರ ಜೊತೆಗೆ ಭತ್ಯವನ್ನು ಕೊಡಲು ಅವಕಾಶವಿರಬೇಕು.

ಈ ವಿಷಯ, ಬೇರೆಯಿದ್ದರೂ, ನನಗೂ ಸಂತೋಷದ ಸಂಗತಿಯೆಂದರೆ, ದೇಶದಾದ್ಯಂತ ಹೈಕೋರ್ಟಿನ ನ್ಯಾಯಾಧೀಶರಿಗೆ, ಒಂದೇ ರೀತಿಯ ಸಂಬಳ ಕೊಡಲಾಗಿದೆ. ಈ ಮೊದಲು ಅವರ ಸಂಬಳ, ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿತ್ತು. ಈಗ ಆ ವೈಷಮ್ಯತೆಯನ್ನು ಹೋಗಲಾಡಿಸಲಾಗಿದೆ. ಮದ್ರಾಸ್ ಮತ್ತು ಬಾಂಬೆ ಹೈಕೋರ್ಟ್‌ಗಳ ನ್ಯಾಯಾಧೀಶರು ಪಡೆಯುವ ಸಂಬಳವೇ, ನಮ್ಮ ಮೈಸೂರು ಹೈಕೋರ್ಟಿನ ನ್ಯಾಯಾಧೀಶರು ಪಡೆಯುತ್ತಾರೆ. ಶ್ರೀ ಶಾಸ್ತ್ರಿಯವರು ೨೫೮ ವಿಧಿಯ ಕ್ಲಾಜ್ ೧ಲನ್ನು ತಿದ್ದುಪಡಿ ಮಾಡಲು ಸೂಚಿಸಿದ್ದಾರೆ. ಅವರು, ರಾಜ್ಯಪಾಲರ ಅಧಿಕಾರಿಗಳ ಮತ್ತು ಸರಕಾರದ ಅಧಿಕಾರಗಳ ನಡುವಿನ ವೈಷಮ್ಯತೆಯ ಬಗ್ಗೆ ಸ್ಪಷ್ಟಪಡಿಸಿದ್ದಾರೆ. ಒಂದು ವೇಳೆ, ನನ್ನ ಮಿತ್ರರು ಸಂವಿಧಾನದ ಭಾಗ-೬ನ್ನು ಕೂಲಂಕಷವಾಗಿ ತಿಳಿದುಕೊಂಡರೆ, ಅವರಿಗೆ, ರಾಜ್ಯಪಾಲರ ಸ್ಥಾನ, ಅಧಿಕಾರ ಮತ್ತು ಇತರ ವಿಷಯಗಳ ಬಗ್ಗೆ ಚೆನ್ನಾಗಿ ಅರ್ಥವಾಗುತ್ತದೆ. ಸರಕಾರದ ಅಧಿಕಾರವು ರಾಜ್ಯಪಾಲರ ಹೆಸರಿನಲ್ಲಿಯೇ ಚಲಾಯಿಸಲಾಗುತ್ತದೆ. ಸರಕಾರದ ಯಾವುದೇ ನಿರ್ಣಯ ಅಥವಾ ನಿರ್ಧಾರ ರಾಜ್ಯಪಾಲರ ಹೆಸರಿನಲ್ಲಿಯೇ ತೆಗದುಕೊಳ್ಳಬೇಕಾಗುತ್ತದೆ. ಅಲ್ಲದೆ, ರಾಜ್ಯದ ಕಾರ್ಯಾಂಗದ ಅಧಿಕಾರವು ರಾಜ್ಯಪಾಲರಲ್ಲಿರಬೇಕೆಂದು, ಸಂವಿಧಾನವು ತಿಳಿಸುತ್ತದೆ. ರಾಜ್ಯಪಾಲರು, ಮಂತ್ರಿಮಂಡಲದ ಸಲಹೆಯ ಪ್ರಕಾರ, ಅಧಿಕಾರವನ್ನು ಚಲಾಯಿಸಲು, ದೇಶದಲ್ಲಿ ಒಳ್ಳೆಯ ಸಂಪ್ರದಾಯುಗಳನ್ನು, ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿದೆ.

ಮುಂದುವರಿದು, ರಾಜ್ಯ ಅಧಿಕಾರಿಗಳಿಗೆ ಮತ್ತು ರಾಜ್ಯ ಸರಕಾರಕ್ಕೆ ಕೇಂದ್ರ ಸರಕಾರದಿಂದ ಅಧಿಕಾರದ ನಿಯೋಜನೆಗೆ ಸಂಬಂಧಿಸಿದ ಶ್ರೀ ಶಾಸ್ತ್ರಿಯವರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತ :

"ನಾನು ಆ ವಿಷಯವನ್ನು ವಿವರಿಸುತ್ತೇನೆ. ಮಸೂದೆಯ ಗುರಿಗಳ ಮತ್ತು ಕಾರಣಗಳ ಹೇಳಿಕೆಯ ಬಗ್ಗೆ, ನಾನು ಸದಸ್ಯರ ಗಮನಕ್ಕೆ ತರುತ್ತೇನೆ. ೧ಲನೇ ಕ್ಲಾಜಿನಲ್ಲಿ, ಉಲ್ಲೇಖಿಸಿದ ವಿವರಣೆಯು ಹೀಗಿರುತ್ತದೆ. "೨೫೮, ವಿಧಿ (೧)ರ ಪ್ರಕಾರ,

ರಾಷ್ಟ್ರಪತಿಯವರು ಕೇಂದ್ರ ಕಾರ್ಯವನ್ನು ರಾಜ್ಯ ಸರ್ಕಾರಕ್ಕೆ ವಹಿಸಿಕೊಡಬಹುದು. ಆದರೆ, ರಾಜ್ಯಪಾಲರು ಕೇಂದ್ರ ಸರಕಾರಕ್ಕೆ ಅಥವಾ ಅದರ ಅಧಿಕಾರಿಗಳಿಗೆ ಅಂಥ ಕಾರ್ಯವನ್ನು ವಹಿಸಿಕೊಡಲು ಬರುವುದಿಲ್ಲ. ಅದೊಂದು ನ್ಯೂನ್ಯತೆ. ಅದನ್ನು ಸರಿಪಡಿಸಲು, ವಿಧಿ ೨೫೮-ಎ, ಸೂಚಿಸಲಾಗಿದೆ. ಕೆಲವು ಕಠಿಣತೆಗಳ ಮತ್ತು ರಾಜ್ಯ ರಾಜ್ಯಗಳಲ್ಲಿನ ಭಿನ್ನಾಭಿಪ್ರಾಯದ ಕಾರಣ, ಕೆಲವು ಸಂದರ್ಭಗಳಲ್ಲಿ ಕೆಲವು ಪ್ರಾಜೆಕ್ಟ್‌ಗಳನ್ನು ಅನುಷ್ಠಾನಕ್ಕೆ ತರಲು, ಅವುಗಳನ್ನು ಕೇಂದ್ರ ಸರಕಾರಕ್ಕೆ ಅಥವಾ ಕೇಂದ್ರ ಸರಕಾರದ ಅಧಿಕಾರಿಗಳಿಗೆ ವಹಿಸಿಕೊಡಲು ಅವಶ್ಯಕವಾಗಿದೆ. ಕಾರಣ, ಆ ರೀತಿಯಾಗಿ ಮಾಡಲು ಮಸೂದೆಯಲ್ಲಿ ಅವಕಾಶ ಮಾಡಲಾಗಿದೆ. ನಮ್ಮ ಪರವಾಗಿ (ರಾಜ್ಯದ) ನಾವು ಕೆಲವು ಅಣೆಕಟ್ಟುಗಳನ್ನು ಅನುಷ್ಠಾನಕ್ಕೆ ತರಲು, ಕೇಂದ್ರ ಸರಕಾರಕ್ಕೆ ಒಪ್ಪಿಸಬಹುದು. ಕೇಂದ್ರ ಸರಕಾರವು, ಸಂವಿಧಾನದಲ್ಲಿ ಉಲ್ಲೇಖಿಸಿದಂತೆ, ಸಾಕಷ್ಟು ಅಧಿಕಾರಗಳನ್ನು ಹೊಂದಿದೆ. ನಾವು ಈ ರೀತಿಯಾಗಿ ಮಾಡಲು ಪ್ರಯತ್ನಿಸದಿದ್ದರೂ, ಕೇಂದ್ರ ಸರಕಾರವು ರಾಜ್ಯಗಳ ಮೇಲೆ ತನ್ನ ಅಧಿಕಾರವನ್ನು ಚಲಾಯಿಸುತ್ತದೆ.

ವಲಯ ಪರಿಷತ್ತುಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸುತ್ತ,

"ದಕ್ಷಿಣ ಅಥವಾ ಪಶ್ಚಿಮ ವಲಯದಲ್ಲಿ, ರಾಜ್ಯವನ್ನು ಸೇರಿಸಬೇಕೆಂಬ ವಿಷಯದ ಅಂಶವು ಅತೀ ಪ್ರಾಮುಖ್ಯವಾಗಿದೆ. ಇದರ ಬಗ್ಗೆ ರಾಜ್ಯದಲ್ಲಿ ಭಿನ್ನಾಭಿಪ್ರಾಯವಿದೆ. ಈ ವಲಯ ಸಮಿತಿಗಳು ಬಹಳ ಮಿತವಾದ ಕಾರ್ಯಗಳನ್ನು ನಿರ್ವಹಿಸುತ್ತವೆ. ಅನುಭವದ ಪ್ರಕಾರ, ನಮ್ಮ ಹಣೆಬರಹ ದಕ್ಷಿಣದ ರಾಜ್ಯಗಳಿಂದ ಕೂಡಿದೆ. ಕಾರಣ, ಕೇಂದ್ರ ಸರಕಾರವು ನಮ್ಮನ್ನು ದಕ್ಷಿಣ, ಪರಿಷತ್ತಿನಲ್ಲಿ ಸೇರಿಸಬೇಕೆಂದು, ವಾದ ಮಾಡಬಹುದು".

ಮುಂದುವರಿದು ಪ್ರಶ್ನೆಗಳಿಗೆ ಉತ್ತರಿಸುತ್ತ,

"ಆಂಧ್ರ ಪ್ರದೇಶ, ಮದ್ರಾಸ್ ಮತ್ತು ಕೇರಳಗಳ ಜೊತೆ, ನಾವು ಸರ್ವಸಾಮಾನ್ಯದ ಪ್ರಶ್ನೆಗಳನ್ನು ಹೊಂದಿದ್ದೇವೆ. ಅದರ ಅರ್ಥ, ನಾವು ದಕ್ಷಿಣ ವಲಯದಲ್ಲಿ ಇದ್ದುದರಿಂದ ಆ ಎಲ್ಲ ಪ್ರಶ್ನೆಗಳನ್ನು ಬಗೆಹರಿಸಬೇಕೆಂದಲ್ಲ. ನಾವು ಆ ವಲಯಗಳು ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಕಾದು ನೋಡಬೇಕಾಗುತ್ತದೆ."

ಕ್ಲಾಜ್ -೨೧ರ ತಿದ್ದುಪಡಿಯ ಮಸೂದೆಯಲ್ಲಿ ಯಾವುದೇ ರೀತಿಯ ವಾದವಿರುವುದಿಲ್ಲ. ಈ ಕ್ಲಾಜ್‌ನ್ನು ತಿದ್ದುಪಡಿಯ ಮಸೂದೆಯಲ್ಲಿ ಸೇರಿಸಿ, ಭಾಷಾ-

ಅಲ್ಪ ಸಂಖ್ಯಾತರ, ಹಿತಾಸಕ್ತಿಗಳನ್ನು (ರಕ್ಷಣೆಗಳನ್ನು) ಕಾಪಾಡಲು ಸಹಾಯವಾಗುತ್ತದೆ. ಭಾಷೆಯ ಸಮಸ್ಯೆಗೆ, ನಾವು ಅಷ್ಟು ಪ್ರಾಮುಖ್ಯತೆ ಕೊಡುವುದು ಅವಶ್ಯವಿಲ್ಲ. "ಈ ದೇಶ ಒಂದು ಮನೆಯಿದ್ದ ಹಾಗೆ. ನಾನು ಈ ವಿಶಾಲವಾದ ದೇಶದ ಸಮಸ್ಯೆಯನ್ನು ಅವಿಭಕ್ತ ಕುಟುಂಬಕ್ಕೆ ಹೋಲಿಸುತ್ತೇನೆ. ನಾನು ಎಲ್ಲ ಪ್ರಾಂತ್ಯಗಳನ್ನು ಒಂದೇ ಮನೆಯಲ್ಲಿರುವ ಅನೇಕ ಕೋಣೆಗಳಿಗೆ ಹೋಲಿಸುತ್ತೇನೆ. ಈ ಕುಟುಂಬದ ಸದಸ್ಯರಾಗಿ, ನಾವು ಒಂದು ಕೋಣೆ ಅಥವಾ ಮತ್ತೊಂದು ಕೋಣೆಯಲ್ಲಿರಬಹುದು, ಆದರೆ ನಾವೆಲ್ಲರೂ, ಒಂದೇ ಮನೆಯಲ್ಲಿಯೇ ವಾಸಿಸುತ್ತೇವೆ. ಅದರಂತೆಯೇ, ನಾವು ಈ ಪ್ರಾಂತ್ಯದಲ್ಲಿ ಅಥವಾ ಇನ್ನೊಂದು ಪ್ರಾಂತ್ಯದಲ್ಲಿ ವಾಸಿಸಿದರೇನು ? ನಾವು ಭಾರತದಲ್ಲಿ ವಾಸಿಸುತ್ತೇವೆ. ನಾವು ಭಾರತೀಯರು, ನಾವು ಭಾಷೆಯ ಸಮಸ್ಯೆಗೆ ಅಷ್ಟು ಪ್ರಾಮುಖ್ಯತೆ ಕೊಡಬಾರದು".

"ನಾವು, ಜಾತಿ, ಭಾಷೆಗಳ ವ್ಯತ್ಯಾಸಗಳನ್ನು ಮರೆತು, ಅಣ್ಣ ತಮ್ಮಂದಿರಂತೆ ವರ್ತಿಸುತ್ತಿದ್ದೇವೆ. ಆದರೂ, ಭಾಷಾ –ಅಲ್ಪ ಸಂಖ್ಯಾತರ ಹಿತಾಸಕ್ತಿಗಳನ್ನು ಕಾಪಾಡಬೇಕು.

"ಸಂಸತ್ತಿನಲ್ಲಿ ರಾಜ್ಯಗಳ ಪ್ರಾತಿನಿಧ್ಯತೆಗೆ ಸಂಬಂಧಿಸಿದ ವಿಷಯದ ಬಗ್ಗೆ ಒಂದು ಅಂಶವೇನೆಂದರೆ ಈ ರಾಜ್ಯಗಳನ್ನು ಉಳಿದ ರಾಜ್ಯಗಳಂತೆ ಪರಿಗಣಿಸುತ್ತಿರುವುದಿಲ್ಲ" "ಕೆಲವು ಸಣ್ಣ ದ್ವೀಪಗಳು ಇವೆ. ಅವುಗಳಿಗೆ ಸರಕಾರದಿಂದ ವಿಶೇಷವಾದ ಗಮನ ಬೇಕು. ಕಾರಣ, ರಾಷ್ಟ್ರಪತಿಗಳಿಗೆ, ಆ ದಿಶೆಯಲ್ಲಿ ವಿಶೇಷ ಅಧಿಕಾರಗಳನ್ನು ಕೊಟ್ಟು ಅವುಗಳ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸದಂತೆ, ಕ್ರಮ ಕೈಗೊಳ್ಳಬೇಕಾಗುತ್ತದೆ. ಅದಕ್ಕಾಗಿಯೇ ಈ ಮಸೂದೆಯಲ್ಲಿ ಅಂಥ ವ್ಯವಸ್ಥೆಗಳನ್ನು ಸೂಚಿಸಲಾಗಿದೆ."

" ನನ್ನ ಮಿತ್ರ ಶ್ರೀ ಪಿ. ಸೀತಾರಾಮಯ್ಯನವರು, ತಿಳಿಸಿದಂತೆ, ಕೇಂದ್ರ ಸರಕಾರವು ಕೆಲವು ಪ್ರದೇಶಗಳ ಸಂಬಂಧದ ಸಾರ್ವಜನಿಕರ ಹಿತಾಸಕ್ತಿಗಳನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ (ಉದಾಹರಣೆಗೆ, ಮಡಕಾಸೀರದ ಹೊಸ ರಾಜ್ಯದಲ್ಲಿನ ಕೆಲವು ಪ್ರದೇಶಗಳ ಸೇರಿಸುವಿಕೆ), ಅವರ ವಿಚಾರಕ್ಕೆ ನನ್ನ ಒಪ್ಪಿಗೆ ಇದೆ. ನಮ್ಮ ರಾಜ್ಯದಲ್ಲಿಯೂ, ಮೆಡಕಾಸೀರ್, ಕಾಸರಗೋಡ ಮತ್ತು ಹೊಸೂರುಗನ್ನು ಸೇರಿಸಬೇಕಿತ್ತು. ಆದರೆ ಸಂದರ್ಭವು ಆ ರೀತಿಯಾಗಿ ಮಾಡಲು ಕೇಂದ್ರ ಸರ್ಕಾರಕ್ಕೆ ಮತ್ತು ಸಂಸತ್ತಿಗೆ ಅವಕಾಶ ನೀಡಲಿಲ್ಲ. ಆದರೂ, ಮುಂದೆ, ಆ ದಿಶೆಯಲ್ಲಿ ಕೇಂದ್ರ ಸರಕಾರವು, ಆ ಎಲ್ಲ ಬೇಡಿಕೆಗಳನ್ನು ಈಡೇರಿಸಬಹುದೆಂಬ ಆಸೆ ನನಗಿದೆ."

[ಈ ಭಾಗದ ಮಾಹಿತಿಯನ್ನು ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ, ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ ಇವರು ಪ್ರಕಟಿಸಿರುವ 'ಪ್ರತಿಭಾವಂತ ಸಂಸದೀಯ ಪಟುಗಳ ಬದುಕು. ಬರಹ ಮಾಲಿಕೆ ಕಡಿದಾಳ್ ಮಂಜಪ್ಪ' ಕೃತಿಯಿಂದ ಅನುಮತಿ ಮೇರೆಗೆ ಆಯ್ದುಕೊಳ್ಳಲಾಗಿದೆ. ಸಮ್ಮತಿಗಾಗಿ ಸಂಪಾದಕ ಮಂಡಳಿಯ ಕೃತಜ್ಞತೆಗಳು. ಕಡಿದಾಳರು ಕಂದಾಯ ಮಂತ್ರಿಗಳಾಗಿ ಮತ್ತು ಮುಖ್ಯ ಮಂತ್ರಿಗಳಾಗಿ ಮಂಡಿಸಿದ ಇನ್ನಷ್ಟು ಶಾಸನ, ವಿಧೇಯಕ, ಮಸೂದೆ ಕುರಿತ ತಿದ್ದುಪಡಿ ಪ್ರಶ್ನೋತ್ತರ, ಚರ್ಚೆಗಳಿಗಾಗಿ ಆಸಕ್ತರು ಈ ಹೊತ್ತಗೆಯನ್ನು ಗಮನಿಸಬಹುದಾಗಿದೆ. ಸಂ.]

# ಕರ್ನಾಟಕ ರಾಜ್ಯದ ಪ್ರಗತಿಪರ ಸಮಾಜವಾದಿಗಳ ಸಮ್ಮೇಳನ ಕುರಿತು

ರಾಜಕಾರಣದಿಂದ ದೂರವಿರಬೇಕೆಂದು ನನ್ನ ಅಪೇಕ್ಷೆ. ಆದರೆ ಸಾರ್ವಜನಿಕ ಜೀವನದಲ್ಲಿ ಇಂದು ತಲೆದೋರಿರುವ ದುರಾಚಾರ ಅನಾಚಾರ, ಭ್ರಷ್ಟಾಚಾರಗಳನ್ನು ನೋಡುತ್ತಾ, ನಿಸ್ಸಹಾಯಕ ಪ್ರೇಕ್ಷಕನಂತೆ ಸುಮ್ಮನಿರುವುದು ಕಷ್ಟವಾಗಿದೆ. ಈ ಕಾರಣದಿಂದಲೇ ಈ ಸಮ್ಮೇಳನದಲ್ಲಿ ಭಾಗವಹಿಸಲು ನಾನು ಒಪ್ಪಿಕೊಂಡೆ. ಇಂದು ಈ ದೇಶದಲ್ಲಿರುವ ಕೆಲವು ವಿದ್ಯಮಾನಗಳನ್ನು ಗಮನಿಸಿದರೆ ವ್ಯಸನವಾಗುವುದರ ಜೊತೆಗೆ ಒಮ್ಮೊಮ್ಮೆ ಕಳವಳವೂ ಉಂಟಾಗುತ್ತದೆ, ಸ್ವರಾಜ್ಯ ಬಂದು ೨೫ ವರ್ಷಗಳಾದರೂ ನಮ್ಮ ರಾಷ್ಟ್ರ ದಾರಿದ್ರ್ಯದ ನಾಡಾಗಿಯೇ ಉಳಿದಿದೆ. ದೇಶದ ಅಸಂಖ್ಯಾತ ಜನರಿಗೆ ಇಂದೂ ಸಹ ಅರೆಹೊಟ್ಟೆ ಅರೆ ಬಟ್ಟೆಗಳ ಜೀವನವಾಗಿದೆ. ಜೀವನ ಮಟ್ಟದ ದೃಷ್ಟಿಯಿಂದ ಹೋಲಿಸುವುದಾದರೆ ಕೇವಲ ೨೫ ವರ್ಷಗಳ ಹಿಂದೆ, ನಮ್ಮಷ್ಟೇ ಹಿಂದುಳಿದಿದ್ದ ಚೀನಾದೇಶ ನಮಗಿಂತ ಮುಂದುವರಿದಿದೆ. ಹಿಂದುಳಿದ ರಾಷ್ಟ್ರಗಳೆನಿಸಿರುವ ಅರ್ಜೆಂಟೈನಾ ಲೆಬನಾನ್, ಚಿಲಿ, ಅಲ್ಜೀರಿಯಾ, ಮೆಕ್ಸಿಕೊ, ಮಲೇಷ್ಯಾ, ಟರ್ಕಿ, ಇರಾಕ್, ಇರಾನ್, ಸಿರಿಯಾ, ಮೊರಾಕೋ, ಈಜಿಪ್ಟ್, ಘಾನಾ, ಥೈಲ್ಯಾಂಡ್ ಮುಂತಾದ ರಾಷ್ಟ್ರಗಳು ಸುಖ ಸೌಕರ್ಯಗಳ ದೃಷ್ಟಿಯಿಂದ ನಮಗಿಂತ ಮುಂದುವರಿದಿವೆಯೆಂದು ಅರ್ಥಿಕ ತಜ್ಞರ ಅಭಿಪ್ರಾಯ.

ನಮ್ಮ ದೇಶದಲ್ಲಿ ಆರ್ಥಿಕ ಪ್ರಗತಿ ಜರಗಿಲ್ಲವೆಂದು ನಾನು ಹೇಳುವುದಿಲ್ಲ. ಆರ್ಥಿಕ ಪ್ರಗತಿ ಸ್ವಲ್ಪ ಮಟ್ಟಿಗೆ ಜರಗಿದ್ದರೂ, ಸಾಮಾನ್ಯ ಜನರ ಜೀವನ ಮಟ್ಟದಲ್ಲಿ ಹೆಚ್ಚು ಬದಲಾವಣೆ ಆಗಿಲ್ಲ. ಆರ್ಥಿಕ ದೃಷ್ಟಿಯಿಂದ ನಾವು ಗರೀಬರಲ್ಲಿ ಗರೀಬರಾಗಿದ್ದೇವೆ. ಭ್ರಷ್ಟಾಚಾರ ನಮ್ಮ ಸಾರ್ವಜನಿಕ ಜೀವನದ ಹಾಸುಹೊಕ್ಕಾಗಿದೆ. ಆಡಳಿತ ಲಂಚಮಯವಾಗಿದೆ. ಲಂಚ ಶಿಫಾರಸ್ಸುಗಳ ಕೀಲೆಣ್ಣೆ ಇಲ್ಲದೆ ಆಡಳಿತ ಯಂತ್ರ ತಿರುಗುವುದಿಲ್ಲವೋ ಎನ್ನುವಂತಾಗಿದೆ. ಅಶಿಸ್ತು ಅರಾಜಕತೆಯ ಮಟ್ಟಕ್ಕೇರುತ್ತಿದೆ. ಬೆಲೆಗಳು ಗಗನಕ್ಕೇರಿವೆ. ಎಲ್ಲಾ ಅವಶ್ಯಕ ಪದಾರ್ಥಗಳಿಗೂ ಅಭಾವ. ಎಲ್ಲೆಲ್ಲೂ ಅಶಾಂತಿ, ದಿನಬೆಳಗಾದರೆ ವಿದ್ಯಾರ್ಥಿಗಳ ಮುಷ್ಕರ, ಕಾರ್ಮಿಕರ ಮುಷ್ಕರ, ರಾಜ್ಯಗಳ ಗಡಿಗಳಿಗಾಗಿ ಹೊಡೆದಾಟ ಬಡಿದಾಟಗಳು, ದಿನ ಬೆಳಗಾದರೆ ಹಿಂಸಾಕೃತ್ಯಗಳ,

ಗೋಲೀಬಾರ್‌ಗಳ ಸುದ್ದಿ. ಎಲ್ಲಕ್ಕಿಂತ ಮಿಗಿಲಾಗಿ ಸಾರ್ವತ್ರಿಕ ನೈತಿಕ ಅಧಃಪತನ ಆರ್ಥಿಕ ಬಿಕ್ಕಟ್ಟಿಗೆ ಕಾರಣವಾಗಿದೆ.

ಹೀಗಾಗಲು ಕಾರಣವೇನು? ಜನರು ಕಾರಣರೋ ಅಥವಾ ಜನ ನಾಯಕರು ಕಾರಣರೋ? ಅಥವಾ ನಮ್ಮ ಶಕ್ತಿಗೆ ಮೀರಿದ ಸನ್ನಿವೇಶ ಸಂದರ್ಭಗಳು ಕಾರಣವೊ ಎಂಬುದನ್ನು ಇಂತಹ ಸಮ್ಮೇಳನಗಳಲ್ಲಿ ಪರಿಶೀಲಿಸುವುದು ಅಗತ್ಯ. ನನ್ನ ಅಭಿಪ್ರಾಯದಲ್ಲಿ ಜನರೂ, ಸನ್ನಿವೇಶ ಸಂದರ್ಭಗಳೂ ಒಂದು ಪಾಲು ಕಾರಣವಾಗಿದ್ದರೆ, ಜನನಾಯಕರೆನಿಸಿಕೊಂಡವರೂ, ಸರ್ಕಾರಿ ನೌಕರರೂ ಎರಡು ಪಾಲು ಕಾರಣ. ಜನರಲ್ಲಿ ಕೆಲವು ನ್ಯೂನತೆಗಳಿರುವುದು ನಿಜ. ಆದರೆ ಜನನಾಯಕರು ಸರಿಯಾಗಿದ್ದಿದ್ದರೆ, ಆ ನ್ಯೂನತೆಗಳನ್ನು ನಿವಾರಿಸಬಹುದಾಗಿತ್ತು. ಕಷ್ಟಪಡದೇ ಸುಖಪಡಬೇಕೆಂಬ ಪ್ರವೃತ್ತಿ ನಮಗೆ ರಕ್ತಗತವಾಗಿ ಬಂದ ಹುಟ್ಟುಗುಣ; ಅಪ್ರಾಮಾಣಿಕತೆ ನಮಗಂಟಿರುವ ಪ್ರಬಲವಾದ ಸೋಂಕು. ಜನರಲ್ಲಿ ಕೆಲವರಿಗೆ ಮನುಷ್ಯರಾಗಿ ಬಾಳಬೇಕೆಂಬ ಹಂಬಲವೇ ಇಲ್ಲ. ಜನ ನಾಯಕರೆನಿಸಿಕೊಂಡವರಲ್ಲಿ ಬಹುಮಂದಿ ಭ್ರಷ್ಟರು ಅಥವಾ ಸಮಯ ಸಾಧಕರು. ಸರ್ಕಾರಿ ಅಧಿಕಾರಿಗಳಲ್ಲಿ ಬಹುಮಂದಿ ಅಪ್ಪಟ ಲಂಚಕೋರರು.

ನಮ್ಮ ದೇಶದಲ್ಲಿ ಶೇಕಡಾ ೩೦ ರಷ್ಟು ಜನರು ಅಕ್ಷರಸ್ಥರು. ಅವರಲ್ಲಿ ನಿಜವಾಗಿಯೂ ವಿದ್ಯಾವಂತರೆಂದು ಕರೆಯಲು ಅರ್ಹತೆಯುಳ್ಳವರು ಶೇಕಡಾ ಸುಮಾರು ೧೦ ಜನರು. ಇಂಗ್ಲೀಷ್ ಬಲ್ಲವರ ಸಂಖ್ಯೆ ಶೇಕಡಾ ಸುಮಾರು ಮೂರು ಜನರು. ವಿದ್ಯಾವಂತರಲ್ಲಿ ಸ್ವತಂತ್ರವಾಗಿ ವಿಚಾರ ಮಾಡುವ ಶಕ್ತಿ ಉಳ್ಳವರು ನೂರಕ್ಕೆ ಒಬ್ಬರು ಸಿಗುವುದೂ ಕಷ್ಟ. ಮುಗ್ಧರಾದ ಅಸಂಖ್ಯಾತ ಅವಿದ್ಯಾವಂತರಿಗೆ ವಿವಿಧ ಪಂಥಗಳ ರಾಜಕಾರಣಿಗಳು ಹೇಳಿದ್ದೇ ವೇದವಾಕ್ಯವಾಗಿದೆ. ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಕಳೆದ ಸುಮಾರು ೧೦-೧೫ ವರ್ಷಗಳಿಂದ, ಒಂದು ಕಡೆಯಿಂದ ಭ್ರಷ್ಟರೂ ಇನ್ನೊಂದು ಕಡೆಯಿಂದ ದುಷ್ಟರೂ ರಾಜಕಾರಣಕ್ಕೆ ದುಮುಕಿ, ಅಲ್ಲಲ್ಲಿ ಜನನಾಯಕರಾಗಿದ್ದಾರೆ. ಈ ಜನರು ತಮ್ಮ ಸ್ವಾರ್ಥಕ್ಕಾಗಿ ಸಮಾನ್ಯ ಜನರನ್ನು ತಪ್ಪು ದಾರಿಗೆಳೆಯುತ್ತಿದ್ದಾರೆ. ರಾಜಕಾರಣದಲ್ಲಿ ಭ್ರಷ್ಟರ ಮತ್ತು ದುಷ್ಟರ ಸಂಖ್ಯೆ ಹೆಚ್ಚಾಗುತ್ತಾ ಬಂದಿದೆ. ಈ ಕಾರಣದಿಂದಲೇ ಈ ದೇಶದಲ್ಲಿ ಇಷ್ಟೊಂದು ಅಗಾಧ ಪ್ರಮಾಣದಲ್ಲಿ ಭ್ರಷ್ಟಾಚಾರ, ಅಶಿಸ್ತು ಮತ್ತು ವಿದ್ವಂಸಕ ಕೃತ್ಯಗಳು ನಡೆಯುತ್ತಿರುವುದು.

ಬರೀ ಮಿಲಿಟರಿ ಅಥವಾ ಪೋಲೀಸರ ಸಹಾಯದಿಂದಲೇ, ಯಾವ ದೇಶದಲ್ಲಿಯೂ ರಾಜ್ಯಭಾರ ನಡೆಸಲಾಗುವುದಿಲ್ಲ. ಜನನಾಯಕರಾದರು ಸರಿಯಾದ

ರೀತಿಯಲ್ಲಿ ಜನಾಭಿಪ್ರಾಯವನ್ನು ರೂಪಿಸಿ ಅವರನ್ನು ಸನ್ಮಾರ್ಗದಲ್ಲಿ ಕೊಂಡೊಯ್ದರೆ ರಾಜ್ಯಭಾರ ಸುಸೂತ್ರವಾಗಿ ನಡೆಯುತ್ತದೆ. ಹೀಗಾಗಬೇಕಾದಲ್ಲಿ ಜನ ನಾಯಕರಾದವರಿಗೆ ನೈತಿಕ ಶಕ್ತಿ ಇರಬೇಕು: ಪ್ರತಿಭೆ ಇರಬೇಕು, ಗಾಂಧೀಜಿಯವರು ಬದುಕಿದ್ದಾಗ, ಇಡೀ ದೇಶವೇ ಶ್ರದ್ಧಾ ಭಕ್ತಿಯಿಂದ ಅವರ ಮಾತನ್ನು ಆಲಿಸುತ್ತಿತ್ತು. ಪಂಡಿತ್ ಜವಹರಲಾಲ್ ನೆಹರೂರವರು ಮಾತನಾಡಿದರೆ. ಕೋಟ್ಯಾಂತರ ಜನ ಅವರ ಮಾತುಗಳನ್ನು ಪ್ರೀತಿ ಗೌರವಗಳಿಂದ ಕೇಳುತ್ತಿದ್ದರು. ಲಾಲ್ ಬಹದ್ದೂರ್ ಶಾಸ್ತ್ರಿಗಳು ಹೆಚ್ಚು ಪ್ರತಿಭಾವಂತರಲ್ಲದಿದ್ದರೂ ಅತ್ಯಂತ ಪ್ರಾಮಾಣಿಕರಾಗಿದ್ದುದರಿಂದ ಅವರ ಮಾತಿಗೆ ಜನ ಸಾಮಾನ್ಯರ ಮನ್ನಣೆ ಇತ್ತು. ಈಚೆಗೆ ಅಂತಹ ನಾಯಕರ ಸಂಖ್ಯೆ ಅತಿ ವಿರಳವಾಯಿತು. ದುಷ್ಟರೂ ಭ್ರಷ್ಟರೂ ಜನರನ್ನು ಸನ್ಮಾರ್ಗಕ್ಕೆಳೆಯುವ ಬದಲು ದುರ್ಮಾರ್ಗಕ್ಕೆಳೆಯಲಾರಂಭಿಸಿದರು. ಅದರ ಪರಿಣಾಮವಾಗಿ ಸಾರ್ವತ್ರಿಕ ನೈತಿಕ ಅಧಃಪತನ ಪ್ರಾಪ್ತಿಯಾಯಿತು.

ರಾಜಕಾರಣ ಹೊಲಸಾಗುತ್ತಾ ಬಂದ ಹಾಗೆಲ್ಲಾ ಆಡಳಿತ ಹದಗೆಡುತ್ತಾ ಬಂದಿದೆ. ಅಧಿಕಾರ ಸ್ಥಾನದಲ್ಲಿದ್ದ ರಾಜಕಾರಣಿಗಳ ಭ್ರಷ್ಟಾಚಾರದ ಸೋಂಕು ಆಡಳಿತ ಯಂತ್ರಕ್ಕೂ ವಿಶೇಷವಾಗಿ ತಗಲುತ್ತಾ ಬಂದಿದೆ. ಮೊದಲೇ ಲಂಚ ಕೋರರಾಗಿದ್ದ ಅಧಿಕಾರಿಗಳಿಗೆ ರಾಜಕಾರಣಿಗಳ ಭ್ರಷ್ಟಾಚಾರದಿಂದ ಮತ್ತಷ್ಟು ಪ್ರೋತ್ಸಾಹ ಸಿಕ್ಕಿದಂತಾಯಿತು. ಮೊದಲು ಕದ್ದು ಮುಚ್ಚಿ ಲಂಚ ತೆಗೆದು ಕೊಳ್ಳುತ್ತಿದ್ದ ಅಧಿಕಾರಿಗಳು ಬಹಿರಂಗವಾಗಿ ಜನರನ್ನು ಸುಲಿಗೆ ಮಾಡಲಾರಂಭಿಸಿದರು. ಇತ್ತೀಚಿನ ವರ್ಷಗಳಲ್ಲಿ ಕೆಲವು ಕಡೆಗಳಲ್ಲಿ ಮಂತ್ರಿಗಳು ರಾಜಕಾರಣದ ನೆಪದಲ್ಲಿ ತಮ್ಮ ಕೈಕೆಳಗಿನ ಅಧಿಕಾರಿಗಳ ಮೂಲಕ ಕಳ್ಳ ಹಣದ ಶ್ರೀಮಂತರಿಂದ ಭಾರೀ ಪ್ರಮಾಣದಲ್ಲಿ ಹಣವನ್ನು ಶೇಖರಿಸುವ ಪದ್ಧತಿಯನ್ನು ಜಾರಿಗೆ ತಂದರು. ಇದರಿಂದ ಅಧಿಕಾರಿಗಳ ಲಂಚದ ವ್ಯವಹಾರಗಳಿಗೂ ಪರವಾನಗಿ ಸಿಕ್ಕಂತಾಯಿತು. ಕಳ್ಳ ಹಣದವರ ಅಕ್ರಮ ಸಂಪಾದನೆಗೂ ಪರವಾನಗಿ ಸಿಕ್ಕಂತಾಯಿತು. ಜೊತೆಗೆ ಆಡಳಿತದ ಗಂಧವೇ ಗೊತ್ತಿಲ್ಲದ ಆದರ್ಶ ಪ್ರತಿಭೆಗಳಿಲ್ಲದ ಹೆಡ್ ಗುಮಾಸ್ತರಂತಹ ಜನರು ಅಲ್ಲಲ್ಲಿ ಮಂತ್ರಿಗಳಾದರು, ಈ ಹಲವು ಕಾರಣಗಳಿಂದ ಆಡಳಿತ ಸಡಿಲವಾಗಿ ಲಂಚ ಮಯವಾಯಿತು.

ಆಡಳಿತ ನಿರ್ವಹಣೆಯ ಹೊಣೆಯನ್ನು ಹೊತ್ತಿರುವ ಆಡಳಿತಗಾರರು ಸಾರ್ವಜನಿಕರ ಹಣವನ್ನು ಖರ್ಚು ಮಾಡುವಾಗ ವಿಚಕ್ಷಣೆಯಿಂದಲೂ ಮುಂದಾಲೋಚನೆಯಿಂದಲೂ ವರ್ತಿಸಬೇಕು. ಕೆಲವು ವರ್ಷಗಳಿಂದ ನಮ್ಮ ಆಡಳಿತಗಾರರು ವಿವೇಚನೆ ಮುಂದಾಲೋಚನೆಗಳಿಲ್ಲದ ಹಣಕಾಸಿನ ವಹಿವಾಟನ್ನು

ನಡೆಸಿಕೊಂಡು ಬಂದಿರುತ್ತಾರೆ. ವರ್ಷೇ ವರ್ಷೇ ಹೊಸ ಹೊಸ ತೆರಿಗೆಗಳನ್ನು ವಿಧಿಸುತ್ತಾ ಬಂದಿರುತ್ತಾರೆ. ವರ್ಷೇ ವರ್ಷೇ ಹೊಸದಾಗಿ ಸಾಲ ಮಾಡುತ್ತಾ ಬಂದಿರುತ್ತಾರೆ. ಒಂದೆಡೆ ದೇಶಕ್ಕೆ ಸಾಲದ ಹೊರೆ ಹೆಚ್ಚಾಗುತ್ತಾ ಬಂದಿದೆ. ಇನ್ನೊಂದೆಡೆ ಜನರಿಗೆ ತೆರಿಗೆಯ ಹೊರೆ ಹೆಚ್ಚಾಗುತ್ತಾ ಬಂದಿದೆ. ಕೊಟ್ಟ ತೆರಿಗೆ ಸರಿಯಾದ ರೀತಿಯಲ್ಲಿ ವಿನಿಯೋಗವಾಗುವುದಾದರೆ, ತೆರಿಗೆಯನ್ನು ಕೊಡಲು ನಮ್ಮ ಜನ ಹಿಂದೆಗೆಯುವುದಿಲ್ಲ. ಆದರೆ ಇಂದೇನಾಗಿದೆ? ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಾರ್ವಜನಿಕರ ಹಣವನ್ನು ಖರ್ಚುಮಾಡುವಾಗ ವಿಚಕ್ಷಣೆ. ವಿವೇಚನೆಗಳಿಲ್ಲದ ಬೇಜವಾಬ್ದಾರಿಯ ನೀತಿಯನ್ನು ಅನುಸರಿಸುತ್ತಿವೆ. ಸರ್ಕಾರದವರು ಖರ್ಚು ಮಾಡುವ ಹಣದ ಪೈಕಿ ಶೇಕಡಾ ೩೦ರಷ್ಟು ಹಣವನ್ನು ಲಂಚಕೋರ ಅಧಿಕಾರಗಳೂ, ಅಕ್ರಮ ವ್ಯವಹಾರದ ಖಾಸಗೀ ಜನರೂ ಷರೀಕಾಗಿ ನುಂಗಿ ಹಾಕುತ್ತಾರೆ. ಶೇಕಡಾ ೨೦ರಷ್ಟು ನಿಷ್ಪ್ರಯೋಜಕ ದುಂದುವೆಚ್ಚಕ್ಕೆ ವಿನಿಯೋಗವಾಗುತ್ತದೆ. ಅರ್ಧಭಾಗ ಮಾತ್ರ ಸಾರ್ವಜನಿಕರ ಪ್ರಯೋಜನಕ್ಕಾಗಿ ವಿನಿಯೋಗವಾಗುತ್ತದೆ.

ಲಂಚಕೋರ ಅಧಿಕಾರಿಗಳ ಮತ್ತು ಅಕ್ರಮ ವ್ಯವಹಾರಗಳ ಖಾಸಗಿ ಜನರ ಕೈಯಲ್ಲಿರುವ ಕಳ್ಳ ಹಣ ಒಂದು ಕಡೆಯಿಂದ ಹಣದುಬ್ಬರವನ್ನುಂಟು ಮಾಡಿದರೆ ಇನ್ನೊಂದು ಕಡೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವೇಚನೆ ಇಲ್ಲದ ಖೋತಾ ಬಜೆಟ್ ನೀತಿಯಿಂದಲೂ ಮತ್ತು ದುಂದುವೆಚ್ಚಗಳಿಂದಲೂ ಅಗಾಧ ಪ್ರಮಾಣದಲ್ಲಿ ಹಣದುಬ್ಬರವಾಗಿದೆ. ಹಣದುಬ್ಬರದಿಂದ ಮಾರುಕಟ್ಟೆಗಳಲ್ಲಿ ಹಣದ ಚಲಾವಣೆ ಹೆಚ್ಚಾಯಿತು. ಪದಾರ್ಥಗಳ ಚಲಾವಣೆ ಕಡಿಮೆಯಾಯಿತು. ಬೆಲೆಗಳು ಗಗನವನ್ನೇರಿದವು. ಜನಗಳ ಹಾಹಾಕಾರ ಹೆಚ್ಚಾಯಿತು. ಕಳ್ಳಹಣದ ಪ್ರವಾಹವನ್ನು ತಡೆಗಟ್ಟಲು ಸರ್ಕಾರ ಅಸಮರ್ಥವಾಗಿದೆ. ಕೆಲವು ಅಧಿಕಾರಿಗಳೂ, ಕೆಲವು ರಾಜಕಾರಣಿಗಳೂ ಕಳ್ಳ ಹಣದವರ ಕೈಗೊಂಬೆಗಳಾಗಿರುವಾಗ ಕಳ್ಳ ಹಣದ ಪ್ರವಾಹವನ್ನು ಸರ್ಕಾರ ಹೇಗೆ ತಡೆಗಟ್ಟಲು ಸಾಧ್ಯ? ಇತರ ದೇಶಗಳಲ್ಲಿಯೂ ಹಣದುಬ್ಬರವಿದೆಯೆಂಬುದು ನನಗೂ ಗೊತ್ತು. ಆದರೆ ಆ ದೇಶಗಳಲ್ಲಿ ಬೆಲೆಗಳು ಶೇಕಡಾ ೫ ರಿಂದ ೨೫ರ ವರೆಗೆ ಏರಿದ್ದರೆ, ನಮ್ಮಲ್ಲಿ ಶೇಕಡಾ ೫೦ ರಿಂದ ೨೫೦ ರವರೆಗೆ ಏರಿದೆ.

ಸಾವಿರದೊಂಬೈನೂರು ಅರವತ್ತೊಂಬತ್ತರಲ್ಲಿ ಅಖಿಲ ಭಾರತ ಕಾಂಗ್ರೆಸ್ ಒಡೆದು ಹೋದ ಪ್ರಯುಕ್ತ ಈ ದೇಶದಲ್ಲಿ ಎರಡು ಕಾಂಗ್ರೆಸ್ ಪಕ್ಷಗಳಾದುವು. ಅವಿಭಕ್ತ ಕಾಂಗ್ರೆಸ್ಸಿನ ದುರಾಡಳಿತ ಭ್ರಷ್ಟಾಚಾರಗಳಿಂದ ಬೇಸತ್ತು ಹೋಗಿದ ಜನರು ಶ್ರೀಮತಿ ಇಂದಿರಾಗಾಂಧಿಯವರ ನೇತೃತ್ವದಲ್ಲಿ ಆಡಳಿತ ಕಾಂಗ್ರೆಸ್ಸು ಒಂದು ಹೊಸ ಅಧ್ಯಾಯವನ್ನು

ಆರಂಭಿಸಬಹುದೆಂಬ ಆಸೆಯಿಂದ ಆಡಳಿತ ಕಾಂಗ್ರೆಸ್ಸನ್ನು ಪ್ರಚಂಡ ಬಹುಮತದಿಂದ ಅಧಿಕಾರ ಗದ್ದುಗೆಗೇರಿಸಿದರು. ಈ ಸದವಕಾಶವನ್ನು ಆಡಳಿತ ಕಾಂಗ್ರೆಸ್ಸು ಸದುಪಯೋಗ ಮಾಡಿಕೊಂಡಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಶ್ರೀಮತಿ ಗಾಂಧಿಯವರು ಕೇಂದ್ರದಲ್ಲಿ ಒಂದು ಸುಭದ್ರವಾದ ಸರ್ಕಾರವನ್ನು ರಚಿಸಿದ್ದಾರೆ. ಜೊತೆಗೆ ಬಂಗಾಳ ಮತ್ತಿತರ ಕೆಲವು ಕಡೆಗಳಲ್ಲಿ ರಾಜಕಾರಣದ ಹೆಸರಿನಲ್ಲಿ ನಡೆಯುತ್ತಿದ್ದ ಕೊಲೆ ದರೋಡೆಗಳನ್ನು ತಡೆಗಟ್ಟಿದ್ದಾರೆ. ಇದು ಸಮಾಧಾನಕರವಾದ ಸಂಗತಿ. ಎಲ್ಲಕಿಂತಲೂ ಮಿಗಿಲಾಗಿ ಪಾಕೀಸ್ಥಾನದೊಡನೆ ಸಂಭವಿಸಿದ್ದ ಯುದ್ಧದಲ್ಲಿ ಬಹು ಯಶಸ್ವಿಯಾದ ಪಾತ್ರವಹಿಸಿ ಈ ದೇಶಕ್ಕೆ ಕೀರ್ತಿ ಬರುವಂತೆ ಮಾಡಿದ್ದಾರೆ. ಅದಕ್ಕಾಗಿ ಈ ದೇಶ ಅವರಿಗೆ ಚಿರಋಣಿಯಾಗಿದೆ.

ಆದರೆ ಶ್ರೀಮತಿ ಇಂದಿರಾಗಾಂಧಿಯವರು ದಿನೇ ದಿನೇ ಹದಗೆಡುತ್ತಿರುವ ಈ ದೇಶದ ಆಡಳಿತವನ್ನು ಸರಿಪಡಿಸಲು ವಿಫಲಗೊಂಡಿದ್ದಾರೆ. ಜೊತೆಗೆ ಅವರ ಪಕ್ಷವನ್ನು ಶುದ್ಧಿಗೊಳಿಸಲು ಸಹ ಅವರಿಂದ ಸಾಧ್ಯವಾಗಿಲ್ಲ. ಆಡಳಿತದಲ್ಲಿ ಅಸಮರ್ಥತೆ ಮತ್ತು ಲಂಚ ತಾಂಡವವಾಡುತ್ತಿವೆ. ಕೇಂದ್ರ ಸರ್ಕಾರದ ಹಣ ಕಾಸಿನ ವಹಿವಾಟು ರೀತಿಯನ್ನು ಯೋಚಿಸಿದರೆ ಈ ದೇಶವನ್ನು ಎಲ್ಲಿಗೆ ಕೊಂಡೊಯ್ಯುತ್ತಾರೋ ಎಂಬ ಭಯವಾಗುತ್ತದೆ. ಹಣಕಾಸಿನ ಮತ್ತಿತರ ಕೆಲವು ವಿಚಾರಗಳಲ್ಲಿ ಶ್ರೀಮತಿ ಗಾಂಧಿಯವರಿಗೆ ಸಲಹೆ ನೀಡತಕ್ಕ ಜನರು ವಾಸ್ತವಿಕ ಪರಿಸ್ಥಿತಿಯ ಪರಿಜ್ಞಾನವಿಲ್ಲದ ಸೈದ್ಧಾಂತಿಕ ಎಳೆನಿಂಬೆಕಾಯಿಗಳೆಂದು ನನಗನ್ನಿಸುತ್ತದೆ.

ಕಾಂಗ್ರೆಸ್ ಒಡೆಯುವ ಮುನ್ನ ಅವಿಭಕ್ತ ಕಾಂಗ್ರೆಸ್ಸು ಯಾವ ಜಾಡಿನಲ್ಲಿ ಸಾಗುತ್ತಿತ್ತೋ, ಅದೇ ಜಾಡಿನಲ್ಲಿ ಆಡಳಿತ ಕಾಂಗ್ರೆಸ್ಸೂ ಸಹ ಸಾಗುತ್ತಿದೆ. ಅದೇ ರೀತಿಯ ಭ್ರಷ್ಟಾಚಾರ: ಅದೇ ರೀತಿಯ ಆದರ್ಶವಿಲ್ಲದ ರಾಜಕಾರಣ; ಅದೇ ಪಟ್ಟು; ಅದೇ ಧಾಟಿ; ಉದ್ಗಾರ ಮಾತ್ರಬೇರೆ. ಭ್ರಷ್ಟಾಚಾರದಲ್ಲಿ (ಆ) ಕಾಂಗ್ರೆಸ್ (ಓ) ಕಾಂಗ್ರೆಸ್ಸನ್ನು ಮೀರಿಸಿದೆ. ಕಾಂಗ್ರೆಸ್ ಒಡೆಯುವ ಮುನ್ನ ಈಗ (ಓ) ಮತ್ತು (ಆ) ಕಾಂಗ್ರೆಸ್ಸುಗಳಲ್ಲಿರುವ ಕೆಲವು ಧುರೀಣರು ಒಟ್ಟಾಗಿ ಸೇರಿ ಭ್ರಷ್ಟಾಚಾರದ ವೃಕ್ಷವನ್ನು ನೆಟ್ಟು ಬೆಳೆಸಿದ್ದರು. ಈಗ ಆ ವೃಕ್ಷ ಹುಲುಸಾಗಿ ಫಸಲನ್ನು ನೀಡುತ್ತಿದೆ. ಬಡಬಗ್ಗರ ಗರೀಭಿ ಹಟಾವೋ ಆಗುತ್ತಿದೆ. ೧೯೬೭ರ ಮುನ್ನ ಹಿಂದಿನ ಕಾಂಗ್ರೆಸ್ ರಾಜಕಾರಣದ ಮೇಲೆ ಎರಡು ರಾಜಕೀಯ ಕಾದಂಬರಿಗಳನ್ನು ಬರೆದಿದ್ದೆ. ಇಂದಿನ ಕಾಂಗ್ರೆಸ್ ರಾಜಕಾರಣದ ಮೇಲೆ ನಾಲ್ಕು ಕಾದಂಬರಿಗಳನ್ನಾದರೂ ಬರೆಯಬಹುದು. ಜನರು ತಮಗೆ ಯಾತಕ್ಕೋಸ್ಕರ ಅದ್ಭುತ ರೀತಿಯಲ್ಲಿ ಬೆಂಬಲ ನೀಡಿದ್ದರೆಂಬುದನ್ನು ಆಡಳಿತ ಕಾಂಗ್ರೆಸ್ ಧುರೀಣರು

ಮರೆತಿರುವುದು ಶೋಚನೀಯ. ಹಿಂದಿನವರಿಗಿಂತ ಕನಿಷ್ಠ ರೀತಿಯಲ್ಲಿ ರಾಜಕಾರಣ ಮತ್ತು ಆಡಳಿತವನ್ನು ನಿರ್ವಹಿಸಲಿಕ್ಕಾಗಿ ಅವರಿಗೆ ಜನರು ಬೆಂಬಲ ಕೊಟ್ಟಿರಲಿಲ್ಲವೆಂಬುದನ್ನು ಆಡಳಿತ ಕಾಂಗ್ರೆಸ್ಸಿನ ಧುರೀಣರು ಮರೆಯಬಾರದು. ಅಧಿಕಾರ ಸ್ಥಾನದಲ್ಲಿರುವ ರಾಜಕಾರಣಿಗಳಲ್ಲಿ ಶೇಕಡಾ ಸುಮಾರು ಅರವತ್ತರಷ್ಟು ಜನರು ಭ್ರಷ್ಟರು ಅಥವಾ ಸಮಯ ಸಾಧಕರು. ಸರ್ಕಾರಿ ನೌಕರರಲ್ಲಿ ಶೇಕಡಾ ಸುಮಾರು ೭೫ರಷ್ಟು ಜನರು ಲಂಚಕೋರರು. ಇವರುಗಳ ಸಹಾಯದಿಂದ ಯಾವ ನಮೂನೆಯ ಹೊಸ ಸಮಾಜವನ್ನು ಸೃಷ್ಟಿಸಬಹುದೆಂಬುದನ್ನು ಶ್ರೀಮತಿ ಇಂದಿರಾ ಗಾಂಧಿಯವರು ಹೇಳಬೇಕು.

ದುರಾದೃಷ್ಟವಶಾತ್ ಈ ದೇಶದಲ್ಲಿ ಉಳಿದ ರಾಜಕೀಯ ಪಕ್ಷಗಳು ಸಾಕಷ್ಟು ಪ್ರಾಬಲ್ಯವನ್ನು ಗಳಿಸಿಲ್ಲ. ವಾಮಪಂಥದ ಉಗ್ರಗಾಮಿಗಳ ರೀತಿ ನೀತಿಗಳನ್ನು ಜನರೊಪ್ಪುವುದಿಲ್ಲ. ಅತ್ಯಂತ ಬಲಪಂಥದ ಧ್ಯೇಯ ಧೋರಣೆಗಳಲ್ಲಿ ಜನರಿಗೆ ನಂಬಿಕೆಯಿಲ್ಲ. ಕೇರಳ ಮತ್ತು ಬಂಗಾಳಗಳಲ್ಲಿ ಕಮ್ಯೂನಿಸ್ಟ್ ಆಡಳಿತದ ವೈಖರಿಯನ್ನು ನೋಡಿದ್ದಾಯಿತು. ಇತರ ಕೆಲವು ರಾಜ್ಯಗಳಲ್ಲಿ ಸಮಿಶ್ರ ಸರ್ಕಾರಗಳ ಆಡಳಿತದ ವೈಖರಿಯನ್ನು ನೋಡಿದ್ದಾಯಿತು. ಆ ಸರ್ಕಾರಗಳು ಯಾವ ದೃಷ್ಟಿಯಿಂದಲೂ ಕಾಂಗ್ರೆಸ್ ಸರ್ಕಾರಗಳಿಗಿಂತ ಉತ್ತಮವಾಗಿರಲಿಲ್ಲವೆಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಕಮ್ಯುನಿಸ್ಟರು ನಿಷ್ಪಕ್ಷಪಾತವಾದ ಮತ್ತು ಸ್ವಚ್ಛವಾದ ಆಡಳಿತವನ್ನು ನಿರ್ವಹಿಸುವ ಬದಲು ಅರಾಜಕತೆಗೆ ಪ್ರೋತ್ಸಾಹ ನೀಡಿದರು. ಹಿಂದಿದ್ದ ಸಮ್ಮಿಶ್ರ ಸರ್ಕಾರಗಳಾಗಲೀ ಈಗ ಒಂದೆರಡು ರಾಜ್ಯಗಳಲ್ಲಿರುವ ಬೇರೆ ಪಕ್ಷಗಳ ಸರ್ಕಾರಗಳಾಗಲೀ ಯಾವ ರೀತಿಯಲ್ಲಿ ಕಾಂಗ್ರೆಸ್ ಸರ್ಕಾರಕ್ಕಿಂತ ಉತ್ತಮವೆಂಬುದನ್ನು ಈ ಪಕ್ಷಗಳ ಧುರೀಣರೇ ಹೇಳಬೇಕು.

ಉಳಿದ ರಾಜಕೀಯ ಪಕ್ಷಗಳು, ತಮ್ಮ ರಾಜಕೀಯ ಚಟುವಟಿಕೆಗಳಲ್ಲಿ ಮತ್ತು ಚುನಾವಣೆಗಳಲ್ಲಿ ಉಭಯ ಕಾಂಗ್ರೆಸ್ ಪಕ್ಷಗಳ ರೀತಿ ನೀತಿಗಳನ್ನೇ ಅನುಸರಿಸಿಕೊಂಡು ಬಂದಿರುತ್ತವೆ. ಆದ್ದರಿಂದ ಕಾಂಗ್ರೆಸ್ ಪಕ್ಷಗಳಿಗೆ ಅಂಟಿರುವ ಸರ್ವ ರೋಗಗಳೂ ಉಳಿದ ಪಕ್ಷಗಳಿಗೆ ಅಂಟಿರುತ್ತವೆ ಚುನಾವಣೆಗಳಲ್ಲಿ ದುಡ್ಡಿದ್ದ ಕೆಲವು ಉಮೇದುವಾರರು, ಯಾವ ಪಕ್ಷದವರೇ ಆಗಿರಲಿ, ಹಣ ಹೆಂಡಗಳ ವಿನಿಯೋಗದಿಂದ ಓಟನ್ನು ಪಡೆಯಲು ಹಿಂದೆಗೆಯುವುದಿಲ್ಲ. ಹಣ ಹೆಂಡಗಳಿಗಾಗಿ ಓಟನ್ನು ಮಾರಬಾರದೆಂದು ಎಷ್ಟು ಜನ ವಿರೋಧ ಪಕ್ಷಗಳ ನಾಯಕರು ಜನತೆಗೆ ಬುದ್ಧಿವಾದ ಹೇಳಿದ್ದಾರೆ? ಭ್ರಷ್ಟಾಚಾರಗಳ ವಿರುದ್ಧ ಅವರು ಯಾವ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ? ಉಳಿದ ರಾಜಕೀಯ

ಪಕ್ಷಗಳು ಕಾಂಗ್ರೆಸ್ ಪಕ್ಷಕ್ಕಿಂತ ಹೆಚ್ಚು ಪ್ರಾಮಾಣಿಕತೆ ನಿಷ್ಠೆಗಳಿಂದ ಮತ್ತು ಹೆಚ್ಚು ಘನತೆ ಗಾಂಭೀರ್ಯಗಳಿಂದ ವರ್ತಿಸಿದ್ದರೆ ಬಹಳ ಹಿಂದೆಯೇ ಕಾಂಗ್ರೆಸ್ಸಿನ ಹೆಸರು ಅಳಿಸಿ ಹೋಗಿರುತ್ತಿತ್ತು. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯನ್ನು ಅಪ್ರಾಮಾಣಿಕನೆಂದೂ, ಅಸಮರ್ಥನೆಂದೂ ಕರೆಯಬೇಕಾದರೆ, ಆ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗಿಂತ ಹೆಚ್ಚು ಪ್ರಾಮಾಣಿಕನಾಗಿ ಸಮರ್ಥನಾಗಿರಬೇಕು. ಆಗ ಅವನ ಟೀಕೆಗೆ ಬೆಲೆ ಬರುತ್ತದೆ. ಈ ಮಾತು ರಾಜಕೀಯ ಪಕ್ಷಗಳಿಗೂ ಅನ್ವಯಿಸುತ್ತದೆ. ಬರೀ ಬಣಗು ಘೋಷಣೆಗಳಿಂದ ಒಣ ಆರ್ಭಟಗಳಿಂದ, ಸದ್ದು ಗದ್ದಲಗಳಿಂದ ಜನತೆಯನ್ನು ಒಲಿಸಿಕೊಳ್ಳಲಾಗುವುದಿಲ್ಲ ವೆಂಬುದನ್ನು ವಿವಿಧ ರಾಜಕೀಯ ಪಕ್ಷಗಳ ನಾಯಕರು ಮನಗಾಣಬೇಕು.

ಈ ಸಮ್ಮೇಳನವನ್ನು ಪ್ರಗತಿಪರ ಸಮಾಜವಾದಿಗಳ ಸಮ್ಮೇಳನವೆಂದು ಕರೆದಿದ್ದೀರಿ. ನಮ್ಮ ದೇಶದಲ್ಲಿ ಕೆಲವು ಪಕ್ಷಗಳ ವಿನಃ ಉಳಿದ ಎಲ್ಲಾ ಪಕ್ಷಗಳೂ ಸಮಾಜವಾದದ ಹೆಸರಿನಲ್ಲಿ ರಾಜಕಾರಣ ನಡೆಸುತ್ತಿವೆ. ಕಮ್ಯೂನಿಷ್ಟರೂ ಸಮಾಜವಾದದ ಅನುಷ್ಠಾನ ತಮ್ಮ ಗುರಿಯೆಂದು ಸಾರುತ್ತಿದ್ದಾರೆ. ಉಳಿದ ಸಮಾಜವಾದಿ ಪಕ್ಷಗಳೂ ಸಮಾಜವಾದ ತಮ್ಮ ಗುರಿಯೆಂದು ಸಾರುತ್ತಿವೆ. ಆದರೆ ಸಮಾಜವಾದ ಏನೆಂಬುದು ಬಹು ಮಂದಿ ಹೇಳುವವರಿಗೂ ಅರ್ಥವಾಗಿಲ್ಲ ಬಹುಮಂದಿ ಕೇಳುವವರಿಗೂ ಅರ್ಥವಾಗಿಲ್ಲ ಬಡತನದ ಬೇಗೆಯಿಂದ ನೊಂದು ಬಳಲಿರುವ ಬಡಬಗ್ಗರು ಸೋಷಿಯಲಿಸಂ, ಕಮ್ಯೂನಿಸಂ, ಕ್ರಾಂತಿ, ಈ ಪದಗಳು ತಮ್ಮ ಅಭ್ಯುದಯದ ಬೀಜ ಮಂತ್ರಗಳೆಂದು ಭಾವಿಸಿದ್ದಾರೆ. ಈ ಗುಟ್ಟನ್ನರಿತಿರುವ ರಾಜಕಾರಣಿಗಳು ಈ ಶಬ್ದಗಳನ್ನು ತಮ್ಮ ಅಭ್ಯುದಯದ ಬೀಜ ಮಂತ್ರಗಳನ್ನಾಗಿ ಮಾಡಿಕೊಂಡಿರುತ್ತಾರೆ. ಈ ದೇಶದಲ್ಲಿ ನಿಜವಾದ ಸಮಾಜವಾದಿಗಳಿಗಿಂತ ಸಮಯ ಸಾಧಕ, ಸ್ವಾರ್ಥ ಸಾಧಕ ಸಮಾಜವಾದಿಗಳೇ ಹೆಚ್ಚು. ಕೆಲವರು ಸಮಾಜವಾದಿಗಳಿಗೆ ಸಮಾಜವಾದದ ಓ ನಾಮವೇ ಗೊತ್ತಿಲ್ಲ ಕೆಲವರು ಅರ್ಥಂಬರ್ಥ ತಿಳಿದುಕೊಂಡು ಅನರ್ಥದ ಹಾದಿಯನ್ನು ಹಿಡಿದಿರುತ್ತಾರೆ.

ಕೆಲವೆಡೆಗಳಲ್ಲಿ ಕಳ್ಳಕಾಕರೂ, ಪುಂಡು ಪೋಕರಿಗಳೂ, ಲಂಚಕೋರರೂ, ಲಾಭಕೋರರೂ ಉಗ್ರಗಾಮಿಗಳ ಅಥವಾ ತೀವ್ರಗಾಮಿಗಳ ಪೋಷಾಕನ್ನು ಧರಿಸಿರುತ್ತಾರೆ. ಸಮಾಜ ದ್ರೋಹಿಗಳಾದ ದುಷ್ಟರೂ ಭ್ರಷ್ಟರೂ ಎಂದೂ ಸಮಾಜವಾದಿಗಳಾಗಲಾರರು, ಅಂತೆಯೇ ಜಾತಿಮತಗಳಿಗೆ ಅಂಟಿಕೊಂಡಿರುವವರೂ ಸಹ ಸಮಾಜವಾದಿಗಳಾಗಲಾರರು. ನಮ್ಮ ದೇಶದ ಕೆಲವು ಸಮಾಜವಾದಿಗಳಿಗೆ ಷಿವಾಸ್ ರೀಗಲ್, ಮುಂತಾದ ವಿದೇಶಿ ಮದ್ಯವೇ ಬೇಕು. ಪಾಪ ವಿದೇಶಿ ಮಾಲಿಲ್ಲದಿದ್ದರೆ ಸಮಾಜವಾದದ ಸ್ಫೂರ್ತಿ ಹೇಗೆ ಬರುತ್ತದೆ. ಕೆಲವು ಸಮಾಜವಾದಿಗಳು ಒಂದು

ತಿಂಗಳಿಗೆ ಖರ್ಚು ಮಾಡುವ ಹಣ ನನ್ನಂತವರಿಗೆ ಒಂದು ವರ್ಷದ ಜೀವನಕ್ಕೆ ಸಾಕು.ಲಂಗುಲಗಾಮಿಲ್ಲದೆ, ನೀತಿ ನಿಯಮಗಳಿಲ್ಲದೆ ಸ್ವೇಚ್ಛೆಯಾಗಿ ಬಾಳುವುದು ತೀವ್ರಗಾಮಿತನದ ಹೆಗ್ಗುರುತೆಂದು ಕೆಲವರು ಭಾವಿಸಿರುವಂತೆ ತೋರುತ್ತದೆ. ಆದರ್ಶವಿಲ್ಲದ ತೀವ್ರಗಾಮಿತನ ಅರಾಜಕತೆಯಲ್ಲಿ ಕೊನೆಗಾಣುವುದು. ಶಿಸ್ತು, ಸಂಯಮ, ಸರಿಸಮಾನತೆ, ಸತ್ಯ ಸಂಧತೆ, ಮಾನವೀಯತೆ, ದುಡಿಮೆ ಇವುಗಳು ಸಮಾಜವಾದದ ಅಡಿಗಲ್ಲುಗಳು.

ಕೆಲವರು ತೀವ್ರಗಾಮಿಗಳೆಂದು ಹೇಳಿಕೊಳ್ಳುವವರೂ, ಉಗ್ರಗಾಮಿಗಳೆಂದು ಹೇಳಿಕೊಳ್ಳುವವರೂ ರಕ್ತಪಾತವಿಲ್ಲದೆ ಸಮಾಜವಾದದ ಅನುಷ್ಠಾನ ಸಾಧ್ಯವಿಲ್ಲವೆಂದು ವಾದಿಸುತ್ತಾರೆ. ರಕ್ತಪಾತ ಅನಿವಾರ್ಯವೆಂದು ಕಮ್ಯುನಿಸ್ಟ್ ಸಿದ್ಧಾಂತದ ಆಚಾರ್ಯ ಕಾರ್ಲ್‌ಮಾರ್ಕ್ಸ್‌ನೂ ಸಹ ಹೇಳಲಿಲ್ಲ. ಹಿಂಸೆ ಮತ್ತು ರಕ್ತಪಾತಗಳಿಲ್ಲದೆ ಸಮಾಜವಾದವನ್ನು ಅನುಷ್ಠಾನಕ್ಕೆ ತರುವುದು ಸಾಧ್ಯವೆಂದು ಕಾರ್ಲ್‌ಮಾರ್ಕ್ಸ್, ಏಂಜೆಲ್ಸ್ ಮತ್ತು ಲೆನಿನ್ ಹೇಳಿರುವುದನ್ನು ಉಗ್ರಗಾಮಿಗಳೂ ತೀವ್ರಗಾಮಿಗಳೂ ಮರೆಯಬಾರದು. ಕಾರ್ಲ್‌ಮಾರ್ಕ್ಸ್‌ನ ಕಲ್ಪನೆಯ ಸೋಷಿಯಲಿಸಂ ಅಥವಾ ಕಮ್ಯೂನಿಸಂ ಜಗತ್ತಿನ ಯಾವ ರಾಷ್ಟ್ರದಲ್ಲಿಯೂ ಇದುವರೆಗೆ ಆಚರಣೆಗೆ ಬಂದಿಲ್ಲ. ಸರ್ಕಾರದ ಅಂಕೆ ಆತಂಕಗಳಿಲ್ಲದೆ ಆಳುವವರು ಆಳಿಸಿಕೊಳ್ಳುವವರು ಎಂಬ ಭೇದವಿಲ್ಲದೆ, ಎಲ್ಲರೂ ಸರಿಸಮಾನರಾಗಿ ಸೌಹಾರ್ದದಿಂದ ಬಾಳಲನುಕೂಲವಾದ ಸಮಾಜವನ್ನು ಸೃಷ್ಟಿಸುವುದು ಕಾರ್ಲ್ ಮಾರ್ಕ್ಸ್‌ನ ಕನಸಾಗಿತ್ತು. ಆ ಕನಸು ಇನ್ನೂ ಕನಸಾಗಿಯೇ ಉಳಿದಿದೆ.

ನಮ್ಮ ದೇಶದಲ್ಲಿ ಅಂಥ ಅನುಕರಣೆ ಇಲ್ಲದೆ ನಮ್ಮ ಸ್ಥಿತಿಗತಿಗಳಿಗನುಗುಣವಾದ ನಮ್ಮ ಇತಿಹಾಸ ಸಂಸ್ಕೃತಿಗಳಿಗನುಗುಣವಾದ ಸಮಾಜವನ್ನು ನಿರ್ಮಿಸುವುದು ನಮ್ಮ ಗುರಿಯಾಗಿರಬೇಕು. ಇಂತಹ ಹೊಸ ಸಮಾಜದ ಸೃಷ್ಟಿಗೆ ಹೊಸ ದೃಷ್ಟಿ. ಹೊಸ ಕಲ್ಪನೆ ಮತ್ತು ಹೊಸ ಹಾದಿ ಆವಶ್ಯಕ. ಸರಿಸಮಾನತೆಯ ಸತ್ಯಸಂಧತೆಯ ಮಾನವೀಯತೆಯ ಸುಸಂಸ್ಕೃತ ಹೊಸ ಸಮಾಜವನ್ನು ಸೃಷ್ಟಿಸಲು ಈ ದೇಶದ ಯುವ ಜನಾಂಗ ಪಣತೊಡಬೇಕು.

ಈ ಸಮ್ಮೇಳನದ ಉದ್ದೇಶವೇನೆಂಬುದು ನನಗಿನ್ನೂ ಸ್ಪಷ್ಟವಾಗಿಲ್ಲ. ಜನ ಜಾಗ್ರತಿಯನ್ನುಂಟುಮಾಡಿ. ಜನಾಭಿಪ್ರಾಯವನ್ನು ಮೂಡಿಸುವುದು ಸಮ್ಮೇಳನದ ಗುರಿಯಾಗಿದ್ದರೆ ಇಂತಹ ನೂರಾರು ಸಮ್ಮೇಳನಗಳನ್ನು ರಾಜ್ಯದ ವಿವಿಧ ಕಡೆಗಳಲ್ಲಿ

ಏರ್ಪಡಿಸಿ, ಜನತೆಯನ್ನು ಎಚ್ಚರಗೊಳಿಸಬೇಕು. ಹೊಸ ರಾಜಕೀಯ ಪಕ್ಷವೊಂದನ್ನು ಸ್ಥಾಪಿಸುವುದು ನಿಮ್ಮ ಉದ್ದೇಶವಾಗಿದ್ದರೆ ಸಾಧಕ ಬಾಧಕಗಳನ್ನು ನಿಧಾನವಾಗಿ ವಿಮರ್ಶಿಸಿ ಮುಂದೆ ಹೆಜ್ಜೆ ಇಡಬೇಕು. ಈಗಾಗಲೇ ಈ ದೇಶದಲ್ಲಿ ಪ್ರಮುಖ ರಾಜಕೀಯ ಪಕ್ಷಗಳಲ್ಲದೆ ಸುಮಾರು ೬೫ ಸಣ್ಣ ಪುಟ್ಟ ಪಕ್ಷಗಳಿವೆಯೆಂದು ನನ್ನ ನೆನಪು. ಸಮಯ ಸಾಧಕತನ, ಅಧಿಕಾರಲಾಲಸೆ. ಭ್ರಷ್ಟಾಚಾರ, ಗೂಂಡಾಗಿರಿ, ಅಸಭ್ಯ ವರ್ತನೆ ಇವುಗಳು ನಮ್ಮ ದೇಶದ ರಾಜಕಾರಣಕ್ಕೆ ತಗಲಿರುವ ಪ್ರಬಲ ರೋಗಗಳು, ಈ ರೋಗಗಳಿಗೆ ಬಲಿಯಾಗದ ಸ್ವಚ್ಛವಾದ ಹೊಸ ಪಕ್ಷವನ್ನು ರಚಿಸುವುದಾದರೆ ಜನ ಬೆಂಬಲ ದೊರೆಯುತ್ತದೆ.

ಅಂತಹ ಹೊಸ ಪಕ್ಷದ ರಚನೆಗೆ ನಾನು ಮೊದಲೇ ಹೇಳಿರುವಂತೆ ಹೊಸ ದೃಷ್ಟಿ. ಹೊಸ ಕಲ್ಪನೆ, ಹೊಸ ಹಾದಿ ಅವಶ್ಯಕ. ಪ್ರಾಮಾಣಿಕರಾದ ನಿಷ್ಠಾವಂತ ಜನರನ್ನು ಒಂದು ಗೂಡಿಸಬೇಕು. ತಾಲ್ಲೂಕಿಗೆ ಕನಿಷ್ಠ ಪಕ್ಷ ೨೫ ಜನರಂತೆ ಪ್ರಾಮಾಣಿಕ ವ್ಯಕ್ತಿಗಳನ್ನು ಒಟ್ಟುಗೂಡಿಸಿ, ಒಂದು ಹೊಸ ಪಕ್ಷವನ್ನು ಕಟ್ಟಿದರೆ, ರಾಜಕಾರಣದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸಬಹುದು. ಆದರೆ ಪ್ರಾರಂಭದಲ್ಲಿ ಬಹಳ ಕಷ್ಟಪಡಬೇಕು, ಲಂಚಕೋರರನ್ನು, ಲಾಭ ಕೋರರನ್ನು ಪುಂಡು ಪೋಕರಿಗಳನ್ನು ಪಕ್ಷಕ್ಕೆ ಸೇರಿಸಬಾರದು. ನಿರ್ದೇಶಕ ಸ್ಥಾನಗಳಲ್ಲಿರುವವರು ಸಚ್ಚಾರಿತ್ರ್ಯವುಳ್ಳವರಾಗಿದ್ದು ಅಧಿಕಾರವನ್ನು ಬಯಸದವರಾಗಿರಬೇಕು. ದೀನದಲಿತರ ಉದ್ಧಾರ ಅವರ ಗುರಿಯಾಗಿರಬೇಕು. ಸತ್ಯ ನಿಷ್ಠೆಗಳು ಅವರ ದಾರಿ ದೀವಿಗೆಗಳಾಗಿರಬೆಕು.

ಸದ್ಯಕ್ಕೆ ನೀವು ಕೆಲವು ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು. ಲಂಚಕೋರ ರಾಜಕಾರಣಿಗಳ ಮತ್ತು ಲಂಚಕೋರ ಸರ್ಕಾರಿ ಅಧಿಕಾರಿಗಳ ವಿರುದ್ಧ ಮತ್ತೆ ಕಾಳಸಂತೆಯವರ ವಿರುದ್ಧ ಒಂದು ಚಳವಳಿಯನ್ನಾರಂಭಿಸುವುದು ಬಹಳ ಅಗತ್ಯವಿವೆ. ಇದು ಸುಲಭವಾದ ಕೆಲಸವಲ್ಲವೆಂಬುದು ನನಗೆ ಗೊತ್ತು. ಇನ್ನೇನೂ ಮಾಡಲಿಕ್ಕೆ ಸಾಧ್ಯವಾಗದಿದ್ದರೂ. ಈ ಸಮಾಜ ದ್ರೋಹಿಗಳ ವಿರುದ್ಧ ಜನ ಜಾಗ್ರತಿಯನ್ನುಂಟು ಮಾಡಲು ಸಾಧ್ಯವಿದೆ. ಈ ಕೆಲಸವನ್ನು ನೀವು ಮಾಡಬಹುದು. ಮುಂಬರಲಿರುವ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ನಿಮ್ಮ ಧ್ಯೇಯ ಧೋರಣೆಗಳನ್ನು ಒಪ್ಪುವ ನಿಷ್ಠಾವಂತ, ಪ್ರಾಮಾಣಿಕ ಜನರನ್ನು ಚುನಾವಣೆಗೆ ನಿಲ್ಲಿಸಬಹುದು. ಜೊತೆಗೆ ಆ ಚುನಾವಣೆಗಳಲ್ಲಿ ಹಣ ಹೆಂಡಗಳಿಗಾಗಿ ಓಟುಗಳನ್ನು ಮಾರುವುದು ಪಾಪವೆಂದು ಮತದಾರರಿಗೆ ಬುದ್ಧಿವಾದ ಹೇಳಬಹುದು. ಆ ಚುನಾವಣೆಗಳಲ್ಲಿ ಗೆದ್ದು ಬಂದವರು ಹೊಸ ರೀತಿಯ ಸ್ವಚ್ಛ ರಾಜಕಾರಣಕ್ಕೆ ಆಧಾರಸ್ಥಂಭಗಳಾಗುತ್ತಾರೆ.

ಕಳೆದ ೨–೩ ವರ್ಷಗಳಿಂದ ಈ ರಾಜ್ಯದಲ್ಲಿ ಎಡೆಬಿಡದೆ ಜಾತಿಯ ಸಮ್ಮೇಳನಗಳು ನಡೆಯುತ್ತಿದೆ. ಇಂತಹ ಸಮ್ಮೇಳನಗಳಿಂದ ಸಂಬಂಧಪಟ್ಟ ಜಾತಿಯವರಿಗೆ ಹೆಚ್ಚು ಪ್ರಯೋಜನವಾಗದಿದ್ದರೂ ಅವುಗಳಿಂದ ಇಡೀ ಸಮಾಜದ ಮೇಲೆ ಆಗತಕ್ಕ ದುಷ್ಪರಿಣಾಮ ಹೆಚ್ಚು. ಅನಾವಶ್ಯಕ ಸಂಶಯ, ದ್ವೇಷ ಅಸೂಯೆಗಳಿಗೆ ಅವು ಎಡೆಗೊಡುತ್ತವೆ. ಈ ದೇಶದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ತಂತಮ್ಮ ಜಾತಿಗಳಿಗೆ ಅಂಟಿಕೊಂಡಿರುವ ಜನರೇ ಹೆಚ್ಚು. ಇದನ್ನು ಮರೆತು ಜನರು ಒಬ್ಬರ ಮೇಲೊಬ್ಬರು ಜಾತೀಯತೆಯ ಆರೋಪವನ್ನು ಹೊರಿಸುತ್ತಾರೆ. ಅಲ್ಪಸಂಖ್ಯಾತ ಜಾತಿವಾದಿಗಳು ಬಹು ಸಂಖ್ಯಾತ ಜಾತಿ ವಾದಿಗಳಷ್ಟೇ ಅಪಾಯಕರ. ಮುಂದುವರಿದ ಜಾತಿವಾದಿಗಳು ಹಿಂದುಳಿದ ಜಾತಿವಾದಿಗಳಿಗಿಂತ ಅಪಾಯಕರ. ಈ ದೇಶದಲ್ಲಿ ಮುಂದುವರಿದ ಜಾತಿವಾದಿಗಳೇ ಜಾತೀಯತೆಗೆ ಬಹುಮಟ್ಟಿಗೆ ಕಾರಣರು. ಜಾತೀಯತೆಯ ಉಗ್ರತೆಯನ್ನು ಯಾವ ರೀತಿ ತಡೆಗಟ್ಟಬೇಕೆಂಬುದನ್ನು ನಾವು ಯೋಚಿಸುವುದು ಸೂಕ್ತ. ಸಮಾಜವನ್ನು ಸರಿಪಡಿಸದೇ ಸಮಾಜವಾದವನ್ನು ಅನುಷ್ಠಾನಕ್ಕೆ ತರುವುದು ಸಾಧ್ಯವಿಲ್ಲದ ಮಾತು. ಇದನ್ನು ಎಲ್ಲಾ ಸಮಾಜವಾದಿಗಳೂ ಅರಿತರೆ ಮೇಲು, ನಿಮಗೆ ಹೊಸ ದೃಷ್ಟಿ ಮೂಡಲಿ. ಹೊಸ ಹಾದಿ ಹೊಳೆಯಲಿ. ಹೊಸ ಸ್ಫೂರ್ತಿ ಬರಲಿ, ನಿಮ್ಮ ಸಮ್ಮೇಳನ ಯಶಸ್ವಿಯಾಗಲಿ.

ತಾ: ೧.೧.೧೯೭೩

# ನವನಿರ್ಮಾಣ ಕ್ರಾಂತಿಯ ಉದ್ಘಾಟನಾ ಭಾಷಣ

ನಾವು ಗಾಂಧೀಜಿಯವರ ನಾಯಕತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದಾಗ, ಇಡೀ ವಿಶ್ವದ ದೃಷ್ಟಿ ಭಾರತದ ಕಡೆಗೆ ಹರಿದಿತ್ತು. ಸತ್ಯ ಅಹಿಂಸೆಗಳ ಸ್ವಾತಂತ್ರ್ಯ ಹೋರಾಟದಲ್ಲಿ ಭಾರತೀಯರು ಜಯಶೀಲರಾದರೆ, ಭಾರತವು ಜಗತ್ತಿನ ಇತರ ರಾಷ್ಟ್ರಗಳಿಗೆ ಮಾದರಿಯಾಗಿ ಮಾರ್ಗದರ್ಶಿಯಾಗುತ್ತದೆಯೆಂಬ ಆಶೆಯನ್ನು ಅಂದು ಜಗತ್ತಿನ ಬಹು ಜನರು ಇಟ್ಟುಕೊಂಡಿದ್ದರು. ಸತ್ಯ ಅಹಿಂಸೆಗಳ ಹೋರಾಟದಿಂದ ಸ್ವರಾಜ್ಯವನ್ನೇನೋ ಸಾಧಿಸಿದೆವು. ಆದರೆ ಭಾರತ ಇಂದು ಯಾವ ದೃಷ್ಟಿಯಲ್ಲೂ ಇತರ ರಾಷ್ಟ್ರಗಳಿಗೆ ಮಾದರಿಯಾಗಿಯೂ ಇಲ್ಲ. ಮಾರ್ಗದರ್ಶಿಯಾಗಿಯೂ ಇಲ್ಲ. ಮಾರ್ಗದರ್ಶಿಯಾಗುವ ನೈತಿಕ ಹಕ್ಕನ್ನು ನಾವು ಎಂದೋ ಕಳೆದುಕೊಂಡಿದ್ದೇವೆ. ನಮ್ಮ ಭವಿಷ್ಯ ನಮ್ಮ ಶಕ್ತಿ ಸಾಮರ್ಥ್ಯಗಳನ್ನು ಅವಲಂಬಿಸಿದೆ ಎಂಬುದನ್ನು ಮರೆತು ಮಾರ್ಗದರ್ಶನಕ್ಕಾಗಿ ಮತ್ತು ಸಹಾಯಕ್ಕಾಗಿ ಬೆಪ್ಪರಂತೆ ಕೆಲವರು ರಷ್ಯಾದ ಕಡೆಗೆ ನೋಡುತ್ತಿದ್ದರೆ, ಕೆಲವರು ಅಮೇರಿಕಾದ ಕಡೆಗೆ ನೋಡುತ್ತಿದ್ದಾರೆ. ಮತ್ತೆ ಕೆಲವರು ಚೀನಾದ ಕಡೆಗೆ ನೋಡುತ್ತಿದ್ದಾರೆ. ಕೇವಲ ಇಪ್ಪತ್ತೇಳು ವರ್ಷಗಳ ಹಿಂದೆ ಸತ್ಯ ಅಹಿಂಸೆಗಳು ನಮ್ಮ ರಾಜಕಾರಣದ ಬೀಜ ಮಂತ್ರಗಳಾಗಿದ್ದವು. ಇಂದು ರಾಜಕಾರಣದ ಹೆಸರಿನಲ್ಲಿ ಮಾಡಬಾರದ ಹಿಂಸಾಚಾರ, ದುರಾಚಾರ, ಅನಾಚಾರ, ಭ್ರಷ್ಟಾಚಾರಗಳು ನಡೆಯುತ್ತಿವೆ. ರಾಜಕಾರಣ ಅಸಹ್ಯಕರ ರೀತಿಯಲ್ಲಿ ಹೊಲಸಾಗಿದೆ. ಆಡಳಿತ ಲಂಚಮಯವಾಗಿದೆ.

ನಾವು ಸ್ವರಾಜ್ಯಕ್ಕಾಗಿ ಹೋರಾಟ ನಡೆಸುತ್ತಿದ್ದಾಗ, ಬ್ರಿಟಿಷರು ತೊಲಗಿದ ಕೆಲವೇ ವರ್ಷಗಳಲ್ಲಿ ನಮ್ಮ ರಾಷ್ಟ್ರ ಪ್ರಬಲ ರಾಷ್ಟ್ರವಾಗಿ ಸುಖ ಸಮೃದ್ಧಿಯಿಂದ ನಲಿಯುತ್ತದೆ ಎಂಬ ಕನಸನ್ನು ಕಾಣುತ್ತಿದ್ದೆವು. ಆದರೆ ಆ ಕನಸು ಇನ್ನೂ ಕನಸಾಗಿಯೇ ಉಳಿದಿದೆ. ಸ್ವರಾಜ್ಯ ಬಂದನಂತರ ಆರ್ಥಿಕ ಪ್ರಗತಿ ಸ್ವಲ್ಪ ಮಟ್ಟಿಗೆ ಜರಗಿದೆ. ತಾಂತ್ರಿಕ, ವೈಜ್ಞಾನಿಕ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಮುನ್ನಡೆಯುತ್ತಿದ್ದೇವೆ. ಆದರೂ ದೇಶದ ಮುಕ್ಕಾಲುವಾಸಿ ಜನರು ಇನ್ನೂ ನಿರಕ್ಷರ ಕುಕ್ಷಿಗಳಾಗಿ ಅರೆಬಟ್ಟೆಯ, ಅರೆ ಹೊಟ್ಟೆಯ ಜೀವನವನ್ನು ಸಾಗಿಸುತ್ತಿದ್ದಾರೆ. ಬಡವರು ಬಡವರಾಗುತ್ತಲೇ ಇದ್ದಾರೆ; ಶ್ರೀಮಂತರು ಶ್ರೀಮಂತರಾಗುತ್ತಲೇ ಇದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಆವಶ್ಯಕ ಪದಾರ್ಥಗಳ ಅಭಾವ ದಿನೇ ದಿನೇ ಹೆಚ್ಚಾಗುತ್ತಾ ಬೆಲೆಗಳು ಗಗನಕ್ಕೇರುತ್ತಾ ಇವೆ. ಹೀಗಾಗಲೂ ಕಾರಣವೇನೆಂಬುದನ್ನು

ಕಂಡು ಹಿಡಿಯಲು ಜನರೂ, ಜನನಾಯಕರೂ, ಆಡಳಿತ ವರ್ಗದವರೂ ಆತ್ಮ ಶೋಧನೆ ಮಾಡಿಕೊಳ್ಳುವುದು ಅವಶ್ಯಕವಾಗಿದೆ. ನಮ್ಮಲ್ಲಿ ಏನೋ ನ್ಯೂನತೆ ಇರಬೇಕು. ಇಲ್ಲವಾದರೆ ಹೀಗಾಗುತ್ತಿರಲಿಲ್ಲ. ನಾವು ಅಪ್ಪಟ ಅಪ್ರಮಾಣಿಕರು; ಶುದ್ಧ ಸೋಮಾರಿಗಳು; ನಮ್ಮ ಆದರ್ಶಕ್ಕೂ ಆಚರಣೆಗೂ ಅಜಗಜಾಂತರ ವ್ಯತ್ಯಾಸ. ನಮ್ಮ ದೇಶದ ಬಹುಮಂದಿ ರಾಜಕಾರಣಿಗಳಿಗೆ ಜನಸೇವಾ ಪ್ರವೃತ್ತಿಗಿಂತ ಸ್ವಾರ್ಥ ಸಾಧನಾ ಪ್ರವೃತ್ತಿಯೇ ಹೆಚ್ಚು. ನಮ್ಮ ದೇಶದ ಸರ್ಕಾರಿ ನೌಕರರಲ್ಲಿ ಬಹು ಮಂದಿ ಜನಸೇವೆಗಿಂತಲೂ ಜನ ಶೋಷಣೆಯಲ್ಲೇ ಮಗ್ನರಾಗಿದ್ದಾರೆ

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮತ್ತು ಆನಂತರ ಕೆಲ ಕಾಲ, ಧೀರೋದ್ಧಾತರೂ ಸತ್ಯಸಂಧರೂ, ತ್ಯಾಗ ಶೀಲರೂ ಈ ದೇಶದ ಆಗು ಹೋಗುಗಳನ್ನು ನಿರ್ಧರಿಸುತ್ತಿದ್ದರು. ಕಳೆದ ಕೆಲವು ವರ್ಷಗಳಿಂದೀಚೆಗೆ, ಅಲ್ಲಲ್ಲಿ ಕೆಲವರನ್ನು ಬಿಟ್ಟರೆ, ರಾಜಕಾರಣ ಬಹುಮಟ್ಟಿಗೆ ಕುತಂತ್ರಿಗಳ, ಸಮಯಸಾಧಕರ ಸ್ವಾರ್ಥ ಸಾಧಕರ, ಭ್ರಷ್ಟರ ಮತ್ತು ದುಷ್ಟರ ಕೈ ವಶವಾಗಿದೆ. ರಾಜಕಾರಣದಲ್ಲಿ ಘನತೆ ಗಾಂಭೀರ್ಯಗಳು ಮಾಯವಾಗಿವೆ. ಕೆಲವರು ಶಾಸನ ಸಭೆಗಳಲ್ಲಿ ಅಹಿರಾವಣ ಮಹಿರಾವಣರಂತೆ ಹೊಡೆದಾಡುವುದಕ್ಕೂ ಹೇಸುವುದಿಲ್ಲ; ಮೆಟ್ಟು ಪಾಪಾಸುಗಳನ್ನು ತೂರಾಡುವುದಕ್ಕೂ ಹಿಂಜರಿಯುವುದಿಲ್ಲ, 'ಯಥಾ ರಾಜ ತಥಾ ಪ್ರಜಾ' ಎನ್ನುವಂತೆ ಜನ ನಾಯಕರೆನಿಸಿಕೊಂಡವರ ರೀತಿ ನೀತಿಗಳನ್ನು ಜನಸಾಮಾನ್ಯರು ಸಾಮಾನ್ಯವಾಗಿ ಅನುಸರಿಸುತ್ತಾರೆ. ಈ ಕಾರಣದಿಂದ ಈ ದೇಶದಲ್ಲಿ ಸಾರ್ವತ್ರಿಕ ನೈತಿಕ ಅಧಃಪತನ ಪ್ರಾಪ್ತಿಯಾಗಿದೆ. ಇತ್ತೀಚಿನ ವರ್ಷಗಳಲ್ಲಿ ರಾಜಕಾರಣ ಕೆಲವರ ಹೊಟ್ಟೆಪಾಡಿಗೆ ಉದ್ಯಮವಾಗಿದೆ. ಅಧಿಕರ ಮತ್ತು ಹಣ ಸಂಪಾದನೆ ಬಹುಮಂದಿ ರಾಜಕಾರಣಿಗಳ ಏಕೈಕ ಗುರಿಯಾಗಿರುತ್ತದೆ. ಚುನಾವಣೆಗಳಲ್ಲಿ ಬಡಬಗ್ಗರ ಓಟುಗಳನ್ನು ಕೊಳ್ಳುವುದೂ, ಈ ಜನರ ಗುರಿಯಾಗಿದೆ. ಇಂದು ಈ ದೇಶದಲ್ಲಿ ರಾಜಕಾರಣ, ಚುನಾವಣೆ, ಆಡಳಿತ ಇವುಗಳ ಹೆಸರಿನಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ನೋಡಿದರೆ ಪ್ರಜಾಪ್ರಭುತ್ವದ ಹೆಸರಿನಲ್ಲಿ ಲಂಚದ ಪ್ರಭುತ್ವ ಅಸ್ತಿತ್ವಕ್ಕೆ ಬಂದಂತೆ ತೋರುತ್ತದೆ.

ಸಾವಿರದ ಒಂಬೈನೂರ ಅರವತ್ತೊಂಬತ್ತರಲ್ಲಿ, ಅಖಿಲ ಭಾರತ ಕಾಂಗ್ರೆಸ್ ಇಬ್ಭಾಗವಾದಾಗ, ಅವಿಭಾಜ್ಯ ಕಾಂಗ್ರೆಸ್ಸಿನ ದುರಾಡಳಿತ, ಭ್ರಷ್ಟಾಚಾರಗಳಿಂದ ಬೇಸತ್ತು ಹೋಗಿದ್ದ ಈ ದೇಶದ ಜನರು, ಶ್ರೀಮತಿ ಇಂದಿರಾ ಗಾಂಧಿಯವರ ನಾಯಕತ್ವದಲ್ಲಿ ಆಡಳಿತ ಕಾಂಗ್ರೆಸ್ ಒಂದು ಹೊಸ ಅಧ್ಯಾಯವನ್ನು ಆರಂಭಿಸಬಹುದೆಂಬ ಮಹದಾಸೆಯಿಂದ, ಆಡಳಿತ ಕಾಂಗ್ರೆಸ್ಸನ್ನು ಅಧಿಕಾರ ಗದ್ದುಗೆಗೆ ಏರಿಸಿದರು. ಆದರೆ

ಆಡಳಿತ ಕಾಂಗ್ರೆಸ್ಸಿನವರು ಲಂಚದ ಹೊಸ ಅಧ್ಯಾಯವನ್ನು ಆರಂಭಿಸಿದರು. ಆಡಳಿತ ಕಾಂಗ್ರೆಸ್ ಅವಿಭಾಜ್ಯ ಕಾಂಗ್ರೆಸ್ಸನ್ನು ಭ್ರಷ್ಟಾಚಾರದಲ್ಲಿ ಹತ್ತು ಪಾಲು ಮೀರಿಸಿದೆ. ಶ್ರೀಮತಿ ಇಂದಿರಾ ಗಾಂಧಿಯವರು ಕೇಂದ್ರದಲ್ಲಿ ಸುಭದ್ರ ಸರ್ಕಾರವನ್ನೇನೋ ರಚಿಸಿದ್ದಾರೆ. ಕೆಲವು ವಿಚಾರಗಳಲ್ಲಿ ಅವರ ಬಗ್ಗೆ ನನ್ನ ಮೆಚ್ಚುಗೆ ಇದೆ. ಆದರೆ ಉಳಿದ ವಿಚಾರಗಳಲ್ಲಿ ಅವರು ಜನರ ನಿರೀಕ್ಷೆಯಂತೆ ವರ್ತಿಸಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಸ್ವರಾಜ್ಯ ಬಂದ ನಂತರ ಯಾವ ಕಾಲದಲ್ಲೂ ಈ ದೇಶದ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆ ಇಷ್ಟೊಂದು ಹದಗೆಟ್ಟಿರಲಿಲ್ಲ.

ಇಂದು ಈ ದೇಶದ ಆಡಳಿತವನ್ನು ವ್ಯಾಪಿಸಿರುವ ಭ್ರಷ್ಟಾಚಾರ ಕೇವಲ ನೈತಿಕ ಪ್ರಶ್ನೆಯಾಗಿಲ್ಲ; ಅದು ಅಗಾಧವಾದ ಆರ್ಥಿಕ ಸಮಸ್ಯೆಯಾಗಿ ಪರಿಣಮಿಸಿದೆ. ಇಂದಿನ ಆರ್ಥಿಕ ದುಸ್ಥಿತಿ, ಅದರ ಪರಿಣಾಮವಾಗಿ ಉಂಟಾಗಿರುವ ಆವಶ್ಯಕ ಪದಾರ್ಥಗಳ ಅಭಾವ. ಬೆಲೆಗಳ ಏರುವಿಕೆ, ಇವುಗಳಿಗೆ ಸರ್ಕಾರದ ದುರಾಡಳಿತ ಮತ್ತು ಭ್ರಷ್ಟಚಾರಗಳೇ ಬಹುಮಟ್ಟಿಗೆ ಕಾರಣವೆಂದರೆ ತಪ್ಪಾಗಲಾರದು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಖರ್ಚು ಮಾಡುತ್ತಿರುವ ಸಾರ್ವಜನಿಕ ಹಣದಲ್ಲಿ ಶೇಕಡ ಸುಮಾರು ಮೂವತ್ತರಷ್ಟು ಹಣವನ್ನು ಲಂಚಕೋರ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ, ಅಕ್ರಮ ವ್ಯವಹಾರದ ಖಾಸಗಿ ಜನರೂ ಷರೀಕಾಗಿ ನುಂಗಿ ಹಾಕುತ್ತಾರೆ. ಶೇಕಡ ಇಪ್ಪತ್ತರಷ್ಟು ಹಣ ನಿಷ್ಪ್ರಯೋಜಕ ದುಂದು ವೆಚ್ಚಕ್ಕೆ ವಿನಿಯೋಗವಾಗುತ್ತದೆ.. ಈ ರೀತಿ ದುರ್ವಿನಿಯೋಗವಾಗುವ ಹಣವೇ ಹಣದುಬ್ಬರಕ್ಕೆ ಮೂಲ ಕಾರಣವಾಗಿದೆ. ದೊಡ್ಡ ದೊಡ್ಡ ಕೈಗಾರಿಕೆಗಳೂ, ಸಾರಿಗೆ ವ್ಯವಸ್ಥೆಗಳೂ ಇತರ ದೊಡ್ಡ ಉದ್ಯಮಗಳೂ ರಾಷ್ಟ್ರೀಕರಣವಾಗಿದ್ದೇನೋ ನಿಜ. ಆದರೆ ಕೆಲವು ರಾಷ್ಟ್ರೀಕೃತ ಉದ್ಯಮಗಳಿಂದ ಜನತೆಗೆ ಲಭಿಸಬೇಕಾಗಿದ್ದ ಲಾಭ. ಲಂಚಕೋರ ಅಧಿಕಾರಿಗಳ ಕಿಸೆಗೆ ಹೋಗುತ್ತಿದೆ. ಇಂದು ಈ ದೇಶದಲ್ಲಿ ಉದ್ಭವಿಸಿರುವ ಆವಶ್ಯಕ ಪದಾರ್ಥಗಳ ಅಭಾವ ಶೇಕಡ ಐವತ್ತರಷ್ಟರ ಮಟ್ಟಿಗೆ. ಆಡಳಿತದ ಅಸಮರ್ಥತೆಯಿಂದ ಮತ್ತು ಅಕ್ರಮ ವ್ಯವಹಾರಗಳಲ್ಲಿ ತೊಡಗಿರುವ ವಣಿಕ ವರ್ಗದ ಜನರಿಂದ ಉಂಟಾಗಿರುವ ಕೃತಕ ಅಭಾವವಾಗಿದೆ. ಹಣವಿದ್ದರೆ ಕೆಲವು ಆವಶ್ಯಕ ಪದಾರ್ಥಗಳು ಕಾಳಸಂತೆಯಲ್ಲಿ ಎಷ್ಟಾದರೂ ದೊರಕುತ್ತವೆ. ಹಣವಿದ್ದವರಿಗೆ ಅಭಾವವಿಲ್ಲ. ಹಣವಿಲ್ಲದವರಿಗೆ ಮಾತ್ರ ಅಭಾವ.

ಆಡಳಿತ, ದೇಶದ ಪ್ರಗತಿಯ ಮತ್ತು ಜನರ ಅಭ್ಯುದಯದ ತಳಪಾಯವಿದ್ದಂತೆ, ನಾನಾ ಕಾರಣಗಳಿಂದ ಕಳೆದ ಸುಮಾರು ಒಂದು ದಶಕದಿಂದ ಈ ತಳಪಾಯ ದಿನೇ ದಿನೇ ಸಡಿಲವಾಗುತ್ತಿದೆ. ಆಡಳಿತ ನಿರ್ವಹಣೆಯ ಹೊಣೆಯನ್ನು ಹೊತ್ತಿರುವ

ಆಡಳಿತ ಪಕ್ಷದ ಮುಖಂಡರೂ, ಅಧಿಕಾರ ವರ್ಗದವರೂ ಆಡಳಿತವನ್ನು ದುರಸ್ತು ಮಾಡಲು ಅಸಮರ್ಥರಾಗಿದ್ದಾರೆ. ಸರ್ಕಾರದವರು ತಮ್ಮ ಹಣಕಾಸಿನ ರೀತಿ ನೀತಿಗಳನ್ನು ಸರಿಪಡಿಸಿಕೊಂಡು ದುರ್ವ್ಯಯವನ್ನೂ, ಲಂಚಗುಳಿತನವನ್ನು ಕಡಿಮೆ ಮಾಡಿ, ಆಡಳಿತವನ್ನು ಸ್ವಚ್ಛಗೊಳಿಸಿದರೆ, ಆವಶ್ಯಕ ಪದಾರ್ಥಗಳ ಅಭಾವವೂ ಕಡಿಮೆಯಾಗುತ್ತದೆ. ಅವುಗಳ ಬೆಲೆಗಳೂ ಕಡಿಮೆಯಾಗುತ್ತದೆ; ಅವುಗಳ ಉತ್ಪಾದನೆಯೂ ಹೆಚ್ಚಾಗುತ್ತದೆ. ಆದರೆ ಆಡಳಿತವನ್ನು ದುರಸ್ತು ಮಾಡುವ ಹಂಬಲ ಆಡಳಿತ ಪಕ್ಷದ ಮುಖಂಡರಿಗೂ ಇಲ್ಲ; ಉನ್ನತ ಅಧಿಕಾರಿಗಳಿಗೂ ಇದ್ದಂತೆ ತೋರುವುದಿಲ್ಲ. ಕಳೆದ ಕೆಲವು ವರ್ಷಗಳಿಂದೀಚೆಗೆ ಕೇಂದ್ರ ಸರ್ಕಾರದ ಕೆಲವು ಮಂತ್ರಿಗಳೂ, ರಾಜ್ಯ ಸರ್ಕಾರಗಳ ಕೆಲವು ಮಂತ್ರಿಗಳೂ, ಮುಖ್ಯ ಮಂತ್ರಿಗಳೂ ಪಕ್ಷದ ನಿಧಿಯ ನೆಪದಲ್ಲಿ ತಮ್ಮ ಬಳಿಗೆ ಕಂಟ್ರಾಕ್ಟ್, ಪರ್ಮಿಟ್ ಲೈಸೆನ್ಸ್, ಮುಂತಾದ ಸವಲತ್ತುಗಳಿಗಾಗಿ ಬರುವ ಜನರಿಂದ ಯಥೇಚ್ಛವಾಗಿ ಹಣವನ್ನು ಸಂಗ್ರಹಿಸುತ್ತಾರೆಂಬ ಕೂಗೂ ಬಹಳವಾಗಿ ಕೇಳಿ ಬರುತ್ತಾ ಇದೆ. ಕೆಲವು ಕಡೆ ಮಂತ್ರಿಗಳು ತಮ್ಮ ಕೈಕೆಳಗಿನ ಅಧಿಕಾರಿಗಳನ್ನು ಉಪಯೋಗಿಸಿಕೊಂಡು ಅವರ ಮುಖಾಂತರ ರಾಜಕಾರಣದ ನೆಪದಲ್ಲಿ ಹಣವನ್ನು ಸಂಗ್ರಹಿಸುತ್ತಾರೆಂಬ ಕೂಗು ಕೇಳಿ ಬರುತ್ತಾ ಇದೆ. ಅಲ್ಲದೆ ಚುನಾವಣೆಗಳ ಕಾಲದಲ್ಲಿ ದೊಡ್ಡ ಕೈಗಾರಿಕಾ ಮತ್ತು ವಾಣಿಜ್ಯ ಸಂಸ್ಥೆಗಳ ಮಾಲೀಕರಿಂದ ಚುನಾವಣಾ ವೆಚ್ಚಕ್ಕಾಗಿ ಯಥೇಚ್ಛವಾಗಿ ಹಣವನ್ನು ತೆಗೆದುಕೊಂಡು, ಅದರ ಪ್ರತಿಫಲಕ್ಕಾಗಿ ಆ ಸಂಸ್ಥೆಯವರು ತಯಾರು ಮಾಡತಕ್ಕ ಮಾಲುಗಳ ಬೆಲೆಗಳನ್ನು ಹೆಚ್ಚಿಸಲು ಅವಕಾಶ ಕಲ್ಪಿಸಿಕೊಡುತ್ತಾರೆಂಬ ಕೂಗೂ ಕೇಳಿ ಬರುತ್ತಾ ಇದೆ. ನಾವು ಕೇಳುವ ವದಂತಿಗಳೆಲ್ಲಾ ನಿಜವಾಗಿದ್ದಲ್ಲಿ ಇದಕ್ಕಿಂತ ಹೇಯವಾದ ಕೆಲಸ ಮತ್ತೊಂದಿಲ್ಲ. ಇಂತಹ ಭಂಡತನದ ರಾಜಕಾರಣ ಮಾಡುವುದಕ್ಕಿಂತ, ರಾಜಕಾರಣವನ್ನು ಬಿಡುವುದು ಮೇಲಲ್ಲವೇ? ನಮ್ಮ ರಾಜಕಾರಣಿಗಳು ಬಂಡವಾಳಗಾರರ ಕೃಪಾಶ್ರಯದಲ್ಲಿ ಸಮಾಜವಾದವನ್ನು ಅನುಷ್ಠಾನಕ್ಕೆ ತರಲು ಹೊರಟಿದ್ದಾರೆ !

ಆಳುವ ಪಕ್ಷದ ಕೆಲವು ಧುರೀಣರ ವರ್ತನೆಯನ್ನು ನೋಡಿದರೆ ವಾಕರಿಕೆ ಬರುವಂತಾಗುತ್ತದೆ. ಕಾಸಿಲ್ಲದ ದಾಸಯ್ಯಗಳಂತಿದ್ದ ಕೆಲವರು ಆಡಳಿತ ಕಾಂಗ್ರೆಸ್ಸಿಗೆ ಸೇರಿ, ಸೋಷಿಯಲಿಷ್ಟರಾದ ಮೇಲೆ ಲಕ್ಷಾಧಿಪತಿಗಳಾಗಿದ್ದಾರೆ. ಕ್ರಿಮಿನಲ್ ಖೈದಿಗಳಾಗಿ ಸದಾ ಸೆರೆಮನೆಯಲ್ಲಿರಬೇಕಾಗಿದ್ದ ಕೆಲವರು ದೊಡ್ಡ ಮುಖಂಡರಾಗಿದ್ದಾರೆ. ಕೆಲವರು ಸಮಾಜವಾದದ ಉದ್ಗಾರವನ್ನು ಹೇಳುತ್ತಾ, ದಿನಕ್ಕೆ ೫೦೦ ರೂಪಾಯಿಗಳಿಂದ ೧೦೦೦ ರೂಪಾಯಿಗಳವರೆಗೆ ಕುಡಿತಕ್ಕೆ ಖರ್ಚುಮಾಡುತ್ತಾರಂತೆ. ಕೆಲವರು ಕಮಿಷನ್

ಏಜೆಂಟರುಗಳಂತೆ ಒಂದು ಕಡೆ ಅಧಿಕಾರಿಗಳಿಂದಲೂ, ಇನ್ನೊಂದು ಕಡೆ ಸಾರ್ವಜನಿಕರಿಂದಲೂ ಕಪ್ಪವನ್ನು ಕೀಳುತ್ತಾರಂತೆ. ಅಧಿಕಾರಿಗಳ ನೇಮಕ, ವರ್ಗಾವರ್ಗಿ ಬಡ್ತಿ ಇವುಗಳಿಂದ ಸಹ ಲಂಚವನ್ನು ಪಡೆಯುತ್ತಿದ್ದಾರಂತೆ. ಕೆಲವರು ತಮ್ಮ ರಾಜಕೀಯ ಸ್ವಾರ್ಥಕ್ಕಾಗಿ ಒಂದು ಜಾತಿಯವರನ್ನು ಇನ್ನೊಂದು ಜಾತಿಯವರ ಮೇಲೆ ಎತ್ತಿಕಟ್ಟಿ, ಜಾತೀಯತೆಯ ವಿಷ ಜ್ವಾಲೆಗೆ ಪುಷ್ಟಿಯನ್ನು ನೀಡುತ್ತಿದ್ದಾರೆ. ಕೆಲವರು ಸಮಾಜದಲ್ಲಿ ಶಾಂತಿ ಸೌಹಾರ್ದಗಳನ್ನು ಮೂಡಿಸುವ ಬದಲು ವ್ಯಾಜ್ಯಗಳನ್ನು ಹಚ್ಚಿಟ್ಟು, ತಮಗಾಗದವರಿಗೆ ಇಲ್ಲಸಲ್ಲದ ಕಿರುಕುಳ ಕೊಡುತ್ತಾರೆ. ಈ ಕೆಲವು ಆಪಾದನೆಗಳಿಂದ ಕೆಲವರು ಮಂತ್ರಿಗಳೂ, ಕೆಲವರು ಶಾಸಕರ ಹೊರತಾಗಿಲ್ಲವೆಂದು ಹೇಳುತ್ತಾರೆ.

ಅಕ್ರಮವಾಗಿ ಮೇಯಲು ಅನುಕೂಲವಾಗಿರುವ ಹುಲುಸಾದ ಪ್ರದೇಶಗಳಿಗೆ ವರ್ಗ ಮಾಡಿಸಿಕೊಳ್ಳಲು ತವಕ ಪಡುತ್ತಿರುವ ಲಂಚಕೋರ ಅಧಿಕಾರಿಗಳು ತಮ್ಮ ವರ್ಗಕ್ಕೆ ಒಂದು ಸಾವಿರದಿಂದ ಐದು ಸಾವಿರ ರೂಪಾಯಿಗಳವರೆಗೆ ಲಂಚ ಕೊಡುತ್ತಾರೆಂಬ ವದಂತಿಯನ್ನು ಕೇಳಿದ್ದೇನೆ. ಇನ್ನು ಕೆಲವು ಸಂದರ್ಭಗಳಲ್ಲಿ ಕೆಲವರು ಅಧಿಕಾರಿಗಳೂ. ಖಾಸಗಿ ಜನರೂ ಉನ್ನತ ಸ್ಥಾನದಲ್ಲಿರುವವರಿಗೆ ಭಾರಿ ಮೊತ್ತವನ್ನು ಕೊಟ್ಟ ಉದಾಹರಣೆಗಳೂ ಇವೆಯೆಂದು ಜನರು ಹಾದಿಬೀದಿಗಳಲ್ಲಿ ಮಾತನಾಡುತ್ತಿದ್ದಾರೆ. ಅಧಿಕಾರದಲ್ಲಿದ್ದವರ ಮೇಲೆ ಕೆಲವರು ಸುಳ್ಳು ಕಥೆಗಳನ್ನು ನೇಯುವುದೂ ಉಂಟು; ಉತ್ಪ್ರೇಕ್ಷೆ ಮಾಡುವುದೂ ಉಂಟು. ಆದರೆ ಜನಜನಿತವಾಗಿರುವ ಕೆಲವು ಸುದ್ದಿಗಳನ್ನು ನಿರಾಕರಿಸುವುದು ಕಷ್ಟವಾಗುತ್ತದೆ. ನಾನು ಕೇಳುವುದೆಲ್ಲವೂ ನಿಜವಾಗಿದ್ದರೆ. ಈ ದೇಶದಲ್ಲಿ ಪ್ರಜಾಪ್ರಭುತ್ವ ಬಹಳ ಕಾಲ ಉಳಿಯುವುದೆಂದು ನನಗನಿಸುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಪ್ರಮಾಣಿಕರಾದ ಅಧಿಕಾರಿಗಳಾಗಲೀ, ಖಾಸಗಿ ಜನರಾಗಲೀ ಹೇಗೆ ತಾನೆ ಪ್ರಾಮಾಣಿಕರಾಗಿ ನೆಮ್ಮದಿಯಿಂದ ಬಾಳಲು ಸಾಧ್ಯ? ಅವರು ಪರಿಸ್ಥಿತಿಗೆ ಹೊಂದಿಕೊಳ್ಳಬೇಕು. ಇಲ್ಲವಾದರೆ ನರಕಯಾತನೆ ಅನುಭವಿಸಬೇಕು.

ವಿರೋಧ ಪಕ್ಷಗಳಲ್ಲಿ ಮಂದಗಾಮಿ ಪಕ್ಷಗಳ ಧ್ಯೇಯ ಧೋರಣೆಗಳನ್ನು ಜನ ಸಾಮಾನ್ಯರು ಒಪ್ಪುವುದಿಲ್ಲ. ಉಗ್ರಗಾಮಿ ಪಕ್ಷಗಳ ರೀತಿ ನೀತಿಗಳನ್ನು ಜನರು ಅಲ್ಲಗಳೆದಿದ್ದಾರೆ. ಧರ್ಮ ಅಥವಾ ಜಾತಿಯ ಒಲವಿರುವ ಪಕ್ಷಗಳ ವಿಚಾರದಲ್ಲಿ ಜನರಿಗೆ ಗೌರವವಿಲ್ಲ. ಉಳಿದ ರಾಜಕೀಯ ಪಕ್ಷಗಳು ಒಂದಾಗಿ ಏಕ ರೀತಿಯ ಧ್ಯೇಯುಗಳನ್ನೂ, ಆರ್ಥಿಕ ಕಾರ್ಯಕ್ರಮುಗಳನ್ನು ರೂಪಿಸುವ ಸೂಚನೆ ಕಂಡುಬರುವುದಿಲ್ಲ. ವಿರೋಧಪಕ್ಷಗಳೂ ಕೂಡ ತಮ್ಮ ರಾಜಕೀಯ ಚಟುವಟಿಕೆಗಳಲ್ಲಿ

ತಾವು ನಡೆಯಿಸುವ ಚುನಾವಣೆಗಳಲ್ಲಿ ಹೆಚ್ಚೂಕಡಿಮೆ ಉಭಯ ಕಾಂಗ್ರೆಸ್ ಪಕ್ಷಗಳ ರೀತಿ ನೀತಿಗಳನ್ನೇ ಅನುಸರಿಸಿಕೊಂಡು ಬಂದಿವೆ. ಆಳುವ ಪಕ್ಷದ ಕೆಲವರು ಭ್ರಷ್ಟಾಚಾರದಲ್ಲಿ ನಿರತರಾಗಿದ್ದರೆ, ವಿರೋಧ ಪಕ್ಷಗಳ ಕೆಲವರು ಗೂಂಡಾಗಳಂತೆ ವರ್ತಿಸುತ್ತಾರೆ. ಆಡಳಿತದ ಹೊಣೆಯನ್ನು ಹೊತ್ತಿರುವ ಆಡಳಿತ ಪಕ್ಷದವರೂ, ವಿರೋಧ ಪಕ್ಷದವರೂ ಇಂದಿನ ರಾಜಕೀಯ, ಆರ್ಥಿಕ ಮತ್ತು ಆಡಳಿತ ದುಸ್ಥಿತಿಯನ್ನು ಸರಿಪಡಿಸಲು ಅಸಮರ್ಥರಾದಾಗ ಮಹಾಜನರೇ, ಪರಿಹಾರವನ್ನು ಕಂಡುಹಿಡಿಯ ಬೇಕಾಗುತ್ತದೆ. ರಾಜಕಾರಣ ಮತ್ತಷ್ಟು ಹೊಲಸಾಗಿ, ಆಡಳಿತ ಮತ್ತಷ್ಟು ಹದಗೆಟ್ಟರೆ ಈ ದೇಶದಲ್ಲಿ ಏನಾಗುತ್ತದೆ ಎಂಬುದನ್ನು ಊಹಿಸಲು ಸಾಧ್ಯವಿಲ್ಲ.

ಕಳೆದ ಸುಮಾರು ಎರಡು ದಶಕದಿಂದ ನಮ್ಮ ದೇಶದ ರಾಜಕಾರಣ ಬರೀ ಚುನಾವಣೆಯ ಮತ್ತು ಅಧಿಕಾರ ಸಂಪಾದನೆಯ ರಾಜಕಾರಣವಾಗಿದೆ. ಬರೀ ಚುನಾವಣೆಯ ಆಸೆಯಿಂದ ಮತ್ತು ಅಧಿಕಾರ ಲಾಲಸೆಯಿಂದ ರಾಜಕಾರಣಕ್ಕೆ ಧುಮುಕಿದವರಿಂದ ದೇಶಕ್ಕೆ ಹೆಚ್ಚು ಪ್ರಯೋಜನವಾಗಿಲ್ಲವೆಂಬುದು ಇದುವರೆಗಿನ ನಮ್ಮ ಅನುಭವದಿಂದ ವೇದ್ಯವಾಗಿದೆ. ಪ್ರಜಾಪ್ರಭುತ್ವದಲ್ಲಿ ಚುನಾವಣೆ ಅವಶ್ಯಕ. ಆದರೆ ಚುನಾವಣೆಯ ರಾಜಕೀಯದ ಏಕೈಕ ಗುರಿಯಾದರೆ ಈಗಾಗಿರುವಂತೆ ಮಿತಿ ಮೀರಿದ ಅಹಿತ ಪೈಪೋಟಿ ಮತ್ತ ಭ್ರಷ್ಟಚಾರ ಪ್ರಾಪ್ತಿಯಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಅಲ್ಲಲ್ಲಿ ಕೆಲವರನ್ನು ಬಿಟ್ಟರೆ ಮಂತ್ರಿಗಳಿಗೂ ಕಿಮ್ಮತ್ತಿಲ್ಲ; ಮೆಂಬರುಗಳಿಗೂ ಕಿಮ್ಮತ್ತಿಲ್ಲ,. ಅವರ ಕಿಮ್ಮತ್ತನ್ನು ಅವರೇ ಕಡಿಮೆ ಮಾಡಿಕೊಂಡಿದ್ದಾರೆ. ಕಿಮ್ಮತ್ತಿಲ್ಲದ ಮಂತ್ರಿಗಿರಿಗೆ ಅಥವಾ ಮೆಂಬರುಗಿರಿಗೆ ಆಸೆ ಪಡುವ ಬದಲು ಜನರ ಅಭ್ಯುದಯವನ್ನು ಸಾಧಿಸುವ ಹೊಸ ರೀತಿಯ ರಾಜಕಾರಣವನ್ನು ನಡೆಯಿಸುವುದು ಸೂಕ್ತವಲ್ಲವೇ? ಆದ್ದರಿಂದ ದೇಶದ ಅಭ್ಯುದಯದಲ್ಲಿ ಆಸಕ್ತಿ ಇರುವ ಜನರು ಚುನಾವಣೆಯ ಗೀಳನ್ನು ಮರೆತು ಹೊಸ ರೀತಿಯ ರಾಜಕೀಯವನ್ನು ರೂಪಿಸುವುದು ಇಂದು ಆವಶ್ಯವಾಗಿ ಪರಿಣಮಿಸಿದೆ. ಇಂದು ಈ ದೇಶದ ರಾಜಕೀಯ ಮತ್ತು ಆಡಳಿತಕ್ಕೆ ವ್ಯಾಪಿಸಿರುವ ರೋಗಕ್ಕೆ ಪ್ರಬಲವಾದ ಹೊಸ ಚಿಕಿತ್ಸೆಯೇ ಆಗ ಬೇಕಾಗಿದೆ. ಹೊಸ ಚಿಕಿತ್ಸೆಯಾಗಬೇಕಾದರೆ ಹೊಸ ರೀತಿಯ ನೀತಿಗಳು ಮತ್ತು ಹೊಸ ಹಾದಿ ಆವಶ್ಯಕ. ಆನರಿಗೆ ಮಾರ್ಗದರ್ಶನ ನೀಡತಕ್ಕ ಮತ್ತು ಜನರ ಓರೆಕೋರೆಗಳನ್ನು ತಿದ್ದತಕ್ಕ ಆದರ್ಶ ನಾಯಕರ ಉದಯವಾಗಬೇಕಾಗಿದೆ. ದುಷ್ಟರೂ, ಭ್ರಷ್ಟರೂ ಸಮಯ ಸಾಧಕರೂ, ಸ್ವಾರ್ಥಸಾಧಕರೂ ರಾಜಕಾರಣದಲ್ಲಿ ತಲೆ ಎತ್ತದಂತೆ ಮಾಡಬೇಕಾಗಿದೆ. ಬ್ರಹ್ಮರಾಕ್ಷಸನ ರೂಪವನ್ನು – ತಾಳಿರುವ ಭ್ರಷ್ಟಾಚಾರದ ವಿರುದ್ಧ ಒಂದು ಆಂದೋಲನವನ್ನು ಆರಂಭಿಸಬೇಕಾಗಿದೆ.

ನಾನೂ ನನ್ನ ಕೆಲವರು ಮಿತ್ರರೂ ಯುವಜನರೂ ಸೇರಿ ನಮ್ಮ ಕೈಲಾದ ಯತ್ಕಿಂಚಿತ್ ಪ್ರಯತ್ನ ಮಾಡಬೇಕೆಂಬ ಹಂಬಲದಿಂದ ಒಂದು ಹೊಸರೀತಿಯ ರಾಜಕಾರಣಕ್ಕೆ ಕೈ ಹಾಕಿದ್ದೇವೆ. ಇಂದು ತಮ್ಮ ಸಮ್ಮುಖದಲ್ಲಿ ಅಸ್ತಿತ್ವಕ್ಕೆ ಬರಲಿರುವ ಈ ಹೊಸ ರೀತಿಯ ರಾಜಕೀಯ ಸಂಸ್ಥೆಯ ಮೂಲಕ ಒಂದು ಹೊಸ ಆಂದೋಲನವನ್ನು ಆರಂಭಿಸಲು ಇಚ್ಛಿಸಿದ್ದೇವೆ. ಈ ಸಂಸ್ಥೆಯ ಧ್ಯೇಯ ಧೋರಣೆಗಳೇನೆಂಬುದನ್ನು ಕಳೆದವಾರ ಪ್ರತಿಕಾಗೋಷ್ಠಿಯಲ್ಲಿ ವಿವರವಾಗಿ ತಿಳಿಸಿದ್ದೇನೆ. ಈ ಸಂಸ್ಥೆಯ ನಿರ್ಮಾಣಕ್ಕೆ ಸಂಬಂಧಪಟ್ಟ ಕರಡು ಅಂಗ ರಚನೆ ತಮ್ಮ ಒಪ್ಪಿಗೆಗಾಗಿ ಈ ದಿನ ಇಡಲ್ಪಟ್ಟಿದೆ. ಸಮಾಜವಾದ, ಜಾತ್ಯತೀತ ಭಾವನೆ, ಪ್ರಜಾಪ್ರಭುತ್ವ ಇವುಗಳಲ್ಲಿ ಶ್ರದ್ಧೆ ಮತ್ತು ನಂಬಿಕೆ ಇರುವ ಸಚ್ಚಾರಿತ್ರ್ಯವುಳ್ಳ ಪ್ರಾಮಾಣಿಕ ವ್ಯಕ್ತಿಗಳಿಗೆ ಮಾತ್ರ ಈ ಸಂಸ್ಥೆಗೆ ಸೇರಲು ಅವಕಾಶವಿರುತ್ತದೆ. ನನ್ನ ದೃಷ್ಟಿಯಲ್ಲಿ ಸಂಖ್ಯಾಬಲ ಮುಖ್ಯವಲ್ಲ; ನೈತಿಕ ಬಲ ಮುಖ್ಯ. ಸತ್ಯಸಂಧರಾದ ದೇಶಪ್ರೇಮಿಗಳೆಲ್ಲರನ್ನೂ ನಮ್ಮ ಸಂಸ್ಥೆಗೆ ಸೇರಬೇಕೆಂದು ಸ್ವಾಗತಿಸುತ್ತೇನೆ. ಈ ಸಂಸ್ಥೆಯ ಸದಸ್ಯರಾಗಿರುವವರು ಬೇರಾವ ರಾಜಕೀಯ ಸಂಸ್ಥೆಗಳ ಸದಸ್ಯರಾಗಿರಲು ಅವಕಾಶವಿಲ್ಲ. ಈ ಸಂಸ್ಥೆಯಲ್ಲಿ ಸಾಮಾನ್ಯ ಸದಸ್ಯರು ಮತ್ತು ಸಹಾಯಕ ಸದಸ್ಯರು ಎಂಬ ಎರಡು ವರ್ಗದ ಸದಸ್ಯರಿರಲು ಅವಕಾಶವಿದೆ. ಸಾಮಾನ್ಯ ಸದಸ್ಯರು ಚುನಾವಣೆಗೆ ನಿಲ್ಲುವಂತಿಲ್ಲ. ಸಹಾಯಕ ಸದಸ್ಯರು ಸಚ್ಚಾರಿತ್ರ್ಯವುಳ್ಳವರಾಗಿ ಜನಾನುರಾಗಿಗಳಾಗಿದ್ದರೆ ಅಂತಹವರಿಗೆ ಚುನಾವಣೆಗಳಲ್ಲಿ ಅಭ್ಯರ್ಥಿಗಳಾಗಲು ಸಂಸ್ಥೆಯ ಕೇಂದ್ರ ಸಮಿತಿಯು ಅನುಮತಿ ನೀಡಲು ಅವಕಾಶವಿದೆ.

ನಮ್ಮ ಮುಖ್ಯ ಉದ್ದೇಶ ಜನತೆಯನ್ನು ಎಚ್ಚರಗೊಳಿಸಿ, ಹೊಸ ರಾಜಕೀಯ ವಾತಾವರಣವನ್ನು ಕಲ್ಪಿಸಿ, ಭ್ರಷ್ಟರೂ, ದುಷ್ಟರೂ ಸಾರ್ವಜನಿಕ ಜೀವನದಲ್ಲಿ ತಲೆ ಎತ್ತದಂತೆ ಮಾಡುವುದು ಮತ್ತು ಇಂದಿನ ಆರ್ಥಿಕ ದುಸ್ಥಿತಿಗೆ ಬಹುಮಟ್ಟಿಗೆ ಕಾರಣ ಕರ್ತರಾದ ಲಂಚಕೋರ ಸರ್ಕಾರಿ ಅಧಿಕಾರಿಗಳ ವಿರುದ್ಧ ಮತ್ತು ಲಾಭಕೋರ ಅಕ್ರಮ ಸಂಪಾದನೆಯ ಕಳ್ಳ ಹಣದ ಶ್ರೀಮಂತರ ವಿರುದ್ಧ ಚಳುವಳಿ ಕೈಗೊಳ್ಳುವುದು. ನಮ್ಮ ಮೊಟ್ಟ ಮೊದಲನೆಯ ಕರ್ತವ್ಯ, ಪ್ರತಿ ಗ್ರಾಮದಲ್ಲೂ ಪ್ರತಿ ಪಟ್ಟಣದಲ್ಲೂ, ಪ್ರತಿ ತಾಲ್ಲೂಕಿನಲ್ಲೂ ನಿಷ್ಠಾವಂತ ಪ್ರಾಮಾಣಿಕ ಜನರ ತಂಡಗಳನ್ನು ಸಂಘಟಿಸಿ, ಅವರನ್ನು ನಮ್ಮ ಸಂಸ್ಥೆಗೆ ಸೇರಿಸಿಕೊಳ್ಳುವುದು. ಈ ರೀತಿ ಸಂಘಟನೆಯಾದ ನಂತರ, ನಿರ್ದಿಷ್ಟ ಕಾರ್ಯಕ್ರಮವನ್ನು ಗೊತ್ತು ಮಾಡಿಕೊಂಡು, ಜನತೆಯ ಪ್ರಥಮ ಶತ್ರುಗಳಾದ ಭ್ರಷ್ಟ ರಾಜಕಾರಣಿಗಳ, ಲಂಚಕೋರ ಅಧಿಕಾರಿಗಳ ಮತ್ತು ಅಕ್ರಮ ಸಂಪಾದನೆಯ ಲಾಭಕೋರರ ವಿರುದ್ಧ ಜನ ಜಾಗೃತಿಯನ್ನುಂಟು ಮಾಡುವುದು ಮತ್ತು ಚಳುವಳಿ

ಹೂಡುವುದು. ಈ ಭ್ರಷ್ಟರ ವಿರುದ್ಧ ಸತ್ಯಾಗ್ರಹ ಹೂಡಲಿಕ್ಕೂ ಸಹ ನಾವು ಸಿದ್ಧರಾಗಬೇಕಾಗುತ್ತದೆ,

ಚುನಾವಣೆಗಳಲ್ಲಿ ದುಷ್ಟರಿಗೂ, ಭ್ರಷ್ಟರಿಗೂ ಓಟು ಕೊಡಬಾರದೆಂದು ಜನತೆಯಲ್ಲಿ ಮನವಿ ಮಾಡಿಕೊಳ್ಳಬೇಕಾಗುತ್ತದೆ. ಹಣ ಹೆಂಡಗಳಿಗಾಗಿ ಓಟನ್ನು ಕೊಡಬಾರದೆಂದು ಜನತೆಯಲ್ಲಿ ತೀವ್ರ ಪ್ರಚಾರ ಮಾಡಬೇಕಾಗುತ್ತದೆ. ಅಲ್ಲದೆ, ವರದಕ್ಷಿಣೆ, ಜಾತೀಯತೆ, ಕುಡಿತ, ಗುಂಪು ವೈಷಮ್ಯ ಮುಂತಾದ ಸಾಮಾಜಿಕ ದೋಷಗಳನ್ನು ನಿವಾರಿಸಲು ಶ್ರಮಿಸಬೇಕಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಈ ಸಂಸ್ಥೆಯ ಸದಸ್ಯರು ಕ್ರಾಂತಿಕಾರರಂತೆ ವರ್ತಿಸಬೇಕಾಗುತ್ತದೆ, ವರ್ಗರಹಿತ, ಜಾತಿ ರಹಿತವಾದ ಹೊಸ ರೀತಿಯ ಸಮಾಜವನ್ನು ಸೃಷ್ಟಿಸುವುದು ತಮ್ಮ ಅಂತಿಮ ಉದ್ದೇಶವೆಂದು ಮನಸ್ಸಿನಲ್ಲಿಟ್ಟುಕೊಂಡು ಕಾರ್ಯಾಚರಣೆಯನ್ನು ಆರಂಭಿಸಬೇಕಾಗುತ್ತದೆ

ಅಧಿಕಾರ ಅಥವಾ ಸ್ಥಾನಮಾನಗಳು ಇಲ್ಲದಿರುವವರು ವೇದಾಂತ ಹೇಳುವುದು ಸುಲಭ. ವೇದಾಂತವನ್ನು ಹೇಳುವವರು ವೇದಾಂತಿಗಳಾಗಿರಬೇಕು. ದುರ್ಜನರನ್ನೂ, ಭ್ರಷ್ಟರನ್ನೂ ಟೀಕಿಸುವವರು ಸಜ್ಜನರಾಗಿ ನೈತಿಕ ಶಕ್ತಿಯನ್ನು ಪಡೆದವರಾಗಿರಬೇಕು. ಆದ್ದರಿಂದ ಈ ಸಂಸ್ಥೆಗೆ ಸೇರಿದ ನಾವುಗಳು ನಮ್ಮ ಓರೆಕೋರೆಗಳನ್ನು ತಿದ್ದಿಕೊಂಡು, ಸತ್ಯವಂತರಾಗಿ ಬಾಳಲು ಶ್ರಮಿಸಬೇಕು. ಹಾಗಾದರೆ ಮಾತ್ರ ಈ ಸಂಸ್ಥೆ ಬೆಳೆಯಲು ಅವಕಾಶವಿರುತ್ತದೆ. ಇಲ್ಲವಾದರೆ ಇತರ ನೂರಾರು ಪಕ್ಷಗಳ ಜೊತೆಗೆ ಇದೂ ಒಂದು ಪಕ್ಷವಾಗುತ್ತದೆ. ಯಾರು ಬೇಕಾದರೂ ರಾಜಕಾರಣಕ್ಕೆ ಧುಮುಕಬಹುದು. ಆದರೆ ಹೊಸ ಸಮಾಜದ ಸೃಷ್ಟಿ ನಿಷ್ಠಾವಂತರಾದ ಪ್ರಾಮಾಣಿಕರಿಂದ ಮಾತ್ರ ಸಾಧ್ಯ. ದುಷ್ಟರೂ, ಭ್ರಷ್ಟರೂ, ಸಮಯ ಸಾಧಕರೂ, ಸ್ವಾರ್ಥ ಸಾಧಕರೂ, ಜಾತಿವಾದಿಗಳೂ ಜನರ ಅಭ್ಯುದಯವನ್ನು ಸಾಧಿಸಲು ಅನುಕೂಲವಾದ ಹೊಸ ಸಮಾಜವನ್ನು ಸೃಷ್ಟಿಸಲಾರರು ಇದನ್ನು ನಾವು ಗಮನದಲ್ಲಿಡಬೇಕಾಗುತ್ತದೆ. ಈ ಸಂಸ್ಥೆಗೆ ಸೇರುವವರು ನಿರ್ಮಲ ಜೀವನವನ್ನು ನಡೆಯಿಸುವುದು ಅನಿವಾರ್ಯ. ಹಾಗೆಯೇ ತಮ್ಮ ತಮ್ಮ ಜಾತಿಗಳನ್ನು ಮರೆಯುವುದೂ ಆವಶ್ಯಕ. ಸದ್ಯಕ್ಕೆ ಜಾತಿಗಳನ್ನು ಮರೆಯಲಾಗದಿದ್ದರೂ. ಜಾತಿ ವೈಷಮ್ಯಕ್ಕೆ ಎಡೆಗೊಡಬಾರದು. ನನ್ನ ಸುಮಾರು ನಲವತ್ತು ವರ್ಷಗಳ ವ್ಯವಹಾರಿಕ ಮತ್ತು ಸಾರ್ವಜನಿಕ ಜೀವನದಲ್ಲಿ ನನಗೆ ಗೊತ್ತಾಗಿರುವ ಒಂದು ನಿರ್ವಿವಾದದ ಸಂಗತಿಯೇನೆಂದರೆ, ಎಲ್ಲಾ ರೀತಿಯ ಜಾತಿಯಲ್ಲೂ ಒಳ್ಳೆಯವರಿದ್ದಾರೆ ಮತ್ತು ಎಲ್ಲಾ ಜಾತಿಗಳಲ್ಲೂ ಕೆಟ್ಟವರಿದ್ದಾರೆ. ಈ ವಿಚಾರವನ್ನು ನಾವು ಮರೆಯಬಾರದು. ಇನ್ನೊಂದು ಮಾತು, ನಮ್ಮ ನಡೆನುಡಿಗಳಲ್ಲಿ, ನಮ್ಮ ವರ್ತನೆಗಳಲ್ಲಿ ಘನತೆ

ಗಾಂಭೀರ್ಯಗಳಿರಬೇಕು. ನಮ್ಮ ಎದುರಾಳಿಗಳನ್ನು ಅಥವಾ ಸರ್ಕಾರವನ್ನು ಟೀಕೆ ಮಾಡುವಾಗ ಎಂದೂ ಸತ್ಯಕ್ಕೆ ದೂರವಾದ ಆಪಾದನೆಗಳನ್ನು ಮಾಡಬಾರದು. ಅಸತ್ಯದ ಆಪಾದನೆಗಳು ನಮ್ಮನ್ನು ಹಗುರ ಮಾಡುತ್ತವೆ. ನಮ್ಮ ಮಾತಿನಲ್ಲಿ ಸತ್ಯವಿದ್ದರೆ ಮಾತ್ರ ಆ ಮಾತಿಗೆ ತೂಕ ಮತ್ತು ಬೆಲೆ ಬರುತ್ತದೆ.

ನಮ್ಮ ಉದ್ದೇಶ ಒಳ್ಳೆಯದಾಗಿದ್ದರೆ, ನಮ್ಮ ಮನಸ್ಸು ನಿರ್ಮಲವಾಗಿದ್ದರೆ ನಮ್ಮ ಕಾರ್ಯಕ್ಕೆ ಭಗವಂತನ ಸಹಾಯ ದೊರೆಯುತ್ತದೆಯೆಂದು ನನ್ನ ನಂಬಿಕೆ. ಆ ಭಗವಂತನು ನಮ್ಮ ಕಾರ್ಯಕ್ಕೆ ಯಶಸ್ಸನ್ನು ನೀಡಲಿ. ಮಹಾಜನರು ನಮ್ಮ ಪ್ರಯತ್ನಕ್ಕೆ ಬೆಂಬಲವನ್ನು ನೀಡಬೇಕೆಂದು ಈ ಸಂದರ್ಭ ನಮ್ರವಾಗಿ ಪ್ರಾರ್ಥಿಸುತ್ತೇನೆ.

ತಾ: ೧೬.೦೨.೧೯೭೪

# ಅಪ್ರಾಮಾಣಿಕ ರಾಜಕಾರಣಿಗಳ ಅಧಿಕಾರಿಗಳ ವಿಜೃಂಭಣೆ

ದೇಶದ ಉನ್ನತಿ ಆಡಳಿತವನ್ನು ಅವಲಂಬಿಸಿದ್ದರೆ, ಆಡಳಿತ ರಾಜಕಾರಣವನ್ನು ಅವಲಂಬಿಸಿರುತ್ತದೆ. ಪ್ರಜಾಪ್ರಭುತ್ವದಲ್ಲಿ ರಾಜಕಾರಣ ಸ್ವಚ್ಛವಾಗಿದ್ದು ರಾಜಕೀಯ ಮುಖಂಡರು ಪ್ರಮಾಣಿಕರಾಗಿದ್ದರೆ ಜನತೆಗೆ ಸ್ವಚ್ಛವಾದ, ದಕ್ಷತೆಯುಳ್ಳ ಆಡಳಿತ ಲಭಿಸುತ್ತದೆ. ದೇಶದ ಆಡಳಿತ ಉತ್ತಮವಾಗಿದ್ದರೆ, ದೇಶ ತನ್ನಷ್ಟಕ್ಕೆ ತಾನೇ ಪ್ರಗತಿಯ ಹಾದಿಯನ್ನು ಹಿಡಿಯುತ್ತದೆ. ನಾವು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಕಾಲದಲ್ಲಿ ಬ್ರಿಟಿಷ್ ಆಳ್ವಿಕೆಯ ರೀತಿ-ನೀತಿಗಳನ್ನು ಕಟುವಾಗಿ ಟೀಕಿಸುತ್ತಿದ್ದೆವು. ಅಂದಿದ್ದ ಅಧಿಕಾರಿಗಳನ್ನು ಸರ್ವಾಧಿಕಾರಿಗಳೆಂದೂ, ಅವರಿಗೆ ಜನರ ಮೇಲೆ ಕನಿಕರವಿಲ್ಲವೆಂದೂ ಸಾರುತ್ತಿದ್ದೆವು ಬ್ರಿಟಿಷರು ನಮ್ಮ ದೇಶವನ್ನು ಆರ್ಥಿಕವಾಗಿ ಶೋಷಣೆ ಮಾಡುತ್ತಿದ್ದುದೂ ನಿಜ. ಆದರೆ ಅವರ ಆಡಳಿತದಲ್ಲಿ ಬಿಗಿಯಿತ್ತು. ಆಡಳಿತ ಯಂತ್ರ ತ್ವರಿತಗತಿಯಲ್ಲಿ ಚಲಿಸುತ್ತಿತ್ತು. ಅನುದಿನದ ಆಡಳಿತದಲ್ಲಿ ಲಂಚ, ಶಿಫಾರಸ್ಸುಗಳ ಕೈವಾಡ ಈಗಿರುವಷ್ಟು ಇರಲಿಲ್ಲ. ಅಲ್ಲಲ್ಲಿ ಕದ್ದು ಮುಚ್ಚಿ ಲಂಚದ ವ್ಯವಹಾರ ನಡೆಯುತಿತ್ತು. ಆದರೆ ಉನ್ನತ ಮಟ್ಟದ ಅಧಿಕಾರಿಗಳು ಪ್ರಾಮಾಣಿಕರಾಗಿದ್ದರು. ಈಗಿನ ಕಾಲದಲ್ಲಿ ರಾಜಕಾರಣಿಗಳ ಪೈಕಿ ಅಥವಾ ಅಧಿಕಾರಿಗಳ ಪೈಕಿ ಯಾರು ಪ್ರಾಮಾಣಿಕರೆಂಬುದನ್ನು ಬೆರಳು ಮಡಿಸಿ ಎಣಿಸಬಹುದು. ಆಗಿನ ಕಾಲದಲ್ಲಿ ಯಾರು ಅಪ್ರಮಾಣಿಕರೆಂಬುದನ್ನು ಬೆರಳು ಮಡಿಸಿ ಎಣಿಸಬಹುದಾಗಿತ್ತು.

ಸ್ವರಾಜ್ಯ ಬಂದ ಮೇಲೆ ನಮ್ಮವರೇ ಆದ ಮಂತ್ರಿಗಳೂ, ಅಧಿಕಾರಿಗಳೂ, ಸತ್ಯಸಂದರಾಗಿ ಪ್ರಜೆಗಳ ಸೇವಕರೆಂಬ ಭಾವನೆಯಿಂದ ಕಾರ್ಯ ನಿರ್ವಹಣೆ ಮಾಡಬಹುದೆಂಬ ಹೊಂಗನಸನ್ನು ಅಂದು ತಾವು ಕಾಣುತ್ತಿದ್ದೆವು. ಸ್ವರಾಜ್ಯ ಬಂದು ಮೂವತ್ತು ವರ್ಷಗಳು ಸಂದುಹೋದವು. ಈ ಮೂವತ್ತು ವರ್ಷಗಳ ಅವಧಿಯಲ್ಲಿ ಸರ್ಕಾರದ ಕಾರ್ಯಕ್ಷೇತ್ರವೂ ವಿಸ್ತಾರವಾಗಿದೆ. ಜವಾಬ್ದಾರಿಯೂ ಹೆಚ್ಚಾಗಿದೆ. ಸರ್ಕಾರದ ಇಲಾಖೆಗಳೂ ಶಾಖೋಪಶಾಖೆಗಳಾಗಿ ಒಡೆದು ನೂರ್ಮಡಿ ಹೆಚ್ಚಾಗಿವೆ. ಸರ್ಕಾರದ ಆದಾಯ ವೆಚ್ಚಗಳೂ ಸಹ ಬಹಳ ಹೆಚ್ಚಿವೆ. ಅದೆ ಮಂತ್ರಿಗಳಾಗಲೀ ಅಧಿಕಾರಿಗಳಾಗಲೀ ಅಂದು ನಾವು ನಿರೀಕ್ಷಿಸಿದ ರೀತಿಯಲ್ಲಿ ಕಾರ್ಯ ನಿರ್ವಹಣೆಮಾಡುತ್ತಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

೧೯೪೭ರ ನಂತರ ಕ್ರಮೇಣ ಹೊಸ ನಮೂನೆಯ ಜನರು ರಾಜಕೀಯ ರಂಗಕ್ಕೆ ಧುಮುಕಲಾರಂಭಿಸಿದರು. ಅವರಲ್ಲಿ ಹಲವರಿಗೆ ಅಧಿಕಾರ ಮತ್ತು ಹಣ ಸಂಪಾದನೆಯೇ ಮುಖ್ಯ ಗುರಿಯಾಗಿತ್ತು. ಈ ಹೊಸ ನಮೂನೆಯ ಜನರು ಕ್ರಮೇಣ ಸುಮಾರು ಹದಿನೈದು ವರ್ಷಗಳ ಅವಧಿಯಲ್ಲಿ ಕಾಂಗ್ರೆಸ್ ರಾಜಕಾರಣವನ್ನು ತಮ್ಮ ಕೈವಶಪಡಿಸಿಕೊಂಡು ಹೊಸ ನಮೂನೆಯ ಅಧಿಕಾರ ಲಾಲಸೆಯ ರಾಜಕಾರಣವನ್ನು ಅನುಷ್ಠಾನಕ್ಕೆ ತಂದರು. ಇದರ ಪರಿಣಾಮವಾಗಿ ರಾಜಕಾರಣದಲ್ಲಿ ದಿನೇ ದಿನೇ ಅಹಿತ ಪೈಪೋಟಿ ಹೆಚ್ಚಾಗುತ್ತಾ ಬಂದು ಹೇಗಾದರೂ ಮಾಡಿ ಏನಾದರೂ ಮಾಡಿ, ಎಂತಾದರೂ ಮಾಡಿ ಅಧಿಕಾರ ಸಂಪಾದನೆ ಮಾಡಬೇಕೆಂಬ ಹಂಬಲದಿಂದ ಕೂಡಿದ್ದ ಜನರು ಅಲ್ಲಲ್ಲಿ ಮುಖಂಡರಾದರು. ಚುನಾವಣೆಗಳಲ್ಲಿ ಹಣ-ಹೆಂಡಗಳ ಹಂಚಾಟ ಪ್ರಾರಂಭವಾಯಿತು. ಈ ಅಹಿತ ಪೈಪೋಟಿಯಲ್ಲಿ ಯಾವುದಕ್ಕೂ ಹೇಸದ ಜನರು ಅಲ್ಲಲ್ಲಿ ಶಾಸಕರಾಗಿ ಆಯ್ಕೆಯಾಗುತ್ತಾ ಬಂದರು. ಅವರಲ್ಲಿ ಕೆಲವರು ಮಂತ್ರಿಗಳಾದರು. ಚುನಾವಣೆಗಳಲ್ಲಿ ಮಿತಿಮೀರಿ ಖರ್ಚು ಮಾಡಿದ ಹಣವನ್ನು ಗಳಿಸುವುದಕ್ಕಾಗಿ, ಮೋಜಿನ ಜೀವನವನ್ನು ನಡೆಸುವುದಕ್ಕಾಗಿ ಅಲ್ಲಲ್ಲಿ ಮಂತ್ರಿಗಳೂ ಶಾಸಕರೂ ಲಂಚ ಹೊಡೆಯಲಾರಂಭಿಸಿದರು. ಮೊದಲು ಕಾಂಗ್ರೆಸ್ ಪಕ್ಷದ ಪದಾಧಿಕಾರಿಗಳು ಪಕ್ಷದ ಚಟುವಟಿಕೆಗಳಿಗಾಗಿ ನೇರವಾಗಿ ಮತ್ತು ಬಹಿರಂಗವಾಗಿ ಸಾರ್ವಜನಿಕರಿಂದ ಹಣವನ್ನು ಸಂಗ್ರಹಿಸುತ್ತಿದ್ದರು. ಬರುಬರುತ್ತಾ ಕೆಲವರು ಮಂತ್ರಿಗಳೂ ಮುಖ್ಯಮಂತ್ರಿಗಳೂ “ಕಾಂಗ್ರೆಸ್ ಫಂಡ್” ಸಂಗ್ರಹಿಸುವ ನೆಪದಲ್ಲಿ ತಮ್ಮ ಕೈಕೆಳಗಿನ ಅಧಿಕಾರಿಗಳ ಸಹಾಯದಿಂದ ಗುಪ್ತವಾಗಿ ಹಣವನ್ನು ಸಂಗ್ರಹಿಸಲು ಆರಂಭಿಸಿದರು. ಲಾಭಕೋರ ವಣಿಕವರ್ಗದ ಜನರು ನೇರವಾಗಿ, ಮುಖ್ಯ ಮಂತ್ರಿಗಳ ಅಥವಾ ಮಂತ್ರಿಗಳ ಬಳಿಗೆ ಹೋಗಿ “ಕಾಂಗ್ರೆಸ್ ಫಂಡ್”ಗೆ ಕಾಣಿಕೆಕೊಡುತಿದ್ದರೆಂದು ವದಂತಿ ಇದೆ. ಕೆಲವರು ಶಾಸಕರು ದಲ್ಲಾಳಿಗಳಂತೆ ತಮಗೆ ಬೇಕಾದ ಜನರಿಗೆ ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್, ವರ್ಗಾ-ವರ್ಗಿ ಮುಂತಾದ ಕೆಲಸಗಳನ್ನು ಮಂತ್ರಿಗಳಿಂದ ಮಾಡಿಸಿಕೊಟ್ಟು ಹಣಗಳಿಸುವ ಕಾರ್ಯಗಳಲ್ಲಿ ತೊಡಗಿದರು ಕಳೆದ ಆರೇಳು ವರ್ಷಗಳಿಂದೀಚೆಗೆ ಈ ಪಿಡುಗು ದೇಶಾದ್ಯಂತ ಹಬ್ಬಿ ಒಂದು ಭಯಂಕರ ಸನ್ನಿವೇಶವನ್ನುಂಟು ಮಾಡಿತು. ಕೆಲವು ರಾಜ್ಯಗಳಲ್ಲಿ ಮುಖ್ಯ ಮಂತ್ರಿಗಳೆನಿಸಿಕೊಂಡವರು ತಾವು ಸಂಗ್ರಹಿಸಿದ್ದ ಗುಪ್ತ ನಿಧಿಯಿಂದ ತಮಗೆ ಬೇಕಾದ ಶಾಸಕರಿಗೆ ಮಾಶಾಸನ ಕೊಡುತ್ತಿದ್ದರೆಂದು ವದಂತಿಯಿದೆ.

ರಾಜಕಾರಣ ಹೊಲಸಾದಂತೆಲ್ಲಾ ಆಡಳಿತ ಹದಗೆಡುತ್ತಾ ಬಂತು, ಕಾಂಗ್ರೆಸ್ ಪಕ್ಷದವರು ಸಮಾಜವಾದದ ಸೋಗಿನಲ್ಲಿ ತಮಗೂ, ತಮ್ಮವರಿಗೂ ಸಂತರ್ಪಣೆ

ನಡೆಯಿಸುತ್ತಾ ಪ್ರಜಾಪ್ರಭುತ್ವದ ಸೋಗಿನಲ್ಲಿ ಲಂಚದ ಪ್ರಭುತ್ವವನ್ನು ಸ್ಥಾಪಿಸಿದರು ಲಂಚ ಸರ್ವವ್ಯಾಪಿಯಾಯಿತು, ಕೆಲವು ರಾಜ್ಯಗಳಲ್ಲಿ ಕಾಂಗ್ರೆಸ್ ಪಕ್ಷದ ಭ್ರಷ್ಟಾಚಾರದ ಸೋಂಕು ಬೇರೆ ಕೆಲವು ರಾಜಕೀಯ ಪಕ್ಷಗಳಿಗೂ ತಗುಲಿತು. ಕೆಲವು ಕಡೆ ಅಧಿಕಾರಿಗಳು ಮಂತ್ರಿಗಳ ಆದರ್ಶವನ್ನನುಸರಿಸಿ ಹಗಲುಗಳ್ಳರಾದರು. ಈ ಎಲ್ಲಾ ಕಾರಣಗಳ ದೆಸೆಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು, ಸಾರ್ವಜನಿಕರ ಪ್ರಯೋಜನಕ್ಕೆಂದು ಖರ್ಚು ಮಾಡುವ ಹಣದಲ್ಲಿ ಸುಮಾರು ಶೇ॥ ೪೫ರಷ್ಟು ಹಣ ಲಂಚಕೋರ ಅಧಿಕಾರಿಗಳ, ರಾಜಕಾರಣಿಗಳ, ಲಾಭಕೋರ ವಣಿಕ ವರ್ಗದ ಜನರ ಬೊಕ್ಕಸಕ್ಕೆ ಹೋಗುವಂತಾಯಿತು. ನೂರು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದರೆ ಸುಮಾರು ೪೫ ಕೋಟಿ ರೂಪಾಯಿಗಳು ಈ ರೀತಿ ಸೋರಿ ಹೋಗುವ ಪ್ರಸಂಗ ಉಂಟಾಯಿತು. ಜನರು ತೆರಿಗೆ ಕೊಡುವುದು ತಪ್ಪಲಿಲ್ಲ. ಅವರು ಕೊಟ್ಟ ತೆರಿಗೆಯಿಂದ ದೇಶಕ್ಕೆ ಪೂರ್ಣ ಪ್ರತಿಫಲ ದೊರಕಲಿಲ್ಲ. ಈ ರೀತಿ ಸೋರಿ ಹೋಗುವುದನ್ನು ತಪ್ಪಿಸಲು ಇದುವರೆವಿಗೂ ಯಾವ ಪರಿಣಾಮಕಾರಿಯಾದ ಕಾರ್ಯವನ್ನೂ ತೆಗೆದುಕೊಂಡಿಲ್ಲ. ಸೋರಿ ಹೋಗುವುದನ್ನು ತಪ್ಪಿಸುವ ಬದಲು, ಸರ್ಕಾರಗಳು ಆದಾಯ ವೆಚ್ಚಗಳನ್ನು ಸರಿದೂಗಿಸುವ ಸಲುವಾಗಿ ವರ್ಷೇ-ವರ್ಷೇ ಹೊಸ ಹೊಸ ತೆರಿಗೆಗಳನ್ನು ವಿಧಿಸುತ್ತಿವೆ. ಪದಾರ್ಥಗಳ ಮೇಲೆ ತೆರಿಗೆ ಹೆಚ್ಚಾದಂತೆಲ್ಲಾ ಪದಾರ್ಥಗಳ ಬೆಲೆಯೂ ಹೆಚ್ಚಾಗುತ್ತದೆ. ಸರ್ಕಾರಗಳ ಬೊಕ್ಕಸದಿಂದ ಸೋರಿಹೋಗುವ ಹಣ ಕಳ್ಳ ಹಣವಾಗಿ ಮಾರ್ಪಟ್ಟು ಮಾರುಕಟ್ಟೆಗಳಲ್ಲಿ ಹಣದುಬ್ಬರಗಳನ್ನುಂಟು ಮಾಡುತ್ತದೆ. ಜನತಾ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಈ ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಪ್ರಧಾನ ಮಂತ್ರಿಗಳೂ ಕೇಂದ್ರ ಸಂಪುಟದ ಬಹು ಮಂದಿ ಸಚಿವರೂ ಪ್ರಾಮಾಣಿಕರೇ ಇರಬಹುದು. ಆದರೆ ಆಡಳಿತ ಯಂತ್ರ ಮೊದಲಿನಂತೆಯೇ ಚಲಿಸುತ್ತಿದೆ-ಅದೇ ಅಧಿಕಾರಿಗಳು ಕೆಲವು ಕಡೆಗಳಲ್ಲಿ ಅದೇ ಹಿಂದಿನ ನಮೂನೆಯ ಅಧಿಕಾರ ಲಾಲಸೆಯ ಲಂಚಕೋರ ರಾಜ ಕಾರಣಿಗಳು.

ಆಡಳಿತವನ್ನು ಸುಧಾರಿಸುವುದಕ್ಕಾಗಿ ಹನ್ನೊಂದು ವರ್ಷಗಳ ಹಿಂದೆ ಒಂದು ಆಯೋಗವನ್ನು ರಚಿಸಲಾಗಿತ್ತು. ಆ ಆಯೋಗದ ಸಲಹೆಗಳನ್ನು ಬಹುಪಾಲು ಕೇಂದ್ರ ಸರ್ಕಾರದವರು ಅನುಷ್ಠಾನಕ್ಕೆ ತಂದಿದ್ದಾರೆ. ಆದರೆ ದಿನಚರಿ ಆಡಳಿತ ಕ್ರಮದಲ್ಲಿ ಮತ್ತು ಅಧಿಕಾರಿಗಳ ಧೋರಣೆಯಲ್ಲಿ ಮಹತ್ತರವಾದ ಯಾವ ಬದಲಾವಣೆಯೂ ಆಗಿಲ್ಲ. ಬ್ರಿಟಿಷರ ಕಾಲದಲ್ಲಿದ್ದಂತೆ ಈಗಲೂ ಕೂಡ ದಿನಚರಿಯ ಆಡಳಿತದಲ್ಲಿ ಅಧಿಕಾರಿಗಳ ಸರ್ವಾಧಿಕಾರ ಮನೋಭಾವ ಎದ್ದು ಕಾಣುತ್ತಿದೆ. ದಿನಚರಿಯ ಆಡಳಿತದಲ್ಲಿ

ಸಾಮಾನ್ಯರಿಗೆ ಸುಲಭವಾಗಿ ನ್ಯಾಯ ದೊರೆಯುವುದು ಬಹಳ ಅಪರೂಪ. ಸುಧಾರಣೆಗಳನ್ನು ಜಾರಿಗೆ ತಂದಿದ್ದರಿಂದ ಆಡಳಿತದಲ್ಲಿ ಲಂಚವೂ ಕಡಿಮೆಯಾಗಿಲ್ಲ. ದಕ್ಷತೆಯೂ ಹೆಚ್ಚಲಿಲ್ಲ ಬದಲಾಗಿ ಇತ್ತೀಚಿನ ವರ್ಷಗಳಲ್ಲಿ ಲಂಚ ಹೆಚ್ಚಾಗಿ ದಕ್ಷತೆ ಕಡಿಮೆಯಾಗಿದೆ. ಅಧಿಕಾರಿಗಳೆಲ್ಲರೂ ಕೆಟ್ಟವರೆಂದು ನಾನು ಹೇಳುವುದಿಲ್ಲ. ಅಲ್ಲಲ್ಲಿ ಪ್ರಮಾಣಿಕರಾದ ಒಳ್ಳೆಯ ಅಧಿಕಾರಿಗಳೂ ಇದ್ದಾರೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅವರು ನಿಸ್ಸಾಹಾಯಕರಾಗಿ ಪೇಚಿಗೆ ಸಿಕ್ಕಿದ್ದಾರೆ. ಕೆಲವರು ಅಧಿಕಾರಿಗಳು ವರ್ತಿಸುವ ರೀತಿಯನ್ನೂ ಮಾಡುವ ಕೆಲಸವನ್ನೂ ನೋಡಿದರೆ ನಮ್ಮ ದೇಶದ ಅಧಿಕಾರ ವರ್ಗದ ಜನರಿಗೆ ಜನಸಾಮಾನ್ಯರ ಮೇಲೆ ಕನಿಕರವೆ ಇಲ್ಲವೆಂಬ ಭಾವನೆ ಒಮ್ಮೊಮ್ಮೆ ಉಂಟಾಗುತ್ತದೆ. ಉನ್ನತಮಟ್ಟದ ಕೆಲವು ಅಧಿಕಾರಿಗಳು ಭಗವಂತನು ತಮ್ಮನ್ನು ಈ ದೇಶವನ್ನು ಆಳುವ ಸಲುವಾಗಿ ಉದ್ದೇಶಪೂರ್ವಕ ಸೃಷ್ಟಿಸಿರುವಂತೆ ವಿಜೃಂಭಿಸುತ್ತಾರೆ. ಅವರಿಗೆ ಬುದ್ಧಿಗಿಂತ ದುರಹಂಕಾರವೇ ಹೆಚ್ಚು ಕೆಲವರು ಅಧಿಕಾರಿಗಳು ಜನರ ಸುಲಿಗೆಗಾಗಿಯೇ ತಮಗೆ ಸರಕಾರಿ ಕೆಲಸ ದೊರೆತಿದೆಯೆಂದು ಭಾವಿಸಿರುವಂತೆ ತೋರುತ್ತದೆ. ಕೆಲವು ಅಧಿಕಾರಿಗಳಿಂದ ಜನರಿಗೆ ದೊರೆಯುವ ಪ್ರಯೋಜನಕ್ಕಿಂತ ಆಗುವ ಕಿರುಕುಳಗಳೇ ಜಾಸ್ತಿ, ಆಡಳಿತವನ್ನು ಸರಿಪಡಿಸುವ ಹೊಣೆಯನ್ನು ಹೊತ್ತಿರುವ ಮಂತ್ರಿಗಳು, ಶಾಸಕರು, ತಮ್ಮ ಕರ್ತವ್ಯವನ್ನು ಹೇಗೆ ನಿರ್ವಹಿಸುತ್ತಾರೆಂಬುದನ್ನು ಅವರ ಸೇವೆಯನ್ನುಂಡ ಜನರು ಸಂಪೂರ್ಣವಾಗಿ ಅರಿತಿದ್ದಾರೆ.

ಕೆಲವು ಸರ್ಕಾರಿ ಕಛೇರಿಗಳಲ್ಲಿ ಕಾಗದ ಪತ್ರಗಳು ಆಮೆಯ ವೇಗದಲ್ಲಿ ಚಲಿಸುತ್ತವೆ. ಲಂಚದ ಜಿಡ್ಡು ತಗುಲಿದಾಗ ಅಥವಾ ಶಿಫಾರಸಿನ ಬಿಸಿ ತಟ್ಟಿದಾಗ ತ್ವರಿತಗತಿಯಲ್ಲಿ ಚಲಿಸುತ್ತವೆ. ಇಲ್ಲವಾದರೆ ತಿಂಗಳಾನುಗಟ್ಟಲೆ ಅಥವಾ ವರ್ಷನುಗಟ್ಟಲೇ ಇದ್ದಲ್ಲೇ ಬಿದ್ದಿರುತ್ತವೆ. ಯಾರಾದರು ದೂರು ಹೇಳಿದರೆ ದೂರು ಹೇಳಿದವರ ಕಾಗದ ಪತ್ರಗಳನ್ನು ಏನಾದರೊಂದು ಕೊಕ್ಕೆ ಹಾಕಿ ಒಂದು ಮೇಜಿನಿಂದ ಇನ್ನೊಂದು ಮೇಜಿಗೆ ಅಥವಾ ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ ರವಾನಿಸುತ್ತಾರೆ. ಸಂಬಂಧಪಟ್ಟ ಜನರು ತಮ್ಮ ಕಾಗದ ಪತ್ರಗಳನ್ನು ಹಿಂಬಾಲಿಸಿ ಒಂದು ಮೇಜಿನಿಂದ ಇನ್ನೊಂದು ಮೇಜಿಗೆ, ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ ಅಥವಾ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುತ್ತಲೇ ಇರಬೇಕು. ಕೆಲವು ಅಧಿಕಾರಿಗಳು ದಿನಕ್ಕೆ ಮೂರು ಘಂಟೆಗಳ ಕಾಲ ಸಹ ಸರಿಯಾಗಿ ಕೆಲಸ ಮಾಡುವುದಿಲ್ಲ. ಹಣ ಕೊಡುವ ಗಿರಾಕಿಗಳಿಗಾಗಿ ಕಾಯುತ್ತಿರುತ್ತಾರೆ. ಗಿರಾಕಿ ಬಂದು ಕೈ ಬೆಚ್ಚಗಾದ ಮೇಲೆ ಗಿರಾಕಿಯ ಕೆಲಸ ಕಾರ್ಯಗಳನ್ನು ತರಾತುರಿಯಿಂದ ಮಾಡಿಕೊಟ್ಟು ಹೋಟೆಲಿಗೆ ಹೋಗುತ್ತಾರೆ. ಪುನಃ

ಅವರು ಆಫೀಸಿನಲ್ಲಿ ಕೆಲಸ ಮಾಡಬೇಕಾದರೆ ಮತ್ತೊಬ್ಬ ಗಿರಾಕಿ ಬರಬೇಕು. ಲಂಚ ಕೀಳಲಿಕ್ಕಾಗಿ ಅನಾವಶ್ಯಕವಾಗಿ ರಿಕಾರ್ಡಗಳಿಗೆ ಕೊಕ್ಕೆ ಹಾಕುತ್ತಾರೆ. ಅವರಿಗೆ ಮಾನವೀಯತೆಯೇ ಇಲ್ಲ. ಇಂತಹ ಅಧಿಕಾರಿಗಳಿಗೆ ಮೇಲಾಧಿಕಾರಿಗಳ ಹೆದರಿಕೆಯೇ ಇಲ್ಲ. ಯಾಕೆಂದರೆ ಮೇಲಾಧಿಕಾರಿಗಳಲ್ಲಿ ಕೆಲವರು ಇದೇ ರೀತಿಯ ಕೆಲಸವನ್ನು ನಡೆಸತಕ್ಕವರು. ಹಿಂದಿನ ಕಾಲದಲ್ಲಿ ಕೆಳದರ್ಜೆಯ ಅಧಿಕಾರಿಗಳು ಮೇಲು ದರ್ಜೆ ಅಧಿಕಾರಿಗಳಿಗೆ ಅಂಜಿ ನಡೆಯುತ್ತಿದ್ದರು. ಮೇಲು ದರ್ಜೆ ಅಧಿಕಾರಿಗಳು ಮಂತ್ರಿಗಳಿಗೆ ಅಂಜುತ್ತಿದ್ದರು, ಮಂತ್ರಿಗಳು ಜನಾಭಿಪ್ರಾಯಕ್ಕೆ ಅಂಜಿ ನಡೆಯುತ್ತಿದ್ದರು. ಸುಮಾರು ಹತ್ತು ವರ್ಷಗಳಿಂದ ಪರಿಸ್ಥಿತಿಯೇ ಬದಲಾಗಿದೆ. ಇಂದು ಬಹು ಮಂದಿ ಮಂತ್ರಿಗಳಿಗೆ ಅಧಿಕಾರಿಗಳ ಮೇಲೆ ಹತೋಟಿಯೇ ಇಲ್ಲ. ಈ ರೀತಿಯಾಗಲು ಕೆಲವು ಕಾರಣಗಳಿವೆ. ಕೆಲವರು ಮಂತ್ರಿಗಳು ಪ್ರಾಮಾಣಿಕರಾಗಿದ್ದರೂ, ಅವರಿಗೆ ಆಡಳಿತ 'ಓ' ನಾಮವೇ ಗೊತ್ತಿಲ್ಲವಾದುದರಿಂದ ಅವರು ಅಧಿಕಾರಿಗಳ ಕೈಗೊಂಬೆಗಳಂತೆ ವರ್ತಿಸುತ್ತಾರೆ. ಅಧಿಕಾರಿಗಳು ಬರದಿಟ್ಟುದುದಕ್ಕೆ ಸಹಿ ಹಾಕುತ್ತಾರೆ. ಕೆಲವರು ಮಂತ್ರಿಗಳು ಲಂಚಕೋರರಾದುದರಿಂದ ಅವರ ವಿಚಾರದಲ್ಲಿ ಅಧಿಕಾರಿಗಳಿಗೆ ಗೌರವವೂ ಇರುವುದಿಲ್ಲ. ಹೆದರಿಕೆಯೂ ಇರುವುದಿಲ್ಲ. ಏನಾದರೂ ತಮಗೆ ತೊಂದರೆ ಕೊಟ್ಟಾರೆಂಬ ಭಯದಿಂದ ತೋರುಗಾಣಿಕೆಯ ಭಯ ಭಕ್ತಿಗಳನ್ನು ಪ್ರದರ್ಶಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಲಂಚಕೋರ ಮಂತ್ರಿಗಳೂ ಲಂಚಕೋರ ಅಧಿಕಾರಿಗಳೂ ಶಾಮೀಲಾಗಿ ಲಂಚದ ವ್ಯವಹಾರ ನಡೆಸುತ್ತಾರೆ. ಅವರೊಡನೆ ಇವರು ಇವರೊಡನೆ ಅವರು ಹೊಂದಿಕೊಳ್ಳುತ್ತಾರೆ.

–ಪ್ರಜಾವಾಣಿ ೨೮.೦೯.೧೯೭೭

# ಸಿರಿಗೆರೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳ ಉದ್ಘಾಟನಾಭಾಷಣ

ನಾನು ನಾಸ್ತಿಕನಲ್ಲ; ಸಾಂಪ್ರದಾಯಕ ರೀತಿಯಲ್ಲಿ ಆಸ್ತಿಕರೂ ಅಲ್ಲ. ಧರ್ಮ, ದೇವರು, ಮತಾಚರಣೆ ಮುಂತಾದ ವಿಚಾರಗಳಲ್ಲಿ ನನ್ನ ನಂಬಿಕೆ ಮತ್ತು ಅಭಿಪ್ರಾಯಗಳು ಬಹುಜನರ ನಂಬಿಕೆ ಅಭಿಪ್ರಾಯಗಳಿಗೆ ಸ್ವಲ್ಪಮಟ್ಟಿಗೆ ವಿರೋಧವಾಗಿವೆ. ಅದುದರಿಂದಲೇ ನಾನು ಧಾರ್ಮಿಕ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದು ಅಪರೂಪ. ಪೂಜ್ಯ ಗುರುಗಳಾದ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು ನನ್ನ ಮೇಲೆ ಇಟ್ಟಿರುವ ಅಪಾರವಾದ ವಾತ್ಸಲ್ಯ ಮತ್ತು ಅಭಿಮಾನಗಳು ನನ್ನನ್ನು ಇಂದು ಸಿರಿಗೆರೆಗೆ ಬರುವಂತೆ ಮಾಡಿವೆ. ಪುರಾತನಕಾಲದಲ್ಲಿ ಮಠಗಳು ಆತ್ಮಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡುವ ತಪೋಮಂದಿರಗಳಾಗಿದ್ದವು. ಅಂದು ಮಠಾಧಿಪತಿಗಳು, ಸಾಮಾನ್ಯ ಜನರಿಗೆ ಆತ್ಮಜ್ಞಾನದ ಅನ್ವೇಷಣೆ ಮತ್ತು ನೀತಿ ಭೋದನೆ ತಮ್ಮ ಕರ್ತವ್ಯವೆಂಬುದನ್ನ ಮರೆತು, ಅರ್ಥವಿಲ್ಲದ ಹಲವು ಆಚಾರಗಳನ್ನೂ, ಮೂಢನಂಬಿಕೆಗಳನ್ನೂ ಅಸ್ತಿತ್ವಕ್ಕೆ ತಂದರು.

ಈ ರೀತಿಯ ಬದಲಾವಣೆಯಾದ ವಾತಾವರಣದಲ್ಲಿ ಮಠಾಧಿಪತಿಗಳು ಪಾರಮಾರ್ಥಿಕ ವಿಚಾರಗಳಿಗಿಂತ ಲೌಕಿಕ ವಿಚಾರಗಳ ಕಡೆಗೆ ಗಮನ ಕೊಡಬೇಕಾದ ಪರಿಸ್ಥಿತಿಯುಂಟಾಯಿತು. ಕೆಲವರು ಆಸ್ತಿಯ ಸಂಪಾದನೆ ಮತ್ತು ಅದರ ವಹಿವಾಟು ನಡೆಸುವುದರಲ್ಲಿ ಮಗ್ನರಾದರೆ, ಕೆಲವರು ಅಡ್ಡ ಅಥವಾ ಉದ್ದಪಲ್ಲಕ್ಕಿ ಉತ್ಸವಗಳಲ್ಲಿ ಅಥವಾ ಭೂರಿ ಭೋಜನ ಸಂತರ್ಪಣೆಗಳಲ್ಲಿ ನಿರತರಾದರು. ಅಲ್ಲಲ್ಲಿ ಕೆಲವು ಮಠಾಧೀಶ್ವರರು ಸಂಪ್ರದಾಯಕವಾಗಿ ಬಂದಿದ್ದ ಆಚಾರವನ್ನು ಉಳಿಸಿಕೊಂಡು ಜನಾರ್ಧನನ ಸೇವೆಯ ಜೊತೆಗೆ ಜನ ಸೇವೆಯನ್ನೂ ಮಾಡುತ್ತಿದ್ದಾರೆ. ತರಳಬಾಳು ಪೂಜ್ಯ ಗುರುಗಳು ಈ ಮೂರನೆ ವರ್ಗಕ್ಕೆ ಸೇರಿದವರು. ಪೂಜ್ಯಗುರುಗಳು ಕೇವಲ ಇಪ್ಪತ್ತು ವರ್ಷಗಳ ಅವಧಿಯಲ್ಲಿ ೧೪ ಕಾಲೇಜುಗಳನ್ನು ೬೫ ಪ್ರೌಢಶಾಲೆಗಳನ್ನೂ, ಮತ್ತು ೫೬ ವಿದ್ಯಾರ್ಥಿನಿಲಯಗಳನ್ನೂ ಸ್ಥಾಪಿಸಿ, ಬಹಳ ಯಶಸ್ವಿಯಾಗಿ ಮಕ್ಕಳಿಗೆ ವಿದ್ಯಾದಾನವನ್ನು ನೀಡುತ್ತಿದ್ದಾರೆ. ಇವರು ಸ್ಥಾಪಿಸಿರುವ ಶಾಲಾ ಕಾಲೇಜುಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ಜಾತಿ ಭೇದಕ್ಕೆ ಅವಕಾಶವಿಲ್ಲದೆ ಸರ್ವರಿಗೂ ಅವಕಾಶವನ್ನು ಕಲ್ಪಿಸಿರುತ್ತಾರೆ. ವಿದ್ಯಾರ್ಥಿನಿಲಯಗಳಲ್ಲಿ ಪರಿಜನರಾಗಿಯೂ ಎಲ್ಲಾ ಜಾತಿಗೆ ಸೇರಿದ ವಿದ್ಯಾರ್ಥಿಗಳೂ ಒಟ್ಟಿಗೆ ವಾಸ ಮಾಡುತ್ತಿದ್ದಾರೆ ಒಟ್ಟಿಗೆ ಊಟ ಮಾಡುತ್ತಿದ್ದಾರೆ. ಸ್ವಾಮೀಜಿಯವರು ಇದಕ್ಕಾಗಿ ಅಭಿನಂದನಾರ್ಹರು.

ಕೆಲಸಕ್ಕೆ ಬಾರದ ಕಲ್ಲು ಮಣ್ಣುಗಳ ರಾಶಿಯಲ್ಲಿ ಅಮೂಲ್ಯವಾದ ವಜ್ರ ವೈಡೂರ್ಯಗಳು ಮುಚ್ಚಿ ಹೋಗಿರುವಂತೆ ಹಿಂದೂ ಧರ್ಮದ ಶ್ರೇಷ್ಠಸಿದ್ಧಾಂತಗಳು ಅರ್ಥವಿಲ್ಲದ ಆಚಾರಗಳಿಂದಲೂ ಪೊಳ್ಳು ಮೂಢ ನಂಬಿಕೆಗಳಿಂದಲೂ ಮುಚ್ಚಿ ಹಾಕಲ್ಪಟ್ಟಿವೆ. ಹಿಂದೂ ಧಾರ್ಮಿಕ ಮತ್ತು ದಾರ್ಶನಿಕ ಸಿದ್ಧಾಂತಗಳು ಆಧುನಿಕ ವೈಜ್ಞಾನಿಕ ಸಿದ್ಧಾಂತಗಳಿಗೆ ಅನುಗುಣವಾಗಿವೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಶ್ರೇಷ್ಠ ಸಿದ್ಧಾಂತಗಳನ್ನು ಹಿಂದುಗಳಲ್ಲಿ ಬಹುಜನರು ಅರಿತುಕೊಂಡಿಲ್ಲವೆಂಬುದು ವಿಷಾದದ ಸಂಗತಿ. ಪುರಾತನ ಕಾಲದಲ್ಲಿಯೆ ನಮ್ಮ ನಮ್ಮ ಋಷಿಗಳು ಆಕಾಶ ಮತ್ತು ಪ್ರಾಣ ಇವುಗಳ ಸಂಯೋಗದಿಂದ ವಿಶ್ವ ಸೃಷ್ಟಿಸಲ್ಪಟ್ಟಿದೆ ಎಂದು ಸಾರಿದ್ದರು. ಆಕಾಶವೆಂದರೆ ಜಡವಸ್ತು ಪ್ರಾಣವೆಂದರೆ ಚೇತನ ಅಥವಾ ಪ್ರೇರಕ ಶಕ್ತಿ.

ಉಪನಿಷತ್ತಿನ ಉನ್ನತ ಸಿದ್ಧಾಂತಗಳಲ್ಲಿ ವಿಶ್ವದ ಮೂಲವಸ್ತು ಆಧ್ಯಾತ್ಮಿಕವಾದುದೆಂದೂ, ಜಡವಸ್ತುವಲ್ಲವೆಂದೂ ಸಾರಿದೆ. ಆಧುನಿಕ ಭೌತಶಾಸ್ತ್ರ ಪ್ರವೀಣರು ವಿಶ್ವದ ಮೂಲ ವಸ್ತು ನಾಲ್ಕು ಕಣಗಳಿಂದ ಕೂಡಿದೆ ಎಂದೂ ಈ ನಾಲ್ಕು ಕಣಗಳನ್ನು ನಾಲ್ಕು ಮೂಲ ಶಕ್ತಿಗಳು ಚೇತನಗೊಳಿಸುತ್ತದೆ ಎಂದೂ ಹೇಳುತ್ತಿದ್ದಾರೆ. ವಿಶ್ವವಿಖ್ಯಾತ ವಿಜ್ಞಾನಿ ಐನ್‌ಸ್ಟೀನ್ ಇಡೀ ವಿಶ್ವದಲ್ಲಿ ಒಂದೇ ಒಂದು ಮೂಲಶಕ್ತಿ ಅಥವಾ ಪ್ರೇರಕಶಕ್ತಿ ಇದೆ ಎಂಬ ನಂಬಿಕೆಯನ್ನು ತಾಳಿದ್ದನು. ಆ ಏಕೈಕ ಶಕ್ತಿಯ ಅನ್ವೇಷಣೆಯಲ್ಲಿ ತೊಡಗಿದ್ದನು. ಆದರೆ ಅವರ ಅನ್ವೇಷಣೆ ಸಫಲವಾಗಲಿಲ್ಲ. ಉಪನಿಷತ್ತಿನಲ್ಲಿ ಹೇಳಿರುವಂತೆ ಇಡೀ ವಿಶ್ವ ಆದ್ಯಾತ್ಮಿಕವಾದುದೆಂಬ ಕಲ್ಪನೆ ಅವನ ಮನಸ್ಸಿನಲ್ಲಿ ಇದ್ದಂತೆ ತೋರುತ್ತದೆ.

ಉಪನಿಷತ್ತು ವಿಶ್ವದ ಆಧ್ಯಾತ್ಮಿಕ ಐಕ್ಯತೆಯನ್ನು ಸಾರಿದೆ. ಭಿನ್ನತೆಯ ಹಿನ್ನೆಲೆಯಲ್ಲಿ ಐಕ್ಯತೆ ಇದೆ ಎಂದೂ ಆಶಾಶ್ವತದ ಹಿನ್ನಲೆಯಲ್ಲಿ ಶಾಶ್ವತ ಅಡಗಿದೆ ಎಂದೂ ಸಾರಿದೆ. ಜಗತ್ತಿನಲ್ಲಿ ನಾವು ಕಾಣುವುದೆಲ್ಲವೂ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಬ್ರಹ್ಮನಲ್ಲೇ ಐಕ್ಯವಾಗಿದೆ ಎಂಬುದನ್ನು ಹೇಳಿದೆ. ಉಪನಿಷತ್‌ಕಾರರು ಆ ಬ್ರಹ್ಮನನ್ನು ದೇವರೆಂದು ಕರೆದರು. ಪರಮಾತ್ಮನೆಂದು ಕರೆದರು. ಆ ಬ್ರಹ್ಮನೇ ವಿಶ್ವದ ಆಗುಹೋಗುಗಳಿಗೆ ಪ್ರಧಾನ ಚೇತಸಕಾರಿ ಎಂದೂ, ಕಾರಣಕರ್ತನೆಂದೂ ಹೇಳಿದ್ದರು. ಉಪನಿಷತ್ತಿನಲ್ಲಿ ಏಕೈಕ ದೇವರ ಪ್ರತಿಪಾದನೆ ಇದೆ. ಹಲವು ದೇವದೇವತೆಗಳ ಪ್ರಸ್ತಾಪ ಉಪನಿಷತ್ತಿನಲ್ಲಿ ಕಂಡು ಬರುವುದಿಲ್ಲ. ಇದನ್ನು ನೋಡಿದರೆ ಪುರಾತನಕಾಲದಲ್ಲಿ ಚಿಂತನಾಶೀಲರಾದ ಹಿಂದುಗಳು ಏಕೈಕವಾದ ದೇವರಲ್ಲಿ ನಂಬಿಕೆಯುಳ್ಳವರಾಗಿದ್ದರೆಂದು ವ್ಯಕ್ತವಾಗುತ್ತದೆ. ಅಲ್ಲದೆ ಹಿಂದೂ ಸಮಾಜದ ಅವನತಿಗೆ ಕಾರಣವಾದ ಜಾತಿಪದ್ಧತಿಗೆ ಉಪನಿಷತ್ತಿನಲ್ಲಿ

ಸಮರ್ಥನೆ ದೊರೆಯುವುದಿಲ್ಲ. ಪುರೋಹಿತರೂ, ಧರ್ಮಗುರುಗಳೂ ತಮ್ಮ ಹಿತದೃಷ್ಟಿಯಿಂದ ಸಾವಿರಾರು ಜಾತಿಗಳನ್ನೂ ಲಕ್ಷಾಂತರ ದೇವ ದೇವತೆಗಳನ್ನೂ ಸೃಷ್ಟಿಸಿ ಹಿಂದೂ ಸಮಾಜವನ್ನು ನುಚ್ಚುನೂರಾಗಿ ಒಡೆದರು. ಇದರಿಂದಲೆ ಹಿಂದುಗಳು ಧರ್ಮದ ಅಥವಾ ಜಾತಿಯ ಹೆಸರಿನಲ್ಲಿ ಪರಸ್ಪರ ಕಚ್ಚಾಡಿ ಪರಕೀಯರ ಆಳ್ವಿಕೆಗೆ ಅವಕಾಶ ಕಲ್ಪಿಸಿಕೊಟ್ಟರು.

ಜಾತಿಪದ್ಧತಿ ಈ ದೇಶಕ್ಕೆ ತಗಲಿದ ಒಂದು ದೊಡ್ಡ ಶಾಪ. ಯಾವುದೋ ಕಾರಣದಿಂದ ನಮ್ಮ ಪೂರ್ವಿಕರು ನಾಲ್ಕು ವರ್ಣಗಳನ್ನು ಸ್ಥಾಪಿಸಿದರು. ಕ್ರಮೇಣ ವರ್ಣಗಳು ಜಾತಿಗಳಾದವು. ಜಾತಿಗಳು ಶಾಖೋಪಶಾಖೆಗಳಾಗಿ ಒಡೆದು ಸಾವಿರಾರು ಜಾತಿಗಳೂ, ಒಳಜಾತಿಗಳೂ ಹುಟ್ಟಿಕೊಂಡವು. ಒಂದೊಂದು ಕಸಬು ಮಾಡುವರೆಲ್ಲರೂ ಒಂದೊಂದು ಜಾತಿಯವರಾದರು. ನಾಲ್ಕು ವರ್ಣಗಳ ಜೊತೆಗೆ ಪಂಚಮ ವರ್ಣವನ್ನು ಸೃಷ್ಟಿಸಿ ಆ ಪಂಚಮ ವರ್ಣದವರೆಲ್ಲರೂ ಶತಮಾನಗಳ ಕಾಲ ಅಸ್ಪೃಶ್ಯರಾಗಿ ಅನಾಗರಿಕರಂತೆ ಬಾಳುವಂತೆ ಮಾಡಿದರು. ಸುಮಾರು ೨೫೦೦ ವರ್ಷಗಳ ಹಿಂದಿನಿಂದ ಜಾತಿಪದ್ಧತಿಯ ನಿರ್ಮೂಲಕ್ಕಾಗಿ ಆಗಾಗ ಪ್ರಯತ್ನಗಳು ನಡೆಯುತ್ತಲೇ ಬಂದಿವೆ. ಆದರೆ ಜಾತೀಯತೆಯ ಬೇರು ಸಡಿಲವಾಗುವ ಬದಲು ಪ್ರಬಲವಾಗುತ್ತಲೇ ಬಂದಿದೆ. ಕ್ರಿಪೂ. ಸುಮಾರು ೫೦೦ ರಲ್ಲಿ ಮೊಟ್ಟಮೊದಲು ಭಗವಾನ್ ಬುದ್ಧನು ಜಾತಿಪದ್ಧತಿಯ ವಿರುದ್ಧ ಒಂದು ಆಂದೋಳನವನ್ನು ಮಾಡಿ ಸರ್ವರೂ ಸರಿಸಮಾನರಾಗಿ ಬಾಳಲು ಅನುಕೂಲವಾದ ಒಂದು ಹೊಸ ಧರ್ಮವನ್ನು ಸ್ಥಾಪಿಸಿದನು. ಬಹುಷಃ ಚೀನಾ, ಜಪಾನ್, ಸಿಂಹಳ, ಮುಂತಾದ ರಾಷ್ಟ್ರಗಳಲ್ಲಿ ಬೌದ್ಧ ಧರ್ಮವು ಸರ್ವ ವ್ಯಾಪಿಯಾಗಿ ಹಬ್ಬಿದಂತೆ ಭಾರತದಲ್ಲೂ ಹಬ್ಬಿದರೆ ಈ ದೇಶದ ಇತಿಹಾಸವೇ ಬೇರೆಯಾಗಿರುತಿತ್ತು. ಆದರೆ ಸನಾತನ ಧರ್ಮಕ್ಕೆ ಅಂಟಿಕೊಂಡಿದ್ದವರು ಬೌದ್ಧಧರ್ಮ ಭಾರತದಲ್ಲಿ ಉಳಿಯದಂತೆ ಮಾಡಿದರು.

೧೨ನೇ ಶತಮಾನದಲ್ಲಿ ಬಸವಣ್ಣನವರು ಜಾತಿ ಪದ್ಧತಿಯ ವಿರುದ್ಧ ಸಿಡಿದೆದ್ದು ಸರಿಸಮಾನತೆಯ ಒಂದು ಹೊಸ ಧರ್ಮವನ್ನು ಸ್ಥಾಪಿಸಿದರು. ಆದರೆ ಅವರು ಸ್ಥಾಪಿಸಿದ ಧರ್ಮ ಹೊಸದೊಂದು ಜಾತಿಯ ಸೃಷ್ಟಿಗೆ ಕಾರಣವಾಯ್ತು. ರಾಮ್ಮೋಹನ್‌ರಾಯ್‌ರವರು ಹಿಂದೂ ಧರ್ಮದ ಸುಧಾರಣೆಗಾಗಿ ಬ್ರಹ್ಮ ಸಮಾಜವನ್ನು ಸ್ಥಾಪಿಸಿದರು. ಆದರೆ ಅವರು ಸ್ಲಾಪಿಸಿದ ಧರ್ಮ ಹೊಸದೊದು ಜಾತಿಯ ಸೃಷ್ಟಿಗೆ ಕಾರಣವಾಯ್ತು. ರಾಜಾರಾಂಮೋಹನ್‌ರಾಯ್‌ರವರು ಹಿಂದೂ ಧರ್ಮದ ಸುಧಾರಣೆಗಾಗಿ ಬ್ರಹ್ಮ ಸಮಾಜವನ್ನು ಸ್ಥಾಪಿಸಿದರು. ಅವೆರಡೂ ಕ್ರಮೇಣ ಹೊಸ ಜಾತಿಗಳಾದವು ಹೀಗಾಗಿ ಜಾತಿಪದ್ಧತಿಯ ನಿರ್ಮೂಲಕ್ಕಾಗಿ ಹಿಂದೂ ಧರ್ಮದ

ಸುಧಾರಣೆಗಾಗಿ ಇದುವರೆಗೆ ನಡೆದ ಪ್ರಯತ್ನಗಳಿಂದ ಜಾತಿಪದ್ಧತಿ ನಿರ್ಮೂಲವಾಗುವ ಬದಲು ಇದ್ದ ನೂರಾರು ಜಾತಿಗಳ ಜೊತೆಗೆ ಹೊಸಜಾತಿಗಳು ಹುಟ್ಟುವಂತಾಯಿತು. ಸ್ವತಂತ್ರ್ಯ ಚಳುವಳಿಯ ಕಾಲದಲ್ಲಿ ಮಹಾತ್ಮಾಗಾಂಧೀಜಿಯವರು ಅಸ್ಪೃಶ್ಯತೆಯ ವಿರುದ್ಧ ಮತ್ತು ಜಾತಿಪದ್ಧತಿ ವಿರುದ್ಧ ತೀವ್ರಪ್ರಚಾರವನ್ನು ಕೈಗೊಂಡಿದ್ದರು. ಆ ಕಾಲದಲ್ಲಿ ಜಾತೀಯತೆಯ ನಿರ್ಮೂಲವಾಗುವ ಸೂಚನೆಗಳು ಕಂಡುಬರುತಿದ್ದವು.

ಆದರೆ ಸ್ವರಾಜ್ಯ ಬಂದಮೇಲೆ ರಾಜಕಾರಣಿಗಳು ಓಟಿಗಾಗಿ ಜಾತಿದ್ವೇಷಕ್ಕೆ ಪ್ರೋತ್ಸಾಹ ನೀಡುತ್ತಾ ಬಂದರು. ಒಂದು ಜಾತಿಯಮೇಲೆ ಇನ್ನೊಂದು ಜಾತಿಯನ್ನು ಎತ್ತಿಕಟ್ಟಲಾರಂಭಿಸಿದರು. ಇದರಿಂದ ಜಾತಿದ್ವೇಷ ಮತ್ತು ಪರಸ್ಪರ ಸಂಶಯ ಹೆಚ್ಚಾಗಿ ಬೆಳೆಯುವಂತಾಯಿತು. ಇಂದು ಈ ದೇಶದಲ್ಲಿ ಅಲ್ಲಲ್ಲಿ ಕೆಲವರನ್ನು ಬಿಟ್ಟರೆ, ಒಂದಲ್ಲ ಒಂದು ರೀತಿಯಲ್ಲಿ ತಮ್ಮ ತಮ್ಮ ಜಾತಿಗೆ ಬಲವಾಗಿ ಅಂಟಿಕೊಂಡಿರುವವರೇ ಹೆಚ್ಚು. ಕೆಲವು ಜಾತಿಗಳಲ್ಲಿ ಜಾತಿಯತೆಯ ಪಿಡುಗು ಜಾಸ್ತಿ. ಕೆಲವು ವ್ಯಕ್ತಿಗಳು ಜಾತಿಗೆ ಅಂಟಿಕೊಂಡಿದ್ದರೂ ವಿಶಾಲ ಮನೋಭಾವದಿಂದ ವರ್ತಿಸುತ್ತಾರೆ. ಕೆಲವರು ಜಾತೀಯತೆಯ ಪಿಶಾಚಿಗಳಂತೆ ವರ್ತಿಸುತ್ತಾರೆ. ಇಷ್ಟೇ ವ್ಯತ್ಯಾಸ ತಾವು ಜಾತಿವಾದಿಗಳೆಂಬುದನ್ನು ಮರೆತು ಕೆಲವರು ಇತರರನ್ನು ಜಾತಿವಾದಿಗಳೆಂದು ಕರೆಯುತ್ತಾರೆ. ಈ ದೇಶದಲ್ಲಿ ಹಲವರು ರಾಷ್ಟ್ರದ ಅಭ್ಯುದಯವನ್ನು ಚಿಂತಿಸುತ್ತಾರೆ. ಈ ಕಾರಣದಿಂದಲೇ ಈ ದೇಶದಲ್ಲಿ ರಾಷ್ಟ್ರಭಕ್ತಿ ಕಡಿಮೆ ಸ್ವಾರ್ಥಸಾಧಕ ಪ್ರವೃತ್ತಿ ಹೆಚ್ಚು. ನನ್ನ ೫೦ ವರ್ಷಗಳ ಅನುಭವದಿಂದ ಹೇಳುವುದಾದರೆ ಎಲ್ಲಾ ಜಾತಿಗಳಲ್ಲಿಯೂ ಒಳ್ಳೆಯವರೂ ಕೆಟ್ಟವರೂ ಇದ್ದಾರೆ. ಈ ಸತ್ಯವನ್ನು ಜನರು ಅರಿತುಕೊಂಡರೆ ಜಾತಿದ್ವೇಷ ಬಹುಮಟ್ಟಿಗೆ ಕಡಿಮೆಯಾಗುತ್ತದೆ.

ನಾನು ಇಂದು ಸಾಂಸ್ಕೃತಿಕ ಕಾರ್ಯಕ್ರಮಗಳ ಉದ್ಘಾಟನೆಗಾಗಿ ಬಂದಿದ್ದೇನೆ. ನಾನು ಇದುವರೆಗೆ ಹೇಳಿದ್ದೆಲ್ಲವೂ ಸಂಸ್ಕೃತಿಗೆ ಸಂಬಂಧಪಟ್ಟ ವಿಚಾರವೇ ಆಗಿರುತ್ತದೆ. ಸಂಸ್ಕೃತಿ ಎಂದರೆ ಬರೀ ಮನರಂಜನೆಯಲ್ಲ. ಯಾವ ವ್ಯಕ್ತಿಯಲ್ಲಿ ಮನಸ್ಸೂ ಆತ್ಮವೂ ವಿಕಾಸಗೊಂಡು, ಸದ್ಗುಣಗಳು ಹೆಚ್ಚಾಗಿರುತ್ತವೆಯೋ ಅಂತಹ ವ್ಯಕ್ತಿಯನ್ನು ಸುಸಂಸ್ಕೃತ ವ್ಯಕ್ತಿ ಎಂದು ಕರೆಯುತ್ತೇವೆ. ಧರ್ಮ, ಸಾಹಿತ್ಯ, ಕಲೆ ಮುಂತಾದವುಗಳು ಮನುಷ್ಯರನ್ನು ಸುಸಂಸ್ಕೃತರನ್ನಾಗಿ ಮಾಡುವ ಶಕ್ತಿಯನ್ನು ಪಡೆದಿದೆ. ಪುರಾತನ ಕಾಲದಲ್ಲಿ ಗ್ರೀಕರೂ ಹಿಂದುಗಳೂ ಅತ್ಯಂತ ಮೇಧಾವಿಗಳೆಂದೂ, ಚಿಂತನಶೀಲರೆಂದೂ ಹೆಸರುವಾಸಿಯಾಗಿದ್ದರು. ಭಾರತವು ಸತ್ಯವಂತರ ಮತ್ತು ಸುಸಂಸ್ಕೃತರ ನಾಡೆಂದು ಪರಿಗಣಿಸಲ್ಪಟ್ಟಿತ್ತು. ಈ ದೇಶದ ಅಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳಿಗಾಗಿ ಪರದೇಶದವರು ಈ ದೇಶವನ್ನು ಗೌರವಿಸುತ್ತಿದ್ದರು. ಸ್ವಾತಂತ್ರ್ಯಕ್ಕಾಗಿ ನಾವು ಬ್ರಿಟೀಷರ

ವಿರುದ್ಧ ಸತ್ಯ, ಅಹಿಂಸೆಗಳ ಹೋರಾಟ ನಡೆಸುತ್ತಿದ್ದಾಗ ಜಗತ್ತಿನ ಇತರ ರಾಷ್ಟ್ರಗಳ ಜನರು ನಮ್ಮ ವಿಚಾರದಲ್ಲಿ ಬಹಳ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದರು. ಸ್ವತಂತ್ರ ಭಾರತವು ಇಡೀ ಜಗತ್ತಿಗೇ ಮಾರ್ಗದರ್ಶನ ನೀಡುವಂತಾಗುತ್ತದೆ. ಎಂಬ ಆಶಾಭಾವನೆಯನ್ನು ತಾಳಿದ್ದರು.

ಕ್ರಿ.ಪೂ. ೩೦೦ ರಲ್ಲಿ ಈ ದೇಶಕ್ಕೆ ಬಂದಿದ್ದ ಗ್ರೀಕ್ ರಾಯಭಾರಿ ಮೆಗಾಸ್ಥನೀಸನು, ಭಾರತೀಯರು ಸತ್ಯವಂತರೆಂದೂ, ಸುಸಂಸ್ಕೃತರೆಂದೂ, ಶಾಂತಿಪ್ರಿಯರೆಂದೂ ಬಾಯಿತುಂಬಾ ಹೊಗಳಿದ್ದಾನೆ. ಕ್ರಿ.ಪೂ. ೪೦೫ ರಲ್ಲಿ ಈ ದೇಶಕ್ಕೆ ಬಂದಿದ್ದ ಚೀನಾದೇಶದ ಯಾತ್ರಿಕ ಪಾಹಿಯಾನನೂ ಕೂಡ ಈ ಮಾತುಗಳನ್ನು ಸಮರ್ಥಿಸಿದ್ದಾನೆ. ನಮ್ಮ ಪೂರ್ವಿಕರು ಸೌಂದರ್ಯದಲ್ಲಿ ಸತ್ಯವನ್ನೂ ಸತ್ಯದಲ್ಲಿ ಸೌಂದರ್ಯವನ್ನೂ ಕಂಡಿದ್ದರು. ಸ್ವಾತಂತ್ರ್ಯಕ್ಕೆ ಪೂರ್ವದಲ್ಲಿ ಈ ದೇಶದಲ್ಲಿ ಜನರು ಬ್ರಿಟಿಷರ ಗುಲಾಮರಂತೆ ಬಾಳುತ್ತಿದ್ದರು ಆದರೆ ಅವರು ಸುಸಂಸ್ಕೃತರಾಗಿ ಸತ್ಯವಂತರಾಗಿದ್ದರು. ರಾಮಾಯಣ ಮಹಾಭಾರತ, ಮುಂತಾದ ಕಾವ್ಯಗಳನ್ನು ಪ್ರತಿ ಊರಿನಲ್ಲಿಯೂ ಓದಿಸಿ ಕೇಳುತ್ತಿದ್ದರು. ಹರಿಕಥೆ, ಶಿವಕಥೆಗಳನ್ನು ಕೇಳುತ್ತಿದ್ದರು. ಪೌರಾಣಿಕ ಐತಿಹಾಸಿಕ ನಾಟಕಗಳನ್ನು ನೋಡುತ್ತಿದ್ದರು. ಆದ್ದರಿಂದ ಅಂದು ಅವಿದ್ಯಾವಂತರಾಗಿದ್ದ ಸಾಮಾನ್ಯ ಜನರಿಗೆ ಅಲ್ಪಸ್ವಲ್ಪ ಸಾಹಿತ್ಯದ ಪರಿಚಯವೂ ಇತ್ತು. ಇಂದಿನ ಪೀಳಿಗೆಯ ಯುವ ಜನರಿಗೆ ಸಾಹಿತ್ಯದ ಜ್ಞಾನವೂ ಇಲ್ಲ; ಜಗತ್ತಿನ ಆಗು ಹೋಗುಗಳ ಪರಿವೆಯೂ ಇಲ್ಲ. ಬಟ್ಟೆಬರೆಗಳ ಆಡಂಬರವೇ ಅವರ ಸಂಸ್ಕೃತಿ, ಈ ದೇಶದಲ್ಲಿ ಪುಸ್ತಕಗಳನ್ನು, ವೃತ್ತ ಪತ್ರಿಕೆಗಳನ್ನು ಓದತಕ್ಕ ಜನರು ಶೇಕಡಾ ಆರರಷ್ಟು ಇರಬಹುದು. ಆದ್ದರಿಂದ ಸಂಸ್ಕೃತಿಯಾಗಲೀ, ಜ್ಞಾನವಾಗಲೀ ಹೇಗೆ ಬೆಳೆಯಲು ಸಾಧ್ಯ?.

ನಮ್ಮ ದೇಶದ ಸಂಸ್ಕೃತಿಯಲ್ಲಿ ಉತ್ತಮವಾದುದೆಲ್ಲವನ್ನೂ ಪರದೇಶಗಳಿಗೆ ರಪ್ತು ಮಾಡಿದ್ದೇವೆ. ಬುದ್ಧನ ತತ್ವಗಳನ್ನು ಚೀನಾ, ಜಪಾನ್, ಸಿಂಹಳ ಮುಂತಾದ ಪರದೇಶಗಳಿಗೆ ರಫ್ತುಮಾಡಿದ್ದೇವೆ. ಗಾಂಧೀ ತತ್ವಗಳಿಗೆ ಪರದೇಶಗಳಲ್ಲಿ ಮನ್ನಣೆ ಇದೆ. ನಾವು ಗಾಂಧಿಯನ್ನು ಮರೆತಿದ್ದೇವೆ. ಇನ್ನು ೨,೩ ದಶಕಗಳ ನಂತರ ಗಾಂಧೀಯ ಹೆಸರನ್ನು ಯಾರಾದರೂ ಹೇಳಿದರೆ ಗಾಂಧೀ ಎಂದರೆ ಯಾರು? ಎಂದು ಕೇಳುತ್ತಾರೆ. ರಾಮಾಯಣ, ಮಹಾಭಾರತಗಳನ್ನು ರಷ್ಯಾ ದೇಶದಲ್ಲಿ ಅವರ ಭಾಷೆಗೆ ಅನುವಾದ ಮಾಡಿದ್ದಾರೆ. ಚೀನಿಯರು ರಾಮಾಯಣವನ್ನು ಅವರ ಭಾಷೆಗೆ ಅನುವಾದ ಮಾಡಿದ್ದಾರೆ. ನಾವು ಈ ಮಹಾಕಾವ್ಯಗಳನ್ನು ಕಟ್ಟು ಕಥೆಗಳೆಂದು ಹೀಯಾಳಿಸಿ ಮಾತನಾಡುತ್ತೇವೆ. ಯೋಗಶಾಸ್ತ್ರ, ಭಾರತೀಯರು ಜಗತ್ತಿಗೆ ಕೊಟ್ಟಿರುವ ಒಂದು ಅಮೂಲ್ಯ ಕಾಣಿಕೆ. ಅಮೇರಿಕ ಮತ್ತು ಯುರೋಪುಗಳಲ್ಲಿ ನೂರಾರು ರಾಜಯೋಗದ

ಮತ್ತು ಹಠಯೋಗದ ಕೇಂದ್ರಗಳಿವೆ. ಹಠಯೋಗದಿಂದ ಮನುಷ್ಯರು ನಿರೋಗಿಗಳಾಗಿ ದೃಢಕಾಯುರಾಗಿರಬಹುದೆಂಬುದನ್ನು ಪಾಶ್ಚಿಮಾತ್ಯರು ಮನಗಂಡಿದ್ದಾರೆ. ರಾಜಯೋಗದಲ್ಲಿ ವಿವರಿಸಿರುವ ಧ್ಯಾನದಿಂದ ಮಾನಸಿಕಶಾಂತಿ ಲಭಿಸುತ್ತದೆಯೆಂದು ಪಾಶ್ಚಿಮಾತ್ಯ ವಿಜ್ಞಾನಿಗಳು ಸಾರುತ್ತಿದ್ದಾರೆ. ರಷ್ಯಾದಲ್ಲಿ ಕೆಲವು ವಿಜ್ಞಾನಿಗಳು ಅತೀಂದ್ರಿಯ ವಿಚಾರಗಳ ಬಗ್ಗೆ ಸಂಶೋಧನೆ ಮಾಡುತ್ತಿದ್ದಾರೆ. ನಾವು ಪಾಶ್ಚಿಮಾತ್ಯ ಸಮಾಜದಲ್ಲಿರುವ ದುಶ್ಚಟಗಳನ್ನು ದುರ್ನಡತೆಗಳನ್ನು ಕಲಿತುಕೊಂಡು ನಾಗರಿಕರೆಂದು ವಿಜೃಂಭಿಸುತ್ತೇವೆ. ಆದರೆ ಅವರ ಕಾರ್ಯನಿಷ್ಠೆ, ರಾಷ್ಟ್ರಪ್ರೇಮ, ಸಾಹಸಪ್ರವೃತ್ತಿ ಇವುಗಳ ಅನುಸರಿಸುವ ಗೊಡವೆಗೆ ಹೋಗಿಲ್ಲ.

ಐಶ್ವರ್ಯದಿಂದಲೇ ಮನುಷ್ಯರಿಗೆ ಸುಖ, ಶಾಂತಿ ಲಭಿಸುವುದಿಲ್ಲವೆಂದು ಆರ್ಥಿಕ ಪ್ರಗತಿಯ ದೃಷ್ಟಿಯಲ್ಲಿ ಮುಂದುವರಿದ ಅಮೇರಿಕ ಮತ್ತು ಜಪಾನ್ ದೇಶಗಳಲ್ಲಿರುವ ವಿಚಾರವಂತರು ಈಚೆಗೆ ಹೇಳತೊಡಗಿದ್ದಾನೆ. ಜನರು ಸತ್ಯ ಸಂಧರಾಗಿ ಸುಸಂಸ್ಕೃತರಾಗಿಲ್ಲದಿದ್ದರೆ ಅತುಳೈಶ್ವರ್ಯವಿದ್ದರೂ ಸುಖ ಶಾಂತಿಯನ್ನು ಪಡೆಯಲಾರರು. ನಮ್ಮದು ಬಡರಾಷ್ಟ್ರ ನಮಗೆ ಮಾನವರಂತೆ ಬಾಳ ಅನುಕೂಲವಾದ ಆರ್ಥಿಕ ಸುಖ, ಸೌಕರ್ಯಗಳು ಬೇಕು. ಜೊತೆಗೆ ಸುಸಂಸ್ಕೃತಿಯೂ ಬೇಕು. ಹೊಟ್ಟೆಗೆ ಹಿಟ್ಟುಬೇಕು. ಜುಟ್ಟಿಗೆ ಮಲ್ಲಿಗೆ ಹೂವೂ ಬೇಕು, ಸತ್ಯ ಶೀಲ ಮಾನವೀಯತೆ ಇವುಗಳಿಲ್ಲದ ಜನರು ಸುಸಂಸ್ಕೃತರೆನಿಸಿಕೊಳ್ಳಲಾರರು. ಸತ್ಯ ಅಸತ್ಯಗಳೆರಡೂ ಅನಾದಿಯಿಂದ ಮಾನವ ಸಮಾಜದೊಂದಿಗೆ ಬೆಳೆದು ಬಂದಿದೆ. ಅಸತ್ಯವಿಲ್ಲದ ಕಾಲ ಯಾವಾಗಲೂ ಇರಲಿಲ್ಲ. ಆದರೆ ಅಸತ್ಯ ಮಿತಿಮೀರಿದ ಪ್ರಮಾಣದಲ್ಲಿ ಬೆಳೆದರೆ ಸಮಾಜಕ್ಕೆ ಅಪಾಯ ಸಂಭವಿಸುತ್ತದೆ. ವಾತಾವರಣದಲ್ಲಿ ಆಮ್ಲಜನಕಕ್ಕಿಂತ ಇಂಗಾಲ ಹೆಚ್ಚಾದರೆ ಜೀವಜಂತುಗಳು ನಶಿಸಲಾರಂಭಿಸುತ್ತವೆ. ಮನುಷ್ಯರ ದೇಹದಲ್ಲಿ ನಿರೋಗಕ್ಕಿಂತಲೂ ರೋಗ ಹೆಚ್ಚಾದರೆ ಅವನು ರೋಗಕ್ಕೆ ಬಲಿಯಾಗುತ್ತಾನೆ. ಅಂತೆಯೇ ಸಮಾಜದಲ್ಲಿ ಸತ್ಯಕ್ಕಿಂತಲೂ ಅಸತ್ಯವೇ ಮಿತಿಮೀರಿ ಹೆಚ್ಚಾದಾಗ, ನೀತಿಗಿಂತಲೂ ಅನೀತಿಯೇ ಹೆಚ್ಚಾದಾಗ ಸಮಾಜ ಅವನತಿಯ ಹಾದಿಯನ್ನು ಹಿಡಿಯುವುದು, ರಾಜಕಾರಣದಲ್ಲಿ ಸಜ್ಜನರಿಗಿಂತ ದುರ್ಜನರೇ ಹೆಚ್ಚಾದಾಗ, ಸುಸಂಸ್ಕೃತರಿಗಿಂತ ಅಸಂಸ್ಕೃತರೇ ಹೆಚ್ಚಾದಾಗ ಸತ್ಯವಂತರಿಗಿಂತ ಅಸತ್ಯವಂತರೇ ಹೆಚ್ಚಾದಾಗ ಸಾಮಾಜಿಕ ವ್ಯವಸ್ಥೆ ಕುಸಿದು ಬೀಳುತ್ತದೆ. ಆಗ ವಿಪ್ಲವ ಆರಂಭವಾಗುತ್ತದೆ. ಇದು ಪ್ರಕೃತಿಯ ನಿಯಮ, ಗೊಡ್ಡು ಪುರಾಣದ ಕಥೆಯಲ್ಲ.

ಸ್ವರಾಜ್ಯ ಪ್ರಾಪ್ತಿಯಾದ ಮೇಲೆ ಓಟಿಗಾಗಿ ಮತ್ತು ಅಧಿಕಾರಕ್ಕಾಗಿ ರಾಜಕಾರಣದ ಹೆಸರಿನಲ್ಲಿ ನಡೆದು ಬಂದಿರುವ ಅಹಿತ ಪೈಪೋಟಿಯ ದೆಸೆಯಿಂದ ಸಾರ್ವಜನಿಕ

ಜೀವನ ದ್ವೇಷ ಅಸೂಯೆಗಳಿಂದ, ದುರಾಚರ ಭ್ರಷ್ಟಾಚಾರಗಳಿಂದ ತುಂಬಾ ಕಲುಷಿತವಾಗಿದೆ. ಸತ್ಯಕ್ಕೂ ಅಸತ್ಯಕ್ಕೂ, ನೀತಿಗೂ, ಅನೀತಿಗೂ ಇರತಕ್ಕ ವ್ಯತ್ಯಾಸವನ್ನು ರಾಜಕಾರಣಿಗಳು ಅಳಿಸಿ ಹಾಕಿದ್ದಾರೆ. ಆದರ್ಶಗಳನ್ನು ಬದಿಗೊತ್ತಿ ಮಾನ, ಮರ್ಯಾದೆಗಳನ್ನು ಬಿಟ್ಟು ಮಾಡಬಾರದ ಕೆಲಸ ಮಾಡುವವರು ಜೀವನದ ಹೋರಾಟದಲ್ಲಿ ಗೆಲ್ಲುತ್ತಾರೆ. ಗೆದ್ದಮೇಲೆ ಅವರು ಗೌರವಸ್ಥರಾಗುತ್ತಾರೆ. ಅವರು ಹೇಳಿದ್ದೇ ಆದರ್ಶವಾಗುತ್ತದೆ. ಆದರ್ಶಕ್ಕೆ ಅಂಟಿಕೊಂಡು, ಮಾನಮರ್ಯಾದೆಗಳಿಗೆ ಅಂಜಿ ಕೆಲಸ ಮಾಡುವವರು, ಕೆಲಸಕ್ಕೆ ಬಾರದ ಮುಠ್ಠಾಳರೆನಿಸಿಕೊಳ್ಳುತ್ತಾರೆ. ಇದು ನಮ್ಮ ಇಂದಿನ ಸಂಸ್ಕೃತಿ.

ಈ ಸಂದರ್ಭದಲ್ಲಿ ಆಧ್ಯಾತ್ಮಿಕ ವಿಷಯಗಳಿಗೆ ಸಂಬಂಧ ಪಟ್ಟ ಕೆಲವು ವಿಚಾರಗಳನ್ನು ಪ್ರಸ್ತಾಪಿಸಿರುವುದು ಸೂಕ್ತ. ಇಂದು ನಾವು ವಿಜ್ಞಾನಯುಗದಲ್ಲಿದ್ದೇವೆ. ವಿಚಾರವಂತರು, ಧಾರ್ಮಿಕ ಸಿದ್ಧಾಂತಗಳನ್ನೂ, ಆಚರಣೆಗಳನ್ನೂ, ವೈಚಾರಿಕ ಒರೆಗಲ್ಲಿಗೆ ಒರೆಹಚ್ಚಿ ನೋಡುತ್ತಾರೆ. ವೈಜ್ಞಾನಿಕ ಸಿದ್ಧಾಂತಗಳಿಗೆ ವಿರುದ್ಧವಾದುದನ್ನು ತಿರಸ್ಕರಿಸುತ್ತಾರೆ. ವಿಚಾರ ಮಾಡುವ ಶಕ್ತಿಯಿಲ್ಲದ ಕೆಲವರು ಅಲ್ಪಸ್ವಲ್ಪ ತಿಳಿದುಕೊಂಡು ವಿಚಾರವಾದಿಗಳೆಂದು ಹೇಳಿಕೊಳ್ಳುತ್ತಾ ಒಳ್ಳೆಯದು, ಕೆಟ್ಟದ್ದು ಎಂಬ ವಿವೇಚನೆ ಇಲ್ಲದೆ ಸಾರಾಸಗಟು ಎಲ್ಲಾ ಧಾರ್ಮಿಕ ಮತ್ತು ದಾರ್ಶನಿಕ ಸಿದ್ಧಾಂತಗಳನ್ನೂ ಅಲ್ಲ ಗಳೆಯುತ್ತಿದ್ದಾರೆ. ದೃಷ್ಟಿಗೆ ಅಗೋಚರವಾದುದೆಲ್ಲವೂ ಶೂನ್ಯವಲ್ಲ; ಮನಸ್ಸಿಗೆ ನಿಲುಕದೇ ಇರುವುದೆಲ್ಲವೂ ಮಿಥ್ಯವಲ್ಲ. ವಿಶ್ವದಲ್ಲಿ ಮಾನವರ ಅಲ್ಪಮತಿಗೆ ಗೊತ್ತಾಗದ ನಿಗೂಢವಿಚಾರಗಳು ಹೇರಳವಾಗಿವೆಯೆಂಬುದನ್ನು ವಿಚಾರವಾದಿಗಳು ಮರೆಯಬಾರದು. ಮಾನವರ ಹುಟ್ಟು, ಸಾವುಗಳು ಅವರ ಕೈಯಲಿಲ್ಲ. ಮಾನವನಿಗಿಂತ ಮಿಗಿಲಾದ ಯಾವುದೋಶಕ್ತಿ ಹುಟ್ಟು ಸಾವುಗಳನ್ನು ನಿಯಂತ್ರಿಸುತ್ತದೆ. ವಿಶ್ವರಚನೆಯನ್ನೂ ಸೃಷ್ಟಿ ವೈಚಿತ್ರವನ್ನೂ, ಪ್ರಕೃತಿಯ ವರ್ತನೆಯನ್ನೂ ಗಮನಿಸಿದರೆ ಸೃಷ್ಟಿ, ಸ್ಥಿತಿ, ಲಯ ಇವುಗಳಿಗೆ ಕಾರಣ ಕರ್ತೃವಾದ ಶಕ್ತಿ ಮಾನವನಿಗಿಂತಲೂ ಕೋಟ್ಯಾನು ಕೋಟಿ ಪಾಲು ಬುದ್ಧಿಶಾಲಿಯಾಗಿರಬೇಕೆಂದು ಭಾಸವಾಗುತ್ತದೆ. ಇಡೀ ವಿಶ್ವದಲ್ಲಿರುವ ಚರಾಚರ ವಸ್ತುಗಳನ್ನು ಸೃಷ್ಟಿಸಿರುವ ಆ ಮಹಾಶಕ್ತಿಯನ್ನು ಕೆಲವರು ಪ್ರಕೃತಿ ಎಂದು ಕರೆಯುತ್ತಾರೆ. ಕೆಲವರು ದೇವರು ಎಂದು ಕರೆಯುತ್ತಾರೆ. ದೇವರೆಂದು ಕರೆದರೂ ಒಂದೇ ಪ್ರಕೃತಿ ಎಂದು ಕರೆದರೂ ಒಂದೇ.

೦೩.೦೭.೧೯೭೯

# ಜನತಂತ್ರದ ಸಮಾಧಿಗೆ ಸಿದ್ಧತೆಯೇ?

ನಮ್ಮವರೇ ನಮ್ಮ ರಾಷ್ಟ್ರದ ಶತ್ರುಗಳೆಂಬುದನ್ನು ನಮ್ಮ ಇತಿಹಾಸ ಸಾರಿಸಾರಿ ಹೇಳಿದೆ. ಶತಮಾನಗಳ ಹಿಂದೆ ನಮ್ಮ ಪೂರ್ವಿಕರು ರಾಷ್ಟ್ರದ ಹಿತವನ್ನು ಮರೆತು ಸ್ವಾರ್ಥಸಾಧನೆಗಾಗಿ ಅಥವಾ ದ್ವೇಷ ಸಾಧನೆಗಾಗಿ ಕಚ್ಚಾಡಿ ಪರಕೀಯರ ಅಕ್ರಮಣಕ್ಕೆ ಅಪ್ರತ್ಯಕ್ಷ ಆಹ್ವಾನ ನೀಡಿದರು. ಒಗ್ಗಟ್ಟು ತಪ್ಪಿದ ಈ ರಾಷ್ಟ್ರವನ್ನು ಪರಕೀಯರು ತಂಡೋಪ ತಂಡವಾಗಿ ಒಬ್ಬರಾದ ಮೇಲೊಬ್ಬರಂತೆ ಕೊಳ್ಳೆ ಹೊಡೆದರು, ಆಕ್ರಮಿಸಿದರು, ಆಳಿದರು. ದೇಶ ದ್ರೋಹಿಗಳಾದ ನಮ್ಮವರು ಕೆಲವರು ಸ್ವಾರ್ಥಕ್ಕಾಗಿ ಪರಕೀಯರೊಡನೆ ಶಾಮೀಲಾಗಿ ಅಕ್ರಮಣಕ್ಕೆ ಸಹಾಯಮಾಡಿದರು. ಉಳಿದವರು ಒಗ್ಗಟ್ಟಾಗಿ ಶತ್ರುಗಳನ್ನು ಎದುರಿಸದೆ ರಣಹೇಡಿಗಳಂತೆ ಮೂಕಪ್ರೇಕ್ಷಕರಾಗಿ ತೆಪ್ಪಗಿದ್ದರು. ಹಲವು ಶತಮಾನಗಳ ಕಾಲ ನಮ್ಮ ಪೂರ್ವಿಕರು ಸ್ವಾಭಿಮಾನ ರಾಷ್ಟ್ರಭಿಮಾನಗಳನ್ನು ತೊರೆದು, ಕ್ಷಾತ್ರ ಗುಣಗಳನ್ನು ಮರೆತು, ಸ್ವಾರ್ಥಕ್ಕಾಗಿ ಆಳರಸರನ್ನು ಹಾಡಿ, ಹೊಗಳಿ ಪೂಜಿಸಿ ಸಮಯ ಸಾಧಕರಂತೆ ವರ್ತಿಸಿ ಗುಲಾಮರಂತೆ ಬಾಳಿದರು. ಪೂರ್ವಿಕರ ಈ ಕೆಲವು ಗುಣಗಳನ್ನು ನಮ್ಮ ರಾಷ್ಟ್ರ ಜೀವನದಲ್ಲಿ ನಾವು ಇಂದೂ ನೋಡಬಹುದಾಗಿದೆ. ಇತಿಹಾಸದಿಂದ ನಾವು ಯಾವ ಪಾಠವನ್ನೂ ಕಲಿತಂತೆ ತೋರಲಿಲ್ಲ.

ಸ್ವರಾಜ್ಯ ಬಂದು ೩೩ ವರ್ಷಗಳ ನಂತರ ಈಗ ಪುನಃ ಸ್ವಾರ್ಥ ಸಾಧಕ, ಸಮಯ ಸಾಧಕ ಪ್ರವೃತ್ತಿಗಳೂ, ವಿಚ್ಛಿದ್ರ ಪ್ರವೃತ್ತಿಗಳೂ ಅಧಿಕಶಕ್ತಿಯಿಂದ ಈ ರಾಷ್ಟ್ರದಲ್ಲಿ ತಲೆ ಎತ್ತಿಕೊಂಡಿವೆ, ಸತ್ಯ ಅಹಿಂಸೆಗಳಿಂದ ಕೂಡಿದ ಅಂದೋಳನದಿಂದ ಕೇವಲ ೩೩ ವರ್ಷಗಳ ಹಿಂದೆ ಸ್ವರಾಜ್ಯವನ್ನು ಪಡೆದಿದ್ದ ಈ ರಾಜ್ಯದಲ್ಲಿ ದಿನಬೆಳಗಾದರೆ ಮಂತ್ರಿಗಳ, ಸರ್ಕಾರಿ ಅಧಿಕಾರಿಗಳ, ಶಾಸಕರೆ ಮುಂತಾದ ರಾಜಕಾರಣಿಗಳ ಲಂಚದ ಕಾರು ಬಾರುಗಳ ಸುದ್ದಿ , ದಿನಬೆಳಗಾದರೆ ದೇಶದಾದ್ಯಂತ ಮುಷ್ಕರ, ಹರತಾಳ, ಮುಂತಾದ ಹಲವು ವಿಧವಾದ ಚಳುವಳಿಗಳ ಸುದ್ದಿ. ದೇಶದ ಆದ್ಯಂತ ಏನೋ ಒಂದು ವಿಧವಾದ ಅಶಾಂತಿಯ ವಾತಾವರಣ ಉಂಟಾಗಿರುವಂತೆ ಕಾಣುತ್ತದೆ. ಪುರಾತನ ಕಾಲದಲ್ಲಿ ಭಾರತವು ಸತ್ಯವಂತರ ಸುಸಂಸ್ಕೃತರ ಶಾಂತಿ ಪ್ರಿಯರ, ಮೇಧಾವಿಗಳ ನಾಡೆಂದು ಹೆಸರು ವಾಸಿಯಾಗಿತ್ತು. ಇಂದು ಇಡೀ ರಾಷ್ಟ್ರಕ್ಕೆ ಅನಾಚಾರ, ದುರಾಚಾರ, ಹಿಂಸಾಚಾರ, ಭ್ರಷ್ಟಾಚಾರ, ಅನ್ಯೈಕಮತ್ಯ ಮುಂತಾದವುಗಳ ಸಾಂಕ್ರಾಮಿಕ ಜಾಡ್ಯ ತಗಲಿರುವಂತೆ ತೋರುತ್ತದೆ. ನಮ್ಮಲ್ಲಿ ಕೆಲವರು ಸ್ವಾತಂತ್ರ್ಯವೆಂದರೆ ಸ್ವೇಚ್ಛೇ ಎಂದು

ತಿಳಿದು ಕೊಂಡಂತೆ ತೋರುತ್ತದೆ. ಕೆಲವರಂತೂ ಅನಾಗರಿಕ ರಾಕ್ಷಸರಂತೆ ವರ್ತಿಸುತ್ತಿದ್ದಾರೆ.

ಇಡೀ ರಾಷ್ಟ್ರ ಹರತಾಳ, ಮುಷ್ಕರ, ಮುಂತಾದ ಚಳವಳಿಗಳ ಮತ್ತು ಅಧಿಕಾರ ಲಾಲಸೆಯ ಅಖಾಡದಂತಾಗಿದೆ. ರಾಷ್ಟ್ರದ ಎಲ್ಲಾ ವರ್ಗಗಳ ಜನರೂ ಕೂಡಾ ಚಳುವಳಿಯ ಹಾದಿಯನ್ನು ಹಿಡಿದಿರುತ್ತಾರೆ. ವಿದ್ಯಾರ್ಥಿಗಳ ಮುಷ್ಕರ, ಉಪಾಧ್ಯಾಯರ ಮುಷ್ಕರ, ವೈದ್ಯರ ಮುಷ್ಕರ ಸರ್ಕಾರದ ವಿವಿಧ ಇಲಾಖೆಗಳ ನೌಕರರ ಮುಷ್ಕರ, ಕೇಂದ್ರ ಮತ್ತು ರಾಜ್ಯ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟ ಕಾರ್ಖಾನೆಗಳಲ್ಲಿ ಮತ್ತು ವಿವಿಧ ಸಂಸ್ಥೆಗಳಲ್ಲಿ ಕೆಲಸಮಾಡುವ ನೌಕರರ ಮತ್ತು ಸಂಸ್ಥೆಗಳಲ್ಲಿ ಕೆಲಸಮಾಡುವ ನೌಕರರೂ ಸಹ ಚಳುವಳಿಗಳನ್ನು ನಡೆಸುತ್ತಿದ್ದಾರೆ. ಜನರ ರಕ್ಷಣೆಯ ಭಾರವನ್ನು ಹೊಂದಿರುವ ಪೊಲೀಸರೂ ಕೂಡ ಕೆಲವು ಕಡೆಗಳಲ್ಲಿ ಚಳುವಳಿಯ ಹಾದಿಯನ್ನು ಹಿಡಿದಿರುವುದು ಈ ದೇಶದ ದೌರ್ಭಾಗ್ಯ. ತಮಗಿಂತ ಆರ್ಥಿಕ ದೃಷ್ಟಿಯಿಂದ ಎಷ್ಟೋ ಉತ್ತಮ ಸ್ಥಿತಿಯಲ್ಲಿರುವ ಸರ್ಕಾರಿ ನೌಕರರೂ ಪಟ್ಟಣಗಳಲ್ಲಿರುವ ಸುಸಂಘಟಿತ ಕಾರ್ಮಿಕರೂ ಆಗಾಗ ಮುಷ್ಕರ ಹೂಡಿ ತಮ್ಮ ಸ್ಥಿತಿಗತಿಗಳನ್ನು ಉತ್ತಮ ಪಡಿಸಿಕೊಳ್ಳುವುದನ್ನು ನೋಡಿದ ರೈತರೂ ಸಹ ನಿರ್ವಾಹವಿಲ್ಲವೆ ಈಚೆಗೆ ಚಳುವಳಿಯ ಹಾದಿಯನ್ನು ಹಿಡಿದಿರುತ್ತಾರೆ.

ಸಮಾಜಘಾತುಕ, ರಾಷ್ಟ್ರಘಾತುಕ ವ್ಯಕ್ತಿಗಳ ತಂಡ ದಿನೇ ದಿನೇ ಹೆಚ್ಚಾಗುತ್ತಾ ಇದೆ. ಇದರ ಪರಿಣಾಮವಾಗಿ ಕಳವು, ಕೊಲೆ, ದರೋಡೆ, ಹೆಂಗಸರ ಮಾನಭಂಗ ಮುಂತಾದ ಕಾನೂನು ಬಾಹಿರ ಹೀನಕತೃತ್ಯಗಳು ಭಯಾನಕ ರೀತಿಯಲ್ಲಿ ಹೆಚ್ಚಾಗುತ್ತಾ ಇವೆ. ಅವಿದ್ಯಾವಂತ ಪುಂಡುಪೋಕರಿಗಳಿಗಿಂತ ವಿದ್ಯಾವಂತ ಪುಂಡುಪೋಕರಿಗಳ ಹಾವಳಿಯೇ ಹೆಚ್ಚಾಗಿದೆ. ಇಂದು ಈ ದೇಶದಲ್ಲಿರುವ ಸ್ಥಿತಿಯನ್ನು ನೋಡಿದರೆ ನಾವು ವಿಚಾರಶಕ್ತಿಯನ್ನೂ, ಬುದ್ಧಿಶಕ್ತಿಯನ್ನೂ, ರಾಷ್ಟ್ರ ಪ್ರೇಮವನ್ನೂ, ಮಾನವೀಯತೆಯನ್ನೂ ಸಂಪೂರ್ಣವಾಗಿ ಕಳೆದುಕೊಂಡಿರುವಂತೆ ಭಾಸವಾಗುತ್ತದೆ. ಈಗಿರುವ ಜನನಾಯಕರೂ, ಜನರೂ ೧೯೪೭ರ ಹಿಂದೆ ಈ ದೇಶದಲ್ಲಿ ಇದ್ದಿದ್ದರೆ ನಮಗೆ ಖಂಡಿತವಾಗಿಯೂ ಸ್ವರಾಜ್ಯ ಲಭಿಸುತ್ತಿರಲಿಲ್ಲವೆಂದು ನನ್ನ ಭಾವನೆ; ಇಂದಿರುವ ಸಮಯ ಸಾಧಕ ಸ್ವಾರ್ಥ ಸಾಧಕ ರಾಜಕಾರಣಿಗಳು ಅಂದು ಈ ದೇಶದಲ್ಲಿ ಇದ್ದಿದ್ದರೆ ಬ್ರಿಟಿಷರು ಅವರನ್ನು ಸುಲಭವಾಗಿ ಕೊಂಡುಕೊಳ್ಳುತ್ತಿದ್ದರು. ಭಾವೀ ಸ್ವರಾಜ್ಯ ಈಗಿರುವ ಸ್ವರೂಪವನ್ನು ತಾಳುತ್ತದೆ ಎಂಬ ಕಲ್ಪನೆ ಮಹಾತ್ಮ ಗಾಂಧಿಯವರಿಗೆ ಅಂದು ಬಂದಿದ್ದರೆ ಬ್ರಿಟಿಷರೇ ಇನ್ನೂ ಕೆಲಕಾಲ ಆಳಲಿ ಎಂದು ಅವರು ಹೇಳುತ್ತಿದ್ದರೋ ಏನೋ.

ಹಿಂದೆ ನಮ್ಮ ಪೂರ್ವಿಕರು ಪರಕೀಯರ ಆಳ್ವಿಕೆಗೆ ಅಪ್ರತ್ಯಕ್ಷ ಆಹ್ವಾನ ನೀಡಿದ್ದರೆ ಇಂದು ನಾವು ನಮ್ಮ ವರ್ತನೆಯಿಂದ ಅರಾಜಕತೆಗೆ ಮತ್ತು ಸರ್ವಾಧಿಕಾರ ಪ್ರಭುತ್ವಕ್ಕೆ ಅಪ್ರತ್ಯಕ್ಷ ಆಹ್ವಾನ ನೀಡುತ್ತಿದ್ದೇವೆ. ಈಗಿರುವ ಪರಿಸ್ಥಿತಿ ಇನ್ನೂ ಹದಗೆಟ್ಟರೆ ಪ್ರಜಾಪ್ರಭುತ್ವ ಖಂಡಿತವಾಗಿಯೂ ಉಳಿಯಲಾರದು ಅಲ್ಲದೆ ರಾಷ್ಟ್ರದ ಐಕ್ಯತೆಗೆ ಮತ್ತು ಭದ್ರತೆಗೆ ಅಪಾಯ ತಟ್ಟಬಹುದೆಂಬುದನ್ನು ಹೇಳಲು ಜ್ಯೋತಿಷಿಗಳು ಬೇಕಾಗಿಲ್ಲ. ಜಗತ್ತಿನ ಇತಿಹಾಸವನ್ನೂ ಮಾನವ ಸ್ವಭಾವವನ್ನೂ, ದೇಶದ ಆಗುಹೋಗುಗಳನ್ನೂ ಚೆನ್ನಾಗಿ ಅರಿತವರು ಮುಂದೇನಾಗಬಹುದೆಂದು ಸುಲಭವಾಗಿ ಊಹಿಸಬಹುದು. ಇಂದಿನ ದುರವಸ್ಥೆಗೆ ಕಾರಣಗಳೇನೆಂಬುದನ್ನೂ, ಕಾರಣಕರ್ತರುಗಳಾರೆಂಬುದನ್ನೂ ಸೂಕ್ಷ್ಮವಾಗಿ ವಿಮರ್ಶಿಸುವುದು ಅಗತ್ಯ. ನನ್ನ ಅಭಿಪ್ರಾಯದಲ್ಲಿ ಇಂದಿನ ಪರಿಸ್ಥಿತಿಗೆ ಜನನಾಯಕರೆನಿಸಿಕೊಂಡಿರುವ ರಾಜಕಾರಣಿಗಳೂ, ಅನುದಿನದ ಆಡಳಿತನಿರ್ವಹಣೆಯ ಹೊಣೆಯನ್ನು ಹೊತ್ತಿರುವ ಸರ್ಕಾರಿ ಅಧಿಕಾರಿಗಳೂ, ಬಹುಮಟ್ಟಿಗೆ ಕಾರಣರು 'ಯಥಾ ರಾಜ ತಥಾ ಪ್ರಜಾ' ಎನ್ನುವಂತೆ ದೇಶದ ಆಗುಹೋಗುಗಳ ಸೂತ್ರವನ್ನು ಹಿಡಿದಿರುವ ಜನನಾಯುಕರೆನಿಸಿಕೊಂಡವರೂ. ಅಧಿಕಾರಿ ವರ್ಗದವರೂ ದೇಶಪ್ರೇಮದಿಂದ ಸತ್ಯಸಂಧತೆಯಿಂದ ಜನ ಸೇವಾ ಮನೋಭಾವದಿಂದ ಆದರ್ಶಪ್ರಾಯರಾಗಿ ವರ್ತಿಸಿದ್ದರೆ ಜನ ಸಾಮಾನ್ಯರೂ ಕೂಡಾ ಅವರ ಮೇಲ್ಪಂಕ್ತಿಯನ್ನು ಅನುಸರಿಸುತ್ತಿದ್ದರು.

ರಾಷ್ಟ್ರಪ್ರೇಮದ ಅಭಾವ, ಭ್ರಷ್ಟಾಚಾರ, ಅಶಿಸ್ತು, ಸ್ವಾರ್ಥಸಾಧಕ ಸಮಯ ಸಾಧಕ ಪ್ರವೃತ್ತಿ, ಗೂಂಡಾಗಿರಿ ಮುಂತಾದವುಗಳು ಮೇಲ್ಗಡೆ ಇರುವವರಲ್ಲಿ ಹುಟ್ಟಿ ನಂತರ ಕೆಳಗಡೆ ಇರುವ ಜನಸಾಮಾನ್ಯರಲ್ಲಿ ಪಸರಿಸುತ್ತದೆ. ನಮ್ಮ ರಾಜಕಾರಣಿಗಳಲ್ಲಿ ಮತ್ತು ಅಧಿಕಾರಿ ವರ್ಗದ ಜನರಲ್ಲಿ ಪ್ರಾಮಾಣಿಕರಿಗಿಂತ ಅಪ್ರಮಾಣಿಕರ ಸಂಖ್ಯೆಯೇ ಹೆಚ್ಚು. ದೇಶಪ್ರೇಮಿಗಳಿಗಿಂತ ಸ್ವಾರ್ಥ ಸಾಧಕರ ಸಂಖ್ಯೆಯೇ ಹೆಚ್ಚು. ರಾಜಕಾರಣಿಗಳಲ್ಲಿ ಕೆಲವರು ಅಧಿಕಾರ ಪಿಪಾಸೆಯ ತೋಳಗಳಂತೆ ವರ್ತಿಸಿದರೆ, ಅಧಿಕಾರಿಗಳಲ್ಲಿ ಕೆಲವರು ಲಂಚಪಿಪಾಸೆಯ ರಣ ಹದ್ದುಗಳಂತೆ, ವರ್ತಿಸುತ್ತಾರೆ. ರಾಜಕಾರಣಿಗಳು ಅಧಿಕಾರ ಸಂಪಾದನೆಗಾಗಿ ಅಥವಾ ಇದ್ದ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಅಥವಾ ಅಕ್ರಮ ಸಂಪಾದನೆಗಾಗಿ ಸದಾ ಮಸಲತ್ತು ಕಿತಾಪತಿಗಳನ್ನು ಮಾಡುತ್ತಾ, ಹಸಿದ ತೋಳಗಳಂತೆ ವರ್ತಿಸುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಪುಂಡುಪೋಕರಿಗಳೂ, ಸಮಾಜ ಘಾತುಕ ವ್ಯಕ್ತಿಗಳೂ ಅಲ್ಲಲ್ಲಿ ಹೆಚ್ಚು ಸಂಖ್ಯೆಯಲ್ಲಿ ರಾಜಕೀಯ ಪಕ್ಷಗಳಿಗೆ ನುಸುಳಿಕೊಂಡಿದ್ದಾರೆ. ಅವರಲ್ಲಿ ಕೆಲವರು ರಾಜಕೀಯ ಮುಖಂಡರೂ ಆಗಿದ್ದಾರೆ.

ರಾಜಕಾರಣಿಗಳಲ್ಲಿ ಕೆಲವರು ಆಗಬೇಕಾದುದನ್ನು ಆಗದಂತೆ ಮಾಡುತ್ತಾರೆ. ಆಗಬಾರದುದನ್ನು ಆಗುವಂತೆಮಾಡುತ್ತಾರೆ. ಈ ದೇಶದಲ್ಲಿ ನಡೆಯುವ ಹಲವು ಚಳವಳಿಗಳಿಗೆ ರಾಜಕಾರಣಿಗಳೇ ಸೂತ್ರಧಾರಿಗಳಾಗಿರುತ್ತಾರೆ. ಈ ಮಾತು ಆಡಳಿತ ಪಕ್ಷದಲ್ಲಿರುವವರಿಗೂ ಅನ್ವಯಿಸುತ್ತದೆ. ಕೆಲಕಡೆಗಳಲ್ಲಿ ಕೆಲವು ಮಂತ್ರಿಗಳೂ ಶಾಸಕರೂ ತಮ್ಮ ರಾಜಕಾರಣಕ್ಕಾಗಿ ಡಕಾಯಿತರ ತಂಡಗಳನ್ನೂ ಸಹ ಸಾಕಿಕೊಂಡಿರುತ್ತಾರೆಂದು ನಾನು ಕೇಳಿದ್ದೇನೆ. ಕೆಲವು ರಾಜಕಾರಣಿಗಳು ತಮ್ಮ ರಾಜಕಾರಣಕ್ಕೆ ಬೇಕಾಗುವ ಹಣದ ಸಂಗ್ರಹಣೆಗಾಗಿ ಕಳ್ಳನೋಟುಗಳ ತಯಾರಿ, ಕಳ್ಳಭಟ್ಟಿ ಸಾರಾಯಿ ತಯಾರಿ, ಕಳ್ಳ ಸಾಗಾಣಿಕೆ, ಕಾಳಸಂತೆ ವ್ಯಾಪಾರ ಮುಂತಾದ ದುರ್ವ್ಯವಹಾರಗಳಲ್ಲಿ ತೊಡಗಿರುವ ಜನರ ಸಹಾಯವನ್ನು ಪಡೆಯುತ್ತಿದ್ದಾರೆಂಬುದು ಜನಜನಿತವಾಗಿ ಗೊತ್ತಿರುವ ಸುದ್ದಿ. ಅಧಿಕಾರಸ್ಥಾನದಲ್ಲಿರುವ ಕೆಲವು ರಾಜಕೀಯ ಮುಖಂಡರು ತಮಗಾಗದವರನ್ನು ತುಳಿಯಲಿಕ್ಕಾಗಿ ಮತ್ತು ತಮ್ಮ ರಾಜಕಾರಣಕ್ಕಾಗಿ ತಾವು ಅಕ್ರಮವಾಗಿ ಸಂಗ್ರಹಿಸಿದ ಕಳ್ಳಹಣದಿಂದ ಪುಂಡರ ತಂಡಗಳನ್ನು ನಿರ್ಮಿಸಿಕೊಂಡಿರುತ್ತಾರೆ ತಮಗಾಗದವರ ಮೇಲೆ ಆ ಪುಂಡರನು 'ಛೂ' ಬಿಡುತ್ತಾರೆ. ಈ ಪುಂಡರು ಸಾಕಿದ ಬೇಟೆಯ ನಾಯಿಗಳಂತೆ ತಮ್ಮ ಯಜಮಾನರ ವಿರೋಧಿಯ ಮೇಲೆ ಬೀಳುತ್ತಾರೆ.

ನಾಡಿನ ಬಿಡುಗಡೆಯ ಹೋರಾಟ ನಡೆಯುತ್ತಿದ್ದಾಗ ಜನನಾಯಕರೆನಿಸಿಕೊಂಡವರು ರಾಷ್ಟ್ರದ ಹಿತಕ್ಕಾಗಿ ತಮ್ಮ ಹಿತವನ್ನು ಬಲಿಕೊಡಲು ಹಿಂಜರಿಯುತ್ತಿರಲಿಲ್ಲ. ರಾಜಕಾರಣದಲ್ಲಿರುವವರು ಅಧಿಕಾರಕ್ಕಾಗಿ ಆಸೆಪಡುವುದು ಸ್ವಾಭಾವಿಕ. ಆದರೆ ನಮ್ಮ ದೇಶದ ರಾಜಕಾರಣಿಗಳ ಅಧಿಕಾರ ದಾಹ ಅತ್ಯಂತ ಅಸಹ್ಯಕರವಾದ ರೂಪವನ್ನು ತಾಳಿದೆ ಕೆಲವು ರಾಜಕಾರಣಿಗಳು ಅಧಿಕಾರಕ್ಕಾಗಿ ಎಂಥ ಹೀನ ಕೃತ್ಯಗಳನ್ನು ಮಾಡಲೂ ಹಿಂಜರಿಯುವುದಿಲ್ಲ. ಕೆಲವು ರಾಜಕೀಯ ಮುಖಂಡರು ಅಧಿಕಾರ ಸಂಪಾದನೆಗಾಗಿ ಅಥವಾ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಶಾಸಕರನ್ನು ಕಳ್ಳಹಣದಿಂದ ಕೊಂಡುಕೊಂಡಿದ್ದ ಉದಾಹರಣೆಗಳು ಈ ದೇಶದಲ್ಲಿ ಹೇರಳವಾಗಿದೆ. ಒಂದು ಸಾರಿ ಮಂತ್ರಿಯಾದವರು ಸಾಯುವವರೆಗೂ ಮಂತ್ರಿಯಾಗಿರಬೇಕೆಂದು ಹವಣಿಸುತ್ತಾನೆ. ಒಂದು ಸಾರಿ ಶಾಸಕನಾದವನು ಸಾಯುವವರೆಗೂ ಶಾಸಕನಾಗಿರಬೇಕೆಂದು ಸತತ ಪ್ರಯತ್ನಿಸುತ್ತಾನೆ. ಅಧಿಕಾರಕ್ಕಾಗಿ ಒಂದು ಪಕ್ಷದಿಂದ ಇನ್ನೊಂದು ಪಕ್ಷಕ್ಕೆ ಜನಸೇವೆಯ ಹೆಸರಿನಲ್ಲಿ ಹಾರುತ್ತಾರೆ. ಸ್ವರಾಜ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ಕಾಲದಲಿ ರಾಷ್ಟ್ರಾದ್ಯಂತ ರಾಷ್ಟ್ರಭಕ್ತಿ ಉಕ್ಕಿ ಹರಿಯುತಿತ್ತು. ಆದರೆ ಇಂದು ಜನನಾಯಕರೆನಿಸಿಕೊಂಡವರಲ್ಲಿ ಎಷ್ಟು ಜನರು ತಿಂಗಳಿಗೊಮ್ಮೆ ಅಥವಾ ವಾರಕೊಮ್ಮೆಯಾದರೂ ರಾಷ್ಟ್ರದ ಭವಿಷ್ಯವನ್ನು

ಕುರಿತು ಚಿಂತಿಸುತ್ತಾರೊ ನಾನರಿಯೆ. ಸದಾ ಅಧಿಕಾರಕ್ಕಾಗಿ ಮಸಲತ್ತು ಮಾಡುತ್ತಿರುವವರಿಗೆ, ಸದಾ ಹೊಗಳುಭಟ್ಟರಿಂದ ಸಭೆ, ಸಮಾರಂಭಗಳಲ್ಲಿ ಹೊಗಳಿಸಿಕೊಳ್ಳುತ್ತಿರುವವರಿಗೆ ರಾಷ್ಟ್ರದ ಭವಿಷ್ಯವನ್ನಾಗಲೀ ರಾಷ್ಟ್ರದ ಸಮಸ್ಯೆಗಳನ್ನಾಗಲೀ ಕುರಿತು ಚಿಂತಿಸಲು ಸಮಯ ಹೇಗೆ ತಾನೇ ಸಿಕ್ಕುತ್ತದೆ?

ಭ್ರಷ್ಟರಾಜಕಾರಣಿಗಳ ಮತ್ತು ಲಂಚಕೋರ ಅಧಿಕಾರಿಗಳ ಲಂಚದ ಕಾರುಬಾರುಗಳ ವಿಚಾರದಲ್ಲೇ ನೂರಾರು ಸಂಪುಟಗಳನ್ನು ಬರೆಯಬಹುದು. ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದನಂತರ ಕಾಂಗ್ರೆಸ್ ನಾಯಕರು ತಮ್ಮ ಸ್ವಂತ ರಾಜಕಾರಣಕ್ಕಾಗಿ ತಮ್ಮ ಅಧಿಕಾರವನ್ನು ದುರುಪಯೋಗಮಾಡಿಕೊಂಡು ನಾನಾ ವಿಧವಾದ ಅನೀತಿಯ ವಿಧಾನಗಳನ್ನು ಅನುಸರಿಸಿ ಪಕ್ಷದ ನಿಧಿಯನ್ನು ಸಂಗ್ರಹಿಸಲಾರಂಭಿಸಿದರು. ಇದರ ಪರಿಣಾಮವಾಗಿ ನಂತರ ಅಧಿಕಾರಕ್ಕೆ ಬಂದ ಉಳಿದ ಕೆಲವು ಪಕ್ಷದವರೂ ಕೂಡಾ ಇದೇ ವಿಧಾನವನ್ನು ಅನುಸರಿಸಿದರು. ಐದುವರ್ಷಗಳ ಕಾಲ ಶಾಸಕರಾಗಿದ್ದ ಕೆಲವರು ಐದು ಲಕ್ಷದಿಂದ ಐವತ್ತು ಲಕ್ಷರೂಪಾಯಿಗಳವರೆಗೆ ಅಕ್ರಮ ಸಂಪಾದನೆ ಮಾಡಿರುವ ನಿದರ್ಶನಗಳಿವೆ. ಐದು ವರ್ಷಗಳ ಕಾಲ ಮಂತ್ರಿಯಾಗಿದ್ದ ಕೆಲವರು ಐವತ್ತು ಲಕ್ಷದಿಂದ ಒಂದು ಕೋಟಿರೂಪಾಯಿಗಳವರೆಗೆ ಅಕ್ರಮ ಸಂಪಾದನೆ ಮಾಡಿರುವ ಉದಾಹರಣೆಗಳಿವೆ. ಈ ಅಕ್ರಮಸಂಪಾದನೆ ಎಲ್ಲವೂ ಬಡಬಗ್ಗರ ಉದ್ಧಾರದ ನೆಪದಲ್ಲಿಯೇ ಆಗಿದೆ. ತಿಂಗಳಿಗೆ ಸಾವಿರ ರೂಪಾಯಿಗಳ ಸಂಬಳ ಪಡೆಯುವ ಕೆಲವು ಅಧಿಕಾರಿಗಳು ತಿಂಗಳಿಗೆ ಹತ್ತರಿಂದ ಹದಿನೈದು ಸಾವಿರ ರೂಪಾಯಿಗಳವರೆಗೆ ಲಂಚವನ್ನು ಪಡೆದ ಉದಾಹರಣೆಗಳಿವೆ. ಈಗಲೂ ಇಂತಹ ಕಾರು, ಬಾರುಗಳು ಅಲ್ಲಲ್ಲಿ ಸಾರೋದ್ಧಾರವಾಗಿ ನಡೆಯುತ್ತಾ ಇವೆ. ಅಂತೂ ಬಡವರು ಬಡವರಾಗಿಯೇ ಉಳಿದಿದ್ದಾರೆ. ಲಂಚಕೋರ ರಾಜಕಾರಣಿಗಳೂ ಮತ್ತು ಅಧಿಕಾರಿಗಳೂ ಕುಬೇರರಾದರು. ಅಧಿಕಾರ ಸ್ಥಾನದಲಿರುವ ರಾಜಕಾರಣಿಗಳು ಸಮಾಜವಾದ, ಪ್ರಜಾಪ್ರಭುತ್ವ, ಜಾತ್ಯಾತೀತತೆ ಮುಂತಾದ ಘೋಷಣೆಗಳನ್ನು ಮಾಡುತ್ತಾ ಇರುತ್ತಾರೆ. ಆದೆ ಲಂಚ ನಿರ್ಮೂಲನದ ಅವಶ್ಯಕತೆ, ಸ್ವಚ್ಛವಾದ ಆಡಳಿತ ಮತ್ತು ರಾಜಕಾರಣ ಇವುಗಳ ಬಗ್ಗೆ ಪ್ರಸ್ತಾಪವೇ ಇಲ್ಲ. ಕಾರಣಗೊತ್ತೇ ಇದೆ. ಈ ವ್ಯಾಧಿಗಳಿಗೆ ರಾಜಕಾರಣೀಗಳೇ ಕಾರಣ. ಸ್ವಚ್ಛವಾದ ರಾಜಕಾರಣ ಮತ್ತು ದಕ್ಷತೆಯಿಂದ ಕೂಡಿದ ಶುದ್ಧವಾದ ಆಡಳಿತ ಇಲ್ಲದಿದ್ದರೆ ಹೇಗೆ ಬಡವರ ಉದ್ಧಾರವನ್ನು ಮಾಡುತ್ತಾರೆಯೋ ನಾನರಿಯೆ.

ಈ ದೇಶದಲ್ಲಿ ಸುಖೀರಾಜ್ಯ ಲಭಿಸಿರುವುದು ಭ್ರಷ್ಟರಾಜಕಾರಣಿಗಳಿಗೆ, ಲಂಚಕೋರ ಅಧಿಕಾರಿಗಳಿಗೆ ಮತ್ತು ಕಳ್ಳಸಾಗಾಣಿಕೆ, ಕಳ್ಳವ್ಯಾಪಾರ, ಅಕ್ರಮ ದಾಸ್ತಾನು ಮುಂತಾದ

ದುವ್ಯವಹಾರಗಳಲ್ಲಿ ತೊಡಗಿರುವ ಜನರಿಗೆ ಮಾತ್ರ ಉಳಿದ ಜನರ ಪಾಲಿಗೆ ಸುಖೀರಾಜ್ಯ ಬಹುದೂರದ ಕನಸಾಗಿಯೆ ಉಳಿದಿದೆ. ಮೇಲ್ಕಂಡ ಮೂರು ವರ್ಗಗಳಿಗೆ ಸೇರಿದ ಜನರ ಕೈಯಲ್ಲಿರುವ ಕಳ್ಳಹಣದ ಒಟ್ಟು ಮೊತ್ತ ಕೇಂದ್ರ ಮತ್ತು ವಿವಿಧ ರಾಜ್ಯ ಸರ್ಕಾರಗಳ ಒಟ್ಟು ವಾರ್ಷಿಕ ವರಮಾನದ ಎರಡರಷ್ಟು ಅಥವಾ ಅದಕ್ಕಿಂತ ಹೆಚ್ಚು ಇರಬಹುದೆಂದು ನನ್ನ ಅಂದಾಜು. ಈ ಕಳ್ಳ ಹಣದಿಂದಲೇ ರಾಷ್ಟ್ರದಲ್ಲಿ ಹಣದ ಮೊತ್ತ ಹೆಚ್ಚಾಗಿ ಪದಾರ್ಥಗಳ ಬೆಲೆಗಳು ದಿನೇ ದಿನೇ ಗಗನಕ್ಕೇರುತ್ತಿರುವುದು. ಈ ಕಪ್ಪು ಹಣದ ಪ್ರವಾಹವನ್ನು ತಡೆಗಟ್ಟಲು ಸರ್ಕಾರ ನಡೆಸುತ್ತಿರುವವರು ಅಸಮರ್ಥರಾಗಿದ್ದಾರೆ. ಯಾಕೆಂದರೆ ಅವರ ಪೈಕಿ ಕೆಲವರು ತಮ್ಮ ರಾಜಕಾರಣಕ್ಕೆ ಕಪ್ಪು ಹಣದ ಕದೀಮರನ್ನು ಆಶ್ರಯಿಸಿರುತ್ತಾರೆ. ಕಪ್ಪು ಹಣದವರನ್ನು ಮಟ್ಟಹಾಕಿ ಸರ್ಕಾರದ ದುಂದುವೆಚ್ಚವನ್ನು ಕಡಿಮೆಮಾಡುವುದರ ಬದಲು, ಬ್ಯಾಂಕುಗಳು ಜನರಿಗೆ ಕೊಡುವ ಸಾಲದ ಮೊತ್ತವನ್ನೂ, ಬಡ್ಡಿಯದರವನ್ನು ನಿಯಂತ್ರಣ ಮಾಡುವ ಕಾರ್ಯದಲ್ಲಿ ತೊಡಗಿದ್ದಾರೆ. ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕುವ ನೀತಿ, ಸರ್ಕಾರದವರು ಜನರ ನ್ಯಾಯಬದ್ಧವಾದ ಬೇಡಿಕೆಗಳನ್ನು ಸಕಾಲದಲ್ಲಿ ಮತ್ತು ಯೋಗ್ಯರೀತಿಯಲ್ಲಿ ಪರಿಶೀಲಿಸಿ, ನೊಂದವರಿಗೆ ನ್ಯಾಯ ದೊರಕುವಂತೆ ಮಾಡಿದ್ದರೆ ಇಂದು ಕೆಲವು ಚಳುವಳಿಗಳಿಗೆ ಅಸ್ಪದವೇ ಇರುತ್ತಿರಲಿಲ್ಲ. ಉದಾಹರಣೆಗೆ ರೈತರ ಚಳವಳಿಯನ್ನೇ ಕೊಡಬಹುದು.

ಹೀಗೆ ನಾಯಕರೆನಿಸಿಕೊಂಡವರು ದೇಶದ ಹಿತವನ್ನು ಮರೆತು ಸ್ವಾರ್ಥ ಸಾಧಕ ಸಮಯಸಾಧಕ ರಾಜಕಾರಣದಲ್ಲಿ ತೊಡಗಿದಾಗ ಜನರು. ಅದರಲ್ಲೂ ವಿದ್ಯಾವಂತರೆನಿಸಿಕೊಂಡವರು ರಾಷ್ಟ್ರದ ಭವಿಷ್ಯವನ್ನು ಕುರಿತು ತೀವ್ರವಾಗಿ ಚಿಂತಿಸಬೇಕು. ಈ ದೇಶದಲ್ಲಿ ಬುದ್ಧಿವಂತರೆನಿಸಿಕೊಂಡವರು ಮೊದಲಿನಿಂದಲೂ ತಮ್ಮ ಹೊಟ್ಟೆಯಪಾಡಿಗಾಗಿ ಅಧಿಕಾರದಲ್ಲಿದ್ದವರನ್ನು ಆಶ್ರಯಿಸಿ ಅವರ ಪರಾಕುಗಳನ್ನು ಹೇಳಿಕೊಂಡು ಬಾಳುತ್ತಾ ಬಂದಿದ್ದಾರೆ. ಈಗಲೂ ಅದೇ ನಡೆಯುತ್ತಾ ಇದೆ. ಇಂದಿರುವ ಆಶಿಸ್ತು. ಭ್ರಷ್ಟಾಚಾರ ಅಧಿಕಾರಕ್ಕಾಗಿ ಅಹಿತ ಪೈಪೋಟಿ, ಕಳ್ಳವ್ಯವಹಾರಗಳು ಮುಂತಾದವುಗಳಿಗೆ ವಿದ್ಯಾವಂತರು ಕಾರಣ, ಆ ವಿದ್ಯಾವಂತರಲ್ಲಿ. ಇಂದಿನ ವಿದ್ಯಾರ್ಥಿಗಳು ಕೂಡಾ ದೇಶದ ಭವಿಷ್ಯವನ್ನು ಕುರಿತು ಚಿಂತಿಸುವ ಸೂಚನೆ ಕಾಣುವುದಿಲ್ಲ. ಕೆಲವುಕಡೆಗಳಲ್ಲಿ ಸ್ವಾರ್ಥಸಾಧಕ ರಾಜಕಾರಣಿಗಳು ದೇಶವನ್ನು ಹಾಳುಮಾಡಿದ್ದು ಸಾಲದೆ ಶಾಲಾ ಕಾಲೇಜುಗಳಲ್ಲಿ ತಮ್ಮ ಕೈವಾಡವನ್ನು ನಡೆಸಿ ಮುಂದಿನ ಪೀಳಿಗೆಯನ್ನೂ ಸಹ ಹಾಳುಮಾಡುತ್ತಿದ್ದಾರೆ. ಕೆಲವು ಕಡೆಗಳಲ್ಲಿ

ವಿದ್ಯಾರ್ಥಿಗಳು ಈ ಸ್ವಾರ್ಥಸಾಧಕ ರಾಜಕಾರಣಿಗಳ ಕೈ ಗೊಂಬೆಗಳಾಗಿದ್ದಾರೆ. ನಮ್ಮ ದೇಶದ ಯುವಜನಾಂಗದವರು ನಮ್ಮ ದೇಶದ ಸಂಸ್ಕೃತಿಯನ್ನು ಮರೆತಿದ್ದಾರೆ. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ನಿಕೃಷ್ಟವಾದುದನ್ನು ಅನುಸರಿಸುತ್ತಾರೆ. ಪಾಶ್ಚಿಮಾತ್ಯರ ಆಡಂಬರ ಮೋಜಿನ ಜೀವನ ಅವರ ದುಶ್ಚಟ ಇವುಗಳನ್ನು ಚೆನ್ನಾಗಿ ಕಲಿತುಕೊಂಡಿರುತ್ತಾರೆ. ಪಾಶ್ಚಿಮಾತ್ಯರ ಸಾಹಸ ಪ್ರವೃತ್ತಿ, ರಾಷ್ಟ್ರ ಪ್ರೇಮ, ಜ್ಞಾನದಾಹ, ಕಷ್ಟಪಟ್ಟು ಕೆಲಸ ಮಾಡುವ ಪ್ರವೃತ್ತಿ ಮುಂತಾದ ಒಳ್ಳೆಯ ಗುಣಗಳು ನಮ್ಮ ಯುವಜನಾಂಗದ ಮೇಲೆ ಹೆಚ್ಚು ಪ್ರಭಾವ ಬೀರಿಲ್ಲ. ಕೆಲವರು ವಿದ್ಯಾರ್ಥಿಗಳಂತೂ ಅನಾಗರಿಕಗೂಂಡಾಗಳಂತೆ ವರ್ತಿಸುತ್ತಾ ಕ್ಷುಲಕ ಕಾರಣಗಳಿಗಾಗಿ ಅಗಾಗ ಮುಷ್ಕರ ಹೂಡಿ ಉದ್ದೇಶಪೂರ್ವಕವಾಗಿ ಗೊಂದಲ ಎಬ್ಬಿಸುತ್ತಾರೆ. ಇದನ್ನು ನೋಡಿದಾಗ ರಾಷ್ಟ್ರಪ್ರೇಮ ಶಿಸ್ತು, ಸಂಯಮ, ಶೀಲಗಳಿಲ್ಲದ ನಿರುದ್ಯೋಗಿಗಳನ್ನು ಸೃಷ್ಟಿಸಲು ಸರ್ಕಾರದವರು ಬೊಕ್ಕಸದಿಂದ ಕೋಟಿಗಟ್ಟಲೆ ಹಣವನ್ನು ಖರ್ಚುಮಾಡುತ್ತಿರುವುದು ಸೂಕ್ತವೇ ಎಂಬ ಪ್ರಶ್ನೆ ಒಮ್ಮೊಮ್ಮೆ ಸ್ವಾಭಾವಿಕವಾಗಿ ಉದ್ಭವಿಸುತ್ತದೆ. ಈ ಪರಿಸ್ಥಿತಿಗೆ ವಿದ್ಯಾರ್ಥಿಗಳು ಮಾತ್ರ ಕಾರಣರಲ್ಲ, ಅಧ್ಯಾಪಕರೂ, ತಂದೆತಾಯಿಗಳೂ, ಸಾರ್ವಜನಿಕ ನಾಯಕರೂ ಸಹ ಕಾರಣರಾಗಿರುತ್ತಾರೆ.

ಸ್ವರಾಜ್ಯ ಬಂದಂದಿನಿಂದ ಈ ದೇಶದಲ್ಲಿ ಹಕ್ಕುಗಳಿಗಾಗಿ ಹೋರಾಟ ನಡೆದಿದೆಯೇ ಹೊರತು ನಮ್ಮ ಕರ್ತವ್ಯಗಳೇನೆಂಬುದನ್ನು ಯೋಚಿಸುವ ಗೊಡವೆಗೇ ಹೋಗಲಿಲ್ಲ. ಈ ದೇಶದಲ್ಲಿ ಸುಮಾರು ಶೇಕಡ ೭೦ ರಷ್ಟು ಕುಟುಂಬಗಳಿಗೆ ತಿಂಗಳಿಗೆ ೩೦೦ ರೂಪಾಯಿಗಳಷ್ಟು ವರಮಾನ ಸಿಕ್ಕುವುದೂ ದುರ್ಲಭ. ಸರ್ಕಾರಿ ನೌಕರರೂ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟ ಕಾರ್ಖಾನೆಗಳಲ್ಲಿ ಮತ್ತು ಇತರ ಉಧ್ಯಮಗಳಲ್ಲಿ ಕೆಲಸಮಾಡುತ್ತಿರುವ ಕಾರ್ಮಿಕರೂ ಆರ್ಥಿಕ ದೃಷ್ಟಿಯಲ್ಲಿ ಈ ದೇಶದ ಅಸಂಖ್ಯಾತ ಜನರಿಗಿಂತ ಎಷ್ಟೋ ಪಾಲು ಉತ್ತಮವಾಗಿದ್ದಾರೆ. ಕೆಲವು ಸರ್ಕಾರಿ ನೌಕರರಿಗೆ ಸಂಬಳದ ಜೊತೆಗೆ ಹೇರಳವಾದ 'ಗಿಂಬಳ' ಸಿಕ್ಕುತ್ತದೆ. ಹೀಗಿದ್ದಾಗ್ಯೂ ಈ ಎರಡು ವರ್ಗದ ಜನರು ಸಂಬಳ ತುಟಿಭತ್ಯ ಬೋನಸ್ಸುಗಳಿಗಾಗಿ ಪದೇ ಪದೇ ಮುಷ್ಕರ ಹೂಡಿ ಉತ್ಪಾದನೆಯನ್ನೂ ಪ್ರಗತಿಯನ್ನೂ ಸ್ಥಗಿತಗೊಳಿಸುತ್ತಿದ್ದಾರೆ. ಈ ದೇಶದಲ್ಲಿ ಇಲ್ಲದವರ ಗೋಳಾಟಕ್ಕಿಂತ ಇದ್ದವರ ಆರ್ಭಟವೇ ಹೆಚ್ಚಾಗಿದೆ; ಬಹು ಜನರಿಗೆ ಕೆಲಸ ಬಹಳ ಹಗುರವಾಗಿರಬೇಕು. ವರಮಾನ ಮಾತ್ರ ಹೆಚ್ಚಾಗಿರಬೇಕು.

ಇಂದಿನ ದುರವಸ್ಥೆಗೆ ಪರಿಹಾರವೇನೆಂಬುದನ್ನು ಯೋಚಿದಾಗ ದಿಕ್ಕು ತೋಚದೆ ಮಂಕು ಕವಿದಂತಾಗುತ್ತದೆ. ರಾಷ್ಟ್ರದಲ್ಲಿ ಉತ್ತಮ ನಾಯಕರ ಅಭಾವವೇ ಈ

ದುರವಸ್ಥೆಗೆ ಮುಖ್ಯಕಾರಣವಾಗಿದೆ. ರಾಷ್ಟ್ರ ನಾಯಕರೆನಿಸಿಕೊಂಡವರಲ್ಲಿ ನೈತಿಕ ಅಧಿಕಾರದಿಂದ ಮಾತನಾಡಬಲ್ಲ ಆದರ್ಶಪ್ರಾಯರಾದ ನಿಸ್ವಾರ್ಥ ಸತ್ಯಸಂಧ ರಾಷ್ಟ್ರಪ್ರೇಮಿಗಳೊಬ್ಬರೂ ನನ್ನ ಕಣ್ಣಿಗೆ ಕಾಣುವುದಿಲ್ಲ. ನನ್ನ ದೃಷ್ಟಿಮಂದವಾಗಿದ್ದರೂ ಇರಬಹುದು. ಪರಿಸ್ಥಿತಿ ಸುಧಾರಿಸಬೇಕಾದರೆ, ರಾಷ್ಟ್ರ ನಾಯಕರೆನಿಸಿಕೊಂಡವರು ತಮ್ಮನ್ನು ತಾವು ಮೊದಲು ಸುಧಾರಿಸಿಕೊಳ್ಳಬೇಕು. ಆನಂತರ ಲಂಚದಿಂದ ಜಿಡ್ಡು ಹಿಡಿದು, ರಾಜಕಾರಣಿಗಳ, ಹಸ್ತಕ್ಷೇಪದಿಂದ ಕಲುಷಿತವಾಗಿರುವ ಆಡಳಿತಯಂತ್ರವನ್ನು ದುರಸ್ತುಮಾಡಬೇಕು. ಆಡಳಿತದಲ್ಲಿ ಬಿಗಿ, ದರ್ಪ, ಇವುಗಳ ಜೊತೆಗೆ ಮಾನವೀಯತೆ, ಪ್ರಾಮಾಣಿಕತೆ, ಸೇವಾಮನೋಭಾವ ಇರುವಂತೆ ಮಾಡಬೇಕು. ಕೊಳೆತುನಾರುತ್ತಿರುವ ಸಾರ್ವಜನಿಕ ಜೀವನವನ್ನು ಸ್ವಚ್ಛಗೊಳಿಸಬೇಕು. ಭ್ರಷ್ಟಾಚಾರದ ನಿರ್ಮೂಲನಮಾಡಲು, ಕಾನೂನು ಬಾಹಿರ ಕೃತ್ಯಗಳಲ್ಲಿ, ತೊಡಗಿರುವ ದುಷ್ಟರನ್ನು, ಸಮಾಜಘಾತುಕ ವ್ಯಕ್ತಿಗಳನ್ನೂ ಸದೆಬಡಿಯಲು ಮತ್ತು ಅಶಿಸ್ತನ್ನು ಹೋಗಲಾಡಿಸಲು ಉಗ್ರಕ್ರಮ ಕೈಗೊಳ್ಳಬೇಕು.

ರಾಷ್ಟ್ರದ ಎಲ್ಲಾ ಮಕ್ಕಳಿಗೂ ೧೫ ವರ್ಷಗಳ ವಯಸ್ಸು ದಾಟುವವರೆಗೆ ಉಚಿತವಾದ ಕಡ್ಡಾಯ ಶಿಕ್ಷಣಕೊಡುವ ವ್ಯವಸ್ಥೆಮಾಡಬೇಕು. ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ರಾಜಕಾರಣಿಗಳ ಕೈವಾಡವನ್ನು ತಪ್ಪಿಸುವ ಸಲುವಾಗಿ ವಿದ್ಯಾರ್ಥಿ ಸಂಘಗಳನ್ನು ರದ್ದುಪಡಿಸಬೇಕು. ವಿದ್ಯಾರ್ಥಿಗಳೂ, ಸರ್ಕಾರಿ ನೌಕರರೂ ಮುಷ್ಕರ ಮುಂತಾದ ಚಳುವಳಿಗಳಲ್ಲಿ ಭಾಗವಹಿಸುವುದನ್ನು ಕಾನೂನು ಪ್ರಕಾರ ನಿಷೇಧಿಸಬೇಕು. ಶಿಸ್ತನ್ನೂ ಉತ್ಪಾದನೆಯನ್ನೂ ಹೆಚ್ಚಿಸುವ ದೃಷ್ಟಿಯಿಂದ ಕಾರ್ಮಿಕರು ಸಣ್ಣಪುಟ್ಟ ಕಾರಣಗಳಿಗಾಗಿ ಅಥವಾ ಸಣ್ಣಪುಟ್ಟ ವಿವಾದಗಳಿಗಾಗಿ ಮುಷ್ಕರ ಹೂಡುವುದನ್ನು ತಪ್ಪಿಸುವ ಸಲುವಾಗಿ ಕಾರ್ಮಿಕರಿಗೆ ಸಂಬಂಧಪಟ್ಟ ಕಾನೂನಿನಲ್ಲಿ ಬದಲಾವಣೆಯಾಗಬೇಕು. ಜಾತಿ, ಧರ್ಮ, ಮತಗಳ ಬೇದವಿಲ್ಲದೆ ಸರ್ವರಿಗೂ ಅನ್ವಯಿಸುವ ರೀತಿಯಲ್ಲಿ ಕಡ್ಡಾಯವಾದ ಸಂತಾನ ನಿಯಂತ್ರಣ ಜಾರಿಗೆ ಬರಬೇಕು.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸರ್ಕಾರಿ ಬೊಕ್ಕಸದಿಂದ ಖರ್ಚು ಮಾಡುವ ಹಣದಲ್ಲಿ ಶೇಕಡ ಸುಮಾರು ೫೦ ರಷ್ಟು ಹಣ ಅನಾವಶ್ಯಕ ಸಿಬ್ಬಂದಿ ಲಂಚ, ನಿಷ್ಪ್ರಯೋಜಕ ದುಂದುವೆಚ್ಚ ಇವುಗಳ ದೆಸೆಯಿಂದ ಸೋರಿಹೋಗುತ್ತಾ ಇದೆ. ಈ ರೀತಿ ವರ್ಷೇ ವರ್ಷೇ ಸೋರಿಹೋಗುವುದನ್ನು ತಡೆಗಟ್ಟಿದರೆ ಜನರಿಗೆ ತೆರಿಗೆಯ ಹೊರೆಯೂ ಕಡಿಮೆಯಾಗುವುದಲ್ಲದೆ ಹಣದುಬ್ಬರವೂ ಕಡಿಮೆಯಾಗುತ್ತದೆ. ಈ ಬಗ್ಗೆ ಯೋಚನೆ ಮಾಡಲು ನಮ್ಮ ಆಡಳಿತಗಾರರಿಗೆ ಆಸಕ್ತಿಯೂ ಇಲ್ಲ. ವಿರಾಮವೂ ಇಲ್ಲ. ಈ ಬಗ್ಗೆ ಅತಿ ತ್ವರಿತವಾಗಿ ಕ್ರಮಕೈಗೊಳ್ಳುವ ಅವಶ್ಯಕತೆ ಇದೆ. ದೇಶದಲ್ಲಿ ದಿನೇ

ದಿನೇ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಾ ಇದೆ. ಈಗ ಸರ್ಕಾರಿ ನೌಕರಿಯಲ್ಲಿ ಮತ್ತು ಸರ್ಕಾರಿ ಸ್ವಾಮ್ಯಕ್ಕೆ ಸೇರಿದ ಕಾರ್ಖಾನೆ ಮುಂತಾದ ಸಂಸ್ಥೆಗಳಲ್ಲಿ ಕೆಲಸಮಾಡುತ್ತಿರುವವರಿಗಿಂತ ನಿರುದ್ಯೋಗಿಗಳ ಸಂಖ್ಯೆಯೇ ಈ ದೇಶದಲ್ಲಿ ಹೆಚ್ಚಾಗಿದೆ. ಒಂದು ಕಡೆ ವಿದ್ಯಾವಂತ ನಿರುದ್ಯೋಗಿಗಳು ಉದ್ಯೋಗಕ್ಕಾಗಿ ಬೀದಿಯ ಬಿಕಾರಿಗಳಂತೆ ಅಲೆದಾಡುತ್ತಿರುವ ದೃಶ್ಯ, ಇನ್ನೊಂದು ಕಡೆ ಈಗಾಗಲೇ ಉದ್ಯೋಗವನ್ನು ಪಡೆದಿರುವ ಸರ್ಕಾರಿ ನೌಕರರೂ, ಸುಸಂಘಿತ ಕಾರ್ಮಿಕರೂ ಹೆಚ್ಚು ಸಂಬಳ ಸಾರಿಗೆಗಾಗಿ ಪದೇ ಪದೇ ಮುಷ್ಕರ ಹೂಡಿ ರಾಷ್ಟ್ರದ ಪ್ರಗತಿಯನ್ನು ಸ್ಥಗಿತಗೊಳಿಸುವ ದೃಶ್ಯ.

ನಿರುದ್ಯೋಗಿಗಳೆಲ್ಲರಿಗೂ ಸರ್ಕಾರಿ ನೌಕರಿಯನ್ನು ಕೊಡುವುದು ಸಾಧ್ಯವಲ್ಲದ ಮಾತು. ಆದರೆ ಅವರಿಗೆ ಉದ್ಯೋಗದ ಅವಕಾಶಗಳನ್ನು ಒದಗಿಸುವುದು ಸರ್ಕಾರದ ಕರ್ತವ್ಯ. ನಮ್ಮದು ಹಿಂದುಳಿದ ರಾಷ್ಟ್ರ. ರಾಷ್ಟ್ರಾಭಿವೃದ್ಧಿಗೆ ಮಾಡಬೇಕಾದ ಕೆಲಸಗಳು ಹೇರಳವಾಗಿದೆ. ಆ ಕೆಲಸವನ್ನು ಮಾಡಲು ಶಕ್ತರಾದ ಜನರೂ ಹೇರಳವಾಗಿದ್ದಾರೆ. ರಾಷ್ಟ್ರಾಭಿವೃದ್ಧಿಯ ಸಲುವಾಗಿಯೂ ನಿರುದ್ಯೋಗದ ಸಮಸ್ಯೆಯನ್ನು ಬಗೆಹರಿಸುವ ಸಲುವಾಗಿಯೂ. ನಿಷ್ಪೃಹ ಸೇನಾನಿಯೊಬ್ಬನ ನೇತೃತ್ವದಲ್ಲಿ ರಾಷ್ಟ್ರ ಸೇವಾ ಸೇನೆ ಎಂಬ ಒಂದು ಪಡೆಯನ್ನು ರಚಿಸಬೇಕು. ಉದ್ಯೋಗವನ್ನು ಬಯಸುವ ಎಲ್ಲಾ ನಿರುದ್ಯೋಗಿಗಳೂ ಈ ಪಡೆಗೆ ಸೇರುವ ಅವಕಾಶ ಇರಬೇಕು. ಈ ಪಡೆಯನ್ನು ಸೇರುವವರು ವಿದ್ಯಾವಂತರಾಗಲೀ, ಅವಿದ್ಯಾವಂತರಾಗಲೀ ರಾಷ್ಟ್ರದ ಪುನರ್‌ನಿರ್ಮಾಣಕ್ಕೆ ಸಹಾಯಕವಾಗುವ ಎಲ್ಲಾ ಕೆಲಸಗಳನ್ನೂ ಮಾಡಲು ಸಿದ್ಧರಾಗಿರಬೇಕು. ಅವರಿಗೆ ಸೈನಿಕ ಶಿಕ್ಷಣವನ್ನು ಕೊಡಬೇಕು ಮತ್ತು ಅವರಿಗೆ ಜೀವನ ನಿರ್ವಹಿಸುವಷ್ಟು ಕನಿಷ್ಟ ವೇತನವನ್ನೂ ಕೊಡಬೇಕು. ಅವರಿಗೆ ತಾವು ರಾಷ್ಟ್ರಸೇವೆಯ ಕಾರ್ಯದಲ್ಲಿ ತೊಡಗಿದ್ದೇವೆಂಬ ಭಾವನೆ ಮೂಡುವಂತೆ ಮಾಡಬೇಕು. ಈ ಪಡೆಯ ಕಾರ್ಯ ನಿರ್ವಹಣೆಯಲ್ಲಿ ಲಂಚಕೋರ ಅಧಿಕಾರಿಗಳ ಮತ್ತು ರಾಜಕೀಯ ಮುಖಂಡರುಗಳ ಕೈವಾಡವಿಲ್ಲದಂತೆ ಇರಬೇಕು. ಈ ವ್ಯವಸ್ಥೆಯಿಂದ ನಮ್ಮ ಯುವಕರಲ್ಲಿ ಸರ್ಕಾರಿ ನೌಕರಿಯ ಗುಮಾಸ್ತಗಿರಿ ಮತ್ತು ಗುಲಾಮಗಿರಿಯ ಬಗ್ಗೆ ಇರುವ ಗೀಳು ಕಡಿಮೆಯಾಗುತ್ತದೆ. ಎಲ್ಲಾ ಕೆಲಸಗಳಲ್ಲಿಂಋೂ ಕಾಯಕ ಗೌರವ ಇದೆ ಎಂಬ ಭಾವನೆ ಬೆಳೆಯುತ್ತದೆ. ರಾಷ್ಟ್ರಾಭಿವೃದ್ಧಿಯ ಕಾರ್ಯಗಳೂ ತ್ವರಿತವಾಗಿ ನಡೆಯಲು ಅವಕಾಶವಾಗುತ್ತದೆ. ಕೆಲಸಮಾಡಲು ಮನಸ್ಸಿಲ್ಲದೆ ಉಂಡಾಡಿಗುಂಡರಂತೆ ತಿರುಗುತ್ತಿರುವವರನ್ನೂ ಪುಂಡು ಪೋಕರಿಗಳನ್ನೂ ಕಾನೂನು ಬಾಹಿರ ಕೃತ್ಯಗಳಲ್ಲಿ ತೊಡಗಿರುವ ಕೇಡಿಗಳನ್ನೂ ಬಿಕ್ಷುಕರಲ್ಲಿ ಗಟ್ಟಿಮುಟ್ಟಾದವರನ್ನೂ ಒಟ್ಟುಸೇರಿಸಿ ಅವರಿಗಾಗಿ

ಒಂದು ಪಡೆಯನ್ನು ರಚಿಸಿ ಅವರಿಂದ ಕಡ್ಡಾಯವಾಗಿ ಕೆಲಸವಾಡಿಸುವ ವ್ಯವಸ್ಥೆಯಾಗಬೇಕು.

ಇಂದು ಹಳ್ಳಿಗರ ವರಮಾನಕ್ಕೂ, ಪಟ್ಟಣಿಗರ ವರಮಾನಕ್ಕೂ, ಅಜಗಜಾಂತರ ಅಂತರವಿದೆ. ಅಂತೆಯೇ ಬಡವರ ವರಮಾನಕ್ಕೂ ಭಾಗ್ಯವಂತರ ವರಮಾನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಈ ಅಂತರವನ್ನು ಕಡಿಮೆಮಾಡಲು ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆಗಳಾಗಬೇಕು. ಪದಾರ್ಥಗಳ ಬೆಲೆ ದಿನೇ ದಿನೇ ಹೆಚ್ಚಾಗಲು ನಮ್ಮ ತೆರಿಗೆಯ ಪದ್ಧತಿಯೂ ಕೂಡಾ ಒಂದು ಕಾರಣವಾಗಿರುತ್ತದೆ. ಜನರು ಉಪಯೋಗಿಸುತ್ತಿರುವ ಪದಾರ್ಥಗಳ ಮತ್ತು ಸಾಧನ ಸಲಕರಣೆಗಳ ಮೇಲೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವರ್ಷೇ ವರ್ಷೇ ತೆರಿಗೆಯನ್ನು ವಿಧಿಸುತ್ತಾ ಬಂದಿರುವುದರಿಂದ, ಇವುಗಳ ಬೆಲೆ ಹೆಚ್ಚುತ್ತಾ ಬಂದಿದೆ. ಆದ್ದರಿಂದ ತೆರಿಗೆಯ ಪದ್ಧತಿಯಲ್ಲಿ ಕ್ರಾಂತಿಕಾರಕ ಬದಲಾವಣೆಗಳಾಗಬೇಕಾಗಿದೆ. ಈ ಲೇಖನವನ್ನು ಓದಿದವರಲ್ಲಿ ಕೆಲವರು ನನ್ನನ್ನು ಕಮ್ಯುನಿಸ್ಟ್ ಎಂದು ಭಾವಿಸಬಹುದು. ಕೆಲವರು ವಾಸ್ತವಿಕತೆಯನ್ನು ಅರಿಯದನೆಂದು ಭಾವಿಸಬಹುದು. ಲಂಚಕೋರರೂ, ಲಾಭಕೋರರೂ ನನ್ನ ಮೇಲೆ ವಿಷವನ್ನು ಕಾರಬಹುದು.

ಈ ದೇಶದಲ್ಲಿರುವ ಹಲವು ಸಮಸ್ಯೆಗಳಿಗೆ ಕಮ್ಯೂನಿಸಂ ಶಾಶ್ವತ ಪರಿಹಾರ ನೀಡಬಹುದೆಂಬ ಯೋಚನೆ ನನ್ನ ತಲೆಯಲ್ಲಿ ಆಗಾಗ ಸುಳಿದಾಡಿದದು ನಿಜ. ಆದರೆ ರಷ್ಯಾದಲ್ಲಿ ಸ್ಟಾಲಿನ್ ಆಳ್ವಿಕೆಯಲ್ಲಿ ಮತ್ತು ಈಚೆಗೆ ಕಾಂಬೋಡಿಯಾದಲ್ಲಿ ಪಾಲಪಾಟ್ ಆಳ್ವಿಕೆಯಲ್ಲಿ ಕಮ್ಯೂನಿಸಂ ಹೆಸರಿನಲ್ಲಿ ನಡೆದ ನರಮೇಧವನ್ನು ಸ್ಮರಿಸಿಕೊಂಡಾಗ ಮೈಜುಂ ಎನ್ನುತ್ತದೆ. ಸ್ಟಾಲಿನ್ ಆಳ್ವಿಕೆಯಲ್ಲಿ ಸುಮಾರು ಇಪ್ಪತ್ತು ದಶಲಕ್ಷ ಜನರೂ ಪಾಲಪಾಟ್ ಆಳ್ವಿಕೆಯಲ್ಲಿ ಕಾಂಬೋಡಿಯಾದ ಐದನೇ ಒಂದು ಭಾಗದಷ್ಟು ಜನರೂ ಕ್ರಾಂತಿಕಾಳಿಗೆ ಬಲಿಯಾದರೆಂದು ಕೇಳಿದ್ದೇನೆ. ಭಾರತದ ಕಮ್ಯೂನಿಸ್ಟರು ಈಗ 'ಪ್ರಜಾಪ್ರಭುತ್ವ' ಎಂಬ ಪದದ ಅರ್ಥ ವಿವರಣೆಯೇ ಬದಲಾವಣೆಯಾಗಬಹುದು. ಆದ್ದರಿಂದ ಕಮ್ಯೂನಿಸಂ ಬಗ್ಗೆ ನನಗಿದ್ದ ಭ್ರಾಂತಿಮಾಯವಾಗಿದೆ. ಒಂದು ವೇಳೆ ಕಮ್ಯೂನಿಷ್ಟ ಪಕ್ಷ ಅಧಿಕಾರಕ್ಕೆ ಬಂದರೂ ಸಹ ಗೆದ್ದ ಎತ್ತಿನ ಬಾಲ ಹಿಡಿಯುವ ಈಗ ವಿವಿಧ ಪಕ್ಷಗಳಲ್ಲಿರುವ ಭ್ರಷ್ಟರೂ ಸಮಯ ಸಾಧಕರೂ ಅಗ್ರಗಣ್ಯ ಕಮ್ಯೂನಿಸ್ಟರಾಗುತ್ತಾರೆ. ಆದರೆ ಪ್ರಜಾಪ್ರಭುತ್ವದ ಮೂಲತತ್ವಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಆಚರಣೆಯಲ್ಲಿರುವ ಕೆಲವು ಒಳ್ಳೆಯ ಪದ್ಧತಿಗಳನ್ನು ನಮ್ಮ ವ್ಯವಸ್ಥೆಗೆ ಅಳವಡಿಸಿಕೊಳ್ಳುವುದರಿಂದ

ಪ್ರಯೋಜನವಾಗಬಹುದೆಂದು ನನ್ನ ಭಾವನೆ.

ನಾನು ಮೇಲೆ ಹೇಳಿರುವ ಸೂಚನೆಗಳನ್ನು ಅನುಷ್ಠಾನಕ್ಕೆ ತರವುದು ಸುಲಭವಲ್ಲವೆಂದು ನನಗೂ ಗೊತ್ತು. ಆದರೆ ರಾಷ್ಟ್ರದ ಅಭ್ಯುದಯದ ದೃಷ್ಟಿಯಿಂದ ಈ ದಿಸೆಯಲ್ಲಿ ಪ್ರಯತ್ನವಾದರೂ ನಡೆಯಬೇಕು. ಈ ದಿಸೆಯಲ್ಲಿ ಪ್ರಯತ್ನ ನಡೆಯಬೇಕಾದರೆ ದೇಶದ ಆದ್ಯಂತ ಸುಭದ್ರವಾದ ಸರ್ಕಾರವಿರಬೇಕು. ಆಡಳಿತ ಸೂತ್ರ ದೇಶದ ಬಹುಜನರ ಗೌರವ ವಿಶ್ವಾಸಗಳಿಗೆ ಪಾತ್ರರಾದ ಆದರ್ಶಪ್ರಾಯರಾದ ನಾಯಕರ ಕೈಯಲ್ಲಿರಬೇಕು. ಹೊಸ ನಮೂನೆಯ ರಾಜಕಾರಣವಿರಬೇಕು ಮತ್ತುಹೊಸ ನಮೂನೆಯ ಆಡಳಿತ ವ್ಯವಸ್ಥೆ ಜಾರಿಗೆ ಬರಬೇಕು. ಅಧಿಕಾರ ಪಿಪಾಸೆಯಿಂದ ಕೂಡಿರುವ ಇಂದಿರುವ ರಾಜಕೀಯ ಪಕ್ಷಗಳಿಂದ ಈ ಪ್ರಯತ್ನ ಸಾಧ್ಯವಾಗುವುದಿಲ್ಲ. ಶ್ರೀಮತಿ ಇಂದಿರಾಗಾಂಧಿಯವರಿಗೆ ಹಿಂದೆ ಕೆಲವು ಸಂದರ್ಭಗಳಲ್ಲಿ ಸಾಧಿಸಿದ್ದ ಸಾಹಸಕಾರ್ಯಗಳಿಗಾಗಿ ನಾನೇ ಅವರನ್ನು ಅಭಿನಂದಿಸಿದ್ದೆ. ಆದರೆ ಅವರ ಪಕ್ಷಕ್ಕೆ ನೈತಿಕಬೆಂಬಲವಿಲ್ಲ. ಅವರ ಪಕ್ಷದಲ್ಲಿ ಪ್ರಮಾಣಿಕರಿಗಿಂತ ಹೆಚ್ಚು ಅಪ್ರಮಾಣಿಕರ ಸಂಖ್ಯೆಯೇ ಹೆಚ್ಚು. ನಿಷ್ಠಾವಂತರಿಗಿಂತ, ಸಮಯ ಸಾಧಕರೇ ಹೆಚ್ಚು, ರಾಷ್ಟ್ರಪ್ರೇಮಿಗಳಿಗಿಂತ ಅಧಿಕಾರದಾಹದಿಂದ ಪಕ್ಷಕ್ಕೆ ಸೇರಿರುವವರ ಸಂಖ್ಯೆಯೇ ಹೆಚ್ಚು. ವಿರೋಧಪಕ್ಷಗಳ ದೌರ್ಬಲ್ಯವೇ ಇಂದಿರಾ ಕಾಂಗ್ರೆಸ್ಸಿನ ಪ್ರಾಬಲ್ಯಕ್ಕೆ ಕಾರಣವಾಗಿದೆ.

ಭ್ರಷ್ಟಾಚಾರವಿಲ್ಲದ ಕಾಲವಾಗಲಿ ದೇಶವಾಗಲಿ ಯಾವಾಗಲೂ ಇರಲಿಲ್ಲ. ನಾನು ಈ ದೇಶದಲ್ಲಿ ಬ್ರಿಟಿಷರ ಆಳ್ವಿಕೆಯ ರೀತಿನೀತಿಗಳನ್ನು ನೋಡಿದ್ದವನು. ಜವಹರಲಾಲ್ ನೆಹರೂ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿಯವರ ಆಳ್ವಿಕೆಯಲ್ಲಿ ನಡೆಯುತ್ತಿದ್ದ ರಾಜ್ಯಭಾರದ ರೀತಿನೀತಿಗಳನ್ನು ನೋಡಿದ್ದವನು. ಆ ಕಾಲಗಳಲ್ಲಿಯೂ ಲಂಚವಿತ್ತು. ಆದರೆ ಬಹಳ ಸಣ್ಣ ಪ್ರಮಾಣದಲ್ಲಿ ಅಲ್ಲಿ ಇಲ್ಲಿ ಕದ್ದು ಮುಚ್ಚಿ ನಡೆಯುತಿತ್ತು. ಶ್ರೀಮತಿ ಇಂದಿರಾ ಗಾಂಧಿಯವರ ಆಳ್ವಿಕೆಯಲ್ಲಿ ೧೯೬೯ರ ನಂತರ ಬೃಹತ್‌ಪ್ರಮಾಣದ ಸಾರ್ವತ್ರಿಕ ಭ್ರಷ್ಟಾಚಾರದ ಯುಗವೇ ಆರಂಭವಾದಂತಾಯ್ತು. ಅಗ್ರಗಣ್ಯ ಲಂಚಕೋರರೆಂದು ಹೆಸರುವಾಸಿಯಾದ ಕೆಲವರು ಅವರ ಪಕ್ಷದಲ್ಲಿ ಸೇರಿ ಅಗ್ರಗಣ್ಯ ಮುಖಂಡರಾದರು. ಭ್ರಷ್ಟಾಚಾರ ಸಾರ್ವಜನಿಕ ಜೀವನದ ಹಾಸುಹೊಕ್ಕಾಯಿತು. ರಾಜಕಾರಣಿಗಳು ಶುದ್ಧ ಚಾರಿತ್ರ್ಯವುಳ್ಳವರಾಗಿ ಪ್ರಾಮಾಣಿಕರಾಗಿರಬೇಕೆಂದು ಮಹಾತ್ಮಗಾಂಧಿಯವರು ಪದೇ ಪದೇ ಹೇಳುತ್ತಿದ್ದರು. ಅಪ್ರಮಾಣಿಕ ಸ್ವಾರ್ಥಸಾಧಕರಿಂದ ರಾಷ್ಟ್ರದ ಅಭ್ಯುದಯವಾಗುವುದಿಲ್ಲವೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು. ಜವಾಹರಲಾಲ್ ನೆಹರೂ ಅವರು ಪ್ರಧಾನಿಯಾಗಿದ್ದಾಗ ಅವರು ಆಗಾಗ ರಾಜ್ಯಗಳ

ಮುಖ್ಯಮಂತ್ರಿಗಳಿಗೆ ಬರೆಯುತ್ತಿದ್ದ ಪತ್ರಗಳಲ್ಲಿ ಅಧಿಕಾರಸ್ಥಾನಗಳಲ್ಲಿರುವ ರಾಜಕಾರಣಿಗಳು ಪ್ರಾಮಾಣಿಕರಾಗಿರುವುದರ ಜೊತೆಗೆ ತಾವು ಪ್ರಾಮಾಣಿಕರೆಂಬುದನ್ನು ಜಗತ್ತಿಗೆ ತೋರಿಸುವಂತೆ ವರ್ತಿಸಬೇಕೆಂದು ಬರೆಯುತ್ತಿದ್ದರು.

ಆದರೆ ಶ್ರೀಮತಿ ಇಂದಿರಾಗಾಂಧಿಯವರ ರೀತಿಯೇ ಬೇರೆ. ತಮ್ಮ ಅನುಯಾಯಿಗಳಲ್ಲಿ ಕೆಲವರು ಅಗ್ರಗಣ್ಯ ಭ್ರಷ್ಟರೆಂದು ಜನಜನಿತವಾಗಿ ಹೆಸರುವಾಸಿಯಾಗಿದ್ದರೂ ಕೂಡಾ ಶ್ರೀಮತಿ ಗಾಂಧಿಯವರು ಏನೂ ಗೊತ್ತಿಲ್ಲದವರಂತೆ ವರ್ತಿಸುವುದು ನನಗಂತೂ ಬಿಡಿಸಲಾರದ ಒಗಟಾಗಿದೆ. ಭ್ರಷ್ಟರೂ ಸಮಯಸಾಧಕರೂ ರಾಷ್ಟ್ರದ ಅಭ್ಯುದಯವನ್ನು ಸಾಧಿಸಬಹುದೆಂದು ಅವರು ಭಾವಿಸಿರುವಂತೆ ತೋರುತ್ತದೆ. ಇಂದಿರಾ ಕಾಂಗ್ರೆಸ್ ಈಗ ನಡೆಸುತ್ತಿರುವ ರೀತಿಯಲ್ಲಿ ಇನ್ನೂ ಕಾಲು ಶತಮಾನ ರಾಜ್ಯಭಾರ ನಡೆಸಿದರೂ ಕೂಡಾ ದೇಶದ ಭವಿಷ್ಯ ಈಗಿರುವುದಕ್ಕಿಂತ ಉತ್ತಮವಾಗಿರುತ್ತದೆ ಎಂಬ ಆಸೆ ನನಗಿಲ್ಲ. ರಾಷ್ಟ್ರದ ರಾಜ್ಯಭಾರ ಜನರೊಪ್ಪುವ ರೀತಿಯಲ್ಲಿ ಪ್ರಾಮಾಣಿಕವಾಗಿ ನಡೆದರೆ ಜನರಿಗೆ ಸರ್ಕಾರದ ಬಗ್ಗೆ ಗೌರವ ಮೂಡುತ್ತದೆ. ಜನರಿಗೆ ಪೂರ್ತಿ ಆರ್ಥಿಕ ನೆಮ್ಮದಿದೊರಕದಿದ್ದರೂ, ಮಾನಸಿಕ ನೆಮ್ಮದಿಯಾದರೂ ದೊರಕುತ್ತದೆ. ಈಗ ಈ ದೇಶದ ಬಹುಜನರಿಗೆ ಆರ್ಥಿಕ ನೆಮ್ಮದಿಯೂ ಇಲ್ಲ. ಮಾನಸಿಕ ನೆಮ್ಮದಿಯೂ ಇಲ್ಲ. ಸರ್ಕಾರದ ಬಗ್ಗೆ ಗೌರವೂ ಇಲ್ಲ. ಇಂದಿರಾ ಕಾಂಗ್ರೆಸ್ಸಿನಲ್ಲಿ ಇಷ್ಟೆಲ್ಲಾ ನ್ಯೂನತೆಗಳಿದ್ದರೂ ಶ್ರೀಮತಿ ಇಂದಿರಾಗಾಂಧಿಯವರು ರಾಷ್ಟ್ರದಲ್ಲಿ ಸದ್ಯಕ್ಕೆ ಸುಭದ್ರವಾದ ಸರ್ಕಾರವನ್ನು ಸ್ಥಾಪಿಸಿರುತ್ತಾರೆ. ಅದಕ್ಕಾಗಿ ಅವರು ಅಭಿನಂದನಾರ್ಹರು. ಈಗಿರುವ ವಿರೋಧ ಪಕ್ಷಗಳಿಂದ ಅದು ಸಾಧ್ಯವಾಗುತ್ತಿರಲಿಲ್ಲ.

೧೯೭೭ ರಿಂದ ವಿರೋಧ ಪಕ್ಷಗಳು ವರ್ತಿಸಿದ ರೀತಿನೀತಿಗಳನ್ನು ಸ್ಮರಿಸಿ ಕೊಂಡಾಗ ಒಂದು ವೇಳೆ ಶ್ರೀಮತಿ ಗಾಂಧಿಯವರ ಪಕ್ಷ ಅಧಿಕಾರವನ್ನು ಕಳೆದುಕೊಂಡರೂ ಕೂಡಾ ವಿರೋಧ ಪಕ್ಷಗಳೆಲ್ಲವೂ ಒಟ್ಟಾಗಿ ಸೇರಿ ಸುಭದ್ರವಾದ ಸರ್ಕಾರವನ್ನು ರಚಿಸುವರು ಎಂಬ ಭರವಸೆ ನನಗೆ ಕಾಣುವುದಿಲ್ಲ. ಇಂದಿರುವ ವಿರೋಧ ಪಕ್ಷಗಳಲ್ಲಿ ಕಾಂಗ್ರೆಸ್‌ನಲ್ಲಿರುವ ಎಲ್ಲಾ ದೌರ್ಬಲ್ಯಗಳೂ ಹೆಚ್ಚು ಕಡಿಮೆ ಇವೆ. ವಿರೋಧ ಪಕ್ಷಗಳ ನಾಯಕರು ಕಾಂಗ್ರೆಸ್ ನಾಯಕರಷ್ಟೇ ಅಧಿಕಾರ ದಾಹದಿಂದ ಕೂಡಿದವರಾಗಿರುತ್ತಾರೆ, ಅಧಿಕಾರದಾಹ, ಸ್ವಪ್ರತಿಷ್ಠೆ, ಮುಖಂಡರಾಗಿ ಉಳಿಯಬೇಕೆಂಬ ಹಂಬಲ, ತಮ್ಮ ಪಕ್ಷದ ಕೋಳಿಗಳಿಂದಲೇ ಈ ದೇಶದಲ್ಲಿ ಬೆಳಗಾಗುತ್ತದೆಯೆಂಬ ಅಹಂಭಾವ, ಭ್ರಷ್ಟಾಚಾರ ಇವೇ ಮುಂತಾದವುಗಳ ದಸೆಯಿಂದ ವಿರೋಧ ಪಕ್ಷಗಳು ಒಡೆದು ನುಚ್ಚುನೂರಾಗಿ ಹೋಗಿವೆ. ಕಳೆದ ಚುನಾವಣೆಗಳಲ್ಲಿ ಅನುಭವಿಸಿದ ಪರಾಭವದಿಂದ ಸೋತು

ನಿಶ್ಚೇತವಾಗಿದ್ದಾಗ್ಯೂ ಕೂಡಾ ವಿರೋಧ ಪಕ್ಷಗಳು ಒಟ್ಟಾಗಿ ಸೇರಿ ಒಂದು ಪ್ರಬಲವಾದ ಪರ್ಯಾಯ ಪಕ್ಷವನ್ನು ರಚಿಸುವ ಸೂಚನೆ ಕಾಣುವುದಿಲ್ಲ. ಜನರಲ್ಲಿ ರಾಜಕೀಯ ಪ್ರಜ್ಞೆಯುಂಟಾಗುವಂತೆ ಮಾಡಿ ಹೊಸವಾತಾವರಣವನ್ನು ಕಲ್ಪಿಸಿ, ಹೊಸ ನಮೂನೆಯ ಆದರ್ಶಪ್ರೇರಿತ ರಾಷ್ಟ್ರಪ್ರೇಮದ ರಾಜಕಾರಣವನ್ನು ಆರಂಭಿಸುವ ಬದಲು ಕೆಲವರು ವಿರೋಧಪಕ್ಷದ ನಾಯಕರು ಕೈಯ್ಯಲ್ಲಿ ಸಾಗದವನು ಮೈಯೆಲ್ಲಾ ಪರಚಿಕೊಂಡಂತೆ ಅನಾವಶ್ಯಕವಾಗಿ ಗುಲ್ಲೆಬ್ಬಿಸುತ್ತಿದ್ದಾರೆ.

ರಾಷ್ಟ್ರದಲ್ಲಿ ಇಂದಿರುವ ಭ್ರಷ್ಟಾಚಾರ, ಸ್ವೇಚ್ಛಾಪ್ರವೃತ್ತಿ, ಎಲ್ಲೆಮೀರಿದ ಅಶಿಸ್ತು, ಕೊನೆಗಾಣದ ಮುಷ್ಕರ, ಚಳವಳಿಗಳು ಇದೇ ರೀತಿ ಮುಂದುವರಿದರೆ ಈದೇಶದಲ್ಲಿ ಪ್ರಜಾಪ್ರಭುತ್ವ ಉಳಿಯುತ್ತದೆಯೆಂಬ ಭರವಸೆ ನನಗಿಲ್ಲ. ಇಂದು ಈ ದೇಶ ಚಳವಳಿ ಮುಷ್ಕರಗಳ ಹೋರಾಟ ಘರ್ಷಣೆಗಳ ಅಖಾಡದಂತಾಗಿದೆ. ಒಂದು ಕಡೆ ಸ್ವಾರ್ಥಸಾಧಕ ರಾಜಕಾರಣಿಗಳೂ, ಇನ್ನೊಂದು ಕಡೆ ಪಟ್ಟಣಗಳಲ್ಲಿರುವ ಸುಸಂಘಟಿತ ಕಾರ್ಮಿಕರೂ, ಮತ್ತೊಂದುಕಡೆ ವಿದ್ಯಾರ್ಥಿಗಳೂ, ಮಗದೊಂದು ಕಡೆ ಸರ್ಕಾರಿ ನೌಕರರೂ ರಾಷ್ಟ್ರದ ಹಿತವನ್ನು ಮರೆತು ಪ್ರಜಾಪ್ರಭುತ್ವದ ಸಮಾಧಿಗೆ ಸಿದ್ಧತೆ ಮಾಡುತ್ತಿದ್ದಾರೆ ಈ ದೇಶದಲ್ಲಿ ಪ್ರಜಾಪ್ರಭುತ್ವ ಅಳಿದರೆ ಈ ನಾಲ್ಕು ವರ್ಗಗಳ ಜನರೇ ಅದಕ್ಕೆ ಹೊಣೆಯಾಗುತ್ತಾರೆ. ಅಧ್ಯಕ್ಷೀಯ ಪದ್ಧತಿ ಜಾರಿಗೆ ಬಂದರೆ ಪರಿಸ್ಥಿತಿ ಸುಧಾರಿಸಬಹುದೆಂದು ಇಂದಿರಾ ಕಾಂಗ್ರೆಸ್ಸಿನ ಕೆಲವರು ಮುಖಂಡರು ಪ್ರತಿಪಾದಿಸುತ್ತಿದ್ದಾರೆ. ಕುಣಿಯಲಾರದವಳು ನೆಲ ಡೊಂಕು ಎಂದು ಹೇಳಿದ್ದಳಂತೆ. ಇಂದಿನ ದುರವಸ್ಥೆಗೆ ಸಂಸದೀಯ ಪದ್ಧತಿಯಲ್ಲಿರುವ ದೋಷ ಕಾರಣವಲ್ಲ, ರಾಜ್ಯಭಾರದ ಹೊಣೆಯನ್ನು ಹೊತ್ತಿದ್ದ ಮತ್ತು ಇಂದು ಹೊತ್ತಿರುವವರ ದೋಷವೇ ಕಾರಣವಾಗಿದೆ. ಪದ್ಧತಿ ಬದಲಾವಣೆಯಾದ ಮಾತ್ರಕ್ಕೆ ಅಧಿಕಾರದಾಹದ, ಸ್ವಾರ್ಥಸಾಧಕ ರಾಜಕಾರಣಿಗಳ ಸ್ವಭಾವ ಬದಲಾವಣೆಯಾಗುವುದಿಲ್ಲ ಇಂತಹ ರಾಜಕಾರಣಿಗಳ ಕೈಗೆ ಅಧ್ಯಕ್ಷೀಯ ಪದ್ಧತಿಯಲ್ಲಿ ಸ್ವೇಚ್ಛಾಧಿಕಾರ ಸಿಕ್ಕರೆ ಜನರಿಗೆ ಹಿಂಸೆ ಕಿರುಕುಳಗಳು ಹೆಚ್ಚಾಗುತ್ತವೆ. ಅಂತೆಯೇ ಭ್ರಷ್ಟಾಚಾರವೂ ಹೆಚ್ಚಾಗುತ್ತದೆ. ಕೆಲವು ದೃಷ್ಟಿಯಿಂದ ಸಂಸದೀಯ ಪದ್ಧತಿಗಿಂತ ಅಧ್ಯಕ್ಷೀಯ ಪದ್ಧತಿ ಉತ್ತಮವಾದುದು. ಆದರೆ ಅಧ್ಯಕ್ಷೀಯ ಪದ್ಧತಿಯಲ್ಲಿ ಆಡಳಿತ ನಿರ್ವಹಣೆ ಮಾಡುವವರು ಒಳ್ಳೆಯವರಾಗಿದ್ದರೆ ದೇಶಕ್ಕೆ ಒಳ್ಳೆಯದಾಗುತ್ತದೆ. ಕೆಟ್ಟವರಾದರೆ ಕೆಟ್ಟದ್ದಾಗುತ್ತದೆ.

ರಾಷ್ಟ್ರವು ಅವನತಿಯ ಹಾದಿಯನ್ನು ಹಿಡಿಯುವ ಸೂಚನೆಗಳು ಅಲ್ಲಲ್ಲಿ ಕಾಣುತ್ತಾ ಇವೆ. ಯಾವ ದೇಶದಲ್ಲಿಯೇ ಆಗಲೀ ರಾಷ್ಟ್ರವು ಅವನತಿಯ ಹಾದಿಯನ್ನು ಹಿಡಿದಾಗ

ಪರಿಸ್ಥಿತಿ ಸುಧಾರಿಸಬೇಕಾದರೆ ಮೇಲ್ಗಡೆಯಿಂದ ಸುಧಾರಣೆಯಾಗಬೇಕು. ಅಥವಾ ಕೆಳಗಡೆಯಿಂದ ಕ್ರಾಂತಿಯಾಗಬೇಕು. ಪ್ರಕೃತ ಸಂದರ್ಭದಲ್ಲಿ ಈ ದೇಶದಲ್ಲಿ ಎರಡು ಸಾಧ್ಯತೆಗಳೂ ಇರುವಂತೆ ಕಾಣುತ್ತಿಲ್ಲ, ಪರಿಸ್ಥಿತಿ ಇನ್ನೂ ಹದಗೆಟ್ಟರೆ ರಾಷ್ಟ್ರವು ಅನಾಯಕತ್ವದಿಂದ ತತ್ತರಿಸಬಹುದು ಅಥವಾ ಅಧಿಕಾರದಾಹದ ಸರ್ವಾಧಿಕಾರಿಯ ಕೈಗೆ ಸಿಕ್ಕಿ ನರಳಾಡಬಹುದು. ನನ್ನ ಈ ಲೇಖನದಲ್ಲಿ ಕೆಲವು ಕಡೆ ನಿರಾಶಾದಾಯಕ ಭಾವನೆಗಳು ಅಡಗಿದ್ದರೂ ನಾನು ಆಶಾವಾದಿ. ಮೇಲ್ಗಡೆಯಿದ್ದವರು ಇನ್ನಾದರೂ ಸುಧಾರಿಸಿಕೊಳ್ಳಬಹುದೆಂಬ ಆಸೆ ನನಗಿದೆ. ಕೇವಲ ಮೂವತ್ತಮೂರು ವರ್ಷಗಳ ಹಿಂದೆ ಸತ್ಯ ಅಹಿಂಸೆಗಳಿಂದ ಕೂಡಿದ್ದ ಹೋರಾಟದಿಂದ ಲಕ್ಷಾಂತರ ಜನರ ತ್ಯಾಗ ಬಲಿದಾನಗಳಿಂದ ರಾಷ್ಟ್ರವಾಯಿತು. ನಮ್ಮ ಪೂರ್ವಿಕರ ತ್ಯಾಗ ಬಲಿದಾನಗಳು ಇಷ್ಟು ಬೇಗನೆ ನಿರರ್ಥಕವಾಗಲಾರವು. ಅವರ ಸತ್ಯಸಂಧತೆ, ರಾಷ್ಟ್ರಪ್ರೇಮ, ತ್ಯಾಗಬುದ್ಧಿ ಮುಂತಾದ ಗುಣಗಳು ನಮ್ಮಲ್ಲಿ ಇನ್ನೂ ಸ್ವಲ್ಪ ಮಟ್ಟಿಗೆ ಉಳಿದಿವೆ. ಪೂರ್ವದ ಋಷಿಗಳ ಸಾಧುಸಂತರ ಮಹಾಪುರುಷರ ತಪಸ್ಸಿನಿಂದ ಪುನೀತವಾಗಿದ್ದ ಈ ರಾಷ್ಟ್ರದಲ್ಲಿ ಕ್ರೌರ್ಯ ಹಿಂಸೆ ದಬ್ಬಾಳಿಕೆ ಮುಂತಾದವುಗಳಿಗೆ ಆಸ್ಪದವಿರಲಾರದೆಂದು ಹಾರೈಸುತ್ತೇನೆ. ಜನರೂ, ಜನನಾಯಕರೂ, ಇನ್ನಾದರೂ ವಿವೇಕದ ಮಾರ್ಗವನ್ನು ಹಿಡಿಯಬಹುದೆಂದು ಮಹಾದಾಸೆಯಿಂದ ಈ ಲೇಖನವನ್ನು ಮುಗಿಸುತ್ತಿದ್ದೇನೆ.

**'ಕನ್ನಡಪ್ರಭ'**

# ದುರ್ಬಲ ವರ್ಗಗಳ ಏಳ್ಗೆಯತ್ತ ಸಾಮಾಜಿಕನ್ಯಾಯ

೧೯೪೭ನೇ ಇಸವಿ ಆಗಸ್ಟ್ ೧೫ ರಂದು, ನಮ್ಮ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದ ದಿನ, ನನ್ನ ಅಧ್ಯಕ್ಷತೆಯಲ್ಲಿ ಶಿವಮೊಗ್ಗ ನಗರದಲ್ಲಿ ಒಂದು ದೊಡ್ಡ ಸಭೆ ಸೇರಿತ್ತು. ಅಂದು ನಾನು ಬಿಸಿ ರಕ್ತದ ಅಲ್ಪಜ್ಞಾನದ ಯುವಕನಾಗಿದ್ದೆ. ಬ್ರಿಟೀಷರು ಈ ದೇಶವನ್ನು ಬಿಟ್ಟು ತೊಲಗಿದ ಕೆಲವೇ ವರ್ಷಗಳಲ್ಲಿ ನಮ್ಮ ದಾರಿದ್ರ್ಯವೂ ಕೂಡ ನಮ್ಮನ್ನು ಬಿಟ್ಟು ತೊಲಗುತ್ತವೆ ಎಂದು ನಾನು ಭಾವಿಸಿದ್ದೆ. ನಮ್ಮ ಲೋಪದೋಷಗಳೇ ನಮ್ಮ ಬಡತನಕ್ಕೆ ಬಹುಮಟ್ಟಿಗೆ ಕಾರಣವೆಂದು ನಾನು ಆಗ ತಿಳಿದಿರಲಿಲ್ಲ. ಆ ದಿನ ನನ್ನ ಅಧ್ಯಕ್ಷ ಭಾಷಣದಲ್ಲಿ ಕೇವಲ ಹತ್ತಿಪ್ಪತ್ತು ವರ್ಷಗಳಲ್ಲಿ ಭಾರತವು ಸುಖ ಸಂಪತ್ತಿನಿಂದ ಕೂಡಿದ ಪ್ರಭಾವಿ ರಾಷ್ಟ್ರವಾಗುವುದೆಂದೂ, ಸತ್ಯ ಅಹಿಂಸೆಗಳ ಮಾರ್ಗದಿಂದ ಸ್ವಾತಂತ್ರ್ಯವನ್ನು ಪಡೆದ ಈ ರಾಷ್ಟ್ರವು, ಜಗತ್ತಿನ ಇತರ ರಾಷ್ಟ್ರಗಳಿಗೆ ಮಾದರಿಯಾಗಿ, ಮಾರ್ಗ ದರ್ಶನ ನೀಡುವಂತಾಗುತ್ತದೆಯೆಂದೂ ಹೇಳಿದ್ದೆ. ಸ್ವಾತಂತ್ರ್ಯ ಬಂದು ಮೂವತ್ತೊಂದು ವರ್ಷಗಳಾದವು. ನನ್ನ ನಿರೀಕ್ಷೆ ಇನ್ನೂ ಸಫಲವಾಗಲಿಲ್ಲ. ಈ ದೇಶದಲ್ಲಿ ನಡೆಯುತ್ತಿರುವ ಕೆಲವು ವಿದ್ಯಮಾನಗಳ ದೆಶೆಯಿಂದ ನಾನು ಇಂದು ಒಂದು ವಿಧವಾದ ನಿರಾಶಾವಾದಿಯಾಗಿದ್ದೇನೆ.

ಸ್ವಾತಂತ್ರ್ಯ ಲಭಿಸಿದ ಮೇಲೆ ರಾಷ್ಟ್ರದಲ್ಲಿ ಹಲವು ಬದಲಾವಣೆಗಳಾಗಿದೆ. ಕೆಲವು ಆಗಬೇಕಾದ ಬದಲಾವಣೆಗಳು ಕೆಲವು ಆಗಬಾರದ ಬದಲಾವಣೆಗಳು ತಕ್ಕಷ್ಟು ಆರ್ಥಿಕ ಪ್ರಗತಿಯತ್ತ ಜರುಗಿದೆ. ಅದರಲ್ಲೂ ತಾಂತ್ರಿಕ ಮತ್ತು ವೈಜ್ಞಾನಿಕ ಕ್ಷೇತ್ರಗಳಲ್ಲಿ ನಾವು ಹೆಮ್ಮೆಪಡುವ ರೀತಿಯಲ್ಲಿ ಪ್ರಗತಿ ಜರುಗಿದೆ. ಜನರೂ ಜನನಾಯಕರೂ ಹಲವು ಅಕ್ಷಮ್ಯ ತಪ್ಪುಗಳನ್ನು ಮಾಡಿದ್ದರೂ ಪ್ರಜಾಪ್ರಭುತ್ವ ಇನ್ನೂ ಉಳಿದು ಬಂದಿರುವುದು ಒಂದು ಹೆಮ್ಮೆಯ ಸಂಗತಿ. ಆದರೆ ಇದುವರೆಗೆ ಆಗಿರುವ ಆರ್ಥಿಕ ಪ್ರಗತಿಯಿಂದ ಮತ್ತು ಬದಲಾವಣೆಗಳಿಂದ. ಈ ದೇಶದ ಬಹುಮಂದಿ ಜನರ ಬಾಳಿನಲ್ಲಿ ಹೆಚ್ಚು ಬದಲಾವಣೆಯಾಗಿಲ್ಲ. ಸ್ವರಾಜ್ಯ ಬಂದು ಮೂವತ್ತೊಂದು ವರ್ಷಗಳಾಗಿದ್ದರೂ ಸಹ ಈ ದೇಶದ ಶೇಕಡಾ ೭೫ ರಷ್ಟು ಜನರು. ಅವಿದ್ಯಾವಂತರಾಗಿ ಅರೆಹೊಟ್ಟೆ ಅರೆಬಟ್ಟೆಗಳ ಜೀವನವನ್ನು ಸಾಗಿಸುತ್ತಿದ್ದಾರೆ. ಒಟ್ಟು ಜನ ಸಂಖ್ಯೆಯಲ್ಲಿ ಸುಮಾರು ಶೇಕಡ ೬೦ ರಷ್ಟು ಜನರು ಕಡುಬಡವರಾಗಿದ್ದಾರೆ. ಅವರನ್ನೇ ನಾವು ದುರ್ಬಲವರ್ಗದವರೆಂದು ಕರೆಯುತ್ತಿದ್ದೇವೆ. ಈ ದೇಶದಲ್ಲಿ ಸುಮಾರು ೬೫ ಲಕ್ಷ ಜನರು ಭಿಕ್ಷಾವೃತ್ತಿಯಿಂದ

ಜೀವನ ಮಾಡುತ್ತಿದ್ದಾರೆಂದರೆ ಕೆಲವರಿಗೆ ಆಶ್ಚರ್ಯವಾಗಬಹುದು.

ದುರ್ಬಲವರ್ಗಕ್ಕೆ ಸೇರಿದವರ ಪೈಕಿ ಬಹುಮಂದಿ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಈ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ಸುಮಾರು ೭೫ ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಹಳ್ಳಿಗಳಲ್ಲಿರುವ ಜನರ ಪೈಕಿ ಸುಮಾರು ಮೂರನೇ ಒಂದು ಭಾಗದಷ್ಟು ಜನರು ಭೂಹೀನರು, ಉಳಿದವರು ಭೂಮಿ ಇದ್ದವರು, ಭೂಹೀನರ ಜೀವನ, ಭೂಮಿ ಇದ್ದವರ ಪೈಕಿ ಶೇಕಡಾ ೬೦ ರಷ್ಟು ಕುಟುಂಬಗಳು ಕಾಲು ಎಕರೆಯಿಂದ ಐದು ಎಕರೆಯವರೆಗೆ ಭೂಮಿಯನ್ನು ಹೊಂದಿರತಕ್ಕವರು. ಅವರಿಗೂ ಭೂಹೀನರಿಗೂ ಹೆಚ್ಚು ವ್ಯತ್ಯಾಸವೇನೂ ಇಲ್ಲ. ವರ್ಷವೆಲ್ಲಾ ದುಡಿದರೂ ಕೂಡ ಹೊಟ್ಟೆ ಬಟ್ಟೆಗಳಿಗೆ ಬೇಕಾಗುವಷ್ಟು ವರಮಾನ ಸಿಕ್ಕುವುದಿಲ್ಲ. ಅವರೂ ಸಹ ಭೂಹೀನರಂತೆ ಕೂಲಿನಾಲಿಗಳಿಂದ ಜೀವಿಸಬೇಕು. ಭೂಮಿ ಇದ್ದವರ ಪೈಕಿ ಶೇಕಡ ೫೦ ರಷ್ಟು ಜನರು ಪಟ್ಟಣಗಳಲ್ಲಿರುವ ಸರ್ಕಾರಿ ಆಫೀಸುಗಳಲ್ಲಿ ಅಥವಾ ಖಾಸಗಿ ಸಂಸ್ಥೆಗಳಲ್ಲಿ ಜವಾನರ ಕೆಲಸ ಸಿಕ್ಕುವುದಾದರೆ ಪಟ್ಟಣಗಳಿಗೆ ವಲಸೆಹೋಗಲು ಸದಾ ಸಿದ್ಧರಾಗಿದ್ದಾರೆಂದು ಹೇಳಿವರೆ ಅನೇಕರಿಗೆ ಆಶ್ಚರ್ಯವಾಗಬಹುದು.

ಮುರಕಲು ಮನೆಗಳಲ್ಲಿ ಅಥವಾ ಹರಕಲು ಗುಡಿಸಿಲುಗಳಲ್ಲಿ, ವಾಸಿಸುತ್ತಿರುವ ಅರೆಹೊಟ್ಟೆ ಅರೆಬಟ್ಟೆಯ ಲಕ್ಷೋಪಲಕ್ಷ ಜನರನ್ನು, ದೊಡ್ಡ ದೊಡ್ಡ ಪಟ್ಟಣಗಳಲ್ಲಿ, ರಸ್ತೆಗಳ ಅಂಚಿನಲ್ಲಿ , ಭೂಮಿಯೇ ಹಾಸಿಗೆಯಾಗಿ ಆಕಾಶವೇ ಹೊದಿಕೆಯಾಗಿ, ಜೀವಿಸುತ್ತಿರುವ ಜನರನ್ನು, ಕೊಳಕು ಮೆತ್ತಿರುವ ಬೆತ್ತಲೆಯ ಮಕ್ಕಳ ತಂಡವನ್ನು ಸ್ಮರಿಸಿಕೊಂಡಾಗ ಮಾನವೀಯತೆ ಮತ್ತು ಅನುಕಂಪವುಳ್ಳವರಿಗೆ ಹೃದಯ ಕರಗುವಂತಾಗುತ್ತದೆ. ಬಡವರ ಮಧ್ಯೆ, ಬಡತನದಲ್ಲಿ ಹುಟ್ಟಿ ಬೆಳೆದವರಿಗೆ ಮಾತ್ರ, ಬಡವರನೋವು ಮತ್ತು ಗೋಳು ಅರ್ಥವಾಗುತ್ತದೆ. ಉಳಿದವರಿಗೆ ಅರ್ಥವಾಗುವುದು ಕಷ್ಟ

ಜನಸಂಖ್ಯೆ ಏರಿದಂತೆಲ್ಲಾ ದುರ್ಬಲವರ್ಗದವರ ಸಂಖ್ಯೆ ಹೆಚ್ಚಾಗುತ್ತಾ ಇದೆ. ಅಂತೆಯೇ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗುತ್ತಾ ಇದೆ. ಜೊತೆಗೆ ನಿರುದ್ಯೋಗದ ಸಮಸ್ಯೆ ಉತ್ಕಟವಾಗುತ್ತಾ ಇದೆ.

೧೯೫೧ ರಲ್ಲಿ ಈ ದೇಶದ ಜನಸಂಖ್ಯೆ ಮುವತ್ತಾರು ಕೋಟಿ ಇದ್ದದ್ದು ೧೯೬೧ ರಲ್ಲಿ ಅದು ನಲವತ್ನಾಲ್ಕು ಕೋಟಿಗೆ ಏರಿತು. ೧೯೭೧ ರಲ್ಲಿ ಐವತ್ತೈದು ಕೋಟಿಗೆ ಏರಿತು. ಪ್ರಸಕ್ತ ಸಾಲಿನಲ್ಲಿ ಈ ದೇಶದ ಜನಸಂಖ್ಯೆ ಸುಮಾರು ೭೫

ಕೋಟಿ ಆಗಿರಬಹುದೆಂದು ಅಂದಾಜು ಮಾಡಿದ್ದಾರೆ. ಪ್ರತಿದಿನ ಸುಮಾರು ೫೫ ಸಾವಿರ ಮಕ್ಕಳು ಈ ದೇಶದಲ್ಲಿ ಹುಟ್ಟುತ್ತಾರೆ. ಇದೇ ಪ್ರಮಾಣದಲ್ಲಿ ಜನಸಂಖ್ಯೆ ಏರುತ್ತಾ ಹೋದರೆ ಕ್ರಿ.ಶ. ೨೦೦೦ದ ಹೊತ್ತಿಗೆ ಈ ದೇಶದ ಜನ ಸಂಖ್ಯೆ ೯೦ ಕೋಟಿ ಆಗಬಹುದೆಂದು ಕೆಲವರು ಅಂದಾಜು ಮಾಡಿದ್ದಾರೆ. ಆಗ ಈ ದೇಶ ಕಿಕ್ಕಿರಿದು ತುಂಬಿರುವ ಜೇನು ಗೂಡಿನಂತಾಗುತ್ತದೆ. ದುರ್ಬಲವರ್ಗದವರ ಸಂಖ್ಯೆ, ಈಗ ಶೇಕಡ ೬೦ ರಷ್ಟು ಇರುವುದು, ಆಗ ಶೇಕಡ ೮೦ ಕ್ಕೆ ಏರಬಹುದು. ದೇಶದ ಸಮಸ್ಯೆಗಳು ಒಂದಕ್ಕೆ ಹತ್ತರಷ್ಟು ಉಲ್ಬಣವಾಗುತ್ತವೆ. ಬಡಬಗ್ಗರ ಹಾಹಾಕಾರ ಮತ್ತು ಅಶಾಂತಿ ಹೆಚ್ಚಾಗುತ್ತದೆ. ದೇಶದಲ್ಲಿ ಈಗಿರುವ, ವ್ಯವಸಾಯಕ್ಕೆ ಯೋಗ್ಯವಾಗಿರುವ ಭೂಮಿಯ ವಿಸ್ತೀರ್ಣ, ಹೆಚ್ಚಾಗಲು ಸಾಧ್ಯವಿಲ್ಲ. ಜನರಿಗೆ ಉದ್ಯೋಗ, ವಸತಿ ಮತ್ತು ಆಹಾರವನ್ನು ಒದಗಿಸುವುದು ಎಷ್ಟು ಕಷ್ಟವಾಗಬಹುದೆಂಬುದನ್ನು ಊಹಿಸಿದರೆ ನನಗೆ ಒಂದು ವಿಧವಾದ ಅಂಜಿಕೆಯಾಗುತ್ತದೆ. ನಾನಂತೂ ಆ ದಾರುಣ ದೃಶ್ಯವನ್ನು ನೋಡಲು ಬದುಕಿರುವುದಿಲ್ಲ. ಆದರೆ ಮುಂದಿನ ಪೀಳಿಗೆಯ ಬಗ್ಗೆ ಸಂಕಟವಾಗುತ್ತದೆ. ನಮ್ಮ ದೇಶದ ಆಗು ಹೋಗುಗಳನ್ನು ನಿರ್ಧರಿಸುವ ಸ್ಥಾನಗಳಲ್ಲಿರುವರಿಗಾಗಿ ಕೈಗೊಂಡಿರುವ ಕೆಲವು ಕಾರ್ಯಕ್ರಮಗಳ ಅನುಷ್ಠಾನ ಹಲವು ತೂತುಗಳಿರುವ ಅಂಗಿಗೆ ಆಗಾಗ ತೇಪೆ ಹಾಕುವಂತಾಗಿದೆ. ಅದರಿಂದ ಅವರ ಸಮಸ್ಯೆ ಶಾಶ್ವತವಾಗಿ ಪರಿಹಾರವಾಗುವುದಿಲ್ಲ. ಅವರಿಗೆ ಶಾಶ್ವತ ಪರಿಹಾರ ದೊರೆಯಬೇಕಾದರೆ ವಿದ್ಯೆಯನ್ನು ನೀಡಬೇಕು. ಜೊತೆಗೆ ಜೀವನಕ್ಕೆ ಸಾಕಾಗುವಷ್ಟು ವರಮಾನ ಲಭಿಸುವ ಉದ್ಯೋಗವನ್ನು ದೊರಕಿಸಿಕೊಡಬೇಕು. ಹಳ್ಳಿಗಳಲ್ಲಿರುವ ಎಲ್ಲ ಜನರಿಗೂ ವ್ಯವಸಾಯದಿಂದಲೇ ಜೀವನವಾಗಬೇಕೆಂದು ಕೆಲವರು ತಿಳಿದುಕೊಂಡಿರುವಂತೆ ತೋರುತ್ತದೆ. ಅವರಿಗೆ ವ್ಯವಸಾಯದ ಗಂಧವೂ ಗೊತ್ತಿಲ್ಲ, ಹಳ್ಳಿಯ ಜೀವನದ ಅನುಭವವೂ ಇಲ್ಲ. ಹಳ್ಳಿಯಲ್ಲಿರುವ ಶೇಕಡಾ ೬೦ ರಷ್ಟು ಜನ ಮಾತ್ರ ವ್ಯವಸಾಯವನ್ನು ಅವಲಂಬಿಸಿ ಜೀವನ ಮಾಡುವುದು ಸಾಧ್ಯ. ಉಳಿದವರಿಗೆ ಬೇರೆ ಉದ್ಯೋಗವನ್ನು ಕಲ್ಪಿಸಿಕೊಡಬೇಕಾಗುತ್ತದೆ.

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಎಲ್ಲರಿಗೂ ನ್ಯಾಯ ದೊರಕುವಂತೆ ಮಾಡುವುದೂ, ರಾಷ್ಟ್ರದ ಎಲ್ಲಾ ಜನರೂ ಸರಿಸಮಾನರೆಂಬ ತತ್ವವನ್ನು ಆಚರಣೆಗೆತರುವುದು, ಕಾನೂನು ಪ್ರಕಾರ ಎಲ್ಲರಿಗೂ ಸರಿ ಸಮಾನವಾದ ಅವಕಾಶ ಸಿಕ್ಕುವಂತೆ ಮಾಡುವುದೂ, ದೇಶದ ಸಂಪತ್ತು ಕೆಲವೇ ಜನರ ಜಹಗೀರಿಯಾಗದಂತೆ ಸರ್ವಜನರ ಪ್ರಯೋಜನಕ್ಕಾಗಿ ವಿನಿಯೋಗ ಆಗುವಂತೆ ಮಾಡುವುದೂ ನಮ್ಮ

ಸಂವಿಧಾನದಲ್ಲಿ ವಿಧಾಯಕವಾಗಿರುವ ಮೂಲ ಸೂತ್ರಗಳು. ಜನರಿಗೆ ಈ ಮೂಲ ಸೂತ್ರಗಳಿಗೆ ಅನುಗುಣವಾಗಿ ಸಾಮಾಜಿಕ ನ್ಯಾಯ ದೊರೆಯುವಂತೆ ಮಾಡುವುದು ಅಗತ್ಯ. ದುರ್ಬಲವರ್ಗದವರು ಎಲ್ಲಿಯವರೆಗೆ ಅವಿದ್ಯಾವಂತರಾಗಿ ಅಜ್ಞಾನಿಗಳಾಗಿರುತ್ತಾರೋ ಅಲ್ಲಿಯವರೆಗೆ ಅವರ ಬಾಳು ಹಸನಾಗುವುದಿಲ್ಲ. ಅವರ ಶೋಷಣೆ ನಿಲ್ಲುವುದಿಲ್ಲ. ಅವರಿಗೆ ಸರ್ಕಾರದವರು ನೀಡುವ ಸೌಲಭ್ಯಗಳಿಂದ ಹೆಚ್ಚು ಪ್ರಯೋಜನ ಲಭಿಸುವುದಿಲ್ಲ. ಒಂದು ಉದಾಹರಣೆಯನ್ನು ಹೇಳುವುದಾದರೆ, ನಾನು ಕಂದಾಯ ಮಂತ್ರಿಯಾಗಿದ್ದಾಗ ಸುಮಾರು ೯ ಲಕ್ಷ ಎಕರೆ ಸರ್ಕಾರಿ ಭೂಮಿಯನ್ನು ಭೂಹೀನರಿಗೂ, ಅಲ್ಪಸ್ವಲ್ಪ ಭೂಮಿಉಳ್ಳವರಿಗೂ ಹಂಚಲಾಗಿತ್ತು. ಈ ರೀತಿ ದುರ್ಬಲ ವರ್ಗದವರಿಗೆ ಹಂಚಿದ ಭೂಮಿಯಲ್ಲಿ ಸುಮಾರು ಅರೆವಾಸಿ ಭೂಮಿಯನ್ನು ದುರ್ಬಲವರ್ಗದವರಿಂದ ಬಲಿಷ್ಠ ವರ್ಗದವರು, ಕಾನೂನಿಗೆ ವಿರುದ್ಧವಾಗಿ ಕೊಂಡುಕೊಂಡರು. ದುರ್ಬಲ ವರ್ಗದವರಿಗೆ ವಿದ್ಯೆ ಬುದ್ಧಿಗಳಿದಿದ್ದರೆ ತಮ್ಮ ಕೈಗೆ ಸಿಕ್ಕಿದ್ದ ಭೂಮಿಯನ್ನು ಅಡ್ಡಾದಿಡ್ಡಿ ಬೆಲೆಗೆ ಮಾರುತ್ತಿರಲಿಲ್ಲ.

ಸರ್ಕಾರದವರೇನೋ ದುರ್ಬಲವರ್ಗದವರ ಏಳಿಗೆಗಾಗಿ ಬಹಳ ಹಣವನ್ನು ಖರ್ಚುಮಾಡುತ್ತಿದ್ದಾರೆ. ಇದು ಮೆಚ್ಚತಕ್ಕ ವಿಚಾರ. ಆದರೆ ಯೋಜನೆಗಳ ಅನುಷ್ಠಾನದಲ್ಲಿ ನಿಷ್ಠೆ ಮತ್ತು ಪ್ರಮಾಣಿಕತೆ ಕಡಿಮೆಯಾಗಿರುವುದರ ದೆಸೆಯಿಂದ ಸರ್ಕಾರ ಖರ್ಚುಮಾಡತಕ್ಕ ಹಣದ ಪೂರ್ತಿ ಪ್ರತಿಫಲ ದುರ್ಬಲವರ್ಗದವರಿಗೆ ಸಿಕ್ಕುತ್ತಾ ಇಲ್ಲ. ದುರ್ಬಲವರ್ಗದವರ ಏಳಿಗೆ, ಮುಂದಾಳುಗಳಲ್ಲಿ ಎಷ್ಟು ಜನರು ಈ ವಿಚಾರವನ್ನು ಕುರಿತು ಯೋಚಿಸುತ್ತಾರೋ ನಾನರಿಯೆ.

ನಮ್ಮ ದೇಶದ ಅಗಾಧ ಬಡತನಕ್ಕೆ ಕಾರಣವೇನೆಂಬುದನ್ನು ವಿಮರ್ಶಿಸುವುದು ಅಗತ್ಯ. ಕೆಲವು ವರ್ಷಗಳ ಹಿಂದೆ ಆಂಗ್ಲ ಲೇಖಕನೊಬ್ಬನು ನಮ್ಮ ದೇಶವನ್ನು ಕುರಿತು ಬರೆದಿರುವ ಒಂದು ಪುಸ್ತಕದಲ್ಲಿ.

“ಭಾರತೀಯರನ್ನು ಸ್ಮರಿಸಿಕೊಂಡರೆ ನನಗೆ ಜಿಗುಪ್ಸೆ ಉಂಟಾಗುತ್ತದೆ. ಅವರಲ್ಲಿ ಬಡವರಾದವರು ಅತಿಮೂಢರು ಶುದ್ಧ ಸೋಮಾರಿಗಳು. ಅವರಿಗೆ ನಾಗರಿಕ ಮನುಷ್ಯರಂತೆ ಬಾಳಬೇಕೆಂಬ ಹಂಬಲವೇ ಇಲ್ಲ. ಬುದ್ಧಿವಂತರಾದವರು ಹೇಳುವುದು ಒಂದಾದರೆ ಮಾಡುವುದು ಇನ್ನೊಂದು. ಜನರಿಗೆ ನೈರ್ಮಲ್ಯದ ಮೂಲಸೂತ್ರವೇ ಗೊತ್ತಿಲ್ಲ ಎಲ್ಲಿ ಅಂದರೆ ಅಲ್ಲಿ ಮಲಮೂತ್ರ ವಿಸರ್ಜನೆ ಮಾಡುತ್ತಾರೆ” ಎಂದು ಹೇಳಿದ್ದಾನೆ.

ಆ ಲೇಖಕನು ಹೇಳಿದ್ದರಲ್ಲಿ ಬಹಳ ಉತ್ಪ್ರೇಕ್ಷೆ ಇದೆ. ಆದರೆ ಸ್ವಲ್ಪ ಸತ್ಯವೂ ಅಡಗಿದೆ; ಬಹುಶಃ ಸಂಪೂರ್ಣ ನಿರಾಸೆಯಿಂದಲೋ ಅಥವಾ ಅಜ್ಞಾನದಿಂದಲೋ ಬಡವರಲ್ಲಿ ಕೆಲವರಿಗೆ ನಾಗರಿಕ ಮನುಷ್ಯರಂತೆ ಬಾಳಬೇಕೆಂಬ ಆಕಾಂಕ್ಷೆ ಇಲ್ಲ. ಶ್ರೀಮಂತರಲ್ಲಿ ಕೆಲವರ ದುರಾಶೆಗೆ ಮಿತಿಯೇ ಇಲ್ಲ. ಕಷ್ಟ ಪಡದೆ ಸುಖಪಡಬೇಕೆಂಬ ಪ್ರವೃತ್ತಿ ನಮಗೆ ರಕ್ತಗತವಾಗಿ ಬಂದಿರುವ ಹುಟ್ಟುಗುಣ. ಅಪ್ರಮಾಣಿಕತೆ ನಮಗೆ ಅಂಟಿರುವ ಪ್ರಬಲವಾದ ಸೋಂಕು. ಅವಿದ್ಯೆ ಬಡತನಕ್ಕೆ ಮೂಲಕಾರಣ. ಜೊತೆಗೆ ಜಾತಿಪದ್ಧತಿ, ಸೋಮಾರಿತನ, ಸಾರ್ವತ್ರಿಕ ಭ್ರಷ್ಟಾಚಾರ ಆಡಳಿದ ಲೋಪದೋಷಗಳು ಇವುಗಳೂ ಸಹ ಬಡತನಕ್ಕೆ ಕಾರಣಗಳಾಗಿವೆ. ನಾನು ಈಗಾಗಲೇ ಹೇಳಿರುವಂತೆ ಶೇಕಡಾ ೭೫ ರಷ್ಟು ಜನರು ನಿರಕ್ಷರಕುಕ್ಷಿಗಳು. ಅವರಿಗೆ ದೇಶದ ಆಗು ಹೋಗುಗಳೂ ಗೊತ್ತಾಗುವಂತಿಲ್ಲ. ತಮ್ಮ ಬಾಳನ್ನು ಹೇಗೆ ಉತ್ತಮ ಪಡಿಸಿಕೊಳ್ಳಬೇಕೆಂಬ ವಿಧಾನವೂ ಗೊತ್ತಾಗುವುದಿಲ್ಲ. ಜೊತೆಗೆ ಅವರಿಗೆ ರಾಜಕೀಯ ಪ್ರಜ್ಞೆಯೂ ಇಲ್ಲ. ದುರ್ಬಲ ವರ್ಗದ ಜನರನ್ನು ವಿದ್ಯಾವಂತರನ್ನಾಗಿ ಮಾಡದೆ ಅವರನ್ನು ಉದ್ಧಾರ ಮಾಡುತ್ತೇವೆಂದು ಹೇಳಿದರೆ ಅದು ಅರ್ಥವಿಲ್ಲದ ಮಾತು. ದುರ್ಬಲವರ್ಗದವರ ಏಳಿಗೆಗಾಗಿ ಕೈಗೊಳ್ಳುವ ಯೋಜನೆಗಳಲ್ಲಿ, ಅವರನ್ನು ವಿದ್ಯಾವಂತರನ್ನಾಗಿ ಮಾಡುವ ಕಾರ್ಯಕ್ರಮಕ್ಕೆ ಆಗ್ರಸ್ಥಾನ ಇರಬೇಕು. ನಮ್ಮ ಸಂವಿಧಾನದ ನಲವತ್ತೈದನೆ ವಿಧಿಯಲ್ಲಿ ಸಂವಿಧಾನ ಜಾರಿಗೆ ಬಂದ ನಂತರ ಹತ್ತು ವರ್ಷಗಳೊಳಗಾಗಿ ರಾಷ್ಟ್ರದ ಎಲ್ಲ ಮಕ್ಕಳಿಗೂ ಹದಿನಾಲ್ಕು ವರ್ಷ ವಯಸ್ಸಾಗುವ ತನಕ ಶಿಕ್ಷಣ ಕೊಡುವ ಏರ್ಪಾಡು ಆಗಬೇಕೆಂದು ವಿಧಾಯಕವಾಗಿದೆ. ಸಂವಿಧಾನ ಜಾರಿಗೆ ಬಂದು ಇಪ್ಪತ್ತೆಂಟು ವರ್ಷಗಳ ಮೇಲಾಗಿದೆ ಆದರೂ ಇನ್ನೂ ಉಚಿತವಾದ ಕಡ್ಡಾಯ ಶಿಕ್ಷಣ ಜಾರಿಗೆ ಬಂದಿಲ್ಲ. ನನ್ನ ಅಭಿಪ್ರಾಯದಲ್ಲಿ ದುರ್ಬಲ ವರ್ಗಕ್ಕೆ ಸೇರಿದ ಮಕ್ಕಳಿಗೆ ಅವರಿಗೆ ಹದಿನೈದು ವರ್ಷವಾಗುವ ವರೆಗೆ ಸರ್ಕಾರಿ ಖರ್ಚಿನಲ್ಲಿ ಊಟ, ವಸತಿ, ಬಟ್ಟೆ, ಪುಸ್ತಕ ಇವುಗಳನ್ನು ಕೊಟ್ಟು ಶಿಕ್ಷಣ ಕೊಡುವುದು ಅಗತ್ಯ. ಅವರಿಗೆ ಕೆಲವು ವಿಶೇಷ ಸೌಲಭ್ಯಗಳನ್ನೂ ಅವಕಾಶಗಳನ್ನೂ ಕೊಡುವಾಗ ಜಾತಿಯ ಆಧಾರದ ಮೇಲೆ ಕೊಡಬೇಕೆ? ಅಥವಾ ಬಡತನದ ಆಧಾರದ ಮೇಲೆ ಕೊಡಬೇಕೆ? ಎಂಬ ಪ್ರಶ್ನೆ ತೊಡಕಿನ ಪ್ರಶ್ನೆಯಾಗಿದೆ. ಜಾತಿ ಪದ್ಧತಿ ನಮ್ಮ ದೇಶಕ್ಕೆ ತಗಲಿರುವ ದೊಡ್ಡಕಾಟ. ಜಾತಿಪದ್ಧತಿಯ ದೆಸೆಯಿಂದ ಕೆಲವು ಜಾತಿಗಳಿಗೆ ಸೇರಿದವರು ಪರಂಪರೆಯಾಗಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುತ್ತಾರೆ. ಅವರಿಗೆ ವಿಶೇಷ ಸೌಲಭ್ಯ ಮತ್ತು ಅವಕಾಶಗಳನ್ನ ಒದಗಿಸುವಾಗ ಜಾತಿ ಮತ್ತು ಬಡತನ ಇವೆರಡನ್ನೂ ಗಮನದಲ್ಲಿಟ್ಟುಕೊಳ್ಳುವುದು ಆವಶ್ಯಕ. ಆದೆ ವಿಶೇಷ ಸೌಲಭ್ಯಗಳ ದೆಸೆಯಿಂದ ಜಾತಿವೈಷಮ್ಯ ಹೆಚ್ಚಾಗದಂತೆ ನೋಡಿಕೊಳ್ಳುವುದು

ಅಗತ್ಯ. ಮುಂದುವರಿದಿರುವ ಅಮೇರಿಕಾ ದೇಶದಲ್ಲಿ ಸಹ ನೀಗ್ರೋಗಳಿಗೆ ಕೆಲವು ಕ್ಷೇತ್ರಗಳಲ್ಲಿ ಅವಕಾಶಗಳನ್ನು ದೊರಕಿಸುವ ವ್ಯವಸ್ಥೆ ಮಾಡಲಾಗಿದೆ. ನಮ್ಮ ದೇಶದಲ್ಲಿ ಆರ್ಥಿಕ ಕ್ಷೇತ್ರಗಳಲ್ಲಿ ವಿಶೇಷ ಸೌಲಭ್ಯಗಳನ್ನು ಒದಗಿಸುವುದರಿಂದ ದ್ವೇಷ ಅಸೂಯೆಗಳಿಗೆ ಅಷ್ಟಾಗಿ ಅವಕಾಶವುಂಟಾಗುವುದಿಲ್ಲ. ಆದರೆ ಸರ್ಕಾರಿ ನೌಕರಿಯಲ್ಲಿ ವಿಶೇಷ ಅವಕಾಶವನ್ನು ದೊರಕಿಸುವ ಪ್ರಶ್ನೆ ಬಂದಾಗ ಎಲ್ಲರ ಕಣ್ಣು ಕೆಂಪಗಾಗುತ್ತದೆ. ಯಾಕೆಂದರೆ, ಸರ್ಕಾರಿ ಹುದ್ದೆಗಳಿಗೆ ತೀವ್ರ ಪೈಪೋಟಿ ಇದೆ. ಈ ದೇಶದಲ್ಲಿ ಕೆಲವರು ರಾಜಕಾರಣಿಗಳು ತಮ್ಮ ಮೇಲ್ಮೆಗಾಗಿ ದುರ್ಬಲವರ್ಗದವರ ಅಥವಾ ಹಿಂದುಳಿದವರ ಹೆಸರಿನಲ್ಲಿ ಒಂದು ಜಾತಿಯನ್ನು ಇನ್ನೊಂದು ಜಾತಿಯ ಮೇಲೆ ಎತ್ತಿಕಟ್ಟುತ್ತಿದ್ದಾರೆ. ಇದರಿಂದ ಇತ್ತೀಚಿನ ವರ್ಷಗಳಲ್ಲಿ ಪರಸ್ಪರ ಸಂಶಯ ಮತ್ತು ಜಾತಿದ್ವೇಷ ಹೆಚ್ಚಾಗುತ್ತಾ, ಜಾತಿಯತೆಯ ವಿಷಜ್ವಾಲೆ ಕೆಲವುಕಡೆ ಪ್ರಜ್ವಲಿಸಿ ಉರಿಯುತ್ತಾ ಇದೆ. ಶತಮಾನಗಳ ಹಿಂದೆ ನಮ್ಮ ಪೂರ್ವಿಕರು ದೇಶ ಪ್ರೇಮವನ್ನು ತೊರೆದು ಸ್ವಾರ್ಥ ಸಾಧನೆಗಾಗಿ ಪರಸ್ಪರ ಕಚ್ಚಾಡಿ ಪರಕೀಯರ ಆಳ್ವಿಕೆಗೆ ಅಸ್ಪದ ಕೊಟ್ಟರು. ಸ್ವಾರ್ಥಸಾಧನೆಗಾಗಿ ಪರಸ್ಪರ ಕಚ್ಚಾಡುವ ಪ್ರವೃತ್ತಿ ನಮಗೆ ರಕ್ತಗತವಾಗಿ ಬಂದಿದೆ. ಈ ಪ್ರವೃತ್ತಿಯನ್ನು ಇಂದಿನ ರಾಜಕಾರಣದಲ್ಲಿ ಅಲ್ಲಲ್ಲಿ ಅನುದಿನವೂ ನಾವು ನೋಡುತ್ತಿದ್ದೇವೆ. ಈ ಪ್ರವೃತ್ತಿಯನ್ನು ನಾವು ತಡೆಗಟ್ಟದಿದ್ದರೆ ದುರ್ಬಲ ವರ್ಗದವರ ಪ್ರಗತಿಯಾಗುವುದಿಲ್ಲ. ದೇಶದ ಪ್ರಗತಿಯೂ ಆಗುವುದಿಲ್ಲ.

ನಾವು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಮಹಾತ್ಮಾಗಾಂಧೀ ಮತ್ತು ಇತರ ಮಹಾನಾಯಕರು ಇತ್ತ ಸ್ಫೂರ್ತಿ ಮತ್ತು ಮಾರ್ಗದರ್ಶನದಿಂದ ನಮ್ಮಲ್ಲಿ ರಾಷ್ಟ್ರ ಭಕ್ತಿಯುಂಟಾಗಿತ್ತು. ಒಗ್ಗಟ್ಟು ಪ್ರಾಪ್ತಿಯಾಗಿತ್ತು. ಜಾತೀಯತೆ ಕಡಿಮೆಯಾಗಿತ್ತು. ಸ್ವರಾಜ್ಯ ಬಂದ ನಂತರ ಕ್ರಮೇಣ ಈ ಗುಣಗಳು ಮಾಯವಾಗುತ್ತಾ ಬಂದು ನಾವು ಮೊದಲಿದ್ದ ಸ್ಥಿತಿಗೇ ಬರುತ್ತಾ ಇದ್ದೇವೆ. ಇತಿಹಾಸದಿಂದ ನಾವು ಯಾವ ಪಾಠವನ್ನೂ ಕಲಿತಂತೆ ತೋರಲಿಲ್ಲ. ಈ ದೇಶದ ಅರವತ್ತೊಂದು ಕೋಟಿ ಜನರಲ್ಲಿ ಎಷ್ಟು ಜನರ ವಾರಕ್ಕೆ ಒಂದು ಸಾರಿಯಾದರೂ ದೇಶದ ಭವಿಷ್ಯವನ್ನು ಕುರಿತು ಚಿಂತಿಸುತ್ತಾರೆಂಬುದು ಕುತೂಹಲವನ್ನು ಕೆರಳಿಸುವ ಪ್ರಶ್ನೆ.ಆ ಪ್ರಶ್ನೆಗೆ ಅವರವರೇ ಆತ್ಮಶೋಧನೆಯಿಂದ ಉತ್ತರ ಪಡೆಯಬೇಕಾಗಿದೆ. ಉತ್ಕಟ ರಾಷ್ಟ್ರ ಪ್ರೇಮವಿಲ್ಲದೆ ರಾಷ್ಟ್ರದ ಪ್ರಗತಿಯೂ ಜರುಗುವುದಿಲ್ಲ. ದುರ್ಬಲವರ್ಗದವರ ಪ್ರಗತಿಯೂ ಜರಗುವುದಿಲ್ಲ. ದುರ್ಬಲವರ್ಗದವರ ಪ್ರಗತಿ ರಾಷ್ಟ್ರದ ಪ್ರಗತಿಯನ್ನು ಅವಲಂಬಿಸಿರುತ್ತದೆ. ರಾಷ್ಟ್ರವು ಸರ್ವತೋಮುಖವಾಗಿ ಉನ್ನತಿಯ ಹಾದಿಯನ್ನು ಹಿಡಿದರೆ ದುರ್ಬಲವರ್ಗದವರೂ

ಉನ್ನತಿಯ ಹಾದಿ ಹಿಡಿಯುತ್ತಾರೆ. ರಾಷ್ಟ್ರವು ಅವನತಿಯ ಹಾದಿಯನ್ನು ಹಿಡಿದರೆ ದುರ್ಬಲವರ್ಗದವರೂ ಅವನತಿಯ ಹಾದಿಯನ್ನು ಹಿಡಿಯುತ್ತಾರೆ.

ಬಡತನದ ನಿವಾರಣೆ ಬಹುಮಟ್ಟಿಗೆ ರಾಜಕಾರಣವನ್ನೂ ಆಡಳಿತವನ್ನೂ ಅವಲಂಬಿಸಿದೆ. ರಾಜಕಾರಣದಲ್ಲಿ ಆದರ್ಶವಿದ್ದರೆ, ಆಡಳಿತ ದಕ್ಷತೆಯಿಂದ ಕೂಡಿ ಸ್ವಚ್ಛವಾಗಿದ್ದರೆ ಜನರಲ್ಲಿ ಶಿಸ್ತುಸಂಯಮಗಳಿದ್ದರೆ, ದೇಶದಲ್ಲಿ ಒಗ್ಗಟ್ಟಿದ್ದರೆ, ದುರ್ಬಲವರ್ಗದವರ ಸಮಸ್ಯೆಗಳೂ, ದೇಶದ ಇತರ ಸಮಸ್ಯೆಗಳೂ ಪರಿಹಾರವನ್ನು ಕಾಣುತ್ತವೆ. ಇನ್ನೊಂದು ಮಾತನ್ನು ಹೇಳದೆ ವಿಧಿಯಿಲ್ಲ. ನಮಗೆ ಸದಾ ನಮ್ಮ ಹಕ್ಕು ಬಾಧ್ಯತೆಗಳ ವಿಚಾರದಲ್ಲೇ ಚಿಂತೆ, ನಮ್ಮ ಜವಾಬ್ದಾರಿ ಏನೆಂಬುದನ್ನು ಕುರಿತು ಯೋಚಿಸುವುದೇ ಇಲ್ಲ. ನನಗೆ ಹೆಚ್ಚು ವರಮಾನಬೇಕು. ಹೆಚ್ಚು ಸಂಬಳಬೇಕು. ಹೆಚ್ಚು ತುಟ್ಟಿಭತ್ಯ, ಬೋನಸ್ಸು ಬೇಕು. ಆದರೆ ಕೆಲಸ ಮಾತ್ರ ಬಹಳ ಹಗುರವಾಗಿರಬೇಕು. ಸಮಾಜವಾದಿ ರಾಷ್ಟ್ರಗಳಲ್ಲಿ ಸಂಪತ್ತನ್ನು ಹಂಚುವ ವಿಚಾರದಲ್ಲಿ ಎಷ್ಟು ಆಸಕ್ತಿ ವಹಿಸುತ್ತಾರೋ, ಅದಕ್ಕಿಂತ ಹೆಚ್ಚು ಆಸಕ್ತಿಯನ್ನೇ ಸಂಪತ್ತನ್ನು ಉತ್ಪಾದನೆ ಮಾಡುವ ವಿಚಾರದಲ್ಲಿ ವಹಿಸುತ್ತಾರೆ. ನಮ್ಮ ದೇಶದಲ್ಲಿ ಸಂಪತ್ತನ್ನು ಸೃಷ್ಟಿಸದೆ ಸಮಪಾಲಿಗಾಗಿ ಹೋರಾಟ ನಡೆಯುತ್ತಾ ಇದೆ. ಕೊನೆಯದಾಗಿ ಈ ದೇಶದ ದಾರಿದ್ರ್ಯ ನಿವಾರಣೆಯಾಗಬೇಕಾಗದೆ ರಾಜಕಾರಣದ ರೀತಿ ನೀತಿಗಳಲ್ಲಿ ಮಹತ್ತರವಾಗಿ ಬದಲಾವಣೆ ಆಗಬೇಕು. ಆಡಳಿತ ಕ್ರಮದಲ್ಲಿ ಮಹತ್ತರವಾದ ಸುಧಾರಣೆ ಆಗಬೇಕು. ಭ್ರಷ್ಟಾಚಾರ ಕಡಿಮೆಯಾಗಬೇಕು. ದೇಶದಲ್ಲಿ ಒಂದು ಹೊಸ ವಾತಾವರಣ ಉಂಟಾಗಬೇಕು. ನಮಗೂ ನಮ್ಮ ನಾಯಕರಿಗೂ ದಿಟ್ಟತನದ ಹೊಸ ಸಂಕಲ್ಪ, ಹೊಸ ದೃಷ್ಟಿ, ಹೊಸ ಕಲ್ಪನೆ, ಹೊಸ ಆದರ್ಶ, ಹೊಸಹಾದಿ ಆವಶ್ಯಕ.

# ನಾನೇಕೆ ರಾಜಕಾರಣವನ್ನು ಬಿಟ್ಟೆ ?

೧೯೬೭ ರಿಂದಲೂ, ಆಗಾಗ ಕೆಲವರು 'ನೀವೇಕೆ ರಾಜಕಾರಣ ಬಿಟ್ಟಿದ್ದು' ಎಂದು ಕೇಳುತ್ತಾ ಇದ್ದಾರೆ. ನಾನು ಅಧಿಕಾರ ಸಂಪಾದನೆಗಾಗಿ ರಾಜಕಾರಣಕ್ಕೆ ಧುಮುಕಿದ್ದವನಲ್ಲ, ಆಂಗ್ಲರ ದಾಸ್ಯ ಶೃಂಖಲೆಗಳಿಂದ ಮಾತೃಭೂಮಿಯ ಬಿಡುಗಡೆಗಾಗಿ ನನ್ನ ಅಳಿಲು ಸೇವೆಯನ್ನು ಸಲ್ಲಿಸಬೇಕೆಂದು ಉದ್ದೇಶದಿಂದ ೧೯೩೬ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸೇರಿದ್ದೆ. ೧೯೩೭ ರಲ್ಲಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾದೆ. ಆಗ ಮೈಸೂರು ಕಾಂಗ್ರೆಸ್ ಇನ್ನೂ ಹುಟ್ಟಿರಲಿಲ್ಲ. ಆ ಕಾಲದಲ್ಲಿ ಕಾಂಗ್ರೆಸ್ಸನ್ನು ಸೇರುತ್ತಿದ್ದವರಿಗೆ ಶಾಸಕರಾಗಬೇಕೆಂಬ ಆಸೆಯಿರಲಿಲ್ಲ; ಮಂತ್ರಿಗಳಾಗಬೇಕೆಂದು ಆಕಾಂಕ್ಷೆ ಇರಲಿಲ್ಲ; ರಾಜಕಾರಣದಿಂದ ಹಣಗಳಿಸಬೇಕೆಂಬ ದುರಾಸೆ ಇರಲಿಲ್ಲ: ೧೯೪೭ ರಲ್ಲಿ ರಾಷ್ಟ್ರ ಸ್ವತಂತ್ರವಾದ ನಂತರ, ಸ್ವಾರ್ಥಸಾಧಕ ಜನರು ಅಧಿಕಾರಕ್ಕಾಗಿ ಕಾಂಗ್ರೆಸ್ ಪಕ್ಷವನ್ನು ಸೇರಲಾರಂಭಿಸಿದರು. ಅವರಲ್ಲಿ ಬಹುಮಂದಿಗೆ ಆದರ್ಶವೂ ಇರಲಿಲ್ಲ; ಕ್ರಮೇಣ ಈ ಹೊಸ ಪೀಳಿಗೆಯ ಕಾಂಗ್ರೆಸ್ ಜನ ಅಲ್ಲಲ್ಲಿ ತಾಲ್ಲೂಕು ಕಾಂಗ್ರೆಸ್ ಸಮಿತಿಗಳನ್ನೂ ಜಿಲ್ಲಾ ಕಾಂಗ್ರೆಸ್ ಸಮಿತಿಗಳನ್ನೂ ಮೋಸ ಕೃತ್ರಿಮಗಳಿಂದಲೂ, ಲಂಚರುಸುವತ್ತುಗಳಿಂದಲೂ ಆಕ್ರಮಿಸಿಕೊಳ್ಳುತ್ತಾ ಬಂದರು. ೧೯೫೬ ರಲ್ಲಿ ರಾಜ್ಯಗಳ ಪುನರ್ವಿಂಗಡಣೆಯಾದ ನಂತರ ಕಾಂಗ್ರೆಸ್ ಪಕ್ಷದಲ್ಲಿ ಅಧಿಕಾರಕ್ಕಾಗಿ ದಿನೇ ದಿನೇ ಅಹಿತ ಪೈಪೋಟಿ ಹೆಚ್ಚಾಗುತ್ತಾ ಬಂತು. ಅಹಿತ ಪೈಪೋಟಿಯ ದೆಸೆಯಿಂದ ಕಾಂಗ್ರೆಸ್ ರಾಜಕಾರಣದಲ್ಲಿ ಕ್ರಮೇಣ ಭ್ರಷ್ಟಾಚಾರ ಹೆಚ್ಚಾಗುತ್ತಾ ಬಂತು. ಮಿತಿಮೀರಿದ ಅಧಿಕಾರದಾಹ ಪೀಡಿತರಾಗಿದ್ದ, ಕೆಲವರು ಚುನಾವಣೆಗಳಲ್ಲಿ ಹಣ ಹೆಂಡಗಳ ಸಂತರ್ಪಣೆಗಳನ್ನು ಮಾಡಲಾರಂಭಿಸಿದರು. ಈ ಅಕ್ರಮ ಕಾರುಬಾರುಗಳು ಈ ರಾಜ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ರಾಷ್ಟ್ರದ ಎಲ್ಲಾ ಕಡೆಗಳಲ್ಲಿಯೂ ನಡೆಯುತ್ತಾ ಬಂದವು.

ಶಾಸಕರು ಅಥವಾ ಮಂತ್ರಿಗಳು ಆಗಬೇಕೆಂದು ಹವಣಿಸುತ್ತಿದ್ದವರು. ತಾಲ್ಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ನಾನಾ ಕುಟಿಲೋಪಾಯಗಳಿಂದ ಕಾಂಗ್ರೆಸ್ ಸಮಿತಿಗಳಲ್ಲಿ ತಾವು ಹೇಳುವಂತೆ ಕೇಳುವವರನ್ನೇ ಆರಿಸಿ ಬರುವಂತೆ ಮಾಡುತ್ತಿದ್ದರು. ತಮಗೆ ಬೇಕಾದವರನ್ನು ಮಾತ್ರ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡುವುದು, ಕಾಂಗ್ರೆಸ್ ಸಮಿತಿಗಳಿಗೆ

ಚುನಾವಣೆ ನಡೆಯುವ ಮುನ್ನ ತಮಗೆ ಬೇಕಾದವರನ್ನು ಮಾತ್ರ ಮತದಾರರ ಪಟ್ಟಿಯಲ್ಲಿ ಸೇರಿಸುವುದು. ಕೆಲವು ಕಡೆಗಳಲ್ಲಿ ಕಾಂಗ್ರೆಸ್ ಸಮಿತಿಗಳಿಗೆ ನಡೆಯತಕ್ಕ ಚುನಾವಣೆಗಳ ವೇಳೆಪಟ್ಟಿಯನ್ನು ಪ್ರಕಟಿಸದೆ ಗುಪ್ತವಾಗಿ ಚುನಾವಣೆಯ ಶಾಸ್ತ್ರಗಳನ್ನು ಮಾಡುವುದು ಇವೇ ಮುಂತಾದ ಅಕ್ರಮ ನಡವಳಿಕೆಗಳನ್ನು ನಡೆಸಲಾರಂಭಿಸಿದರು. ಬರಬರುತ್ತಾ ನಿಷ್ಠಾವಂತ ಪ್ರಾಮಾಣಿಕ ಕಾಂಗ್ರೆಸ್ ಕಾರ್ಯಕರ್ತರು ಕಾಂಗ್ರೆಸ್ ಸಮಿತಿಗಳಿಗೆ ನಡೆಯುತ್ತಿದ್ದ ಚುನಾವಣೆಗಳಲ್ಲಿ ಗೆದ್ದುಬರುವುದು ಕಷ್ಟವಾಗುತ್ತಾ ಬಂತು. ನಮ್ಮ ಜಿಲ್ಲೆಯಲ್ಲಿ ಮತ್ತು ನನ್ನ ಚುನಾವಣಾ ಕ್ಷೇತ್ರದಲ್ಲಿ ನನಗೆ ಅಪಾರವಾದ ಜನಬೆಂಬಲವಿತ್ತು. ೧೯೪೫ ರಲ್ಲಿ ಮೈಸೂರು ಸಂಸ್ಥಾನದ ನ್ಯಾಯಾವಿಧಾಯಕ ಸಭೆಗೆ ಶಿವಮೊಗ್ಗ ಜಿಲ್ಲೆಯಿಂದ ಚುನಾವಣೆ ನಡೆದಿದ್ದಾಗ ನಾನೂ ಮತ್ತು ನನ್ನ ಸ್ನೇಹಿತರಾದ ಶ್ರೀ ಹೆಚ್.ಎಸ್. ರುದ್ರಪ್ಪನವರೂ ಅವಿರೋಧವಾಗಿ ಚುನಾಯಿತರಾಗಿದ್ದೆವು. ೧೯೫೭ ರಲ್ಲಿ ರಾಜ್ಯದ ವಿಧಾನಸಭೆಗೆ ನಡೆದ ಚುನಾವಣೆಗಳಲ್ಲಿ ನಾನು ಶೃಂಗೇರಿ ಕ್ಷೇತ್ರದಿಂದ ಅವಿರೋಧವಾಗಿ ಚುನಾಯಿತನಾಗಿದ್ದೆ, ಆದರೆ ಆ ನಂತರ ನನಗೆ ಜಿಲ್ಲಾ ಮತ್ತು ಪ್ರದೇಶ ಕಾಂಗ್ರೆಸ್ ಸಮಿತಿಗಳಿಗೆ ಸದಸ್ಯನಾಗುವುದೂ ಕೂಡ ಕಷ್ಟವಾಗುತ್ತಾ ಬಂತು. ೧೯೫೭ ರ ನಂತರ ಕೆಲವರು ಕಾಂಗ್ರೆಸ್ಸಿಗರು ನನ್ನ ಪ್ರಭಾವವನ್ನು ತಗ್ಗಿಸಬೇಕೆಂಬ ಉದ್ದೇಶದಿಂದ ಮೂರು ಕಾಸಿನ ಮತ್ತು ಆರು ಕಾಸಿನ ಪತ್ರಿಕೆಗಳಲ್ಲಿ ನಮ್ಮ ಮೇಲೆ ಸುಳ್ಳು ಆಪಾದನೆಗಳನ್ನು ಪ್ರಚಾರ ಮಾಡುತ್ತಾ ಬಂದರು. ಕಾಂಗ್ರೆಸ್ ರಾಜಕಾರಣದ ಹೆಸರಿನಲ್ಲಿ ನಡೆಯುತ್ತಿದ್ದ ಅಹಿತ ಪೈಪೋಟಿ, ಭಷ್ಟಾಚಾರ ಮುಂತಾದುವುಗಳನ್ನು ನೋಡಿ ಸಹಿಸಲಾರದೆ ತಾರೀಖು ೨೭-೦೨-೧೯೬೦ ರಂದು ಅಂದು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ. ನೀಲಂ ಸಂಜೀವರೆಡ್ಡಿಯವರಿಗೆ ವಿವರವಾಗಿ ಒಂದು ಪತ್ರವನ್ನು ಬರೆದಿದ್ದೆ.

೧೯೫೬ ರ ಹಿಂದೆ ಶಾಸನ ಸಭೆಗಳಿಗೆ ನಡೆಯತಕ್ಕ ಚುನಾವಣೆಗಳಲ್ಲಿ ಕಾಂಗ್ರೆಸ್ ಪರ ಅಭ್ಯರ್ಥಿಗಳನ್ನು ಆರಿಸುವಾಗ ಅವರ ಹಿಂದಿನ ಇತಿಹಾಸ ಪ್ರಾಮಾಣಿಕತೆ ಜನಾನುರಾಗ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಆರಿಸುತ್ತಿದ್ದರು. ೧೯೫೬ರ ನಂತರ ಗುಂಪು ನಾಯಕರು ತಮ್ಮ ತಾಳಕ್ಕೆ ಸರಿಯಾಗಿ ಕುಣಿಯುವವರಿಗೆ ಮಾತ್ರ ಕಾಂಗ್ರೆಸ್ ಟಿಕೆಟ್ ನೀಡಲಾರಂಭಿಸಿದರು. ಇದರ ಪರಿಣಾಮವಾಗಿ ಕಾಂಗ್ರೆಸ್ ಪಕ್ಷದ ಪರವಾಗಿ ಚುನಾವಣೆಗಳಲ್ಲಿ ಸ್ಪರ್ಧಿಸುವವರಿಗೆ ಪ್ರಾಮಾಣಿಕತೆಯಾಗಲೀ. ರಾಷ್ಟ್ರಪ್ರೇಮವಾಗಲೀ ಜನಾನುರಾಗವಾಗಲೀ ಅರ್ಹತೆಗಳೆಂದು ಪರಿಗಣಿಸಲ್ಪಡುತ್ತಿರಲಿಲ್ಲ. ನಾಯಕರು ಹೇಳಿದಂತೆ ಕೇಳುವುದೊಂದೇ ಅವರ ಅರ್ಹತೆಯಾಯಿತು. ೧೯೬೨

ರಲ್ಲಿ ನಾನು ಪುನಃ ವಿಧಾನಸಭೆಗೆ ಶೃಂಗೇರಿ ಕ್ಷೇತ್ರದಿಂದ ಕಾಂಗ್ರೆಸ್ ಪರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದೆ. ಈ ಚುನಾವಣೆಯಲ್ಲಿ ನನ್ನನ್ನು ಸೋಲಿಸಲು ಕೆಲವು ಕಾಂಗ್ರೆಸ್ ಮುಖಂಡರೇ ಒಳಗಿಂದೊಳಗೆ ಪಿತೂರಿಯನ್ನು ನಡೆಸಿದರು. ಆ ಚುನಾವಣೆಯಲ್ಲಿ ನನ್ನ ಮೇಲೆ ನಡೆದ ಅಪಪ್ರಚಾರ, ಭಷ್ಟಾಚಾರದ ಆಪಾದನೆ ಮುಂತಾದುವುಗಳಿಂದ ನನ್ನ ಮನಸ್ಸು ಬಹಳ ನೊಂದು ಹೋಗಿತ್ತು. ಕಾಂಗ್ರೆಸ್ ರಾಜಕಾರಣದಲ್ಲಿ ಇನ್ನು ಮುಂದೆ ಪ್ರಾಮಾಣಿಕತೆಗೆ ಬೆಲೆಯಿಲ್ಲವೆಂದು ಮನಗಂಡೆನು. ಈ ಚುನಾವಣೆಯಲ್ಲಿ ನನಗಾದ ಅನುಭವದ ಹಿನ್ನೆಲೆಯಲ್ಲಿ ಚುನಾವಣೆಯಾದ ನಂತರ ನನ್ನ ಮೊದಲನೆಯ ರಾಜಕೀಯ ಕಾದಂಬರಿ "ಪಂಜರವಳ್ಳಿಯ ಪಂಜು" ಎಂಬ ಗ್ರಂಥವನ್ನು ಬರೆದೆ. ಈ ಕಾದಂಬರಿಯಲ್ಲಿ ದುಷ್ಟರೂ ಭ್ರಷ್ಟರೂ ಯಾವ ರೀತಿ ಕಾಂಗ್ರೆಸ್ ಪಕ್ಷವನ್ನು ಆಕ್ರಮಿಸಿಕೊಳ್ಳುತ್ತಾ ಇದ್ದಾರೆಂಬುದನ್ನು ಹೃದಯಯಂಗಮವಾಗಿ ಚಿತ್ರಿಸಿದ್ದೇನೆ.

೧೯೬೨ ರ ನಂತರ ಕಾಂಗ್ರೆಸ್ ರಾಜಕಾರಣದಲ್ಲಿ ಅಹಿತಪೈಪೋಟಿ ದಿನೇ ದಿನೇ ಹೆಚ್ಚಾಗತೊಡಗಿತು. ಇದರ ಪರಿಣಾಮವಾಗಿ ಗುಂಪುಗಾರಿಕೆಯು ಹೆಚ್ಚಾಗುತ್ತಾ ಬಂತು. ೧೯೬೨ರಲ್ಲಿ ವಿಧಾನ ಸಭೆಗೆ ಸಾರ್ವತ್ರಿಕ ಚುನಾವಣೆಗಳಾದ ನಂತರ ಕಾಂಗ್ರೆಸ್ ಪಕ್ಷದ ನಾಯಕರ ಚುನಾವಣೆ ನಡೆಯಬೇಕಾಗಿತ್ತು. ನಾಯಕರ ಚುನಾವಣೆಗಾಗಿ ಕಾಂಗ್ರೆಸ್ ವರಿಷ್ಠ ಮಂಡಲಿಯ ಪರವಾಗಿ ಶ್ರೀ ಲಾಲ್‌ಬಹದ್ದೂರ್‌ಶಾಸ್ತ್ರಿಯವರು ವೀಕ್ಷಕರಾಗಿ ಬೆಂಗಳೂರಿಗೆ ಬಂದಿದ್ದರು. ಅವರು ರಾಜ್ಯದ ಎಲ್ಲಾ ಕಾಂಗ್ರೆಸ್ ಶಾಸಕರ ಅಭಿಪ್ರಾಯಗಳನ್ನು ಸಂಗ್ರಹಿಸಿದ ನಂತರ ನನ್ನನ್ನು ಪ್ರತ್ಯೇಕ್ಷವಾಗಿ ಬರಮಾಡಿಕೊಂಡು ಶಾಸಕರು ಕಾಂಗ್ರೆಸ್ ಪಕ್ಷದ ನಾಯಕ ಸ್ಥಾನಕ್ಕೆ ಸೂಚನೆ ಮಾಡಿದ ಹೆಸರುಗಳು ತಮಗೆ ತೃಪ್ತಿಕರವಾಗಿಲ್ಲವೆಂದೂ, ನಾಯಕ ಸ್ಥಾನಕ್ಕೆ ನನ್ನ ಹೆಸರನ್ನು ತಾವು ಸೂಚಿಸುವುದಾಗಿಯೂ ನನಗೆ ಹೇಳಿದರು. ಅಂದು ಕಾಂಗ್ರೆಸ್ ಪಕ್ಷದಲ್ಲಿದ್ದ ಗುಂಪು ರಾಜಕಾರಣದಲ್ಲಿ ನಾಯಕ ಸ್ಥಾನಕ್ಕೆ ಚುನಾವಣೆ ನಡೆದರೆ ನಾನು ಗೆಲ್ಲುವುದು ಕಷ್ಟವಾಗಬಹುದೆಂದೂ ಆದ್ದರಿಂದ ಅವರು ಮನಸ್ಸಿಲ್ಲದ ಮನಸ್ಸಿನಿಂದ ನನ್ನ ಅಭಿಪ್ರಾಯವನ್ನು ಒಪ್ಪಿದರು. ನಂತರ ದಿವಂಗತ ಶ್ರೀ ಕಂಠಿಯವರು ನಾಯಕರಾಗಿ ಆಯ್ಕೆಹೊಂದಿ ಮುಖ್ಯಮಂತ್ರಿಗಳಾದರು. ಬರಬರುತ್ತಾ ಕಾಂಗ್ರೆಸ್ ಪಕ್ಷದ ರಾಜಕಾರಣ ಹೊಲಸಾಗುತ್ತಾ ಬಂದಿತು. ಕೆಲವರು ಮಂತ್ರಿಗಳೂ ಕೆಲವರು ಶಾಸಕರೂ ತಮಗಾಗದ ರಾಜಕೀಯ ವ್ಯಕ್ತಿಗಳ ಮೇಲೆ ಸೇಡನ್ನು ತೀರಿಸಿಕೊಳ್ಳುವ ಕಾರ್ಯಗಳನ್ನು ಮಾಡಲಾರಂಭಿಸಿದರು. ತಮಗಾಗದವರ ಮೇಲೆ ಅಪಪ್ರಚಾರವನ್ನು ಮಾಡುವುದಕ್ಕಾಗಿಯೇ ಕೆಲವರನ್ನು ಎತ್ತಿಕಟ್ಟಿದ್ದರು. ನಾನು ೧೯೬೨ ರಿಂದ ೧೯೬೭

ರವರೆಗೆ ಕಾಂಗ್ರೆಸ್ ಪಕ್ಷದ ವಿಧಾನ ಸಭೆಯ ಸದಸ್ಯನಾಗಿದ್ದೆ. ಈ ಅವಧಿಯಲ್ಲಿ ಕೆಲವು ಕಹಿ ಪ್ರಸಂಗಗಳನ್ನು ಅನುಭವಿಸಬೇಕಾಗಿ ಬಂತು. ಜೊತೆಗೆ ಕೆಲವು ಮಂತ್ರಿಗಳ ಮೇಲೂ ಕೆಲವು ಶಾಸಕರ ಮೇಲೂ ಭ್ರಷ್ಟಾಚಾರದ ಆರೋಪವನ್ನು ಆಗಾಗ ಕೇಳುತ್ತಿದ್ದೆ. ತಾರೀಖು ೧೦-೦೩-೧೯೬೪ ರಂದು ನಾನು ಇಲ್ಲದಿದ್ದ ಸಮಯದಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರೊಬ್ಬರು ಬಡ್ಜೆಟ್ ಮೇಲೆ ಮಾತನಾಡುತ್ತಿದ್ದಾಗ ನಾನು ಮಂತ್ರಿಯಾಗಿದ್ದಾಗ ನನಗೆ ಆಪ್ತರಾದವರಿಗೆ ಸಹಾಯಮಾಡುವ ಉದ್ದೇಶದಿಂದ ಯಾವುದೋ ಒಂದು ರೆವಿನ್ಯೂ ಅಪೀಲು ಪ್ರಕರಣದಲ್ಲಿ ಹಸ್ತಕ್ಷೇಪ ಮಾಡಿದ್ದೇನೆಂದು ಬಹಿರಂಗವಾಗಿ ವಿಧಾನಸಭೆಯಲ್ಲಿ ಹೇಳಿದ್ದರು. ಅರ್ಧ ಗಂಟೆಯ ನಂತರ ನಾನು ವಿಧಾನ ಸಭೆಗೆ ಹೋದಾಗ ನನ್ನ ಮೇಲೆ ಆ ಸದಸ್ಯರು ಮಾಡಿದ ಆಪಾದನೆ ಗೊತ್ತಾಯಿತು. ಅನಂತರ ವಿಧಾನಸಭೆಯ ಅಧ್ಯಕ್ಷರ ಅಪ್ಪಣೆ ಪಡೆದು ಆ ಸದಸ್ಯ ಮಹನೀಯರು ಮಾಡಿದ ಆಪಾದನೆ ಸುಳ್ಳೆಂದು ಕಾಗದ ಪತ್ರಗಳ ಆಧಾರದಿಂದ ಸಾಬೀತು ಮಾಡಿದೆ.

೧೯೬೭ರಲ್ಲಿ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ಪುನಃ ನಡೆಯಬೇಕಾಗಿತ್ತು ನಾನು ಚುನಾವಣೆಯಲ್ಲಿ ಪುನಃ ಸ್ಪರ್ಧಿಸಿದ್ದರೆ ಗೆಲ್ಲುವುದರಲ್ಲಿ ಅನುಮಾನವಿರಲಿಲ್ಲ. ಆದರೆ ರಾಜಕಾರಣದಲ್ಲಿ ನನಗೆ ಬಹಳ ಜಿಗುಪ್ಸೆ ಉಂಟಾಗಿತ್ತು. ೧೯೬೬ನೆಯ ಆಗಸ್ಟ್ ತಿಂಗಳಲ್ಲಿ ಅಂದು ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಶ್ರೀ ಕೆ.ಕಾಮರಾಜ್‌ರವರಿಗೆ ನಾನು ಬರೆದಿದ್ದ ಧೀರ್ಘವಾದ ಪತ್ರದಲ್ಲಿ ಕಾಂಗ್ರೆಸ್ ರಾಜಕಾರಣ ಯಾವ ರೀತಿ ಅಧೋಗತಿಯ ಹಾದಿಯನ್ನು ಹಿಡಿದಿದೆ ಎಂಬುದನ್ನು ವರ್ಣಿಸಿ ರಾಷ್ಟ್ರದ ಹಿತದೃಷ್ಟಿಯಿಂದ ಮತ್ತು ಕಾಂಗ್ರೆಸ್ ಪಕ್ಷದ ಹಿತ ದೃಷ್ಟಿಯಿಂದ ಕಾಂಗ್ರೆಸ್ ರಾಜಕಾರಣವನ್ನು ಶುದ್ಧಿಗೊಳಿಸಲು ತ್ವರಿತವಾಗಿ ಕ್ರಮ ಕೈಗೊಳ್ಳಬೇಕೆಂದು ವಿನಂತಿ ಮಾಡಿಕೊಂಡಿದ್ದೆ. ಅಲ್ಲದೆ ಅಂದಿದ್ದ ವಾತಾವರಣದಲ್ಲಿ ನಾನು ೧೯೬೭ ರಲ್ಲಿ ನಡೆಯಲಿದ್ದ ಚುನಾವಣೆಗೆ ಸ್ಪರ್ಧಿಸುವುದೂ ಕೂಡ ಅಸಂಭವವೆಂದು ಆ ಪತ್ರದಲ್ಲಿ ಬರೆದಿದ್ದೆ. ಆ ಪತ್ರಕ್ಕೆ ಅವರು ನನಗೆ ತಾರೀಖು ೨೫-೮-೧೯೬೬ ರಂದು ಜವಾಬು ಬರೆದರು. ಆದರೆ ಅ ಜವಾಬಿನಲ್ಲಿ ಶುದ್ಧಿಕರಣದ ಯಾವ ವಿಚಾರವೂ ಇರಲಿಲ್ಲ. ಅಷ್ಟು ಹೊತ್ತಿಗಾಗಲೆ ನನ್ನ ತಾಳ್ಮೆ ಕೆಟ್ಟು ಹೋಗಿತ್ತು ಕಟ್ಟಕಡೆಯಲ್ಲಿ ನಾನು ತಾರೀಖು ೧೩-೧೨-೧೯೬೬ರಂದು ಶ್ರೀ ಕಾಮರಾಜ್‌ರವರಿಗೆ ಬರೆದ ಪತ್ರದಲ್ಲಿ ಮುಂಬರಲಿದ್ದ ಚುನಾವಣೆಗಳಲ್ಲಿ ನಾನು ಸ್ಪರ್ಧಿಸುವುದಿಲ್ಲವೆಂದೂ, ಶೃಂಗೇರಿ ಕ್ಷೇತ್ರದಿಂದ ನನ್ನ ಬದಲಾಗಿ ಈಗ ವಿದ್ಯಾ ಇಲಾಖೆಯ ರಾಜ್ಯ ಸಚಿವರಾಗಿರುವ ಶ್ರೀ ಹೆಚ್.ಜಿ.ಗೋವಿಂದೇ ಗೌಡರನ್ನು ಕಾಂಗ್ರೆಸ್ ಪಕ್ಷದ ಪರವಾಗಿ ಉಮೇದುವಾರರನ್ನಾಗಿ ಆರಿಸಬೇಕೆಂದೂ

ಮನವಿ ಮಾಡಿದ್ದೆ. ಅನಂತರ ತಾರೀಖು: ೨೪-೧೨-೧೯೬೬ ರಂದು ನನ್ನ ಎರಡನೆಯ ರಾಜಕೀಯ ಕಾದಂಬರಿ "ನಾಳೆಯ ನೆಳಲು" ಎಂಬ ಗ್ರಂಥವನ್ನು ಪ್ರಕಟಿಸಿ ೧೯೬೭ ರಿಂದ ಸಕ್ರಿಯ ರಾಜಕಾರಣದಿಂದ ನಿವೃತ್ತನಾದೆ. ನನ್ನ "ನಾಳೆಯ ನೆಳಲು" ಎಂಬ ಕಾದಂಬರಿಯಲ್ಲಿ ಮುಂದೆ ನೈತಿಕ ಅಧಃಪತನ ಪ್ರಾಪ್ತಿಯಾಗುತ್ತದೆಯೆಂಬುದನ್ನು ಊಹಿಸಿ ಬರೆದಿದ್ದೆನೋ ಅದು ನಿಜವಾಯಿತು.

೧೯೬೯ ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಪಕ್ಷ ಒಡೆದು ಇಬ್ಭಾಗವಾದನಂತರ ಶ್ರೀಮತಿ ಇಂದಿರಾಗಾಂಧಿಯವರು ತಮ್ಮ ಪಕ್ಷದ ಈ ರಾಜ್ಯದ ಪ್ರದೇಶ ಕಾಂಗ್ರೆಸ್ ಸಮಿತಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಅಪೇಕ್ಷಿಸಿದ್ದರು. ಈ ರಾಜ್ಯ ಸಭೆಯ ಸದಸ್ಯರಾಗಿರುವ ಶ್ರೀ ಕೊಲ್ಲೂರು ಮಲ್ಲಪ್ಪನವರಿಂದ ನನಗೆ ಒಂದು ರಾತ್ರಿ ಈ ವಿಚಾರದಲ್ಲಿ ಫೋನ್ ಮಾಡಿಸಿದ್ದರು. ಆಗ ನಾನು ಸಾಲಗಾರನಾಗಿದ್ದೆ. ಸಾಲವನ್ನು ತೀರಿಸಲು ಪುನಃ ವಕೀಲಿ ವೃತ್ತಿಯನ್ನು ಆರಂಭಿಸಿದ್ದೆ. ಪುನಃ ರಾಜಕಾರಣಕ್ಕೆ ಧುಮುಕಿ ಮತ್ತಷ್ಟು ಸಾಲಗಾರನಾಗಲು ನನಗಿಷ್ಟವಿರಲಿಲ್ಲ. ಜೊತೆಗೆ ಶ್ರೀ ಮಲ್ಲಪ್ಪನವರಿಂದ ಪ್ರದೇಶ ಕಾಂಗ್ರೆಸ್ ಸಮಿತಿಯಲ್ಲಿ ನನ್ನ ಜೊತೆಯಲ್ಲಿ ಇರತಕ್ಕ ವ್ಯಕ್ತಿಗಳ ಹೆಸರುಗಳನ್ನು ಕೇಳಿದ ನಂತರ ಆ ವ್ಯಕ್ತಿಗಳ ಜೊತೆಯಲ್ಲಿ ಸೇರಿ ಕರ್ನಾಟಕದಲ್ಲಿ ಸ್ವಚ್ಛ ರಾಜಕಾರಣ ಮಾಡುವುದು ಅಸಂಭವವೆಂದು ನನಗನಿಸಿತು. ಆದ್ದರಿಂದ ಶ್ರೀಮತಿ ಇಂದಿರಾ ಗಾಂಧಿಯವರಿಗೆ ಶ್ರೀ ಮಲ್ಲಪ್ಪನವರ ಮುಖಾಂತರ ಧನ್ಯವಾದಗಳನ್ನು ಅರ್ಪಿಸಿ ವೈಯಕ್ತಿಕ ಕಾರಣಗಳಿಂದ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗುವುದು ಸಾಧ್ಯವಿಲ್ಲವೆಂದು ಆದಾಗ್ಯೂ ಅವರ ಪಕ್ಷಕ್ಕೆ ಬೆಂಬಲ ನೀಡುವುದಾಗಿಯೂ ಭರವಸೆಯಿತ್ತೆ. ನನ್ನ ಭರವಸೆಯ ಪ್ರಕಾರ ೧೯೭೦ ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್ ಪರವಾಗಿ ಪ್ರಚಾರ ಮಾಡಿದ್ದೆ. ಸಿಂಡಿಕೇಟ್ ಮುಖಂಡರ ಹಿಡಿತಕ್ಕೆ ಸಿಕ್ಕಿದ್ದ ಕಾಂಗ್ರೆಸ್ಸು ಅವನತಿಯ ಹಾದಿಯನ್ನು ಹಿಡಿದಿದೆ ಎಂಬ ಭಾವನೆಯಿಂದಲೂ, ಶ್ರೀಮತಿ ಇಂದಿರಾಗಾಂಧೀಯವರು ಕಾಂಗ್ರೆಸ್ಸಿಗೆ ಕಾಯಕಲ್ಪ ಮಾಡುತ್ತಾರೆಂಬ ಭ್ರಮೆಯಿಂದಲೂ ನಾನು ಎರಡು ವರ್ಷಗಳ ಕಾಲ ಇಂದಿರಾಗಾಂಧಿಯವರ ಕಾಂಗ್ರೆಸ್ಸಿಗೆ ಬೆಂಬಲ ನೀಡಿದೆ. ಆದರೆ ನನ್ನ ನಿರೀಕ್ಷೆಗೆ ವಿರೋಧವಾಗಿ ಶ್ರೀಮತಿ ಇಂದಿರಾ ಗಾಂಧಿಯವರೂ ಅವರ ಬೆಂಬಲಿಗರೂ ಕಾಂಗ್ರೆಸ್ ರಾಜಕಾರಣವನ್ನು ಮತ್ತಷ್ಟು ಹೊಲಸು ಮಾಡಿದರು. ನಾನು ೧೯೬೭ ರಲ್ಲಿ ಬಿಟ್ಟಿದ್ದ ಕಾಂಗ್ರೆಸ್ ಎಷ್ಟೋ ಮೇಲಾಗಿತ್ತೆಂದು ಮನಸ್ಸಿನಲ್ಲಿ ಅಂದುಕೊಂಡೆ.

೧೯೭೪ ರಲ್ಲಿ ಶ್ರೀ ಜಯಪ್ರಕಾಶ್ ನಾರಾಯಣ್‌ರವರು ಈ ರಾಜ್ಯಕ್ಕೆ ಬಂದಿದ್ದಾಗ

ಅವರನ್ನು ಸ್ವಾಗತಿಸಲು ನನ್ನ ಅಧ್ಯಕ್ಷತೆಯಲ್ಲಿ ಒಂದು ಸ್ವಾಗತ ಸಮಿತಿ ರಚನೆಯಾಗಿತ್ತು. ಅವರಿಗೆ ರಾಜ್ಯದಲ್ಲಿ ಸಿಕ್ಕಿದ್ದ ಅಭೂತಪೂರ್ವ ಸ್ವಾಗತಕ್ಕಾಗಿ ಅವರು ನನ್ನನ್ನು ಹೊಗಳಿದ್ದಲ್ಲದೆ ಬೆಂಗಳೂರನ್ನು ಬಿಡುವ ಮುನ್ನ ವಿರೋಧ ಪಕ್ಷಗಳೊಡನೆ ನಾನು ಸಹಕರಿಸಿ ಅವರ ಸಂಪೂರ್ಣ ಕ್ರಾಂತಿಗೆ ಬೆಂಬಲ ನೀಡಬೇಕೆಂದು ಹೇಳಿದರು. ಈ ದೇಶದ ವಿರೋಧ ಪಕ್ಷಗಳನ್ನು ನಂಬಿ ಅವುಗಳ ಸಹಾಯದಿಂದ ಕ್ರಾಂತಿಯಾಗುತ್ತದೆ ಎಂಬ ಭ್ರಾಂತಿಯನ್ನು ಬಿಡಬೇಕೆಂದು ನಾನು ಅವರಿಗೆ ನಿದ್ಯಾಕ್ಷಿಣ್ಯವಾಗಿ ತಿಳಿಸಿದ್ದೆ. ಅನಂತರ ತಾ. ೩೧-೦೫-೧೯೭೫ ರಂದು ನಾನು ಅವರಿಗೆ ಬರೆದಿದ್ದ ಪತ್ರದಲ್ಲಿ ಈ ದೇಶದ ವಿರೋಧ ಪಕ್ಷಗಳು ಒಟ್ಟಾಗಿರುವುದರಿಂದ ಅಸಂಭವವೆಂದು ತಿಳಿಸಿದ್ದೆ. ಹೊಸ ರೀತಿಯ ಆದರ್ಶ ಪ್ರೇರಿತ ರಾಜಕೀಯವನ್ನು ಆಚರಣೆಗೆ ತರುವುದು ಸಾಧ್ಯವಾಗುತ್ತದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುವ ಸಲುವಾಗಿ ನಾನು ಅವರ ಪಕ್ಷವನ್ನು ಸೇರಿದೆ. ಜೊತೆಗೆ ಇಂದಿರಾ ಗಾಂಧಿಯವರು ರಾಷ್ಟ್ರದ ಮೇಲೆ ಹೇರಿದ್ದ ತುರ್ತು ಪರಿಸ್ಥಿತಿಯಿಂದಲೂ ಕುಪಿತಗೊಂಡಿದ್ದೆ. ಆ ಪಕ್ಷದ ಸಂಘಟನೆಗಾಗಿ ಎರಡು ತಿಂಗಳ ಕಾಲ ರಾಜ್ಯದ ಹಲವು ಕಡೆಗಳಲ್ಲಿ ಪ್ರವಾಸ ಮಾಡಿ ಆದರ್ಶ ಪ್ರೇರಿತ ಯುವಕರನ್ನು ಆ ಪಕ್ಷಕ್ಕೆ ಸೇರಿಸಿದ್ದೆ. ಜನತಾ ಪಕ್ಷ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ನಂತರ ಶ್ರೀ ಜಗಜೀವನರಾಮ್‌ರವರು ನನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿ ಕಾಂಗ್ರೆಸ್ ಫಾರ್ ಡೆಮಾಕ್ರಸಿ ಪಕ್ಷವನ್ನು ಜನತಾ ಪಕ್ಷದಲ್ಲಿ ವಿಲೀನಗೊಳಿಸಿದರು. ನನಗೆ ಜನತಾ ಪಕ್ಷದ ಭವಿಷ್ಯದ ವಿಚಾರದಲ್ಲಿ ಆಗಲೇ ಮುನ್ಸೂಚನೆ ಆಗಿತ್ತು. ಆದ್ದರಿಂದ ನಾನು ಜನತಾ ಪಕ್ಷವನ್ನು ಸೇರಲು ಇಷ್ಟ ಪಡಲಿಲ್ಲ. ಶ್ರೀ ಜಗಜೀವನರಾಮ್‌ರವರೂ, ಶ್ರೀ ಬಹುಗುಣ ಅವರೂ ಜನತಾ ಪಕ್ಷವನ್ನು ಸೇರಿದರು. ನಾನು ರಾಜಕಾರಣದಿಂದ ಪುನಃ ನಿವೃತ್ತನಾದೆ. ಇಂದು ರಾಜಕಾರಣ ಒಂದು ಕಸುಬಾಗದೆ ರಾಷ್ಟ್ರ ಸೇವೆಗಾಗಿ ರಾಜಕೀಯಕ್ಕೆ ಸೇರುವವರಿಗಿಂತ ಸಂಪತ್ತು ದೌಲತ್ತುಗಳ ಸಲುವಾಗಿ ಸೇರುವವರೇ ಹೆಚ್ಚಾಗಿದ್ದಾರೆ. ಈ ರಾಜ್ಯದಲ್ಲಿ ೫ ವರ್ಷಗಳ ಕಾಲ ಶಾಸಕರಾಗಿದ್ದವರು ಕೆಲವರು ಲಕ್ಷಾಧಿಪತಿಗಳಾಗಿದ್ದಾರೆ. ೫ ವರ್ಷಗಳ ಕಾಲ ಮಂತ್ರಿಗಳಾಗಿದ್ದವರು ಕೆಲವರು ಕೋಟ್ಯಾಧಿಪತಿಗಳಾಗಿದ್ದಾರೆ. ಇಂತವರ ಜೊತೆಯಲ್ಲಿ ರಾಜಕಾರಣ ಮಾಡುವುದಕ್ಕಿಂತ ತೆಪ್ಪಗಿರುವುದು ಮೇಲಲ್ಲವೆ? ಅದೂ ಅಲ್ಲದೆ ನಾನು ೨೫ ವರ್ಷಗಳ ಕಾಲ ಸತತವಾಗಿ ಶಾಸಕನಾಗಿದ್ದೆ. ಸುಮಾರು ೯ ವರ್ಷಗಳ ಕಾಲ ಮಂತ್ರಿಯಾಗಿದ್ದ ಅದಕ್ಕಿಂತ ಹೆಚ್ಚು ಕಾಲ ರಾಜಕೀಯದಲ್ಲಿರುವುದು ನನಗೆ ಸರಿ ಎನಿಸಲಿಲ್ಲ.

# ಕರ್ನಾಟಕದ ಭೂಸಮಸ್ಯೆ

ಪುರಾತನ ಭಾರತದಲ್ಲಿ ಉಳಿದ ಎಲ್ಲಾ ಸಂಪತ್ತುಗಳಿಗಿಂತಲೂ ಭೂ ಸಂಪತ್ತಿಗೆ ಅಗ್ರಸ್ಥಾನವನ್ನು ಕೊಡಲಾಗಿತ್ತು. ನಮ್ಮ ಪೂರ್ವಿಕರು ಭೂಮಿಯನ್ನು ಭೂದೇವಿಯೆಂದು ಪೂಜಿಸಿದರು. ಭೂಮಾತೆಯೆಂದು ಸಂಬೋಧಿಸಿದರು. ಪುರಾತನ ಕಾಲದಲ್ಲಿ ಭೂಮಿಯಿಂದ ಬರುತ್ತಿದ್ದ ವರಮಾನವೇ ರಾಜರುಗಳು ಪ್ರಧಾನ ವರಮಾನವಾಗಿತ್ತು. ರಾಜನು ಭೂಮಿಯ ಒಡೆಯನಾಗಿದ್ದನು. ಸಾಗುವಳಿ ಮಾಡುವವರು ಅವನ ಒಕ್ಕಲಾಗಿದ್ದರು. ಅವರೀರ್ವರ ಮಧ್ಯೆ ಭೂಮಿಯ ಮೇಲೆ ಇನ್ಯಾರಿಗೂ ಇನ್ಯಾವ ವಿಧವಾದ ಹಕ್ಕು ಇರಲಿಲ್ಲ. ಕ್ರಿ.ಪೂ. ೩೨೫ ರಲ್ಲಿ ಅಧಿಕಾರಕ್ಕೆ ಬಂದ ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಭೂಮಿಯನ್ನು ಕೊಳ್ಳುವ ಅಥವಾ ಮಾರುವ ಹಕ್ಕು ಪ್ರಜೆಗಳಿಗೆ ಇರಲಿಲ್ಲ ಎಂಬುದು ಇತಿಹಾಸದಿಂದ ಗೊತ್ತಾಗುತ್ತದೆ. ಪುರಾತನ ಭಾರತದಲ್ಲಿ ಸರ್ವೆ ಸಾಮಾನ್ಯವಾಗಿ ರೈತರು ತಾವು ಭೂಮಿಯಲ್ಲಿ ಬೆಳೆದ ಪೈರು ಪಚ್ಚೆಗಳನ್ನೆಲ್ಲ ಆರನೇ ಒಂದು ಭಾಗವನ್ನು ಗೇಣಿಯ ರೂಪದಲ್ಲಿ ರಾಜನಿಗೆ ಅರ್ಪಿಸುತ್ತಿದ್ದರು. ಕೆಲವು ಕಡೆ ಹನ್ನೆರಡನೆ ಒಂದು ಭಾಗವನ್ನು ರೈತರಿಂದ ಗೇಣಿಯ ರೂಪದಲ್ಲಿ ವಸೂಲಿ ಮಾಡುತ್ತಿದ್ದ ಉದಾಹರಣೆಗಳು ಇದ್ದವು. ಯುದ್ಧ ಮತ್ತು ಅಸಾಧಾರಣ ಪ್ರಸಂಗಗಳಲ್ಲಿ ರಾಜಪಾಲು ನಾಲ್ಕರಲ್ಲಿ ಒಂದು ಭಾಗದವರೆಗೆ ಏರುತ್ತಿತ್ತು. ಅಂದು ಜಮೀನ್ದಾರಿ ಜಹಗೀರಿ ತಾಲ್ಲೂಕುದಾರಿ ಮುಂತಾದ ಭೂಸ್ವಾಮ್ಯ ಪದ್ಧತಿಗಳು ಇರಲಿಲ್ಲ ಆದರೆ ಹಿಂದೂ ರಾಜರು ಕೆಲವು ಸಂದರ್ಭಗಳಲ್ಲಿ ಕಂದಾಯ ಅಥವಾ ಗೇಣಿಯನ್ನು ವಸೂಲಿ ಮಾಡಲು ನೇಮಿಸಲ್ಪಟ್ಟ ಅಧಿಕಾರಿಗಳಿಗೆ ವೇತನದ ಬದಲಾಗಿ ಕಂದಾಯವನ್ನು ಕೊಡದೇ ಭೂಮಿಯನ್ನು ಸಾಗುವಳಿ ಮಾಡುವ ಹಕ್ಕನ್ನು ಕೊಡುತ್ತಿದ್ದರು. ಪುರಾತನ ಕರ್ನಾಟಕದಲ್ಲೂ ಇದೇ ರೀತಿಯ ಪದ್ಧತಿ ಜಾರಿಯಲ್ಲಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಕಾಲಕ್ರಮೇಣ ಭೂಮಿಯನ್ನು ಕೊಳ್ಳುವ ಮತ್ತು ಮಾರುವ ಹಕ್ಕು ಪ್ರಜೆಗಳಿಗೆ ಲಭಿಸಿತು. ಅದರ ಪರಿಣಾಮವಾಗಿ ಭೂಮಾಲೀಕ ವರ್ಗ ಉದಯವಾಯಿತು. ಹಿಂದೂ ರಾಜರೂ ಮುಸಲ್ಮಾನ ಸುಲ್ತಾನರೂ ಉಂಬಳಿ, ಇನಾಮು ಜಹಗೀರಿಗಳನ್ನು ಕೊಡಲಾರಂಭಿಸಿದರು. ಇದರ ಪರಿಣಾಮವಾಗಿ ಹೊಸ ಹೊಸ ಭೂಸ್ವಾಧೀನ ಪದ್ಧತಿಗಳು

ಅಸ್ತಿತ್ವಕ್ಕೆ ಬರಲಾರಂಭಿಸಿದವು. ಮುಸಲ್ಮಾನರ ಆಳ್ವಿಕೆಯ ಆದಿಭಾಗದಲ್ಲಿ ರೈತರು ಕೊಡತಕ್ಕ ಕಂದಾಯವನ್ನು ಖಿರಾಜ್ ಅಥವಾ ಕಪ್ಪವೆಂದು ಕರೆಯುತ್ತಿದ್ದರು. ಮುಸಲ್ಮಾನ ದೊರೆಗಳು ಭೂಮಿಯ ಹುಟ್ಟುವಳಿಯಲ್ಲಿ ಅರೆವಾಸಿಯನ್ನು ಕಪ್ಪದರೂಪದಲ್ಲಿ ರೈತರಿಂದ ವಸೂಲುಮಾಡುತ್ತಿದ್ದರು. ಮುಸಲ್ಮಾನ ದೊರೆಗಳು ತಮ್ಮ ಅಧಿಕಾರಿಗಳಿಗೂ ಆಶ್ರಿತರಿಗೂ ಧಾರಾಳವಾಗಿ ಜಹಗೀರಿಗಳನ್ನೂ ಇನಾಮುಗಳನ್ನೂ ಕೊಡುತ್ತಿದ್ದರು. ಅಲ್ಲದೆ ಇಡೀ ಗ್ರಾಮವನ್ನು ಅಥವಾ ಗ್ರಾಮಗಳನ್ನು ಅತ್ಯಂತ ಹೆಚ್ಚಿನ ಮೊತ್ತಕ್ಕೆ ಚಡಸವಾಲಿಗೆ ಹರಾಜು ಹಾಕುವ ಪದ್ಧತಿಯನ್ನು ಸಹ ಆಚರಣೆಗೆ ತಂದರು. ಮುಸಲ್ಮಾನ್ ದೊರೆಗಳ ಮೇಲ್ಪಂಕ್ತಿಯನ್ನನುಸರಿಸಿ ಹಿಂದೂ ರಾಜರುಗಳು ಅದೇ ಪದ್ಧತಿಯನ್ನು ಅನುಷ್ಠಾನಕ್ಕೆ ಕೆಲವುಕಡೆಗಳಲ್ಲಿ ತಂದಿದ್ದರು.

ಅಕ್ಬರ್ ಚಕ್ರವರ್ತಿಯ ಆದೇಶದಂತೆ ರಾಜಾಕೋದರಮಲ್ಲನು ಭೂಕಂದಾಯ ಮತ್ತು ಭೂಸ್ವಾಮ್ಯ ಪದ್ಧತಿಗಳಲ್ಲಿ ಹಲವು ಸುಧಾರಣೆಗಳನ್ನು ಮಾಡಿದ್ದನು. ಅಕ್ಬರನ ಕಾಲದಲ್ಲಿ ಜಮೀನಿನ ಹುಟ್ಟುವಳಿಯಲ್ಲಿ ಮೂರನೇ ಒಂದು ಭಾಗ ಸರ್ಕಾರಕ್ಕೆ ಸಲ್ಲತಕ್ಕದೆಂದು ವಿಧಾಯ ಮಾಡಿದ್ದನು. ಅಕ್ಬರನು ಜಹಗೀರಿ ಕೊಡುವ ಪದ್ಧತಿಯನ್ನು ನಿಷೇಧಿಸಿದ್ದನು. ಆದರೆ ಅವನಕಾಲಾನಂತರ ಜಹಗೀರಿ ಪದ್ಧತಿ ಪುನಃ ಆಚರಣೆಗೆ ಬಂತು. ಛತ್ರಪತಿ ಶಿವಾಜಿಯು ಜಹಗೀರಿಯನ್ನು ಮನ್ನಾ ಮಾಡಿದ್ದನು. ಆದರೆ ಪೇಷ್ವೆಯವರ ಕಾಲದಲ್ಲಿ ಪುನಃ ಜಹಗೀರಿ ಪದ್ಧತಿ ಅಸ್ತಿತ್ವಕ್ಕೆ ಬಂತು. ಮರಾಠೆಯವರು ಕಂದಾಯವನ್ನು ವಸೂಲ್ಮಾಡುವ ಮಮ್ಲಾತ್‌ದಾರ್ ಅಧಿಕಾರಿಯ ಹುದ್ದೆಗಳನ್ನು ಹರಾಜು ಹಾಕಿದ್ದ ಪ್ರಸಂಗಗಳು ಇದ್ದವು.

ಮೊಗಲರ ಕಾಲದಲ್ಲಿ ಕಂದಾಯದ ವಸೂಲಿಗಾಗಿ ವಿವಿಧ ಹಂತಗಳಲ್ಲಿ ವಿವಿಧ ದರ್ಜೆಯ ಅಧಿಕಾರಿಗಳನ್ನು ನೇಮಕಮಾಡಿದ್ದರು. ಅಂತಹ ಅಧಿಕಾರಿಗಳ ಪೈಕಿ ಜಮೀನ್ದಾರನೆಂಬ ಅಧಿಕಾರಿಯು ಒಬ್ಬನಾಗಿದ್ದನು. ಅವನ ಕೈ ಕೆಳಗೆ ತಾಲ್ಲೂಕುದಾರನೆಂಬ ಅಧಿಕಾರಿಯಿದ್ದನು. ಅವರೀರ್ವರೂ ಮೊದಲು ಕಂದಾಯವನ್ನು ನನ್ನ ವಸೂಲ್ಮಾಡುವ ಅಧಿಕಾರಿಯವರಾಗಿದ್ದರೇ ಹೊರತು ಭೂ ಒಡೆಯರಾಗಿರಲಿಲ್ಲ. ಕಾಲಕ್ರಮೇಣ ಮೊಗಲ್ ಚಕ್ರವರ್ತಿಗಳು ದುರ್ಬಲರಾಗಿ ಕೇಂದ್ರಸರ್ಕಾರ ಸಡಿಲವಾಗುತ್ತಾ ಬಂದಂತೆಲ್ಲಾ ಜಮೀನ್ದಾರರು ತಂತಮ್ಮ ಅಧಿಕಾರಿ ವ್ಯಾಪ್ತಿಗೆ ಸೇರಿದ್ದ ಭೂಪ್ರದೇಶದ ಒಡೆಯರಂತೆ ವರ್ತಿಸಲಾರಂಭಿಸಿದರು. ಆಂಗ್ಲರು ೧೭೯೩ ರಲ್ಲೂ ಜಾರಿಗೆ ತಂದ ಖಾಯಂ ಸೆಟ್ಲಮೆಂಟ್ ಪ್ರಕಾರ ಜಮೀನ್ದಾರರು ಅವರವರ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಸಮಸ್ತ ಭೂಪ್ರದೇಶದ ಒಡೆಯರೆಂದು ನಿರ್ಣಯಮಾಡಲಾಯಿತು. ಹೀಗಾಗಿ

ಹಿಂದೂಸ್ಥಾನದ ಹಲವು ಕಡೆಗಳಲ್ಲಿ ಜಮೀನ್ದಾರಿ ಪದ್ಧತಿ ಅಸ್ತಿತ್ವಕ್ಕೆ ಬಂತು.

ಪುರಾತನ ಕರ್ಣಾಟಕದಲ್ಲಿ ಹಳ್ಳಿಗಳು ಆಡಳಿತದ ಆಧಾರ ಸ್ತಂಭಗಳಾಗಿ ಸ್ವಾವಲಂಬಿಗಳಾಗಿದ್ದುವು. ಬೇಸಾಯ ಪದ್ಧತಿ ಇತ್ತೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಭಾರತದ ಉಳಿದ ಪ್ರದೇಶದಲ್ಲಿ ಆಚರಣೆಯಲ್ಲಿದ್ದಂತೆ ರೈತರು ರಾಜರಿಗೆ ಸಲ್ಲಿಸಬೇಕಾಗಿದ್ದ ರಾಜಪಾಲು ಹುಟ್ಟುವಳಿಯಲ್ಲಿ ಆರನೆ ಒಂದು ಭಾಗವೆಂದು ಹಿಂದೂ ಸಂಪ್ರದಾಯ ಪ್ರಕಾರ ನಿಗದಿಯಾಗಿತ್ತು. ಮೊದಲು ರಾಜರಿಗೆ ಸಲ್ಲತಕ್ಕ ರಾಜಪಾಲು ದವಸ ಧಾನ್ಯಗಳ ರೂಪದಲ್ಲಿ ಸಂದಾಯವಾಗುತ್ತಿತ್ತು. ನಾಣ್ಯಗಳು ಚಲಾವಣೆಗೆ ಬಂದ ಮೇಲೆ ಭೂಮಿಯನ್ನು ಅಳತೆ ಮಾಡಿ ನಗದು ಕಂದಾಯವನ್ನೆ ವಿಧಿಸುವ ಪದ್ಧತಿ ಜಾರಿಗೆ ಬಂತು.

ಕದಂಬರ ಕಾಲದಲ್ಲಿ ವ್ಯವಸಾಯದ ಭೂಮಿಯನ್ನು ಅಳತೆಮಾಡಿ, ತರಿ,ಬಾಗಾಯ್ತು, ಖುಷ್ಕಿ ಎಂಬುದಾಗಿ ಮೂರು ವರ್ಗಗಳನ್ನಾಗಿ ಮಾಡಿದ್ದರು. ಭೂಮಿಯ ಫಲವತ್ತು. ಸನ್ನಿವೇಶ, ನೀರಾವರಿ ಸೌಕರ್ಯ ಇವುಗಳ ಆಧಾರದ ಮೇಲೆ ಕಂದಾಯವನ್ನು ನಿಗದಿ ಮಾಡುತ್ತಿದ್ದರು. ಹೊಯ್ಸಳರ ಕಾಲದಲ್ಲಿ ಖುಷ್ಕಿ ಜಮೀನಿಗೆ ಹುಟ್ಟುವಳಿಯ ಮೂರನೆ ಭಾಗವನ್ನು ರೈತರು ಸರ್ಕಾರಕ್ಕೆ ಪಾವತಿ ಮಾಡುತ್ತಿದ್ದರೆಂದು ಗೊತ್ತಾಗುತ್ತದೆ. ವಿಷ್ಣುವರ್ಧನನು ಪ್ರತಿಯೊಬ್ಬ ರೈತನೂ ಸರ್ಕಾರಕ್ಕೆ ಒಂದೊಂದು ನೇಗಿಲಕುಳವನ್ನು ಕೊಡಬೇಕೆಂದು ವಿಧಾಯಕ ಮಾಡಿದ್ದನೆಂದೂ, ರೈತರುಕೊಟ್ಟ ಕಬ್ಬಿಣದ ಕುಳಗಳನ್ನೇ ರಾಜಭಟರು ಹೊಂಬುಜದ ಪದ್ಮಾವತಿ ದೇವಾಲಯದಲ್ಲಿದ್ದ ಪಾದರಸದ ಬಾವಿಗೆ ಹಾಕುತ್ತಿದ್ದರೆಂದೂ, ಆ ರೀತಿ ಬಾವಿಗೆ ಹಾಕಲ್ಪಟ್ಟ ಕಬ್ಬಿಣದ ಕುಳಗಳು ಬಂಗಾರದ ಕುಳಗಳಾಗುತ್ತಿದ್ದವೆಂದೂ ಪ್ರತೀತಿ ಇದೆ.

ಕರ್ನಾಟಕದ ಬಹುಭಾಗ ಪ್ರದೇಶ ವಿಜಯನಗರದ ಚಕ್ರವರ್ತಿಗಳ ಆಳ್ವಿಕೆಗೆ ಒಳಗಾಗಿತ್ತು. ವಿಜಯನಗರದ ಅರಸರು ಭೂಕಂದಾಯವನ್ನು ಶಾಸ್ತ್ರೀಯ ರೀತಿಯಲ್ಲಿ ನಿರ್ಧಿಷ್ಟ ನಿಯಮಗಳ ಆಧಾರದ ಮೇಲೆ ವಿಭಾಗ ಮಾಡುತ್ತಿದ್ದರು. ವ್ಯವಸಾಯ ಭೂಮಿಯನ್ನೇ ಸರ್ವೆ ಬಾಂದು ಮಾಡಿ ಕಲ್ಲುಗಳನ್ನು ನೆಟ್ಟಿದ್ದರು. ಜಮೀನಿನಲ್ಲಿ ಬೆಳೆಯತಕ್ಕ ಪೈರಿನ ಸ್ವಭಾವ, ಜಮೀನಿಗೆ ತಕ್ಕ ನೀರಾವರಿ ಸೌಕರ್ಯ ಇವುಗಳ ಆಧಾರದ ಮೇಲೆ ಕಂದಾಯವನ್ನು ವಿಧಿಸುತ್ತಿದ್ದರು. ಹಿಡುವಳಿಯ ವಿಸ್ತೀರ್ಣ, ಹಿಡುವಳಿದಾರನ ಹೆಸರು, ಆತನಿಂದ ಸರ್ಕಾರಕ್ಕೆ ಸಲ್ಲಬೇಕಾಗಿದ್ದ ಕಂದಾಯ ಮುಂತಾದ ವಿವರಗಳನ್ನೊಳಗೊಂಡು ಕ್ರಮವಾದ ಲೆಕ್ಕಗಳನ್ನು ವಿಜಯನಗರದ ಅರಸರು ಇಡಿಸಿದ್ದರು.

ಜಮೀನಿನ ಸ್ಥಿತಿಗತಿಗಳ ಆಧಾರದ ಮೇಲೆ ಬಂದ ಕೊಳಗ ಬೀಜವರಿ ಜಮೀನಿಗೆ ಒಂದು ಕಂಠೀರಾಯ ನಾಣ್ಯದಿಂದ ಹಿಡಿದು ಹತ್ತು ಕಂಠೀರಾಯ ನಾಣ್ಯಗಳವರೆಗೆ ಸರ್ಕಾರಕ್ಕೆ ಕಂದಾಯ ಸಲ್ಲುತ್ತಿತ್ತು. ಶಾಶ್ವತ ನೀರಿನ ಸೌಕರ್ಯವುಳ್ಳ ಜಮೀನಿಗೆ ಅರೆವಾಸಿ ಹುಟ್ಟುವಳಿ ರಾಜಪಾಲೆಂದು ನಿಗದಿಯಾಗಿತ್ತು. ರೈತರು ಬೆಳೆದಿದ್ದರಲ್ಲಿ ಅರೆವಾಸಿ ಅವರಿಗೆ ಉಳಿಯಬೇಕೆಂದೂ, ಭೂಮಾಲೀಕರಿಗೆ ೧/೪ ಭಾಗಸಲ್ಲತಕ್ಕದ್ದೆಂದೂ, ೧/೬ ಭಾಗ ರಾಜರಿಗೆ ಸಲ್ಲತಕ್ಕದೆಂದೂ, ೧/೨೦ ಭಾಗ ಬ್ರಾಹ್ಮಣರಿಗೆ ಸಲ್ಲತಕ್ಕದ್ದೆಂದೂ, ೧/೩೦ ಭಾಗ ದೇವರಿಗೆ ಸಲ್ಲಬೇಕೆಂದೂ ವಿದ್ಯಾರಣ್ಯರ ಆದೇಶವಾಗಿತ್ತು. ವ್ಯವಸಾಯಕ್ಕೆ ಉತ್ತೇಜನ ನೀಡುವ ದೃಷ್ಟಿಯಿಂದ ವಿಜಯನಗರದ ಅರಸು ಬಂಜರು ಭೂಮಿಯನ್ನು ಸುಲಭ ಗೇಣಿಗೆ ಅಥವಾ ಅಳಿವೆ ಗೇಣಿಗೆ ರೈತರಿಗೆ ಸಾಗುವಳಿಗೆ ಕೊಡುತ್ತಿದ್ದನು. ಅಲ್ಲದೆ ಈಗಿನ ಕಾಲದಲ್ಲಿ ಕೊಡುತ್ತಿರುವಂತೆ ರೈತರಿಗೆ ತಕಾವಿ ಸಾಲಗಳನ್ನು ಸಹ ಕೊಡುತ್ತಿದ್ದರೆಂದರೆ ಅನೇಕರಿಗೆ ಆಶ್ಚರ್ಯವಾಗಬಹುದು.

ಮರಾಠೆಯವರ ಆಳ್ವಿಕೆಗೊಳಗಾಗಿದ್ದ ಕನ್ನಡ ಪ್ರದೇಶದಲ್ಲಿ ಅವರು ಅನುಷ್ಠಾನಕ್ಕೆ ತಂದಿದ್ದ ಪದ್ಧತಿಗಳು ಜಾರಿಗೆ ಬಂದಿದ್ದವು. ಮುಸಲ್ಮಾನರ ಆಳ್ವಿಕೆಗೊಳಗಾಗಿದ್ದ ಕನ್ನಡ ಪ್ರದೇಶಗಳಲ್ಲಿ ಅವರು ಅನುಷ್ಠಾನಕ್ಕೆ ತಂದಿದ್ದ ಪದ್ಧತಿಗಳು ಜಾರಿಗೆ ಬಂದಿದ್ದವು. ಮರಾಠರು ಕಂದಾಯವನ್ನು ವಸೂಲ್ಮಾಡಲಿಕ್ಕಾಗಿ ದೇಶಪಾಂಡೆ, ದೇಶಮುಖ್, ದೇಶಕುಲ ಕರ್ಣಿ,ಸರನಾಡಗೌಡ, ಮನಸುದ್ದಾರ ಮುಂತಾದ ಹುದ್ದೆಗಳನ್ನು ನಿರ್ಮಾಣ ಮಾಡಿದ್ದರು. ಮರಾಠೆಯವರೂ, ಮುಸಲ್ಮಾನರೂ, ಅಧಿಕಾರಿಗಳಿಗೂ, ಖಾಸಗಿ ಜನರಿಗೂ, ಧಾರ್ಮಿಕ ಸಂಸ್ಥೆಗಳಿಗೂ ಧಾರಾಳವಾಗಿ ಜಹಗೀರಿಗಳನ್ನು ಇನಾಮುಗಳನ್ನು ಕೊಟ್ಟಿದ್ದರು. ಮತ್ತೆ ಕೆಲವು ಸಂದರ್ಭಗಳಲ್ಲಿ ಕಂದಾಯವನ್ನು ವಸೂಲ್ಮಾಡುವ ಹಕ್ಕನ್ನು ಹರಾಜು ಹಾಕುತ್ತಿದ್ದರು. ಒಂದು ವಿಶೇಷ ಸಂಗತಿಯೇನೆಂದರೆ ಮಾರಾಠಿಯವರಿಗೆ ಸಂಬಂಧಪಟ್ಟ ಸರ್ಕಾರಿ ಲೆಕ್ಕ ಪತ್ರಗಳಲ್ಲೆವೂ ಕನ್ನಡದಲ್ಲೆ ಇಡಲ್ಪಟ್ಟಿದ್ದುವು. ಆದರೆ ಕೆಲವು ಮರಾಠಿ ಪದಗಳೂ ಪರ್ಷಿಯನ್ ಪದಗಳು ಆ ಲೆಕ್ಕ ಪತ್ರಗಳಲ್ಲಿ ವಾಡಿಕೆಗೆ ಬಂದವು.

ಬಿದನೂರು ಸಂಸ್ಥಾನಕ್ಕೆ ಸೇರಿದ ಕನ್ನಡ ಪ್ರದೇಶದಲ್ಲಿ ಬಹಳ ಕಾಲ ಶಿವಪ್ಪನಾಯ್ಕನ ಶಿಸ್ತು ಜಾರಿಯಲ್ಲಿತ್ತು. ಶಿವಪ್ಪನಾಯಕನು ಭೂಮಿಯನ್ನೆ ಆರು ವರ್ಗಗಳನ್ನಾಗಿ ವಿಂಗಡಿಸಿದ್ದನು. ರೈತರಿಂದ ಸರ್ಕಾರಕ್ಕೆಸಲ್ಲತಕ್ಕ ರಾಜಪಾಲು, ಭೂಮಿಯ ಹುಟ್ಟುವಳಿಯಲ್ಲಿ ೧/೩ ಭಾಗವೆಂದು ನಿಗದಿ ಮಾಡಿದ್ದನು. ಪ್ರತಿ ವರ್ಷವೂ ಪ್ರತಿಯೊಂದು ಗ್ರಾಮದಲ್ಲೂ ಪ್ರತಿಯೊಂದು ವರ್ಗದ ಒಂದೊಂದು ಜಮೀನನ್ನು ಸರ್ಕಾರದವತಿಯಿಂದ ಸಾಗುವಳಿ ಮಾಡಿಸಿ, ವ್ಯವಸಾಯದ ಉತ್ಪತ್ತಿ ಖರ್ಚುಗಳನ್ನು

ಕಂಡು ಹಿಡಿಮು ಅವುಗಳ ಆಧಾರದ ಮೇಲೆ ರೈತರು ಸರ್ಕಾರಕ್ಕೆ ಕೊಡಬೇಕಾದ್ದ ಕಂದಾಯವನ್ನ ನಿಗದಿ ಮಾಡುತ್ತಿದ್ದನು. ವ್ಯವಸಾಯಗಾರರ ಕಷ್ಟಕಾರ್ಪಣ್ಯಗಳನ್ನು ಗಣನೆಗೆ ತೆಗೆದುಕೊಳ್ಳದೆ ಕಣ್ಣುಮುಚ್ಚಿಕೊಂಡು ಕಾನೂನು ಮಾಡುವ ಈಗಿನ ಕಾಲದ ಆಡಳಿತಗಾರರು ಶಿವಪ್ಪನಾಯಕನ ಶಿಸ್ತಿನ ವಿವರಣೆಗಳನ್ನು ತಿಳಿದುಕೊಂಡರೆ ಮೇಲು.

ಒಡೆಯರ ಆಳ್ವಿಕೆಗೊಳಗಾಗಿದ್ದ ಹಳೆಯ ಮೈಸೂರು ರಾಜ್ಯದ ಕನ್ನಡ ಪ್ರದೇಶದಲ್ಲಿ ಭೂ ಕಂದಾಯ ಪದ್ಧತಿಯಲ್ಲಿ ಕೆಲವು ಮಾರ್ಪಾಡುಗಳಾಗಿದ್ದವು. ಉತ್ತಮ ಆಡಳಿತಕ್ಕೆ ಹೆಸರುವಾಸಿಯಾಗಿದ್ದ ಚಿಕ್ಕದೇವರಾಜ ಒಡೆಯರ್ ಅವರ ಕಾಲದಲ್ಲಿ ಭೂಮಿಗೆ ಮತ್ತೆ ಭೂಕಂದಾಯಕ್ಕೆ ಸಂಬಂಧಪಟ್ಟ ಪ್ರತ್ಯೇಕ ಇಲಾಖೆಯಿತ್ತು. ಚಿಕ್ಕದೇವರಾಜರು ಖುಷ್ಕಿ ಜಮೀನಿಗೆ ೧/೩ ಭಾಗದ ಹುಟ್ಟುವಳಿ ಸರ್ಕಾರಕ್ಕೆ ಸಲ್ಲತಕ್ಕದೆಂದೂ ತರಿ ಮತ್ತು ಬಾಗಾಯ್ತು ಜಮೀನುಗಳಿಗೆ ೧/೨ ಭಾಗದ ಹುಟ್ಟುವಳಿ ಸರ್ಕಾರಕ್ಕೆ ಸಲ್ಲತಕ್ಕದೆಂದೂ ನಿಗದಿಮಾಡಿ ಆ ಅಂಶಗಳ ಆಧಾರದ ಮೇಲೆ ನಿಗದಿ ಕಂದಾಯವನ್ನು ವಿಧಿಸಿದ್ದರು. ರಾಜ್ಯದಲ್ಲಿದ್ದ ಭೂಮಿಯೆಲ್ಲವೂ ರಾಜರಿಗೆ ಸೇರಿದ್ದೆಂಬುದನ್ನು ದೃಢಿಪಡಿಸುವ ಸಲುವಾಗಿ ಚಿಕ್ಕದೇವರಾಜ ಒಡೆಯರು ಎಲ್ಲಾ ರೈತರಿಂದಲೂ ರಾಜಿನಾಮೆ ಪತ್ರಗಳನ್ನು ತಮ್ಮ ಹೆಸರಿಗೆ ಬರೆಯಿಸಿಕೊಂಡಿದ್ದರೆಂದು ಪ್ರತೀತಿ ಇದೆ.

ಹೈದರ್ ಮತ್ತು ಟಿಪ್ಪುಸುಲ್ತಾನರು ಸದಾ ಯುದ್ಧದಲ್ಲೇ ನಿರತರಾಗಿದ್ದುದರಿಂದ ಅವರಿಗೆ ಆಡಳಿತದ ಕಡೆಗೆ ಹೆಚ್ಚು ನಿಗಾ ಕೊಡಲು ಆಗುತ್ತಿರಲಿಲ್ಲ. ಅವರಿಬ್ಬರೂ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಚಿಕ್ಕದೇವರಾಜ ಒಡೆಯರ ಕಂದಾಯ ನಿಗದಿ ಮತ್ತು ವಸೂಲಾತಿ ಬಗ್ಗೆ ಹೊಸ ನಿಬಂಧನೆಗಳನ್ನು ಹೊರಡಿಸಿದ್ದನು. ಆದರೆ ಅವುಗಳ ಹೊಸ ಪದ್ಧತಿಯನ್ನೇನೂ ಅನುಷ್ಠಾನಕ್ಕೆ ತರಲಿಲ್ಲ. ಹಳೆಯ ಪದ್ಧತಿಗಳನ್ನು ಹೊಸ ಹೆಸರಿನಲ್ಲಿ ಕರೆದಂತಾಗಿದ್ದುವು. ಸತತ ನಡೆಯುತ್ತಿದ್ದ ಯುದ್ಧಗಳ ವೆಚ್ಚಕ್ಕಾಗಿ ಹೈದರ್ ಮತ್ತು ಟಿಪ್ಪುಸುಲ್ತಾನರು ರೈತರ ಮೇಲೆ ಕೆಲವು ಹೊಸ ತೆರಿಗೆಗಳನ್ನು ವಿಧಿಸಿದ್ದರು. ದಿವಾನ್ ಪೂರ್ಣಯ್ಯನು ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿದ್ದ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗಿದ್ದರೂ, ಕೆಲವು ಸುಧಾರಣೆಗಳನ್ನು ಜಾರಿಗೆ ತರಲು ಪ್ರಯತ್ನಿಸಿದನು. ವ್ಯವಸಾಯದ ಭೂಮಿಯನ್ನು ಅಳತೆಮಾಡಲು ಕ್ರಮಕೈಗೊಂಡಿದ್ದನು. ಇನಾಮುಗಳ ಸಂಬಂಧ ವಿವರಗಳನ್ನು ಸಂಗ್ರಹಿಸಲು 'ಅಕ್ಷಯಪಾಯಿಮಾಸ್' ಎಂಬ ಹೆಸರಿನಲ್ಲಿ ಒಂದು ತನಿಖೆಯನ್ನು ಆರಂಭಿಸಿದ್ದನು. ಆದರೆ ಆತನು ಕೈಗೊಂಡಕಾರ್ಯಗಳನ್ನು ಅಪೂರ್ಣವಾಗಿದ್ದವು. ರೈತರು ಸರ್ಕಾರಕ್ಕೆ ಸಲ್ಲತಕ್ಕ ಕಂದಾಯವನ್ನು ಪಾವ್ತಿ ಮಾಡುತ್ತಾ ಬಂದರೆ ಭೂಮಿಯನ್ನು ವಂಶಪಾರಂಪರ್ಯವಾಗಿ

ಅನುಭವಿಸಬಹುದೆಂದು ತಾಕೀತು ಮಾಡಿದ್ದನು. ಪೂರ್ಣಯ್ಯನು ಖುಷ್ಕಿ ಭೂಮಿಗೆ ೧/೩ ಭಾಗದ ಹುಟ್ಟುವಳಿಯೂ, ತರಿ ಮತ್ತು ಬಾಗಾಯ್ತು ಭೂಮಿಗೆ ೧/೨ ಭಾಗಹುಟ್ಟುವಳಿಯೂ ಸರ್ಕಾರಕ್ಕೆ ಸಲ್ಲಬೇಕೆಂದು ವಿಧಾಯಕ ಮಾಡಿದ್ದನು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಪೂರ್ಣಯ್ಯನ ಕಂದಾಯ ಪದ್ಧತಿಯನ್ನು ಮುಂದುವರಿಸಿದ್ದರು. ಆದರೆ ಅವರು ಇಡೀ ಗ್ರಾಮಗಳನ್ನೆ ಹರಾಜು ಹಾಕುವ ಪದ್ಧತಿಯನ್ನು ಪುನಃ ಅನುಷ್ಠಾನಕ್ಕೆ ತಂದಿದ್ದರು. ದಿವಾನ್ ಪೂರ್ಣಯ್ಯನೂ, ಮುಮ್ಮಡಿ ಕೃಷ್ಣರಾಜ ಒಡೆಯರೂ ಯಥೇಚ್ಛವಾಗಿ ಇನಾಮುಗಳನ್ನು ಕೊಟ್ಟಿದ್ದರು.

ಇಂಗ್ಲೀಷ್ ಆಳ್ವಿಕೆ ಆರಂಭವಾದ ಮೇಲೆ ಅವರ ಆಳ್ವಿಕೆಗೊಳಗಾಗಿದ್ದ ಪ್ರಾಂತ್ಯಗಳಲ್ಲಿ ಭೂಮಾಲೀಕರ ಮತ್ತೆ ಸರ್ಕಾರದ ಸಂಬಂಧವನ್ನೂ, ಹಕ್ಕುಬಾಧ್ಯತೆಗಳನ್ನೆ ನಿಗದಿಗೊಳಿಸಲಿಕ್ಕಾಗಿ ಮತ್ತೆ ಕಂದಾಯವನ್ನೇ ಶಾಸ್ತ್ರಿಯ ರೀತಿಯಲ್ಲಿ ನಿರ್ದಿಷ್ಟ ನಿಯಮಗಳ ಆಧಾರದ ಮೇಲೆ ವಿಧಿಸುವುದಕ್ಕಾಗಿ ಕ್ರಮಗಳನ್ನು ಕೈಗೊಂಡರು. ಆ ಬಗ್ಗೆ ವಿವಿಧ ಪ್ರಾಂತ್ಯಗಳಲ್ಲಿ ಕಾಯಿದೆಗಳನ್ನು ರಚಿಸಿದರು. ಬೊಂಬಾಯಿ ಪ್ರಾಂತ್ಯದಲ್ಲಿ ೧೮೭೯ ರಲ್ಲಿ "ಬೊಂಬಾಯಿ ಲ್ಯಾಂಡ್ಸ್‌ರೆವಿನ್ಯೂ ಕೋಡ್" ಎಂಬ ಕಾನೂನು ಜಾರಿಗೆ ಬಂತು. ಕೊಡಗಿನಲ್ಲಿ ೧೮೭೯ರಲ್ಲಿ ಕೊಡಗು 'ಲ್ಯಾಂಡ್ ರೆವಿನ್ಯೂ ರೆಗ್ಯೂಲೇಷನ್' ಎಂಬ ಕಾನೂನು ಜಾರಿಗೆ ಬಂತು. ಮದರಾಸಿನಲ್ಲಿ ೧೮೭೬ ರಲ್ಲಿ "ಮದರಾಸ್ ಲ್ಯಾಂಡ್‌ರೆವೆನ್ಯೂ ಅಸೆಸ್ಮೆಂಟ್ ಆಕ್ಟ್" ಎಂಬ ಕಾನೂನು ಜಾರಿಗೆ ಬಂತು. ಹೈದರಬಾದ್ ರಾಜ್ಯದಲ್ಲಿ ನಿಜಾಂ ಸರ್ಕಾರದವರೂ ಸಹ ಬ್ರಿಟಿಷ್ ಸರ್ಕಾರದ ಮಾದರಿಯನ್ನನುಸರಿಸಿ, ಭೂಮಿಯ ಸಂಬಂಧ ಸರ್ಕಾರದ ಮತ್ತೆ ರೈತರ ಬಾಂಧವ್ಯವನ್ನು ನಿಗದಿಗೊಳಿಸಲಿಕ್ಕಾಗಿ ಕಂದಾಯವನ್ನು ವಿಧಿಸಲಿಕ್ಕಾಗಿ ಕೆಲವು ನಿಬಂಧನೆಗಳನ್ನು ಮಾಡಿದ್ದರು. ಹಳೆಯ ಮೈಸೂರು ರಾಜ್ಯದಲ್ಲಿ ಬ್ರಿಟಿಷ್ ಕಮಿಷನ್ ಆಡಳಿತ ಕಾಲದಲ್ಲೇ ಭೂಕಂದಾಯವನ್ನು ಶಾಸ್ತ್ರಿಯ ರೀತಿಯಲ್ಲಿ ವಿಧಿಸಲು ಕೆಲವು ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ಮೈಸೂರು ರಾಜ್ಯದಲ್ಲಿ ಬೊಂಬಾಯಿ ಲ್ಯಾಂಡ್ ರೆವಿನ್ಯೂ ಕೋಡಿನ ಮಾದರಿಯನ್ನು ಅನುಸರಿಸಿ ೧೮೮೮ ರಲ್ಲೂ "ಮೈಸೂರು ಲ್ಯಾಂಡ್ ರೆವೆನ್ಯೂ ಕೋಡ್" ಎಂಬ ಕಾನೂನನ್ನು ಜಾರಿಗೆ ತರಲಾಯಿತು. ಹೀಗಾಗಿ ರಾಜ್ಯಗಳ ಪುನರ್ವಿಂಗಡಣೆಯ ಕಾಲದಲ್ಲಿ ವಿವಿಧ ಆಳ್ವಿಕೆಗೊಳಗಾಗಿದ್ದ ಕನ್ನಡ ಪ್ರದೇಶಗಳಲ್ಲಿ ಭೂ ಹಿಡುವಳಿ ಮತ್ತೆ ಭೂಕಂದಾಯದ ಸಂಬಂಧ ವಿವಿಧ ಕಾನೂನುಗಳು ಜಾರಿಯಲ್ಲಿದ್ದುವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಕರ್ನಾಟಕದ ಯಾವ ಪ್ರದೇಶದಲ್ಲೂ ಜಮೀನ್ದಾರಿ ಪದ್ಧತಿ ಜಾರಿಯಲ್ಲಿರಲಿಲ್ಲ,

ಆದರೆ ಎಲ್ಲಾ ಪ್ರದೇಶಗಳಲ್ಲೂ ವಿವಿಧ ರೀತಿಯ ಇನಾಮುಗಳೂ ಜಹಗೀರಿಗಳೂ ಹೇರಳವಾಗಿದ್ದುವು. ಅವುಗಳಲ್ಲಿ ಕೆಲವು ರಾಜಕೀಯ ಕಾರಣಗಳಿಗಾಗಿ ಕೊಟ್ಟ ಇನಾಮುಗಳಾಗಿದ್ದುವು. ಕೆಲವು ಭಾವಿ ಸಂಸ್ಥೆಗಳ ಯೋಜನಾರ್ಥವಾಗಿ ಕೊಟ್ಟ ಇನಾಮುಗಳಾಗಿದ್ದವು, ಕೆಲವು ವ್ಯಕ್ತಿಗಳ ಪ್ರಯೋಜನಕ್ಕಾಗಿ ಕೊಟ್ಟ ಇನಾಮುಗಳಾಗಿದ್ದು, ಕೆಲವು ಪಟೇಲರು, ಕುಲಕರ್ಣಿಗಳು, ದೇಶಪಾಂಡೆ, ದೇಶಮುಖ್, ತೋಟಿ, ತಲವಾರ, ನೀರಗಂಟಿ ಮುಂತಾದ ಅಧಿಕಾರಿಗಳಿಗೆ ಕೊಟ್ಟಿದ್ದ ನೌಕರಿ ಇನಾಮುಗಳಾಗಿದ್ದುವು. ಬ್ರಿಟಿಷರ ಕಾಲದಲ್ಲಿ ಮಾಡಿದ್ದ ಕಾನೂನುಗಳ ಪ್ರಕಾರ ಭೂಮಾಲಿಕರಿಗೂ, ಇನಾಂದಾರರಿಗೂ ಭೂಮಿಯ ಮೇಲೆ ಶಾಶ್ವತ ಹಕ್ಕನ್ನು ಕಲ್ಪಿಸಲಾಗಿತ್ತೇ ಹೊರತು ಭೂಮಿಯನ್ನು ವಾಸ್ತವ್ಯವಾಗಿ ಸಾಗುವಳಿ ಮಾಡುತ್ತಿದ್ದ ಗೇಣಿದಾರರಿಗೆ ಶಾಶ್ವತವಾದ ಹಕ್ಕಿರಲಿಲ್ಲ. ಕೆಲವು ವರ್ಗದ ಮೂಲಗೇಣೀದಾರರಿಗೆ ಮಾತ್ರ ಅಕ್ರಮ ಉಚ್ಚಾಟನೆಯಾಗದಂತೆ ಕಾನೂನಿನ ರಕ್ಷಣೆಯಿತ್ತು.

ಅಖಿಲ ಭಾರತ ಕಾಂಗ್ರೆಸ್ಸು ಸ್ವರಾಜ್ಯಕ್ಕಾಗಿ ಹೋರಾಡುತ್ತಿರುವಾಗಲೇ ಉಳುವವನೇ ಭೂಮಿಯ ಒಡೆಯನಾಗಿರಬೇಕೆಂಬ ತತ್ವವನ್ನೇ ಪ್ರತಿಪಾದಿಸುತ್ತಿತ್ತು. ಈ ತತ್ವಕ್ಕನುಗುಣವಾಗಿ ಮೊಟ್ಟಮೊದಲು ಬೊಂಬಾಯಿ ಪ್ರಾಂತ್ಯದಲ್ಲಿ ೧೯೩೯ರಲ್ಲೂ, ಆಗ ಅಧಿಕಾರದಲ್ಲಿದ್ದ ಕಾಂಗ್ರೆಸ್ ಸರ್ಕಾರವು ಗೇಣಿದಾರರ ರಕ್ಷಣೆಗಾಗಿ ಗೇಣಿ ಶಾಸನವನ್ನೆ ಜಾರಿಗೆ ತಂದಿತ್ತು. ಸ್ವರಾಜ್ಯ ಬಂದ ಮೇಲೆ ಕಾಂಗ್ರೆಸ್ಸಿನ ಆದೇಶಕ್ಕನುಗುಣವಾಗಿ ಗೇಣಿದಾರರ ರಕ್ಷಣೆಗಾಗಿ ಮತ್ತೆ ಇನಾಂ ಮುಂತಾದ ಮಧ್ಯವರ್ತಿ ಭೂಸ್ವಾಮ್ಯಪದ್ಧತಿಗಳನ್ನೆ ರದ್ದುಪಡಿಸುವುದಕ್ಕಾಗಿ ಕಾನೂನುಗಳನ್ನು ರಚಿಸಲಾಯಿತು. ಈ ಕಾನೂನುಗಳು ಒಂದೊಂದು ರಾಜ್ಯದಲ್ಲಿ ಒಂದೊಂದು ವಿಧವಾಗಿದ್ದುವು. ೧೯೪೮ರಲ್ಲಿ ಮತ್ತು ೧೯೫೬ರಲ್ಲಿ ತಿದ್ದುಪಡಿಗೊಂಡಿದ್ದ ಬೊಂಬಯಿ ಗೇಣಿ ಶಾಸನದ ಪ್ರಕಾರ ಗೇಣಿದಾರರಿಗೆ ಹಲವು ರೀತಿ ರಿಯಾಯಿತಿ ರಕ್ಷಣೆಗಳು ಸಿಕ್ಕುವುದರ ಜೊತೆಗೆ ಕೆಲವು ವರ್ಗದ ಗೇಣಿದಾರರು ಭೂಮಾಲೀಕರಾಗಲು ಅವಕಾಶ ಕಲ್ಪಿಸಲಾಗಿತ್ತು. ೧೯೫೦ರಲ್ಲಿ ರಚಿಸಲ್ಪಟ್ಟಿದ್ದ ಹೈದರಾಬಾದ್ ಗೇಣಿಶಾಸನಕ್ಕೆ ೧೯೫೬ರಲ್ಲಿ ಕೆಲವು ತಿದ್ದುಪಡಿಗಳಾಗಿದ್ದವು. ತಿದ್ದುಪಡಿಯಾದ ಈ ಕಾನೂನು ಹೆಚ್ಚೂ ಕಡಿಮೆ ಬೊಂಬಾಯಿ ಗೇಣಿ ಶಾಸನದ ಮಾದರಿಯಲ್ಲಿತ್ತು. ೧೯೫೨ರಲ್ಲಿ ಹಿಂದಿನ ಮೈಸೂರು ರಾಜ್ಯದಲ್ಲಿ ರಚಿಸಲ್ಪಟ್ಟಿದ್ದ ಗೇಣಿ ಶಾಸನದ ಪ್ರಕಾರ ಗೇಣಿಯ ಪರಿಮಿತಿಯನ್ನು ನಿಗದಿಗೊಳಿಸಲಾಗಿತ್ತು ಮತ್ತು ಗೇಣಿದಾರರಿಗೆ ಕೆಲವು ರಕ್ಷಣೆಗಳನ್ನು ಕೊಡಲಾಗಿತ್ತು. ಮದರಾಸು ರಾಜ್ಯದಲ್ಲಿ ೧೯೫೫ ರಲ್ಲಿ ಮತ್ತೆ ೧೯೫೬ ರಲ್ಲಿ ಆಗಿದ್ದ ಎರಡು ಗೇಣಿ ಶಾಸನಗಳ ಪ್ರಕಾರ ಗೇಣಿದಾರರಿಗೆ ಅಲ್ಪಸ್ವಲ್ಪ ರಕ್ಷಣೆದೊರೆತಿತ್ತು. ೧೯೫೬ ರಲ್ಲಿ

ರಾಜ್ಯಗಳ ಪುನರ್ವಿಂಗಡಣೆಯಾದಾಗ ಬೊಂಬಾಯಿ, ಹೈದರಾಬಾದ್, ಮೈಸೂರು ಮತ್ತೆ ಮದ್ರಾಸ್ ರಾಜ್ಯಗಳಿಗೆ ಸೇರಿದ್ದ ಕನ್ನಡ ಪ್ರದ್ರೇಶಗಳಲ್ಲಿ ನಾಲ್ಕು ವಿಧವಾದ ಗೇಣಿ ಶಾಸನಗಳಿದ್ದುವು. ಕೊಡಗು ಪ್ರದೇಶದಲ್ಲಿ ಯಾವ ಗೇಣಿಶಾಸನವೂ ಇರಲಿಲ್ಲ.

ಸ್ವರಾಜ್ಯ ಬಂದ ಮೇಲೆ ೧೯೫೬ ರವರೆಗೆ ವಿವಿಧ ಬಗೆಯ ಇನಾಮುಗಳನ್ನು ರದ್ದುಪಡಿಸಲು ಬೊಂಬಾಯಿ ರಾಜ್ಯದಲ್ಲಿ ಆರು ಕಾಯಿದೆಗಳಾಗಿದ್ದವು. ಮೈಸೂರು ರಾಜ್ಯದಲ್ಲಿ ಎರಡುಕಾಯಿದೆಗಳಾಗಿದ್ದವು. ಹೈದರಾಬಾದ್ ರಾಜ್ಯದಲ್ಲಿ ಮೂರುಕಾಯಿದೆಗಳಾಗಿದ್ದವು. ಮದ್ರಾಸ್ ರಾಜ್ಯದಲ್ಲಿ ಒಂದು ಕಾಯಿದೆಯಾಗಿತ್ತು. ರಾಜ್ಯಗಳ ಪುನರ್ವಿಂಗಡಣೆಯಾದ ಮೇಲೆ ೧೯೬೧ ರಲ್ಲಿ ವಂಶಪಾರಂಪರ್ಯದ ಗ್ರಾಮಾಧಿಕಾರಿಗಳ ಹುದ್ದೆಗಳನ್ನೆ ರದ್ದುಪಡಿಸಲು ಒಂದು ಕಾಯಿದೆಯಾಯಿತು. ಈ ಕಾಯಿದೆಯ ಪ್ರಕಾರ ಗ್ರಾಮಾಧಿಕಾರಿಗೆ ಕೊಟ್ಟಿದ್ದ ಇನಾಮುಗಳನ್ನೆ ರದ್ದು ಪಡಿಸಲಾಯಿತು. ಈಚೆಗೆ ೧೯೭೩ ರಲ್ಲೂ ಬೊಂಬಾಯಿ ಮತ್ತೆ ಹೈದರಬಾದು ಕನ್ನಡ ಪ್ರದೇಶಗಳಲ್ಲಿರುವ ಧಾರ್ಮಿಕ ಇನಾಮುಗಳನ್ನು ರದ್ದುಪಡಿಸಲು ಒಂದು ಕಾನೂನು ಆಗಿದೆ. ಈ ಹಲವು ಕಾನೂನುಗಳ ದೆಸೆಯಿಂದ ಈ ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದ ವಿವಿಧ ರೀತಿಯ ಮಧ್ಯವರ್ತಿ ಭೂಸ್ವಾಮ್ಯ ಪದ್ದತಿಗಳು ರದ್ದಾಗಿ, ಭೂಮಿಯನ್ನೇ ಸಾಗು ಮಾಡುವವರು ಭೂಮಿಯ ಒಡೆಯರಾಗಲು ಅವಕಾಶವಾಗಿದೆ.

ರಾಜ್ಯಗಳ ಪುನರ್ವಿಂಗಡನೆಯಾದ ಮೇಲೆ ನವ ಮೈಸೂರು ರಾಜ್ಯ ಸರ್ಕಾರವು ಸಮಗ್ರ ಭೂಸುಧಾರಣೆಗಳಿಗಾಗಿ ಕೈಗೊಂಡ ಕಾರ್ಯಕ್ರಮಗಳ ಪರಿಣಾಮವಾಗಿ ೧೯೬೧ ರಲ್ಲಿ ಸಮಗ್ರ ಭೂಸುಧಾರಣೆಯ ಕಾನೂನು ರಚಿಸಲ್ಪಟ್ಟಿತು. ಈ ಕಾನೂನು ತಾ. ೦೨-೧೦-೧೯೬೫ ರಲ್ಲಿ ಜಾರಿಗೆ ಬಂತು. ಈ ವರ್ಷ ಈ ಕಾನೂನಿಗೆ ಕೆಲವು ಉಪಯುಕ್ತವಾದ ತಿದ್ದುಪಡಿಗಳಾಗಿವೆ. ಈ ಕಾನೂನು ಪ್ರಕಾರ ಗೇಣಿದಾರರೆಲ್ಲರೂ ಭೂಮಾಲೀಕರಾಗಲು ಅವಕಾಶವನ್ನು ಕಲ್ಪಿಸಲಾಗಿದೆ. ಹಿಡುವಳಿಗಳಿಗೆ ಪರಿಮಿತಿಯನ್ನು ಗೊತ್ತು ಮಾಡಲಾಗಿದೆ. ಇನ್ನು ಮುಂದೆ ಪರಿಮಿತಿ ವಿಸ್ತೀರ್ಣಕ್ಕಿಂತ ಹೆಚ್ಚು ಭೂಮಿಯನ್ನು ಯಾರೂ ಇಟ್ಟುಕೊಳ್ಳುವಂತಿಲ್ಲ.

ನಾವು ಸ್ವರಾಜ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಭೂಸುಧಾರಣೆಯಾದರೆ, ಹಳ್ಳಿಗಳಲ್ಲಿ ವಾಸಮಾಡುವ ಎಲ್ಲಾ ಜನರಿಗೂ ಸಾಕಾದಷ್ಟು ಭೂಮಿ ಸಿಕ್ಕಿ, ಹಳ್ಳಿಗರು ಸುಖಸಂಪತ್ತಿನಿಂದ ನಲಿಯುವಂತಾಗುತ್ತದೆಯೆಂಬ ಕಲ್ಪನೆ ನಮ್ಮಲ್ಲಿ ಕೆಲವರಿಗಿತ್ತು. ಆ ಕಲ್ಪನೆ ಸರಿಯಲ್ಲವೆಂಬುದು ಈಗ ಮನವರಿಕೆಯಾಗಿದೆ. ಭಾರತದ ಭೌಗೋಳಿಕ

ವಿಸ್ತೀರ್ಣ ಸುಮಾರು ೮೧೧ ದಶಲಕ್ಷ ಎಕರೆಗಳು. ಈ ಪೈಕಿ ಬೆಟ್ಟ, ಗುಡ್ಡ, ಅರಣ್ಯ, ಗೋಮಾಳ, ಜನರವಸತಿಗೆ ಮೀಸಲಾಗಿರುವ ಸ್ಥಳ ಮುಂತಾದವುಗಳನ್ನು ಕಳೆದರೆ ಸಾಗುವಳಿಗೆ ಯೋಗ್ಯವಾದ ಭೂಮಿಯ ವಿಸ್ತೀರ್ಣ ಸುಮಾರು ೪೬೦ ದಶಲಕ್ಷ ಎಕರೆಗಳಿರಬಹುದು. ಈ ವರ್ಷದ ಅಂತ್ಯಕ್ಕೆ ಈ ದೇಶದ ಜನಸಂಖ್ಯೆ ೫೮೦ ದಶಲಕ್ಷಕ್ಕೆ ಏರಬಹುದೆಂದು ಅಂದಾಜು ಮಾಡಲಾಗಿದೆ. ಕರ್ಣಾಟಕದ ಭೌಗೋಳಿಕ ವಿಸ್ತೀರ್ಣ ಸುಮಾರು ೪೪ ದಶಲಕ್ಷಗಳಿರಬಹುದು. ಈ ಪೈಕಿ ಸುಮಾರು ೨೭ ದಶಲಕ್ಷ ಎಕರೆಗಳು ಹಾಲಿ ಸಾಗುವಳಿಯಲ್ಲಿರಬಹುದೆಂದು ಅಂದಾಜು ಮಾಡಲಾಗಿದೆ. ಈ ಪೈಕಿ ಸುಮಾರು ೨೦ ದಶಲಕ್ಷ ಎಕರೆಗಳಲ್ಲಿ ಆಹಾರ ದವಸಗಳನ್ನು ಬೆಳೆಯಲಾಗುತ್ತಿದೆ. ಕರ್ಣಾಟಕದ ಜನಸಂಖ್ಯೆ ೩೦ ದಶಲಕ್ಷಕ್ಕೆ ಮೀರಿದೆ.

ನಮ್ಮ ದೇಶದಲ್ಲಿ ಶೇಕಡ ೭೫ ರಷ್ಟು ಜನರು ಹಳ್ಳಿಗಳಲ್ಲಿ ವಾಸಮಾಡುತ್ತಾರೆ. ಶೇಕಡ ೨೫ ರಷ್ಟು ಜನರು ಪಟ್ಟಣಗಳಲ್ಲಿ ವಾಸಮಾಡುತ್ತಾರೆ. ಹಳ್ಳಿಗಳಲ್ಲಿ ವಾಸಿಸುವವರೆಲ್ಲರೂ ಒಂದಲ್ಲ ಒಂದು ವಿಧದಲ್ಲಿ ಭೂಮಿಯನ್ನವಲಂಬಿಸಿ ಜೀವನ ನಡೆಯಿಸುವವರು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯ ವಿಸ್ತೀರ್ಣ ಹೆಚ್ಚಾಗುವಂತಿಲ್ಲ. ಆದರೆ ಜನಸಂಖ್ಯೆ ಮಾತ್ರ ಮಿತಿಮೀರಿದ ಪ್ರಮಾಣದಲ್ಲಿ ಹೆಚ್ಚಾಗುತ್ತಾ ಇದೆ. ಶೇಕಡ ೭೫ ರಷ್ಟು ರೈತಾಪಿ ಜನರಿಗೆ ಇಂದೂ ಸಹ ಅರೆಹೊಟ್ಟೆ ಅರೆಬಟ್ಟೆಗಳ ಜೀವನ. ಕರ್ಣಾಟಕದಲ್ಲಿ ಒಟ್ಟು ಸಾಗುವಳಿಯಲ್ಲಿರುವ ಭೂಮಿಯಲ್ಲಿ ಶೇಕಡ ಸುಮಾರು ೧೩ ರಷ್ಟು ಪ್ರದೇಶ ನೀರಾವರಿಯ ಸೌಕರ್ಯವನ್ನು ಹೊಂದಿರುತ್ತದೆ. ಉಳಿದ ಭೂ ಪ್ರದೇಶ ಸಂಪೂರ್ಣವಾಗಿ ಮಳೆಯನ್ನವಲಂಬಿಸಿರುತ್ತದೆ. ಮಳೆ ಸಕಾಲದಲ್ಲಿ ಆದರೆ ಬೆಳೆಯಾಗುತ್ತದೆ. ಇಲ್ಲವಾದರೆ ರೈತನಿಗೆ ಅರೆಹೊಟ್ಟೆ. ಮಳೆಬಾರದಿದ್ದ ವರ್ಷಗಳಲ್ಲಿ ಬರಗಾಲ.

ಪಟ್ಟಣಗಳ ಹಿತಕರವಾದ ವಾತಾವರಣದಲ್ಲಿ ಹುಟ್ಟಿ ಬೆಳೆದವರಿಗೆ ರೈತಾಪಿ ಜನರ ಕಷ್ಟಸುಖಗಳ ಅರಿವಾಗುವುದು ಕಷ್ಟ. ವ್ಯವಸಾಯದ ಓನಾಮ ಗೊತ್ತಿಲ್ಲದ ಪುಸ್ತಕದ ಬದನೆಯಕಾಯಿ ಜನರು ಈ ದೇಶದಲ್ಲಿ ವ್ಯವಸಾಯದ ಅಭಿವೃದ್ಧಿ ಬಗ್ಗೆ ಯೋಜನೆಗಳನ್ನು ನಿರೂಪಿಸುವವರು. ಪಟ್ಟಣಗಳಲ್ಲಿ ವಾಸಮಾಡುವ ಅಧಿಕಾರಿಗಳೂ ಇತರ ಜನರೂ ಎಲ್ಲೋ ಅಲ್ಲಲ್ಲಿ ಸುಖಸಂಪತ್ತಿನಿಂದ ನಲಿಯುತ್ತಿರುವ ಶೇಕಡ ೧೦ ರಷ್ಟು ಶ್ರೀಮಂತ ರೈತರನ್ನು ನೋಡಿ ರೈತರೆಲ್ಲರೂ ತಮ್ಮ ಭೂಮಿಯಲ್ಲಿ ಬಂಗಾರವನ್ನೆ ಬೆಳೆಯುತ್ತಾರೆಂಬ ಕಲ್ಪನೆಯನ್ನು ಹೊಂದಿರುತ್ತಾರೆ. ಜೀವವಿಮಾ ಕಾರ್ಪೊರೇಷನ್, ವಿಮಾನ ಕಾರ್ಪೊರೇಷನ್, ರಾಷ್ಟ್ರೀಕರಣವಾದ ಬ್ಯಾಂಕುಗಳು ಮುಂತಾದ ಸರ್ಕಾರಿ

ಉದ್ಯಮಗಳಲ್ಲಿ ಕನಿಷ್ಟ ದರ್ಜೆಯ ನೌಕರರ ಹುದ್ದೆ ಸಿಕ್ಕುವುದಾದರೆ, ಕನಿಷ್ಟಪಕ್ಷ ಶೇಕಡ ೪೦ ರಷ್ಟು ರೈತಾಪಿ ಜನರು ವ್ಯವಸಾಯವನ್ನೆ ಬಿಟ್ಟು ಪಟ್ಟಣಗಳಿಗೆ ವಲಸೆ ಹೋಗಲು ಸಿದ್ಧರಿರುತ್ತಾರೆ. ಸರ್ಕಾರದ ನಾನಾ ಇಲಾಖೆಗಳಲ್ಲಿ ಜವಾನರಿಗೆ ಸಿಕ್ಕತಕ್ಕ ವರಮಾನ ಸಿಕ್ಕುವುದಾದರೆ, ಶೇಕಡ ೩೦ ರಷ್ಟು ರೈತಾಪಿ ಕುಟುಂಬಗಳು ವ್ಯವಸಾಯವನ್ನೆ ತ್ಯಜಿಸಿ ಬೇರೆ ಉದ್ಯೋಗಗಳನ್ನೆ ಅವಲಂಬಿಸಲು ಸಿದ್ಧರಿರುತ್ತಾರೆ. ವ್ಯವಸಾಯದಲ್ಲಿ ನಿರತರಾಗಿರುವ ಶೇಕಡ ೭೦ ರಷ್ಟು ಜನರಿಗೆ ಬೇರೆ ಉದ್ಯೋಗಗಳು ಲಭಿಸುವಂತಾದರೆ, ಅಂತಹ ಉದ್ಯೋಗಗಳಿಂದ ಪ್ರತಿ ಕುಟುಂಬಕ್ಕೆ ಸರ್ಕಾರದ ಮೊದಲನೆಯ ದರ್ಜೆಯ ಗುಮಾಸ್ತರ ವರಮಾನ ಸಿಕ್ಕುವಂತಿದ್ದರೆ, ಅವರೆಲ್ಲರೂ ವ್ಯವಸಾಯವನ್ನೆ ತ್ಯಜಿಸಿಬೇರೆ ಉದ್ಯೋಗಗಳಲ್ಲಿ ತೊಡಗಲು ಸಿದ್ದರಿದ್ದಾರೆ. ಮಾತೆತ್ತಿದರೆ ಮುಷ್ಕರ ಹೂಡುವ ಸರ್ಕಾರಿ ಅಧಿಕಾರಿಗಳೂ, ರಾಜ್ಯ ಸರ್ಕಾರದವರು ನಡೆಯಿಸುತ್ತಿರುವ ಉದ್ಯಮಗಳಲ್ಲಿ ಕೆಲಸ ಮಾಡುತ್ತಾರೆ. ನೌಕರರೂ ಈ ವಿಚಾರವನ್ನು ಕುರಿತು ಚಿಂತಿಸಬೇಕು.

ಭೂಸುಧಾರಣೆಯಾದ ಮಾತ್ರಕ್ಕೆ ಆಹಾರದ ಸಮಸ್ಯೆ ಬಗೆಹರಿದಂತಾಗುವುದಿಲ್ಲ. ಭೂಸುಧಾರಣೆಯ ಜೊತೆಯಲ್ಲಿಯೇ, ಬೇಸಾಯ ಸುಧಾರಣೆಯಾಗಬೇಕು. ನಮ್ಮ ದೇಶದ ಬೇಸಾಯದ ಸ್ಥಿತಿ ಹುಚ್ಚು ಬಿಟ್ಟ ಹೊರತು ಮದುವೆಯಾಗುವುದಿಲ್ಲ ಎನ್ನುವಂತಾಗಿದೆ. ಬೇಸಾಯಗಾರರ ಸುಧಾರಣೆಯಾದ ಹೊರತು ಬೇಸಾಯದ ಸುಧಾರಣೆಯಾಗುವಂತಿಲ್ಲ. ಬೇಸಾಯದ ಸುಧಾರಣೆಯಾದ ಹೊರತು ಬೇಸಾಯಗಾರರ ಸುಧಾರಣೆಯಾಗುವಂತಿಲ್ಲ. ಬೇಸಾಯಗಾರರಲ್ಲಿ ಶೇಕಡ ೮೫ ರಷ್ಟು ಜನರು ನಿರಕ್ಷರ ಕುಕ್ಷಿಗಳು. ಅವರಿಗೆ ಸಹಾಯ ಮಾಡುವ ಜನರಿಗಿಂತ ಅವರನ್ನೇ ಸುಲಿಗೆ ಮಾಡುವ ಜನರೇ ಹೆಚ್ಚು. ಒಂದು ಕಡೆ ಸರ್ಕಾರಿ ನೌಕರರಿಂದ ಸುಲಿಗೆ ಇನ್ನೊಂದು ಕಡೆ ವ್ಯಾಪಾರಿಗಳಿಂದ ಸುಲಿಗೆ, ಮತ್ತೊಂದು ಕಡೆ ಪುಡಿ ಸಾಹುಕಾರರಿಂದ ಸುಲಿಗೆ. ನಮ್ಮ ದೇಶದಲ್ಲಿ ಶ್ರೀಮಂತರಲ್ಲಿ ಕೆಲವರ ದುರಾಸೆಗೆ ಮಿತಿಯೇ ಇಲ್ಲವಾದರೆ, ಬಡವರಲ್ಲಿ ಕೆಲವರಿಗೆ ಮನುಷ್ಯರಾಗಿ ಬದುಕಬೇಕೆಂಬ ಹಂಬಲವೇ ಇಲ್ಲ. ಈ ಮಾತು ಬೇಸಾಯಗಾರರಿಗೂ ಅನ್ವಯಿಸುತ್ತದೆ. ಬೇಸಾಯಗಾರರಲ್ಲಿ ಕೆಲವರಿಗೆ ಬದುಕಬೇಕೆಂಬ ಹಂಬಲವೇ ಇಲ್ಲವೆಂದು ತೋರುತ್ತದೆ.

ಬೇಸಾಯಗಾರರ ಸ್ಥಿತಿ ಉತ್ತಮವಾಗ ಬೇಕಾದರೆ ಅವರನ್ನಾವರಿಸಿರುವ ನಿರಾಶಭಾವನೆ ಮಾಯವಾಗಬೇಕು. ಅವರ ಶೋಷಣೆ ನಿಲ್ಲಬೇಕು; ಅವರು ವಿದ್ಯಾವಂತರಾಗಬೇಕು. ಎಲ್ಲಕ್ಕಿಂತಲೂ ಮಿಗಿಲಾಗಿ ಸರ್ಕಾರದ ಮತ್ತೆ ಸರ್ಕಾರಿ ಅಧಿಕಾರಿಗಳ ಧೋರಣೆ ಬದಲಾವಣೆಯಾಗಬೇಕು. ಆಡಳಿತದ ಸುಧಾರಣೆಯಾದ

ಹೊರತು ಬೇಸಾಯದ ಸುಧಾರಣೆಯಾಗುವುದಿಲ್ಲವೆಂಬುದನ್ನೆ ನಮ್ಮ ಆಡಳಿತಗಾರರು ಅರಿಯಬೇಕು. ಹಳ್ಳಿಗಳಲ್ಲಿ ವಾಸಮಾಡುವವರೆಲ್ಲರೂ ವ್ಯವಸಾಯವನ್ನವಲಂಬಿಸಿ ಜೀವನವನ್ನು ಸಾಗಿಸಬಹುದೆಂಬ ತಪ್ಪು ಕಲ್ಪನೆ ಕೆಲವರಿಗಿದೆ. ಈಗಾಗಲೇ ಭೂಮಿಯ ಮೇಲೆ ಒತ್ತಡ ಜಾಸ್ತಿಯಾಗಿದೆ. ಈಗಾಗಲೇ ವ್ಯವಸಾಯಗಾರರು ಕನಿಷ್ಠ ದರ್ಜೆಯ ಜೀವನವನ್ನು ಸಾಗಿಸುತ್ತಿದ್ದಾರೆ. ಸಾಗುವಳಿ ಮಾಡಲು ಭೂಮಿ ಇಲ್ಲದೆ ಹಳ್ಳಿಗರು ಬೇರೆ ಉದ್ಯೋಗಗಳನ್ನು ಅರಸಿಕೊಂಡು ಪಟ್ಟಣಗಳಿಗೆ ವಲಸೆ ಹೋಗುತ್ತಿದ್ದಾರೆ. ಪಟ್ಟಣಗಳಲ್ಲೂ ಅವರಿಗೆ ಉದ್ಯೋಗ ಸಿಕ್ಕುವುದು ದುರ್ಲಭವಾಗಿದೆ. ಹಳ್ಳಿಗಳಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗುತ್ತಾ ಇದೆ. ಹಳ್ಳಿಗಳಲ್ಲಿರುವ ಉದ್ಯೋಗಿಗಳಿಗೆ ಬೇರೆ ಬೇರೆ ಉದ್ಯೋಗಗಳನ್ನು ಕಲ್ಪಿಸುವುದು ಅವಶ್ಯಕವಾಗಿ ಪರಿಣಮಿಸಿದೆ.

ಕೆಲವರು ಸಾಮೂಹಿಕ ಬೇಸಾಯ ಪದ್ಧತಿ ಜಾರಿಗೆ ಬಂದರೆ ನಮ್ಮ ದೇಶದ ಆಹಾರದ ಸಮಸ್ಯೆ ಬಗೆ ಹರಿಯುತ್ತದೆಯೆಂದೂ, ಬೇಸಾಯಗಾರರ ಪರಿಸ್ಥಿತಿ ಸುಧಾರಿಸುತ್ತದೆಯೆಂದು ವಾದಿಸುತ್ತಾರೆ. ಕೆಲವರು ಸಹಕಾರಿ ಬೇಸಾಯಪದ್ಧತಿ ಶ್ರೇಷ್ಠ ಮಾರ್ಗವೆಂದು ವಾದಿಸುತ್ತಾರೆ. ಸಹಕಾರಿ ಬೇಸಾಯ ಪದ್ಧತಿಯನ್ನು ಈಗಾಗಲೇ ಅನುಷ್ಠಾನಕ್ಕೆ ತಂದು ಸಾಕಷ್ಟು ಅನುಭವ ದೊರಕಿದೆ. ಸಹಕಾರಿ ಬೇಸಾಯ ಕ್ಷೇತ್ರಗಳು ಯಶಸ್ವಿಯಾಗಿ ನಡೆದಿರುವುದು ಬಹಳ ಅಪರೂಪ. ಸಹಕಾರಿ ಬೇಸಾಯ ಪದ್ಧತಿ ಯಶಸ್ವಿಯಾಗಬೇಕಾದರೆ ಪ್ರಾಮಾಣೀಕತೆ, ನಿಷ್ಠೆ, ಒಗ್ಗಟ್ಟು ಮತ್ತು ಪರಸ್ಪರ ಸೌಹಾರ್ದ ಭಾವನೆ ಆವಶ್ಯಕ. ಪ್ರಾಮಾಣಿಕತೆಗೆ ಅಭಾವ ಉಂಟಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಸಹಕಾರಿ ಬೇಸಾಯ ಪದ್ಧತಿ ಯಶಸ್ವಿಯಾಗುವುದು ಬಹಳ ಕಷ್ಟ. ಈ ಮಾತು ಸಾಮೂಹಿಕ ಬೇಸಾಯ ಪದ್ಧತಿಗೂ ಅನ್ವಯಿಸುತ್ತದೆ.

# ರಾಜಕಾರಣ ಹೊಲಸಾಗಿ ಆಡಳಿತ ಹದಗೆಟ್ಟಾಗ

ಜನರು ಭ್ರಷ್ಟರಾಗಿ ರಾಷ್ಟ್ರದಲ್ಲಿ ನೀತಿ ಪತನವಾದಾಗ ರಾಷ್ಟ್ರವು ಅವನತಿಯ ಹಾದಿಯನ್ನು ಹಿಡಿಯುವುದು. ರಾಜಕಾರಣ ಹೊಲಸಾಗಿ, ಆಡಳಿತ ಹದಗೆಟ್ಟಾಗ ಪ್ರಜಾ ಪ್ರಭುತ್ವ ಕುಸಿದು ಬೀಳುವುದು. ಇವು ನನ್ನ ಮಾತುಗಳಲ್ಲ; ಜಗತ್ತಿನ ಇತಿಹಾಸ ಸಾರಿ ಹೇಳುತ್ತಿರುವ ಮಾತುಗಳು. ಇತ್ತೀಚಿನ ವರ್ಷಗಳಲ್ಲಿ ನಮ್ಮ ದೇಶದ ರಾಜಕಾರಣ ದಿನೇ ದಿನೇ ಹೊಲಸಾಗುತ್ತಿದೆ. ಆಡಳಿತವೂ ಸಾಕಷ್ಟು ಹದಗೆಟ್ಟಿದೆ. ರಾಜಕಾರಣದಲ್ಲಿ ಆದರ್ಶವು ಮಾಯವಾಗುತ್ತಿದೆ. ಘನತೆ, ಗಾಂಭೀರ್ಯಗಳು ಅಪರೂಪವಾಗುತ್ತಿವೆ. ದೇಶದ ಭವಿಷ್ಯವನ್ನು ರೂಪಿಸುವ ಕಾರ್ಯದಲ್ಲಿ ತೊಡಗಿರುವವರು ಸುಸಂಸ್ಕೃತರಾಗಿ ಆದರ್ಶವಾದಿಗಳಾಗಿರಬೇಕು. ಅಲ್ಪ ಜನರು ಎಂದೂ ರಾಷ್ಟ್ರ ನಿರ್ಮಾಪಕರಾಗಲಾರರು. ದುರ್ದೈವದಿಂದ ನಮ್ಮ ದೇಶದ ಕೆಲವು ಕಡೆಗಳಲ್ಲಿ ಇಂದು ರಾಜಕಾರಣ ದುಷ್ಟರ ಮತ್ತು ಭ್ರಷ್ಟರ ಕೈ ಸೇರಿ ಹೋಗಿದೆ. ಕೆಲವು ಕಡೆಗಳಲ್ಲಿ ಪುಂಡರೂ ಪೋಕರಿಗಳು ರಾಜಕೀಯ ಧುರಂಧರರೆನಿಸಿಕೊಂಡು ಮೆರೆಯುತ್ತಿದ್ದಾರೆ.

## ಸ್ವಾರ್ಥದ ಕೆಸರು

ಅಧಿಕಾರವಿದ್ದರು ಕೆಲವರು ಅಧಿಕಾರವನ್ನು ಉಪಯೋಗಿಸಿಕೊಂಡು ತಮ್ಮ ಮತ್ತು ತಮ್ಮವರ ಹಿತ ಸಾಧನೆಯಲಿ ಮಗ್ನರಾಗಿದ್ದರೆ, ಅಧಿಕಾರವಿಲ್ಲದ ಕೆಲವರು ಜನರ ಅತೃಪ್ತಿ ಅಸಹನೆಗಳನ್ನು ಉಪಯೋಗಿಸಿಕೊಂಡು ಆದರ್ಶವಿಲ್ಲದ ಒಣ ಘೋಷಣೆಗಳಿಂದ ಅರಾಜಕತೆಯ ಬೀಜವನ್ನು ಬಿತ್ತುತ್ತಿದ್ದಾರೆ. ಒಂದು ಕಡೆ ಸ್ವಾರ್ಥಸಾಧನೆ, ಲಂಚ, ವಂಚನೆ ಮುಂತಾದವುಗಳ ದೃಶ್ಯವಾದರೆ, ಇನ್ನೊಂದು ಕಡೆ ಕೂಗು, ಅರ್ಭಟ, ಅಸಭ್ಯ ವರ್ತನೆ, ಹೊಲಸು ಭಾಷೆ, ಗೂಂಡಾಗಿರಿ ಮುಂತಾದವುಗಳ ದೃಶ್ಯ. ಈ ದೇಶದ ಕೆಲವು ಕಡೆಗಳಲ್ಲಿ ರಾಜಕಾರಣಿಗಳೆಂದೆನಿಸಿಕೊಂಡಿರುವ ಕೆಲವರು ವರ್ತಿಸುತ್ತಿರುವ ಅಸಹ್ಯಕರ ರೀತಿ ನೀತಿಗಳನ್ನು ನೋಡಿದಾಗ ಅವರಿಂದ ಜನಸಾಮಾನ್ಯರು ಕಲಿತುಕೊಳ್ಳಬೇಕಾದ ಗುಣಗಳೇನಾದರೂ ಇವೆಯೇ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಜನ ಸಾಮಾನ್ಯರು ಮುಖಂಡರಿಂದ ಸದ್ಗುಣಗಳನ್ನು ಸಭ್ಯ ವರ್ತನೆಯನ್ನೂ ಕಲಿಯಬೇಕು. ಆದರೆ ಮುಖಂಡರೆನಿಸಿಕೊಂಡವರಲ್ಲಿ ಆ ಗುಣಗಳೇ ಮಾಯವಾಗಿರುವಾಗ ಜನರು ಅವರಿಂದ ಕಲಿಯುವುದಾದರೂ ಏನಿದೆ?

ದಿನ ಬೆಳಗಾದರೆ ರಾಜಕಾರಣದ ಹೆಸರಿನಲ್ಲಿ ನಡೆಯುತ್ತಿರುವ ಭ್ರಷ್ಟಾಚಾರ, ಅನಾಚಾರ, ಗಲಭೆ, ದೊಂಬಿ, ದೌರ್ಜನ್ಯ, ಮುಂತಾದ ಮನಸ್ಸಿನ ಶಾಂತಿಯನ್ನು ಕದಡುತ್ತಿರುವ ಪ್ರಸಂಗಗಳನ್ನು ನೋಡುತ್ತಿರುವುದು ಅಥವಾ ಕೇಳುತ್ತಿರುವುದು ದುರದೃಷ್ಟಕರ. ಕೆಲವು ಕಡೆಗಳಲ್ಲಿ ಜನರು ಶಾಂತಿಯಿಂದ ಬಾಳುವುದೇ ಕಷ್ಟವಾಗಿದೆ. ಕೇವಲ ಇಪ್ಪತ್ತು ವರ್ಷಗಳ ಹಿಂದೆ ಸತ್ಯ, ಅಹಿಂಸೆಗಳಿಂದ ಕೂಡಿದ್ದ ರಕ್ತಪಾತವಿಲ್ಲದ ಹೋರಾಟದಿಂದ ಸ್ವರಾಜ್ಯಗಳಿಸಿದ ಈ ನಾಡಿನಲ್ಲಿ ಇಂದು ರಾಜಕಾರಣದ ಹೆಸರಿನಲ್ಲಿ ನಡೆಯಬಾರದ ಪ್ರಸಂಗಗಳು ನಡೆಯುತ್ತಾ ಇವೆ. ನಾವೇನು ಮಾಡುತ್ತಿದ್ದೇವೆ? ನಮ್ಮ ಗುರಿ ಏನು? ಎಂಬುದರ ಬಗ್ಗೆ ವಿಚಾರ ಮಾಡುವಷ್ಟು ವಿರಾಮ ಕೂಡ ನಮಗಿಲ್ಲವಾಗಿದೆ. ಜನರು, ಅದರಲ್ಲೂ ರಾಜಕಾರಣದಲ್ಲಿ ತೊಡಗಿರುವವರು ವಿಚಾರ ಶಕ್ತಿಯನ್ನು ಸಂಪೂರ್ಣವಾಗಿ ಕಳೆದು ಕೊಂಡಿರುವವರಂತೆ ವರ್ತಿಸುತ್ತಿದ್ದಾರೆ. ಈಗಿರುವ ಅಪಾಯಕರ ಪರಿಸ್ಥಿತಿಯು ಮುಂದುವರಿದರೆ ಮುಂದೇನಾಗಬಹುದೆಂದು ಜಗತ್ತಿನ ಇತಿಹಾಸವನ್ನು ಓದಿದವರು ಸಾಮಾನ್ಯವಾಗಿ ಊಹಿಸಬಹುದು.

## ಕಣ್ಣಿದ್ದ ಕುರುಡರು

ಆದರೆ ರಾಜಕಾರಣಿಗಳೆನಿಸಿಕೊಂಡವರು ವಿಚಾರ ಮಾಡುವ ಗೊಡವೆಗೆ ಹೋಗದೆ ಕಣ್ಣಿದ್ದೂ ಕುರುಡರಂತೆ ವರ್ತಿಸುತ್ತಿದ್ದಾರೆ. ಕೆಲವರು ಸ್ವಾರ್ಥ ಸಾಧನೆಯ ರಾಜಕಾರಣದಲ್ಲಿ ನಿರತರಾಗಿದ್ದರೆ, ಕೆಲವರು ಗೊತ್ತು ಗುರಿಯಿಲ್ಲದ ರಾಜಕಾರಣದಲ್ಲಿ ತೊಡಗಿದ್ದಾರೆ. ಕೆಲವರು ಚೀನೀ ಮಾದರಿಯ ಪ್ರಭುತ್ವವನ್ನು ಸ್ಥಾಪಿಸಲು ಹೊರಟಿದ್ದಾರೆ. ಕೆಲವರು ರಷ್ಯಾ ಮಾದರಿಯ ಸಮಾಜವನ್ನು ರೂಪಿಸಲು ಯತ್ನಿಸುತ್ತಿದ್ದಾರೆ. ಮತ್ತೆ ಕೆಲವರು ಜಾತೀಯತೆಯ ರಾಜಕಾರಣದಲ್ಲಿ ತೊಡಗಿದ್ದಾರೆ. ಈ ಎಲ್ಲಾ ಗೊಂದಲಗಳ ನಡುವೆ ಸಿಕ್ಕ ಜನಸಾಮಾನ್ಯರು ಏನೂ ತೋಚದೆ ಮಂಕು ಹಿಡಿದವರಂತ ಆಗಿದ್ದಾರೆ.

ಕಾಂಗ್ರೆಸ್ ಜನಪ್ರಿಯತೆಯನ್ನು ಕಳೆದುಕೊಂಡಿದೆ. ವಿರೋಧ ಪಕ್ಷಗಳು ಇನ್ನೂ ಜನಪ್ರಿಯತೆಯನ್ನು ಗಳಿಸಿಲ್ಲ. ವಿರೋಧ ಪಕ್ಷಗಳ ಸಂಖ್ಯೆಗೆ ಇತಿಮಿತಿಯೇ ಇಲ್ಲ. ಅವುಗಳು ವಿವಿಧ ಹಾದಿಯನ್ನು ಹಿಡಿದಿವೆ. ಕಳೆದ ಮಹಾಚುನಾವಣೆಯಲ್ಲಿ ವಿರೋಧ ಪಕ್ಷಗಳಲ್ಲಿದ್ದ ಒಗ್ಗಟ್ಟು ಇಂದು ಮಾಯವಾಗಿ ಅವುಗಳ ರಚಿಸಿದ್ದ ಸಮ್ಮಿಶ್ರ ಸರ್ಕಾರಗಳು ಒಂದೊಂದಾಗಿ ಕುಸಿದು ಬಿದ್ದಿವೆ. ಸ್ಪಷ್ಟವಾಗಿ ಹೇಳುವುದಾದರೆ ವಿರೋಧ ಪಕ್ಷಗಳ ಧುರೀಣರು ಕಾಂಗ್ರೆಸಿಗಿಂತ ನಮ್ಮ ಪಕ್ಷಗಳು ಉತ್ತಮವೆಂಬುದನ್ನು ಇನ್ನೂ ಜನತೆಗೆ ತೋರಿಸಿಕೊಟ್ಟಿಲ್ಲ. ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಬೇಕಾದರೆ ದೇಶಾದ್ಯಂತ

ಪ್ರಭಾವವನ್ನು ಬೀರುವ ಕೆಲವೇ ರಾಜಕೀಯ ಪಕ್ಷಗಳಿರಬೇಕು. ನಮ್ಮ ದೇಶದಲ್ಲಿ ರಾಜಕೀಯ ಪಕ್ಷಗಳ ಸಂಖ್ಯೆಗೆ ಇತಿಮಿತಿಯೇ ಇಲ್ಲ. ವರ್ಷೇ ವರ್ಷೇ ಅವುಗಳ ಸಂಖ್ಯೆ ಹೆಚ್ಚುತ್ತಾ ಇವೆ. ವಿವಿಧ ಪಕ್ಷಗಳ ಧುರೀಣರು ತಮ್ಮ ಪಕ್ಷಗಳಿಂದಲೇ ಈ ದೇಶಕ್ಕೆ ಮುಕ್ತಿಯೆಂದು ಸಾರುತ್ತಿದ್ದಾರೆ. ಇವರ ಘೋಷಣೆಗಳನ್ನು ಕೇಳಿದಾಗ ಪೂರ್ವಕಾಲದಲ್ಲಿ ಧರ್ಮ ಪ್ರಚಾರಕರು ತಮ್ಮ ಧರ್ಮದಿಂದಲೇ ಮಾನವರಿಗೆ ಮುಕ್ತಿ ಎಂದು ಸಾರುತ್ತಿದ್ದುದು ನೆನಪಿಗೆ ಬರುತ್ತದೆ.

### ಪಕ್ಷಾಂತರ

ರಾಜಕಾರಣಿಗಳ ಪಕ್ಷಾಂತರದ ಪ್ರಕರಣಗಳಂತೂ ಅತ್ಯಂತ ಅಸಹ್ಯಕರವಾಗಿವೆ ಮತ್ತು ಹಾಸ್ಯಸ್ಪದವಾಗಿವೆ. ಇಂದು ಒಂದು ಪಕ್ಷದಲ್ಲಿದ್ದವರು ನಾಳೆ ಇನ್ನೊಂದು ಪಕ್ಷಕ್ಕೆ ಹಾರುತ್ತಾರೆ.; ನಾಡಿದ್ದು ಮತ್ತೊಂದು ಪಕ್ಷಕ್ಕೆ ಜಾರುತ್ತಾರೆ. ಆಚೆನಾಡಿದ್ದು ಹಿಂದಿದ್ದ ಪಕ್ಷಕ್ಕೆ ಮರಳಿ ಬರುತ್ತಾರೆ. ನಾನಾ ಕಾರಣಗಳ ದೆಸೆಯಿಂದ ಜನರಿಗೆ ರಾಜಕಾರಣಿಗಳ ವಿಚಾರದಲ್ಲಿ ವಿಶ್ವಾಸ ಗೌರವಗಳು ಕಡಿಮೆಯಾಗುತ್ತಾ ಇವೆ. ಪ್ರಜೆಗಳಿಗೆ ಅವರ ಮುಖಂಡರೆನಿಸಿಕೊಂಡಿರುವವರ ವಿಚಾರದಲ್ಲಿ ಗೌರವ ಕಡಿಮೆಯಾದಾಗ ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಲಾರದು. ಕೆಲವು ವಿಚಾರಗಳಲ್ಲಿ ವಿರೋಧ ಪಕ್ಷಗಳು ಕಾಂಗ್ರೆಸ್ಸಿನ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಾ ಬಂದಿವೆ. ಆದ್ದರಿಂದ ಕಾಂಗ್ರೆಸಿನಲ್ಲಿ ಕಂಡು ಬರುತ್ತಿರುವ ಕೆಲವು ಲೋಪದೋಷಗಳನ್ನು ವಿರೋಧ ಪಕ್ಷಗಳಲ್ಲಿ ಕೂಡ ನಾವು ಕಾಣುತ್ತಿದ್ದೇವೆ.

ರಾಷ್ಟ್ರವು ಪ್ರಬಲವಾಗಬೇಕಾದರೆ ಜನತೆಯಲ್ಲಿ ಒಗಟ್ಟು ಮೂಡಬೇಕು. ಒಗ್ಗಟ್ಟು ಮೂಡಬೇಕಾದರೆ ರಾಷ್ಟ್ರಭಕ್ತಿ ಮತ್ತು ರಾಷ್ಟ್ರೀಯ ಭಾವನೆ ಅವಶ್ಯಕ. ನಮ್ಮಲ್ಲಿ ಕೆಲವರು ರಾಷ್ಟ್ರ ಭಕ್ತಿಯ ಬದಲು ಪರ ರಾಷ್ಟ್ರ ಭಕ್ತಿಯನ್ನು ಬೋಧಿಸುತ್ತಿದ್ದಾರೆ. ಮತ್ತೆ ಕೆಲವರು ರಾಷ್ಟ್ರೀಯ ಭಾವನೆಗಳ ಬದಲು ಪ್ರಾಂತೀಯ ಭಾವನೆಗಳನ್ನು ಬೆಳೆಸುತ್ತಿದ್ದಾರೆ. ಇನ್ನೂ ಕೆಲವರು ಸಿದ್ಧಾಂತದ ಸೋಗಿನಲ್ಲಿ ಶತ್ರು ರಾಷ್ಟ್ರದ ದುರಾಕ್ರಮಣ ನೀತಿಯನ್ನು ಸಮರ್ಥಿಸುತ್ತಿದ್ದಾರೆ. ಈ ದೇಶದ ಇತಿಹಾಸವನ್ನು ಸ್ಮರಿಸಿಕೊಂಡಾಗ, ಕೆಲವು ಸಂದರ್ಭಗಳಲ್ಲಿ ದೇಶದ್ರೋಹಿಗಳು ಕೆಲವರು ಅಧಿಕಾರದ ಆಸೆಗಾಗಿ ಅಥವಾ ಹಣಕ್ಕಾಗಿ ಅಥವಾ ತಮಗಾಗದವರ ಮೇಲಿನ ಸೇಡಿಗಾಗಿ ಶತ್ರುಗಳೊಡನೆ ಸಾಮೀಲಾಗಿದ್ದ ಪ್ರಸಂಗಗಳು ನಮ್ಮ ನೆನಪಿಗೆ ಬರುತ್ತವೆ. ಇತಿಹಾಸ ಕಲಿಸಿದ ಪಾಠವನ್ನು ನಮ್ಮ ಜನರು ಮರೆತಂತೆ ತೋರುತ್ತದೆ. ಜಗತ್ತಿನ ಯಾವ ಕಮ್ಯೂನಿಸ್ಟ್ ರಾಷ್ಟ್ರವೂ ಕೂಡ

ನೆರೆ ರಾಷ್ಟ್ರವು ತನ್ನಂತೆಯೇ ಕಮ್ಯೂನಿಸ್ಟ್ ರಾಷ್ಟ್ರವೆಂಬ ಭಾವನೆಯಿಂದ ನೆರೆ ರಾಷ್ಟ್ರದ ದುರಾಕ್ರಮಣ ನೀತಿಯನ್ನು ಸಹಿಸಲಾರದು. ಜಗತ್ತಿನ ಎಲ್ಲಾ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲೂ ರಾಷ್ಟ್ರಭಕ್ತಿ ಮತ್ತು ರಾಷ್ಟ್ರೀಯ ಭಾವನೆ ಯಥೇಚ್ಛವಾಗಿದೆ ಎಂಬ ವಿಚಾರ ನಮ್ಮ ದೇಶದ ಪರರಾಷ್ಟ್ರ ಭಕ್ತರಿಗೆ ಇನ್ನೂ ತಿಳಿಯದೆ ಇರುವುದು ಆಶ್ಚರ್ಯ.

## ಅನಾಯಕತ್ವ

ದಿನ ದಿನಕ್ಕೂ ರಾಜಕಾರಣ ಮತ್ತು ಆಡಳಿತ ಹದಗೆಡುತ್ತಾ ಇವೆ. ಜನರಲ್ಲಿ ಅತೃಪ್ತಿ ಅಸಮಾಧಾನಗಳು ಹೆಚ್ಚಾಗುತ್ತಾ ಇವೆ. ಕೆಲವು ಕಡೆಗಳಲ್ಲಿ ಜನರಿಗೆ ಕಾನೂನಿನ ರಕ್ಷಣೆ ದೊರೆಯುವುದೇ ದುರ್ಲಭವಾಗಿದೆ. ಆಡಳಿತದಲ್ಲಿ ಲಂಚದ ಕೈವಾಡ ಹೆಚ್ಚಾಗ ತೊಡಗಿದೆ. ಆದರೆ ರಾಜಕೀಯ ಮುಖಂಡರು ಮಾತ್ರ ಮುಂದೇನಾಗಬಹುದು ಎಂಬುದರ ಪರಿಜ್ಞಾನವಿಲ್ಲದೆ ತಮ್ಮ ಕಾರುಬಾರುಗಳಲ್ಲಿ ನಿರಾತಂಕರಾಗಿ ನಿರತರಾಗಿದ್ದಾರೆ. ಕೆಲವರು ತಮಗಿರುವ ಅಧಿಕಾರವನ್ನುಳಿಸಿಕೊಳ್ಳುವ ಪ್ರಯತ್ನದಲ್ಲಿ ಮಗ್ನರಾಗಿದ್ದಾರೆ. ಕೆಲವರು ಅಧಿಕಾರವನ್ನು ಸಂಪಾದಿಸುವ ಪ್ರಯತ್ನದಲ್ಲಿ ತೊಡಗಿದ್ದಾರೆ ಕೆಲವರು ಹೊಸ ಹೊಸ ಸಮಸ್ಯೆಗಳನ್ನು ನಿರ್ಮಿಸಿ ಪ್ರಸಿದ್ಧ ಪುರುಷರಾಗುವ ಕಾರ್ಯದಲ್ಲಿ ತೊಡಗಿದ್ದಾರೆ. ಕೆಲವರು ಜನರಲ್ಲಿರುವ ಅತೃಪ್ತಿಯನ್ನು ಪ್ರಜ್ವಲಗೊಳಿಸಿ ಆ ಮೂಲಕ ಮುಖಂಡರಾಗುವ ಸನ್ನಾಹದಲ್ಲಿದ್ದಾರೆ. ಕೆಲವು ಅರಾಜಕತೆಯ ಬೀಜವನ್ನು ಬಿತ್ತುತ್ತಿದ್ದಾರೆ. ಲಂಚಕೋರ ಅಧಿಕಾರಗಳೂ, ಲಾಭಕೋರವಣಿಕರೂ, ಭ್ರಷ್ಟ ರಾಜಕಾರಣಿಗಳೂ ಕೆಲವು ಕಡೆಗಳಲ್ಲಿ ಜನ ಸಾಮಾನ್ಯರ ಸುಲಿಗೆಯಲ್ಲಿ ನಿರತರಾಗಿದ್ದಾರೆ.

ಇಂದಿನ ರಾಜಕಾರಣದಲ್ಲಿ ಇಷ್ಟೆಲ್ಲಾ ನ್ಯೂನತೆಗಳಿದ್ದರೂ ಇನ್ನೂ ಕಾಲ ಮಿಂಚಿ ಹೋಗಿಲ್ಲ. ಹದಗೆಡುತ್ತಿರುವ ಪರಿಸ್ಥಿತಿಯನ್ನು ಸುಧಾರಿಸಲು ಈಗಲೂ ಸಾಧ್ಯವಿದೆ. ಆದರೆ ವಿವಿಧ ಪಕ್ಷಗಳ ರಾಜಕೀಯ ಮುಖಂಡರುಗಳು ಮನಸ್ಸು ಮಾಡಬೇಕು. ಇಂದು ಜನರಿಗೆ ಬೇಕಾಗಿರುವುದು ಸಿದ್ಧಾಂತಗಳ ಘೋಷಣೆ ಘರ್ಷಣೆಗಳಲ್ಲ; ಅವರ ಬಡತನ ಮತ್ತು ಕಷ್ಟ ಕೋಟಲೆಗಳನ್ನು ನಿವಾರಣೆ ಮಾಡತಕ್ಕ ಶಕ್ತಿ ಇರುವ ದಿಟ್ಟತನದ ನಿಷ್ಪಕ್ಷಪಾತವಾದ ಸ್ವಚ್ಛವಾದ ಆಡಳಿತ. ಒಂದು ಕಡೆ ತ್ವರಿತವಾಗಿ ಕಾಂಗ್ರೆಸ್ ಪಕ್ಷದ ಸುಧಾರಣೆಯಾಗಬೇಕು. ಇನ್ನೊಂದು ಕಡೆ ಕಾಂಗ್ರೆಸ್ಸಿನೊಂದಿಗೆ ಪೈಪೋಟಿ ನಡೆಸುವಂತಹ ಪ್ರಬಲವಾದ ವಿರೋಧಪಕ್ಷವೊಂದು ರಚಿಸಲ್ಪಡಬೇಕು. ರಾಷ್ಟ್ರ ಭಕ್ತಿ, ಪ್ರಜಾಪ್ರಭುತ್ವ ಮತ್ತು ಸಮಾಜವಾದ ತತ್ವಗಳಲ್ಲಿ ನಂಬಿಕೆ ಇರುವ ಎಲ್ಲಾ ಪಕ್ಷಗಳೂ ಒಂದಾಗಿ ಬಲವಾದ ವಿರೋಧ ಪಕ್ಷವನ್ನು ರಚಿಸಬೇಕು. ಪ್ರಜಾಪ್ರಭುತ್ವದ ಅಳಿವು

ಉಳಿವು ಆಡಳಿತವನ್ನು ಅವಲಂಬಿಸಿರುತ್ತದೆ. ಜನರಿಗೆ ಉತ್ತಮ ಆಡಳಿತ ದೊರೆತರೆ ಪ್ರಜಾಪ್ರಭುತ್ವ ಉಳಿಯುತ್ತದೆ. ಇಲ್ಲವಾದರೆ ಅಳಿಯುತ್ತದೆ. ಇಂದು ಆಡಳಿತದಲ್ಲಿ ತಾಂಡವವಾಡುತ್ತಿರುವ ಲಂಚಕೋರತನ ಇದೇ ರೀತಿಯಲ್ಲಿ ಬೆಳೆಯುತ್ತಾ ಬಂದರೆ ಪರಿಸ್ಥಿತಿ ಕೈಮೀರಿ ಹೋಗಬಹುದು.

## ಪಾಠ ಕಲಿಯಲಿಲ್ಲ

ಈಗಲೂ ಸಹ ಕಾಂಗ್ರೆಸ್ಸು ತಾನು ಕಳೆದುಕೊಂಡಿರುವ ಜನಾನುರಾಗವನ್ನು ಪುನಃ ಸಂಪಾದಿಸಲು ಸಾಧ್ಯವಿದೆ. ಆದರೆ ಕಳೆದ ಮಹಾಚುನಾವಣೆಯಲ್ಲಿ ಪಡೆದ ಪರಾಭವದಿಂದ ಕೆಲವರು ಕಾಂಗ್ರೆಸ್ಸಿಗರು ಇನ್ನೂ ಪಾಠವನ್ನು ಕಲಿತಂತೆ ತೋರಲಿಲ್ಲ. ಕೆಲವು ಮುಖಂಡರು ಸೋಲಿನ ನಿಜವಾದ ಕಾರಣಗಳನ್ನೇ ತಿಳಿಯದೆ ಒಗ್ಗಟ್ಟಿನ ಪಲ್ಲವಿಯನ್ನು ಹಾಡುತ್ತಿದ್ದಾರೆ. ಆದರ್ಶ ಮತ್ತು ಪ್ರಾಮಾಣಿಕತೆ ಇಲ್ಲದ ಜನರು ಒಗ್ಗಟ್ಟಾದರೆ ಆದರ್ಶರಹಿತವಾದ ಅಪ್ರಮಾಣಿಕರ ಕೂಟವಾಗುತ್ತದೆ. ಕಳೆದ ಚುನಾವಣೆಯಲ್ಲಿ ಸಂಭವಿಸಿದ ಸೋಲಿಗೆ ಕಾಂಗ್ರೆಸ್ನಲ್ಲಿ ಕಂಡು ಬರುತ್ತಿರುವ ಆದರ್ಶದ ಮತ್ತು ಪ್ರಾಮಾಣಿಕತೆಯ ಅಭಾವವೇ ಮುಖ್ಯ ಕಾರಣವೆಂಬುದನ್ನು ಮರೆತು ಸಫಲವಾಗದ ಏನೇನೋ ಪರಿಹಾರಗಳನ್ನು ಹುಡುಕುತ್ತಿದ್ದಾರೆ.

ಕಳೆದ ಸುಮಾರು ಹತ್ತು ವರ್ಷಗಳಿಂದ ಅಲ್ಲಲ್ಲಿ ಕೆಲವರು ಕಾಂಗ್ರೆಸ್ ಮುಖಂಡರು ತಮ್ಮ ಅಧಿಕಾರದ ಕೋಟೆಯನ್ನು ಭದ್ರಪಡಿಸಿಕೊಳ್ಳುವ ಸಲುವಾಗಿ ತಮ್ಮ ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕುವ ಸ್ವಾರ್ಥ ಸಾಧಕರನ್ನೂ, ಸಮಯ ಸಾಧಕರನ್ನು ತಮ್ಮ ಕೂಟಕ್ಕೆ ಸೇರಿಸಿಕೊಂಡು, ಸಂಸ್ಥೆಯಲ್ಲಿದ್ದ ಸತ್ಯಸಂಧರನ್ನೂ, ಆದರ್ಶವಾದಿಗಳನ್ನೂ ಮೂಲೆಗೊತ್ತುತ್ತಾ ಬಂದಿದ್ದಾರೆ. ಜನಸಾಮಾನ್ಯರ ಪ್ರೀತಿ ವಿಶ್ವಾಸಗಳನ್ನು ಗಳಿಸುವ ಬದಲು, ತಮಗೆ ಮತ್ತು ತಮ್ಮ ರಾಜಕಾರಣಕ್ಕೆ ಹಣ ಕೊಡುವ ಲಾಭ ಬಡುಕರ ಆಶ್ರಯವನ್ನು ಪಡೆಯಲಾರಂಭಿಸಿದರು. ಜನ ಸೇವೆಯಲ್ಲಿ ಉದ್ಯುಕ್ತರಾದರು. ಇದರ ಪರಿಣಾಮವಾಗಿ ಕೆಲವು ಕಡೆಗಳಲ್ಲಿ ಕುಪಿತರಾದ ಜನರು ಚುನಾವಣೆಯಲ್ಲಿ ಕಾಂಗ್ರೆಸ್ಸನ್ನು ಕೈಬಿಟ್ಟರು. ಕಾಂಗ್ರೆಸ್ಸಿನಲ್ಲಿ ಸೇರಿಕೊಂಡಿರುವ ದುಷ್ಟರನ್ನೂ, ಭ್ರಷ್ಟರನ್ನೂ ಹೊರದೂಡದಿದ್ದರೆ, ಆಡಳಿತವನ್ನು ವ್ಯಾಪಿಸಿರುವ ಲಂಚದ ಪಿಡುಗನ್ನು ನಿರ್ಮೂಲಗೊಳಿಸದಿದ್ದರೆ, ಬಡ ಬಗ್ಗರ ಉದ್ಧಾರದತ್ತ ಹೆಚ್ಚು ಲಕ್ಷ್ಯವೀಯದಿದ್ದರೆ, ಹತ್ತಲ್ಲ ಇಪ್ಪತ್ತು ಸೂತ್ರಗಳನ್ನು ಅನುಷ್ಠಾನಕ್ಕೆ ತಂದರೂ ಕಾಂಗ್ರೆಸ್ಸನ್ನು ಪುನಶ್ಚೇತನಗೊಳಿಸುವುದು ಕಷ್ಟ. ಆಡಳಿತದಲ್ಲಿ ಸ್ವಚ್ಛತೆಯನ್ನೂ, ದಕ್ಷತೆಯನ್ನು ನೆಲೆಗೊಳಿಸದಿದ್ದರೆ, ರಾಷ್ಟ್ರೀಕರಣಗಳೂ, ಸುಧಾರಣೆಗಳೂ

ಲಂಚಕೋರರಿಗೆ ಮೇಯಲು ಅನುಕೂಲವಾದ ಹೊಸ ಹುಲ್ಲುಗಾವಲುಗಳಾಗುತ್ತವೆ. ಕಾಂಗ್ರೆಸ್ಸು ಉಳಿಯಬೇಕಾದರೆ ಅದು ಜನರು ತಿರಸ್ಕರಿಸುವ ಹಳೆಯ ಜಾಡನ್ನು ಬಿಟ್ಟು ಜನರೊಪ್ಪುವ ಹೊಸ ರಾಜಮಾರ್ಗವನ್ನು ಹಿಡಿಯಬೇಕು.

ರಾಷ್ಟ್ರದ ಆಗುಹೋಗುಗಳೂ ಜನರ ಕಷ್ಟ ಸುಖಗಳೂ ಆಡಳಿತವನ್ನು ಅವಲಂಬಿಸಿರುತ್ತವೆ. ಉತ್ತಮ ಆಡಳಿತ ಲಭಿಸಿದರೆ ರಾಷ್ಟ್ರವು ಪ್ರಬಲವಾಗಿ ಜನರು ಸುಖ ಶಾಂತಿಯಿಂದ ಬಾಳುತ್ತಾರೆ. ದುರಾಡಳಿತ ದೊರೆತರೆ ರಾಷ್ಟ್ರವು ದುರ್ಬಲವಾಗಿ ಜನರು ಕಷ್ಟ ಪರಂಪರೆಗಳಿಂದ ನರಳುತ್ತಾರೆ. ನಮ್ಮ ದೇಶದಲ್ಲಿ ಹೇರಳವಾದ ನೈಸರ್ಗಿಕ ಸಂಪತ್ತಿದೆ. ಜನಸಂಪತ್ತು ಮಿತಿಮೀರಿ ಹೋಗಿದೆ. ಮೇಧಾವಿಗಳಿಗೂ ಕೊರತೆಯಿಲ್ಲ. ಒಂದು ಕಡೆ ಅಗಾಧ ಪ್ರಮಾಣದಲ್ಲಿ ಆಗಬೇಕಾಗಿರುವ ಕೆಲಸಕಾರ್ಯಗಳು ಕಾದಿವೆ. ಇನ್ನೊಂದು ಕಡೆ ಆ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸಮರ್ಥರಾದ ಜನ ಸಮೂಹವಿದೆ. ಆದರೆ ಅದಾವ ಕಾರಣದಿಂದಲೋ ಈ ಮಿತಿ ಮೀರಿರುವ ಜನಸಮೂಹವನ್ನು ಅಗತ್ಯವಾಗಿ ಆಗಬೇಕಾಗಿರುವ ಕೆಲಸ ಕಾರ್ಯಗಳಿಗೆ ಅಳವಡಿಸಲು ಅಸಮರ್ಥರಾಗಿದ್ದೇವೆ.

### ಕನಸು

ಸ್ವರಾಜ್ಯಕ್ಕಾಗಿ ಚಳವಳಿ ನಡೆಯಿಸುತ್ತಿದ್ದ ಕಾಲದಲ್ಲಿ, ಬ್ರಿಟಿಷರು ಈ ದೇಶವನ್ನು ಬಿಟ್ಟು ತೊಲಗಿದ ಕೆಲವೇ ವರ್ಷಗಳಲ್ಲಿ ದೇಶವು ಸಂಪತ್ಸಮೃದ್ಧಿಯಿಂದ ನಲಿಯುವುದೆಂಬ ಕನಸನ್ನು ನಮ್ಮಲ್ಲಿ ಕೆಲವರು ಕಂಡಿದ್ದರು. ಸ್ವರಾಜ್ಯ ಲಭಿಸಿದ ಮೇಲೆ ನಾನಾ ಮುಖವಾಗಿ ಅಭಿವೃದ್ಧಿ ಕಾರ್ಯಗಳು ನಡೆದಿದೆ. ಆರ್ಥಿಕ ಪ್ರಗತಿಯೂ ಜರುಗಿದೆ. ಆದರೆ ನಮ್ಮ ಬಡತನವಿನ್ನೂ ನಿವಾರಣೆಯಾಗಿಲ್ಲ; ಅನ್ನ ಸಮಸ್ಯೆಬಗೆಹರಿದಿಲ್ಲ. ದೇಶದ ಬಹುಮಂದಿ ಜನರಿಗೆ ಗುಡಿಸಲುಗಳೇ ಆವಾಸ. ಕೆಲವರಿಗಂತೂ ಆಕಾಶವೇ ಹೊದಿಕೆ; ಭೂಮಿಯೇ ಹಾಸಿಗೆ ಆಹಾರದ ಅಭಾವವನ್ನೂ ಬಡತನವನ್ನೂ ನಿವಾರಣೆ ಮಾಡಲು ತ್ವರಿತಗತಿಯಲ್ಲಿ ಕೆಲಸಕಾರ್ಯಗಳು ನಡೆಯಬೇಕಾಗಿವೆ. ಆದ್ದರಿಂದ ಮಾಡಬೇಕಾದ ಕೆಲಸಕಾರ್ಯಗಳು ಹೇರಳವಾಗಿವೆ ಆದರೆ ಕೆಲಸಕಾರ್ಯಗಳಿದ್ದರೂ ಕೂಡ ನಿರುದ್ಯೋಗದ ಸಮಸ್ಯೆ ಕಾಡುತ್ತಲೇ ಇದೆ. ಸ್ವರಾಜ್ಯ ಬಂದು ಇಪ್ಪತ್ತು ವರ್ಷಗಳ ಮೇಲಾಯ್ತು. ಇಷ್ಟೇ ಅವಧಿಯಲ್ಲಿ ಜಗತ್ತಿನ ಕೆಲವು ರಾಷ್ಟ್ರಗಳು ಹೆಚ್ಚು ಪ್ರಗತಿಯನ್ನು ಸಾಧಿಸುವಾಗ ನಮಗೇನಾಗಿದೆ? ನಮ್ಮಲ್ಲೇನೋ ನ್ಯೂನತೆಗಳಿರಬೇಕು. ಇಲ್ಲವಾದರೆ ಹೀಗಾಗುತ್ತಿರಲಿಲ್ಲ. ನ್ಯೂನತೆಗಳನ್ನು ಕಂಡು ಹಿಡಿಯಲು ಹೆಚ್ಚು ಶ್ರಮಿಸಬೇಕಾಗಿಲ್ಲ. ಅಪ್ರಮಾಣಿಕತೆ

ನಮಗೆ ರಕ್ತಗತವಾಗಿ ಬಂದಿರುವ ಹುಟ್ಟು ಗುಣ. ಸೋಮಾರಿತನ ನಮ್ಮ ಬೆನ್ನಿಗೆ ಹತ್ತಿದ ಭೇತಾಳ. ಅಶಿಸ್ತು ಮತ್ತು ಜಾತೀಯತೆ ನಮಗಂಟಿರುವ ರೋಗಗಳು. ಈ ಕೆಲವು ಕಾರಣಗಳ ದೆಸೆಯಿಂದ ನಾವು ಕುಂಟುತ್ತಾ ಕುಗುರುತ್ತಾ ಸಾಗುತ್ತಿದ್ದೇವೆ.

## ಹೆಚ್ಚಿದ ಹೊಣೆ

ಆಂಗ್ಲರ ಆಳ್ವಿಕೆಯಲ್ಲಿ ಅಸ್ತಿತ್ವಕ್ಕೆ ಬಂದಿದ್ದ ನಮ್ಮ ದೇಶದ ಆಡಳಿತದ ಪದ್ಧತಿ ಇಂಗ್ಲೆಂಡಿನ ಆಡಳಿತ ಪದ್ಧತಿಯನ್ನು ಅನುಸರಿಸಿ ರೂಪುಗೊಂಡಿದೆ. ನಮ್ಮ ಕಾನೂನುಗಳೂ ಕೂಡ ಬ್ರಿಟಿಷ್ ಮಾದರಿಯಲ್ಲೇ ರಚಿಸಲ್ಪಟ್ಟಿವೆ. ಬ್ರಿಟಿಷರ ಕಾಲದಲ್ಲಿ ಕಂದಾಯ ಕವಳಿಗೆಗಳನ್ನು ವಸೂಲ್‌ಮಾಡುವುದೂ, ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯನ್ನು ಶಾಶ್ವತಗೊಳಿಸುವುದೂ ಅಂದಿನ ಆಡಳಿತಗಾರರ ಮುಖ್ಯ ಗುರಿಯಾಗಿತ್ತು. ಜನಾಭಿವೃದ್ಧಿ ಕಾರ್ಯಗಳ ಗೊಡವೆ ಅವರಿಗೆ ಅಷ್ಟಾಗಿರಲಿಲ್ಲ. ಸ್ವರಾಜ್ಯ ಬಂದ ಮೇಲೆ ರಾಷ್ಟ್ರಾಭ್ಯುದಯಕ್ಕಾಗಿ ಹಲವು ಯೋಜನೆಗಳನ್ನು ಕೈಗೊಳ್ಳಲಾಗಿದೆ. ಇದರ ಪರಿಣಾಮವಾಗಿ ಸರ್ಕಾರದ ಕರ್ತವ್ಯ ಜವಾಬ್ದಾರಿಗಳೂ, ಆದಾಯ ವೆಚ್ಚಗಳೂ, ಹೆಚ್ಚಾಗಿವೆ. ಸರ್ಕಾರದ ಕಾರ್ಯಕ್ಷೇತ್ರ ವಿಸ್ತಾರವಾಗಿ ಬೆಳೆದು, ಆಡಳಿತದ ಇಲಾಖೆಗಳು ಶಾಖೋಪಶಾಖೆಗಳಾಗಿ ಒಡೆದು ನೂರ್ಮಡಿಯಾಗಿ ಬೆಳೆದಿವೆ. ಅನುದಿನದ ಜೀವನದಲ್ಲಿ ಜನರು ಹಲವು ರೀತಿಯಲ್ಲಿ ಸರ್ಕಾರವನ್ನು ಆಶ್ರಯಿಸುವ ಸನ್ನಿವೇಶ ಉಂಟಾಗಿದೆ. ಹಿಂದೆ ಹತ್ತಾರು ಮನವಿಗಳು ಬರುತ್ತಿದ್ದ ಸರ್ಕಾರಿ ಆಫೀಸುಗಳಲ್ಲಿ ಇಂದು ನೂರಾರು ಅಥವಾ ಸಾವಿರಾರು ಮನವಿಗಳು ಬರುತ್ತಾ ಇವೆ.

## ಸುಖದ ಸುಪ್ಪತ್ತಿಗೆ

ಸರ್ಕಾರದ ಕಾರ್ಯಕ್ಷೇತ್ರ ವಿಸ್ತಾರವಾದರೂ ಕೂಡ ಆಡಳಿತದ ರೀತಿ ನೀತಿಗಳಲ್ಲಿ ಹೆಚ್ಚು ಸುಧಾರಣೆಯಾಗಿಲ್ಲ. ಆಡಳಿತದ ದಿನಚರಿಯ ವ್ಯವಹಾರಗಳು ಹಿಂದಿನಂತೆ ಇಂದೂ ಸಹ ಆಮೆಯ ಗತಿಯಲ್ಲಿ ಸಾಗುತ್ತಾ ಇವೆ. ಅಧಿಕಾರಿಗಳ ಮನೋಧರ್ಮದಲ್ಲೂ ಕೂಡ ಹೆಚ್ಚಿನ ಪರಿವರ್ತನೆಯಾಗಿಲ್ಲ. ಬ್ರಿಟಿಷರು ಈ ದೇಶವನ್ನು ಆಳುತ್ತಿದ್ದ ಕಾಲದಲ್ಲಿ ಸರ್ಕಾರಿ ನೌಕರಿ ಹೆಚ್ಚು ಶ್ರಮವಿಲ್ಲದೆ ಸುಖವಾಗಿ ಜೀವನವನ್ನು ಸಾಗಿಸುವ ಒಂದು ಅವಕಾಶವೆಂದು ಪರಿಗಣಿಸಲ್ಪಟ್ಟಿತ್ತು. ಈಗಲೂ ಕೂಡ ಅದೇ ಮನೋಧರ್ಮವನ್ನು ಅಧಿಕಾರಿವರ್ಗದ ಜನರಲ್ಲಿ ಅಲ್ಲಲ್ಲಿ ನಾವು ಕಾಣುತ್ತಿದ್ದೇವೆ. ಸ್ವರಾಜ್ಯ ಬಂದ ಮೇಲೆ ಅಧಿಕಾರಿ ವರ್ಗದ ಜನರಲ್ಲಿ ಆ ಭಾವನೆ ಮಾಯವಾಗಿ ಜನಸೇವೆಯ ಮನೋಭಾವ ಮೂಡಬಹುದೆಂಬ ನಿರೀಕ್ಷೆಯಿತ್ತು. ಆದರೆ ಆ ನಿರೀಕ್ಷೆ ನಿರೀಕ್ಷಿಸಿದ ಪ್ರಮಾಣದಲ್ಲಿ

ಸಫಲವಾಗಲಿಲ್ಲ. ರಾಷ್ಟ್ರಭಕ್ತಿ ಮತ್ತು ಪ್ರಾಮಾಣಿಕತೆಗಳಿಂದ ಕೂಡಿರುವ ಸಮರ್ಥ ಅಧಿಕಾರಿಗಳು ಈ ದೇಶದಲ್ಲಿದ್ದಾರೆ. ಆದರೆ ಸಾಮಾನ್ಯವಾಗಿ ಹೇಳುವುದಾದರೆ ಬ್ರಿಟಿಷ್ ಕಾಲದ ಮನೋಭಾವವೇ ಅಧಿಕಾರಿವರ್ಗದ ಜನರಲ್ಲಿ ಇನ್ನೂ ಕಂಡು ಬರುತ್ತಿದೆ. ಬ್ರಿಟಿಷರ ಕಾಲದಲ್ಲಿ ನಿರಂಕುಶ ಪ್ರಭುತ್ವ ಇದ್ದುದರಿಂದ ಆಡಳಿತದಲ್ಲಿ ಬಿಗಿ ಮತ್ತು ದರ್ಪಗಳಿರುತ್ತಿದ್ದುವು. ಇಂದಿನ ಆಡಳಿತದಲ್ಲಿ ಅವು ಕೂಡ ಮಾಯವಾಗಿವೆ.

## ಗಿಂಬಳದ ಗೀಳು

ಆಡಳಿತದ ದುರವಸ್ಥೆಗೆ ಒಂದು ಭಾಗ ರಾಜಕಾರಣಿಗಳು ಕಾರಣರಾದರೆ ಎರಡು ಭಾಗ ಅಧಿಕಾರಿಗಳು ಕಾರಣರಾಗಿದ್ದಾರೆ. ಕೆಲವು ಆಫೀಸುಗಳಲ್ಲಿ ಕೆಲವು ಅಧಿಕಾರಿಗಳು ದಿನಕ್ಕೆ ನಾಲ್ಕುಗಂಟೆಗಳ ಕಾಲ ಸಹ ಸರಿಯಾಗಿ ಕೆಲಸ ಮಾಡುವುದಿಲ್ಲ. ಅವರಿಗೆ ಕೆಲಸಕ್ಕಿಂತಲೂ ಕಾಲಹರಣದಲ್ಲೇ ಹೆಚ್ಚು ಆಸಕ್ತಿ. ದಿನಗಳನ್ನೆಣಿಸಿ ಸಂಬಳದ ಜೊತೆಗೆ ಗೀಬಳವನ್ನು ಗಿಟ್ಟಿಸುವುದೇ ಅವರ ಮುಖ್ಯ ಉದ್ದೇಶ. ಕೆಲವರಂತೂ ಸರ್ಕಾರಿ ನೌಕರಿ ಜನರನ್ನು ಸುಲಿಗೆ ಮಾಡವ ಒಂದು ಸಾಧನವೆಂದು ಭಾವಿಸಿರುವಂತೆ ತೋರುತ್ತದೆ. ಕೆಲವು ಅಧಿಕಾರಿಗಳಿಗೆ ದಕ್ಷತೆಗಿಂತಲೂ ದುರಹಂಕಾರವೇ ಹೆಚ್ಚು; ಸೌಜನ್ಯಕ್ಕಿಂತಲೂ ಸ್ವಪ್ರತಿಷ್ಠೆಯೇ ಹೆಚ್ಚು. ಕೆಲವರಿಗೆ ಸಹಾನುಭೂತಿಗಿಂತಲೂ ಅಧಿಕಾರ ಮದವೇ ಹೆಚ್ಚು. ಕೈತುಂಬಾ ಸಂಬಳ ಬರುವ ಕೆಲವು ಅಧಿಕಾರಿಗಳಿಗೆ ಜನ ಸಾಮಾನ್ಯರ ಮೇಲೆ ಕನಿಕರವೇ ಇಲ್ಲ. ಅವರಲ್ಲಿ ಕೆಲವರು ಜನರ ಬೇಡಿಕೆಗಳನ್ನು ಯಾವ ರೀತಿಯಲ್ಲಿ ತಿರಸ್ಕರಿಸಬೇಕೆಂಬ ಬಗ್ಗೆ ಕುಂಟನೆಪಗಳನ್ನು ಹುಡುಕುತ್ತಲೇ ಇರುತ್ತಾರೆ. ಕೆಲವು ಅಧಿಕಾರಿಗಳು ಹಗಲುಗಳ್ಳರಂತೆ ಬಹಿರಂಗವಾಗಿ ಲಂಚವನ್ನು ತಿನ್ನುತ್ತಿದ್ದಾರೆ. ಲಂಚದಿಂದ ಕೊಬ್ಬಿರುವ ಈ ಹಗಲುಗಳ್ಳರನ್ನು ಜನ ಸಾಮಾನ್ಯರು ಮಾತನಾಡಿಸುವಂತೆಯೇ ಇಲ್ಲ.

ಸ್ವರಾಜ್ಯ ಬಂದ ತರುಣದಲ್ಲಿ ದೇಶದ ಆಡಳಿತ ಸೂತ್ರವನ್ನು ವಹಿಸಿದ್ದವರ ಪೈಕಿ ಬಹುಮಂದಿ ಅಪ್ಪಟಗಾಂಧಿ ಭಕ್ತರಾಗಿದ್ದರು. ಅಂತೆಯೇ ಪಾರ್ಲಿಮೆಂಟ್ ಮತ್ತು ಶಾಸನ ಸಭೆಗಳಲ್ಲಿ ಬಹು ಮಂದಿ ಆದರ್ಶವಾದಿಗಳಿದ್ದರು. ಬಹುಶ ಈ ಕಾರಣದಿಂದಲೇ ಏನೋ ಕೆಲವು ವರ್ಷಗಳ ಕಾಲ ಆಡಳಿತ ಇದ್ದುದರಲ್ಲಿ ತೃಪ್ತಿ ಕರವಾಗಿತ್ತು. ಆಗಲೂ ಅಲ್ಲಲ್ಲಿ ಲಂಚಕೋರರಿದ್ದರು. ಆದರೆ ಲಂಚದ ವ್ಯವಹಾರ ಕದ್ದು, ಮುಚ್ಚಿ, ಸಣ್ಣ ಪ್ರಮಾಣದಲ್ಲಿ ನಡೆಯುತ್ತಿತ್ತು. ಆಡಳಿತದಲ್ಲಿ ತಕ್ಕ ಮಟ್ಟಿಗೆ ಬಿಗಿ ಮತ್ತು ದಕ್ಷತೆಇತ್ತು. ಬರಬರುತ್ತಾ ಆದರ್ಶವಿಲ್ಲದ ಜನರು ಹೆಚ್ಚು ಹೆಚ್ಚಾಗಿ ರಾಜಕೀಯ ರಂಗಕ್ಕೆ

ನುಗ್ಗಲಾರಂಭಿಸಿದರು. ರಾಜಕಾರಣ ಹೊಲಸಾಗುತ್ತಾ ಬಂದು; ಆಡಳಿತ ಹದಗೆಡುತ್ತಾ ಬಂತು. ಇದರ ಪರಿಣಾಮವಾಗಿ ಇಂದು ಈ ರಾಷ್ಟ್ರದ ಕೆಲವು ಕಡೆಗಳಲ್ಲಿ ಆಡಳಿತ ಬಹಳ ಸಡಿಲವಾಗಿ ಜನಸಾಮಾನ್ಯರಿಗೆ ಕಾನೂನಿನ ರಕ್ಷಣೆ ದೊರಕುವುದೇ ದುರ್ಲಭವಾಗಿದೆ. ಜನಸಾಮಾನ್ಯರ ಕೂಗು ಕೆಲವು ಕಡೆಗಳಲ್ಲಿ ಆಡಳಿತಗಾರರ ಕಿವಿಗೆ ಕೇಳಿಸುವುದೇ ಇಲ್ಲ. ಕೆಲವು ಕಡೆಗಳಲ್ಲಿ ಪುಂಡರೂ, ಪೋಕರಿಗಳೂ ರಾಜ ಕಾರಣದ ಪೋಷಾಕಿನಲ್ಲಿ ಅರಾಜಕತೆಯ ಬೀಜವನ್ನು ಬಿತ್ತುತ್ತಿದ್ದಾರೆ. ಆಡಳಿತಗಾರರು ನಿಸ್ಸಹಾಯಕರಂತೆ ನೋಡುತ್ತಿದ್ದಾರೆ.

## ಕೀಲೆಣ್ಣೆ

ಆಡಳಿತದಲ್ಲಿ ಸ್ವಜನ ಪಕ್ಷಪಾತ ಮತ್ತು ಲಂಚ ಹೆಚ್ಚುತ್ತಾ ಇದೆ. ಕೆಲವು ಕ್ಷೇತ್ರಗಳಲ್ಲಿ ಲಂಚದ ಕೀಲೆಣ್ಣೆ ಇಲ್ಲದೆ ಶಿಫಾರಸ್ಸಿನ ಚೈತನ್ಯವಿಲ್ಲದೆ ಆಡಳಿತ ಯಂತ್ರದ ಚಕ್ರಗಳು ತಿರುಗುವುದೇ ಇಲ್ಲ. ಕೆಲವು ಕಡೆಗಳಲ್ಲಿ ರಾಜಕಾರಣಿಗಳು ಕೆಲವರೂ ಅಧಿಕಾರಿಗಳು ಕೆಲವರೂ, ಒಟ್ಟಾಗಿ ಸೇರಿ ಕೊಳ್ಳೆ ಹೊಡೆಯುತ್ತಿದ್ದಾರೆ. ಕೆಲವು ಆಫೀಸುಗಳಲ್ಲಿ ರಿಕಾರ್ಡುಗಳು ಅಂತಿಮ ತೀರ್ಮಾನವನ್ನು ಕಾಣುವುದೇ ಇಲ್ಲ. ಅವುಗಳು ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ, ಇನ್ನೊಂದು ಆಫೀಸಿನಿಂದ ಮತ್ತೊಂದು ಆಫೀಸಿಗೆ, ಮತ್ತೊಂದು ಆಫೀಸಿನಿಂದ ಮಗದೊಂದು ಆಫೀಸಿಗೆ ಚಲಿಸುತ್ತಲೇ ಇರುತ್ತವೆ. ಕೆಲವು ಕಡೆಗಳಲ್ಲಿ ರಿಕಾರ್ಡುಗಳು ತಿಂಗಳಗಟ್ಟಲೆ ಕೊಳೆಯುತ್ತಾ ಬಿದ್ದಿದ್ದರೆ ಕೆಲವು ಕಡೆಗಳಲ್ಲಿ ವರ್ಷಾನುಗಟ್ಟಲೆ ಕೊಳೆಯುತ್ತಾ ಬಿದ್ದಿರುತ್ತವೆ. ಅಧಿಕಾರಿಗಳ ಕೈಬೆಚ್ಚಗಾದಾಗ ಮಾತ್ರ ಅವುಗಳಿಗೆ ಜೀವಕಳೆ ಬಂದು ಚಲಿಸಲಾರಂಭಿಸುತ್ತವೆ. ಅನೇಕ ಸಂದರ್ಭಗಳಲ್ಲಿ ಅರ್ಜಿಗಳನ್ನು ಕೊಟ್ಟವರು ತಮ್ಮ ಅರ್ಜಿಗಳನ್ನು ಒಂದು ಮೇಜಿನಿಂದ ಇನ್ನೊಂದು ಮೇಜಿಗೆ. ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ ಹಿಂಬಾಲಿಸುತ್ತಲೇ ಹೋಗಬೇಕು. ಮಧ್ಯೆ ಮಧ್ಯೆ ಸಂಬಂಧಪಟ್ಟ ಅಧಿಕಾರಿಗಳ ಕೈ ಬೆಚ್ಚಗೆ ಮಾಡುತ್ತಲೇ ಇರಬೇಕು. ಇಲ್ಲವಾದರೆ ಅವರು ಏನಾದರೊಂದು ಕೊಕ್ಕೆ ಹಾಕಿ ರಿಕಾರ್ಡುಗಳನ್ನು ಹಿಂದಕ್ಕೆ ಕಳುಹಿಸುತ್ತಾರೆ.

## ವ್ಯಾಕುಲದ ಪ್ರಕರಣಗಳು

ನಾನು ಮಂತ್ರಿಯಾಗಿದ್ದಾಗ ಅನಿರೀಕ್ಷಿತವಾಗಿ ಕಛೇರಿಗಳಿಗೆ ನುಗ್ಗಿ ರಿಕಾರ್ಡುಗಳನ್ನು ಪರಿಶೀಲಿಸುವ ಪದ್ಧತಿಯಿಟ್ಟುಕೊಂಡಿದ್ದೆ. ಆ ಕಾಲದಲ್ಲಿ ಅತ್ಯಂತ ವ್ಯಾಕುಲವನ್ನುಂಟುಮಾಡುವ ಹಲವು ಪ್ರಕರಣಗಳು ನನ್ನ ಗಮನಕ್ಕೆ ಬಂದಿದ್ದವು.

ಆ ಕಾಲದಲ್ಲಿ ಹಲವು ವರ್ಷಗಳಿಂದ ತೀರ್ಮಾನವಾಗದೆ ಮೂಲೆಗೆ ಬಿದ್ದಿದ್ದ ನೂರಾರು ರಿಕಾರ್ಡುಗಳನ್ನು ಪತ್ತೆ ಹಚ್ಚುವ ಅವಕಾಶ ನನಗೆ ಒದಗಿತ್ತು. ಆದರೆ ನನ್ನ ಅನಿರೀಕ್ಷಿತ ತನಿಖೆಯಿಂದ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಸುಧಾರಿಸಿತೇ ಹೊರತು ನಾನು ನಿರೀಕ್ಷಿಸಿದ ಪ್ರಮಾಣದಲ್ಲಿ ಸುಧಾರಿಸಲಿಲ್ಲ. ನನ್ನ ಅನಿರೀಕ್ಷಿತ ತನಿಖೆಯಿಂದ ಕೆಲವರು ಉನ್ನತ ಅಧಿಕಾರಿಗಳು ನನ್ನ ಮೇಲೆ ಕುಪಿತರಾದರು. ಸಣ್ಣ ಪುಟ್ಟ ಅಧಿಕಾರಿಗಳು ನನ್ನನ್ನು ಶಪಿಸ ತೊಡಗಿದರು. ಕೊನೆಕೊನೆಗೆ ಕೆಲವು ಕಡೆಗಳಲ್ಲಿ ಕೆಲವು ಅಧಿಕಾರಿಗಳು ನನ್ನ ಕೈಗೆ ರಿಕಾರ್ಡುಗಳು ಸಿಕ್ಕದಂತೆ ಮಾಡುವುದಕ್ಕಾಗಿ ಫೈಸಲಾಗದಿದ್ದ ರಿಕಾರ್ಡುಗಳನ್ನು ನಾಶಪಡಿಸಲಾರಂಭಿಸಿದರು. ರಿಕಾರ್ಡುಗಳು ನಾಶವಾಗುವುದಕ್ಕಿಂತ ತಡವಾಗಿಯಾದರೂ ಅಂತಿಮತೀರ್ಮಾನವಾಗುವುದು ಲೇಸೆಂಬ ಭಾವನೆಯಿಂದ ಪದೇ ಪದೇ ಆಫೀಸುಗಳಿಗೆ ನುಗ್ಗುವುದನ್ನು ಕಡಿಮೆಮಾಡಿದೆ.

ಆಡಳಿತವನ್ನು ವ್ಯಾಪಿಸಿರುವ ಲಂಚದ ವಿಚಾರದಲ್ಲಿ ಹಲವು ಸಂಪುಟಗಳನ್ನು ಬರೆಯಬಹುದು. ಲಂಚವಿಲ್ಲದ ಕಾಲವಾಗಲೀ, ದೇಶವಾಗಲೀ, ಜಗತ್ತಿನ ಇತಿಹಾಸದಲ್ಲಿ ಎಂದೂ ಇರಲಿಲ್ಲ. ಅದು ಅಲ್ಪ ಸ್ವಲ್ಪ ಪ್ರಮಾಣದಲ್ಲಿದ್ದರೆ ಅದನ್ನು ಸಮಾಜವು ಸಹಿಸಿಕೊಳ್ಳಬಹುದು. ಮಿತಿಮೀರಿದ ಪ್ರಮಾಣದಲ್ಲಿ ಬೆಳೆದರೆ ಆಡಳಿತವು ಕುಸಿದುಬೀಳುತ್ತದೆ. ಇತರ ಹಿಂದುಳಿದ ಕೆಲವು ರಾಷ್ಟ್ರಗಳೊಡನೆ ಹೋಲಿಸಿದರೆ ನಮ್ಮಲ್ಲಿರುವ ಲಂಚ ಬಹಳ ಕಡಿಮೆಯೆಂದು ನಮ್ಮ ಮುಖಂಡರು ಕೆಲವರು ವಾದಿಸುತ್ತಾರೆ. ಭಷ್ಟಾಚಾರದಿಂದಲೇ ಪ್ರಬುದ್ಧಮಾನಕ್ಕೆ ಬಂದಿರುವ ಕೆಲವು ರಾಜಕಾರಣಿಗಳ ಕಣ್ಣಿಗೆ ನಮ್ಮ ಆಡಳಿತದಲ್ಲಿರುವ ಲಂಚ ಬಹಳ ಕಡಿಮೆಯೆಂದು ತೋರಿದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಭ್ರಷ್ಟ ರಾಜಕಾರಣಿಗಳಿಗೂ, ಲಾಭಕೋರ ವ್ಯಾಪಾರಿಗಳಿಗೂ ಲಂಚಕೋರ ಅಧಿಕಾರಿಗಳಿಗೂ ಈಗಿರುವ ವಾತಾವರಣ ಬಹಳ ಹಿತಕರವಾಗಿದೆ. ಲಂಚ ಹೆಚ್ಚಿದಷ್ಟೂ ಅವರಿಗೆ ಪ್ರಯೋಜನ ಹೆಚ್ಚು. ಲಂಚದಿಂದ ನಿಜವಾಗಿ ತೊಂದರೆಗೀಡಾದವರು ಜನಸಾಮಾನ್ಯರು.

### ಕಾನೂನು ರಹಿತ

ಇಂದು ಕೆಲವು ಕಡೆಗಳಲ್ಲಿ ಕಾನೂನು ಪ್ರಕಾರ ಕೆಲಸ ಕಾರ್ಯಗಳನ್ನು ಸಾಧಿಸುವುದಕ್ಕಿಂತ ಲಂಚದಿಂದ ಸಾಧಿಸುವುದೇ ಸುಲಭವೆಂದು ಜನರು ಭಾವಿಸತೊಡಗಿದ್ದಾರೆ. ಲಂಚವನ್ನು ಕೊಡುವುದೂ, ತೆಗೆದುಕೊಳ್ಳುವುದೂ ಸಮಾಜ ಒಪ್ಪಿರುವ ಸತ್‌ಸಂಪ್ರದಾಯವೆಂಬ ಭಾವನೆ ಕೆಲವು ವರ್ಗದ ಜನರಲ್ಲಿ ಮೂಡತೊಡಗಿದೆ. ಲಂಚದಿಂದ ಆಗಬಾರದ್ದನ್ನು ಆಗಗೊಳಿಸಬಹುದು; ಆಗಬೇಕಾದ್ದನ್ನು ಆಗದಂತೆ

ಮಾಡಬಹುದು. ರಾಷ್ಟ್ರದ ಕೆಲವು ಕಡೆಗಳಲ್ಲಿ ಅದರಲ್ಲೂ ಕೆಲವು ಇಲಾಖೆಗಳಲ್ಲಿ ಲಂಚ ಸರ್ವವ್ಯಾಪಿಯಾಗಿದೆ. ಕೇವಲ ಹತ್ತು ವರ್ಷಗಳ ಹಿಂದೆ ಶೇಕಡ ಇಪ್ಪತ್ತೈದರಷ್ಟು ಲಂಚಕೋರರಿದ್ದ ಕಡೆಗಳಲ್ಲಿ ಇಂದು ಆ ಸಂಖ್ಯೆ ಎಪ್ಪತ್ತೈದಕ್ಕೇರಿದೆ. ಕೆಲವು ಕಡೆಗಳಲ್ಲಿ ಅದು ಶೇಕಡ ತೊಂಭತ್ತರವರೆಗೂ ಮುಟ್ಟಿದೆ. ಹಿಂದೆ ಗೆಜೆಟೆಡ್ ಹುದ್ದೆಗಳಲ್ಲಿ ಲಂಚ ಬಹಳ ಅಪರೂಪವಾಗಿತ್ತು. ಈಗ ಆ ಹುದ್ದೆಗಳಿಗೂ ಕೂಡ ಲಂಚದ ಸೋಂಕು ಚೆನ್ನಾಗಿ ತಗಲಿದೆ. ಸಣ್ಣ ಅಧಿಕಾರಿಗಳು ಕೆಲವರು ಸಣ್ಣಪುಟ್ಟ ಕೊಳ್ಳೆಗಳಲ್ಲಿ ತೊಡಗಿದ್ದರೆ ದೊಡ್ಡ ಅಧಿಕಾರಿಗಳು ಕೆಲವರು ದೊಡ್ಡ ದೊಡ್ಡ ಕೊಳ್ಳೆಗಳಲ್ಲಿ ತೊಡಗಿದ್ದಾರೆ.

## ಲಂಚಮಯ

ಲಂಚದ ಸಾಮ್ರಾಜ್ಯ ದಿನೇ ದಿನೇ ವಿಸ್ತಾರವಾಗುತ್ತಾ ಇದೆ. ಕೆಲವು ಕ್ಷೇತ್ರಗಳಲ್ಲಿ ಲಂಚ ದೇವತೆಗೆ ಪನಿವಾರವಿಲ್ಲದೆ ಯಾವ ಕಾರ್ಯವೂ ನಡೆಯುವಂತಿಲ್ಲ. ಕಂಟ್ರಾಕ್ಟು ಪರ್ಮಿಟ್‌ಗೆ ಲಂಚ; ನೌಕರಿ ಬಡ್ತಿಗೆ ಲಂಚ; ವರ್ಗಾ ವರ್ಗಿಗೆ ಲಂಚ; ಭೂಮಿ ಪಡೆಯಲು ಲಂಚ; ಸಾಲ ಪಡೆಯಲು ಲಂಚ; ಅಲ್ಲೂ ಲಂಚ; ಇಲ್ಲೂ ಲಂಚ; ಎಲ್ಲೆಲ್ಲೂ ಲಂಚ. ಲಂಚದೇವತೆ ಒಲಿದರೆ ಬಡವನಾದವನು ಶ್ರೀಮಂತನಾಗುತ್ತಾನೆ. ಲಂಚ ದೇವತೆ ಮುನಿದರೆ ಶ್ರೀಮಂತನಾದವನೂ ಬಡವನಾಗುತ್ತಾನೆ. ಕೇವಲ ಐದಾರು ವರ್ಷಗಳ ಹಿಂದೆ ಪ್ರಾಮಾಣಿಕರಾಗಿದ್ದ ಕೆಲವು ಅಧಿಕಾರಿಗಳು ಸನ್ನಿವೇಶದ ಸೋಂಕಿನಿಂದಲೋ ಅಥವಾ ಒತ್ತಡದಿಂದಲೋ ಇಂದು ಲಂಚಕೋರರಾಗಿದ್ದಾರೆ.

ದಿನ ಹೋದಂತೆಲ್ಲಾ ಲಂಚದ ಸ್ವರೂಪ ಮತ್ತು ಲಂಚ ಪಡೆಯುವ ಕಾರ್ಯವಿಧಾನ ಬದಲಾವಣೆ ಹೊಂದುತ್ತಾ ಕೆಲವರು ಸಾಲಕೊಟ್ಟವರಂತೆ ಬಲಾತ್ಕಾರವಾಗಿ ಲಂಚವನ್ನು ಕಿತ್ತರೆ. ಕೆಲವರು ರಿಕಾರ್ಡುಗಳನ್ನು ಬದಿಗಿಟ್ಟು ಜನರು ತಾವಾಗಿಯೇ ಒಂದು ಲಂಚವನ್ನು ಕೊಡುವಂತೆ ಮಾಡುತ್ತಾರೆ. ಕೆಲವರು ತಮ್ಮ ಕಷ್ಟಕಾರ್ಪಣ್ಯಗಳ ನೆಪದಲ್ಲಿ ಲಂಚವನ್ನು ಯಾಚಿಸುತ್ತಾರೆ. ಕೆಲವರು ನೇರವಾಗಿ ಲಂಚವನ್ನು ಪಡೆದರೆ, ಕೆಲವರು ಸಂಭಾವಿತರಂತೆ ನಟಿಸುತ್ತಾ ತಮ್ಮ ಕೈ ಕೆಳಗಿನ ಅಧಿಕಾರಿಗಳ ಮೂಲಕವೋ ಅಥವಾ ತಮಗೆ ಅಪ್ತರಾದ ದಳ್ಳಾಳಿಗಳ ಮೂಲಕವೋ ಲಂಚದ ವ್ಯವಹಾರವನ್ನು ಸಾಗಿಸುತ್ತಾರೆ. ಕೆಲವರು ಹಣದ ರೂಪದಲ್ಲಿ ಲಂಚವನ್ನು ಪಡೆದರೆ. ಕೆಲವರು ಒಡವೆ, ವಸ್ತು ವಾಹನಗಳ ರೂಪದಲ್ಲಿ ಸ್ವೀಕರಿಸುತ್ತಾರೆ. ಜವಾಬ್ದಾರಿ ಸ್ಥಾನದಲ್ಲಿರುವ ರಾಜಕಾರಣಿಗಳು ಕೆಲವರು ರಾಜಕಾರಣ ಅಥವಾ ಚುನಾವಣೆಯ ನೆಪದಲ್ಲಿ ತಮ್ಮ ಕೈ ಕೆಳಗಿನ ಅಧಿಕಾರಿಗಳ ಮೂಲಕ ಕಂಟ್ರಾಕ್ಟರುಗಳಿಂದಲೂ, ದಳ್ಳಾಳಿಗಳಿಂದಲೂ

ಕೈಗಾರಿಕೋದ್ಯಮಿಗಳಿಂದಲೂ ಹಣವನ್ನು ಸಂಗ್ರಹಿಸಿ ತಮ್ಮ ಸ್ವಂತ ಬೊಕ್ಕಸಕ್ಕೆ ಸೇರಿಸಿದರೆ, ಕೆಲವು ಉನ್ನತ ಅಧಿಕಾರಿಗಳು ಲಕ್ಷಗಟ್ಟಲೆ ಅಕ್ರಮ ಸಂಪಾದನೆ ಮಾಡಿ ಆ ಸಂಪಾದನೆಯನ್ನು ಗುಪ್ತ ಪಾಲುಗಾರಿಕೆಯಲ್ಲಿ ಕೈಗಾರಿಕೆ ಅಥವಾ ವ್ಯಾಪಾರದಲ್ಲಿ ವಿನಿಯೋಗಿಸುತ್ತಾರೆ.

ಮೂರನೇ ದರ್ಜೆಯ ಅಧಿಕಾರಿಗಳು ಕೆಲವರು ದೊಡ್ಡ ದೊಡ್ಡ ನಗರಗಳಲ್ಲಿ ಮೂರು ನಾಲ್ಕು ಮನೆಗಳನ್ನು ಕಟ್ಟಿಸಿರುವ ವಿಚಾರ ಹೊಸದೇನೂ ಅಲ್ಲ. ಕೆಲವರು ಮೂರು ತಲೆಮಾರಿನವರೆಗೂ ಮಕ್ಕಳು, ಮೊಮ್ಮಕ್ಕಳೂ, ಮರಿ ಮಕ್ಕಳೂ ಸುಖವಾಗಿ ಜೀವಿಸುವಷ್ಟು ಆಕ್ರಮ ಸಂಪಾದನೆ ಮಾಡಿರುವ ಪ್ರಸಂಗಗಳಿವೆ. ಲಂಚ ನಿರೋಧ ಕಾರ್ಯದಲ್ಲಿ ತೊಡಗಿರುವ ಅಧಿಕಾರಿಗಳು ಕೆಲವರು ಒಮ್ಮೊಮ್ಮೆ ಲಂಚಕ್ಕೆ ಕೈಯೊಡ್ಡಿ ಅಪರಾಧವನ್ನು ಮುಚ್ಚಿಹಾಕಿದ ಪ್ರಸಂಗಗಳೂ ಇವೆ. ಕೆಲವು ಅಧಿಕಾರಿಗಳು ವಿವಾದದಲ್ಲಿ ತೊಡಗಿರುವ ಉಭಯ ಪಾರ್ಟಿಗಳಿಂದಲೂ ಲಂಚವನ್ನು ಸ್ವೀಕರಿಸಿ ಅಂತಿಮದಲ್ಲಿ ಹೆಚ್ಚು ಲಂಚ ಕೊಟ್ಟವರ ಪರ ವಿವಾದಗಳನ್ನು ತೀರ್ಮಾನಿಸಿದ್ದ ಉದಾಹರಣೆಗಳೂ ಇವೆ. ಲಂಚಕ್ಕಾಗಿ ಕೊಲೆ ಮುಂತಾದ ಅಕ್ಷಮ್ಯ ಅಪರಾಧಗಳನ್ನು ಮುಚ್ಚಿ ಹಾಕಿರುವವರೂ ಅಲ್ಲಲ್ಲಿ ಇದ್ದಾರೆ. ಎಳ್ಳಷ್ಟೂ ಕನಿಕರವಿಲ್ಲದೆ ಹೊಟ್ಟೆ ಬಟ್ಟೆಗೆ ಗತಿಯಿಲ್ಲದ ನಿರ್ಗತಿಕರನ್ನೂ ಸುಲಿಗೆ ಮಾಡುವ ರಾಕ್ಷಸ ಅಧಿಕಾರಿಗಳೂ ಇದ್ದಾರೆ.

## ಇನ್ನೊಂದು ಸ್ವರೂಪ

ಅಧಿಕಾರಿಗಳಿಂದಲೇ ಅಧಿಕಾರಿಗಳು ಲಂಚವನ್ನು ಕೀಳುವುದು ಲಂಚದ ಇನ್ನೊಂದು ಸ್ವರೂಪ. ಕೆಲವು ಇಲಾಖೆಗಳಲ್ಲಿ ಹೆಚ್ಚು ಅಕ್ರಮ ಸಂಪಾದನೆ ದೊರಕುವ ಸ್ಥಳಗಳಿಗೆ ಹೋಗಲಿಚ್ಛಿಸುವವರು ವರ್ಗ ಮಾಡುವ ಅಧಿಕಾರಿಗಳಿಗೆ ಕೈತುಂಬಾ ಲಂಚ ಕೊಡಬೇಕಾಗುತ್ತದೆ. ಎಸ್ಟ್ಯಾಬ್ಲಿಷ್‌ಮೆಂಟ್ ವಿಭಾಗದಲ್ಲಿ ಕೆಲಸ ಮಾಡುವ ಕೆಲವು ಅಧಿಕಾರಿಗಳಿಗೆ ಪ್ರತಿ ದಿನವೂ ಸುಗ್ಗಿ. ಸಣ್ಣ ಪುಟ್ಟ ಅಧಿಕಾರಿಗಳ ವರ್ಗಕ್ಕೆ ಹತ್ತಾರು ಅಥವಾ ನೂರಾರು ರೂಪಾಯಿಗಳ ಲಂಚವಾದರೆ, ದೊಡ್ಡ ಅಧಿಕಾರಿಗಳ ವರ್ಗಕ್ಕೆ ಒಂದರಿಂದ ಎರಡು ಅಥವಾ ಮೂರು ಸಾವಿರರೂಪಾಯಿಗಳ ವರೆಗೆ ಲಂಚ. ಕೆಲವು ಸಂದರ್ಭದಲ್ಲಿ ಪ್ರಮೋಷನ್‌ಗೂ ಕೂಡ ಲಂಚವನ್ನು ಕೊಡಬೇಕಾಗಿದೆ. ಪ್ರಮೋಷನ್ ದೊರಕಬೇಕಾದ ಸಂದರ್ಭಗಳಲ್ಲಿ ಸಂಬಂಧಪಟ್ಟ ಗುಮಾಸ್ತರನ್ನು ಸರಿಪಡಿಸಿಕೊಳ್ಳದಿದ್ದರೆ ರಿಕಾರ್ಡುಗಳು ಮುಂದಕ್ಕೆ ಸರಿಯುವುದೇ ಇಲ್ಲ. ಕೆಲವು ಇಲಾಖೆಗಳಲ್ಲಿ ಜಿಲ್ಲಾ ಅಥವಾ ತಾಲ್ಲೂಕು ಮಟ್ಟದಲ್ಲಿರುವ ಇಲಾಖೆಯ ಮುಖ್ಯ

ಅಧಿಕಾರಿಗಳಿಗೆ ಅವರ ಕೈಕೆಳಗಿನ ಅಧಿಕಾರಿಗಳು ಪ್ರತಿ ತಿಂಗಳಲ್ಲೂ ಕಪ್ಪವನ್ನು ಕೊಡುತ್ತಿರಬೇಕು. ಅಂದರೆ ಅವರ ಅಕ್ರಮ ಸಂಪಾದನೆಯಲ್ಲಿ ಕೆಲವು ಭಾಗವನ್ನು ಮೇಲ್ಪಟ್ಟ ಅಧಿಕಾರಿಗಳಿಗೆ ಸಲ್ಲಿಸುತ್ತಾ ಇರಬೇಕು. ಒಮ್ಮೊಮ್ಮೆ ಈ ಕಪ್ಪ ಇನ್ನೂ ಮೇಲ್ಮಟ್ಟದಲ್ಲಿರುವವರಿಗೂ ಸಹ ಸಲ್ಲುತ್ತದೆ ಎಂದು ವದಂತಿ. ಇದನ್ನೆಲ್ಲಾ ಪತ್ತೆ ಹಚ್ಚುವವರಾರು? ಕೊಟ್ಟವರು ಹೇಳುವುದಿಲ್ಲ. ತೆಗೆದುಕೊಂಡವರು ತಿಳಿಸುವುದಿಲ್ಲ. ಈಗಿರುವ ಪರಿಸ್ಥಿತಿಯಲ್ಲಿ ಜಾಗ್ರತಾ ಆಯೋಗಗಳೂ, ಲೋಕಪಾಲಕರೂ ಏನೂ ಮಾಡಲಾರವು. ನಿಷ್ಕಾರಣವಾಗಿ ಅರ್ಥವಿಲ್ಲದ ಕ್ಷುಲ್ಲಕ ಕಾರಣಗಳಿಗಾಗಿ ದಿನವಹಿ ಮುಷ್ಕರ, ಘೆರಾವೋ, ಮುಂತಾದ ಚಳವಳಿಗಳಿಂದ ಗುಲ್ಲೆಬ್ಬಿಸುವ ದೇಶಸೇವಾ ಧುರೀಣರು ತಮ್ಮ ಚಳುವಳಿಯನ್ನು ಭ್ರಷ್ಟ ರಾಜಕಾರಣಿಗಳ ಮತ್ತು ಲಂಚಕೋರ ಅಧಿಕಾರಿಗಳ ವಿರುದ್ಧ ತಿರುಗಿಸಿದ್ದರೆ ಎಷ್ಟೋ ಉಪಕಾರವಾಗುತ್ತಿತ್ತು.

## ವಿಳಂಬ

ವಿಳಂಬ ಲಂಚಕ್ಕೆ ಮೂಲ ಕಾರಣ. ಲಂಚ ಕೇಳುವ ಸಲುವಾಗಿಯೇ ಕೆಲವು ಅಧಿಕಾರಿಗಳು ರಿಕಾರ್ಡುಗಳನ್ನು ಮುಂದೆ ಹೋಗದಂತೆ ತಮ್ಮ ಕಡೆ ಭದ್ರವಾಗಿ ಬಚ್ಚಿಟ್ಟಿರುತ್ತಾರೆ. ಕಂಟ್ರಾಕ್ಟ್, ಪರ್ಮಿಟ್, ಲೈಸೆನ್ಸ್, ಇವುಗಳಿಗೆ ಸಂಬಂಧಪಟ್ಟ ರಿಕಾರ್ಡುಗಳು ಲಂಚದ ಬಿಸಿ ತಗಲಿದ ಹೊರತು ಮುಂದಕ್ಕೆ ಚಲಿಸುವುದೇ ಇಲ್ಲ. ವಿಳಂಬವನ್ನು ಹೋಗಲಾಡಿಸಲು ಹಲವು ವಿಧಾನಗಳನ್ನು ಕೈಗೊಳ್ಳಲಾಗಿದೆ; ಹಲವು ನಿಬಂಧನೆಗಳನ್ನು ರಚಿಸಲಾಗಿದೆ. ವಿಳಂಬ ನಿರೋಧನಕ್ಕಾಗಿ ನಿಯಮಾವಳಿಗಳನ್ನು ರಚಿಸುವುದರಿಂದ ವಿಳಂಬವನ್ನು ಹೋಗಲಾಡಿಸುವುದು ಅಸಾಧ್ಯ. ಅಧಿಕಾರಿಗಳ ಮನೋಧರ್ಮದಲ್ಲಿ ಬದಲಾವಣೆಯಾಗಬೇಕು. ಗೆಜೆಟೆಡ್ ಅಧಿಕಾರಿಗಳಿಗೆ ಕೆಲವರಿಗೆ ಅವರ ಆಫೀಸಿನಲ್ಲೇ ಎಷ್ಟು ರಿಕಾರ್ಡುಗಳು ಫೈಸಲಾಗದೆ ಬಿದ್ದಿವೆ ಎಂಬ ವಿಚಾರಗೊತ್ತಿರುವುದಿಲ್ಲ. ತಿಳಿದುಕೊಳ್ಳುವ ಪ್ರಯತ್ನವನ್ನೂ ಸಹ ಅವರು ಮಾಡುವುದಿಲ್ಲ ಹೀಗಿರುವಾಗ ನಿಯಮಾವಳಿಗಳಿಂದ ಏನು ಪ್ರಯೋಜನವಾಗುತ್ತದೆ ?

ಲಂಚ ಒಂದು ವಿಧವಾದ ಪಿಡುಗಾದರೆ ಶಿಫಾರಸ್ಸು ಇನ್ನೊಂದು ವಿಧವಾದ ಪಿಡುಗು. ಅಧಿಕಾರಿಗಳ ನೇಮಕ, ವರ್ಗಾವರ್ಗಿ, ಬಡ್ತಿ ಮುಂತಾದ ವಿಷಾರಗಳಲ್ಲಿ ಶಿಫಾರಸ್ಸಿನ ಕೈವಾಡ ಬಹಳ ಹೆಚ್ಚು. ಕೆಲವರು ಒಂದೇ ಕೆಲಸಕ್ಕಾಗಿ ಹಲವು ಜನಗಳಿಂದ ಶಿಫಾರಸ್ಸು ಹೇಳಿಸುವುದೂ ಉಂಟು. ಶಾಸಕರಾಗಿರುವವರ ಗೋಳು ಹೇಳತೀರದು. ಅವರು ದಿನವಹಿ ಅಧಿಕಾರಿಗಳ ಅಥವಾ ಖಾಸಗಿ ಜನರ ಪರವಾಗಿ ಶಿಫಾರಸ್ಸು

ಮಾಡುತ್ತಲೇ ಇರಬೇಕು. ಶಿಫಾರಸ್ಸು ಹೇಳುವುದು ಶಾಸಕರ ಮುಖ್ಯ ಕೆಲಸವೆಂಬ ಭಾವನೆ ಕೆಲವು ವರ್ಗದ ಜನರಲ್ಲಿ ಬೇರೂರಿರುವಂತೆ ತೋರುತ್ತದೆ. ಓಟಿನ ಹಂಗಿಗಾಗಿ, ಜನರ ದಾಕ್ಷಿಣ್ಯಕ್ಕೊಳಗಾಗಿ ಎಷ್ಟೋ ಸಾರಿ ಶಾಸಕರು ಪೇಚಿಗೆ ಸಿಗುತ್ತಾರೆ. ಶಾಸಕರ ಮತ್ತು ಮಂತ್ರಿಗಳ ಮುಕ್ಕಾಲುವಾಸಿ ಸಮಯ ಅಧಿಕಾರಿಗಳ ಮತ್ತು ಆಸಕ್ತ ಹಿತ ಜನರ ಅಹವಾಲುಗಳನ್ನು ಪರಿಶೀಲಿಸುವುದರಲ್ಲಿ ಅಥವಾ ಕೇಳುವುದರಲ್ಲಿ ಕಳೆದುಹೋಗುತ್ತದೆ. ಇನ್ನುಳಿದ ಕಾಲುವಾಸಿ ಸಮಯ ಸಾರ್ವಜನಿಕರ ಯೋಗಕ್ಷೇಮಕ್ಕಾಗಿ ವಿನಿಯೋಗವಾಗುತ್ತದೆ. ಶಿಫಾರಸ್ಸಿಲ್ಲದೆ ಕೆಲಸಕಾರ್ಯಗಳು ನಡೆಯುವುದೇ ಕಷ್ಟವೆಂದು ಬಹುಜನರ ಅಭಿಪ್ರಾಯ. ಕೆಲಸಕಾರ್ಯಗಳು ಕಾನೂನಿಗೆ ಅನುಗುಣವಾಗಿ ನಿಷ್ಪಕ್ಷಪಾತವಾಗಿ ಜರುಗುತ್ತಿದ್ದರೆ ಶಿಫಾರಸ್ಸಿಗೆ ಅವಕಾಶವಿರುವುದಿಲ್ಲ.

## ಹಿಡಿತದಲ್ಲಿ

ಕೆಲವು ಕಡೆಗಳಲ್ಲಿ ಅಧಿಕಾರಿಗಳು ಸ್ಥಳೀಯ ರಾಜಾರಣಿಗಳ ಅಥವಾ ಶಾಸಕರ ಗುಲಾಮರಂತೆ ವರ್ತಿಸುತ್ತಾರೆ. ಅದರಲ್ಲೂ ಲಂಚಕೋರ ಅಧಿಕಾರಿಗಳು ತಮ್ಮ ಮೇಲೆ ಯಾರೂ ದೂರು ಹೇಳಬಾರದೆಂಬ ಉದ್ದೇಶದಿಂದ ತಮ್ಮ ರಕ್ಷಣೆಗಾಗಿ ಪ್ರಭಾವಶಾಲಿ ರಾಜಕಾರಣಿಗಳ ಗುಲಾಮರಾಗಿ ಬಾಳುತ್ತಾರೆ. ಕೆಲವು ಅಧಿಕಾರಗಳು ಮಂತ್ರಿಗಳನ್ನೂ ಶಾಸಕರನ್ನೂ ತಮ್ಮ ಕಡೆಗೆ ಒಲಿಸಿಕೊಳ್ಳುವುದಕ್ಕಾಗಿ ಸದಾ ಸರ್ವ ಪ್ರಯತ್ನ ಮಾಡುತ್ತಿರುತ್ತಾರೆ. ಇಂತಹ ಅಧಿಕಾರಿಗಳು ನಿಷ್ಪಕ್ಷಪಾತವಾಗಿ ವರ್ತಿಸುವುದು ಅಸಂಭವ. ಕೆಲವು ಸಂದರ್ಭಗಳಲ್ಲಿ ಸ್ಥಳೀಯ ರಾಜಕೀಯ ಮುಖಂಡರ ಪ್ರಭಾವಕ್ಕೆ ಒಳಗಾಗಿ ಅಧಿಕಾರಿಗಳು ಜನರಿಗೆ ಕಿರುಕುಳ ಕೊಡುವ ಪ್ರಸಂಗಗಳೂ ಇರುತ್ತವೆ. ಕೆಲವು ರಾಜಕಾರಣಿಗಳು ಅಧಿಕಾರಿಗಳನ್ನು ತಮ್ಮ ಕೈವಶ ಮಾಡಿಕೊಂಡು ಅವರ ಮೂಲಕ ತಮಗಾಗದವರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಸಂಗಗಳೂ ಉಂಟು.

ಕೆಲವು ಕಡೆಗಳಲ್ಲಿ ಅಧಿಕಾರಿಗಳು ನಮ್ಮ ಕಾರ್ಯ ಸಾಧನೆಗಾಗಿ ತಾವಾಗಿಯೇ ರಾಜಕೀಯ ಪುಡಾರಿಗಳ ಕೈಗೊಂಬೆಗಳಂತೆ ವರ್ತಿಸಿದರೆ. ಕೆಲವು ಕಡೆಗಳಲ್ಲಿ ಪ್ರಬಲವಾದ ರಾಜಕಾರಣಿಗಳ ದಬ್ಬಾಳಿಕೆಗೆ ಹೆದರಿ ನಿರ್ವಾಹವಿಲ್ಲದೆ ಅವರ ಅನುವರ್ತಿಗಳಂತೆ ವರ್ತಿಸುತ್ತಾರೆ. ಪಾಪ! ಈ ಪ್ರಬಲ ಪುಡಾರಿಗಳ ಆಗ್ರಹಕ್ಕೆ ಪಾತ್ರರಾಗಿ ಬಾಳುವುದು ಅಧಿಕಾರಿಗಳಿಗೆ ಕಷ್ಟ. ಕೆಲವು ಕಡೆಗಳಲ್ಲಿ ರಾಜಕಾರಣಿಗಳು ದಿನಚರಿಯ ಆಡಳಿತದಲ್ಲಿ ಸದಾ ತಮ್ಮ ಪ್ರಭಾವವನ್ನು ಬೀರಲು ಪ್ರಯತ್ನಿಸುತ್ತಾರೆ. ಪ್ರತಿಯೊಂದು ವಿವಾದದಲ್ಲೂ ಪ್ರತ್ಯಕ್ಷವಾಗಿಯೋ, ಅಪ್ರತ್ಯಕ್ಷವಾಗಿಯೋ ಅವರ ಪಾತ್ರ ಇದ್ದೇ ಇರುತ್ತದೆ. ಒಬ್ಬ ಪುಡಾರಿ

ಒಂದು ಪಾರ್ಟಿಯ ಪರ ವಹಿಸಿದರೆ ಇನ್ನೊಬ್ಬ ಪುಡಾರಿ ಇನ್ನೊಂದು ಪಾರ್ಟಿಯ ಪರ ವಹಿಸುತ್ತಾನೆ. ಈ ಕಾರಣದಿಂದ ಅಕ್ವಿಜಿಷನ್, ಕೆರೆ ಕಟ್ಟೆಗಳ ನಿರ್ಮಾಣ, ಜಮೀನು ಹಂಚುವಿಕೆ ಮುಂತಾದ ಆಡಳಿತದ ಪ್ರಶ್ನೆಗಳು ರಾಜಕಾರಣಿಗಳ ಪ್ರವೇಶದಿಂದ ರಾಜಕೀಯ ಪ್ರಶ್ನೆಗಳಾಗಿ ಪರಿಣಮಿಸುತ್ತವೆ.

ಈಚೆಗೆ ಉನ್ನತ ಅಧಿಕಾರಿಗಳಲ್ಲಿ ಕೆಲವರು ಕೆಲಸದಲ್ಲಿ ಪರಿಣತರಾಗಿರದಿದ್ದರೂ, ಕುಡುಕುತನದಲ್ಲಿ ಪರಿಣಿತರಾಗಿದ್ದಾರೆ. ಕುಡುಕುತನ ಸಭ್ಯತೆಯ ಲಕ್ಷಣವೆಂದು ಅವರು ತಿಳಿದಿರುವಂತೆ ತೋರುತ್ತದೆ. ಅವರು ಸಾಮಾನ್ಯವಾಗಿ ಲಂಚಕ್ಕೆ ಕೈಯೊಡ್ಡದಿದ್ದರೂ ಹೆಂಡ ಕುಡಿಸಿದವರಿಗಾಗಿ ದಾರಿತಪ್ಪಿ ಹೋಗಲು ಹಿಂಜರಿಯುವುದಿಲ್ಲ. ಲಂಚದಿಂದ ಅಥವಾ ಶಿಫಾರಸ್ಸಿನಿಂದ ಸಾಧಿಸಲಾಗದಿದ್ದುದನ್ನು ಬಾಟ್ಲಿಯಿಂದ ಸಾಧಿಸುವುದು ಸುಲಭ. ಕೆಲವರ ಮಧುಪಾನಕ್ಕೆ ಮನಸೋತು ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ. ಕೆಲವು ಕಡೆಗಳಲ್ಲಿ ಸರ್ಕಾರದವರು ಅಭಿವೃದ್ಧಿ ಕಾಮಗಾರಿಗಳಿಗಾಗಿ ಖರ್ಚು ಮಾಡುವ ಹಣದಲ್ಲಿ ಅರೆವಾಸಿ ಸಾರ್ವಜನಿಕರ ಪ್ರಯೋಜನಕ್ಕಾಗಿ ಖರ್ಚಾದರೆ, ಅರೆವಾಸಿ ಲಾಭಕೋರ ಕಂಟ್ರಾಕ್ಟರುಗಳ ಮತ್ತು ಲಂಚಕೋರ ಅಧಿಕಾರಿಗಳ ಕಿಸೆಗೆ ಹೋಗುತ್ತದೆ. ಜನರು ತೆರಿಗೆ ಕೊಡುವುದು ತಪ್ಪಲಿಲ್ಲ, ತೆರಿಗೆಗೆ ತಕ್ಕ ಪ್ರತಿಫಲ ದೊರೆಯಲಿಲ್ಲ. ಲಾಭಕೋರರ ಮತ್ತು ಲಂಚಕೋರರ ಕಿಸೆಗೆ ಹೋದ ಕಳ್ಳ ಹಣ ಮಾರುಕಟ್ಟೆಗಳಲ್ಲಿ ಹಣದುಬ್ಬರವನ್ನುಂಟು ಮಾಡಿ ಬೆಲೆಗಳನ್ನು ಏರಿಸಿ, ಸಾಮಾನ್ಯ ಜನರ ಜೀವನ ನರಕಮಯವಾಗುವಂತೆ ಮಾಡುತ್ತದೆ.

## ಹದಗೆಡಲು ಕಾರಣ

ಆಡಳಿತ ಹದಗೆಡಲು ನಾನಾ ಕಾರಣಗಳಿವೆ. ಸ್ವರಾಜ್ಯ ಬಂದ ನಂತರ ಕಳೆದ ಇಪ್ಪತ್ತು ವರ್ಷಗಳಲ್ಲಿ ಈ ದೇಶದಲ್ಲಿ ಹಲವು ಬದಲಾವಣೆಗಳಾಗಿವೆ. ಕೆಲವು ಉಪಯುಕ್ತ ಬದಲಾವಣೆಗಳು; ಕೆಲವು ಹಾನಿಕರವಾದ ಬದಲಾವಣೆಗಳು. ಆದರ್ಶ ಆಚರಣೆಗಳಲ್ಲಿ, ನಡೆ ನುಡಿಗಳಲ್ಲಿ, ಮನೋಧರ್ಮಗಳಲ್ಲಿ ಗಣನೀಯ ಮಾರ್ಪಾಟಾಗಿವೆ. ಹಳೆಯ ಆದರ್ಶಗಳು ಅಳಿಸಿಹೋಗಿವೆ. ಅವುಗಳ ಸ್ಥಾನದಲ್ಲಿ ಹೊಸ ಆದರ್ಶಗಳು ಇನ್ನೂ ರೂಪುಗೊಳ್ಳಬೇಕಾಗಿವೆ. ಸ್ವರಾಜ್ಯಕ್ಕೋಸ್ಕರ ಈ ದೇಶದಲ್ಲಿ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಸತ್ಯವಂತರಿಗೂ, ತ್ಯಾಗಿಗಳಿಗೂ ಸಮಾಜದಲ್ಲಿ ಸ್ಥಾನವಿತ್ತು. ಪುರಸ್ಕಾರವಿತ್ತು. ಇಂದು ಅಂತಹ ವ್ಯಕ್ತಿಗಳನ್ನು ಕೇಳುವವರೇ ಇಲ್ಲ. ಇಂದಿನ ಕಲುಷಿತ ವಾತಾವರಣದಲ್ಲಿ ಸತ್ಯಕ್ಕೂ ಅಸತ್ಯಕ್ಕೂ ಇರುವ ವ್ಯತ್ಯಾಸದ ಗೆರೆ ಅಳಿಸಿ ಹೋಗಿರುವಂತೆ ಕಾಣುತ್ತದೆ.

ಪ್ರಾಮಾಣಿಕತೆ ಒಂದು ಅರ್ಹತೆಯೆಂದು ಪರಿಗಣಿಸಲ್ಪಟ್ಟಿಲ್ಲ; ಅಪ್ರಾಮಾಣಿಕತೆ ಒಂದು ಅನರ್ಹತೆಯೆಂದು ಭಾವಿಸಲ್ಪಟ್ಟಿಲ್ಲ. ಆದರ್ಶದ ಅಧಃಪತನ ಸಾಮಾಜಿಕ ಜೀವನದ ಮೇಲೆ ಮತ್ತು ಆಡಳಿತದ ಮೇಲೆ ಮಹಾ ದುಷ್ಪರಿಣಾಮವನ್ನುಂಟುಮಾಡಿದೆ.

ಇತ್ತೀಚಿನ ವರ್ಷಗಳಲ್ಲಿ ಅಹಿತ ಪೈಪೋಟಿಯ ದೆಸೆಯಿಂದ ಆದರ್ಶವಿಲ್ಲದ ಜನರು ಹೆಚ್ಚು ಹೆಚ್ಚಾಗಿ ರಾಜಕೀಯರಂಗಕ್ಕೆ ನುಗ್ಗಲಾರಂಭಿಸಿದರು ಅವರ ಕೈವಾಡ ಆಡಳಿತದಲ್ಲಿ ಹೆಚ್ಚಾಗ ತೊಡಗಿತು. ತಮ್ಮ ಜಾತಿಯವರನ್ನು ಮುಂದಕ್ಕೆ ತರುವುದೇ ತಮ್ಮ ರಾಜಕೀಯ ಮುಖ್ಯ ಉದ್ದೇಶವೆಂಬ ಭಾವನೆಯುಳ್ಳ ಜನರು ಅಲ್ಲಲ್ಲಿ ಮಂತ್ರಿಗಳಾದರು. ತಮ್ಮವರನ್ನು ಮುಂದಕ್ಕೆ ತರಬೇಕೆಂದು ಆತುರದಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಅಸಮರ್ಥರನ್ನೂ, ಲಂಚಕೋರರನ್ನೂ ನೇಮಕ ಮಾಡಿದರು. ಕೆಲವು ರಾಜ್ಯಗಳಲ್ಲಿ ಆಳುವ ಜಾತಿಯವರಿಗೆ ಮಾತ್ರ ಆಯಕಟ್ಟಿನ ಸ್ಥಾನಗಳು ಮೀಸಲಾಗಿವೆ. ಹಿಂದೆ ವಿಧಾಯಕ ರೀತಿಯಲ್ಲಿ ಬಹಿರಂಗವಾಗಿ ಹಿಂದುಳಿದ ವರ್ಗದವರಿಗೆ ಕಾನೂನು ಪ್ರಕಾರ ಪ್ರಾತಿನಿಧ್ಯ ದೊರಕುತ್ತಿತ್ತು. ಇಂದು ಜಾತ್ಯಾತೀತದ ಹೆಸರಿನಲ್ಲಿ ಗುಪ್ತವಾಗಿ ಜಾತೀಯತೆ ನಡೆಯುತ್ತಾ ಇದೆ.

## ಮಾನವ ಎರಡು ಬಗೆ

ಕೆಲವು ಕಡೆಗಳಲ್ಲಿ ಆಡಳಿತಗಾರರು ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ಅಳೆಯಲು ಎರಡು ವಿಧವಾದ ಅಳತೆ ಕೋಲುಗಳನ್ನು ಜಾರಿಗೆ ತಂದರು. ತಮ್ಮವರಿಗೆ ಒಂದು; ಇತರರಿಗೆ ಇನ್ನೊಂದು. ತಮ್ಮವರು ಉದ್ದೇಶ ಪೂರ್ವಕವಾಗಿ ಆನೆಯನ್ನು ನುಂಗಿದರೂ ಅದು ಮಹಾ ಅಪರಾಧವಾಗುವುದಿಲ್ಲ. ಇತರರು ಆಕಸ್ಮಿಕವಾಗಿ ನೊಣವನ್ನು ನುಂಗಿದರೂ ಅದು ಮಹಾ ಅಪರಾಧವೆನಿಸುತ್ತದೆ. ಕೆಲವು ಕಡೆಗಳಲ್ಲಿ ಮಂತ್ರಿಗಳ ಮೇಲ್ಪಂಕ್ತಿಯನ್ನು ಅನುಸರಿಸಿ ಕೆಲವು ಉನ್ನತ ಅಧಿಕಾರಿಗಳೂ ಸಹ ತಮ್ಮವರನ್ನೇ ಅಲ್ಲಲ್ಲಿ ತುಂಬಿಸಿದರು. ಇದರಿಂದ ಅಸಮರ್ಥರ ಮತ್ತು ಲಂಚಕೋರರ ಸಂಖ್ಯೆ ಸರ್ಕಾರಿ ನೌಕರಿಯಲ್ಲಿ ಹೆಚ್ಚಾಯಿತು.

ಸ್ವರಾಜ್ಯ ಬಂದ ಮೇಲೆ ಸಂಪಾದನೆಗೆ ಹೊಸ ಹೊಸ ಅವಕಾಶಗಳು ಉದ್ಭವಿಸಿದವು. ಪಂಚವಾರ್ಷಿಕ ಯೋಜನೆಗಳು ಹೊಸ ಸನ್ನಿವೇಶಗಳನ್ನು ಕಲ್ಪಿಸಿದವು ಶ್ರಮವಿಲ್ಲದೆ ಸುಲಭವಾಗಿ ಶ್ರೀಮಂತರಾಗಬೇಕೆಂಬ ಹಂಬಲವುಳ್ಳ ಹೊಸದೊಂದು ವರ್ಗ ದೇಶದಲ್ಲಿ ಉದಯವಾಯಿತು. ರಾಜಕಾರಣಿಗಳನ್ನೂ, ಅಧಿಕಾರಿಗಳನ್ನೂ ಆಶ್ರಯಿಸಿ ಅವರ ಸಹಾಯದಿಂದ ಕಂಟ್ರಾಕ್ಟ್, ಪರ್ಮಿಟ್, ಲೈಸೆನ್ಸ್, ಮುಂತಾದ ಸವಲತ್ತುಗಳನ್ನು

ಪಡೆಯುವುದೇ ಈ ಹೊಸ ವರ್ಗದ ಉದ್ಯೋಗವಾಯಿತು. ಇವರಲ್ಲಿ ಕೆಲವರು ಆಡಳಿತ ಪಕ್ಷಕ್ಕೂ ನುಗ್ಗಿದರು. ರಾಜಕಾರಣಿಗಳು ತಮಗೆ ಬೇಕಾಗುವ ಹಣಕ್ಕಾಗಿ ಈ ಸವಲತ್ತುಗಾರರನ್ನು ಆಶ್ರಯಿಸುವುದೂ, ಈ ಸವಲತ್ತುಗಾರರು ತಮ್ಮ ಲಾಭಕ್ಕಾಗಿ ರಾಜಕಾರಣಿಗಳನ್ನು ಆಶ್ರಯಿಸುವುದೂ ರೂಢಿಗೆ ಬಂತು. ಕೆಲವು ಅಧಿಕಾರಿಗಳು ಮೊದಲೇ ಲಂಚದ ವ್ಯವಹಾರಗಳಲ್ಲಿ ಪಳಗಿದ್ದವರು ಹೊಸದಾಗಿ ಉದ್ಭವಿಸಿದ ಸನ್ನಿವೇಶ ಅವರಿಗೆ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಒಂದು ಕಡೆ ರಾಜಕಾರಣಿಗಳೂ, ಇನ್ನೊಂದು ಕಡೆ ಅಧಿಕಾರಿಗಳೂ ವಿವಿಧ ಮಾರ್ಗಗಳಲ್ಲಿ ಅಕ್ರಮ ಸಂಪಾದನೆಗೆ ತೊಡಗಿದರು. ಜೊತೆಗೆ ದೇಶ ವಿವಿಧ ಮಾರ್ಗಗಳಲ್ಲಿ ಅಕ್ರಮ ಸಂಪಾದನೆಗೆ ತೊಡಗಿದರು. ಜೊತೆಗೆ ದೇಶದಲ್ಲೇ ಅಕ್ರಮ ಸಂಪಾದನೆಯ ವ್ಯವಸಾಯ ಸಾರೋದ್ಧಾರವಾಗಿ ನಡೆಯತೊಡಗಿತು. ಅಕ್ರಮ ಸಂಪಾದನೆಗಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಪೈಪೋಟಿ ನಡೆಯತೊಡಗಿತು. ಅಕ್ರಮ ಸಂಪಾದನೆಯಿಂದ ಮಾತ್ರ ಹಣಗಳಿಸಲು ಸಾಧ್ಯವೆಂಬ ಮನೋಭಾವ ರಾಷ್ಟ್ರದಲ್ಲಿ ಬೆಳೆಯತೊಡಗಿತು. ಆದರ್ಶವಿಲ್ಲದ ರಾಜಕಾರಣ, ನೀತಿಯಿಲ್ಲದ ವ್ಯಾಪಾರ, ಅಹಿತ ಪೈಪೋಟಿ ಇವುಗಳ ಪರಿಣಾಮ ಆಡಳಿತದ ಮೇಲೂ ತಕ್ಕಷ್ಟು ಆಗಿದೆ.

## ಕಾಲದ ಅಪವ್ಯಯ

ಉನ್ನತ ಅಧಿಕಾರಿಗಳ ಬಹು ಭಾಗದ ಸಮಯ ಸಭೆ, ಸಮ್ಮೇಳನ, ಪ್ರವಾಸ, ಮಂತ್ರಿಗಳ ಕಾರ್ಯಕ್ರಮ ಮುಂತಾದವುಗಳಲ್ಲೇ ಕಳೆದುಹೋಗುತ್ತದೆ. ಕೆಲವು ಅಧಿಕಾರಿಗಳು ರಾಜ್ಯದಾದ್ಯಂತ ಅಥವಾ ರಾಷ್ಟ್ರದಾದ್ಯಂತ ಪ್ರವಾಸ ಮಾಡಿದರೆ, ಕೆಲವರು ವಿಶ್ವಪರ್ಯಟನೆ ಮಾಡುತ್ತಾರೆ. ಅದೂ ಸರ್ಕಾರಿ ಖರ್ಚಿನಲ್ಲಿ. ಈ ಮಾತುಗಳು ಕೆಲವು ಮಂತ್ರಿಗಳಿಗೂ ಅನ್ವಯಿಸುತ್ತದೆ. ಮಂತ್ರಿಗಳ ಹಿಂಡು ದಿನೇ ದಿನೇ ಹೆಚ್ಚಾಗುತ್ತಾ ಇದೆ. ಅವರು ವಾರಕ್ಕೊಬ್ಬರಂತೆ ಕೆಲವುಸ್ಥಲಗಳಿಗೆ ಪದೇ ಪದೇ ಹೋಗುತ್ತಲೇ ಇರುತ್ತಾರೆ. ಅಧಿಕಾರಿಗಳು ಅವರಿಗಾಗಿ ಕಾದಿರಬೇಕು. ಅವರ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ಇದರಿಂದ ದಿನಚರಿಯ ಆಡಳಿತಕ್ಕೆ ಅಡಚಣೆಯುಂಟಾಗುತ್ತದೆ.

ಆಡಳಿತದ ಕೆಲವು ಇಲಾಖೆಗಳಲ್ಲಿ ಮೇಲ್ವಿಚಾರಣೆ ಬರೀ ಶಾಸ್ತ್ರವಾಗಿದೆ. ಅನೇಕ ಉನ್ನತ ಅಧಿಕಾರಿಗಳಿಗೆ ಮೇಲ್ವಿಚಾರಣೆಯ ಓನಾಮವೇ ಗೊತ್ತಿಲ್ಲ. ಅವರಲ್ಲಿ ಕೆಲವರು ಪೋಸ್ಟಾಫೀಸುಗಳಂತೆ ವರ್ತಿಸುವವರು. ಕೆಳಗಿಂದ ಬಂದ ರಿಕಾರ್ಡುಗಳನ್ನು ಮೇಲಕ್ಕೆ ಕಳುಹಿಸುತ್ತಾರೆ. ಗುಮಾಸ್ತರು ಬರದಿಟ್ಟಿದ್ದಕ್ಕೆ ರುಜು ಹಾಕುತ್ತಾರೆ. ಮೇಲ್ವಿಚಾರಣೆಯ

ಕಾರ್ಯ ಸಮರ್ಪಕವಾಗಿ ನಡೆಯುತ್ತಿದ್ದರೆ ಆಡಳಿತ ಇಷ್ಟೊಂದು ಹದಗೆಡುತ್ತಿರಲಿಲ್ಲ. ಕೆಲವು ದೊಡ್ಡ ಅಧಿಕಾರಿಗಳು ತಮ್ಮ ಆಫೀಸಿನಲ್ಲಿ ಆಡಳಿತದ ಸ್ಥಿತಿಗತಿ ಏನಾಗಿದೆಯೆಂಬುದನ್ನು ತಿಳಿದುಕೊಳ್ಳುವ ಗೋಜಿಗೂ ಸಹ ಹೋಗುವುದಿಲ್ಲ.

## ಹುದ್ದೆಗಳು

ಹುದ್ದೆಗಳನ್ನು ನಿರ್ಮಾಣ ಮಾಡುವುದರಲ್ಲಿ ನಮ್ಮ ಅಧಿಕಾರಿಗಳು ಗಟ್ಟಿಗರು. ಹಂದಿಗಳು ಮರಿ ಹಾಕುವಂತೆ ನಮ್ಮ ದೇಶದಲ್ಲಿ ಸರ್ಕಾರಿ ಹುದ್ದೆಗಳು ನಿರ್ಮಾಣವಾಗುತ್ತವೆ. ಕೆಲಸಕ್ಕೆ ಬೇಕಾದಷ್ಟು ಸಿಬ್ಬಂದಿಯನ್ನು ಒದಗಿಸಬೇಕೆಂಬ ತತ್ವವನ್ನು ಒಪ್ಪಿಕೊಂಡರೆ ಈ ದೇಶದಲ್ಲಿ ಸರ್ಕಾರಿ ನೌಕರಿಯಲ್ಲಿರುವ ಅರೆವಾಸಿ ಜನರನ್ನು ಮನೆಗೆ ಕಳುಹಿಸಬಹುದು. ಉನ್ನತ ಅಧಿಕಾರಿಗಳು ಕೆಲವರು ತಮ್ಮ ಪಾರುಪತ್ಯವನ್ನು ಬೆಳೆಸುವುದಕ್ಕಾಗಿ ಅಥವಾ ತಮ್ಮ ಕೆಲಸಕಾರ್ಯಗಳನ್ನು ಕಡಿಮೆ ಮಾಡಿಕೊಳ್ಳುವುದಕ್ಕಾಗಿ ಅಥವಾ ತಮಗೆ ಬೇಕಾದವರಿಗೆ ಉದ್ಯೋಗವನ್ನು ಕಲ್ಪಿಸುವುದಕ್ಕಾಗಿ ತಮ್ಮ ಅಧೀನ ಅಧಿಕಾರಿಗಳ ಸಂಖ್ಯೆಯನ್ನು ಹೆಚ್ಚು ಮಾಡುತ್ತಲೇ ಬರುತ್ತಾರೆ. ಕೆಲವು ಇಲಾಖೆಗಳಲ್ಲಿ ಕೆಲಸಮಾಡುವವರಿಗಿಂತಲೂ ಮೇಲ್ವಿಚಾರಕರ ತಂಡವೇ ಹೆಚ್ಚಾಗಿದೆ.

ಅಧಿಕಾರಸ್ಥಾನದಲ್ಲಿರುವ ರಾಜಕಾರಣಿಗಳೂ, ಉನ್ನತ ಮಟ್ಟದ ಅಧಿಕಾರಿಗಳೂ ಆದರ್ಶವಂತರಾಗಿ, ಪ್ರಾಮಾಣಿಕರಾಗಿ, ಶ್ರದ್ದೆಯಿಂದ ಮತ್ತು ರಾಷ್ಟ್ರಭಕ್ತಿಯಿಂದ ಕೆಲಸ ಮಾಡಿದರೆ ಅವರ ಕೈಕೆಳಗಿನ ಅಧಿಕಾರಿಗಳು ಅವರ ಮೇಲ್ಪಂಕ್ತಿಯನ್ನು ಅನುಸರಿಸುತ್ತಾರೆ. ಮಂತ್ರಿಗಳಾದವರೂ, ಉನ್ನತ ಮಟ್ಟದ ಅಧಿಕಾರಿಗಳೂ ಗುಪ್ತ ರೀತಿಯಲ್ಲಿ ಅಕ್ರಮ ಸಂಪಾದನೆ ಮಾಡಿದರೆ ಅವರ ಕೈಕೆಳಗಿನವರು ಬಹಿರಂಗವಾಗಿ ಲಂಚವನ್ನು ಪಡೆಯುತ್ತಾರೆ. ಆಡಳಿತದ ಸುಧಾರಣೆಯಾಗಬೇಕಾದರೆ ಮೊದಲು ಆಡಳಿತಗಾರರ ಸುಧಾರಣೆಯಾಗಬೇಕು. ಇಂದು ಆಡಳಿತದಲ್ಲಿ ಕಂಡುಬರುತ್ತಿರುವ ಲೋಪದೋಷಗಳಿಗೆ ಬಹುಮಟ್ಟಿಗೆ ಮೇಲಿದ್ದವರೇ ಕಾರಣರು. ಕೆಳಗಿದ್ದವರು ಮೇಲಿದ್ದವರ ಮಾರ್ಗವನ್ನು ಅನುಸರಿಸುತ್ತಾರೆ. ಆದ್ದರಿಂದ ಸುಧಾರಣೆ ಮೇಲಿಂದ ಪ್ರಾರಂಭವಾಗಬೇಕು.

## ಚಕ್ರ ಭೀಮನಕೋಟೆ

ಸ್ವರಾಜ್ಯ ಬಂದ ಮೇಲೆ ಅಸಂಖ್ಯಾತ ಕಾನೂನುಗಳನ್ನು ನಿಯಮ ನಿಬಂಧನೆಗಳನ್ನು ರಚಿಸಿದ್ದೇವೆ. ಎಂತಹ ಪಳಗಿದ ಕಾನೂನು ಪಂಡಿತರೂ ಕೂಡ ಎಲ್ಲಾ ಕಾನೂನುಗಳನ್ನು ತಿಳಿದುಕೊಂಡಿರುವುದು ಅಸಾಧ್ಯ. ಅಧಿಕಾರಿಗಳ ಬಹುಭಾಗದ

ಸಮಯ ಈ ಅಸಂಖ್ಯಾತ ಕಾನೂನುಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲೇ ಕಳೆದು ಹೋಗುತ್ತದೆ. ಕಾನೂನಿನ ಚಕ್ರಭೀಮನ ಕೋಟೆಯಲ್ಲಿ ಸಿಕ್ಕಿ ಕೆಲವು ಅಧಿಕಾರಿಗಳು ದಾರಿತೋಚದೆ ಕಂಗಾಲಾಗಿ ಹೋಗುತ್ತಾರೆ. ಕಾಯಿದೆಗಳೂ, ನಿಬಂಧನೆಗಳೂ, ಜನರ ಪ್ರಯೋಜನಕ್ಕಾಗಿ ರಚಿಸಲ್ಪಟ್ಟಿವೆ ಎಂಬುದನ್ನು ಕೆಲವು ಅಧಿಕಾರಿಗಳು ಮರೆತು ಹೇಗಾದರೂ ಮಾಡಿ ಜನರ ಮನವಿಗಳನ್ನು ತಿರಸ್ಕರಿಸಬೇಕೆಂಬ ಉದ್ದೇಶದಿಂದ ಕಾನೂನನ್ನು ಹುಡುಕುತ್ತಿರುತ್ತಾರೆ. ಹೊಸ ಹೊಸ ಕಾನೂನುಗಳು ಲಂಚಕೋರ ಅಧಿಕಾರಿಗಳ ಕೈಯಲ್ಲಿ ಲಂಚ ಕೀಳುವ ಹೊಸ ಅಸ್ತ್ರಗಳಾಗಿ ಪರಿಣಮಿಸುತ್ತವೆ. ಶೇಕಡ ಎಪ್ಪತ್ತೈದರಷ್ಟು ಜನರು ನಿರಕ್ಷರ ಕುಕ್ಷಿಗಳಾಗಿರುವಾಗ ಈ ದೇಶದಲ್ಲಿ ಇಷ್ಟೊಂದು ಕಾನೂನುಗಳನ್ನು ರಚಿಸಿರುವುದೇ ತಪ್ಪೆಂದು ತೋರುತ್ತದೆ. ಕಾನೂನುಗಳು ಹೇರಳವಾಗಿರದೆ ಸರಳವಾಗಿದ್ದರೆ ಆಳುವವರಿಗೂ ಅನುಕೂಲ; ಆಳಿಸಿಕೊಳ್ಳುವವರಿಗೂ ಅನುಕೂಲ. ಕೆಲವು ಅಧಿಕಾರಿಗಳು ಕಾನೂನಿಗೆ ತಿದ್ದುಪಡಿಯನ್ನು ಸೂಚಿಸುತ್ತಲೇ ಇರುತ್ತಾರೆ. ಇಂದಿದ್ದ ಕಾನೂನು ನಾಳೆ ಬದಲಾವಣೆಹೊಂದಿರುತ್ತದೆ. ನಾಡಿದ್ದು ಪುನಃ ಬದಲಾವಣೆ ಹೊಂದಿರುತ್ತದೆ. ನಾಡಿದ್ದು ಪುನಃ ಬದಲಾವಣೆ ಹೊಂದಿರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಮೂಲ ಕಾಯಿದೆಗೆ ಆಗಿರುವ ತಿದ್ದುಪಡಿಗಳು ಅಧಿಕಾರಿಗಳ ಗಮನಕ್ಕೆ ಬಂದಿರುವುದಿಲ್ಲ

## ಮನೋಧರ್ಮ ಬದಲಾಗಲಿ

ಆಡಳಿತದ ಸುಧಾರಣೆಗಾಗಿ ಹಲವು ಪ್ರಯತ್ನಗಳು ನಡೆದಿವೆ. ಆದರೆ ಆಡಳಿತ ನಡೆಸುವವರ ಮನೋಧರ್ಮವೂ, ರೀತಿ, ನೀತಿಗಳೂ ಬದಲಾವಣೆ ಹೊಂದಿದ ಹೊರತು ಆಡಳಿತದ ಸುಧಾರಣೆಯಾಗಲಾರದು. ಸುಧಾರಣಾ ಸಮಿತಿಗಳ ನೇಮಕದಿಂದಾಗಲೀ, ಇಲಾಖೆಗಳ ಪುನರ್ವಿಂಗಡಣೆಯಿಂದಾಗಲೀ, ಅಧಿಕಾರಿಗಳ ಜವಾಬ್ದಾರಿಗಳನ್ನು ಹೆಚ್ಚು ಕಡಿಮೆ ಮಾಡುವುದರಿಂದಾಗಲೀ, ಆಡಳಿತದ ಸುಧಾರಣೆಯಾಗಲಾರದು. ಮಂತ್ರಿಗಳೂ ಮತ್ತು ಉನ್ನತ ಅಧಿಕಾರಿಗಳೂ, ಇತರರಿಗೆ ಮಾರ್ಗದರ್ಶಕರಾಗಿ ವರ್ತಿಸಬೇಕು. ಅವರಲ್ಲಿ ಕರ್ತವ್ಯ ನಿಷ್ಠೆ, ರಾಷ್ಟ್ರಪ್ರೇಮ, ಪ್ರಾಮಾಣಿಕತೆ ಇವುಗಳು ಪ್ರಜ್ವಲಿಸಬೇಕು. ಪ್ರಾಮಾಣಿಕತೆ ಮತ್ತು ದಕ್ಷತೆಗಳಿಗೆ ಪ್ರೋತ್ಸಾಹ ದೊರಕುವಂತಾಗಬೇಕು. ಸರ್ಕಾರಿ ನೌಕರರ ನೇಮಕ, ಬಡ್ತಿ ಅವರಿಗೆ ವಿಧಿಸುವ ಶಿಕ್ಷೆ ಮುಂತಾದ ವಿಚಾರಗಳಲ್ಲಿ ಪಕ್ಷಪಾತಕ್ಕೆ ಎಡೆಯಿಲ್ಲದೆ ಏಕರೀತಿಯ ವಿಧಾನವನ್ನನುಸರಿಸಬೇಕು.

ಎಲ್ಲಕ್ಕಿಂತಲೂ ಮಿಗಿಲಾಗಿ ರಾಷ್ಟ್ರದ ರಾಜಕಾರಣ ಹಸನಾಗಬೇಕು. ಜನರು ಉತ್ತಮರಾದವರನ್ನು ಶಾಸನ ಸಭೆಗಳಿಗೂ, ಸ್ಥಳೀಯ ಸಂಸ್ಥೆಗಳಿಗೂ, ಆರಿಸಿ ಕಳುಹಿಸಬೇಕು. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಸಾರ್ವಭೌಮರು. ಸಾರ್ವಭೌಮರು ಯೋಗ್ಯರಾಗಿದ್ದರೆ ಯೋಗ್ಯ ಮುಖಂಡರು ಆರಿಸಲ್ಪಡುತ್ತಾರೆ. ಯೋಗ್ಯಮುಖಂಡರು ಆರಿಸಲ್ಪಟ್ಟರೆ ಯೋಗ್ಯ ಸರ್ಕಾರ ಲಭಿಸುತ್ತದೆ. ಆದ್ದರಿಂದ ಮೊದಲು ನಾವು ಸರಿಹೋಗಬೇಕು. ನಂತರ ನಮ್ಮ ಮುಖಂಡರು ಸರಿಹೋಗಬೇಕು. ಜೊತೆಗೆ ನಮ್ಮ ಅಧಿಕಾರಿಗಳು ದುರಸ್ತಾಗಬೇಕು.

## ಎಚ್ಚೆತ್ತ ಜನ

ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಜನರು ಸದಾ ಜಾಗೃತರಾಗಿರಬೇಕು. ವಿದ್ಯಾವಂತರಾದವರು ಪ್ರಜಾಭಿಪ್ರಾಯವನ್ನು ಸರಿಯಾದ ರೀತಿಯಲ್ಲಿ ರೂಪಿಸಲು ಪ್ರಯತ್ನಿಸಬೇಕು. ಪ್ರತಿಕೆಯವರು ಭಷ್ಟ ಆಡಳಿತಗಾರರನ್ನು ಹೊಗಳುವುದನ್ನು ನಿಲ್ಲಿಸಬೇಕು. ಲಂಚಕೋರರಿಗೂ, ಲಾಭಕೋರರಿಗೂ ಸಮಾಜದಲ್ಲಿ ಪುರಸ್ಕಾರ ದೊರೆಯದಂತೆ ಮಾಡಬೇಕು. ಯುವಕರು ಅನಾಚಾರ, ದುರಾಚಾರಗಳ ವಿರುದ್ಧ ದಂಗೆಯೇಳಬೇಕು. ಜನರು ಲಂಚಕೋರತನ ಸ್ವಜನ ಪಕ್ಷಪಾತ ಮುಂತಾದುವುಗಳ ವಿರುದ್ಧ ಪ್ರತಿಭಟನೆಯನ್ನು ಸೂಚಿಸದೆ ಹೋದರೆ ಜಾಗೃತಿ ಆಯೋಗಗಳಾಗಲೀ ಲೋಕಪಾಲಗಳಾಗಲೀ, ಆಡಳಿತವನ್ನು ಸುಧಾರಿಸಲಾರವು. ಪ್ರಜೆಗಳು ಮೂಕರಾದರೆ ಸರ್ಕಾರ ಕಿವುಡಾಗಿರುತ್ತದೆ. ಪ್ರಜೆಗಳು ಮೂರ್ಖರಾಗಿದ್ದರೆ ಧೂರ್ತರು ಮುಖಂಡರಾಗುತ್ತಾರೆ.

## ಕೇಂದ್ರದಲ್ಲಿ ಪ್ರಬಲ ಸುಭದ್ರ ಸರ್ಕಾರ ಇರುವ ಅಗತ್ಯ
## ರಾಷ್ಟ್ರ ಹಾಗೂ ರಾಷ್ಟ್ರ ಸಮಸ್ಯೆಗಳೇ ಪ್ರಾಧಾನ್ಯ

ನಾನಾ ಕಾರಣಗಳ ದೆಸೆಯಿಂದ ಮುಂಬರುವ ಲೋಕಸಭಾ ಚುನಾವಣೆಯು ಅತ್ಯಂತ ಮಹತ್ವಪೂರ್ಣವಾದುದು. ರಾಷ್ಟ್ರವು ಇಂದು ಒಂದು ವಿಧವಾದ ಅಸಾಧಾರಣ ಸಂದಿಗ್ಧ ಪರಿಸ್ಥಿತಿಯಲ್ಲಿದೆ. ಆದ್ದರಿಂದ ಚುನಾವಣೆಯ ಫಲಿತಾಂಶವು ರಾಷ್ಟ್ರದ ಮತ್ತು ಪ್ರಜಾಪ್ರಭುತ್ವದ ಭವಿಷ್ಯದ ಬಗ್ಗೆ ತೀವ್ರ ಪರಿಣಾಮವನ್ನುಂಟುಮಾಡುತ್ತದೆಂದು ಹೇಳಿದರೆ ಅತಿಶಯೋಕ್ತಿಯೇನೂ ಆಗಲಾರದು. ರಾಷ್ಟ್ರದ ಕೆಲವು ಕಡೆಗಳಲ್ಲಿ ರಾಷ್ಟ್ರ ಘಾತುಕ ಮತ್ತು ಸಮಾಜ ಘಾತುಕ ಶಕ್ತಿಗಳು ಅರಾಜಕತೆಯ ಪ್ರಕ್ಷುಬ್ಧ ಪರಿಸ್ಥಿತಿಯನ್ನುಂಟು ಮಾಡಿವೆ. ದಿವಂಗತ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರ ಅಮಾನುಷ ಕಗ್ಗೊಲೆಯ ಹಿನ್ನೆಲೆಯಲ್ಲಿ ಈ ದೇಶವನ್ನು ವಿಭಜಿಸಲು ಉದ್ಯುಕ್ತವಾಗಿರುವ ಕೆಲವು ಶಕ್ತಿಗಳ ಕೈವಾಡ ಇದೆಯೆಂದು ನನಗೆ ಅನ್ನಿಸುತ್ತದೆ. ಮಿತಿ ಮೀರಿದ ಅಧಿಕಾರ ಲಾಲಸೆ, ಭ್ರಷ್ಟಾಚಾರ, ದುರಾಚಾರ, ಅನಾಚಾರ–ಇವೇ ಮುಂತಾದ ಅನಿಷ್ಟಗಳ ದೆಸೆಯಿಂದ ಇಡೀ ರಾಷ್ಟ್ರದ ರಾಜಕೀಯ ವ್ಯವಸ್ಥೆ ರೋಗಪೀಡಿತವಾಗಿರುವಂತೆ ತೋರುತ್ತದೆ. ಈ ದೇಶದ ಇತಿಹಾಸದಿಂದ ನಾವು ಕಲಿತಿರುವ ಪಾಠವನ್ನೂ ಇಂದು ಉದ್ಭವಿಸಿರುವ ಪರಿಸ್ಥಿತಿಯನ್ನೂ ಸ್ಮರಿಸಿಕೊಂಡಾಗ, ಕೇಂದ್ರದಲ್ಲಿ ಪ್ರಬಲವಾದ ಸುಭದ್ರ ಸರ್ಕಾರವಿರುವುದು ಅತ್ಯಾವಶ್ಯಕ ಎನಿಸುತ್ತದೆ.

ಈಗಾಗಲೇ ಚುನಾವಣಾ ಪ್ರಚಾರ ಬಿರುಸಾಗಿ ನಡೆಯುತ್ತಿರುವ ಭಾಷಣದ ವೈಖರಿಯನ್ನು ನೋಡಿದರೆ ಲೋಕಸಭಾ ಚುನಾವಣೆಗೂ, ವಿಧಾನಸಭೆಗಳಿಗೆ ಅಥವಾ ಸ್ಥಳೀಯ ಸಂಸ್ಥೆಗಳಿಗೆ ನಡೆಯುವ ಚುನಾವಣೆಗಳಿಗೂ ವ್ಯತ್ಯಾಸವಿದೆ ಎಂಬುದನ್ನು ಅವರು ತಿಳಿದುಕೊಂಡಿಲ್ಲವೆಂದು ತೋರುತ್ತದೆ. ಪ್ರಜಾಸತ್ತಾತ್ಮಕ ಸಂಪ್ರದಾಯದ ಪ್ರಕಾರ ಲೋಕಸಭೆಗೆ ನಡೆಯುವ ಚುನಾವಣೆಗಳಲ್ಲಿ ಪಕ್ಷಗಳೂ, ಅಭ್ಯರ್ಥಿಗಳೂ ರಾಷ್ಟ್ರದ ಮುಂಬರುವ ಬೃಹತ್ ಸಮಸ್ಯೆಗಳನ್ನು ಮತದಾರರ ಮುಂದಿಡಬೇಕು. ಆ ಸಮಸ್ಯೆಗಳಿಗೆ ತಾವು ಸೂಚಿಸುವ ಪರಿಹಾರವೇನೆಂಬುದನ್ನು ಸ್ಪಷ್ಟಪಡಿಸಬೇಕು. ಆದರೆ ವಿವಿಧ ಪಕ್ಷಗಳಿಗೆ ಸೇರಿರುವ ಕೆಲವರು ನಾಯಕರೆನಿಸಿಕೊಂಡವರು ರಾಷ್ಟ್ರವನ್ನೂ, ರಾಷ್ಟ್ರೀಯ ಸಮಸ್ಯೆಗಳನ್ನೂ ಮರೆತು ಪರಸ್ಪರ ಆರೋಪ, ಪ್ರತ್ಯಾರೋಪಗಳಲ್ಲಿ ಮಗ್ನರಾಗಿದ್ದಾರೆ.

ರಾಷ್ಟ್ರದ ಸಮಗ್ರತೆ ಮತ್ತು ಐಕ್ಯತೆಯನ್ನು ಯಾವ ರೀತಿಯಲ್ಲಿ ಕಾಪಾಡಬೇಕೆಂಬುದು ಇಂದು ನಮ್ಮ ಮುಂದಿರುವ ಪ್ರಬಲ ಸಮಸ್ಯೆಯಾಗಿದೆ. ಅರಾಜಕತೆಯ ಪರಿಸ್ಥಿತಿಯನ್ನುಂಟುಮಾಡಿರುವ ರಾಷ್ಟ್ರದ್ರೋಹಿ ಮತ್ತು ಸಮಾಜದ್ರೋಹಿ ಶಕ್ತಿಗಳನ್ನು ಹತ್ತಿಕ್ಕಿ ರಾಷ್ಟ್ರದಲ್ಲಿ ಶಾಂತಿ ಮತ್ತು ನೆಮ್ಮದಿ ನೆಲೆಸುವಂತೆ ಮಾಡುವುದು ನಮ್ಮ ಮುಂದಿರುವ ಎರಡನೇ ಸಮಸ್ಯೆಯಾಗಿದೆ. ಆಲಸ್ಯದ ಮತ್ತು ಲಂಚದ ಜಿಡ್ಡು ಹಿಡಿದಿರುವ ಅಸಮರ್ಥ ಆಡಳಿತ ವ್ಯವಸ್ಥೆಯನ್ನು ಹೇಗೆ ಸರಿಪಡಿಸಬೇಕೆಂಬುದು ನಮ್ಮ ಮುಂದಿರುವ ಮೂರನೇ ಪ್ರಶ್ನೆಯಾಗಿದೆ. ದಿನೇ ದಿನೇ ಹೆಚ್ಚುತ್ತಿರುವ ಜನಸಂಖ್ಯೆಯ ಸ್ಫೋಟವನ್ನೂ, ಕಪ್ಪುಹಣದ ಉತ್ಪಾದನೆಯನ್ನೂ ಹಣದುಬ್ಬರವನ್ನೂ ಹೇಗೆ ತಡೆಗಟ್ಟಬೇಕೆಂಬುದು ನಮ್ಮ ಮುಂದಿರುವ ಇನ್ನೊಂದು ಪ್ರಶ್ನೆಯಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಬಡತನವನ್ನೂ ಅನಕ್ಷರತೆಯನ್ನೂ ಹೋಗಲಾಡಿಸಿ, ಜನಜೀವನವನ್ನು ಉತ್ತಮಗೊಳಿಸುವ ಪ್ರಶ್ನೆ ಬಹು ದೊಡ್ಡ ಪ್ರಶ್ನೆಯಾಗಿದೆ. ಇವೇ ಮುಂತಾದ ಸಮಸ್ಯೆಗಳನ್ನು ಮತದಾರರ ಮುಂದಿಟ್ಟು ಚರ್ಚೆಗೆ ಅವಕಾಶ ನೀಡುವ ಬದಲು ಮಿತಿ ಮೀರಿದ ಅಧಿಕಾರ ಲಾಲಸೆಯಿಂದ ಮತ್ತು ಮಹತ್ವಾಕಾಂಕ್ಷೆಯಿಂದ ವಿವೇಚನೆಯನ್ನು ಕಳೆದುಕೊಂಡಿರುವ ಕೆಲವರು ನಾಯಕಮಣಿಗಳು ಅಸಂಬದ್ಧ ಪ್ರಲಾಪದಲ್ಲಿ ತೊಡಗಿದ್ದಾರೆ.

ಚುನಾವಣಾ ಕಣದಲ್ಲಿರುವ ಅಭ್ಯರ್ಥಿಗಳ ಮತ್ತು ಪಕ್ಷಗಳಹಿತಕ್ಕಿಂತ, ತಂತಮ್ಮ ಜಾತಿ ವರ್ಗ, ಭಾಷೆ, ಧರ್ಮ ಇವುಗಳ ಹಿತಕ್ಕಿಂತ ರಾಷ್ಟ್ರದ ಹಿತ ಹೆಚ್ಚೆಂಬುದನ್ನು ಮತದಾರರು ಮರೆಯಬಾರದು. ಪದೇ ಪದೇ ಪಕ್ಷದಿಂದ ಪಕ್ಷಕ್ಕೆ ಹಾರುತ್ತಿರುವ ಅಧಿಕಾರ ಲಾಲಸೆಯ ಭ್ರಷ್ಟರಾಜಕಾರಣಿಗಳು. ಈ ದೇಶದ ಹಲವು ಸಮಸ್ಯೆಗಳಿಗೆ ಕಾರಣರಾಗಿರುತ್ತಾರೆ. ರಾಜಕೀಯ ಅನಿಶ್ಚಯತೆ ರಾಷ್ಟ್ರಕ್ಕೆ ಅಪಾಯ. ಅಗ್ರಗಣ್ಯ ಭ್ರಷ್ಟರೆಂದು ಹೆಸರುವಾಸಿಯಾಗಿರುವ ವ್ಯಕ್ತಿಗಳು ಯಾವ ಪಕ್ಷಕ್ಕೇ ಸೇರಿರಲಿ ಅವರನ್ನು ನಿರ್ದಾಕ್ಷಿಣ್ಯವಾಗಿ ಸೋಲಿಸಬೇಕು. ಇಂದು ರಾಷ್ಟ್ರಕ್ಕೆ ಬೇಕಾಗಿರುವುದು ರಾಷ್ಟ್ರಭಿಮಾನದಿಂದ ಕೂಡಿರುವ ದಿಟ್ಟತನದಿಂದ ರಾಷ್ಟ್ರದ ವಿವಿಧ ಸಮಸ್ಯೆಗಳನ್ನು ಬಗೆ ಹರಿಸಲು ಶಕ್ತಿಯನ್ನು ಪಡೆದಿರುವ ಪ್ರಬಲ ಸರ್ಕಾರ. ರಾಷ್ಟ್ರದ ಇಂದಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಮತದಾರರು ಬಹಳ ವಿವೇಚನೆಯಿಂದ ತಮ್ಮ ಪವಿತ್ರವಾದ ಮತವನ್ನು ಚಲಾಯಿಸಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

**ಪ್ರಜಾಮತ ೧೬.೧೨.೧೯೮೪**

# ಯುವ ರಾಜೀವಗಾಂಧಿ ಪರಿಣಾಮಕಾರಿ ಪ್ರಧಾನಿಯಾಗಬಹುದೆ?

ಕಳೆದ ಲೋಕಸಭಾ ಚುನಾವಣೆಯ ಫಲಿತಾಂಶವು ಹಲವರನ್ನು ವಿಸ್ಮಯಗೊಳಿಸಿದೆ. ಭಾರತವು ಅಂತಃಕಲಹದಿಂದ ಛಿದ್ರ ಛಿದ್ರವಾಗುವುದೆಂಬ ಆಸೆಯನ್ನು ಇಟ್ಟುಕೊಂಡಿರುವವರಿಗೂ, ಪ್ರತ್ಯೇಕತಾವಾದಿಗಳಿಗೂ ಈ ಚುನಾವಣೆಯ ಫಲಿತಾಂಶವು ನಿರಾಶೆಯನ್ನುಂಟುಮಾಡಿದೆ. ಚುನಾವಣೆಗೆ ಮುನ್ನ ತಾ॥ ೧೬-೧೨-೮೪ ರಂದು ಪ್ರಜಾಮತ ವಾರಪತ್ರಿಕೆಯಲ್ಲಿ ಪ್ರಕಟವಾಗಿದ್ದ ನನ್ನ ಲೇಖನದಲ್ಲಿ ರಾಷ್ಟ್ರದ ಪ್ರಸ್ತುತ ಪರಿಸ್ಥಿತಿಯಲ್ಲಿ ಕೇಂದ್ರದಲ್ಲಿ ಪ್ರಬಲವಾದ ಸುಭದ್ರ ಸರ್ಕಾರವಿರುವುದು ಅಗತ್ಯವೆಂದು ಪ್ರತಿಪಾದಿಸಿದ್ದೆ. ನಾನು ಆ ಲೇಖನವನ್ನು ಬರೆದಾಗ ಚುನಾವಣೆಯಲ್ಲಿ ಒಂದುವೇಳೆ ಯಾವ ಪಕ್ಷಕ್ಕೂ ಲೋಕಸಭೆಯಲ್ಲಿ ಸರಿಯಾದ ಬಹುಮತ ಲಭಿಸದಿದ್ದರೆ ಕೇಂದ್ರದಲ್ಲಿ ರಾಜಕೀಯ ಅಸ್ಥಿರತೆ ಪ್ರಾಪ್ತಿಯಾಗಬಹುದೆಂಬ ಭಯ ನನ್ನನ್ನು ಕಾಡುತ್ತಿತ್ತು. ಕಾಂಗ್ರೆಸ್ (ಐ) ಪಕ್ಷ ಇಷ್ಟೊಂದು ಪ್ರಚಂಡ ಬಹುಮತವನ್ನು ಪಡೆಯುತ್ತದೆ ಎಂಬ ಕಲ್ಪನೆ ಅಂದು ನನಗೆ ಇರಲಿಲ್ಲ. ಆ ಪಕ್ಷ ಗೆದ್ದರೂ ಸಹಾ ಅಲ್ಪಸ್ವಲ್ಪ ಬಹುಮತವನ್ನು ಪಡೆಯಬಹುದೆಂದು ನಾನು ಊಹಿಸಿದ್ದೆ. ನಾನು ಬಯಸಿದ್ದಂತೆ, ಸುಭದ್ರವಾದ ಸರ್ಕಾರ ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇದು ನನ್ನ ಮನಸ್ಸಿಗೆ ಸಮಾಧಾನವನ್ನು ತಂದಿದ್ದರೂ ಕೂಡಾ ಲೋಕಸಭೆಯಲ್ಲಿ ಪ್ರಬಲವಾದ ಪ್ರತಿಪಕ್ಷ ಇಲ್ಲದಿರುವುದು ಅಸಮಾಧಾನದ ಸಂಗತಿ. ಪ್ರಜಾಪ್ರಭುತ್ವ ಯಶಸ್ವಿಯಾಗಿ ನಡೆಯಬೇಕಾದರೆ ಪ್ರಬಲವಾದ ಪ್ರತಿಪಕ್ಷ ಇರುವುದು ಅಗತ್ಯ. ಲೋಕಸಭೆಯ ಇತಿಹಾಸದಲ್ಲೇ ಇದುವರೆಗೂ ಯಾವ ರಾಜಕೀಯ ಪಕ್ಷವೂ ಇಷ್ಟೊಂದು ಅದ್ಭುತವಾದ ಪ್ರಚಂಡ ಬಹುಮತವನ್ನು ಗಳಿಸಿರಲಿಲ್ಲ. ಕಾಂಗ್ರೆಸ್ (ಐ) ಪಕ್ಷ ಈ ಪ್ರಚಂಡ ಬಹುಮತವನ್ನು ರಾಷ್ಟ್ರ ಹಿತದೃಷ್ಟಿಯಿಂದ ಉಪಯೋಗ ಮಾಡಿಕೊಂಡರೆ ರಾಷ್ಟ್ರದ ಭವಿಷ್ಯ ಉಜ್ವಲವಾಗುತ್ತದೆ. ಅದರ ಬದಲು ಅಧಿಕಾರವನ್ನು ಶಾಶ್ವತಗೊಳಿಸುವುದಕ್ಕಾಗಿ ಉಪಯೋಗಿಸಿಕೊಂಡರೆ ರಾಷ್ಟ್ರಕ್ಕೆ ಹಾನಿಯಾಗುತ್ತದೆ.

ಧೀರ್ಘಕಾಲದ ಶ್ರೀಮತಿ ಇಂದಿರಾಗಾಂಧಿಯವರ ಆಳ್ವಿಕೆಯ ಯುಗವು ಮುಕ್ತಾಯಗೊಂಡು ಇದೀಗ ಶ್ರೀ ರಾಜೀವಗಾಂಧಿಯವರ ಆಳ್ವಿಕೆಯ ಯುಗವು ಪ್ರಾರಂಭವಾಗಿದೆ. ಕಾಂಗ್ರೆಸ್ (ಐ) ಪಕ್ಷ ಹಾಗೂ ಶ್ರೀ ರಾಜೀವ ಗಾಂಧಿಯವರು

ಭಾರತದ ಜನತೆ ತಮ್ಮ ಮೇಲೆ ನಂಬಿಕೆಯನ್ನಿಟ್ಟು ಒಪ್ಪಿಸಿರುವ ಮಹತ್ತರವಾದ ಹೊಣೆಯನ್ನು ಎಷ್ಟರಮಟ್ಟಿಗೆ ಸಾರ್ಥಕರೀತಿಯಲ್ಲಿ ನಿರ್ವಹಿಸಬಲ್ಲರೆಂಬುದನ್ನು ಕುರಿತು ವಿಚಾರ ಮಾಡುವುದು ಈ ಲೇಖನದ ಉದ್ದೇಶವಾಗಿದೆ. ಪ್ರಾಸಂಗಿಕವಾಗಿ ಕಾಂಗ್ರೆಸ್ (ಐ) ಪಕ್ಷದ ವಿಜೃಂಭಣೆಯ ಅದ್ಭುತ ವಿಜಯಕ್ಕೂ, ಪ್ರತಿಪಕ್ಷಗಳ ತತ್ತರಿಸುವ ಪರಾಭವಕ್ಕೂ ಕಾರಣಗಳೇನೆಂಬುದನ್ನು ವಿವರಿಸುವುದು ಅಗತ್ಯ.

ಪಂಜಾಬ್ ಮತ್ತು ಈ ರಾಷ್ಟ್ರದ ಇತರ ಕೆಲವು ಕಡೆಗಳಲ್ಲಿ ರಾಷ್ಟ್ರವಿರೋಧಿ ವಿಚ್ಛಿದ್ರಕಾರಿ ಶಕ್ತಿಗಳ ಕೈವಾಡದಿಂದ ಉದ್ಭವಿಸಿದ ಪರಿಸ್ಥಿತಿಯಿಂದಲೂ, ದಿವಂಗತ ಪ್ರಧಾನಿಯವರ ಹತ್ಯೆಯಿಂದಲೂ ರಾಷ್ಟ್ರಾದ್ಯಂತ ಜನರು ರಾಷ್ಟ್ರದ ಭವಿಷ್ಯದ ವಿಚಾರದಲ್ಲಿ ಕಳವಳಗೊಂಡಿದ್ದರು. ಬಹುಜನರ ದೃಷ್ಟಿಯಲ್ಲಿ ಲೋಕಸಭಾ ಚುನಾವಣೆಯ ಫಲಿತಾಂಶವು ರಾಷ್ಟ್ರದ ಅಳಿವು ಅಥವಾ ಉಳಿವುಗಳ ವಿಚಾರವನ್ನು ನಿರ್ಣಯಿಸುವ ಪ್ರಶ್ನೆಯಾಗಿದ್ದಿತು. ಜೊತೆಗೆ ೧೯೭೭ ರಿಂದಲೂ ವಿವಿಧ ಪ್ರತಿಪಕ್ಷಗಳ ನಾಯಕರು ರಾಷ್ಟ್ರದ ಹಿತದೃಷ್ಟಿಯಿಂದ ತಮ್ಮ ತಮ್ಮ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ಒಂದು ಪ್ರಬಲ ಪ್ರತಿಪಕ್ಷವನ್ನು ರಚಿಸುವ ಬದಲುತಮ್ಮ ತಮ್ಮ ಪಕ್ಷಗಳ ಕೋಳಿಗಳಿಂದಲೇ ಈ ದೇಶದಲ್ಲಿ ಬೆಳಗಾಗುವುದೆಂಬ ಭ್ರಾಂತಿಯನ್ನು ತಾಳಿದ್ದರು. ಜನಬೆಂಬಲವನ್ನು ಪಡೆಯುವ ಬದಲು ಬರೀ ಒಣ ಆರ್ಭಟದಲ್ಲಿ ಕಾಲ ಕಳೆದರು. ಅಲ್ಲದೆ ಕೆಲವು ಪ್ರಮುಖ ರಾಷ್ಟ್ರೀಯ ಸಮಸ್ಯೆಗಳ ಸಂಬಂಧ ಪ್ರತಿಪಕ್ಷಗಳ ಕೆಲವು ನಾಯಕರು ರಾಷ್ಟ್ರದ ಹಿತದೃಷ್ಟಿಯಿಂದ ಒಮ್ಮತದ ನಿರ್ಧಿಷ್ಟ ನಿಲುವನ್ನು ತಾಳುವ ಬದಲು ಚುನಾವಣೆಯ ದೃಷ್ಟಿಯನ್ನಿಟ್ಟುಕೊಂಡು ಸಮಯಸಾಧಕ ನಿಲುವನ್ನು ತಾಳುತ್ತಾ ಬಂದರು. ಈ ಅವರ ಧೋರಣೆ ಜನರಿಗೆ ಹಿಡಿಸಲಿಲ್ಲ. ಕಾಂಗ್ರೆಸ್ (ಐ) ಪಕ್ಷದಲ್ಲಿರುವ ದುಷ್ಟರನ್ನೂ, ಭ್ರಷ್ಟರನ್ನೂ ಶಪಿಸುತ್ತಿದ್ದ ನನ್ನಂತಹವರೂ ಕೂಡಾ ರಾಷ್ಟ್ರ ಅನಾಯಕತ್ವದ ದವಡೆಗೆ ಸಿಕ್ಕಿ ನರಳುವುದಕ್ಕಿಂತ ಕಾಂಗ್ರೆಸ್ (ಐ) ಪಕ್ಷದ ಆಳ್ವಿಕೆಗೆ ಒಳಗಾಗುವುದು ಕ್ಷೇಮವೆಂದು ಚಿಂತಿಸುವ ಸ್ಥಿತಿ ರಾಷ್ಟ್ರದಲ್ಲಿ ಉದ್ಭವಿಸಿತು. ಪರಸ್ಪರ ವಿರುದ್ಧವಾದ ಸಿದ್ಧಾಂತ, ಧೋರಣೆಗಳಿಗೆ ಬಲವಾಗಿ ಅಂಟಿಕೊಂಡಿರುವ ಹಲವು ಪಕ್ಷಗಳು ಒಂದಾಗಿ ಸೇರಿ ಕೇಂದ್ರದಲ್ಲಿ ಸುಭದ್ರವಾದ ಸರ್ಕಾರವನ್ನು ರಚಿಸುವುದು ಅಸಂಭವವೆಂಬ ಭಾವನೆ ಜನರಲ್ಲಿ ಸ್ವಾಭಾವಿಕವಾಗಿ ಮೂಡಿಬಂತು.

ಈ ಮೇಲ್ಕಂಡ ಕಾರಣಗಳ ಜೊತೆಗೆ ದಿವಂಗತ ಪ್ರಧಾನಿಯವರ ಹತ್ಯೆಯಿಂದ ಉಂಟಾಗಿದ್ದ ಅನುತಾಪವೂ ಕೂಡ ಕೆಲವು ವರ್ಗಗಳಿಗೆ ಸೇರಿದ ಮತದಾರರ ಮೇಲೆ ತಕ್ಕಷ್ಟು ಪರಿಣಾಮವನ್ನು ಬೀರಿತ್ತು. ಜೊತೆಗೆ ಕಾಂಗ್ರೆಸ್ (ಐ) ಪಕ್ಷ ಬಹಳ

ಕಾಲದಿಂದ ಕೇಂದ್ರದಲ್ಲಿ ಅಧಿಕಾರದಲ್ಲಿದ್ದುದರಿಂದ ಇತರ ರಾಜಕೀಯ ಪಕ್ಷಗಳಿಗೆ ಲಭಿಸಲಾರದ ಕೆಲವು ಸಾಧನಸೌಲಭ್ಯಗಳನ್ನು ಹೊಂದಿತ್ತು. ಈ ಸಾಧನ ಸೌಲಭ್ಯಗಳು ಕಾಂಗ್ರೆಸ್ (ಐ) ಪಕ್ಷಕ್ಕೆ ಹೆಚ್ಚು ಸಹಾಯಕವಾಗಿದ್ದವು. ಅಲ್ಲದೆ ಶ್ರೀ ರಾಜೀವಗಾಂಧಿಯವರು ತಮ್ಮ ಚುನಾವಣೆ ಪ್ರಚಾರ ಭಾಷಣಗಳಲ್ಲಿ ಭ್ರಷ್ಟಾಚಾರವನ್ನು ನಿರ್ಮೂಲ ಮಾಡಿ ಸ್ವಚ್ಛ ರಾಜಕಾರಣವನ್ನೂ, ದಕ್ಷ ಆಡಳಿತವನ್ನೂ ಅನುಷ್ಠಾನಕ್ಕೆ ತರುವುದಾಗಿ ಹೇಳಿದ್ದ ಭರವಸೆಯ ಮಾತುಗಳು ವಿದ್ಯಾವಂತ ಮತದಾರರ ಮೇಲೆ ಕಷ್ಟ ಪರಿಣಾಮವನ್ನುಂಟು ಮಾಡಿದ್ದವು. ಶ್ರೀಮತಿ ಇಂದಿರಾಗಾಂಧಿಯವರು, ಭ್ರಷ್ಟಾಚಾರವು ವಿಶ್ವವ್ಯಾಪಿಯಾದ ಪಿಡುಗೆಂದು ಕೆಲವು ಸಾರಿ ರಾಜಕೀಯ ಮತ್ತು ನೌಕರಶಾಹಿಯ ಭ್ರಷ್ಟಾಚಾರವನ್ನು ಸಮರ್ಥಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಶ್ರೀ ರಾಜೀವಗಾಂಧಿಯವರ ಮಾತುಗಳು ರಾಷ್ಟ್ರದ ಆಗುಹೋಗುಗಳ ಬಗ್ಗೆ ಚಿಂತನೆ ಮಾಡುವವರ ಮನಸ್ಸಿನಲ್ಲಿ ಆಶಾಕಿರಣಮೂಡುವಂತೆ ಮಾಡಿದ್ದವು. ಈ ಎಲ್ಲಾ ಮೇಲ್ಕಂಡ ಕಾರಣಗಳಿಂದ ಕಾಂಗ್ರೆಸ್ (ಐ) ಪಕ್ಷ ಪ್ರಚಂಡ ವಿಜಯವನ್ನು ಸಾಧಿಸಿತು; ವಿರೋಧಪಕ್ಷಗಳು ಸೋಲನ್ನು ಅನುಭವಿಸಿದವು. ಬಹುಶಃ ಇಂದಿರಾಗಾಂಧಿಯವರು ಬದುಕಿದ್ದಾಗ ಈ ಚುನಾವಣೆ ನಡೆದಿದ್ದರೆ ಕಾಂಗ್ರೆಸ್ (ಐ) ಪಕ್ಷಕ್ಕೆ ಇಷ್ಟೊಂದು ಪ್ರಚಂಡ ಬಹುಮತ ಬರುತ್ತಿರಲಿಲ್ಲವೆಂದು ನನ್ನ ಭಾವನೆ. ಅಂತೂ, ಲೋಕಸಭೆಯ ಚುನಾವಣೆ ಭಾರತದಲ್ಲಿ ಪ್ರಜಾಪ್ರಭುತ್ವದ ತತ್ವ ಬಲವಾಗಿ ಬೇರೂರಿದೆ ಎಂಬುದಾಗಿ ಸ್ಪಷ್ಟಪಡಿಸಿದೆ.

ಕಾಂಗ್ರೆಸ್ (ಐ) ಪಕ್ಷ ಮತ್ತು ಅದರ ನಾಯಕರಾದ ಶ್ರೀ ರಾಜೀವಗಾಂಧಿಯವರು ತಮಗೆ ಒಪ್ಪಿಸಿದ ಹೊಣೆಯನ್ನು ಎಷ್ಟರ ಮಟ್ಟಿಗೆ ನಿರ್ವಹಿಸಬಲ್ಲರೆಂಬುದನ್ನು ವಿಚಾರ ಮಾಡೋಣ. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ರಾಷ್ಟ್ರದ ಉನ್ನತಿ ಮತ್ತು ಅವನತಿ ರಾಜಕಾರಣವನ್ನು ಮತ್ತು ಆಡಳಿತವನ್ನು ಬಹುಮಟ್ಟಿಗೆ ಅವಲಂಬಿಸಿರುತ್ತದೆ. ರಾಷ್ಟ್ರ ಪ್ರಗತಿಯನ್ನು ಸಾಧಿಸಬೇಕಾದರೆ ಆದರ್ಶ ಪ್ರೇರಿತ ಸ್ವಚ್ಛ ರಾಜಕಾರಣ ಮತ್ತು ದಕ್ಷತೆಯಿಂದ ಕೂಡಿದ ಸ್ವಚ್ಛ ಆಡಳಿತ ಅತ್ಯಗತ್ಯ. ಈ ವಿಚಾರವನ್ನು ಗಮನದಲ್ಲಿಟ್ಟುಕೊಂಡು ಕಾಂಗ್ರೆಸ್ (ಐ) ಪಕ್ಷದ ಸಾಮರ್ಥ್ಯ ಎಷ್ಟಿದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ನಾನು ಸದಸ್ಯನಾಗಿದ್ದ ಅಖಿಲಭಾರತ ರಾಷ್ಟ್ರೀಯ ಕಾಂಗ್ರೆಸ್ಸಿಗೂ, ಇಂದಿರುವ ಕಾಂಗೆಸ್ (ಐ) ಪಕ್ಷಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ನಾನು ರಾಷ್ಟ್ರೀಯ ಕಾಂಗ್ರೆಸ್ಸಿನ ಸದಸ್ಯನಾಗಿದ್ದಾಗಲೇ ಆ ಪಕ್ಷದ ರಾಜಕಾರಣದಲ್ಲಿ ಆದರ್ಶದ ಅಧಃಪತನ ಪ್ರಾರಂಭವಾಗಿತ್ತು. ಆ ಕಾರಣದಿಂದ ನಾನು ಜಿಗುಪ್ಸೆಗೊಂಡು ೧೯೬೭ರಲ್ಲಿ ಅಂದು ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ದಿವಂಗತ ಶ್ರೀ ಕಾಮರಾಜ್ ನಾಡಾರ್‌ರವರಿಗೆ ಧೀರ್ಘವಾದ ಪತ್ರವೊಂದನ್ನು ಬರೆದು ಕಾಂಗ್ರೆಸ್ ಪಕ್ಷದಿಂದ ನಿರ್ಗಮಿಸಿ ಸಕ್ರಿಯ

ರಾಜಕಾರಣದಿಂದ ನಿವೃತ್ತನಾದೆ. ೧೯೬೬ ರಲ್ಲಿ ಕೆಟ್ಟು ಹೋಗಿದೆ ಎಂದು ನಾನು ಬಿಟ್ಟದ್ದ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ ಇಂದಿರುವ ಕಾಂಗ್ರೆಸ್ (ಐ) ಪಕ್ಷಕ್ಕಿಂತ ನೂರುಪಾಲು ಆದರ್ಶಭರಿತವಾಗಿತ್ತೆಂದು ಹೇಳಿದರೆ, ಕಾಂಗ್ರೆಸ್ (ಐ) ಮಿತ್ರರು ನನ್ನ ಮೇಲೆ ಕೋಪಿಸಬಾರದು. ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದನಂತರ ವರ್ಷೇ ವರ್ಷೇ ಆಳುವ ಕಾಂಗ್ರೆಸ್ ರಾಜಕಾರಣದಲ್ಲಿ ಆದರ್ಶದ ಅಧಃಪತನ, ನೈತಿಕ ಮೌಲ್ಯಗಳ ವಿನಾಶ ಹೆಚ್ಚಾಗುತ್ತಾ ಬಂದಿದೆ.

ಇಂದು ಕಾಂಗ್ರೆಸ್ (ಐ) ಪಕ್ಷದಲ್ಲಿ ಆದರ್ಶ ಮತ್ತು ರಾಷ್ಟ್ರಭಿಮಾನಕ್ಕಿಂತ, ಅಧಿಕಾರಲಾಲಸೆ ಮತ್ತು ಸಮಯಸಾಧಕತನ ಹೆಚ್ಚಾಗಿದೆ. ಶ್ರೀಮತಿ ಇಂದಿರಾ ಗಾಂಧಿಯವರ ಆಳ್ವಿಕೆಯಲ್ಲಿ ಕೆಲವು ಕ್ಷೇತ್ರಗಳಲ್ಲಿ ಆರ್ಥಿಕ ಪ್ರಗತಿ ಜರುಗಿದ್ದುದೂ ನಿಜ. ಅಂತರ ರಾಷ್ಟ್ರೀಯವಲಯಗಳಲ್ಲಿ ಭಾರತದ ಕೀರ್ತಿ ಹೆಚ್ಚಾಗುವಂತೆ ಅವರು ಶ್ರಮಿಸಿದ್ದುದೂ ನಿಜ. ಆದರೆ ರಾಷ್ಟ್ರದ ರಾಜಕಾರಣದಲ್ಲಿ ಮತ್ತು ಆಡಳಿತದಲ್ಲಿ ಅವರ ಕಾರ್ಯನಿರ್ವಹಣೆಯ ಶೈಲಿ ನನಗೆ ಮೆಚ್ಚುಗೆಯಾಗಿರಲಿಲ್ಲ. ಅವರು ಪ್ರತ್ಯಕ್ಷವಾಗಿಯೋ; ಅಪ್ರತ್ಯಕ್ಷವಾಗಿಯೋ; ಗೊತ್ತಿದ್ದೋ, ಗೊತ್ತಿಲ್ಲದೆಯೋ, ಕೆಲವರು ಸ್ವಾರ್ಥಸಾಧಕ ಭ್ರಷ್ಟರಿಗೆ ಪ್ರೋತ್ಸಾಹನೀಡುತ್ತಿದ್ದರು. ಆ ಸ್ವಾರ್ಥಸಾಧಕ ಭ್ರಷ್ಟರಿಂದ ಸೃಷ್ಟಿಸಲ್ಪಟ್ಟ ಕೆಲವು ಸಮಸ್ಯೆಗಳು ರಾಷ್ಟ್ರವನ್ನು ಇಂದಿಗೂ ಬಹಳವಾಗಿ ಕಾಡುತ್ತಿವೆ. ಅಧಿಕಾರ ಬಲ ಅಥವಾ ಧನಬಲಕ್ಕಿಂತ ನೈತಿಕಬಲ ಶ್ರೇಷ್ಠವಾದುದು. ಹಿಂದೆ ರಾಷ್ಟ್ರೀಯ ಕಾಂಗ್ರೆಸ್ ನೈತಿಕಬಲದಿಂದ ಜನಬೆಂಬಲವನ್ನು ಪಡೆಯುತ್ತಿತ್ತು. ಇಂದು ಕಾಂಗ್ರೆಸ್ (ಐ) ಪಕ್ಷವು ನೈತಿಕ ಬಲವನ್ನು ಅವಲಂಬಿಸುವ ಬದಲು ಅಧಿಕಾರ, ಹಣ, ತಂತ್ರ ಇವುಗಳನ್ನು ಅವಲಂಬಿಸಿದೆ. ಈಚೆಗೆ ಓಟಗಾಗಿ ಸಿನೆಮಾ ನಟ, ನಟಿಯರನ್ನು ಆಶ್ರಯಿಸುವ ಗತಿ ಆ ಪಕ್ಷಕ್ಕೆ ಪ್ರಾಪ್ತಿಯಾಗಿದೆ.

ಕಾಂಗ್ರೆಸ್ (ಐ) ಪಕ್ಷ ತನಗೆ ಒಪ್ಪಿಸಿರುವ ಹೊಣೆಯನ್ನು ಸಮರ್ಥರೀತಿಯಲ್ಲಿ ನಿರ್ವಹಿಸಬೇಕಾದರೆ ಪಕ್ಷದಲ್ಲಿ ತೀವ್ರ ಸುಧಾರಣೆಗಳಾಗಬೇಕು. ಮೊದಲು ಆ ಪಕ್ಷದ ವರಿಷ್ಠರ, ಆದರಲ್ಲೂ ಮಂತ್ರಿಗಳ ಮತ್ತು ಸಂಸತ್ ಸದಸ್ಯರ ದೃಷ್ಟಿಕೋನ ಬದಲಾವಣೆಯಾಗಬೇಕು. ಕಾಂಗ್ರೆಸ್ (ಐ) ಪಕ್ಷದ ರಾಜಕಾರಣದಲ್ಲಿ ಆದರ್ಶ ಮತ್ತು ನೈತಿಕ ಮೌಲ್ಯಗಳು ನೆಲೆಗೊಳ್ಳುವಂತೆ ಮಾಡಬೇಕು. ಜನರೊಪ್ಪದಿರುವ ಹಳೆಯ ಜಾಡನ್ನು ಬಿಟ್ಟು, ಜನರೊಪ್ಪುವ ಹೊಸ ಜಾಡನ್ನು ಹಿಡಿಯಬೇಕು. ಹಾಗಾದರೆ ಮಾತ್ರ ಜನತೆಯ ನಿರೀಕ್ಷೆಯನ್ನು ಸಫಲಗೊಳಿಸುವುದು ಸಾಧ್ಯ. ಶ್ರೀ ರಾಜೀವಗಾಂಧಿಯವರು ರಾಜಕಾರಣಕ್ಕೆ ಹೊಸಬರಾಗಿರುವುದರಿಂದ ಸಮಸ್ಯೆಗಳನ್ನು

ತಮ್ಮದೇ ಆದ ಹೊಸ ದೃಷ್ಟಿಯಿಂದ ಸ್ವತಂತ್ರವಾಗಿ ಪರಿಶೀಲಿಸುವ ಅವಕಾಶ ಅವರಿಗಿದೆ. ಅವರು ಪಕ್ಷದ ನಾಯಕರಾದಮೇಲೆ ಪಕ್ಷದಲ್ಲಿ ಸೇರಿಕೊಂಡಿದ್ದ ಅಗ್ರಗಣ್ಯಭ್ರಷ್ಟರೆಂದು ಹೆಸರುವಾಸಿಯಾದ ಕೆಲವರನ್ನು ಮೂಲೆಗೆ ಸೇರಿಸಿದ್ದಾರೆ. ಇನ್ನೂ ಅನೇಕ ಅಗ್ರಗಣ್ಯಭ್ರಷ್ಟರು ಆ ಪಕ್ಷದಲ್ಲಿ ಉಳಿದುಕೊಂಡಿದ್ದಾರೆ. ಕೆಲವು ರಾಜ್ಯಗಳಲ್ಲಿ ಸೂಕ್ಷ್ಮದರ್ಶಕ ಯಂತ್ರವನ್ನು ಹಾಕಿನೋಡಿದರೂ ಕೂಡ ಕಾಂಗ್ರೆಸ್ ಮುಖಂಡರೆನಿಸಿಕೊಂಡವರಲ್ಲಿ ಕಳಂಕರಹಿತರಾದವರನ್ನು ಕಂಡು ಹಿಡಿಯುವುದು ಕಷ್ಟ. ಆದರೆ ಅವರೆಲ್ಲರನ್ನೂ ಒಂದೇ ಸಾರಿ ಮೂಲೆಗೆ ಸೇರಿಸುವುದು ಶ್ರೀ ರಾಜೀವಗಾಂಧಿಯವರಿಗೆ ಕಷ್ಟ. ಇತರೆ ರಾಜಕೀಯ ಪಕ್ಷಗಳಲ್ಲಿ ಸಹಾ ಅಗ್ರಗಣ್ಯ ಭ್ರಷ್ಟರು ಕೆಲವರಿದ್ದಾರೆಂದು ನನಗೆ ಗೊತ್ತು. ಇತರೆ ರಾಜಕೀಯ ಪಕ್ಷಗಳೂ ಕೂಡಾ ಕಾಂಗ್ರೆಸ್ ಮಾದರಿಯ ರಾಜಕಾರಣವನ್ನೇ ಮಾಡುತ್ತಿದ್ದಾರೆಂಬುದೂ ನನಗೆ ಗೊತ್ತು. ಆದರೆ ಭಾರತ ರಾಷ್ಟ್ರೀಯ ಕಾಂಗ್ರೆಸ್ನ ಉತ್ತರಾಧಿಕಾರಿಯೆಂದು ಹೇಳಿಕೊಳ್ಳುತ್ತಿರುವ ಕಾಂಗೆಸ್ (ಐ) ಪಕ್ಷವು ಇತರೆ ರಾಜಕೀಯ ಪಕ್ಷಗಳಿಗೆ ಮಾದರಿಯಾಗಿರಬೇಕು.

ಇಂದು ಶ್ರೀ ರಾಜೀವಗಾಂಧಿಯವರ ಮುಂದೆ ಹಲವು ಸಮಸ್ಯೆಗಳಿವೆ. ಪಂಜಾಬ್ ಮತ್ತು ಅಸ್ಸಾಂ ಸಮಸ್ಯೆಗಳಿಗೆ ಅವರು ತೀವ್ರಗತಿಯಲ್ಲಿ ಪರಿಹಾರವನ್ನು ಕಂಡು ಹಿಡಿಯಬೇಕು. ಜೊತೆಗೆ ರಾಷ್ಟ್ರದ ಸಾರ್ವಜನಿಕ ಆಡಳಿತವನ್ನು ಸರಿಪಡಿಸಬೇಕಾಗಿದೆ. ಆಡಳಿತವನ್ನು ಸರಿಪಡಿಸದಿದ್ದರೆ ಆರ್ಥಿಕ ಪ್ರಗತಿಗಾಗಿ ಎಷ್ಟು ಹಣವನ್ನು ಖರ್ಚುಮಾಡಿದರೂ ನೀರಿನಲ್ಲಿ ಹೋಮ ಮಾಡಿದಂತಾಗುತ್ತದೆ. ಮಿತಿಮೀರಿದ ಭ್ರಷ್ಟಾಚಾರದಿಂದ ತುಂಬಿ ತುಳುಕುತ್ತಿರುವ ಜಡಭರಿತ ಆಡಳಿತ ಯಂತ್ರವನ್ನು ದುರಸ್ತುಪಡಿಸಲು ಉಗ್ರ ಕಾರ್ಯಕ್ರಮ ಆವಶ್ಯಕ. ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರ ಈ ದೇಶದಲ್ಲಿ ಒಂದು ಭಯಂಕರ ಪಿಡುಗಾಗಿ ಪರಿಣಮಿಸಿದೆ. ಈ ಪಿಡುಗಿನಿಂದ ಕೆಲವು ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳು ಉದ್ಭವಿಸಿರುವ ಜೊತೆಗೆ ಇಡೀ ರಾಷ್ಟ್ರದಲ್ಲಿ ನೈತಿಕ ಅಧಃಪತನ ಉಂಟಾಗಿದೆ. ಈ ಪಿಡುಗು ಕೆಳಗಡೆ ಹುಟ್ಟಿದ್ದರೆ ಅದನ್ನು ಸುಲಭವಾಗಿ ತಡೆಗಟ್ಟಬಹುದಾಗಿತ್ತು. ಆದರೆ ದುರ್ದೈವದಿಂದ ಅದು ಮೇಲ್ಗಡೆ ರಾಜಕಾರಣಿಗಳ ಮತ್ತು ಅಧಿಕಾರಿಗಳ ಕೃಪಾಶ್ರಯದಲ್ಲಿ ಹುಟ್ಟಿ ಬೆಳೆದು ಕೆಳಗಡೆ ಪ್ರಸರಿಸುತ್ತಾ ಇದೆ. ಆದ್ದರಿಂದ ಅದನ್ನು ತಡೆಗಟ್ಟುವುದು ಸುಲಭವಾದ ಕೆಲಸವಲ್ಲ. ಈ ಪಿಡುಗಿಗೆ ತೀವ್ರತರವಾದ ಮದ್ದು ಅವಶ್ಯಕ. ನಮ್ಮ ದೇಶದ ಸರ್ಕಾರಿ ನೌಕರರಲ್ಲಿ ಬಹುಮಂದಿಗೆ ಕರ್ತವ್ಯ ಪ್ರಜ್ಞೆಯೂ ಇಲ್ಲ; ಸೇವಾಮನೋಭಾವವೂ ಇಲ್ಲ; ರಾಷ್ಟ್ರೀಯ ಪ್ರಜ್ಞೆಯೂ ಇಲ್ಲ. ಅವರಲ್ಲಿ ಹೊಸ ದೃಷ್ಟಿ ಮೂಡುವಂತೆ ಮಾಡಬೇಕು.

ನಮ್ಮ ದೇಶದಲ್ಲಿ ಸರ್ಕಾರಿ ನೌಕರರಿಗೂ, ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟ ಸಮಸ್ಥೆಗಳಲ್ಲಿ ಕೆಲಸ ಮಾಡುವ ನೌಕರರಿಗೂ ಕೈತುಂಬ ಹಣ ಬರಬೇಕು, ಆದರೆ ಕೆಲಸ ಮಾತ್ರ ಬಹಳ ಹಗುರವಾಗಿರಬೇಕು.

ದಿನೇದಿನೇ ಹಳ್ಳಿ, ಪಟ್ಟಣಗಳಲ್ಲಿ ಪುಂಡ ಪೋಕರಿಗಳ ಹಾವಳಿ ಹೆಚ್ಚಾಗುತ್ತಾ ಇದೆ. ಅದರಲ್ಲೂ ರಾಜಕೀಯ ಪುಂಡರ ಹಾವಳಿಯನ್ನು ಸಹಿಸುವುದು ಜನರಿಗೆ ಬಹಳ ಕಷ್ಟವಾಗಿದೆ. ದಿನೇ ದಿನೇ ಕೊಲೆ, ದರೋಡೆ, ಕಳ್ಳತನ, ಕಳ್ಳಸಾಗಾಣಿಕೆ, ಕಳ್ಳವ್ಯಾಪಾರ ಮುಂತಾದ ಕಾನೂನು ಬಾಹಿರ ಹೀನ ಕೃತ್ಯಗಳು ಹೆಚ್ಚಾಗುತ್ತಾ ಇವೆ. ಕೆಲವು ಕಡೆಗಳಲ್ಲಿ ರಾಷ್ಟ್ರವಿರೋಧಿ ವಿಚ್ಛಿದ್ರ ಶಕ್ತಿಗಳು ಅರಾಜಕತೆಯ ಪರಿಸ್ಥಿತಿಯನ್ನುಂಟುಮಾಡಿದ್ದಾರೆ. ಈ ಎಲ್ಲಾ ವಿಧವಾದ ಸಮಾಜಘಾತುಕ, ರಾಷ್ಟ್ರಘಾತುಕ ಕೃತ್ಯಗಳಲ್ಲಿ ತೊಡಗಿರತಕ್ಕ ದುಷ್ಟ ವ್ಯಕ್ತಿಗಳನ್ನು ಸದೆಬಡಿದು ರಾಷ್ಟ್ರದಲ್ಲಿ ಶಾಂತಿ ಮತ್ತು ನೆಮ್ಮದಿ ನೆಲೆಗೊಳ್ಳುವಂತೆ ಮಾಡುವುದು ಶ್ರೀ ರಾಜೀವಗಾಂಧಿಯವರ ಮುಂದಿರುವ ಇನ್ನೊಂದು ಸಮಸ್ಯೆ. ಭ್ರಷ್ಟಾಚಾರದಿಂದಲೂ, ಮಿತಿಮೀರಿದ ಪ್ರಮಾಣದಲ್ಲಿ ಹೆಚ್ಚಿರುವ ಕಪ್ಪು ಹಣದಿಂದಲೂ ವರ್ಷೇ ವರ್ಷೇ ಹೆಚ್ಚಾಗುತ್ತಿರುವ ತೆರಿಗೆಗಳಿಂದಲೂ ಬೆಲೆಗಳು ದಿನೇ ದಿನೇ ಗಗನಕ್ಕೇರುತ್ತಿವೆ. ಪ್ರಾಮಾಣಿಕ ರೀತಿಯಲ್ಲಿ ಜೀವನ ಮಾಡುವವರಿಗೆ ಇದರಿಂದ ಕಷ್ಟವಾಗಿದೆ. ಈ ಬಗ್ಗೆ ಶ್ರೀ ರಾಜೀವಗಾಂಧಿಯವರ ಗಮನ ಹರಿಯಬೇಕಾದುದು ಅಗತ್ಯ.

ಶ್ರೀ ರಾಜೀವಗಾಂಧಿಯವರು ಪ್ರಧಾನಿಯಾದ ಮೇಲೆ ಕೈಗೊಂಡಿರುವ ಕೆಲವು ತೀರ್ಮಾನಗಳನ್ನೂ, ಅವರ ಕಾರ್ಯವಿಧಾನದ ಶೈಲಿಯನ್ನೂ ಅವರು ಆಡುವ ಮಾತುಗಳನ್ನೂ ನೋಡಿದರೆ ಅವರು ಈ ದೇಶದ ರಾಜಕಾರಣ ಮತ್ತು ಆಡಳಿತದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸುವ ಆಶಾದಾಯಕ ಸೂಚನೆ ಕಾಣುತ್ತಾ ಇದೆ. ಶ್ರೀ ರಾಜೀವಗಾಂಧಿಯವರ ಮುಂದೆ ಎರಡು ಮಾರ್ಗಗಳಿವೆ. ಒಂದು ಅವರ ಅಜ್ಜ ಶ್ರೀ ನೆಹರೂರವರು ನಡೆದುಹೋದ ಮಾರ್ಗ, ಇನ್ನೊಂದು ಅವರ ತಾಯಿ ಶ್ರೀಮತಿ ಇಂದಿರಾಗಾಂಧಿಯವರು ನಡೆದುಹೋದ ಮಾರ್ಗ. ಶ್ರೀರಾಜೀವಗಾಂಧಿಯವರು ಶ್ರೀ ನೆಹರೂರವರು ಮಾರ್ಗವನ್ನು ಹಿಡಿದು ಮುಂದೆ ಸಾಗಿದರೆ ರಾಷ್ಟ್ರಕ್ಕೆ ಒಳ್ಳೆಯದಾಗಬಹುದೆಂದು ನನ್ನ ಅಭಿಪ್ರಾಯ. ಇಂದು ಈ ದೇಶದಲ್ಲಿರುವ ಸಂದಿಗ್ಧ ಅಸಾದಾರಣ ಪರಿಸ್ಥಿತಿಯಲ್ಲಿ ರಾಷ್ಟ್ರದ ಮುಂದಿರುವ ಕೆಲವು ಬೃಹತ್ ಸಮಸ್ಯೆಗಳ ಪರಿಹಾರಕ್ಕಾಗಿ ಶ್ರೀ ರಾಜೀವ ಗಾಂಧಿಯವರು ಪ್ರತಿ ಪಕ್ಷಗಳ ಸಹಕಾರವನ್ನು ಪಡೆಯಬೇಕು. ಪ್ರತಿಪಕ್ಷಗಳ ನಾಯಕರು ಅನಾವಶ್ಯಕ ಘರ್ಷಣೆಯ

ಧೋರಣೆಯನ್ನು ತಾಳದೆ ರಾಷ್ಟ್ರಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಕೇಂದ್ರ ಸರ್ಕಾರದೊಡನೆ ಸಹಕರಿಸಬೇಕು.

ವಿರೋಧ ಪಕ್ಷಗಳಲ್ಲಿ ಕೆಲವರೂ, ಕಾಂಗ್ರೆಸ್(ಐ) ಪಕ್ಷದಲ್ಲಿ ಕೆಲವರೂ ಪರಸ್ಪರ ಆಜನ್ಮ ಶತ್ರುಗಳಂತೆ ವರ್ತಿಸುತ್ತಿದ್ದಾರೆ. ಒಬ್ಬರನ್ನೊಬ್ಬರು ಟೀಕಿಸುವಾಗ ಘನತೆ ಗಾಂಭೀರ್ಯಗಳಿಂದ ಮಾತನಾಡುವ ಬದಲು ಅಪ್ರಬುದ್ಧ ಅಲ್ಪರಂತೆ ಮಾತನಾಡುತ್ತಾರೆ. ಅವರ ಮಾತುಗಳನ್ನು ಕೇಳಲೂ ಸಹಾ ಅಸಹ್ಯವಾಗುತ್ತದೆ. ಮಿತಿಮೀರಿದ ಅಧಿಕಾರದಾಹದ ಪಿತ್ತನೆತ್ತಿಗೇರಿದಾಗ ತಲೆಕೆಟ್ಟು, ಬಾಯಿಗೆ ಬಂದಂತೆ ಮಾತನಾಡುತ್ತಾರೆಂದು ತೋರುತ್ತದೆ. ಪ್ರತಿಪಕ್ಷಗಳವರಿಗೆ ಕೆಲವು ಕಿವಿಮಾತುಗಳು: ಸ್ವರಾಜ್ಯ ಬಂದು ೩೭ ವರ್ಷಗಳು ಸಂದುಹೋದವು. ೩೭ ವರ್ಷಗಳ ಅವಧಿಯಲ್ಲಿ ಒಂದು ಪ್ರಬಲ ಪ್ರತಿ ಪಕ್ಷವನ್ನು ರಚಿಸಲು ಸಾಧ್ಯವಾಗಿಲ್ಲವೆಂದರೆ, ಪ್ರತಿಪಕ್ಷದವರಲ್ಲಿ ಏನೋ ನ್ಯೂನತೆ ಇದೆಯೆಂದು ಭಾವಿಸಬೇಕಾಗಿದೆ. ಪಕ್ಷಗಳನ್ನು ಕಟ್ಟುವುದೂ, ಕಟ್ಟಿದ ಪಕ್ಷಗಳನ್ನು ಒಡೆಯುವುದೂ, ಪಕ್ಷದಿಂದ ಪಕ್ಷಕ್ಕೆ ಹಾರುವುದೂ ಕೆಲವು ರಾಜಕಾರಣಿಗಳ ಅಸಹ್ಯಕರ ಹವ್ಯಾಸವಾಗಿದೆ. ವರ್ಷೇ ವರ್ಷೇ ರಾಜಕೀಯ ಪಕ್ಷಗಳ ಸಂಖ್ಯೆ ಹೆಚ್ಚಾಗುತ್ತಾ ಇವೆ. ಮಿತಿಮೀರಿದ ಪ್ರಮಾಣದಲ್ಲಿ ಪಕ್ಷಗಳ ಸಂಖ್ಯೆ ಹೆಚ್ಚಾದರೆ ಪ್ರಜಾಪ್ರಭುತ್ವ ನಾಶವಾಗಿ ಸರ್ವಾಧಿಕಾರ ಪ್ರಭುತ್ವ ಜಾರಿಗೆ ಬರುತ್ತದೆ. ನಮ್ಮ ನೆರೆಹೊರೆಯ ರಾಷ್ಟ್ರಗಳಲ್ಲಿ ಸಂಭವಿಸಿರುವ ವಿದ್ಯಾಮಾನಗಳು ಇದಕ್ಕೆ ಸಾಕ್ಷಿ. ನಮ್ಮ ದೇಶದ ಕೆಲವು ರಾಜಕೀಯ ಪಕ್ಷಗಳು ತಾವು ಬೆಳೆಯುವ ಪ್ರಯತ್ನವನ್ನೂ ಮಾಡುವುದಿಲ್ಲ, ಇತರ ಪಕ್ಷಗಳನ್ನು ಬೆಳೆಯಲು ಬಿಡುವುದೂ ಇಲ್ಲ. ತಮ್ಮ ಪಕ್ಷಗಳನ್ನು ಬೆಳೆಯಲು ಬಿಡುವುದೂ ಇಲ್ಲ. ತಮ್ಮ ಪಕ್ಷಗಳ ಸಿದ್ಧಾಂತ ಧ್ಯೇಯ ಧೋರಣೆಗಳಿಂದಲೇ ಈ ದೇಶಕ್ಕೆ ಮುಕ್ತಿ ಎಂದು ಅವರು ಭಾವಿಸಿರುವಂತೆ ತೋರುತ್ತದೆ. ಸಿದ್ಧಾಂತ, ಧೋರಣೆಗಳಿಗಿಂತ ರಾಷ್ಟ್ರದ ಹಿತ ಹೆಚ್ಚೆಂಬ ಅರಿವು ಅವರಿಗೆ ಬಂದಿಲ್ಲ. ಎಲ್ಲಾ ಕಾಲಕ್ಕು ಎಲ್ಲಾ ದೇಶಗಳಿಗೂ ಸರಿಹೋಗತಕ್ಕ ರಾಜಕೀಯ ಮತ್ತು ಅರ್ಥಿಕ ಸಿದ್ಧಾಂತಗಳನ್ನು ಇದುವರೆಗೆ ಯಾರೂ ನಿರೂಪಿಸಿಲ್ಲ; ನಿರೂಪಿಸಲು ಸಾಧ್ಯವೂ ಇಲ್ಲ. ದುರ್ದೈವದಿಂದ ನಮ್ಮ ದೇಶದ ಬಹು ಮಂದಿ ರಾಜಕಾರಣಿಗಳಿಗೆ ವಿಚಾರ ಮಾಡತಕ್ಕ ಮೇಧಾಶಕ್ತಿಯೂ ಇಲ್ಲ; ರಾಜಕಾರಣಿಗಳಿಗಿರಬೇಕಾದ ಸಾರ್ವತ್ರಿಕ ಜ್ಞಾನವೂ ಇಲ್ಲ.

ದೇಶದ ಇಂದಿನ ಪರಿಸ್ಥಿತಿಗೆ ಸಾಮಾನ್ಯ ಜನರೂ ಬಹುಮಟ್ಟಿಗೆ ಕಾರಣರು. ಜನರ ಯೋಗ್ಯತೆಗೆ ಅನುಗುಣವಾದ ಸರ್ಕಾರ ಅವರಿಗೆ ಲಭಿಸುತ್ತದೆ. ಜನರು ಅಪ್ರಾಮಾಣಿಕರಾದರೆ, ಭ್ರಷ್ಟರು ಅವರ ಮುಖಂಡರಾಗುತ್ತಾರೆ; ಜನರು ಮೂರ್ಖರಾದರೆ,

ಧೂರ್ತರು ಅವರ ಮುಖಂಡರಾಗುತ್ತಾರೆ; ಜನರು ಷಂಡರಾದರೆ, ಭಂಡರು ಅವರ ಮುಖಂಡರಾಗುತ್ತಾರೆ. ಜನರು ಮೂಕರಾದರೆ, ಕಿವುಡರು ಅವರ ಮುಖಂಡರಾಗುತ್ತಾರೆ ನಮ್ಮ ದೇಶದ ಅಗಾಧ ಬಡತನಕ್ಕೆ ಮತ್ತು ವಿವಿಧ ಸಮಸ್ಯೆಗಳಿಗೆ ನಮಗೆ ರಕ್ತಗತವಾಗಿ ಬಂದಿರತಕ್ಕ ಕೆಲವು ಅನಿಷ್ಟ ಗುಣಗಳೇ ಕಾರಣ. ಅವುಗಳ ಪೈಕಿ ಅಧಿಕಾರದಲ್ಲಿದ್ದವರನ್ನು ಪೂಜಿಸುವುದೂ ಒಂದು ಅನಿಷ್ಟಗುಣ. ಗೆದ್ದೆತ್ತಿನ ಬಾಲವನ್ನು ಹಿಡಿಯುತ್ತಾ ಹೋಗುವುದು ಇನ್ನೊಂದು ಅನಿಷ್ಟಗುಣ. ಸಮಯಸಾಧಕತನ ನಮ್ಮ ಮತ್ತೊಂದು ಅನಿಷ್ಟಗುಣ. ನಮಗೆ ಕ್ಷಾತ್ರಗುಣ ಕಡಿಮೆ; ಸನ್ನಿವೇಶಕ್ಕೆ ಅನುಗುಣವಾಗಿ ನುಸುಳಿಕೊಳ್ಳುವ ಪ್ರವೃತ್ತಿ ಹೆಚ್ಚು. ಅನ್ಯಾಯ ಅಸಡ್ಡಾಳಗಳನ್ನು ಕಂಡು ನಮ್ಮ ರಕ್ತ ಕುದಿಯುವುದಿಲ್ಲ; ಕಷ್ಟ ಕಾರ್ಪಣ್ಯಗಳನ್ನು ನೋಡಿ ನಮ್ಮ ಹೃದಯ ಮಿಡಿಯುವುದಿಲ್ಲ; ಯಾವ ದೇಶವಾದರೂ ಕೂಡಾ ಪ್ರಬುದ್ಧ ಮಾನಕ್ಕೆ ಬರಬೇಕಾದರೆ ರಾಷ್ಟ್ರಭಿಮಾನ, ಸರ್ವೇಸಾಮಾನ್ಯ. ಸತ್ಯಸಂಧತೆ, ಕರ್ತವ್ಯಪ್ರಜ್ಞೆ, ಶಿಸ್ತು, ದುಡಿಮೆ ಇವುಗಳು ಆವಶ್ಯಕ. ಈ ಗುಣಗಳು ಜನಸಾಮಾನ್ಯರಲ್ಲೂ ಕಡ್ಡಿಮೆ, ಜನ ನಾಯಕರೆನಿಸಿಕೊಂಡವರಲ್ಲೂ ಬಹಳ ಕಡಿಮೆ. ಈ ಲೇಖನವನ್ನು ಮುಗಿಸುವ ಮುನ್ನ ಚುನಾವಣಾ ವೆಚ್ಚದ ಸಂಬಂಧ ಒಂದೆರಡು ಮಾತುಗಳನ್ನು ಹೇಳುವುದು ಆವಶ್ಯಕ. ಈ ಸಾರಿ ಹಿಂದಿಗಿಂತಲೂ ಚುನಾವಣೆಯಲ್ಲಿ ಹಣದ ಹೊಳೆ ವಿಪರೀತ ಹರಿದಿದೆ. ಕೆಲವು ಉಮೇದುವಾರರು ಮೂರುಲಕ್ಷ ರೂಪಾಯಿಗಳಿಂದ ಹಿಡಿದು ಹತ್ತು ಲಕ್ಷ ರೂಪಾಯಿಗಳವರೆಗೆ ಖರ್ಚುಮಾಡಿದ್ದರೆ, ಕೆಲವರು ಹತ್ತುಲಕ್ಷದಿಂದ ಐವತ್ತು ಲಕ್ಷ ರೂಪಾಯಿಗಳವರೆಗೆ ಖರ್ಚು ಮಾಡಿದ್ದಾರೆಂದು ಕೇಳಿದ್ದೇನೆ. ಈ ಹಣಕ್ಕೆ ಲೆಕ್ಕಪತ್ರಗಳಿವೆಯೇ? ಈ ಹಣ ಎಲ್ಲಿಂದ ಬಂತು? ಈ ಪ್ರಶ್ನೆಗಳಿಗೆ ಒಂದೇ ಉತ್ತರ ಇದು ಅಪ್ಪಟ ಕಳ್ಳಹಣ. ಇನ್ನು ಮುಂದೆ ಚುನಾವಣೆಯಲ್ಲಿ ಗೆಲ್ಲಬೇಕಾದರೆ ಕಪ್ಪು ಹಣದ ಕುಬೇರರಿಂದಲೇ ಸಾಧ್ಯ. ನನ್ನಂತಹವರಿಂದ ಸಾಧ್ಯವಾಗದ ಮಾತು. ಈ ದೃಷ್ಟಿಯಿಂದ ಯೋಚಿಸುವುದಾದರೆ ನಮ್ಮಲ್ಲಿರುವುದು ಪ್ರಜಾಪ್ರಭುತ್ವವಲ್ಲ ಹಣವಂತರ ಪ್ರಭುತ್ವ.

ಪ್ರಜಾಮತ ೨೦.೦೧.೯೮೫

# ಜನತಾ ಸರ್ಕಾರ ಹೇಗೆ ಕಾರ್ಯನಿರ್ವಹಿಸಿದರೆ ಆದರ್ಶ?

ಕಳೆದ ಡಿಸೆಂಬರ್ ತಿಂಗಳಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷ ಪ್ರಚಂಡ ಬಹುಮತಗಳಿಸಿ ಜಯಭೇರಿ ಹೊಡೆದಿತ್ತು. ಕೇವಲ ಎರಡು ತಿಂಗಳ ಅನಂತರ ನಡೆದ ವಿಧಾನಸಭಾ ಚುನಾವಣೆಯಲ್ಲೂ ಅದೇ ರೀತಿಯ ಪ್ರಚಂಡ ಬಹುಮತ ಕಾಂಗ್ರೆಸ್ (ಐ) ಪಕ್ಷಕ್ಕೆ ದೊರಕುತ್ತದೆಯೆಂದು ಅನೇಕರು ನಿರೀಕ್ಷಿಸುತ್ತಿದ್ದರು. ಆದರೆ ಆ ನಿರೀಕ್ಷೆಗೆ ವಿರುದ್ಧವಾಗಿ ಕರ್ನಾಟಕದಲ್ಲಿ ಜನತಾ ಪಕ್ಷವು ಬಹುಮತಗಳಿಸಿ ಅಧಿಕಾರಕ್ಕೆ ಬಂದಿರುತ್ತದೆ. ಜನತಾ ಪಕ್ಷದ ಅನಿರೀಕ್ಷಿತ ವಿಜಯಕ್ಕೂ, ಕಾಂಗ್ರೆಸ್ (ಐ) ಪಕ್ಷದ ಅನಿರೀಕ್ಷಿತ ಪರಾಭವಕ್ಕೂ ಕಾರಣಗಳೇನೆಂಬುದನ್ನು ಪರಿಶೀಲಿಸಬೇಕಾಗಿದೆ. ಕೆಲವು ವರ್ಷಗಳಿಂದೀಚೆಗೆ ಕರ್ನಾಟಕದಲ್ಲಿ ಕಾಂಗ್ರೆಸ್ (ಐ) ಪಕ್ಷಕ್ಕೆ ಜನಾನುರಾಗ ಕಡಿಮೆಯಾಗುತ್ತಾ ಬಂದು, ಅಧಿಕಾರದ ಗೀಳು ಹೆಚ್ಚಾಗುತ್ತಾ ಬಂದಿತು. ಕಳೆದ ವಿಧಾನಸಭಾ ಚುನಾವಣೆಗಳಲ್ಲಿ ಸ್ಪರ್ಧಿಗಳಾಗಲು ಬಯಸಿ, ಸುಮಾರು ಹನ್ನೆರಡುಸಾವಿರ ಕಾಂಗ್ರೆಸ್ಸಿಗರು ಅರ್ಜಿಗಳನ್ನು ಸಲ್ಲಿಸಿದ್ದರೆಂದು ಕೇಳಿದ್ದೇನೆ. ಕಾಂಗ್ರೆಸ್ ಟಿಕೆಟ್ ಸಿಕ್ಕದೆ ಬಹುಮಂದಿ ಹತಾಶೆಯಿಂದ ಅತೃಪ್ತರಾದರು. ಅತೃಪ್ತರಾದವರ ಪೈಕಿ ಬಹುಮಂದಿ ಚುನಾವಣೆಯಲ್ಲಿ ಸಕ್ರಿಯ ಪಾತ್ರ ವಹಿಸದೆ ನಿರ್ಲಿಪ್ತರಾದರು. ಕೆಲವರು ಗುಟ್ಟಾಗಿ ಪಕ್ಷಕ್ಕೆ ದ್ರೋಹ ಬಗೆದರು; ಕೆಲವರು ಬಹಿರಂಗವಾಗಿ ದಂಗೆ ಎದ್ದರು. ವಿಧಾನಸಭೆಯ ೨೨೪ ಸ್ಥಾನಗಳಿಗೆ ೧೨ ಸಾವಿರ ಜನರು ಅರ್ಜಿಗಳನ್ನು ಸಲ್ಲಿಸಿದ್ದರೆಂಬುದನ್ನು ನೋಡಿದರೆ ನಮ್ಮ ದೇಶದ ರಾಜಕಾರಣಿಗಳಿಗೆ ಅಧಿಕಾರ ದಾಹ ಎಷ್ಟಿದೆಯೆಂಬುದು ವ್ಯಕ್ತವಾಗುತ್ತದೆ. ಬಹುಶಃ ಕಳೆದ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದಲ್ಲಿ ಜನತಾ ಪಕ್ಷದ ಟಿಕೆಟ್ಟಿಗಾಗಿ ಅಷ್ಟೇ ನೂಕು ನುಗ್ಗಲು ಇರುತ್ತಿತ್ತೆಂದು ನನ್ನ ಭಾವನೆ.

## ಜನರ ರಾಜಕೀಯ ಪ್ರಜ್ಞೆ

ಜನತಾ ಪಕ್ಷದವರು ಏಕೈಕ ನಾಯಕ ಶ್ರೀ ರಾಮಕೃಷ್ಣ ಹೆಗಡೆಯವರ ಮುಂದಾಳು ತನದಲ್ಲಿ ಚುನಾವಣಾ ಕಣಕ್ಕೆ ಇಳಿದಿದ್ದರೆ ಕಾಂಗ್ರೆಸ್ (ಐ) ಪಕ್ಷದಲ್ಲಿ ಚುನಾವಣಾ ಪ್ರಚಾರ ನಡೆಯುತ್ತಿದ್ದಾಗಲೂ ನಾಯಕತ್ವಕ್ಕಾಗಿ ಸದ್ದಿಲ್ಲದ ಸೆಣಸಾಟ ನಡೆಯುತ್ತಿತ್ತು. ಜನತಾ ಸರ್ಕಾರದ ಹಿಂದಿನ ಎರಡು ವರ್ಷಗಳ ಆಳ್ವಿಕೆಯಲ್ಲಿ ಅನುದಿನದ ಆಡಳಿತದಲ್ಲಿ

ದಕ್ಷತೆಯ ಅಭಾವ ಎದ್ದು ಕಾಣುತ್ತಿದ್ದರೂ ಕೆಲವು ಜನೋಪಯೋಗಿ ಕಾರ್ಯಗಳು ನಡೆದಿದ್ದವು. ಮಂತ್ರಿಗಳ ಪೈಕಿ ಕೆಲವರು ಲಂಚಕೋರರೆಂಬ ಒಡಕು ಮಾತುಗಳು ಆಗಾಗ ಕೇಳಿಬರುತ್ತಿದ್ದರೂ, ಬಹುಮಂದಿ ಮಂತ್ರಿಗಳು ಪ್ರಾಮಾಣಿಕರೆಂಬ ಪ್ರತೀತಿ ಇತ್ತು. ಮೇಲಾಗಿ ಶ್ರೀರಾಮಕೃಷ್ಣ ಹೆಗಡೆ ಆಟೋಪವಿಲ್ಲದ ಸೌಜನ್ಯದಿಂದ ಕೂಡಿದ ಸರಳ ನಡವಳಿಕೆಗಳಿಂದಲೂ, ಸಮಯೋಚಿತ ರಾಜಕೀಯ ಜಾಣ್ಮೆಯಿಂದಲೂ ತಾವು ಮುಖ್ಯಮಂತ್ರಿಯಾಗಿದ್ದ ಎರಡು ವರ್ಷಗಳ ಅವಧಿಯಲ್ಲಿ ತಕ್ಕಷ್ಟು ಜನಾನುರಾಗ ಗಳಿಸಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಕರ್ನಾಟಕದ ಮತದಾರರ ರಾಜಕೀಯ ಪ್ರಜ್ಞೆ ಜನತಾಪಕ್ಷಕ್ಕೆ ಅನುಕೂಲವಾಗಿ ಪರಿಣಮಿಸಿತು. ಕರ್ನಾಟಕದ ಮತದಾರರು ರಾಷ್ಟ್ರದ ಹಿತದೃಷ್ಟಿಯಿಂದ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಗೆ ಬೆಂಬಲ ನೀಡಿದರು. ವಿಧಾನಸಭಾ ಚುನಾವಣೆಯಲ್ಲಿ ರಾಜ್ಯದ ಸಮಸ್ಯೆಗಳನ್ನು ಗಮನದಲ್ಲಿ ಇಟ್ಟುಕೊಂಡು ಜನತಾಪಕ್ಷಕ್ಕೆ ಬೆಂಬಲ ನೀಡಿದರು. ಇವೇ ಮುಂತಾದ ಕಾರಣಗಳಿಂದ ಜನತಾ ಪಕ್ಷಕ್ಕೆ ಜಯಲಭಿಸಿತು. ಕಾಂಗ್ರೆಸ್ (ಐ) ಪರಾಭವ ಅನುಭವಿಸಿತು.

**ತಪ್ಪು-ಒಪ್ಪು**

೧೯೮೩ರಲ್ಲಿ ಅಧಿಕಾರಕ್ಕೆ ಬಂದ ಜನತಾ ಪಕ್ಷಕ್ಕೆ ಶಾಸನಸಭೆಯಲ್ಲಿ ಬಹುಮತ ಇಲ್ಲದಿದ್ದುದರಿಂದ ಜನತಾ ಸರ್ಕಾರ ಯಶಸ್ವಿಯಾಗಿ ಕಾರ್ಯನಿರ್ವಹಿಸಲು ಹಲವು ಎಡರುತೊಡರುಗಳಿದ್ದವು. ಆದರೆ ಈಗ ಪರಿಸ್ಥಿತಿ ಹಾಗಿಲ್ಲ. ಜನತಾಪಕ್ಷಕ್ಕೆ ವಿಧಾನಸಭೆಯಲ್ಲಿ ಸ್ಪಷ್ಟ ಬಹುಮತವಿದೆ. ಆದ್ದರಿಂದ ಜನತಾ ಸರ್ಕಾರ ದಿಟ್ಟತನದಿಂದ ಆಳ್ವಿಕೆ ನಡೆಸಲು ಹೆಚ್ಚಿನ ಎಡರು ತೊಡರುಗಳಿರುವುದಿಲ್ಲ. ಆದರೆ ಜನಮೆಚ್ಚುವ ರೀತಿಯಲ್ಲಿ ಜನತಾ ಸರ್ಕಾರ ದಿಟ್ಟತನದಿಂದ ಕೆಲಸಮಾಡಬೇಕಾದರೆ ಪಕ್ಷದಲ್ಲಿ ಒಗ್ಗಟ್ಟಿರಬೇಕು. ಜನತಾ ಶಾಸಕರು ಮಿತಿಮೀರಿದ ರಾಜಕೀಯ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ಮಂತ್ರಿಮಂಡಕ್ಕೆ ನಿರ್ವಂಚನೆಯಿಂದ ಬೆಂಬಲ ನೀಡಬೇಕು. ಮಿತಿ ಮೀರಿದ ಅಧಿಕಾರದಾಹ ಈ ದೇಶದ ರಾಜಕಾರಣಕ್ಕೆ ಅಂಟಿರುವ ಒಂದು ಪ್ರಬಲ ರೋಗ. ರಾಜಕಾರಣದಲ್ಲಿ ನಿರತರಾಗಿರುವ ಕೆಲವರಿಗೆ, ರಾಜಕಾರಣ ಸುಖವಾಗಿ ಹೊಟ್ಟೆ ಹೊರೆಯುವ ಕಸುಬು. ಕೆಲವರಿಗೆ ಸಂಪತ್ತು, ದೌಲತ್ತುಗಳನ್ನು ಗಳಿಸುವ ಸಾಧನ. ಇದಕ್ಕಾಗಿಯೇ ಅಧಿಕಾರಕ್ಕಾಗಿ ಅಹಿತ ಪೈಪೋಟಿ. ಜನತಾಪಕ್ಷ ಉಳಿಯಬೇಕಾದರೆ, ಆ ಪಕ್ಷ ಮಾಮೂಲಿ ರಾಜಕಾರಣವನ್ನು ತ್ಯಜಿಸಿ, ಆದರ್ಶ ಮತ್ತು ನೈತಿಕ ಮೌಲ್ಯಗಳಿಂದ ಕೂಡಿದ ರಾಜಕಾರಣವನ್ನು ಅನುಷ್ಠಾನಕ್ಕೆ ತರಬೇಕು. ಅಧಿಕಾರದಲ್ಲಿರುವ ಯಾವ ಪಕ್ಷವೇ ಆಗಲಿ, ಪಕ್ಷಕ್ಕೆ ಸೇರಿದ ಎಲ್ಲ ಶಾಸಕರನ್ನೂ ಮಂತ್ರಿಗಳನ್ನಾಗಿ ಮಾಡಲಾಗುವುದಿಲ್ಲ.

ಮಂತ್ರಿ ಪದವಿ ಸಿಕ್ಕಲಿಲ್ಲವೆಂಬ ಕಾರಣದಿಂದ ಜನತಾ ಶಾಸಕರು ಅತೃಪ್ತರಾಗಿ, ಪಕ್ಷದ ಐಕ್ಯಕ್ಕೆ ಭಂಗ ಬರುವ ರೀತಿಯಲ್ಲಿ ವರ್ತಿಸಿದರೆ ಪಕ್ಷ ಬಹಳ ಕಾಲ ಉಳಿಯಲಾರದು. ಶಾಸಕರನ್ನು ವಿವಿಧ ನಿಗಮಗಳ ಅಥವಾ ಮಂಡಳಿಗಳ ಅಧ್ಯಕ್ಷರನ್ನಾಗಿ ಮಾಡುವುದು ತಪ್ಪು.

ರಾಜಕೀಯ ಮತ್ತು ಆಡಳಿತವನ್ನಾವರಿಸಿರುವ ದುರ್ವ್ಯವಹಾರಗಳನ್ನೂ, ಭ್ರಷ್ಟಾಚಾರವನ್ನೂ ತಡೆಗಟ್ಟಲು ಜನತಾ ಸರ್ಕಾರ ಹೃತ್ಪೂರ್ವಕ ಪ್ರಯತ್ನ ಮಾಡಬೇಕು. ರಾಜಕೀಯ ಭ್ರಷ್ಟಾಚಾರ ನಿರ್ಮೂಲವಾಗಬೇಕಾದರೆ, ಮಂತ್ರಿಗಳೂ ಶಾಸಕರೂ ಆದರ್ಶ ರೀತಿಯಲ್ಲಿ ಇತರರಿಗೆ ಮಾದರಿಯಾಗುವಂತೆ ಬಾಳಬೇಕು. ಈ ದೇಶದಲ್ಲಿ ಪ್ರಧಾನಮಂತ್ರಿಯಾಗಿ ಕೇಂದ್ರ ಹಾಗೂ ವಿವಿಧ ರಾಜ್ಯಗಳ ಎಲ್ಲಾ ಮಂತ್ರಿಗಳೂ, ಪಾರ್ಲಿಮೆಂಟ್ ಸದಸ್ಯರೂ ಮತ್ತು ವಿವಿಧ ರಾಜ್ಯಗಳ ಶಾಸಕರೂ, ಉನ್ನತ ಮಟ್ಟದ ಅಧಿಕಾರಿಗಳೂ ಪ್ರಾಮಾಣಿಕರಾಗಿ, ನಿಷ್ಠೆಯಿಂದ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿರ್ವಹಿಸಿದರೆ ಈ ದೇಶದ ಅರೆವಾಸಿ ಸಮಸ್ಯೆಗಳು ತಮ್ಮಷ್ಟಕ್ಕೆ ತಾವೇ ಬಗೆ ಹರಿಯುತ್ತವೆ. ಮಂತ್ರಿಗಳು ಪ್ರಾಮಾಣಿಕರಾಗಿ, ಬುದ್ಧಿವಂತರಾಗಿದ್ದರೆ ಅಧಿಕಾರಿಗಳು ಅವರನ್ನು ಗೌರವಿಸುತ್ತಾರೆ ಮತ್ತು ಅವರಿಗೆ ಅಂಜಿ ನಡೆಯುತ್ತಾರೆ. ಆ ಪ್ರಾಮಾಣಿಕ ಮಂತ್ರಿಗಳ ವಿಚಾರದಲ್ಲಿ ಜವಾನರಿಗೂ ಕೂಡ ಗೌರವವಿರುವುದಿಲ್ಲ. ಮಂತ್ರಿಗಳಾಗುವುದು ಅಥವಾ ಶಾಸಕರಾಗುವುದು ಮಹಾದೊಡ್ಡ ಸಾಧನೆ ಏನೂ ಅಲ್ಲ. ಕ್ರಿಮಿನಲ್ ಕೈದಿಗಳಾಗಿ ಸದಾ ಸೆರೆಮನೆಯಲ್ಲಿರಬೇಕಾಗಿದ್ದ ಕೆಲವರು ಈ ದೇಶದಲ್ಲಿ ಮುಖ್ಯಮಂತ್ರಿಗಳಾಗಿ, ಮಂತ್ರಿಗಳಾಗಿ ಅಥವಾ ಶಾಸಕರಾಗಿ ದರ್ಬಾರು ಮಾಡಿದ ನಿದರ್ಶನಗಳು ಕೆಲವು ಇವೆ. ಅಧಿಕಾರ ಸ್ಥಾನ ಬಂದಾಗ ದೇವರು ಹಾಗೂ ಜನರು ಮೆಚ್ಚುವಂತೆ ವರ್ತಿಸಿದರೆ ಅದೇ ದೊಡ್ಡ ಸಾಧನೆ. ಹಿಂದಿನ ಮಂತ್ರಿಮಂಡಲದಲ್ಲಿದ್ದ ಕೆಲವರು ಮಂತ್ರಿಗಳ ಮೇಲೆ ಆಗಾಗ ಲಂಚದ ಅಪಾದನೆಯ ಒಡಕು ಶಬ್ದಗಳನ್ನು ಕೇಳುತ್ತಿದ್ದೆ. ಅವರ ಪೈಕಿ ಕೆಲವರು ಈ ಮಂತ್ರಿಮಂಡಲದಲ್ಲೂ ಇದ್ದಾರೆ. ಅವರ ಮೇಲಿನ ಅಪಾದನೆಗಳು ನಿರಾಧಾರವಾಗಿದ್ದರೂ ಇರಬಹುದು ಅಥವಾ ನಿಜವಿದ್ದರೂ ಇರಬಹುದು. ಆದರೆ ಪದೇ ಪದೇ ಒಡಕು ಶಬ್ದಗಳು ಜನರ ಬಾಯಿಂದ ಬಂದರೆ, ಜನರು ಅದನ್ನು ನಂಬುತ್ತಾರೆ. ದಿವಂಗತ ಶ್ರೀ ಕೆಂಗಲ್ ಹನುಮಂತಯ್ಯನವರ ಮಂತ್ರಿ ಮಂಡಲದಲ್ಲಿ ನಾನು ಮಂತ್ರಿಯಾಗಿದ್ದಾಗ, ೧೯೫೨ ರಲ್ಲಿ ದಿವಂಗತ ಪ್ರಧಾನಿ ಪಂಡಿತ್ ಜವಹರಲಾಲ್ ನೆಹರೂ ಅವರು ಈ ದೇಶದ ಎಲ್ಲ ಮುಖ್ಯಮಂತ್ರಿಗಳಿಗೂ ಒಂದು ಕಾಗದ ಬರೆದಿದ್ದರು. ಆ ಕಾಗದದಲ್ಲಿ ಅವರು ಕಾಂಗ್ರೆಸ್ ಮಂತ್ರಿಗಳೂ ಮತ್ತು ಶಾಸಕರೂ ನಿಜವಾಗಿಯೂ

ಪ್ರಾಮಾಣಿಕರಾಗಿರುವುದೇ ಅಲ್ಲದೆ, ತಾವು ಪ್ರಾಮಾಣಿಕರೆಂದು ಸಾರ್ವಜನಿಕರಿಗೆ ತೋರ್ಪಡಿಸಿಕೊಳ್ಳಬೇಕೆಂದು ಬರೆದಿದ್ದರು. ಈ ವಿಚಾರವನ್ನು ಜನತಾ ಮಂತ್ರಿಗಳ ಮತ್ತು ಶಾಸಕರ ಗಮನಕ್ಕೆ ತರಲು ಇಚ್ಛಿಸುತ್ತೇನೆ.

## ಸ್ವಚ್ಛ ರಾಜಕಾರಣ

ಕಳೆದ ಸುಮಾರು ೧೦ ವರ್ಷಗಳಿಂದೀಚೆಗೆ ಕೇಂದ್ರ ಮತ್ತು ವಿವಿಧ ರಾಜ್ಯಗಳಲ್ಲಿ ಅಧಿಕಾರದಲ್ಲಿದ್ದ ಹೆಚ್ಚು ಕಡಿಮೆ ಎಲ್ಲ ರಾಜಕೀಯ ಪಕ್ಷಗಳೂ ಸರ್ಕಾರದ ಆಡಳಿತ ಯಂತ್ರವನ್ನು ಅಥವಾ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟ ಸಂಸ್ಥೆಗಳನ್ನು ದುರುಪಯೋಗಪಡಿಸಿಕೊಂಡು, ತಮ್ಮ ತಮ್ಮ ಪಕ್ಷಗಳ ಖರ್ಚುವೆಚ್ಚಕ್ಕಾಗಿ ಪಕ್ಷದ ನಿಧಿಯ ಹೆಸರಿನಲ್ಲಿ ಹಣವನ್ನು ಸಂಗ್ರಹಿಸುತ್ತಾ ಬಂದಿದ್ದಾರೆ. ಅಧಿಕಾರದಲ್ಲಿದ್ದ ಮಂತ್ರಿಗಳು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿದ್ದಲ್ಲದೆ, ಕೆಲವು ಸಂದರ್ಭಗಳಲ್ಲಿ ತಮ್ಮ ಕೈಕೆಳಗಿನ ಅಧಿಕಾರಿಗಳನ್ನು ಕೂಡ ನಿಧಿ ಸಂಗ್ರಹಣೆಯ ಏಜೆಂಟ್ಗಳನ್ನಾಗಿ ಮಾಡಿಕೊಂಡ ಉದಾಹರಣೆಗಳಿವೆ. ಈ ಹೊಲಸು ಪದ್ಧತಿಯಿಂದ ರಾಷ್ಟ್ರದಾದ್ಯಂತ ಆಡಳಿತ ಯಂತ್ರ ಹೊಲಸಾಗಿದೆ. ಇದರಿಂದ ಕಳೆದ ಹತ್ತು ವರ್ಷಗಳಲ್ಲಿ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರ ಒಂದಕ್ಕೆ ನೂರರಷ್ಟು ಹೆಚ್ಚಾಗಿದೆ. ಈ ದೇಶದ ಯಾ ರಾಜಕೀಯ ಪಕ್ಷವೂ ಕೂಡಾ ತನ್ನ ಪಕ್ಷದ ಆದಾಯವೆಚ್ಚದ ಬಗ್ಗೆ ಕ್ರಮವಾದ ಮತ್ತು ನಿಜವಾದ ಲೆಖ್ಖವನ್ನಿಟ್ಟಿರುವುದಿಲ್ಲ. ನಮ್ಮ ಯುವಪ್ರಧಾನಿ ಶ್ರೀ ರಾಜೀವಗಾಂಧಿಯವರು ಈ ದೇಶದ ಕೆಲವು ಸಮಸ್ಯೆಗಳಿಗೆ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರವೇ ಕಾರಣವೆಂಬುದನ್ನು ಮನಗಂಡಿರುವುದು ಒಂದು ಶುಭಸೂಚನೆ. ಭ್ರಷ್ಟಾಚಾರವನ್ನು ನಿರ್ಮೂಲ ಮಾಡಿ, ದಕ್ಷತೆಯಿಂದ ಕೂಡಿದ ಸ್ವಚ್ಛ ಆಡಳಿತವನ್ನು ಅನುಷ್ಠಾನಕ್ಕೆ ತರಬೇಕೆಂಬ ಹಂಬಲ ಅವರಿಗೆ ಇದ್ದಂತೆ ತೋರುತ್ತದೆ. ಅವರ ಪ್ರಯತ್ನ ಸಫಲವಾಗಬೇಕಾದರೆ ಮೊದಲು ಅವರು ಅವರ ಪಕ್ಷದ ರಾಜಕಾರಣವನ್ನು ಸ್ವಚ್ಛಗೊಳಿಸಬೇಕು. ಅಲ್ಲದೆ ರಾಜಕೀಯ ಪಕ್ಷಗಳು ತಮ್ಮ ಆದಾಯ ವೆಚ್ಚಗಳ ಬಗ್ಗೆ ಕ್ರಮವಾಗಿ ಲೆಕ್ಕ ಇಡುವಂತೆ ಮಾಡುವುದಕ್ಕಾಗಿ ಕಾನೂನನ್ನು ಮಾಡಬೇಕು. ಕರ್ನಾಟಕದ ಜನತಾ ಸರ್ಕಾರ ಈ ವಿಚಾರದಲ್ಲಿ ಒಂದು ಸಂಪ್ರದಾಯವನ್ನು ಆಚರಣೆಗೆ ತರಬೇಕೆಂದು ನಾನು ಮನವಿ ಮಾಡುತ್ತೇನೆ.

## ದುಂದು ವೆಚ್ಚ

ಈ ರಾಜ್ಯದಲ್ಲಿ ಕೆಲವು ಇಲಾಖೆಗಳಲ್ಲಿ ಅನಾವಶ್ಯಕ ಸಿಬ್ಬಂದಿ ಇರುತ್ತದೆ. ಮೂರು

ಜನ ಅಧಿಕಾರಿಗಳು ನಡೆಸಬಹುದಾದ ಕೆಲಸಕ್ಕೆ ಹತ್ತು ಜನರನ್ನು ನೇಮಿಸಿರುತ್ತಾರೆ. ಅನಾವಶ್ಯಕ ಸಿಬ್ಬಂದಿ, ದುಂದು ವೆಚ್ಚ, ಲಂಚ ಇವುಗಳ ದೆಸೆಯಿಂದ ಕೇಂದ್ರ ಮತ್ತು ವಿವಿಧ ರಾಜ್ಯ ಸರ್ಕಾರಗಳು ಪಂಚವಾರ್ಷಿಕ ಯೋಜನೆಗಳಿಗೆ ಸಂಬಂಧಪಟ್ಟ ಕೆಲವು ಕಾಮಗಾರಿಗಳಿಗಾಗಿ ಸರ್ಕಾರಿ ಬೊಕ್ಕಸದಿಂದ ಖರ್ಚು ಮಾಡತಕ್ಕ ಹಣದಲ್ಲಿ ಅರೆವಾಸಿಯಷ್ಟು ಸೋರಿ ಹೋಗುತ್ತದೆ. ಈ ರೀತಿ ಸೋರಿಹೋಗುವುದನ್ನು ತಪ್ಪಿಸಲು ಜನತಾ ಸರ್ಕಾರ ಸರ್ವಪ್ರಯತ್ನವನ್ನೂ ಮಾಡಬೇಕು. ಪ್ರಥಮ ಮತ್ತು ದ್ವಿತೀಯ ಯೋಜನೆಗಳ ಅವಧಿಯಲ್ಲಿ ಕೇಂದ್ರದಲ್ಲಿ ಮತ್ತು ರಾಜ್ಯಗಳಲ್ಲಿ ಅಧಿಕಾರ ಸ್ಥಾನದಲ್ಲಿದ್ದ ರಾಜಕಾರಣಿಗಳು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ್ದ, ನಿಷ್ಠಾವಂತ, ಪ್ರಾಮಾಣಿಕ ವ್ಯಕ್ತಿಗಳಾಗಿದ್ದರು. ಅಂದು ಅಧಿಕಾರಿಗಳಲ್ಲಿ ಬಹುಮಂದಿ ದಕ್ಷತೆ ಮತ್ತು ಪ್ರಾಮಾಣಿಕತೆಯಿಂದ ಕೂಡಿದ ಸಮರ್ಥರಾಗಿದ್ದರು. ಆದ್ದರಿಂದಲೇ ಪ್ರಥಮ ಮತ್ತು ದ್ವಿತೀಯ ಯೋಜನೆಗಳು ಯಶಸ್ವಿಯಾಗಿ ಕಾರ್ಯಗತವಾದವು. ಅನಂತರ ರಾಜಕಾರಣ ಮತ್ತು ಆಡಳಿತ ಹದಗೆಡುತ್ತಾ ಬಂದುದರಿಂದ ಯೋಜನೆಗಳ ಅನುಷ್ಠಾನಕ್ಕಾಗಿ ಖರ್ಚುಮಾಡಿದ್ದ ಹಣದ ಪ್ರಮಾಣಕ್ಕನುಗುಣವಾಗಿ ಪ್ರಗತಿ ಜರುಗಿಲ್ಲ. ಹಣವೇನೋ ಯಥೇಚ್ಛವಾಗಿ ಖರ್ಚಾಯಿತು. ಆದರೆ ಜನಸಾಮಾನ್ಯರ ಬಾಳು ಉತ್ತಮವಾಗಲಿಲ್ಲ; ಕಡುಬಡವರ ಸಂಖ್ಯೆ ಕಡಿಮೆಯಾಗಲಿಲ್ಲ.

## ಭ್ರಷ್ಟ ಅಧಿಕಾರಿಗಳು

ದುರಾಡಳಿತ ಮತ್ತು ಭ್ರಷ್ಟಾಚಾರಗಳಿಗೆ ರಾಜಕಾರಣಿಗಳನ್ನು ಮಾತ್ರ ಹೊಣೆ ಮಾಡುವುದು ತಪ್ಪು. ಸರ್ಕಾರಿ ಅಧಿಕಾರಿಗಳೂ ಬಹಳ ಮಟ್ಟಿಗೆ ಕಾರಣ. ಎಲ್ಲ ಇಲಾಖೆಗಳಲ್ಲೂ, ಎಲ್ಲಾ ಹಂತದಲ್ಲೂ, ಸಮರ್ಥರೂ ಪ್ರಾಮಾಣಿಕರೂ ಆಗಿರುವ ಅಧಿಕಾರಿಗಳು ಇದ್ದಾರೆ. ಅವರ ವಿಚಾರದಲ್ಲಿ ನನಗೆ ಗೌರವವಿದೆ. ಆದರೆ ಅಂತಹ ಅಧಿಕಾರಿಗಳ ಸಂಖ್ಯೆ ಕಡಿಮೆ. ಈ ದೇಶದ ಬಹುಮಂದಿ ಅಧಿಕಾರಿಗಳು. ಅಪ್ಪಟ ಲಂಚಕೋರರರು ಹಾಗೂ ಅಸಮರ್ಥರು. ನಮ್ಮ ದೇಶದ ಅಧಿಕಾರಿಗಳು ಪ್ರಾಮಾಣಿಕತೆಯಿಂದ ಮತ್ತು ದಕ್ಷತೆಯಿಂದ ಕರ್ತವ್ಯ ನಿರ್ವಹಣೆ ಮಾಡಿದ್ದರೆ, ಈ ದೇಶದ ಪರಿಸ್ಥಿತಿಯೇ ಬೇರೆಯಾಗುತ್ತಿತ್ತು. ಕೆಲವು ಅಧಿಕಾರಿಗಳಿಗೆ ಬುದ್ಧಿಗಿಂತ ದುರಹಂಕಾರವೇ ಹೆಚ್ಚು. ಅವರು ಮಂತ್ರಿಗಳೊಡನೆ ಅಥವಾ ಮೇಲಾಧಿಕಾರಿಗಳೊಡನೆ ವ್ಯವಹರಿಸುವಾಗ ದಾಸಾನುದಾಸರಂತೆ ವರ್ತಿಸುತ್ತಾರೆ. ತಮ್ಮ ಕೈಕೆಳಗಿನ ಅಧಿಕಾರಿಗಳೊಡನೆ ಅಥವಾ ಸಾರ್ವಜನಿಕರೊಡನೆ ವ್ಯವಹರಿಸುವಾಗ ಸರ್ವಾಧಿಕಾರಿಗಳಂತೆ ವರ್ತಿಸುತ್ತಾರೆ. ವಿವಿಧ ಹಂತಗಳಲ್ಲಿ ಮೇಲ್ವಿಚಾರಣೆ

ಮಾಡಬೇಕಾಗಿರುವ ಅಧಿಕಾರಿಗಳು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡಿದ್ದರೆ, ಈ ದೇಶದ ಸಾರ್ವಜನಿಕ ಆಡಳಿತ ಉತ್ತಮವಾಗಿರುತ್ತಿತ್ತು. ಮೇಲ್ವಿಚಾರಣೆ ಮಾಡತಕ್ಕ ಜವಾಬ್ದಾರಿಯನ್ನು ಹೊಂದಿರುವ ಅಧಿಕಾರಿಗಳಿಗೆ ಆಡಳಿತವನ್ನು ದುರಸ್ತು ಮಾಡಬೇಕೆಂಬ ಹಂಬಲವೇ ಇರುವುದಿಲ್ಲ. ಮೇಲ್ವಿಚಾರಣೆ ಮಾಡುವ ಅಧಿಕಾರಿಗಳೂ ಅವರ ಕೈ ಕೆಳಗಿನ ಅಧಿಕಾರಿಗಳೂ ಲಂಚದ ವ್ಯವಹಾರದಲ್ಲಿ ಷರೀಕಾಗಿರುವುದರಿಂದ ಮೇಲ್ವಿಚಾರಣೆಯ ಹೊಣೆ ಹೊತ್ತಿರುವ ಅಧಿಕಾರಿಗಳು ನಿರಾಸಕ್ತಿ ತಾಳಿದ್ದಾರೆ. ಈ ದೇಶದಲ್ಲಿರುವ ಒಟ್ಟು ಹಣದಲ್ಲಿ ಶೇ. ೫೦ ರಷ್ಟು ಕಪ್ಪು ಹಣವೆಂದು ಕೆಲವರು ಅಂದಾಜು ಮಾಡುತ್ತಿದ್ದಾರೆ. ಈ ಕಪ್ಪು ಹಣದ ಪೈಕಿ ಶೇ. ೩೦ ರಷ್ಟು ಈ ದೇಶದ ಭ್ರಷ್ಟ ಅಧಿಕಾರಿಗಳ ಕೈಯಲ್ಲಿದೆ ಎಂದು ನನ್ನ ಅಂದಾಜು. ಈ ಭ್ರಷ್ಟ ಅಧಿಕಾರಿಗಳಿಗೆ ಮಾನವೀಯ ಅನುಕಂಪವಾಗಲೀ ಆತ್ಮಸಾಕ್ಷಿಯಾಗಲೀ ಇದ್ದಂತೆ ತೋರಲಿಲ್ಲ. ಈ ಲಂಚಕೋರರ ಕಿರುಕುಳವನ್ನು ಸಹಿಸುವುದು ಜನಸಾಮಾನ್ಯರಿಗೆ ಬಹಳ ಕಷ್ಟವಾಗಿದೆ. ಈ ಭ್ರಷ್ಟ ಅಧಿಕಾರಿಗಳ ಹಾವಳಿಯನ್ನೂ ಕಿರುಕುಳವನ್ನೂ ತಪ್ಪಿಸಲು ಜನತಾ ಸರಕಾರ ಸರ್ವ ಪ್ರಯತ್ನ ಮಾಡಬೇಕು.

### ಶಿಕ್ಷಣದಲ್ಲಿ ಸುಧಾರಣೆ

ಜನತಾ ಸರ್ಕಾರ ಹಳ್ಳಿಗರ ಮತ್ತು ದೀನ ದಲಿತರ ಉದ್ಧಾರಕ್ಕಾಗಿ ಪರಿಣಾಮಕಾರಿಯಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಆವಶ್ಯಕ. ಇದುವರೆಗೆ ಈ ಬಗ್ಗೆ ಕೈಗೊಂಡ ಹಲವು ಯೋಜನೆಗಳಿಂದ ಯಥೇಚ್ಛ ಹಣ ಖರ್ಚಾಗಿದೆಯೆ ಹೊರತು, ಖರ್ಚಿಗನುಗುಣವಾದ ಪ್ರತಿಫಲ ದೊರೆತಿಲ್ಲ. ವ್ಯವಸಾಯಗಾರರೂ ಮತ್ತು ವ್ಯವಸಾಯದ ಕೂಲಿಕಾರರೂ ಉಳಿದೆಲ್ಲಾ ವರ್ಗಗಳ ಜನರಿಗಿಂತ ಹೀನ ಪರಿಸ್ಥಿತಿಯಲ್ಲಿದ್ದಾರೆ. ಶೇ.೬೦ ಎಷ್ಟು ವ್ಯವಸಾಯಗಾರರು ಸರ್ಕಾರದ ಇಲಾಖೆಗಳಲ್ಲಿ ಮತ್ತು ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟ ಕಾರ್ಖಾನೆ ಮತ್ತಿತರ ಉದ್ಯಮಗಳಲ್ಲಿ ಕೆಲಸ ಮಾಡುತ್ತಿರುವ ಕನಿಷ್ಠ ದರ್ಜೆಯ ನೌಕರರಿಗಿಂತ ಹೀನಸ್ಥಿತಿಯಲ್ಲಿದ್ದಾರೆ. ಈ ಕನಿಷ್ಠ ದರ್ಜೆಯ ನೌಕರರ ಸಂಬಳ ಸಿಗುವುದಾದರೆ ಶೇ.೬೦ ರಷ್ಟು ಜನರು ಹಳ್ಳಿಗಳಿಂದ ಪಟ್ಟಣಕ್ಕೆ ವಲಸೆ ಹೋಗಲು ಸಿದ್ಧರಿದ್ದಾರೆ. ವ್ಯವಸಾಯದ ಕಾರ್ಮಿಕರ ಸ್ಥಿತಿ ಇನ್ನೂ ಹೀನ. ಪಟ್ಟಣಗಳಲ್ಲಿ ಸಂಘಟಿತರಾಗಿರುವ ಕಾರ್ಮಿಕರು ಪದೇ ಪದೇ ಹೆಚ್ಚು ವೇತನಕ್ಕಾಗಿ ಮುಷ್ಕರ ಹೂಡುತ್ತಿರುತ್ತಾರೆ. ಈ ಕಾರ್ಮಿಕರಿಗೆ ತಮಗಿಂತಾ ಹತ್ತರಷ್ಟು ಹೀನಸ್ಥಿತಿಯಲ್ಲಿ ಕೋಟಿಗಟ್ಟಲೆ ಜನರಿದ್ದಾರೆಂಬ ಅರಿವು ಇರುವಂತೆ ತೋರುತ್ತಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆಯಾಗಬೇಕೆಂದು ಎಲ್ಲರೂ ಹೇಳುತ್ತಾರೆ. ಶಿಕ್ಷಣದ ಮಟ್ಟ

ಉತ್ತಮವಾಗಬೇಕಾದರೆ ಉತ್ತಮ ಶಿಕ್ಷಕರು ಆವಶ್ಯಕ. ಆದುದರಿಂದ ಶಿಕ್ಷಣ ಸುಧಾರಣೆಯ ಮೊದಲ ಹಂತವಾಗಿ ಶಿಕ್ಷಕರನ್ನು ಸುಧಾರಿಸಲು ಕ್ರಮ ಕೈಗೊಳ್ಳಬೇಕು. ಇಂದಿನ ಶಿಕ್ಷಕ ವರ್ಗದಲ್ಲಿ ಬಹುಮಂದಿ ಶಿಕ್ಷಕರಲ್ಲಿ ಆದರ್ಶವೂ ಕಾಣುವುದಿಲ್ಲ; ರಾಷ್ಟ್ರ ಪ್ರೇಮವೂ ಕಾಣುವುದಿಲ್ಲ. ನಾವು ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳ ಅಶಿಸ್ತಿನ ಶಿಕ್ಷಕರೇ ಬಹುಮಟ್ಟಿಗೆ ಕಾರಣವೆಂದರೆ ತಪ್ಪಾಗಲಾರದು. ವಿಶ್ವವಿದ್ಯಾಲಯಗಳು ನಿರುದ್ಯೋಗಿ ಪದವೀಧರರನ್ನು ತಯಾರು ಮಾಡುವ ಕೇಂದ್ರಗಳಾಗಿವೆ. ಅವುಗಳು ನೀಡುತ್ತಿರುವ ಪದವಿಗಳು ಪ್ರೌಢಿಮೆ ಮತ್ತು ಸಂಸ್ಕಾರಗಳ ಸಂಕೇತವಾಗಿಲ್ಲ. ಪದವಿಗಳು ಕಾಲೇಜಿನಲ್ಲಿ ವ್ಯಾಸಂಗ ಮಾಡಿದ್ದಾರೆಂಬುದನ್ನು ಮಾತ್ರ ಸೂಚಿಸುತ್ತವೆ. ಇಂದಿನ ಪದವಿಗಳಿಂದ ಪದವಿಯನ್ನು ಪಡೆದವರಿಗೂ ಪ್ರಯೋಜನವಿಲ್ಲ. ಅವರ ತಂದೆ ತಾಯಿಯರಿಗೂ ಪ್ರಯೋಜನವಿಲ್ಲ, ರಾಷ್ಟ್ರಕ್ಕೂ ಪ್ರಯೋಜನವಿಲ್ಲ. ಆದ್ದರಿಂದ ಹೊಸ ವಿಶ್ವವಿದ್ಯಾಲಯಗಳನ್ನೂ, ಕಾಲೇಜುಗಳನ್ನೂ ಆರಂಭಿಸುವ ಬದಲು ಪ್ರಾಥಮಿಕ ಮತ್ತು ಔದ್ಯೋಗಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಧಾನ್ಯ ನೀಡಬೇಕು. ಜನಸಂಖ್ಯೆ ಮತ್ತು ಕಳ್ಳಹಣದ ಸ್ಫೋಟ ಈ ದೇಶದ ಹಲವು ಸಮಸ್ಯೆಗಳಿಗೆ ಕಾರಣವಾಗಿವೆ. ಸಂತಾನ ನಿಯಂತ್ರಣಕ್ಕೆ ಅದ್ಯತೆ ನೀಡುವುದು ಸರ್ಕಾರದ ಕರ್ತವ್ಯ. ಅಂತೆಯೇ ಕಳ್ಳಹಣದ ಉತ್ಪಾದನೆಗೆ ಕಾರಣಕರ್ತರಾದ, ಆರ್ಥಿಕ ಅಪರಾಧಗಳಲ್ಲಿ ತೊಡಗಿರುವ ಕಳ್ಳ ಸಾಗಾಣಿಕೆಯವರನ್ನು, ಕಳ್ಳ ವ್ಯಾಪಾರಿಗಳನ್ನು ಮತ್ತು ಇತರೆ ಅಕ್ರಮ ವ್ಯವಹಾರದಲ್ಲಿ ತೊಡಗಿರುವವರನ್ನು ನಿಗ್ರಹಿಸಲು ಸೂಕ್ತಕ್ರಮ ಆವಶ್ಯಕ.

## ದಿನಚರಿ ಆಡಳಿತ

ದಿನಚರಿಯ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಮೂಡುವಂತೆ ಮಾಡಬೇಕು. ಹಿಂದೆ, ೧೯೭೭ರಲ್ಲಿ ಜನತಾ ಸರ್ಕಾರ ಅಧಿಕಾರಕ್ಕೆ ಬಂದ ತರುಣದಲ್ಲಿ ಕೆಲವರು ಮಂತ್ರಿಗಳು ಸುಮಾರು ಆರುತಿಂಗಳ ಕಾಲ ಸರ್ಕಾರಿ ಅಧಿಕಾರಿಗಳ ವರ್ಗಾವರ್ಗಿಯಲ್ಲಿ ಕಾಲಹರಣ ಮಾಡಿದ್ದರು. ಈ ಸಾರಿ ಹಾಗಾಗಬಾರದು. ಜನತಾ ಶಾಸಕರು ಸರ್ಕಾರಿ ಅಧಿಕಾರಿಗಳು ಕೈಗೊಂಬೆಗಳಾಗಿ ಅವರ ವರ್ಗಾವರ್ಗಿ, ಬಡ್ತಿ ಇವುಗಳ ಬಗ್ಗೆ ಮಂತ್ರಿಗಳ ಮೇಲೆ ಒತ್ತಾಯತರುವುದಕ್ಕಿಂತ. ಸಾರ್ವಜನಿಕರ ಕುಂದು ಕೊರತೆಗಳ ಬಗ್ಗೆ ಹೆಚ್ಚು ಶ್ರದ್ಧೆವಹಿಸಬೇಕು. ಯಾವ ಸಂದರ್ಭದಲ್ಲೂ ಲಂಚಕೋರ ಅಧಿಕಾರಿಗಳ ಪರ ವಕಾಲತ್ತು ವಹಿಸಬಾರದು. ಭೂ ನ್ಯಾಯಮಂಡಳಿಗಳಲ್ಲಿ ನಡೆಯುತ್ತಿರುವ ಭ್ರಷ್ಟಾಚಾರ, ಪಕ್ಷಪಾತ ಮುಂತಾದುವುಗಳ ವಿಚಾರದಲ್ಲಿ ಪದೇ ಪದೇ ಸರ್ಕಾರದ ಗಮನವನ್ನು ಸೆಳೆಯುತ್ತಿದ್ದೇನೆ. ಭೂ ನ್ಯಾಯ ಮಂಡಳಿಗಳಿಗೆ ಸದಸ್ಯರನ್ನು ನೇಮಕ ಮಾಡುವಾಗ ಪಕ್ಷದ ಹಿತವನ್ನು

ಗಮನದಲ್ಲಿಟ್ಟುಕೊಳ್ಳದೆ, ಯಾವ ರಾಜಕೀಯ ಪಕ್ಷಕ್ಕೂ ಸೇರದ ಪ್ರಾಮಾಣಿಕ ವ್ಯಕ್ತಿಗಳನ್ನೂ ಹುಡುಕಿ ನೇಮಿಸಬೇಕು. ಭೂನ್ಯಾಯ ಮಂಡಳಿಗಳ ತೀರ್ಪಿನ ವಿರುದ್ಧ ಅಂತಿಮ ತೀರ್ಮಾನವನ್ನು ಕೈಗೊಳ್ಳುವ ಅಧಿಕಾರವುಳ್ಳ ಒಂದು ನ್ಯಾಯ ಮಂಡಳಿಯನ್ನು ಜಿಲ್ಲಾ ಮಟ್ಟದಲ್ಲಿ ನೇಮಕ ಮಾಡಬೇಕು. ಸರ್ಕಾರಿ ನೌಕರರನ್ನು ನೇಮಕ ಮಾಡುವ ಸಲುವಾಗಿ ರಚಿಸಿರುವ ಸಮಿತಿಗಳಲ್ಲಿ ಲಂಚದ ಕೈವಾಡ ವಿಶೇಷವಾಗಿದೆಯೆಂದು ನಾನು ಕೇಳಿದ್ದೇನೆ. ಇದನ್ನು ತಡೆಗಟ್ಟುವುದು ಬಹಳ ಅಗತ್ಯ. ಹೇಳಲು ಇನ್ನೂ ಬೇಕಾದಷ್ಟಿದೆ, ಆದರೆ ಸದ್ಯಕ್ಕೆ ಇಷ್ಟೇ ಸಾಕು.

ಪ್ರಜಾಮತ ೦೭.೦೫.೧೯೮೫

# ಆತ್ಮಸಾಕ್ಷಿ ಮಾನವೀಯ ಅನುಕಂಪ ಎರಡೂ ಇಲ್ಲದ ಲಂಚಕೋರ ಹಾಗೂ ಭ್ರಷ್ಟಾಚಾರ ಬಕಪಕ್ಷಿಗಳು

ಜಗತ್ತಿನ ಏಳನೇ ಒಂದು ಭಾಗದಷ್ಟು ಜನರಿರುವ ಭಾರತವು ಇಡೀ ಜಗತ್ತಿನಲ್ಲಿ ಬಹುದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾಗಿದೆ. ಕಳೆದ ಮೂವತ್ತೆಂಟು ವರ್ಷಗಳ ಅವಧಿಯಲ್ಲಿ ಜನರೂ, ಜನನಾಯಕರೂ ಹಲವು ಅಕ್ಷಮ್ಯ ತಪ್ಪುಗಳನ್ನು ಮಾಡಿದ್ದರೂ ಕೆಲವು ಗಂಡಾಂತರ ಪ್ರಸಂಗಗಳು ಒದಗಿದ್ದರೂ ಈ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವು ಇನ್ನೂ ಉಳಿದುಕೊಂಡಿರುವುದು ಒಂದು ಹೆಮ್ಮೆಯ ಸಂಗತಿ. ಆದರೆ ಪ್ರಜಾಪ್ರಭುತ್ವ ಇಂದು ಸಾಗುತ್ತಿರುವ ರೀತಿನೀತಿಗಳು ಬಹಳ ಅತೃಪ್ತಿಕರವಾಗಿವೆ ಎಂದು ವಿಷಾದದಿಂದ ಹೇಳಬೇಕಾಗಿದೆ. ಇತ್ತೀಚಿನ ವರ್ಷಗಳಲ್ಲಿ ಕೆಲವು ಅಹಿತಕರವಾದ ಬೆಳವಣಿಗೆಗಳನ್ನೂ, ಕಳವಳಕಾರಿಯಾದ ಕೆಲವು ವಿದ್ಯಮಾನಗಳನ್ನು ನಾವು ಕಾಣುತ್ತಲಿದ್ದೇವೆ. ಬ್ರಿಟಿಷರ ಆಳ್ವಿಕೆ ಕೊನೆಗೊಂಡು, ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಕೆಲವು ಕ್ಷೇತ್ರಗಳಲ್ಲಿ ಗಣನೀಯ ಪ್ರಮಾಣದಲ್ಲಿ ಅಧೋಗತಿ ಪ್ರಾಪ್ತಿಯಾಗಿದೆ. ರಾಜಕಾರಣ ಮತ್ತು ಆಡಳಿತವನ್ನು ವ್ಯಾಪಿಸಿರುವ ಲಂಚದ ಪಿಡುಗು ಹಲವು ಸಮಸ್ಯೆಗಳನ್ನು ಸೃಷ್ಟಿಸಿದೆ. ಅಲ್ಲದೆ ರಾಷ್ಟ್ರದ ಪ್ರಗತಿಯನ್ನು ಬಹುಮಟ್ಟಿಗೆ ಕುಂಠಿತಗೊಳಿಸಿದೆ.

## ನೈತಿಕ ಅಧಃಪತನ

ಲಂಚವಿಲ್ಲದಿದ್ದ ಕಾಲವಾಗಲೀ, ದೇಶವಾಗಲೀ ಜಗತ್ತಿನ ಇತಿಹಾಸದಲ್ಲಿ ಎಂದೂ ಇರಲಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಈ ವ್ಯಾಧಿ ಎಲ್ಲಾ ರಾಷ್ಟ್ರಗಳಲ್ಲಿಯೂ ಇದ್ದೇ ಇದೆ. ಕಮ್ಯುನಿಸ್ಟ್ ರಾಷ್ಟ್ರಗಳೂ ಈ ವ್ಯಾಧಿಯಿಂದ ಪಾರಾಗಿಲ್ಲ. ಯಾವ ರಾಷ್ಟ್ರವೇ ಆಗಲಿ ಅಲ್ಪ ಸ್ವಲ್ಪ ಪ್ರಮಾಣದಲ್ಲಿ ಲಂಚ ಮತ್ತು ಇತರ ಭ್ರಷ್ಟಾಚಾರಗಳನ್ನು ಸುಲಭವಾಗಿ ದಕ್ಕಿಸಿಕೊಳ್ಳಬಹುದು. ಆದರೆ ಅವು ಹದ್ದುಮೀರಿದ ಪ್ರಮಾಣದಲ್ಲಿ ಬೆಳೆದರೆ ರಾಷ್ಟ್ರ ರೋಗಪೀಡಿತವಾಗಿ ಅವನತಿಯ ಹಾದಿ ಹಿಡಿಯುತ್ತದೆ. ಇದು ನನ್ನ ಮಾತಲ್ಲ; ಜಗತ್ತಿನ ಇತಿಹಾಸ ಮಾನವರಿಗೆ ಕಲಿಸಿಕೊಟ್ಟಿರುವ ಪಾಠ. ಯಾವ ದೇಶದಲ್ಲಿ ನೈತಿಕ ಮೌಲ್ಯಗಳು ಪ್ರಬಲವಾಗಿದ್ದು ಭ್ರಷ್ಟಾಚಾರದ ವಿರುದ್ಧ ಜನಾಭಿಪ್ರಾಯ ಪ್ರಬಲವಾಗಿರುತ್ತದೋ, ಆ ದೇಶದಲ್ಲಿ ಭ್ರಷ್ಟಾಚಾರ ಹದ್ದು ಮೀರಿದ ಪ್ರಮಾಣದಲ್ಲಿ ಬೆಳೆಯಲು ಅವಕಾಶವಿರುವುದಿಲ್ಲ. ಯಾವ ದೇಶದಲ್ಲಿ ನೈತಿಕ ಅಧಃಪತನ ಪ್ರಾಪ್ತಿಯಾಗಿ

ಪ್ರಜಾಭಿಪ್ರಾಯ ಕ್ಷೀಣವಾಗಿರುತ್ತದೋ, ಆ ದೇಶದಲ್ಲಿ ಭ್ರಷ್ಟಾಚಾರ ಹುಲುಸಾಗಿ ಬೆಳೆಯಲು ಅವಕಾಶವಾಗುತ್ತದೆ. ಪುರಾತನಕಾಲದಲ್ಲಿ ಭಾರತವು ಸತ್ಯಸಂಧರ ನಾಡೆಂದು ಪ್ರಸಿದ್ಧಿಯಾಗಿತ್ತು. ಆ ಕಾರಣದಿಂದಲೇ ವಿದೇಶಿಯರು ಭಾರತದ ಬಗ್ಗೆ ಗೌರವ ಭಾವನೆಯನ್ನು ತಾಳಿದ್ದರು. ಆ ಕಾಲದಲ್ಲಿ ಭಾರತಕ್ಕೆ ಭೇಟಿನೀಡಿದ್ದ ಚೀನಾದೇಶದ ಯಾತ್ರಿಕರೂ, ಅರಬ್ಬೀ ಸ್ಥಾನದ ಪ್ರವಾಸಿಗರೂ ಭಾರತ ಉಪಖಂಡದ ಜನರ ಸತ್ಯಸಂಧತೆಯನ್ನು ಬಾಯ್ತುಂಬ ಹೊಗಳಿದ್ದಾರೆಂಬುದು ಇತಿಹಾಸದಿಂದ ವೇದ್ಯವಾಗುತ್ತದೆ. ಕ್ರಿ.ಪೂ ೩೨೭ರಲ್ಲಿ ಭಾರತಕ್ಕೆ ದಂಡೆತ್ತಿ ಬಂದಿದ್ದ ಜಗತ್ಪ್ರಸಿದ್ಧ ಮಹಾಯೋಧ ಅಲೆಕ್ಸಾಂಡರನು ಭಾರತ ಉಪಖಂಡದ ಜನರ ಸತ್ಯಸಂಧತೆಯನ್ನೂ, ರಾಜ ಮಹಾರಾಜರುಗಳ ಶೌರ್ಯ ಪರಾಕ್ರಮಗಳನ್ನೂ ಬಹುವಾಗಿ ಮೆಚ್ಚಿದ್ದನೆಂದು ಪ್ರತೀತಿ ಇದೆ.

ಅಲೆಕ್ಸಾಂಡರನ ನಂತರ ಒಬ್ಬರಾದ ಮೇಲೆ ಇನ್ನೊಬ್ಬರಂತೆ ವಿವಿಧ ದೇಶಗಳಿಂದ ದಂಡೆತ್ತಿ ಬಂದು ಈ ದೇಶವನ್ನು ಆಕ್ರಮಿಸಿದ್ದ ಪರಕೀಯರು ಆಡಳಿತ ಪದ್ಧತಿಯಲ್ಲಿ ಕೆಲವು ಅನಿಷ್ಟ ಪದ್ಧತಿಗಳನ್ನು ಆಚರಣೆಗೆ ತಂದಿದ್ದರು. ಆದರೂ ಕೂಡಾ ಜನಸಾಮಾನ್ಯರು ಮಾತ್ರ ಸತ್ಯಸಂಧರಾಗಿ ಪಾಪಭೀರುಗಳಾಗಿದ್ದರು. ಈ ಕಾರಣದಿಂದಲೇ ಮಹಾತ್ಮಾ ಗಾಂಧಿಯವರು ಬ್ರಿಟಿಷರ ವಿರುದ್ಧ ಅಹಿಂಸಾತ್ಮಕ ಹೋರಾಟವನ್ನು ಕೈಗೊಂಡಾಗ ಈ ದೇಶದ ಜನರು ಅವರಿಗೆ ಹೃತ್ಪೂರ್ವಕ ಬೆಂಬಲವನ್ನು ನೀಡಿದ್ದರು. ದುರಾದೃಷ್ಟವಶಾತ್ ಸ್ವಾತಂತ್ರ್ಯಲಭಿಸಿದ ನಂತರ ಕೇವಲ ಮೂವತ್ತೆಂಟು ವರ್ಷಗಳ ಅವಧಿಯಲ್ಲಿ ಈ ದೇಶದ ಜನರು ಸ್ವಾತಂತ್ರ ಹೋರಾಟ ಕಾಲದ ಆದರ್ಶಗಳನ್ನು ಸಂಪೂರ್ಣವಾಗಿ ಮರೆತಿದ್ದಾರೆ. ಇಂದು ಭ್ರಷ್ಟಾಚಾರ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದಿದೆ. ನಾನು ಅರ್ಧಶತಮಾನಕ್ಕೆ ಮೇಲ್ಪಟ್ಟು ಈ ದೇಶದ ಆಗುಹೋಗುಗಳನ್ನು ಅವಲೋಕಿಸುತ್ತಾ ಬಂದಿದ್ದೇನೆ. ಬ್ರಿಟಿಷರ ಮತ್ತು ಮೈಸೂರು ಮಹಾರಾಜರ ಆಳ್ವಿಕೆಯ ವೈಖರಿಯನ್ನು ನೋಡಿದ್ದವನು. ಅಂದು ಬಿಸಿರಕ್ತದ ಯುವಕನಾಗಿ ಸ್ವಾತಂತ್ರ್ಯ ಹೋರಾಟಗಾರನಾಗಿ ಬ್ರಿಟಿಷರ ಹಾಗೂ ಮೈಸೂರು ಮಹಾರಾಜರ ಆಳ್ವಿಕೆಯ ರೀತಿ ನೀತಿಗಳನ್ನು ತೀವ್ರವಾಗಿ ಟೀಕಿಸುತ್ತಿದ್ದೆನು. ಬ್ರಿಟಿಷರು ಈ ದೇಶವನ್ನು ನಾನಾ ವಿಧವಾಗಿ ಶೋಷಣೆಮಾಡುತ್ತಿದ್ದರೂ ಸಹ ಅವರು ಅನುದಿನದ ಆಡಳಿತದಲ್ಲಿ ಬಿಗಿ, ದರ್ಪ ಮತ್ತು ಪ್ರಾಮಾಣಿಕತೆಗಳಿದ್ದವು. ಕಟ್ಟುನಿಟ್ಟಾಗಿ ಕಾನೂನಿನ ಪರಿಪಾಲನೆ ನಡೆಯುತ್ತಿತ್ತು. ಬಹುಸಂಖ್ಯಾತ ಅಧಿಕಾರಿಗಳು ದಕ್ಷರಾಗಿ ಪ್ರಾಮಾಣಿಕರಾಗಿದ್ದರು. ಮೈಸೂರಿನ ನಾಲ್ವಡಿಕೃಷ್ಣರಾಜ ಒಡೆಯರ್‌ರವರ ಆಳ್ವಿಕೆ ಇಂದಿನ ಭಾರತದ ಸಾರ್ವಜನಿಕ ಆಡಳಿಕ್ಕಿಂತಾ

ಬಹಳ ಉತ್ತಮವಾಗಿತ್ತೆಂದರೆ ಯಾರೂ ಆಶ್ಚರ್ಯ ಪಡೆಬೇಕಾಗಿಲ್ಲ. ಇಂದಿನ ಕಾಲದ ತಾಲ್ಲೂಕು ಅಮಲ್ದಾರರುಗಳು ಈ ಕಾಲದ ಕೆಲವು ಜಿಲ್ಲಾ ಅಧಿಕಾರಿಗಳಿಗಿಂತಾ ಹೆಚ್ಚು ಪ್ರಾಮಾಣಿಕರಾಗಿ ದಕ್ಷರಾಗಿದ್ದರು.

## ಮಿತಿಮೀರಿದ ಪ್ರಮಾಣ

ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಸುಮಾರು ಹತ್ತು ವರ್ಷಗಳ ಕಾಲ ಈ ದೇಶದ ರಾಜಕೀಯ ಮತ್ತು ಆಡಳಿತ ಉತ್ತಮ ಈ ರೀತಿಯಲ್ಲಿದ್ದವು. ದೇಶದ ಆಗುಹೋಗುಗಳ ಸೂತ್ರ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಕಷ್ಟ ನಷ್ಟಗಳನ್ನನುಭವಿಸಿದ್ದ ರಾಷ್ಟ್ರಭಕ್ತರ ಕೈಯಲ್ಲಿದ್ದುದರಿಂದ ಆ ಕಾಲದಲ್ಲಿ ಮಂತ್ರಿಗಳ ಮತ್ತು ಶಾಸಕರ ಮೇಲೆ ಲಂಚದ ಅಪಾದನೆಗಳು ಕೇಳಿಬರುತ್ತಿರಲಿಲ್ಲ. ಅಲ್ಲೋ ಇಲ್ಲೋ ಕೆಲವು ಕಡೆಗಳಲ್ಲಿ ಮಂತ್ರಿಗಳ ಮತ್ತು ಶಾಸಕರ ಮೇಲೆ ಸ್ವಜನಪಕ್ಷಪಾತದ ಆಪಾದನೆಗಳು ಇದ್ದವು. ಸರ್ಕಾರಿ ಅಧಿಕಾರ ವರ್ಗದಲ್ಲಿ ಲಂಚ ಇದ್ದದ್ದು ನಿಜ. ಆದರೆ ಅದು ಮಿತಿಮೀರಿದ ಪ್ರಮಾಣದಲ್ಲಿರಲಿಲ್ಲ. ಅದೂ ಅಲ್ಲದೆ ಸಾಮಾನ್ಯವಾಗಿ ಉನ್ನತಮಟ್ಟದ ಅಧಿಕಾರಿಗಳ ಮೇಲೆ ಲಂಚದ ಆಪಾದನೆಗಳಿರಲಿಲ್ಲ. ಈ ಕಾರಣದಿಂದಲೇ ಮೊದಲನೆಯ ಮತ್ತು ಎರಡನೆಯ ಪಂಚವಾರ್ಷಿಕಯೋಜನೆಗಳು ಬಹಳ ಯಶಸ್ವಿಯಾಗಿ ಕಾರ್ಯಗತವಾಗಿದ್ದವು, ಯೋಜನೆಗಳ ಅನುಷ್ಠಾನಕ್ಕೆ ಖರ್ಚುಮಾಡಿದ ಹಣಕ್ಕನು ಗುಣವಾದ ಜನೋಪಯೋಗಿ ಕಾರ್ಯಗಳು ನಡೆದಿದ್ದವು.. ಆನಂತರ ಕಾರ್ಯಗತವಾದ ಪಂಚವಾರ್ಷಿಕ ಯೋಜನೆಗಳ ಸಲುವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಯಥೇಚ್ಛವಾಗಿ ಹಣವನ್ನು ಖರ್ಚುಮಾಡಿದ್ದರೂ ಕೂಡಾ ಖರ್ಚುಮಾಡಿದ ಹಣಕ್ಕನುಗುಣವಾದ ಪ್ರಯೋಜನ ಜನತೆಗೆ ಲಭಿಸಲಿಲ್ಲ. ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರವೇ ಈ ರೀತಿಯಾಗಲು ಕಾರಣ.

ಕಳೆದ ಸುಮಾರು ಎರಡು ದಶಕಗಳ ಅವಧಿಯಲ್ಲಿ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರ ಒಂದಕ್ಕೆ ನೂರರಷ್ಟು ಹೆಚ್ಚಾಗಿದೆ. ಇಂದು ಭ್ರಷ್ಟಾಚಾರ ಒಂದು ನೈತಿಕ ಸಮಸ್ಯೆಯಾಗಿ ಮಾತ್ರ ಉಳಿದಿಲ್ಲ. ಅದು ಪ್ರಬಲವಾದ ಕೆಲವು ಅರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಸೃಷ್ಟಿಸಿದೆ. ಕೇಂದ್ರ ಮತ್ತು ವಿವಿಧ ರಾಜ್ಯ ಸರ್ಕಾರಗಳು ಪಂಚವಾರ್ಷಿಕ ಯೋಜನೆಗಳ ಮತ್ತಿತರ ಯೋಜನೆಗಳ ಸಲುವಾಗಿ ಖರ್ಚುಮಾಡತಕ್ಕ ಹಣದಲ್ಲಿ ಸುಮಾರು ಶೇ. ೪೦ ಅಥವಾ ೫೦ ರಷ್ಟು ಹಣ ಲಂಚಕೋರರ ಬೊಕ್ಕಸಕ್ಕೆ ಸೇರುತ್ತದೆ. ದುರಾಡಳಿತ, ಭ್ರಷ್ಟಾಚಾರ ಅನಾವಶ್ಯಕ ಕಾರ್ಮಿಕ

ಮುಷ್ಕರಗಳು, ಕರ್ತವ್ಯಪ್ರಜ್ಞೆಯ ಅಭಾವ ಇವೇ ಮುಂತಾದ ಕಾರಣಗಳ ದೆಸೆಯಿಂದ ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟ ಕೈಗಾರಿಕೆ ಮುಂತಾದ ಸಾರ್ವಜನಿಕ ಉದ್ಯಮಗಳಲ್ಲಿ ಪ್ರತಿವರ್ಷವೂ ಕೋಟ್ಯಾಂತರ ರೂಪಾಯಿಗಳ ನಷ್ಟ ಸಂಭವಿಸುತ್ತಾ ಇದೆ. ಈ ದೇಶದ ಸಾರ್ವಜನಿಕ ಉದ್ಯಮಗಳ ಪೈಕಿ ಸುಮಾರು ಶೇ. ೫೦ ರಷ್ಟು ಉದ್ಯಮಗಳು ವರ್ಷೇ ವರ್ಷೇ ನಷ್ಟವನ್ನು ಅನುಭವಿಸುತ್ತಿವೆ. ಯೋಜನೆಗಳ ಅನುಷ್ಠಾನದಲ್ಲಿ ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ಸಂಭವಿಸುವ ನಷ್ಟವನ್ನು ಭರ್ತಿಮಾಡುವುದಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವರ್ಷೇ ವರ್ಷೇ ಹೊಸ ಹೊಸ ತೆರಿಗೆಗಳನ್ನು ವಿಧಿಸುತ್ತವೆ. ಹೊಸ ತೆರಿಗೆಗಳನ್ನು ವಿಧಿಸಿದಾಗ ಸ್ವಾಬಾವಿಕವಾಗಿ ಸಾಧನ ಸಾಮಗ್ರಿಗಳ ಮತ್ತಿತರ ಅವಶ್ಯಕ ವಸ್ತುಗಳ ಬೆಲೆ ವರ್ಷೇ ವರ್ಷೇ ಏರುತ್ತಾ ಹೋಗುತ್ತದೆ. ಜೊತೆಗೆ ಜೀವನದ ಖರ್ಚುಗಳೂ ಹೆಚ್ಚಾಗುತ್ತಾ ಹೋಗುತ್ತದೆ. ಸರ್ಕಾರಗಳು ಶೇ. ಒಂದರಷ್ಟು ತೆರಿಗೆಯನ್ನು ಹೆಚ್ಚು ಮಾಡಿದರೆ ಅದೇ ನೆಪದಿಂದ ದುರಾಶಾ ಪೀಡಿತರಾದ ಕೆಲವು ವರ್ತಕರು ಬೆಲೆಯನ್ನು ಒಂದಕ್ಕೆ ಐದರಷ್ಟು ಏರಿಸುತ್ತಾರೆ.

### ಹೆಚ್ಚು ತೆರಿಗೆ ಹೆಚ್ಚುಸಾಲ

ಕೇಂದ್ರ ಮತ್ತು ರಾಜ್ಯಸರ್ಕಾರದ ಆರ್ಥಿಕ ಯೋಜನೆಗಳ ಸಲುವಾಗಿ ಒಂದುಕಡೆ ಹೊಸ ಹೊಸ ತೆರಿಗೆಗಳನ್ನು ವಿಧಿಸುತ್ತಾ ಹೋಗುತ್ತವೆ, ಇನ್ನೊಂದು ಕಡೆ ಮಿತಿಮೀರಿದ ಪ್ರಮಾಣದಲ್ಲಿ ಸಾಲವನ್ನು ತೆಗೆಯುತ್ತವೆ. ನಮ್ಮ ರಾಜಕಾರಣಿಗಳೂ ಆಡಳಿತಗಾರರೂ ತೆರಿಗೆಗಳನ್ನು ವಿಧಿಸುವುದರಲ್ಲಿ ಮತ್ತು ಸಾಲವನ್ನು ಮಾಡುವುದರಲ್ಲಿ ಹಿಂದೆ ಮುಂದೆ ಯೋಚಿಸುವುದೂ ಇಲ್ಲ, ಸಾಧಕ ಭಾಧಕಗಳನ್ನೂ ಯೋಚಿಸುವುದಿಲ್ಲ. ತೆರಿಗೆದಾರರು ಕೊಡತಕ್ಕ ಹಣವನ್ನು ಉದಾರವಾಗಿ ಖರ್ಚು ಮಾಡುವುದರಲ್ಲಿ ಅವರು ನಿಸ್ಸೀಮರು. ಎಲ್ಲ ಹಂತಗಳಲ್ಲಿಯೂ ಖರ್ಚುವೆಚ್ಚಗಳ ವಿಚಾರದಲ್ಲಿ ಸಂಯಮ ಶಿಸ್ತುಗಳಿಲ್ಲ, ಅಧಿಕಾರಿಗಳ ಸಂಖ್ಯೆ ಹೆಚ್ಚಾದಾಗೆಲ್ಲಾ ಕೆಲಸ ಕಡಿಮೆಯಾಗುತ್ತಾ ಹೋಗುತ್ತದೆ. ಲಂಚಕೋರ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕಳ್ಳ ಸಾಗಾಣಿಕೆ, ವಿದೇಶೀವಿನಿಮಯಗಳಲ್ಲಿ ಅವ್ಯವಹಾರ, ಕಳ್ಳಬಟ್ಟಿ ಮತ್ತು ಕಳ್ಳನೋಟಿನ ತಯಾರಿಕೆ, ಮಾದಕ ಪದಾರ್ಥಗಳ ವ್ಯಾಪಾರ ಮುಂತಾದ ಕಾನೂನು ಬಾಹಿರಗಳ ವ್ಯಾಪಾರ ಮುಂತಾದ ಕಾನೂನು ಬಾಹಿರ ವ್ಯವಹಾರಗಳಲ್ಲಿ ನಿರತರಾಗಿರುವ ಕಳ್ಳಹಣದ ಕದೀಮರಿಗೆ ಬೆಂಬಲ ನೀಡುತ್ತಾರೆ. ಲಂಚಕೋರ ಅಧಿಕಾರಿಗಳ, ಭ್ರಷ್ಟರಾಜಕಾರಣಿಗಳ ಮತ್ತು ಅಕ್ರಮವ್ಯವಹಾರಗಳಲ್ಲಿ ತೊಡಗಿರುವ ಇತರೆ ಜನರ ಕೈಯಲ್ಲಿ ಸೇರುವ ಅಕ್ರಮ ಸಂಪಾದನೆಯ ಹಣದಿಂದ ಹಣದುಬ್ಬರವುಂಟಾಗುತ್ತದೆ, ಹಣದುಬ್ಬರದಿಂದ

ಬೆಲೆಗಳು ಗಗನಕ್ಕೇರುತ್ತವೆ. ಬೆಲೆಗಳು ಹೆಚ್ಚಾದಂತೆಲ್ಲಾ ಜೀವನದ ಖರ್ಚುವೆಚ್ಚಗಳು ಹೆಚ್ಚಾಗುತ್ತಾ ಹೋಗುತ್ತವೆ. ಜೀವನದ ಖರ್ಚುವೆಚ್ಚಗಳು ಹೆಚ್ಚಾದಂತೆಲ್ಲಾ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ಕೆಲಸಮಾಡುವ ನೌಕರರು ತಮ್ಮ ಸಂಬಳ ಸಾರಿಗೆಗಳನ್ನು ಹೆಚ್ಚು ಮಾಡಬೇಕೆಂದು ಆಗಾಗ ಚಳುವಳಿ ಹೂಡುತ್ತಾರೆ. ಅವರ ಬೇಡಿಕೆಗಳನ್ನು ಈಡೇರಿಸುವ ಸಲವಾಗಿ ಸರ್ಕಾರಗಳು ಮತ್ತಷ್ಟು ಹೊಸ ತೆರಿಗೆಗಳನ್ನು ವಿಧಿಸುತ್ತವೆ. ಹೊಸ ತೆರಿಗೆಗಳನ್ನು ವಿಧಿಸಿದಾಗ ಬೆಲೆಗಳು ಮತ್ತಷ್ಟು ಹೆಚ್ಚಾಗುತ್ತದೆ. ಈ ರೀತಿಯ ಬಿಡುವಿಲ್ಲದ ವಿಷವ್ಯೂಹದಿಂದ ಒಂದು ಕಡೆ ಜನರಿಗೆ ತೆರಿಗೆಯ ಹೊರೆ ಹೆಚ್ಚಾಗುತ್ತಾ ಹೋಗುತ್ತದೆ; ಇನ್ನೊಂದು ಕಡೆ ಬೆಲೆಗಳು ಹೆಚ್ಚಾಗುತ್ತಾ ಹೋಗುತ್ತವೆ. ಸರ್ಕಾರಿ ಅಧಿಕಾರಿಗಳ ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ಕೆಲಸ ಮಾಡುವ ನೌಕರರ ಸಂಬಳ ಸಾರಿಗೆಗಳು ಏರುತ್ತಿರುವ ಬೆಲೆಗಳಿಗನುಗುಣವಾಗಿ ಆಗಾಗ ಹೆಚ್ಚಾಗುವುದರಿಂದ ಅವರಿಗೆ ಆಗಾಗ ಪರಿಹಾರ ದೊರಕುತ್ತದೆ, ಪರಿಹಾರ ದೊರೆತರೂ ಕೂಡಾ ಅವರು ಸದಾ ಅತೃಪ್ತರು. ಹಣದುಬ್ಬರಕ್ಕೆ ಮತ್ತು ಬೆಲೆ ಏರುವಿಕೆಗೆ ತಾವೂ ಸಹಾ ಕಾರಣರೆಂಬುದನ್ನು ಮರೆತು ಆಗಾಗ ಚಳುವಳಿ ಹೂಡುತ್ತಾರೆ. ತಮಗಿಂತ ಕನಿಷ್ಠ ಸ್ಥಿತಿಯಲ್ಲಿರುವ ಕೋಟ್ಯಾಂತರ ಇತರೆ ಜನರ ಕಷ್ಟಕಾರ್ಪಣ್ಯಗಳ ವಿಚಾರದಲ್ಲಿ ಅವರಿಗೆ ಲವಲೇಶವೂ ಚಿಂತೆ ಇಲ್ಲ.

## ಉನ್ನತವರ್ಗಕ್ಕೂ ಸೋಂಕು

ಸರ್ಕಾರಿ ಅಧಿಕಾರಿಗಳಲ್ಲಿ ಮತ್ತು ರಾಜಕಾರಣಿಗಳಲ್ಲಿ ಪ್ರಾಮಾಣಿಕರಾದ ಜನರು ಅನೇಕರಿದ್ದಾರೆ. ಆದರೆ ಅವರಲ್ಲಿ ಬಹುಸಂಖ್ಯಾತರಿಗೆ ಪ್ರಾಮಾಣಿಕತೆಯೂ ಇಲ್ಲ, ರಾಷ್ಟ್ರದ ಬಗ್ಗೆ ಚಿಂತೆಯೂ ಇಲ್ಲ. ಅವರಲ್ಲಿ ಎಷ್ಟು ಜನರು ತಿಂಗಳಿಗೊಮ್ಮೆಯಾದರೂ ರಾಷ್ಟ್ರದ ಭವಿಷ್ಯದ ಬಗ್ಗೆ ಕುರಿತು ಚಿಂತಿಸುತ್ತಾರೆಂಬುದು ಸಂಶಯಾಸ್ಪದವಾದ ಪ್ರಶ್ನೆಯಾಗಿದೆ. ಬಹುಮಂದಿ ರಾಜಕಾರಣಿಗಳು ಅಧಿಕಾರ ಲಾಲಸೆಯಲ್ಲಿ ಮಗ್ನರಾಗಿದ್ದರೆ, ಬಹುಮಂದಿ ಅಧಿಕಾರಿಗಳು ಸಂಬಳ, ಬಡ್ತಿ, ವರ್ಗಾವರ್ಗಿ ಮುಂತಾದ ವಿಚಾರಗಳಿಲ್ಲಿ ಸದಾ ಮಗ್ನರಾಗಿರುತ್ತಾರೆ. ಹಿಂದೆ ಉನ್ನತವರ್ಗದ ಅಧಿಕಾರಿಗಳು ಸಾಮಾನ್ಯವಾಗಿ ಪ್ರಾಮಾಣಿಕರಾಗಿ ದಕ್ಷತೆಯುಳ್ಳವರಾಗಿದ್ದರು. ಇಂದು ಲಂಚದ ಸೋಂಕು ಉನ್ನತ ವರ್ಗಕ್ಕೂ ಹಬ್ಬಿದೆ. ಭಾರತದ ಸಂವಿಧಾನವನ್ನು ರಚಿಸಿದ ನಮ್ಮ ಹಿರಿಯರು ಸದುದ್ದೇಶದಿಂದ ಅಖಿಲಭಾರತ ಸೇವಾಸಿಬ್ಬಂದಿಯ ಅಧಿಕಾರಿಗಳ ನೇಮಕಕ್ಕೆ ಸಂವಿಧಾನದಲ್ಲಿ ಸೂಕ್ತ ವಿಧಿಯನ್ನು ಅಳವಡಿಸಿದರು. ಅಖಿಲ ಭಾರತ ಸೇವಾ ಸಿಬ್ಬಂದಿ ವರ್ಗದ ಅಧಿಕಾರಿಗಳು ಸರ್ಕಾರಿ ನೌಕರರಲ್ಲಿ ರಾಷ್ಟ್ರೀಯ ಭಾವನೆಯನ್ನು

ಬೆಳೆಸಲು ಹಾಗೂ ರಾಷ್ಟ್ರದ ಐಕ್ಯತೆಯನ್ನು ಕಾಪಾಡಲು ಶ್ರಮಿಸುತ್ತಾರೆಂಬ ಮಹದಾಸೆಯಿಂದಲೂ ಮತ್ತು ಇಡೀ ರಾಷ್ಟ್ರದಲ್ಲಿ ಉತ್ತಮ ಆಡಳಿತವನ್ನು ಅನುಷ್ಠಾನಕ್ಕೆ ತರುತ್ತಾರೆಂಬ ನಿರೀಕ್ಷೆಯಿಂದಲೂ ಸಂವಿಧಾನದಲ್ಲಿ ಆ ವಿಧಿಯನ್ನು ಅಳವಡಿಸಿದರು. ಆದರೆ ಅಖಿಲಭಾರತ ಸೇವಾ ಸಿಬ್ಬಂದಿಗೆ ಸೇರಿದ ಅಧಿಕಾರಿಗಳು ಸಂವಿಧಾನ ನಿರ್ಮಾಪಕರ ಅಭೀಷ್ಟವನ್ನು ನೆರವೇರಿಸಲು ಅಸಮರ್ಥರಾದರೆಂದು ವಿಷಾದದಿಂದ ಹೇಳಬೇಕಾಗಿದೆ. ಇತ್ತೀಚಿನ ವರ್ಷಗಳಲ್ಲಿ ಲಂಚದ ಸೋಂಕು ಈ ವರ್ಗದ ಜನರಿಗೂ ಕೂಡಾ ತಗಲಿರುವುದು ದುರ್ದೈವದ ಸಂಗತಿ. ಅವರಲ್ಲಿ ಸುಮಾರು ಶೇ.೬೦ ರಷ್ಟು ಜನ ಪ್ರಾಮಾಣಿಕರಾಗಿರುವುದು ಒಂದು ಸಮಾಧಾನಕರ ಸಂಗತಿ.

ತಾ: ೨೬.೦೧.೧೯೮೬

# ಭ್ರಷ್ಟಾಚಾರದಿಂದ ಸಂಗ್ರಹಿಸಿದ ಹಣದಿಂದ ಅಟ್ಟಹಾಸ

ಈ ದೇಶದ ಬಹುಮಂದಿ ಅಧಿಕಾರಿಗಳಿಗೆ ಕರ್ತವ್ಯದ ಪ್ರಜ್ಞೆಗಿಂತಾ ತಮ್ಮ ಅಧಿಕಾರದ ಮತ್ತು ಹಕ್ಕುಗಳ ಪ್ರಜ್ಞೆ ಹೆಚ್ಚಾಗಿದೆ. ಲಂಚಕೋರ ಅಧಿಕಾರಿಗಳು, ಮಂತ್ರಿಗಳೊಡನೆ ಅಥವಾ ಮೇಲಧಿಕಾರಿಗಳೊಡನೆ ವರ್ತಿಸುವಾಗ ದಾಸಾನುದಾಸರಂತಿರುತ್ತಾರೆ. ತಮ್ಮ ಕೈಕೆಳಗಿನ ಅಧಿಕಾರಿಗಳ ಜೊತೆಯಲ್ಲಿ ಅಥವಾ ಸಾರ್ವಜನಿಕರ ಜೊತೆಯಲ್ಲಿ ವ್ಯವಹರಿಸುವಾಗ ಸರ್ವಾಧಿಕಾರಿಗಳಂತೆ ವರ್ತಿಸುತ್ತಾರೆ. ಅಧಿಕಾರ ಸ್ಥಾನದಲ್ಲಿರುವ ಭ್ರಷ್ಟ ರಾಜಕಾರಣಿಗಳೂ ಲಂಚಕೋರ ಅಧಿಕಾರಿಗಳೂ ತಮ್ಮಂತೆಯೇ ಲಂಚಕೋರರಾಗಿರುವ ಅಧಿಕಾರಿಗಳಿಗೆ ಎಲ್ಲಾ ವಿಧವಾದ ಪ್ರೋತ್ಸಾಹ, ಬೆಂಬಲಗಳನ್ನು ನೀಡುತ್ತಾರೆ. ನಿಷ್ಠಾವಂತ ಪ್ರಾಮಾಣಿಕ ಅಧಿಕಾರಿಗಳಿಗೆ ಇಲ್ಲದ ಕಿರುಕುಳ ಕೊಡುತ್ತಾರೆ. ಈ ಸನ್ನಿವೇಶದಲ್ಲಿ ನಿಷ್ಠಾವಂತರಾದ ಪ್ರಾಮಾಣಿಕ ಅಧಿಕಾರಿಗಳ ಪಾಡು ಶೋಚನೀಯವಾಗಿದೆ. ಸಾರ್ವಜನಿಕರ ಸೇವಕರೆಂಬ ಭಾವನೆಯಿಂದ ಕೆಲಸ ಮಾಡಬೇಕಾಗಿರುವ ಸರ್ಕಾರಿ ನೌಕರರು ತಾವು ಸಾರ್ವಜನಿಕರ ಸೇವಕರೆಂಬುದನ್ನು ಮರೆತು ತಮ್ಮ ಬಳಿಗೆ ನ್ಯಾಯವಾಗಿ ಆಗಬೇಕಾಗಿರುವ ಕೆಲಸ ಕಾರ್ಯಗಳ ಸಲುವಾಗಿ ಬರುವ ಸಾರ್ವಜನಿಕರಿಂದ ಸಾಲಕೊಟ್ಟವರಂತೆ ಬಹಿರಂಗವಾಗಿ ಲಂಚಕ್ಕಾಗಿ ಒತ್ತಾಯಿಸುತ್ತಾರೆ. ಕೆಲವು ಪ್ರಸಂಗಗಳಲ್ಲಿ ಸರ್ಕಾರಿ ಆಸ್ಪತ್ರೆಯಲ್ಲಿ ಕೆಲಸಮಾಡುವ ವೈದ್ಯರು ತಮ್ಮ ವೃತ್ತಿ ಪವಿತ್ರವಾದುದೆಂಬುದನ್ನು ಮರೆತು ಸಾಯುವ ಸ್ಥಿತಿಯಲ್ಲಿ ಬಂದಿರುವ ರೋಗಿಗಳಿಗೆ ಚಿಕಿತ್ಸೆ ನೀಡುವ ಮುನ್ನ ಒತ್ತಾಯವಾಗಿ ಮತ್ತು ನಿರ್ದಾಕ್ಷಿಣ್ಯವಾಗಿ ಹಣವನ್ನು ವಸೂಲು ಮಾಡುತ್ತಾರೆ. ಈ ಅಮಾನುಷ ಭ್ರಷ್ಟ ಅಧಿಕಾರಿಗಳಿಗೆ ಆತ್ಮ ಸಾಕ್ಷಿಯೂ ಇಲ್ಲ, ಮಾನವೀಯ ಅನುಕಂಪವೂ ಇಲ್ಲ. ಜನರ ದುಃಖ ಅಥವಾ ಕಷ್ಟ ಕಾರ್ಪಣ್ಯಗಳಿಂದ ಅವೇ ಹೃದಯ ಮಿಡಿಯುವುದಿಲ್ಲ. ಅವರ ಮನಸ್ಸು ನೋಯುವುದಿಲ್ಲ. ಈ ಲಂಚಕೋರ ಬಕಪಕ್ಷಿಗಳಿಂದ ಕಷ್ಟನಷ್ಟಗೊಳಗಾಗುತ್ತಿರುವ ಜನರ ಗೋಳನ್ನು ಸ್ಮರಿಸಿಕೊಂಡಾಗ ನನಗೆ ಒಂದು ಕಡೆ ಕೋಪವುಂಟಾದರೆ ಇನ್ನೊಂದು ಕಡೆ ಅತ್ಯಂತ ವ್ಯಾಕುಲವಾಗುತ್ತದೆ. ತಮ್ಮ ಕೈ ಕೆಳಗಿನ ಅಧಿಕಾರಿಗಳ ಕರ್ತವ್ಯ ನಿರ್ವಹಣೆಯ ಸಂಬಂಧ ಉಸ್ತುವಾರಿ ಮಾಡತಕ್ಕ ಮೇಲಧಿಕಾರಿಗಳು ತಮ್ಮ ಭಾಗದ ಕರ್ತವ್ಯವನ್ನು ಸರಿಯಾಗಿ ಮಾಡಿದ್ದರೆ ಈ ದೇಶದ ಸಾರ್ವಜನಿಕ ಆಡಳಿತ ಈಗಿರುವುದಕ್ಕಿಂತಲೂ ನೂರುಪಾಲು ಉತ್ತಮವಾಗಿರುತ್ತಿತ್ತು. ಭ್ರಷ್ಟಾಚಾರದ ಸೋಂಕು ಧಾರ್ಮಿಕ ಮತ್ತು

ಸಾಂಸ್ಕೃತಿಕ ಕ್ಷೇತ್ರಗಳಿಗೂ ಹಬ್ಬಿದೆ. ಜ್ಞಾನ ಮತ್ತು ಸಂಸ್ಕೃತಿಯ ಜ್ಯೋತಿಯನ್ನು ಬೆಳಗಿಸುವ ಕೇಂದ್ರವಾಗಿದೆ. ಬೇಕಾದ ಕೆಲವು ವಿಶ್ವವಿದ್ಯಾನಿಲಯಗಳು ಇತರೆ ಇತರ ವಿದ್ಯಾಸಂಸ್ಥೆಗಳು ಇಂದು ಭ್ರಷ್ಟಾಚಾರದ ಮತ್ತು ಗೂಂಡಾಗಿರಿಯ ಶಿಬಿರಗಳಾಗಿವೆ. ಲಂಚದ ಪಿಡುಗು ಕೆಲವು ಕಡೆಗಳಲ್ಲಿ ನ್ಯಾಯದೇವತೆಯ ದೇವಾಲಯಗಳಂತಿರಬೇಕಾಗಿದ್ದ ನ್ಯಾಯಾಲಯಗಳಿಗೂ ಕೂಡಾ ಹಬ್ಬಿರುವುದು ಶೋಚನೀಯ ಸಂಗತಿ. ವಿದ್ಯಾರ್ಥಿಗಳ ನಡೆ-ನುಡಿಗಳನ್ನು ತಿದ್ದಿ ಅವರನ್ನು ಸುಸಂಸ್ಕೃತ ನಾಗರಿಕರನ್ನಾಗಿಮಾಡುವ ಹೊಣೆಯನ್ನು ಹೊತ್ತಿರುವ ಉಪಾಧ್ಯಾಯರು ಕೂಡಾ ಕೆಲವು ಕಡೆಗಳಲ್ಲಿ ಲಂಚಕೋರರಾಗಿರುತ್ತಾರೆ. ಬುದ್ಧ, ಗಾಂಧಿ ಮುಂತಾದ ಮಹಾತ್ಮರು ಹುಟ್ಟಿದ ಈ ನಾಡಿನಲ್ಲಿ ನೌಕರಿ, ಬಡ್ತಿ ಮತ್ತು ವರ್ಗಾವರ್ಗಿ ಇವುಗಳ ಸಲುವಾಗಿ ಲಂಚ ತೆಗೆದುಕೊಳ್ಳುವ ಮಹಾತ್ಮರು ಹುಟ್ಟಿದ್ದಾರೆ. ಯಾವ ದೇಶದಲ್ಲಿ ಮಿತಿಮೀರಿದ ಪ್ರಮಾಣದಲ್ಲಿ ಲಂಚ ಬೆಳೆದಿರುತ್ತದೋ, ಆ ದೇಶದಲ್ಲಿ ದಿನೇ ದಿನೇ ಶ್ರೀಮಂತರು ಶ್ರೀಮಂತರಾಗುತ್ತಲೇ ಹೋಗುತ್ತಾರೆ, ಬಡವರು ಇನ್ನೂ ಬಡವರಾಗುತ್ತಲೇ ಹೋಗುತ್ತಾರೆ. ಅವರೀರ್ವರ ನಡುವೆ ಅಂತರ ದಿನೇ ದಿನೇ ಹೆಚ್ಚಾಗುತ್ತಾ ಹೋಗುತ್ತದೆ. ಏಕೆಂದರೆ ಶ್ರೀಮಂತರಿಗೆ ಲಂಚ ಕೊಡುವ ಶಕ್ತಿ ಇರುತ್ತದೆ. ಬಡವರಿಗೆ ಆ ಶಕ್ತಿ ಇರುವುದಿಲ್ಲ. ತಿಂಗಳಿಗೆ ೩೦೦ ರೂ. ಗಳಷ್ಟು ವರಮಾನ ಸಹ ದೊರೆಯದಿರುವ ಕೋಟ್ಯಾಂತರ ಜನರು ಇರುವ ಈ ದೇಶದಲ್ಲಿ ತಿಂಗಳಿಗೆ ಸರಾಸರಿ ಮೂವತ್ತು ಸಾವಿರ ರೂಪಾಯಿಗಳವರೆಗೆ ಲಂಚದ ವರಮಾನವಿರುವ ಲಕ್ಷಾಂತರ ಜನ ಅಧಿಕಾರಿಗಳಿದ್ದಾರೆ.

## ಐಶ್ವರ್ಯ ದೇವತೆ

ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಭ್ರಷ್ಟಾಚಾರ ಬೆಳೆಯಲು ಕಾರಣಗಳೇನೆಂಬುದು ದಿಗ್ಭ್ರಮೆಯನ್ನುಂಟುಮಾಡುವ ಒಂದು ಪ್ರಶ್ನೆಯಾಗಿದೆ. ಜನಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಉಂಟಾಗಿರುವ ನೈತಿಕ ಅಧಃಪತನವೇ ಭ್ರಷ್ಟಾಚಾರದ ಬೆಳವಣಿಗೆಗೆ ಮೂಲಕಾರಣವಾಗಿದೆ. ಹಿಂದೆ ಜನರು ದೇವರಿಗೆ ಮತ್ತು ಜನಾಭಿಪ್ರಾಯಕ್ಕೆ ಅಂಜಿ ಕಾನೂನುಬಾಹಿರ ಅಥವಾ ನೈತಿಕಬಾಹಿರ ಕೃತ್ಯಗಳಿಗೆ ಕೈಹಾಕುತ್ತಿರಲಿಲ್ಲ. ಇಂದು ಜನರು ದೇವರನ್ನು ಮರೆತು ಐಶ್ವರ್ಯ ದೇವತೆಯನ್ನು ಪೂಜಿಸುತ್ತಾರೆ. ಅವರಿಗೆ ದೇವರ ಭಯವೂ ಇಲ್ಲ ಸಾರ್ವಜನಿಕ ಅಭಿಪ್ರಾಯದ ಅಂಜಿಕೆಯೂ ಇಲ್ಲ. ಲಂಚಕೋರ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ ಮಾನ ಮರ್ಯಾದೆಯನ್ನು ತ್ಯಜಿಸಿದ ಭಂಡರಾಗಿರುತ್ತಾರೆ. ವಿವಿಧ ಧಾರ್ಮಿಕ ಪಂಥಗಳಿಗೆ ಸೇರಿರುವ ಈ ದೇಶದ ಬಹುಸಂಖ್ಯಾತ ಜನರು ದೈವಭಕ್ತರಂತೆ, ಧರ್ಮನಿಷ್ಠರಂತೆ

ತೋರುಗಾಣಿಕೆಗೆ ವರ್ತಿಸುತ್ತಿದ್ದರೂ ಐಶ್ವರ್ಯದ ಮೇಲೆ ಅವರಿಗಿರುವ ದುರಾಸೆಗೆ ಮಿತಿಯೇ ಇಲ್ಲ. ಅವರಲ್ಲಿ ಕೆಲವರು ಐಶ್ವರ್ಯ ಸಂಪಾದನೆಗಾಗಿ ಅತ್ಯಂತ ಹೀನಕೃತ್ಯಗಳನ್ನು ಕೂಡ ಮಾಡಲು ಹೇಸುವುದಿಲ್ಲ. ಈ ದೇಶದ ಜನರು ನಿಜವಾಗಿಯೂ ದೈವಭಕ್ತರಾಗಿದ್ದರೆ ನಾವು ಮಿತಿಮೀರಿದ ಭ್ರಷ್ಟಾಚಾರವನ್ನೂ, ಮಿತಿ ಇಲ್ಲದ ಆರ್ಥಿಕ ಮತ್ತು ಸಾಮಾಜಿಕ ಅಪರಾಧಗಳನ್ನು ನೋಡುತ್ತಿರಲಿಲ್ಲ. ಧರ್ಮದ ಮತ್ತು ದೇವರ ಹೆಸರಿನಲ್ಲಿ ಕೆಲವರು ಅಧರ್ಮದ ಕೃತ್ಯಗಳಲ್ಲಿ ತಲ್ಲೀನರಾಗಿರುತ್ತಾರೆ. ಅಕ್ರಮ ಮತ್ತು ಅನೀತಿಯಿಂದ ಶ್ರೀಮಂತರಾಗಿರುವ ಕೆಲವು ವರ್ಗಗಳ ಜನರು ಅಟ್ಟಹಾಸದ ಮೋಜಿನ ಜೀವನವನ್ನು ಸಾಗಿಸುತ್ತಿದ್ದಾರೆ. ಅವರು ಶ್ರಮವಿಲ್ಲದೆ. ಅಕ್ರಮದಿಂದ ಕೂಡಿಹಾಕಿರುವ ಐಶ್ವರ್ಯ ಪ್ರದರ್ಶನವನ್ನು ನಾಚಿಕೆ ಇಲ್ಲದೆ ನಡೆಸುತ್ತಾರೆ. ಉಳಿದ ಜನರು ಈ ಹೊಸ ಪೀಳಿಗೆಯ ಶ್ರೀಮಂತ ಜನರನ್ನು ತಿರಸ್ಕಾರ ಭಾವನೆಯಿಂದ ನೋಡುವ ಬದಲು ಅವರನ್ನು ಪುರಸ್ಕರಿಸುವುದರ ಜೊತೆಗೆ ಅನುಕರಿಸಲು ಪ್ರಯತ್ನ ಪಡುತ್ತಾರೆ. ಅಲ್ಲದೆ ಅವರಂತೆ ಅಟ್ಟಹಾಸದ ಜೀವನ ನಡೆಸಲು ಐಶ್ವರ್ಯ ಸಂಪಾದನೆಗಾಗಿ ಅಡ್ಡದಾರಿಯನ್ನು ಹಿಡಿಯುತ್ತಾರೆ. ಭ್ರಷ್ಟಾಚಾರ ಹೆಚ್ಚಾಗಲು ಇದೂ ಒಂದು ಕಾರಣವಾಗಿದೆ.

ರಾಜಕಾರಣದಲ್ಲಿ ಮಿತಿಮೀರಿದ ಅಧಿಕಾರದಾಹದಿಂದ ಅಹಿತ ಪೈಪೋಟಿ ಪ್ರಾಪ್ತಿಯಾಗಿದೆ. ಅಹಿತ ಪೈಪೋಟಿಯ ದೆಸೆಯಿಂದ ಚುನಾವಣೆಗಳಲ್ಲಿ ಅಧಿಕಾರದಾಹದ ರಾಜಕಾರಣಿಗಳು ಓಟಿಗಾಗಿ ಮಾಡಬಾರದ ಕೆಲಸ ಮಾಡುತ್ತಾರೆ. ಓಟನ್ನು ಕೊಂಡುಕೊಳ್ಳಲು ಹಣ ಹೆಂಡಗಳ ಪ್ರವಾಹವನ್ನು ಹರಿಸುತ್ತಾರೆ. ಓಟಿನ ಬೇಟೆಗಾಗಿ ಅಧಿಕಾರ ಸ್ಥಾನದಲ್ಲಿರುವ ರಾಜಕಾರಣಿಗಳು ನಾನಾ ಕುಟಿಲೋಪಾಯಗಳಿಂದ ಅಕ್ರಮ ಸಂಪಾದನೆ ಮಾಡುತ್ತಾರೆ. ಕಳೆದ ಸುಮಾರು ಹದಿನೆಂಟು ವರ್ಷಗಳಿಂದ ರಾಜಕೀಯ ಪಕ್ಷಗಳು, ಅದರಲ್ಲೂ ಕೇಂದ್ರ ಮತ್ತು ರಾಜ್ಯಗಳಲ್ಲಿ ಅಧಿಕಾರ ನಡೆಸುವ ಪಕ್ಷಗಳು ಪಕ್ಷದ ನಿಧಿ ಸಂಗ್ರಹಣೆಯ ನೆಪದಲ್ಲಿ ಅಕ್ರಮ ಮಾರ್ಗದಿಂದ ಹಣ ಸಂಗ್ರಹಿಸುತ್ತಾರೆ. ಈ ರೀತಿ ಸಂಗ್ರಹಿಸುವ ಹಣಕ್ಕೆ ದಾಖಲೆಗಳಿರುವುದಿಲ್ಲ. ಈ ರೀತಿ ನಿಧಿ ಸಂಗ್ರಹಿಸುವ ಕ್ರಮದಿಂದ ಭ್ರಷ್ಟಾಚಾರಕ್ಕೆ ಮತ್ತಷ್ಟು ಪುಷ್ಟಿ ದೊರಕಿದೆ. ಅಧಿಕಾರದಲ್ಲಿರುವ ರಾಜಕಾರಣಿಗಳು ಪಕ್ಷದ ನಿಧಿ ಸಂಗ್ರಹಣೆಯ ನೆಪದಲ್ಲಿ ಸರ್ಕಾರಿ ಆಡಳಿತ ಯಂತ್ರಗಳನ್ನು ಕೂಡ ದುರುಪಯೋಗ ಮಾಡಿಕೊಂಡಿರುವ ಉದಾಹರಣೆಗಳಿವೆ. ಕೆಲವರು ಮಂತ್ರಿಗಳು, ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್ ಮುಂತಾದ ಸವಲತ್ತುಗಳನ್ನು ನೀಡುವಾಗ ಪಕ್ಷದ ನಿಧಿಯ ಹೆಸರಿನಲ್ಲಿ ಲಂಚ ಹೊಡೆಯುತ್ತಾರೆ. ಈ ಎಲ್ಲಾ ಕಾರಣಗಳಿಂದ ಸರ್ಕಾರಿ

ಯಂತ್ರವೂ ಕೂಡ ಭ್ರಷ್ಟಾಚಾರದಿಂದ ಕಲುಷಿತವಾಗಿದೆ. ಕೆಲವು ರಾಷ್ಟ್ರಗಳಲ್ಲಿ ಮಂತ್ರಿ ಅಥವಾ ಇತರ ರಾಜಕೀಯ ಹುದ್ದೆಗಳನ್ನು ಹೊಂದಿದವರು ಆ ಹುದ್ದೆಗಳಿಂದ ನಿವೃತ್ತರಾದ ನಂತರ ತಮ್ಮ ಹಿಂದಿನ ಉದ್ಯೋಗಕ್ಕೆ ಜವಳಿ ಸಾಮಾನ್ಯ ಜನರಂತೆ ಬಾಳುತ್ತಾರೆ. ಆದರೆ ಭಾರತದಲ್ಲಿ ಹಾಗಿಲ್ಲ, ಕೆಲವು ರಾಜಕಾರಣಿಗಳಿಗೆ ರಾಜಕಾರವೇ ಜೀವನೋಪಾಯದ ಕುಸುಬಾಗಿದೆ. ಆದ್ದರಿಂದಲೇ ಅವರ ಜೀವನ ನಡೆಯಬೇಕು. ಸ್ವತಂತ್ರವಾಗಿ ಜೀವನವನ್ನು ಸಾಗಿಸಲು ಅಶಕ್ತರಾಗಿರುವ ರಾಜಕಾರಣಿಗಳು ಅಧಿಕಾರ ಸ್ಥಾನಗಳಲ್ಲಿರುವಾಗ, ಮುಂದೆ ಅಧಿಕಾರ ಕಳೆದುಕೊಂಡನಂತರವೂ ಕೂಡ ಠೀವಿಯಿಂದ ಬಾಳಬೇಕೆಂಬ ಮುಂದಾಲೋಚನೆಯಿಂದ ಅಕ್ರಮರೀತಿಯಿಂದ ಅತುಳೈಶ್ವರ್ಯವನ್ನು ಸಂಗ್ರಹಿಸುತ್ತಾರೆ. ಅಧಿಕಾರ ಕಳೆದುಕೊಂಡಿರುವ ರಾಜಕಾರಣಿಗಳಿಗೆ ಸಾಮಾನ್ಯ ಜನರಂತೆ ದುಡಿದು ಜೀವನ ಸಾಗಿಸುವುದು ಬಹಳ ಅಗೌರವದ ಕೆಲಸ. ಭ್ರಷ್ಟಾಚಾರದಿಂದ ಸಂಗ್ರಹಿಸಿದ್ದ ಹಣದಿಂದ ಅಟ್ಟಹಾಸದಿಂದ ಮೆರೆಯುವುದು ಅವರ ದೃಷ್ಟಿಯಲ್ಲಿ ಬಹಳ ಗೌರವವಾದುದು.

ನಮ್ಮ ದೇಶದಲ್ಲಿ ಮೊದಲಿನಿಂದಲೂ ವಿದ್ಯಾವಂತ ಜನರು ಸಾಮಾನ್ಯವಾಗಿ ಶ್ರಮವಿಲ್ಲದ ಸುಲಭ ಜೀವನದ ಮಾರ್ಗವನ್ನು ಅವಲಂಬಿಸುತ್ತಾ ಬಂದಿರುತ್ತಾರೆ. ನಮ್ಮ ಜನರಿಗೆ ಕರ್ತವ್ಯ ಪ್ರಜ್ಞೆಯೂ ಇಲ್ಲ. ಕಾಯಕಗೌರವದ ಪ್ರಜ್ಞೆಯೂ ಇಲ್ಲ. ಹೆಚ್ಚು ಶ್ರಮವಿಲ್ಲದೆ ಶ್ರೀಮಂತರಾಗಬೇಕೆಂಬ ಹಂಬಲ ವಿದ್ಯಾವಂತ ಜನರಲ್ಲಿ ಬಹಳವಾಗಿ ಬೇರೂರಿದೆ. ಅದಕ್ಕಾಗಿಯೇ ವಿದ್ಯಾವಂತರಲ್ಲಿ ಬಹುಮಂದಿ ಸರ್ಕಾರಿ ನೌಕರಿಯನ್ನು ಬಯಸುತ್ತಾರೆ. ಅದು ಸಿಕ್ಕದಿದ್ದಾಗ ರಾಜಕಾರಣಕ್ಕೆ ಧುಮುಕಿ ರಾಜಕೀಯ ಧುರಂಧರರಾಗುತ್ತಾರೆ. ಸರ್ಕಾರಿ ನೌಕರಿಯಲ್ಲಿಯೂ ರಾಜಕಾರಣದಲ್ಲಿಯೂ ಕಷ್ಟ ಪಡದೆ ಸುಖಜೀವನ ನಡೆಸಲು ಬೇಕಾದಷ್ಟು ಅವಕಾಶವಿದೆ. ಮನಸ್ಸು ಮಾಡಿದರೆ ಯಥೇಚ್ಛವಾಗಿ ಕಳ್ಳಗಂಟನ್ನು ಮಾಡಬಹುದು. ಈ ಕಾರಣದಿಂದಲೇ ಈ ಎರಡು ಕ್ಷೇತ್ರಗಳಲ್ಲಿಯೂ ತೀವ್ರ ಪೈಪೋಟಿಯಿದೆ. ಭ್ರಷ್ಟಾಚಾರದ ವಿರುದ್ಧ ಸಾರ್ವಜನಿಕ ಅಭಿಪ್ರಾಯ ಅತಿಕ್ಷೀಣವಾಗಿದೆ. ಅನಾಚಾರ, ದುರಾಚಾರ, ಭ್ರಷ್ಟಾಚಾರಗಳ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುವ ಸಾತ್ವಿಕ ಕ್ರೋಧವನ್ನು ನಾವು ತೆಗಳುವ ಬದಲು ಹೊಗಳುತ್ತಾರೆ. ಕೆಲವರು ಅವರನ್ನು ಪೂಜಿಸುತ್ತಾರೆ. ಇದರಿಂದ ಭ್ರಷ್ಟರಿಗೆ ನಮ್ಮ ಸಮಾಜದಲ್ಲಿ ಮನ್ನಣೆ ಇದೆ. ಎಲ್ಲಾ ದೇಶಗಳಲ್ಲಿಯೂ ವಿದ್ಯಾವಂತ ಜನರು ಅವರವರ ದೇಶಗಳ ಭವಿಷ್ಯವನ್ನು ರೂಪಿಸುತ್ತಾರೆ ಹಾಗೂ ಜನಾಭಿಪ್ರಾಯಗಳನ್ನು ಮೂಡಿಸಲು ಶ್ರಮಿಸುತ್ತಾರೆ. ನಮ್ಮ ದೇಶದ ವಿದ್ಯಾವಂತರು ಸ್ವಾತಂತ್ರ್ಯಕ್ಕೆ ಪೂರ್ವ ದೇಶದ

ಆಗುಹೋಗುಗಳು ಬಗ್ಗೆ ಸಾಕಷ್ಟು ಆಸಕ್ತಿ ವಹಿಸುತ್ತಿದ್ದರು. ಸ್ವಾತಂತ್ರ್ಯ ಲಭಿಸಿದ ನಂತರ ಈ ದೇಶದ ವಿದ್ಯಾವಂತ ಜನರಲ್ಲಿ ಬಹುಮಂದಿ ನಿರ್ವೀರ್ಯರಾಗಿ ನಿರ್ಲಿಪ್ತರಾಗಿದ್ದಾರೆ. ಕೆಲವರು ತಂತಮ್ಮ ಕಾರ್ಯಗಳನ್ನು ಮಗ್ನರಾಗಿ ಸ್ವಾರ್ಥಸಾಧಕರಾಗಿದ್ದಾರೆ. ಕೆಲವರು ಅಡಗೂಲಜ್ಜಿಯಂತೆ ಎಲ್ಲರನ್ನೂ ಶಪಿಸುತ್ತಾ ಗೊಣಗುಟ್ಟುತ್ತಾರೆ. ಕೆಲವರು ದಿಢೀರ್ ಶ್ರೀಮಂತರಾಗುವ ಹಂಬಲದಿಂದ ಅನೀತಿ ಮಾರ್ಗಗಳನ್ನು ತೊಡಗಿರುತ್ತಾರೆ.

ಈ ದೇಶದ ಜನರಿಗೆ ಕೆಲವು ವಿಶಿಷ್ಟ ವಿಕೃತ ಅಥವಾ ವಕ್ರಗುಣಗಳಿವೆ. ನಮ್ಮಲ್ಲಿರುವ ಎಲ್ಲಾ ಅನಿಷ್ಟ ಪ್ರವೃತ್ತಿಗಳನ್ನೂ ತಮ್ಮ ವಕ್ರತರ್ಕದಿಂದ ಸಮರ್ಥಿಸುವುದು ನಮಗೆ ರಕ್ತಗತವಾಗಿ ಬಂದಿರುವ ಒಂದು ವಕ್ರಗುಣ. ಕೆಲವರು ಭ್ರಷ್ಟಾಚಾರವನ್ನು ರಾಮಾಯಣ ಮತ್ತು ಮಹಾಭಾರತ ಕಾವ್ಯಗಳಲ್ಲಿ ಕಂಡುಬರುವ ಕೆಲವು ಉದಾಹರಣೆಗಳಿಂದ ಸಮರ್ಥಿಸುತ್ತಾರೆ. ಕೆಲವರು ಬೇರೆ ದೇಶಗಳಲ್ಲಿ ಅಥವಾ ನಮ್ಮ ದೇಶದಲ್ಲಿ ನಡೆಯುತ್ತಿರುವ ಉದಾಹರಣೆಗಳಿಂದ ಸಮರ್ಥಿಸುತ್ತಾರೆ. ಕೆಲವರು ಭ್ರಷ್ಟಾಚಾರಕ್ಕೆ ಬಡತನವೇ ಕಾರಣವೆಂದು ಪ್ರತಿಪಾದಿಸುತ್ತಾರೆ. ನಮ್ಮಲ್ಲಿರುವ ಬಡತನಕ್ಕೆ ಅಪ್ರಾಮಾಣಿಕತೆ ಮತ್ತು ಮೈಗಳ್ಳತನ ಬಹಳ ಮಟ್ಟಿಗೆ ಕಾರಣವೆಂಬುದನ್ನು ಜನರು ಮರೆತಿದ್ದಾರೆ. ಭ್ರಷ್ಟಾಚಾರದಿಂದ ಬಡತನ ಪ್ರಾಪ್ತಿಯಾಗಿದೆಯೇ ಹೊರತು ಬಡತನದಿಂದ ಭ್ರಷ್ಟಾಚಾರ ಪ್ರಾಪ್ತಿಯಾಗಿಲ್ಲ. ಈ ದೇಶದಲ್ಲಿರುವ ಒಂದು ವಿಪರ್ಯಾಸ ಸಂಗತಿಯೇನೆಂದರೆ ಬಡವರಿಗಿಂತ ಶ್ರೀಮಂತರು ಹೆಚ್ಚು ಅಪ್ರಾಮಾಣಿಕರು. ಕಳೆದ ಸುಮಾರು ಹತ್ತು ವರ್ಷಗಳಿಂದ ರಾಷ್ಟ್ರದ ಆಗುಹೋಗುಗಳ ಹೊಣೆಯನ್ನು ಹೊತ್ತಿದ್ದ ರಾಜಕಾರಣಿಗಳು ಭ್ರಷ್ಟಾಚಾರ ವಿಶ್ವವ್ಯಾಪಿಯಾದ ಒಂದು ಪಿಡುಗು ಎಂದು ಸುಲಭವಾಗಿ ಭ್ರಷ್ಟಾಚಾರವನ್ನು ಸಮರ್ಥಿಸುತ್ತಿದ್ದರು. ಅದೃಷ್ಟವಶಾತ್ ನಮ್ಮ ದೇಶದ ಯುವ ಪ್ರಧಾನಿ ಶ್ರೀ ರಾಜೀವ್ ಗಾಂಧಿಯವರು ಭ್ರಷ್ಟಾಚಾರವನ್ನು ಬಹಿರಂಗವಾಗಿ ಖಂಡಿಸುತ್ತಾರೆ. ಜೊತೆಗೆ ಭ್ರಷ್ಟಾಚಾರವನ್ನು ನಿರ್ಮೂಲ ಮಾಡಲು ಪಣತೊಟ್ಟಿರುತ್ತಾರೆ. ಇದೊಂದು ಆಶಾದಾಯಕ ಸೂಚನೆ. ಆದರೆ ಅವರ ಪಕ್ಷದಲ್ಲಿರುವ ಹಳೆಯ ಮುಖಂಡರು ಲಂಚನಿವಾರಣೆಯ ವಿಚಾರದಲ್ಲಿ ಮೌನವನ್ನು ತಾಳಿದ್ದಾರೆ. ಬಹುಶಃ ಅವರಿಗೆ ಭ್ರಷ್ಟಾಚಾರವನ್ನು ಖಂಡಿಸುವ ನೈತಿಕ ಧೈರ್ಯವಿರಲಿಕ್ಕಿಲ್ಲ. ಕಾಂಗ್ರೆಸ್ಸೇತರ ಪಕ್ಷಗಳ ಧುರೀಣರು ಭ್ರಷ್ಟಾಚಾರದ ನಿವಾರಣೆಯ ವಿಚಾರದಲ್ಲಿ ಮಾತನಾಡುವುದು ಬಹಳ ಅಪರೂಪ. ಕೆಲವರೇನೋ ಆಗಾಗ ಮಾತನಾಡುತ್ತಾರೆ. ಆದರೆ ಅವರು ತಮ್ಮ ಪಕ್ಷದಲ್ಲಿರುವ ಭ್ರಷ್ಟರನ್ನು ಹೊರದೂಡಲು ಯಾವ ಕ್ರಮವನ್ನೂ ಕೈಗೊಳ್ಳುವುದಿಲ್ಲ.

ಸಾಮಾನ್ಯವಾಗಿ ರಾಜಕಾರಣಿಗಳು ತಮ್ಮ ರಾಜಕೀಯ ವಿರೋಧಿಗಳನ್ನು ಅವಹೇಳನ ಮಾಡುವ ಸಲುವಾಗಿ ಲಂಚದ ಅಪಾದನೆ ಮಾಡುತ್ತಾರೆಯೇ ಹೊರತು ಉಳಿದ ಸಂದರ್ಭಗಳಲ್ಲಿ ಲಂಚದ ವಾತಾವರಣಕ್ಕೆ ಹೊಂದಿಕೊಂಡು ಹೋಗುತ್ತಾರೆ.

## ಭ್ರಷ್ಟರಿಗೆ ಗೌರವ ಬೇಡ

ಲಂಚ ನಿರ್ಮೂಲನದ ಕಾರ್ಯ ಸುಲಭವಾದುದೇನೂ ಅಲ್ಲ. ಲಂಚದ ಪಿಡುಗು ಕೆಳಮಟ್ಟಕ್ಕೇ ಮಾತ್ರ ಸೀಮಿತವಾಗಿದ್ದಿದ್ದರೆ ಅದನ್ನು ಸುಲಭವಾಗಿ ತಡೆಗಟ್ಟಬಹುದಾಗಿತ್ತು. ಆದರೆ ಈ ವ್ಯಾಧಿ ಮೇಲ್ಮಟ್ಟಕ್ಕೂ ಹಬ್ಬಿದೆ. ಭ್ರಷ್ಟಾಚಾರದಿಂದ ಅನುಕೂಲ ಪಡೆಯುವವರು ಭ್ರಷ್ಟಾಚಾರವನ್ನು ನಿರ್ಮೂಲ ಮಾಡಲು ಅಥವಾ ತಡೆಗಟ್ಟಲು ಆಸಕ್ತಿ ವಹಿಸುವುದಿಲ್ಲ. ಆದ್ದರಿಂದ ವಿವಿಧ ಕ್ಷೇತ್ರಗಳಲ್ಲಿರುವ ಮತ್ತು ವಿವಿಧ ವರ್ಗಗಳಲ್ಲಿರುವ ಪ್ರಾಮಾಣಿಕ ಜನರು ಒಟ್ಟಾಗಿ ಸೇರಿ ಈ ಪಿಡುಗನ್ನು ನಿರ್ಮೂಲನ ಮಾಡಬೇಕಾಗಿದೆ. ಮೊಟ್ಟಮೊದಲು ಭ್ರಷ್ಟರನ್ನು ಹೊಗಳುವುದನ್ನು ಅಥವಾ ಅವರಿಗೆ ಮನ್ನಣೆ ಕೊಡುವುದನ್ನು ನಿಲ್ಲಿಸಬೇಕು. ಭ್ರಷ್ಟರಾದವರು ಮಂತ್ರಿಗಳೇ ಆಗಿರಲಿ, ಶಾಸಕರೇ ಆಗಿರಲಿ ಅಥವಾ ಉನ್ನತ ಅಧಿಕಾರಿಗಳೇ ಆಗಿರಲಿ ಅಥವಾ ಶ್ರೀಮಂತರೇ ಆಗಿರಲಿ ಅಂಥವರಿಗೆ ಜನರು ಗೌರವ ನೀಡಬಾರದು. ಮಂತ್ರಿಗಳೂ ಶಾಸಕರೂ ಆದರ್ಶ ಜೀವನ ನಡೆಸಿ ಇತರರಿಗೆ ಮಾರ್ಗದರ್ಶಕರಾಗಿರಬೇಕು. ತಮ್ಮ ಜಾತಿಗೆ ಅಥವಾ ತಮ್ಮ ಧರ್ಮಕ್ಕೆ ಸೇರಿದವರೆಂಬ ಕಾರಣದಿಂದ ಲಂಚಕೋರರಿಗೆ ಯಾರೂ ರಕ್ಷಣೆ ನೀಡಬಾರದು. ಜಾತಿಮತಗಳು ಲಂಚಕೋರರಿಗೆ ಅಥವಾ ಇತರ ಅಕ್ರಮ ವ್ಯವಹಾರದಲ್ಲಿ ತೊಡಗಿರುವವರಿಗೆ ರಕ್ಷಾಕವಚವಾಗಬಾರದು. ಎಷ್ಟೇ ಪ್ರಭಾವಶಾಲಿಗಳಾಗಿದ್ದರೂ ಒಬ್ಬಂಟಿಗರಾಗಿ ಭ್ರಷ್ಟಾಚಾರ ವಿರುದ್ಧ ಹೋರಾಟ ನಡೆಯಿಸುವುದು ಕಷ್ಟ. ಒಮ್ಮೊಮ್ಮೆ ಒಬ್ಬಂಟಿಗರಾಗಿ ಲಂಚಕೋರ ರಾಜಕಾರಣಿಗಳನ್ನು ಅಥವಾ ಅಧಿಕಾರಿಗಳನ್ನು ಕೆಣಕುವುದು ಅಪಾಯ. ಲಂಚಕೋರರು ತಮ್ಮ ವಿರುದ್ಧ ಬಹಿರಂಗ ಆಪಾದನೆ ಮಾಡುವ ಜನರ ಮೇಲೆ ಸರ್ವಶಕ್ತಿಯನ್ನು ಉಪಯೋಗಿಸಿ ಸೇಡು ತೀರಿಸಿಕೊಳ್ಳುತ್ತಾರೆ. ಹಳ್ಳಿ ಪಟ್ಟಣಗಳಲ್ಲಿ ಜನರು ಒಗ್ಗಟ್ಟಾಗಿ ಭ್ರಷ್ಟಾಚಾರ, ದುರಾಚಾರ, ಅನಾಚಾರಗಳ ವಿರುದ್ಧ ಜನಾಭಿಪ್ರಾಯವನ್ನು ಮೂಡಿಸುವ ಪ್ರಬಲ ಪ್ರಯತ್ನ ಮಾಡಬೇಕು. ಅವುಗಳ ವಿರುದ್ಧ ಶಾಂತ ರೀತಿಯ ಪ್ರದರ್ಶನಗಳನ್ನು ಏರ್ಪಡಿಸಬೇಕು. ಚುನಾಯಿತ ಪ್ರತಿನಿಧಿಗಳು ಲಂಚಕೋರರಾಗಿದ್ದರೆ ಅವರ ವಿರುದ್ಧ ಅವರನ್ನು ಚುನಾಯಿಸಿದ ಜನರು ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿ ಅವರನ್ನು ಖಂಡಿಸಬೇಕು.

ಇದುವರೆಗೆ ಕೇಂದ್ರ ಸರ್ಕಾರವಾಗಲೀ, ವಿವಿಧ ರಾಜ್ಯಸರ್ಕಾರಗಳಾಗಲಿ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರದ ವಿರುದ್ಧ ಪರಿಣಾಮಕಾರಿಯಾದ ರೀತಿಯಲ್ಲಿ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಈಚೆಗೆ ಶ್ರೀ ರಾಜೀವಗಾಂಧಿಯವರೂ, ಅವರ ಸಂಪುಟದ ಕೆಲವು ಮಂತ್ರಿಗಳೂ ಕಪ್ಪುಹಣದ ಆನಾಹುತವನ್ನು ತಡೆಗಟ್ಟಲು ಕೆಲವು ಕ್ರಮಗಳನ್ನು ಕೈಗೊಂಡಿರುತ್ತಾರೆ. ಇದು ಸ್ವಾಗತಾರ್ಹವಾದರೂ ಕೂಡ ಕಾಂಗ್ರೆಸ್ (ಐ) ಪಕ್ಷದ ರಾಜಕಾರಣ ಸ್ವಚ್ಛವಾದ ಹೊರತು ಹೆಚ್ಚಿನ ಪ್ರಯೋಜನ ಆಗುವುದಿಲ್ಲ. ಕೇಂದ್ರ ಮತ್ತು ರಾಜ್ಯಗಳಲ್ಲಿ ಇದುವರೆಗೆ ನೇಮಕಗೊಂಡ ಜಾಗೃತ ಆಯೋಗಗಳಿಂದ ಪರಿಣಾಮಕಾರಿಯಾದ ಕಾರ್ಯಗಳು ನಡೆದಿಲ್ಲ. ಜಾಗೃತ ಆಯೋಗಕ್ಕೆ ನೇಮಕ ಮಾಡಲ್ಪಟ್ಟವರು ಸಾಮಾನ್ಯವಾಗಿ ನಿವೃತ್ತರಾದ ಅಧಿಕಾರಿಗಳು ಅಥವಾ ನ್ಯಾಯಾಧೀಶರು. ಭ್ರಷ್ಟಾಚಾರ ನಿವಾರಣೆ ಬಗ್ಗೆ ಬೇಕಾಗುವ ಅನುಭವವೂ ಅವರಿಗಿರುವುದಿಲ್ಲ, ಸಾಕಾಷ್ಟು ಉತ್ಸುಕತೆಯೂ ಅವರಲ್ಲಿರುವುದಿಲ್ಲ. ಅಲ್ಲದೆ ಲಂಚದ ಪ್ರಸಂಗಗಳನ್ನು ಪತ್ತೆಹಚ್ಚಲು ಅಥವಾ ಲಂಚದ ಅಪಾದನೆ ಸಂಬಂಧ ತನಿಖೆ ನಡೆಸಲು ನೇಮಕಮಾಡಲ್ಪಟ್ಟ ಜಾಗೃತ ಆಯೋಗದ ಅಧಿಕಾರಿಗಳು ಉತ್ತಮ ಚಾರಿತ್ರ್ಯವುಳ್ಳವರಲ್ಲ. ಅಲ್ಲಲ್ಲಿ ಕೆಲವರು ಮಾತ್ರ ಉತ್ತಮಚಾರಿತ್ರ್ಯವುಳ್ಳವರು. ಉಳಿದವರು ವಿವಾದಾಸ್ಪದವಾದ ಇತಿಹಾಸ ಉಳ್ಳವರು. ಒಮ್ಮೊಮ್ಮೆ ಮಾತ್ರ ಇಲಾಖೆಯಲ್ಲಿ ಬೇಡವಾದ ಅಧಿಕಾರಿಗಳನ್ನು ಜಾಗೃತ ಆಯೋಗಕ್ಕೆ ಬೇಹುಗಾರಿಕೆಗಾಗಿ ಅಥವಾ ತನಿಖೆಗಾಗಿ ವರ್ಗಾಯಿಸುತ್ತಾರೆ. ಇದೇ ರೀತಿಯ ಸಂಪ್ರದಾಯವನ್ನು ಲೋಕಪಾಲ್ ಮತ್ತು ಲೋಕಾಯುಕ್ತಗಳ ಸಂಬಂಧ ಮುಂದುವರಿಸಿದರೆ ಅವು ಇದುವರೆಗ ನೇಮಕಗೊಂಡ ಜಾಗೃತಿ ಆಯೋಗಗಳಂತೆ ಆಗುತ್ತದೆ.

ತಾ: ೦೨.೦೨.೧೯೮೬

# ಸಾರ್ವಜನಿಕರ ಜುಟ್ಟು ಅವರ ಸೇವಕರ ಕೈಯಲ್ಲಿ

ಕೇಂದ್ರ ಮತ್ತು ರಾಜ್ಯಸರ್ಕಾರಗಳ ಸ್ವಾಮ್ಯಕ್ಕೆ ಒಳಪಟ್ಟ ಸಾರ್ವಜನಿಕ ಉದ್ಯಮಗಳ ವಿಚಾರದಲ್ಲಿ ಒಂದು ಹೊಸ ಧೋರಣೆ ಆವಶ್ಯಕ. ಉದ್ಯಮಗಳನ್ನು ರಾಷ್ಟ್ರೀಕರಣ ಮಾಡುವುದು ಸಮಾಜವಾದದ ಸಿದ್ಧಾಂತದ ಒಂದು ಧೋರಣೆಯಾಗಿದೆ. ಕರ್ತವ್ಯಪ್ರಜ್ಞೆ ಇಲ್ಲದ ಮೈಗಳ್ಳರಿಗೆ ಅಥವಾ ಭ್ರಷ್ಟರಿಗೆ ಉದ್ಯೋಗ ಕಲ್ಪಿಸುವುದು ರಾಷ್ಟ್ರೀಕರಣದ ಉದ್ದೇಶವಲ್ಲ. ದೊಡ್ಡ ದೊಡ್ಡ ಉದ್ದಿಮೆಗಳು ಬಂಡವಾಳಗಾರರ ಸ್ವಾಮ್ಯಕ್ಕೆ ಸಿಕ್ಕಬಾರದೆಂಬ ಉದ್ದೇಶದಿಂದಲೂ, ರಾಷ್ಟ್ರಕ್ಕೆ ಪ್ರಯೋಜನ ಸಿಕ್ಕಬೇಕೆಂಬ ಉದ್ದೇಶದಿಂದಲೂ, ರಾಷ್ಟ್ರೀಕರಣವಾಗಬೇಕು. ರಾಷ್ಟ್ರೀಕೃತ ಉದ್ದಿಮೆಗಳು ಇಡೀ ರಾಷ್ಟ್ರದ ಹಿತವನ್ನು ಸಾಧಿಸಬೇಕು. ರಾಷ್ಟ್ರೀಕೃತ ಉದ್ಯಮಗಳು ರಾಷ್ಟ್ರದ ಹಿತವನ್ನು ಸಾಧಿಸದೆ ಹೋದರೆ ಅಥವಾ ಅವುಗಳಿಂದ ರಾಷ್ಟ್ರಕ್ಕೆ ನಷ್ಟವಾಗುವುದಾದರೆ ಅವುಗಳನ್ನು ಮುಂದುವರಿಸುವುದು ಒಳ್ಳೆಯದಲ್ಲ. ನಿಜವಾದ ಸಮಾಜವಾದಿಯಾದವನು ರಾಷ್ಟ್ರೀಕರಣ ಧೋರಣೆಯ ಹೆಸರಿನಲ್ಲಿ ದುರಾಡಳಿತವನ್ನು, ಭ್ರಷ್ಟಾಚಾರವನ್ನು, ಅನಾವಶ್ಯಕ ಮುಷ್ಕರಗಳನ್ನು ಸಹಿಸುವುದಿಲ್ಲ. ಅಂತೆಯೇ ಸೋಮಾರಿತನವನ್ನೂ ಸಹಿಸುವುದಿಲ್ಲ. ಸಮಾಜವಾದದ ಹೆಸರಿನಲ್ಲಿ ಅಥವಾ ಕಾರ್ಮಿಕರ ಹಿತದ ಹೆಸರಿನಲ್ಲಿ ವರ್ಷೇ ವರ್ಷೇ ಕೋಟ್ಯಾಂತರ ರೂಪಾಯಿಗಳ ನಷ್ಟವನ್ನು ಸಹಿಸುವುದು ರಾಷ್ಟ್ರ ದ್ರೋಹವೆನಿಸುತ್ತದೆ. ರಾಷ್ಟ್ರೀಕೃತ ಉದ್ಯಮಗಳನ್ನು ನಷ್ಟವಿಲ್ಲದೆ ನಡೆಸುವುದು ಆಸಾಧ್ಯವೆಂದು ಮನಗಂಡಾಗ ಅಂತಹ ಉದ್ಯಮಗಳನ್ನು ಮುಚ್ಚಬೇಕು ಅಥವಾ ಖಾಸಗೀ ವಲಯಕ್ಕೆ ವಹಿಸಬೇಕು. ಕರ್ತವ್ಯ ಪ್ರಜ್ಞೆ ಇಲ್ಲದ ನೌಕರರಿಗಾಗಿ ಅಥವಾ ಭ್ರಷ್ಟರಾದ ಅಧಿಕಾರಿಗಳಿಗಾಗಿ ಅಂತಹ ಉದ್ಯಮಗಳನ್ನು ನಡೆಸುವುದು ರಾಷ್ಟ್ರದ ಹಿತದಿಂದ ಒಳ್ಳೆಯದಲ್ಲ.

ರಾಜಕೀಯ ಪಕ್ಷಗಳು ಹಾಗೂ ರಾಜಕಾರಣಿಗಳು ತಮ್ಮ ರಾಜಕೀಯ ಚಟುವಟಿಕೆಗಳಿಗಾಗಿ ಎಲ್ಲಿಯವರೆಗೆ ಕಪ್ಪುಹಣದ ಕುಬೇರರನ್ನು ಆಶ್ರಯಿಸುತ್ತಾ ಬರುತ್ತಾರೋ ಅಲ್ಲಿಯವರೆಗೆ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರವನ್ನು ತಡೆಗಟ್ಟುವುದು ಬಹಳ ಕಷ್ಟ. ಆದ್ದರಿಂದ ರಾಜಕೀಯ ಪಕ್ಷಗಳನ್ನು ಕಡ್ಡಾಯವಾಗಿ ರಿಜಿಸ್ಟರ್ ಮಾಡಿಸುವ ಮತ್ತು ರಾಜಕೀಯ ಪಕ್ಷಗಳ ಲೆಕ್ಕಗಳನ್ನು ಕಡ್ಡಾಯವಾಗಿ ಪರಿಶೋಧನೆ ಮಾಡುವ ಸಲುವಾಗಿಯೂ ತ್ವರಿತವಾಗಿ ಕಾನೂನು ರಚಿಸುವುದು

ಅಗತ್ಯ. ಅಧಿಕಾರಸ್ಥಾನದಲ್ಲಿರುವ ರಾಜಕಾರಣಿಗಳು ಅಧಿಕಾರ ದುರುಪಯೋಗದಿಂದ ಹಣ ಸಂಗ್ರಹಿಸುವುದನ್ನು ತಡೆಗಟ್ಟಲೂ ಸಹ ತಕ್ಕ ಕ್ರಮ ಕೈಗೊಳ್ಳಬೇಕು. ವಿವಿಧ ರಾಜಕೀಯ ಪಕ್ಷಗಳ ಮುಖಂಡರಿಗೆ ನಿಜವಾಗಿಯೂ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರವನ್ನು ನಿರ್ಮೂಲ ಮಾಡುವ ಆಸಕ್ತಿ ಇದ್ದರೆ ಚುನಾವಣೆಗಳ ಕಾಲದಲ್ಲಿ ತಮ್ಮ ಪಕ್ಷಗಳ ವತಿಯಿಂದ ಅಭ್ಯರ್ಥಿಗಳನ್ನು ಆರಿಸುವಾಗ ಸಚ್ಚಾರಿತ್ರ್ಯಉಳ್ಳವರನ್ನು ಆರಿಸಬೇಕು. ಸಾರ್ವಜನಿಕರಿಗೆ ಲಂಚ ನಿರ್ಮೂಲನದಲ್ಲಿ ಆಸಕ್ತಿ ಇದ್ದರೆ, ಅವರ ಬಾಳು ಉತ್ತಮವಾಗಬೇಕಾದರೆ, ಚುನಾವಣೆಗಳಲ್ಲಿ ಲಂಚಕೋರರನ್ನು ಸೋಲಿಸಲು ಸಕಲ ಪ್ರಯತ್ನ ಮಾಡಬೇಕು. ಬಡವರು ಮಾಧ್ಯಮ ತರಗತಿಯವರೂ ತಮ್ಮ ಹಿತ ದೃಷ್ಟಿಯಿಂದಲೇ ಭ್ರಷ್ಟಾಚಾರದ ವಿರುದ್ಧ ನಿರಂತರ ಹೋರಾಟ ನಡೆಸಬೇಕು. ರಾಷ್ಟ್ರದ ಉನ್ನತಿ ಅಥವಾ ಅವನತಿ ಜನತೆಯ ನಡತೆ ವರ್ತನೆಗಳನ್ನು ಬಹಳ ಮಟ್ಟಿಗೆ ಅವಲಂಬಿಸಿರುತ್ತದೆ. ರಾಷ್ಟ್ರಭಕ್ತಿಯಿಲ್ಲದ ಮೂಢರೂ, ಅಪ್ರಾವಮಾಣಿಕರೂ, ಸೋಮಾರಿಗಳೂ ಎಂದು ತಮ್ಮ ರಾಷ್ಟ್ರವನ್ನು ಉನ್ನತಿಯ ಹಾದಿಯಲ್ಲಿ ಕೊಂಡೊಯ್ಯಲು ಸಾಧ್ಯವಿಲ್ಲ. ರಾಜಕಾರಣದಲ್ಲಿ ಮತ್ತು ಆಡಳಿತದಲ್ಲಿ ಸರ್ವೇಸಾಮಾನ್ಯವಾದ ಪ್ರಾಮಾಣಿಕತೆಯೂ ಕೂಡ ಇಲ್ಲದಿರುವ ಯಾವ ರಾಷ್ಟ್ರವೂ ಉನ್ನತಿಯನ್ನು ಹೊಂದಲಾರವು.

## ದಾರಿದೀಪ

ವೃತ್ತಪತ್ರಿಕೆಗಳೂ, ಇತರ ಪ್ರಸಾರ ಸಾಧನಗಳೂ ಬಹಳಮಟ್ಟಿಗೆ ಭ್ರಷ್ಟಾಚಾರವನ್ನು ತಡೆಗಟ್ಟಲು ಸಾಧ್ಯ. ಅಮೆರಿಕಾ ದೇಶದ ಅಧ್ಯಕ್ಷ ನಿಕ್ಸನ್ ಮತ್ತು ಜಪಾನ್ ದೇಶದ ಪ್ರಧಾನಿ ತಾನಕಾ ಇವರುಗಳು ವೃತ್ತಪತ್ರಿಕೆಗಳ ಪ್ರಚಾರದಿಂದ ಉದ್ಭವಿಸಿದ್ದ ಪ್ರಜಾಭಿಪ್ರಾಯಕ್ಕೆ ಎದುರು ನಿಲ್ಲಲಾರದೆ ಸ್ವಯಂ ಪ್ರೇರಿತರಾಗಿ ರಾಜೀನಾಮೆ ನೀಡಬೇಕಾಯಿತು. ಹಾಗೆಯೇ ಇತರ ರಾಷ್ಟ್ರಗಳಲ್ಲಿಯೂ ವೃತ್ತಪತ್ರಿಕೆಗಳು ಲಂಚಕೋರ ರಾಜಕಾರಣಿಗಳನ್ನೂ ಲಂಚಕೋರ ಆಧಿಕಾರಿಗಳನ್ನೂ ಅಧಿಕಾರ ಗದ್ದುಗೆಗಳಿಂದ ಕೆಳಗಿಳಿಸುವ ಪ್ರಯತ್ನವನ್ನು ಬಹಳ ಯಶಸ್ವಿಯಾಗಿ ಮಾಡುತ್ತಿವೆ. ನಮ್ಮ ದೇಶದ ವೃತ್ತಪತ್ರಿಕೆಗಳು, ಈ ದಿಸೆಯಲ್ಲಿ ಪ್ರಯತ್ನ ಮಾಡಿದರೆ ರಾಜಕೀಯ ಮತ್ತು ಆಡಳಿತ ಭ್ರಷ್ಟಾಚಾರವನ್ನು ಬಹುಮಟ್ಟಿಗೆ ತಡೆಗಟ್ಟಬಹುದು. ಉನ್ನತ ರಾಜಕಾರಣಿಗಳೂ ಅಧಿಕಾರಿಗಳೂ ಇತರರಿಗೆ ಮಾರ್ಗದರ್ಶನ ನೀಡುವ ರೀತಿಯಲ್ಲಿ ಆದರ್ಶಪ್ರಾಯವಾದ ಜೀವನವನ್ನು ನಡೆಸಬೇಕು. ಅವರ ರೀತಿನೀತಿಗಳು, ಅವರ ಜೀವನಕ್ರಮ ಇತರರಿಗೆ ಮಾದರಿಯಾಗಿರಬೇಕು.

"ಮಂತ್ರಿಗಳೂ, ಶಾಸಕರೂ, ತಮ್ಮ ಸಾರ್ವಜನಿಕ ಮತ್ತು ವೈಯಕ್ತಿಕ ಜೀವನದಲ್ಲಿ ಯಾವ ರೀತಿಯ ಅನುಮಾನಕ್ಕೂ ಆಸ್ಪದ ಕೊಡದೆ ಪರಿಶುದ್ಧ ರೀತಿಯಲ್ಲಿ ಬಾಳಬೇಕು" ಎಂದು ಮಹಾತ್ಮಗಾಂಧಿಯವರು ಹೇಳಿದ್ದರು. ದಿವಂಗತ ಜವಾಹರ್‌ಲಾಲ್ ನೆಹರೂರವರು ಕೂಡ ಅದೇ ರೀತಿಯ ಮಾತುಗಳನ್ನು ಹೇಳುತ್ತಿದ್ದರು. ಈ ಇಬ್ಬರು ಮಹಾಪುರುಷರ ಉಪದೇಶಗಳು ಇಂದಿನ ರಾಜಕಾರಣಿಗಳಿಗೂ ಸರ್ಕಾರಿ ಅಧಿಕಾರಿಗಳಿಗೂ ದಾರಿದೀಪವಾಗಿರಲಿ ಎಂದು ಹಾರೈಸುತ್ತೇನೆ.

ತಾ: ೨೫.೦೧.೧೯೮೭

# ನಮ್ಮ ವಿಕೃತಗುಣಗಳೇ ನಮ್ಮ ಪ್ರಬಲ ಶತ್ರುಗಳು

ಭಾರತೀಯರೇ ಭಾರತದ ಶತ್ರುಗಳೆಂಬುದನ್ನು ನಮ್ಮ ಇತಿಹಾಸ ಸಾರಿ ಸಾರಿ ಹೇಳಿದೆ. ಅಶೋಕ ಚಕ್ರವರ್ತಿಯ ಕಾಲಾನಂತರ, ಭರತ ಖಂಡದಲ್ಲಿ ಕ್ರಮೇಣ ಅವನತಿ ಪ್ರಾಪ್ತಿಯಾಯಿತು. ಇದರ ಪರಿಣಾಮವಾಗಿ ದೇಶದಲ್ಲಿ ಕ್ರಮೇಣ ಅನಾಯಕತ್ವ ಪ್ರಾರಂಭವಾಯಿತು. ರಾಜ ಮಹಾರಾಜರುಗಳು ಸ್ವಾರ್ಥಸಾಧನೆಗಾಗಿ ಅಥವಾ ದ್ವೇಷ ಸಾಧನೆಗಾಗಿ ಪರಸ್ಪರ ಕಚ್ಚಾಡತೊಡಗಿದರು. ಒಗ್ಗಟ್ಟು ತಪ್ಪಿದ ದೇಶವನ್ನು ವಿದೇಶಿಯರು ಒಬ್ಬರಾದ ಮೇಲೆ ಇನ್ನೊಬ್ಬರಂತೆ, ಆಕ್ರಮಿಸಿ ಆಳಿದರು. ಕಟ್ಟಕಡೆಗೆ ಒಂದು ಸಣ್ಣ ಬ್ರಿಟಿಷ್ ವ್ಯಾಪಾರ ಸಂಸ್ಥೆಯು ಬಹಳ ಸುಲಭವಾಗಿ ಇಡೀ ದೇಶವನ್ನು ವಶಪಡಿಸಿಕೊಂಡು, ಬ್ರಿಟಿಷ್ ಆದಿಪತ್ಯವು ನೆಲೆಗೊಳ್ಳುವಂತೆ ಮಾಡಿತು. ಹೀಗೆ ಸುಮಾರು ಒಂದು ಸಾವಿರ ವರ್ಷಗಳಿಗೆ ಮೇಲ್ಪಟ್ಟು ಭಾರತೀಯರು ವಿವಿಧ ವಿದೇಶಿಯರ ಗುಲಾಮರಾಗಿ ಬಾಳಿದರು. ೧೮೫೭ ರಿಂದ ೧೯೪೭ರ ವರೆಗಿನ ಸುಮಾರು ೯೦ ವರ್ಷಗಳ ಅವಧಿಯನ್ನು ಈ ದೇಶದ ಇತಿಹಾಸದಲ್ಲಿ ಪರಿವರ್ತನೆಯ ಅಥವಾ ನವೋದಯದ ಯುಗವೆಂದು ಕರೆಯಬಹುದಾಗಿದೆ. ೧೯ನೇ ಶತಮಾನದ ಉತ್ತರಾರ್ಧ ಭಾಗದಲ್ಲಿ ಈ ದೇಶದಲ್ಲಿ ಬದುಕಿದ್ದ ಕೆಲವು ಚಿಂತನಾಶೀಲರೂ, ದಾರ್ಶನಿಕರೂ, ಕವಿಗಳೂ, ರಾಷ್ಟ್ರ ಭಕ್ತರೂ, ಸಮಾಜ ಸುಧಾರಕರೂ ಒಂದು ಪ್ರಬಲವಾದ ವಿಚಾರ ಕ್ರಾಂತಿಯನ್ನುಂಟು ಮಾಡಿದರು. ಆ ಮಹಾಪುರುಷರ ಶ್ರಮ, ರಾಷ್ಟ್ರಭಕ್ತಿ ತ್ಯಾಗ ಇವುಗಳ ದೆಸೆಯಿಂದ ಹಿಮಾಚಲದಿಂದ ಕನ್ಯಾಕುಮಾರಿಯವರೆಗೆ ಹೊಸ ವಿಚಾರಧಾರೆ ಹರಿಯಿತು; ಹೊಸ ದೃಷ್ಟಿ ಮೂಡಿತು; ರಾಷ್ಟ್ರಭಕ್ತಿ ಉಕ್ಕಿ ಹರಿಯುವಂತಾಯಿತು. ಇವುಗಳ ಪರಿಣಾಮವಾಗಿ ಅಜ್ಞಾನದ ಮಬ್ಬಿನಲ್ಲಿ, ಆಲಸ್ಯದ ಜಡನಿದ್ದೆಯಲ್ಲಿ, ನಿಶ್ಚೇತನವಾಗಿದ್ದ ಭಾರತವು ಎಚ್ಚೆತ್ತು ನಿಸ್ಸಹಾಯಕತೆಯ ಹೇಡಿತನದ ಮನೋವೃತ್ತಿಯನ್ನು ತ್ಯಜಿಸಿ, ಪೌರುಷದ ಭರವಸೆಯ ಮಾರ್ಗವನ್ನು ಹಿಡಿಯುವಂತಾಯ್ತು ಅಂತಿಮದಲ್ಲಿ ಮಹಾತ್ಮ ಗಾಂಧೀಯವರ ಮುಂದಾಳುತನದಲ್ಲಿ ಅಹಿಂಸಾ ಹೋರಾಟ ನಡೆದು ೧೯೪೭ ರಲ್ಲಿ ದೇಶವು ಬ್ರಿಟಿಷ್ ಆಳ್ವಿಕೆಯ ಶೃಂಖಲೆಗಳಿಂದ ಮುಕ್ತವಾಗಿ ಸ್ವತಂತ್ರವಾಯ್ತು. ಸ್ವತಂತ್ರವಾದ ನಂತರ ದೇಶ ಇಬ್ಭಾಗವಾಗಿ, ಪಾಕಿಸ್ತಾನ ಮತ್ತು ಭಾರತ ಎಂಬ ಎರಡು ರಾಷ್ಟ್ರಗಳು ಹುಟ್ಟಿದವು.

ಭಾರತವು ಸ್ವತಂತ್ರವಾದ ನಂತರ, ಸುಮಾರು ೧೫ ವರ್ಷಗಳ ಕಾಲ ದೇಶದ ಆಗುಹೋಗುಗಳು ಇದ್ದುದರಲ್ಲಿ ತೃಪ್ತಿಕರವಾಗಿದ್ದುವು. ಕ್ರಮೇಣ ರಾಜಕೀಯ ಹೊಲಸಾಗುತ್ತಾ ಬಂತು; ಆಡಳಿತ ಹದಗೆಡುತ್ತಾ ಬಂತು. ರಾಷ್ಟ್ರಕ್ಕೆ ಸ್ವಾತಂತ್ರ ಲಭಿಸಿ ಇನ್ನೂ ೫೦ ವರ್ಷಗಳು ಸಹಾ ಆಗಿಲ್ಲ. ಇದು ದಿಗ್ಭ್ರಮೆಯಾಗುವ ರೀತಿಯಲ್ಲಿ ಈ ದೇಶದಲ್ಲಿ ಅನೈಕ್ಯಮತ್ಯದ ಬಿರುಗಾಳಿ ಮತ್ತೆ ಬೀಸತೊಡಗಿದೆ. ವಿಚ್ಛಿದ್ರಕಾರಿ ಶಕ್ತಿಗಳು ದೇಶದ ಕೆಲವು ಕಡೆಗಳಲ್ಲಿ ತಮ್ಮ ಕರಾಳ ತಲೆಯನ್ನು ಎತ್ತಿಕೊಂಡಿವೆ. ಜನರೂ, ಜನನಾಯಕರೂ ಜಾತಿಮತಗಳ ಹೆಸರಿನಲ್ಲಿ ಅಥವಾ ಅಧಿಕಾರಕ್ಕಾಗಿ ರಾಷ್ಟ್ರದ ಹಿತವನ್ನು ಮರೆತು, ನಮ್ಮ ಪೂರ್ವಿಕರಂತೆ ಪರಸ್ಪರ ಕಚ್ಚಾಡ ತೊಡಗಿದ್ದಾರೆ. ಕೆಲವರು ಧರ್ಮದ ಸೋಗಿನಲ್ಲಿ ಕ್ರೂರ ರಕ್ಕಸರಂತೆ ನಿರಪರಾಧಿಗಳನ್ನು ಕೊಲೆ ಮಾಡುತ್ತಿದ್ದರೆ, ಕೆಲವರು ರಾಜಕೀಯ ಪೈಪೋಟಿಯಿಂದ ಕೊಲೆ ಮಾಡುತ್ತಿದ್ದಾರೆ. ಹಣಕ್ಕಾಗಿ ನಡೆಯತಕ್ಕ ಕೊಲೆ ದರೋಡೆ ಮುಂತಾದ ಹೀನಕೃತ್ಯಗಳೂ, ಅಕ್ರಮ ಸಂಪಾದನೆಗಾಗಿ ನಡೆಯತಕ್ಕ ಆರ್ಥಿಕ ಅಪರಾಧಗಳೂ ದಿನೇ ದಿನೇ ಹೆಚ್ಚುತ್ತಾ ಇವೆ. ರಾಜಕಾರಣಿಗಳು ಅಧಿಕಾರಕ್ಕಾಗಿ ಹಸಿದ ತೋಳಗಳಂತೆ ವರ್ತಿಸುತ್ತಿದ್ದಾರೆ. ಸರ್ವವ್ಯಾಪಿಯಾಗಿರುವ ಭ್ರಷ್ಟಾಚಾರವು ರಾಷ್ಟ್ರವನ್ನು ಹಿಂಡಿ ಹೀರುತ್ತಾ ಇದೆ. ಜನರು ಅದರಲ್ಲೂ ವಿದ್ಯಾವಂತರೂ, ಬುದ್ಧಿಜೀವಿಗಳೆನಿಸಿಕೊಂಡವರೂ, ಸಾತ್ವಿಕ ಕ್ರೋಧವನ್ನು ಸಂಪೂರ್ಣವಾಗಿ ಕಳೆದುಕೊಂಡು ತಮಗೂ ರಾಷ್ಟ್ರದ ಆಗುಹೋಗುಗಳಿಗೂ ಯಾವ ಸಂಬಂಧವೂ ಇಲ್ಲವೆಂಬಂತೆ ತಂತಮ್ಮ ಕೆಲಸಕಾರ್ಯಗಳಲ್ಲಿ ಮಗ್ನರಾಗಿ ನಿರ್ಲಿಪ್ತರಾಗಿರುತ್ತಾರೆ.

ಹಿಂದೆ ಭಾರತೀಯರು ಸಾವಿರ ವರ್ಷಗಳಿಗೆ ಮೇಲ್ಪಟ್ಟು ಗುಲಾಮರಾಗಿ ಬಾಳಿದ್ದಕ್ಕೂ ಈಗ ಪುನಃ ಜನರೂ ಜನನಾಯಕರೂ ನಮ್ಮ ಪೂರ್ವಿಕರಂತೆ ಪರಸ್ಪರ ಕಚ್ಚಾಡಿ ಹಲವು ಸಮಸ್ಯೆಗಳನ್ನು ಸೃಷ್ಟಿಸಿರುವುದಕ್ಕೂ ಮೂಲಕಾರಣ ಒಂದೇ ಆಗಿರಬೇಕೆಂದು ನನ್ನ ಭಾವನೆ. ಈ ಮೂಲಕಾರಣವೇನೆಂಬುದನ್ನು ವಿಮರ್ಶಿಸುವುದೇ ಈ ಉಪನ್ಯಾಸದ ಮುಖ್ಯ ಉದ್ದೇಶ. ನಾನು ಇತಿಹಾಸಕಾರನೂ ಅಲ್ಲ; ಸಮಾಜ ಶಾಸ್ತ್ರಜ್ಞನೂ ಅಲ್ಲ. ಸಾಮಾನ್ಯಪ್ರಜೆಯಾಗಿ ಅರ್ಧ ಶತಮಾನಕ್ಕೂ ಮೇಲ್ಪಟ್ಟು ಈ ದೇಶದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾ ಬಂದಿದ್ದೇನೆ. ನಮ್ಮ ದೇಶದ ಇತಿಹಾಸವನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿದ್ದೇನೆ. ಭಾರತೀಯರ ಮನೋವೃತ್ತಿ, ಸ್ವಭಾವ ಗುಣನಡತೆಗಳನ್ನು ತುಲಾತ್ಮಕ ದೃಷ್ಟಿಯಿಂದ ವೀಕ್ಷಿಸುತ್ತಾ ಬಂದಿದ್ದೇನೆ. ಹಿಂದೆ ಭಾರತ ಸಾವಿರ ವರ್ಷಕ್ಕೆ ಮೇಲ್ಪಟ್ಟು ವಿದೇಶಿಯರ ಆಳ್ವಿಕೆಗೆ ಒಳಗಾಗಿದ್ದುದಕ್ಕೂ ಈಗಿರುವ ಪರಿಸ್ಥಿತಿಗೂ ನಮ್ಮಲ್ಲಿರುವ ಕೆಲವು ವಿಕೃತ ಗುಣಗಳೂ, ಕೆಲವು ವಿಲಕ್ಷಣ

ಸಂಪ್ರದಾಯಗಳೂ ಮೂಲ ಕಾರಣವೆಂದು ನನಗನಿಸುತ್ತದೆ. ಎಲ್ಲಾ ದೇಶಗಳ ಜನರಿಗೂ ಕೆಲವು ವಿಶಿಷ್ಟ ವಿಲಕ್ಷಣ ಗುಣಗಳಿರುತ್ತವೆ. ಆದರೆ ನಮ್ಮ ದೇಶದಲ್ಲಿರುವ ಕೆಲವು ವಿಕೃತ ಗುಣಗಳೂ, ಕೆಲವು ವಿಲಕ್ಷಣ ಪದ್ಧತಿಗಳೂ ದೇಶದ ಐಕ್ಯತೆಗೆ ಮತ್ತು ಪ್ರಗತಿಗೆ ಮೊದಲಿನಿಂದಲೂ ಮಾರಕವಾಗಿವೆ.

ನಮ್ಮಲ್ಲಿರುವ ಅನಿಷ್ಟ ವಿಕೃತಗುಣಗಳಲ್ಲಿ ಕೆಲವು ನಮ್ಮ ಪೂರ್ವಿಕರಿಂದ ರಕ್ತಗತವಾಗಿ ಬಂದವು. ಕೆಲವು ಕಳೆದ ಸುಮಾರು ೨೫ ವರ್ಷಗಳಿಂದೀಚೆಗೆ ಬೆಳೆದು ಬಂದ ಅನಿಷ್ಟ ಗುಣಗಳು. ಮಾನವರೆಲ್ಲರಲ್ಲೂ ಸ್ವಾರ್ಥಸಾಧಕ ಸಮಯಸಾಧಕ ಪ್ರವೃತ್ತಿಗಳು ಸ್ವಾಭಾವಿಕವಾಗಿ ಇದ್ದೇ ಇರುತ್ತವೆ. ಆದರೆ ಈ ಪ್ರವೃತ್ತಿಗಳು ಮಿತಿಮೀರಿದ ಪ್ರಮಾಣದಲ್ಲಿ ಬೆಳೆದರೆ ಸಮಾಜಕ್ಕೂ ದೇಶಕ್ಕೂ ಬಹಳ ಅಪಾಯ. ಭಾರತೀಯರಾದ ನಮ್ಮಲ್ಲಿ ಈ ಪ್ರವೃತ್ತಿಗಳಿಂದಲೇ ನಮ್ಮ ಪೂರ್ವಿಕರು ಪರಸ್ಪರ ಕಚ್ಚಾಡಿ ವಿದೇಶೀಯರ ಆಕ್ರಮಣಕ್ಕೆ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಆಮಂತ್ರಣ ನೀಡಿ ಒಂದು ಸಾವಿರ ವರ್ಷಗಳಿಗೆ ಮೇಲ್ಪಟ್ಟು ಭರತ ಖಂಡವು ವಿವಿಧ ವಿದೇಶೀಯರ ಆಳ್ವಿಕೆಗೆ ಒಳಗಾಗುವಂತೆ ಮಾಡಿದರು. ಈ ಪ್ರವೃತ್ತಿಗಳ ದೆಸೆಯಿಂದಲೇ ಇಂದು ಜನರೂ, ಅಧಿಕಾರಕ್ಕಾಗಿ ಅಥವಾ ಜಾತಿಮತಗಳ ಹೆಸರಿನಲ್ಲಿ ಪರಸ್ಪರ ಕಚ್ಚಾಡುತ್ತಿದ್ದಾರೆ. ಮಿತಿಮೀರಿದ ಸ್ವಾರ್ಥಸಾಧಕ ಪ್ರವೃತ್ತಿಯ ದೆಸೆಯಿಂದ ರಾಷ್ಟ್ರ ಜೀವನವು ಬಹಳ ಕಲುಷಿತಗೊಂಡು ರಾಜಕಾರಣವೂ, ಸಾರ್ವಜನಿಕ ಆಡಳಿತವೂ ಬಹಳ ಹೊಲಸಾಗಿವೆ. ರಾಜಕಾರಣಿಗಳ ಅಧಿಕಾರಲಾಲಸೆಗೆ ಮಿತಿಯೇ ಇಲ್ಲ. ಮಿತಿಮೀರಿದ ಅಧಿಕಾರ ಲಾಲಸೆಯಿಂದ ರಾಜಕಾರಣಿಗಳು ನೈತಿಕ ಮೌಲ್ಯಗಳನ್ನು ನಾಶಪಡಿಸಿರುವುದಲ್ಲದೆ, ಪ್ರಜಾಪ್ರಭುತ್ವದ ಮೌಲ್ಯಗಳನ್ನು ವಿಕೃತಗೊಳಿಸಿದ್ದಾರೆ.

ಕಳೆದ ಸುಮಾರು ೨೫ ವರ್ಷಗಳಿಂದ ಅಧಿಕಾರದಾಹ ಪೀಡಿತರಾದ ರಾಜಕಾರಣಿಗಳು ತಮ್ಮ ಸ್ವಾರ್ಥಸಾಧನೆಗಾಗಿ ಒಂದೇ ಸಮನೆ ಜನರನ್ನು ಭ್ರಷ್ಟರನ್ನಾಗಿ ಮಾಡುತ್ತಾ ಬಂದಿರುತ್ತಾರೆ. ದೇಶಕ್ಕೆ ಸ್ವಾತಂತ್ರ್ಯ ಲಭಿಸುವ ಮುನ್ನ ಈ ದೇಶದ ಜನರು ಬಡವರಾಗಿ ಅವಿದ್ಯಾವಂತರಾಗಿದ್ದರೂ ಸಹ ಬಹಳ ಸತ್ಯಸಂಧರಾಗಿದ್ದರು. ರಾಜಕಾರಣಿಗಳು ತಮ್ಮ ಸ್ವಾರ್ಥಸಾಧನೆಗಾಗಿ ಅವರನ್ನು ಅಸತ್ಯವಂತರನ್ನಾಗಿ ಮಾಡುತ್ತಾ ಬಂದಿರುತ್ತಾರೆ. ಚುನಾವಣೆಗಳ ಕಾಲದಲ್ಲಿ ಓಟನ್ನು ಕೊಂಡುಕೊಳ್ಳುವ ಪದ್ಧತಿಯನ್ನು ಜಾರಿಗೆ ತಂದು ಮತದಾರರನ್ನು ಭ್ರಷ್ಟರನ್ನಾಗಿ ಮಾಡಿರುತ್ತಾರೆ. ಅತಿಮುಗ್ಧರೂ ಸತ್ಯ ಸಂದರೂ ಆಗಿದ್ದ ಹಳ್ಳಿಯ ಜನರನ್ನೂ ಕೂಡ ಅಸತ್ಯವಂತರನ್ನಾಗಿ ಮಾಡಿದರು. ಮೊದಲು ಹಳ್ಳಿಗಳಲ್ಲಿ ಚುನಾವಣೆಗಳು ನಡೆಯುತ್ತಿದ್ದರೂ ಕೂಡ ಶಾಂತಿ ಸೌಹಾರ್ದತೆಗಳಿರುತ್ತಿದ್ದವು. ಓಟುಗಳನ್ನು ಕೊಂಡುಕೊಳ್ಳುವ ಅನಾಚಾರವಿರಲಿಲ್ಲ.

ಕಳೆದ ೨೫ ವರ್ಷಗಳಿಂದ ಓಟಿನ ಬೇಟೆಗಾಗಿ ಭ್ರಷ್ಟ ರಾಜಕಾರಣಿಗಳು ಹಳ್ಳಿಗಳಲ್ಲಿ ವ್ಯಾಜ್ಯದ ಬೀಜಗಳನ್ನು ಬಿತ್ತಿ ಶಾಂತಿ ಸೌಹಾರ್ದತೆ ಇಲ್ಲದಂತೆ ಮಾಡಿದರು. ಕಳೆದ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತಿಗಳಿಗೆ ನಡೆದಿದ್ದ ಚುನಾವಣೆಗಳ ಕಾಲದಲ್ಲಿ ಮತ್ತು ಅನಂತರ ನಡೆದ ವಿದ್ಯಮಾನಗಳನ್ನು ಗ್ರಹಿಸಿದರೆ ಅಧಿಕಾರದ ವಿಕೇಂದ್ರೀಕರಣವಾಗುವ ಬದಲು ಭ್ರಷ್ಟಾಚಾರದ ವಿಕೇಂದ್ರೀಕರಣ ಆಗುತ್ತದೆಯೆಂಬ ಸೂಚನೆಗೊಳ್ಳುತ್ತಿದೆ. ಇಂದಿನ ರಾಜಕಾರಣದಲ್ಲಿ ಪ್ರಾಮಾಣಿಕತೆ ಒಂದು ಅರ್ಹತೆಯೆಂದು ಪರಿಗಣಿಸಲ್ಪಟ್ಟಿಲ್ಲ; ಅಪ್ರಮಾಣಿಕತೆ ಅನರ್ಹತೆಯಂದು ಪರಿಗಣಿಸಲ್ಪಟ್ಟಿಲ್ಲ. ಜನರ ಮೌಢ್ಯವೇ ರಾಜಕಾರಣಿಗಳ ಮೂಲ ಬಂಡವಾಳವಾಗಿದೆ.

ಭ್ರಷ್ಟ ರಾಜಕಾರಣಿಗಳೂ, ಲಂಚಕೋರ ಸರ್ಕಾರಿ ಅಧಿಕಾರಿಗಳೂ, ಹಣಕ್ಕಾಗಿ ದುರ್ವ್ಯವಹಾರಗಳಲ್ಲಿ ತೊಡಗಿರುವ ಜನರೂ ಸತ್ಯಕ್ಕೂ ಮತ್ತು ಅಸತ್ಯಕ್ಕೂ ಇರುವ ವ್ಯತ್ಯಾಸವನ್ನೇ ಅಳಿಸಿ ಹಾಕಿದ್ದಾರೆ. ಭಸ್ಮಾಸುರನು ಮುಟ್ಟಿದ್ದೆಲ್ಲವೂ ಭಸ್ಮವಾಗುತ್ತಿತ್ತಂತೆ. ಲಂಚಕೋರ ರಾಜಕಾರಣಿಗಳೂ ಅಧಿಕಾರಿಗಳೂ ಮುಟ್ಟಿದ್ದೆಲ್ಲವೂ ಇಂದು ಲಂಚಮಯವಾಗುತ್ತದೆ. ರಾಜಕಾರಣಿಗಳು ಸ್ಥಳೀಯ ಸಂಸ್ಥೆಗಳಿಗೆ ಹೋದರೆ ಅವುಗಳನ್ನು ಲಂಚಮಯ ಮಾಡುತ್ತಾರೆ. ಸಹಕಾರ ಸಂಘಗಳಿಗೆ ಹೋದರೆ ಅವುಗಳನ್ನು ಲಂಚಮಯ ಮಾಡುತ್ತಾರೆ. ರಾಜಕಾರಣಿಗಳೂ, ಅಧಿಕಾರಿಗಳೂ ಕಾಲಿಟ್ಟ ಕ್ಷೇತ್ರಗಳೆಲ್ಲಾ ಲಂಚಮಯವಾಗಿವೆ. ಇಂದು ಬಹುಮಂದಿ ಜನರು ರಾಜಕಾರಣಕ್ಕೆ ಧುಮುಕುವುದು ದೇಶಸೇವೆಗೂ ಅಲ್ಲ; ಜನಸೇವೆಗೂ ಅಲ್ಲ. ಸಂಪತ್ತು ದೌವಲತ್ತುಗಳನ್ನು ಪಡೆಯಲಿಕ್ಕಾಗಿ ಈ ದೇಶದಲ್ಲಿ ಕೆಲವರು ೫ ವರ್ಷಗಳ ಕಾಲ ಮಂತ್ರಿಗಳಾಗಿದ್ದವರು ಕೋಟ್ಯಾಧಿಪತಿಗಳಾಗಿದ್ದಾರೆ; ಕೆಲವರು ೫ ವರ್ಷಗಳ ಕಾಲ ಶಾಸಕರಾಗಿದ್ದವರು ಲಕ್ಷಾಧಿಪತಿಗಳಾಗಿರುತ್ತಾರೆ. ಇಂತಹ ಮಹನೀಯರೂ ಕೂಡ ಬಡವರ ಬಂಧುಗಳಂತೆ ವರ್ತಿಸುತ್ತಾರೆ. ಕೆಲವು ಕಡೆಗಳಲ್ಲಿ ಶಾಸಕರಾಗಿರುವವರು ತಮ್ಮ ಚುನಾವಣಾ ಕ್ಷೇತ್ರಗಳಲ್ಲಿರುವ ಸರ್ಕಾರಿ ನೌಕರರಿಂದ ಪ್ರತಿ ತಿಂಗಳೂ ಕಪ್ಪವನ್ನು ಕಡ್ಡಾಯವಾಗಿ ವಸೂಲು ಮಾಡುತ್ತಿದ್ದಾರೆ. ಇದರಿಂದ ನಮ್ಮ ದೇಶದ ರಾಜಕಾರಣ ಎಷ್ಟರ ಮಟ್ಟಿಗೆ ಹೊಲಸಾಗಿರುತ್ತದೆಂಬುದನ್ನು ತಾವೇ ಊಹಿಸಿಕೊಳ್ಳಿ. ಭ್ರಷ್ಟ ರಾಜಕಾರಣಿಗಳೂ, ಅಧಿಕಾರಿಗಳೂ ತಮ್ಮ ಬುಡವನ್ನು ಭದ್ರಮಾಡಿ ರಾಷ್ಟ್ರದ ಬುಡವನ್ನು ಅಭದ್ರ ಮಾಡುತ್ತಿದ್ದಾರೆ.

ಈಚೆಗೆ ಬಯಲಿಗೆ ಬಂದಿರುವ ಕೆಲವು ವ್ಯವಹಾರಗಳನ್ನು ನೋಡಿದರೆ ದಿಗ್ಭ್ರಮೆಯಾಗುತ್ತದೆ. ರಾಷ್ಟ್ರದ ರಕ್ಷಣೆಗಾಗಿ ಶಸ್ತ್ರಾಸ್ತ್ರಗಳನ್ನು ಕೊಂಡುಕೊಳ್ಳುವಾಗ

ದೇಶದ್ರೋಹಿಗಳು ಕೆಲವರು ಲಂಚವನ್ನು ಪಡೆದಿರುತ್ತಾರೆಂಬ ಆಪಾದನೆ ಬಹಳ ಕಳವಳಕಾರಿಯಾಗಿದೆ. ಕೆಲವರು ದೇಶದ್ರೋಹಿಗಳು ಅಕ್ರಮ ಮಾರ್ಗಗಳಿಂದ ಕೂಡಿಟ್ಟ ಕಪ್ಪು ಹಣವನ್ನು ಕಾನೂನಿನ ಬೆಲೆಯಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ವಿದೇಶಿ ಬ್ಯಾಂಕುಗಳಲ್ಲಿ ಇಟ್ಟಿರುತ್ತಾರೆಂಬ ವದಂತಿ ಪ್ರಬಲವಾಗಿದೆ. ಭ್ರಷ್ಟ ರಾಜಕಾರಣಿಗಳು ಜನರನ್ನು ಭ್ರಷ್ಟರನ್ನಾಗಿ ಮಾಡಿರುವುದರ ಜೊತೆಗೆ ಆಡಳಿತ ಯಂತ್ರವನ್ನೂ ಕೂಡ ಲಂಚಮಯ ಮಾಡಿದರು. ಅಧಿಕಾರದಲ್ಲಿರುವ ಎಲ್ಲಾ ರಾಜಕೀಯ ಪಕ್ಷಗಳೂ ತಂತಮ್ಮ ಪಕ್ಷಗಳ ಖರ್ಚುವೆಚ್ಚಗಳಿಗಾಗಿ ಸರ್ಕಾರಿ ಆಡಳಿತ ಯಂತ್ರವನ್ನು ದುರುಪಯೋಗಪಡಿಸಿಕೊಳ್ಳುವುದಲ್ಲದೆ. ಕಳ್ಳ ಹಣದ ಕುಬೇರರನ್ನು ಆಶ್ರಯಿಸುತ್ತಾರೆ. ಈ ದೇಶದ ಯಾವ ರಾಜಕೀಯ ಪಕ್ಷವೂ ಕೂಡ ಜಮಾ ಖರ್ಚಿನ ಬಗ್ಗೆ ಲೆಕ್ಕವನ್ನಿಟ್ಟಿರುವುದಿಲ್ಲ. ಆದರೂ ಕೂಡ ಎಲ್ಲಾ ಪಕ್ಷಗಳ ಧುರೀಣರು, ಅತ್ಯಂತ ಪ್ರಾಮಾಣಿಕರಂತೆ ಮಾತನಾಡುತ್ತಾರೆ. ಈ ದೇಶದ ಭ್ರಷ್ಟ ಸರ್ಕಾರಿ ಅಧಿಕಾರಿಗಳ ಲಂಚದ ಕಾರುಬಾರುಗಳ ವಿಚಾರದಲ್ಲಿ ಹಲವು ಸಂಪುಟಗಳನ್ನು ಬರೆಯಬಹುದು. ಇವರ ವಿಚಾರವನ್ನು ಮುಂದೆ ಪ್ರಸ್ತಾಪಿಸುತ್ತೇನೆ.

ವಿಶ್ವವಿಖ್ಯಾತ ವಿ.ಎಸ್.ನಯಿಪಾಲ್‌ರವರು ಬರೆದಿರುವ ಒಂದು ಗ್ರಂಥದಲ್ಲಿ ಭಾರತದ ವಿಚಾರವನ್ನು ಪ್ರಸ್ತಾಪಿಸುತ್ತಾ, ಶತಮಾನಗಳ ಹಿಂದೆ ರಾಜಮಹಾರಾಜರುಗಳೂ ಪುರೋಹಿತ ವರ್ಗದವರೂ ತಮ್ಮ ಸ್ವಾರ್ಥಸಾಧಕ ವರ್ತನೆಯಿಂದ ಭಾರತವು ಒಂದು ಸಾವಿರದ ಒಂದು ನೂರ ಐವತ್ತು ವರ್ಷಗಳ ಕಾಲ ವಿದೇಶೀಯರ ಆಳ್ವಿಕೆಗೆ ಒಳಗಾಗುವಂತೆ ಮಾಡಿ, ದೇಶಕ್ಕೆ ದ್ರೋಹ ಬಗೆದರೆಂದು ಹೇಳಿದ್ದಾರೆ. ಇಂದು ರಾಜಕಾರಣಿಗಳೂ, ಸರ್ಕಾರಿ ಅಧಿಕಾರಿಗಳೂ ತಮ್ಮ ಸ್ವಾರ್ಥ ಸಾಧಕ ವರ್ತನೆಯಿಂದ ವಿವಿಧ ರೀತಿಗಳಲ್ಲಿ ದೇಶಕ್ಕೆ ದ್ರೋಹ ಬಗೆಯುತ್ತಿದ್ದಾರೆ.

ನಮ್ಮಲ್ಲಿ ಅಡಗಿರುವ ಸಮಯಸಾಧಕ ಪ್ರವೃತ್ತಿಯ ದೆಸೆಯಿಂದ ನಮಗೆ ಸಾತ್ವಿಕ ಕ್ರೋಧ ಮತ್ತು ಕ್ಷಾತ್ರಗುಣ ಬಹಳ ಕಡಿಮೆ; ಸನ್ನಿವೇಶಕ್ಕೆ ಅನುಗುಣವಾಗಿ ನುಸುಳಿಕೊಳ್ಳುವ ಕುಯುಕ್ತಿ ಬಹಳ ಹೆಚ್ಚು. ಜನರು ಗೆದ್ದೆತ್ತಿನ ಬಾಲವನ್ನು ಹಿಡಿಯುತ್ತಾ, ಅಧಿಕಾರದಲ್ಲಿರುವವರು ಕೇಡಿಗಳಾದರೂ ಕೂಡ ಅವರನ್ನು ಪೂಜಿಸುತ್ತಾ ಹೋಗುತ್ತಾರೆ. ಸನ್ನಿವೇಶಕ್ಕೆ ಹೊಂದಿಕೊಳ್ಳುತ್ತಾ ಹೋಗುತ್ತಾರೆ. ಈ ಕಾರಣದಿಂದಲೇ ರಾಜಕೀಯ ಪಕ್ಷಗಳು ಆಗಾಗ ಒಡೆದು ಪುಡಿ ಪುಡಿಯಾಗುತ್ತವೆ. ಈ ಕಾರಣದಿಂದಲೇ ರಾಜಕಾರಣಿಗಳು ನಾಚಿಕೆ ಮತ್ತು ಆತ್ಮಗೌರವಗಳನ್ನು ಬಿಟ್ಟು ಒಂದು ಪಕ್ಷದಿಂದ ಇನ್ನೊಂದು ಪಕ್ಷಕ್ಕೆ ಅಧಿಕಾರಕ್ಕಾಗಿ ಹಾರುತ್ತಾರೆ. ನಮ್ಮ ದೇಶದ ರಾಜಕಾರಣಿಗಳಿಗೆ

ಯಾವುದಾದರೂ ಒಂದು ಹುದ್ದೆ ಇರಲೇಬೇಕು. ಆ ಹುದ್ದೆಯಿಂದಲೇ ಅವರು ಜೀವನ ನಡೆಸಬೇಕು. ಹುದ್ದೆಯಿಲ್ಲದ ರಾಜಕಾರಣಿಗಳು ನೀರಿನಿಂದ ಹೊರಬಿದ್ದ ಮೀನುಗಳಂತಾಗುತ್ತಾರೆ. ರಾಜಕೀಯ ಹುದ್ದೆಯಿಲ್ಲದಿರುವಾಗ ಅವರಿಗೆ ಸ್ವತಂತ್ರವಾಗಿ ಜೀವನ ಮಾಡುವ ಶಕ್ತಿಯೇ ಇರುವುದಿಲ್ಲ. ಅದಕ್ಕಾಗಿ ಅಧಿಕಾರದಲ್ಲಿದ್ದಾಗ ಅಕ್ರಮ ಸಂಪಾದನೆಗೆ ಕೈ ಹಾಕುತ್ತಾರೆ.

ಮಿತಿಮೀರಿದ ದುರಾಸೆ ನಮಗಂಟಿರುವ ಇನ್ನೊಂದು ವಿಕೃತ ಗುಣ. ಇತ್ತೀಚೆಗೆ ಕೆಲವು ವರ್ಗಗಳ ಜನರ ದುರಾಸೆ ಅಸಹ್ಯಕರವಾದ ರೂಪವನ್ನು ತಾಳುತ್ತಿದೆ. ಕೆಲವರು ಸರ್ಕಾರಿ ಅಧಿಕಾರಿಗಳೂ, ಅಕ್ರಮ ಮತ್ತು ಅನೀತಿಯ ವ್ಯವಹಾರಗಳಲ್ಲಿ ತೊಡಗಿರುವ ಜನರೂ ಕಳ್ಳ ಹಣದ ಕುಬೇರರೂ ದುರಾಶಾಪಿಶಾಚಿ ಹಿಡಿದಿರುವವಂತೆ ವರ್ತಿಸುತ್ತಾರೆ. ಇವರ ಐಶ್ವರ್ಯದಾಹಕ್ಕೆ ಮಿತಿಯೇ ಇಲ್ಲ. ಕೆಲವು ಕಡೆಗಳಲ್ಲಿ ಲಂಚಕೋರ ಸರ್ಕಾರಿ ಅಧಿಕಾರಿಗಳು ತಿಂಗಳಿಗೆ ೫೦,೦೦೦ ರೂಪಾಯಿಗಳಿಂದ ಹಿಡಿದು ಒಂದು ಲಕ್ಷ ರೂಪಾಯಿಗಳವರೆಗೆ ಲಂಚದ ಸಂಪಾದನೆ ಮಾಡುತ್ತಾರೆಂದು ಕೇಳಿದ್ದೇನೆ. ಈ ರಾಜ್ಯದಲ್ಲೇ ಅಂತಹ ಅಧಿಕಾರಿಗಳು ಇದ್ದಾರೆಂದೂ ಸಹ ಕೇಳಿದ್ದೇನೆ. ಕೆಲವರು ಅಧಿಕಾರಿಗಳಿಗೆ ಬಡಬಗ್ಗರ ಮೇಲೆ ಕನಿಕರವೇ ಇಲ್ಲ. ಅತಿ ಬಡವರ ರಕ್ತವನ್ನೂ ಹೀರಲೂ ಕೂಡ ಅವರು ಹೇಸುವುದಿಲ್ಲ. ಕ್ಷಾಮಪೀಡಿತ ಪ್ರದೇಶಗಳಲ್ಲಿ ಬಡಬಗ್ಗರಿಗೋಸ್ಕರ ಕೈಗೊಳ್ಳುವ ಪರಿಹಾರ ಕಾರ್ಯಗಳಿಗೆ ಖರ್ಚು ಮಾಡುವ ಹಣದಲ್ಲೂ ಕೂಡ ಈ ಪಾಪಿಗಳು ಕೆಲವು ಪಾಲನ್ನು ತಮ್ಮ ಬೊಕ್ಕಸಕ್ಕೆ ಸೇರಿಸುತ್ತಾರೆ. ಹಳ್ಳಿಗಾಡಿನ ಜನರ ಉದ್ಧಾರಕ್ಕಾಗಿ ಕೈಗೊಳ್ಳುವ ಯೋಜನೆಗಳು ನಿಷ್ಫಲವಾಗಲು ಲಂಚಕೋರ ಅಧಿಕಾರಿಗಳೇ ಬಹುಮಟ್ಟಿಗೆ ಕಾರಣ. ಕೇಂದ್ರ ಸರ್ಕಾರದ ಮತ್ತು ವಿವಿಧ ರಾಜ್ಯ ಸರಕಾರಗಳ ವಾರ್ಷಿಕ ವರಮಾನದಲ್ಲಿ ಶೇಕಡ ಸುಮಾರು ನಲವತ್ತರಷ್ಟು ಹಣ ಸರಕಾರಿ ನೌಕರರ ಸಂಬಳ, ವಿಶ್ರಾಂತಿವೇತನ ಮುಂತಾದವುಗಳಿಗೆ ವಿನಿಯೋಗವಾಗುತ್ತದೆ. ಇನ್ನುಳಿದ ಶೇಖಡ ೬೦ ರಷ್ಟು ಹಣದಲ್ಲಿ ಅರೆವಾಸಿ ಲಂಚಕೋರರ ಬೊಕ್ಕಸಕ್ಕೆ ಹೋಗುತ್ತದೆ. ಆದರೂ ಈ ದೇಶದ ಅಧಿಕಾರಿಗಳಿಗೆ ತೃಪ್ತಿಯೇ ಇಲ್ಲ. ಲಂಚದೇವತೆ ದುರಾಶಾಪಿಶಾಚಿಯ ಮುದ್ದಿನ ಕುವರಿ. ಲಂಚ ದೇವತೆಯ ಕರಾಳ ನೃತ್ಯವನ್ನು ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಕಾಣಬಹುದಾಗಿದೆ. ಲಂಚದೇವತೆಗೆ ಪನಿವಾರವಿಲ್ಲದೆ. ಈ ದೇಶವಲ್ಲಿ ಯಾವ ಕಾರ್ಯವೂ ನಡೆಯುವಂತಿಲ್ಲ. ಲಂಚದೇವತೆ ಒಲಿದರೆ ಬಡವನಾಗಿದ್ದವನು ಬಲುಬೇಗ ಶ್ರೀಮಂತನಾಗುತ್ತಾನೆ. ಲಂಚದೇವತೆಯ ಆಕ್ರೋಶಕ್ಕೆ ಗುರಿಯಾದವರು ನಾನಾ ಕಷ್ಟಗಳಿಗೆ ಈಡಾಗುತ್ತಾರೆ. ಪುರಾತನ ಭಾರತದಲ್ಲಿ ರಾಜ ಮಹಾರಾಜರೂ

ಸಾಮಾನ್ಯ ಜನರೂ ತಮಗೆ ವೃದ್ಧಾಪ್ಯ ಸಮೀಪವಾದೊಡನೆ ಇಹಲೋಕದ ಅಷ್ಟೈಶ್ವರ್ಯಗಳನ್ನೂ ತ್ಯಜಿಸಿ ಆತ್ಮಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡಲು ನಿರ್ಜನ ಪ್ರದೇಶಗಳಿಗೆ ಹೋಗುತ್ತಿದ್ದರು. ಎಂಥ ಅಸದೃಶ್ಯ ತ್ಯಾಗ. ಎಂಥ ಪವಿತ್ರವಾದ ನಾಡು ನಮ್ಮದು. ಈಗ ಕೆಲವರು ಸಾಯುವವರೆಗೂ ಮಾಡಬಾರದ ಕೆಲಸ ಮಾಡಿ ಅಕ್ರಮ ಸಂಪತ್ತನ್ನು ಕೂಡಿ ಹಾಕುತ್ತಾರೆ. ತಾವು ಮಾಡಿರುವ ಅನಿಷ್ಟ ಕಾರುಬಾರುಗಳಿಗಾಗಿ ಸಾಯುವವರೆಗೂ ಪಶ್ಚಾತ್ತಾಪ ಪಡುವುದೇ ಇಲ್ಲ. ಪ್ರಾಯಶಃ ಅವಸಾನ ಕಾಲದಲ್ಲಿ ಸಾವು ಅವರ ಅಂಗಾಂಗವನ್ನು ಹಿಂಡುತ್ತಿರುವಾಗ ಕೂಡಿಟ್ಟ ಸಂಪತ್ತನ್ನು ಬಿಟ್ಟು ಹೋಗಲಾರದೆ ಅವರ ಜೀವ ಕೊನೆಯವರೆವಿಗೂ ಹೆಣಗಾಡುತ್ತದೆ.

ರಾಜಕುಮಾರ ಗೌತಮ ಬುದ್ಧನು ತನ್ನ ಮೋಹದ ಮಡದಿಯನ್ನೂ ಮುದ್ದು ಮಗನನ್ನೂ ರಾಜ್ಯವನ್ನೂ ತ್ಯಜಿಸಿ ಸತ್ಯಾನ್ವೇಷಣೆಗಾಗಿ ಕಾಡಿಗೆ ಹೋದನು. ಇಂದು ಅಧಿಕಾರಲಾಲಸೆಯ ರಾಜಕಾರಣಿಗಳು ಚತುರೋಪಾಯಗಳಿಂದ ಸಾಯುವವರೆಗೂ ಅಧಿಕಾರದಲ್ಲಿರಲು ಹೆಣಗಾಡುತ್ತಿರುತ್ತಾರೆ. ಪಾಶ್ಚಿಮಾತ್ಯರು ಐಹಿಕ ಸುಖಗಳಲ್ಲಿ ಹೆಚ್ಚು ಆಸಕ್ತಿಯುಳ್ಳವರೆಂದೂ ಭಾರತೀಯರು ಪಾರಮಾರ್ಥಿಕ ವಿಚಾರಗಳಲ್ಲಿ ಹೆಚ್ಚು ಆಸಕ್ತಿಯುಳ್ಳವರೆಂದೂ ನಮ್ಮಲ್ಲಿ ಕೆಲವರು ಹೇಳುವುದುಂಟು. ನಾವು ಪಾಶ್ಚಿಮಾತ್ಯರಷ್ಟು ಸತ್ಯಸಂಧರೂ ಅಲ್ಲ ಸುಸಂಸ್ಕೃತರೂ ಅಲ್ಲ. ಇಂದು ಈ ದೇಶದಲ್ಲಿ ಸಾವಿರಕ್ಕೆ ಒಬ್ಬರೂ ಕೂಡ ಆತ್ಮಸ್ಥಾನದಲ್ಲಿ ಆಸಕ್ತಿಯುಳ್ಳವರೆಂದು ಹೇಳಿದರೆ ಅದು ಆತ್ಮವಂಚನೆಯ ಮಾತಾಗುತ್ತದೆ. ಪಾಶ್ಚಿಮಾತ್ಯರ ಲೌಕಿಕ ಪ್ರವೃತ್ತಿಯಲ್ಲಿ ಒಂದು ವಿಧವಾದ ಸಭ್ಯತೆಯಿದೆ. ನಮ್ಮಲ್ಲಿರುವ ಲೌಕಿಕ ಪ್ರವೃತ್ತಿ ಕೆಲವು ಸಾರಿ ಅಸಹ್ಯಕರವಾದ ರೂಪವನ್ನು ತಾಳುತ್ತದೆ. ಪೂಜಾಮಂದಿರಗಳಿಗೆ ಹೋಗುವವರೆಲ್ಲರೂ ಆತ್ಮಧ್ಯಾನದಲ್ಲಿ ಆಸಕ್ತಿಯುಳ್ಳವರಲ್ಲ. ಅವರಲ್ಲಿ ನೂರಕ್ಕೆ ತೊಂಬತ್ತರಷ್ಟು ಜನ ಐಶ್ವರ್ಯದೇವತೆಯ ಆರಾಧಕರು. ಮಿತಿಮೀರಿದ ದುರಾಸೆಯ ದೆಸೆಯಿಂದ ಭಾರತ ಉಪಖಂಡದ ಜನರಿಗೆ ಮಾನವೀಯ ಅನುಕಂಪ ಬಹಳ ಕಡಿಮೆ. ಕಷ್ಟಕಾರ್ಪಣ್ಯಗಳಲ್ಲಿರುವವರನ್ನು ನೋಡಿ ನಮ್ಮ ಹೃದಯ ಮಿಡಿಯುವುದಿಲ್ಲ. ಕಡುಬಡವರನ್ನು ಕಂಡು ನಮ್ಮ ಮನಸ್ಸು ಮರುಗುವುದಿಲ್ಲ.

ಭಾರತೀಯರ ಮನೋವೃತ್ತಿ ಮತ್ತು ಅವರ ದೃಷ್ಟಿಕೋನ ಬಹಳ ಸಂಕುಚಿತವಾದುದು. ಪುರಾತನ ಕಾಲದಲ್ಲಿ ಗ್ರೀಕರೂ ಮತ್ತು ಭಾರತೀಯರೂ ಅತ್ಯಂತ ಮೇಧಾವಿಗಳೆಂದೂ ಉನ್ನತಮಟ್ಟದ ಚಿಂತನಶೀಲರೆಂದೂ ಹೆಸರುವಾಸಿಯಾಗಿದ್ದರು. ಇಂದು ನಮ್ಮಲ್ಲಿ ಚಿಂತನಾಶೀಲ ಶಕ್ತಿ ಇರುವವರು ಬಹಳ ಕಡಿಮೆ. ಅನಕ್ಷರಸ್ಥರಾಗಿರುವ ಅಸಂಖ್ಯಾತ ಜನರಿಗೆ ವಿಚಾರ ಮಾಡುವ ಶಕ್ತಿ ಇಲ್ಲ.

ವಿದ್ಯಾವಂತರೆನಿಸಿಕೊಂಡವರಲ್ಲಿಯೂ ಕೂಡ ಚಿಂತನಾ ಶಕ್ತಿಯಿರುವವರು ಬಹಳ ಕಡಿಮೆ. ಅದರಲ್ಲೂ ನೇರವಾಗಿ ನಿಷ್ಪಕ್ಷಪಾತವಾಗಿ ವಿಚಾರ ಮಾಡುವ ಶಕ್ತಿಯುಳ್ಳ ಜನರು ಅತಿವಿರಳ. ಭಾರತೀಯರ ವಿಚಾರಧಾರೆ ಮತ್ತು ಭಾವನೆಗಳು ಸಾಮಾನ್ಯವಾಗಿ ಅವರವರ ಆಸೆ ಆಕಾಂಕ್ಷೆಗಳಿಂದಲೋ ಸ್ವಜಾತಿ ಮತಗಳ ಮೇಲಿನ ದ್ವೇಷದಿಂದಲೋ ಕಲುಷಿತಗೊಂಡಿರುತ್ತವೆ. ರಾಜಕಾರಣಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ಅವರ ಮನಸ್ಸಿನ ಹಿನ್ನೆಲೆಯಲ್ಲಿ ಅವರ ಅಥವಾ ಅನ್ಯಜಾತಿಮತಗಳ ಮೇಲಿನ ದ್ವೇಷದಿಂದಲೋ ಕಲುಷಿತ ಗೊಂಡಿರುತ್ತವೆ. ರಾಜಕಾರಣಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ಅವರ ಮನಸ್ಸಿನ ಹಿನ್ನೆಲೆಯಲ್ಲಿ ಅವರ ಅಥವಾ ಅವರ ಪಕ್ಷದ ಹಿತ ತನ್ನ ಪ್ರಭಾವವನ್ನು ಬೀರುತ್ತಿರುತ್ತದೆ. ವಿವಿಧ ವೃತ್ತಿಗಳನ್ನವಲಂಬಿಸಿರುವ ಜನರು ಮಾತನಾಡುತ್ತಿರುವಾಗ ಅವರವರ ವೃತ್ತಿಯ ಹಿತ ಅವರ ಮನಸ್ಸಿನ ಅಂತರಾಳದಲ್ಲಿ ತನ್ನ ಪ್ರಭಾವವನ್ನು ಬೀರುತ್ತಿರುತ್ತದೆ. ಸಾಮಾನ್ಯವಾಗಿ ಜನರು ಧಾರ್ಮಿಕ ವಿಚಾರಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಾಗ ಅವರ ಮನಸ್ಸಿನ ಹಿಂಬದಿಯಲ್ಲಿ ಸ್ವಧರ್ಮದ ಮೇಲಿನ ಮೋಹ ಅಥವಾ ಅನ್ಯಧರ್ಮಗಳ ಮೇಲಿನ ತಿರಸ್ಕಾರ ತಮ್ಮ ಪ್ರಭಾವವನ್ನು ಬೀರುತ್ತಿರುತ್ತವೆ. ಒಬ್ಬ ವ್ಯಕ್ತಿಯ ಗುಣಾವಗುಣಗಳನ್ನೂ ಅವನ ಯೋಗ್ಯತೆಯನ್ನೂ ಅಳೆಯುವಾಗ ಸಾಮಾನ್ಯ ಜನರು ನಿಷ್ಪಕ್ಷಪಾತವಾಗಿ ವಿಮರ್ಶಿಸುವ ಬದಲು ವ್ಯಕ್ತಿಯ ಕುಲಗೋತ್ರಗಳ ಹಿನ್ನೆಲೆಯಲ್ಲಿ ಅವನ ಗುಣಾವಗುಣಗಳನ್ನು ಅಥವಾ ಅವನ ಯೋಗ್ಯತೆಯನ್ನು ಅಳೆಯುತ್ತಾರೆ. ರಾಷ್ಟ್ರದ ಆಗುಹೋಗುಗಳ ಬಗ್ಗೆ ಅಥವಾ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗಲೂ ಸಹ ಕೆಲವರು ರಾಷ್ಟ್ರದ ಹಿತವನ್ನು ಗಮನದಲ್ಲಿ ಇಟ್ಟುಕೊಂಡು ನಿಷ್ಪಕ್ಷಪಾತವಾಗಿ ಮಾತನಾಡುವ ಬದಲು ತಮ್ಮ ಅಥವಾ ತಮ್ಮ ಪಕ್ಷಗಳ ಹಿತವನ್ನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುತ್ತಾರೆ.

ಸಾಮಾನ್ಯವಾಗಿ ಅನಕ್ಷರಸ್ಥರಲ್ಲಿ ವಿವೇಚನಾ ಶಕ್ತಿಯಿರುವವರು ಬಹಳ ಕಡಿಮೆ. ಆದರೆ ಈ ದೇಶದಲ್ಲಿ ಕೆಲವರು ವಿದ್ಯಾವಂತರೆನಿಸಿಕೊಂಡವರು ತಮ್ಮಲ್ಲಿರುವ ವಿವೇಚನಾ ಶಕ್ತಿಯನ್ನು ಉಪಯೋಗಿಸಿಕೊಳ್ಳುವ ಗೊಡವೆಗೆ ಹೋಗದೆ ತಲೆಕೆಟ್ಟವರಂತೆ ಮಾತನಾಡುತ್ತಾರೆ. ಉನ್ನತ ಅಧಿಕಾರಿ ಸ್ಥಾನಗಳಲ್ಲಿರುವ ಕೆಲವರು ರಾಜಕಾರಣಿಗಳೂ ಸಹ ಸಾರಾಸಾರ ವಿಚಾರ ಮಾಡದೆ, ಸಾಧಕಬಾಧಕಗಳನ್ನು ಯೋಚಿಸದೆ ಆ ಕ್ಷಣದಲ್ಲಿ ಮನಸ್ಸಿಗೆ ಬಂದುದನ್ನು ಅವೇಶಭರಿತರಾಗಿ ನುಡಿಯುತ್ತಾರೆ. ತಮ್ಮ ಆವೇಶ ಭರಿತವಾದ ನುಡಿಗಳಿಂದ ಸಮಾಜಕ್ಕೆ ಅಥವಾ ರಾಷ್ಟ್ರಕ್ಕೆ ಆಗಬಹುದಾದ ಹಾನಿಯನ್ನು ಅವರು

ಯೋಚಿಸುವುದೇ ಇಲ್ಲ. ಒಮ್ಮೊಮ್ಮೆ ವಿದೇಶಾಂಗ ನೀತಿಯ ಸಂಬಂಧ ಮಾತನಾಡುವಾಗಲೂ ಸಹ ಅನಾವಶ್ಯಕವಾಗಿ ಮುಖಪರಚುವಂತೆ ಮಾತನಾಡಿ ರಾಷ್ಟ್ರದ ಹಿತಕ್ಕೆ ಧಕ್ಕೆ ಬರುವಂತೆ ಮಾಡುತ್ತಾರೆ. ಅವರ ನಿಷ್ಪ್ರಯೋಜಕ ಮಾತುಗಳಿಂದ ಯಾವ ಪುರುಷಾರ್ಥವೂ ಸಾಧನೆಯಾಗುವುದಿಲ್ಲ. ನಮ್ಮ ರಾಜಕಾರಣಿಗಳಿಗೆ ಕೃತಿಗಿಂತ ಮಾತಿನಲ್ಲಿಯೇ ಹೆಚ್ಚು ಆಸಕ್ತಿ. ನಾವು ನಮ್ಮಲ್ಲಿರುವ ಲೋಪದೋಷಗಳನ್ನು ತಿಳಿದುಕೊಳ್ಳಲು ಮತ್ತು ತಿದ್ದಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡದೆ ಇತರರಲ್ಲಿ ಲೋಪದೋಷಗಳನ್ನು ಹುಡುಕುತ್ತೇವೆ. ರಾಜಕಾರಣಿಗಳನ್ನು ನೋಡಿ ಅವರಲ್ಲಿ ಅಗ್ರಗಣ್ಯ ಭ್ರಷ್ಟರಾಗಿರುವವರು ತಾವು ಭ್ರಷ್ಟರೆಂಬುದನ್ನು ಮರೆತು ತಮ್ಮ ರಾಜಕೀಯ ವಿರೋಧಿಗಳ ಭ್ರಷ್ಟಾಚಾರವನ್ನು ಬಹಳ ದೊಡ್ಡದು ಮಾಡುತ್ತಾರೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಉನ್ನತ ಅಧಿಕಾರಸ್ಥಾನಗಳನ್ನು ಹೊಂದಿದವರು ತಮ್ಮ ತಪ್ಪನ್ನು ಬಹಿರಂಗವಾಗಿ ಒಪ್ಪಿಕೊಳ್ಳುತ್ತಾರೆ. ನಮ್ಮ ದೇಶದಲ್ಲಿ ತಾವು ಮಾಡಿರುವ ತಪ್ಪುಗಳನ್ನು ಒಪ್ಪಿಕೊಳ್ಳುವ ಔದಾರ್ಯವಿಲ್ಲ. ಬದಲಾಗಿ ಕೊನೆಯವರೆಗೂ ತಾವು ತಪ್ಪಿತಸ್ಥರಲ್ಲವೆಂದು ಸಾಧಿಸುತ್ತಾರೆ. ಈ ದೇಶದಲ್ಲಿ ಜನರು ತಮ್ಮಲ್ಲಿರುವ ವಿಕೃತ ಗುಣಗಳನ್ನು ತಿದ್ದಿಕೊಳ್ಳಲು ಪ್ರಯತ್ನಿಸುವ ಬದಲು ತಮ್ಮ ವಕ್ರ ತರ್ಕದಿಂದ ಅವುಗಳನ್ನು ಸಮರ್ಥಿಸುತ್ತಾ ಹೋಗುತ್ತಾರೆ. ಈ ಕಾರಣದಿಂದಲೇ ವಿಕೃತಗುಣಗಳು ನಮ್ಮನ್ನು ಬಿಡುವುದೇ ಇಲ್ಲ.

ನಮ್ಮ ಮಾತಿಗೂ ಕೃತಿಗೂ ಅಜಗಜಾಂತರ ವ್ಯತ್ಯಾಸ ಮಾತಿನಲ್ಲಿ ವೇದಾಂತವಾದರೆ ಕೃತಿಯಲ್ಲಿ ಕುತಂತ್ರ. ನಮ್ಮಲ್ಲಿ ಅಪಾರವಾದ ಆದರ್ಶವಿದೆ. ಅದರೆ ಅವುಗಳ ಅನುಷ್ಠಾನ ಬಹಳ ಅಪರೂಪ. ನಮ್ಮ ಜನರ ವಿಪರ್ಯಾಸದ ವರ್ತನೆಗಳನ್ನು ಜೀವನ ಎಲ್ಲ ಕ್ಷೇತ್ರಗಳಲ್ಲಿಯೂ ನೋಡಬಹುದಾಗಿದೆ. ಅದರಲ್ಲೂ ಧಾರ್ಮಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಈ ವಿಪರ್ಯಾಸದ ವರ್ತನೆಯನ್ನು ಯಥೇಚ್ಛವಾಗಿ ಕಾಣಬಹುದಾಗಿದೆ. ಮಾತೆತ್ತಿದರೆ ದೇವರು ಧರ್ಮ ಮುಂತಾದ ವಿಚಾರಗಳನ್ನು ಸದಾ ಹೇಳುತ್ತಿರುವ ಕೆಲವರು ದುರ್ವ್ಯವಹಾರಗಳಲ್ಲಿ ಅಗ್ರಗಣ್ಯರಾಗಿರುತ್ತಾರೆ. ಇವರು ತಪ್ಪದೆ ಪೂಜಾ ಮಂದಿರಗಳಿಗೆ ಹೋಗುತ್ತಿರುವುದಲ್ಲದೆ. ತೀರ್ಥಯಾತ್ರೆಗೂ ಹೋಗುತ್ತಾರೆ. ಈ ಮಹನೀಯರು ತಿರುಪತಿಗೂ ಮೆಕ್ಕಾಕೋ ಹೋಗಿ ಸಂತರಾಗಿ ವಾಪಸ್ಸು ಬರುತ್ತಾರೆ. ಸದಾ ಭ್ರಷ್ಟಾಚಾರದಲ್ಲಿ ನಿರತರಾಗಿರುವ ರಾಜಕಾರಣಿಗಳು ಬಡವರ ಬಂಧುಗಳಂತೆ ಮತ್ತು ಸತ್ಯಸಂಧರಂತೆ ನಡೆಸುತ್ತಿರುತ್ತಾರೆ. ನಾನಾ ವಿಧವಾದ ಅಕ್ರಮ ವ್ಯವಹಾರಗಳಲ್ಲಿ ತೊಡಗಿ ಕಳ್ಳಹಣದ ಕುಬೇರರಾಗಿರುವವರು ವೇಷಭೂಷಣಗಳಿಂದಲೂ ನಯವಿನಯಗಳಿಂದಲೂ ಅತ್ಯಂತ ಸತ್ಯವಂತರಂತೆ ಸಭ್ಯರಂತೆ ವರ್ತಿಸುತ್ತಾರೆ. ನಮ್ಮಲ್ಲಿ

ಕೆಲವರು ತಮ್ಮಲ್ಲಿರುವ ಆತ್ಮಸಾಕ್ಷಿಯನ್ನು ಚಿವುಟಿ ಹಾಕಿರುತ್ತಾರೆ. ಮನುಷ್ಯರೆಲ್ಲರಲ್ಲಿಯೂ ಯಾವುದು ಸರಿ ಯಾವುದು ಸರಿಯಲ್ಲವೆಂಬುದನ್ನು ಹೇಳುವ ಆತ್ಮಸಾಕ್ಷಿ ಅಡಗಿರುತ್ತದೆ. ಜನರು ತಪ್ಪು ಮಾಡಿದಾಗ ಅವರಿಗೆ ಅವರ ಆತ್ಮಸಾಕ್ಷಿ ಎಚ್ಚರಿಕೆ ನೀಡುತ್ತದೆ. ಆತ್ಮಸಾಕ್ಷಿಯನ್ನು ಚಿವುಟಿ ಹಾಕಿದ ಅಪ್ರಾಮಾಣಿಕರು ಯಾವ ಎಗ್ಗೂ ಇಲ್ಲದೆ ಪ್ರಾಮಾಣಿಕರಂತೆ ವರ್ತಿಸುತ್ತಾರೆ.

ನಮಗೆ ಹಕ್ಕಿನ ಪ್ರಜ್ಞೆ ಯಥೇಚ್ಛವಾಗಿದೆ. ಆದರೆ ಕರ್ತವ್ಯದ ಪ್ರಜ್ಞೆ ಬಹಳ ಕಡಿಮೆ. ಮುಂದುವರಿದ ರಾಷ್ಟ್ರಗಳಲ್ಲಿ ಜನರು ಅಭ್ಯುದಯವನ್ನು ಸಾಧಿಸಿದ್ದರೆ, ಅದಕ್ಕೆ ಕಾರಣ ಅವರಲ್ಲಿರುವ ಅಪಾರವಾದ ಕರ್ತವ್ಯಪ್ರಜ್ಞೆ ರಾಷ್ಟ್ರಪ್ರೇಮ, ಶಿಸ್ತು, ಕಷ್ಟಪಟ್ಟು ದುಡಿದು ಬದುಕಬೇಕೆಂಬ ಪ್ರವೃತ್ತಿ ನಮ್ಮಲ್ಲಿ ಈ ಗುಣಗಳು ಬಹಳ ಕಡಿಮೆಯಾಗಿರುವುದರಿಂದಲೇ ನಮ್ಮ ದೇಶ ಇನ್ನೂ ಹಿಂದುಳಿದ ರಾಷ್ಟ್ರವಾಗಿದೆ. ಈ ಗುಣಗಳ ಅಭಾವವೇ ನಮ್ಮ ದೇಶದ ಬಡತನಕ್ಕೆ ಬಹಳಮಟ್ಟಿಗೆ ಕಾರಣವಾಗಿದೆ. ಜನರೂ, ಜನನಾಯಕರೂ, ಸಾರ್ವಜನಿಕ ಸೇವಕರೆಂದು ಕರೆಯಲ್ಪಡುವ ಅಧಿಕಾರಿ ವರ್ಗದ ಜನರೂ ತಂತಮ್ಮ ಕರ್ತವ್ಯವನ್ನು ಸರಿಯಾಗಿ ಪರಿಪಾಲಿಸಿದ್ದರೆ ನಮ್ಮ ದೇಶ ಇಷ್ಟು ಹೊತ್ತಿಗಾಗಲೇ ಸಂಪತ್ಸಮೃದ್ಧಿಯಿಂದ ಕೂಡಿದ ಪ್ರಬಲ ರಾಷ್ಟ್ರವಾಗುತ್ತಿತ್ತು. ನಮ್ಮ ದೇಶದ ಸಾರ್ವಜನಿಕ ಸೇವಕರನ್ನು ಸ್ಮರಿಸಿಕೊಳ್ಳಿ. ಅವರಲ್ಲಿ ಅನೇಕರು ದಿನಕ್ಕೆ ನಾಲ್ಕು ಗಂಟೆಗಳ ಕಾಲ ಸಹಿತ ನಿರ್ವಂಚನೆಯಿಂದ ಕೆಲಸ ಮಾಡುವುದಿಲ್ಲ. ಆದರೂ ಕೂಡ ಹೆಚ್ಚಿನ ಸಂಬಳಕ್ಕಾಗಿ ಆಗಾಗ ಚಳವಳಿ ಹೂಡುತ್ತಾರೆ. ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟ ಉದ್ಯಮಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಕೆಲಸಮಾಡುವ ನೌಕರರನ್ನು ಸ್ಮರಿಸಿಕೊಳ್ಳಿ ಕೆಲವು ಉದ್ಯಮಗಳಲ್ಲಿ ಭ್ರಷ್ಟಾಚಾರ ಕರ್ತವ್ಯಪ್ರಜ್ಞೆಯ ಅಭಾವ ಇವೇ ಮುಂತಾದ ಕಾರಣಗಳಿಂದ ಪ್ರತಿವರ್ಷವೂ ಅಪಾರ ನಷ್ಟ ಸಂಭವಿಸುತ್ತಾ ಇದೆ. ಹೀಗಿದ್ದರೂ ಕೂಡ ಆ ಉದ್ಯಮಗಳಲ್ಲಿ ಕೆಲಸಮಾಡುವ ನೌಕರರು ತಮ್ಮ ಕರ್ತವ್ಯಲೋಪದಿಂದ ನಷ್ಟ ಸಂಭವಿಸುತ್ತಾ ಇದೆಯೆಂಬುದನ್ನು ಮರೆತು ತಮ್ಮ ಸಂಬಳ ಸಾರಿಗೆಗಳ ಹೆಚ್ಚಳಕ್ಕಾಗಿ ಆಗಾಗ ಮುಷ್ಕರ ಹೂಡುತ್ತಾರೆ.

ನಮ್ಮ ರಾಜಕಾರಣಿಗಳಿಗೂ ಸರ್ಕಾರಿ ಅಧಿಕಾರಿಗಳಿಗೂ ಕರ್ತವ್ಯ ಪ್ರಜ್ಞೆಯಿದ್ದದ್ದರೆ ಈ ದೇಶದಲ್ಲಿ ಇಷ್ಟೊಂದು ಬೃಹತ್ ಸಮಸ್ಯೆಗಳು ಬೆಳೆಯುತ್ತಿರಲಿಲ್ಲ. ಪ್ರಕೃತಿಯ ವಿಕೋಪದಿಂದ ಅಥವಾ ಅಂತರರಾಷ್ಟ್ರೀಯ ವಿದ್ಯಮಾನಗಳಿಂದ ಉದ್ಭವಿಸಿರುವ ಸಮಸ್ಯೆಗಳಿಗಿಂತ ರಾಜಕಾರಣಿಗಳೂ ಅಧಿಕಾರಿಗಳೂ ಒಟ್ಟಾಗಿ ಸೇರಿ ಸೃಷ್ಟಿಸಿರುವ ಸಮಸ್ಯೆಗಳೇ ಹೆಚ್ಚಾಗಿರುತ್ತದೆ. ಇವರು ಐದು ಹಳೆಯ ಸಮಸ್ಯೆಗಳನ್ನು ಬಗೆಹರಿಸಿದರೆ

ಹದಿನೈದು ಹೊಸ ಸಮಸ್ಯೆಗಳನ್ನು ಸೃಷ್ಟಿಸುತ್ತಾರೆ. ಎಲ್ಲಾ ದಾನಗಳಿಗಿಂತ ವಿದ್ಯಾದಾನ ಬಹಳ ಪವಿತ್ರವಾದುದೆಂದೂ ಶಿಕ್ಷಕರ ವೃತ್ತಿ ಬಹಳ ಶ್ರೇಷ್ಠವಾದ ವೃತ್ತಿಯೆಂದೂ ಹಿಂದೆ ಪರಿಗಣಿಸಲ್ಪಟ್ಟಿತ್ತು. ಇಂದಿನ ಮಕ್ಕಳನ್ನು ಮುಂದಿನ ಸತ್ಪ್ರಜೆಗಳನ್ನಾಗಿ ಮಾಡುವ ಹೊಣೆ ಶಿಕ್ಷಕರ ಮೇಲಿದೆ. ನಮ್ಮ ದೇಶದ ಶಿಕ್ಷಕರು ವರ್ತಿಸುವ ರೀತಿ ನೀತಿಗಳನ್ನು ನೋಡಿದರೆ ಅವರಿಗೆ ಕರ್ತವ್ಯಪ್ರಜ್ಞೆ ಲವಲೇಷವೂ ಇಲ್ಲವೆಂದು ತೋರುತ್ತದೆ. ಶಿಕ್ಷಕರು ಇಂದು ಕಾರ್ಮಿಕರಂತೆ ಚಳವಳಿ ಹೂಡುತ್ತಾರೆ. ಅವರಲ್ಲಿ ಶಿಸ್ತು, ರಾಷ್ಟ್ರಭಕ್ತಿ, ಕರ್ತವ್ಯ ಪ್ರಜ್ಞೆ ಮುಂತಾದ ಗುಣಗಳಿಲ್ಲದೆ ಇರುವಾಗ ಅವರ ಶಿಷ್ಯರಾದ ವಿದ್ಯಾರ್ಥಿಗಳಲ್ಲಿ ಎಷ್ಟರ ಮಟ್ಟಿಗೆ ಈ ಗುಣಗಳು ಮೂಡಬಹುದೆಂಬುದನ್ನು ತಾವೇ ಊಹಿಸಿ. ಇಂತಹ ಶಿಕ್ಷಕರಿಂದ ತರಬೇತಿ ಪಡೆದ ವಿದ್ಯಾರ್ಥಿಗಳು ಎಷ್ಟರಮಟ್ಟಿಗೆ ಸತ್‌ಪ್ರಜೆಗಳಾಗಲು ಸಾಧ್ಯ? ಇಂದು ಶಿಕ್ಷಣದ ಮಟ್ಟ ಅಧೋಗತಿಗೆ ಬಂದಿರುವುದಕ್ಕೆ ಶಿಕ್ಷಕರೇ ಬಹುಮಟ್ಟಿಗೆ ಕಾರಣ ವಿವಿಧ ವೃತ್ತಿಗಳಲ್ಲಿ ತೊಡಗಿರುವ ಖಾಸಗಿ ಜನರಲ್ಲೂ ಕೂಡ ಕರ್ತವ್ಯ ಪ್ರಜ್ಞೆ ಬಹಳ ಕಡಿಮೆ.

ಮಿತಿಮೀರಿದ ಮೈಗಳ್ಳತನ ಮತ್ತು ಮಿತಿಮೀರಿದ ಅಪ್ರಮಾಣಿಕತೆ ನಮಗಂಟಿರುವ ಮತ್ತೆರಡು ವಿಕೃತ ಗುಣಗಳು. ನಮ್ಮ ಜನರು ಕಷ್ಟವಿಲ್ಲದೆ ಮುಷ್ಟಾನ್ನ ಉಣ್ಣಬೇಕೆಂಬ ಪ್ರವೃತ್ತಿಯವರು. ಈ ದೇಶದ ವಿದ್ಯಾವಂತ ಜನರು ಮೊದಲಿನಿಂದಲೂ ಸರ್ಕಾರಿ ನೌಕರಿಯನ್ನು ಅವಲಂಬಿಸಿ ಬದುಕಿದ್ದವರು. ಶತಮಾನಗಳ ಹಿಂದೆ ವಿದೇಶಿಯರು ಒಬ್ಬರಾದ ಮೇಲೆ ಇನ್ನೊಬ್ಬರಂತೆ ಈ ದೇಶವನ್ನು ಆಕ್ರಮಿಸಿ ಆಳುತ್ತಿದ್ದಾಗ ವಿದ್ಯಾವಂತರೂ ಬುದ್ಧಿವಂತರೂ ಆಕ್ರಮಣಕಾರರ ವಿರುದ್ಧ ಜನರನ್ನು ಒಂದುಗೂಡಿಸುವ ಸಾಹಸಕ್ಕೆ ಹೋಗದೆ ಆಕ್ರಮಣಕಾರರ ಕೈಕೆಳಗೆ ನೌಕರಿಯನ್ನು ಮಾಡಲು ಮುಂದಾದರು. ಎರಡನೆಯ ಮಹಾಯುದ್ಧ ನಡೆಯುತ್ತಿದ್ದ ಕಾಲದಲ್ಲಿ ಹಿಟ್ಲರ್‌ನು ಭಾರತವನ್ನು ಆಕ್ರಮಿಸಿ ಜರ್ಮನ್ ಆಧಿಪತ್ಯವನ್ನು ಸ್ಥಾಪಿಸುತ್ತಾನೆಂಬ ವದಂತಿ ದಟ್ಟವಾಗಿ ಹಬ್ಬಿತು. ಆ ಕಾಲದಲ್ಲಿ ಈ ದೇಶದ ಕೆಲವರು ವಿದ್ಯಾವಂತರು ಎಲ್ಲರಿಗಿಂತಲೂ ಮುಂಚಿತವಾಗಿ ತಾವು ಜರ್ಮನ್‌ರ ಕೈ ಕೆಳಗೆ ನೌಕರಿಪಡೆಯಬೇಕೆಂಬ ಆಸೆಯಿಂದ ಜರ್ಮನ್ ಭಾಷೆಯನ್ನು ಕಲಿಯುತ್ತಿದ್ದರಂತೆ. ಈ ಜನರು ಆಂಗ್ಲರ ಗುಲಾಮರಾಗಿ ಬಾಳಿದ್ದು ಸಾಲದೆ ಜರ್ಮನ್‌ರ ಗುಲಾಮರಾಗಲೂ ಸಹ ಸಿದ್ಧರಿದ್ದರು. ಇಂದೂ ಕೂಡ ವಿದ್ಯಾರ್ಥಿಗಳು ಕದ್ದೋ ಅಥವಾ ಗೂಂಡಾಗಿರಿ ಮಾಡಿಯೋ ಪರೀಕ್ಷೆಯಲ್ಲಿ ಪಾಸಾಗಿ ಡಿಗ್ರಿಗಳನ್ನು ಪಡೆದುಕೊಂಡು ಸರ್ಕಾರಿ ನೌಕರಿಯನ್ನು ಪಡೆಯಲು ಕಾತುರರಾಗಿರುತ್ತಾರೆ. ಸರ್ಕಾರಿ ನೌಕರಿ ಸಿಕ್ಕದಿದ್ದಾಗ ರಾಜಕಾರಣಕ್ಕೆ ಧುಮುಕಿ ರಾಜಕೀಯ

ಧುರಂಧರರಾಗುತ್ತಾರೆ. ಸರ್ಕಾರಿ ನೌಕರಿಯಲ್ಲಿ ಮತ್ತು ರಾಜಕಾರಣದಲ್ಲಿ ಕಷ್ಟಪಡದೆ ಸುಖಜೀವನವನ್ನು ಸಾಗಿಸಬಹುದು. ಅಲ್ಲದೆ ಕಳ್ಳ ಸಂಪತ್ತನ್ನುಗಳಿಸಲು ಹೇರಳವಾದ ಅವಕಾಶವೂ ಇದೆ.

ನಮ್ಮ ಜನರಿಗೆ ಕಾಯಕ ಗೌರವದ ಪ್ರಜ್ಞೆಯೇ ಇಲ್ಲ ನಮ್ಮ ಪೂರ್ವಿಕರು ಕರ್ಮಯೋಗದ ಮಹತ್ವವನ್ನು ಕೊಂಡಾಡಿದರು. ಆದರೆ ಕರ್ಮಯೋಗ ಪುಸ್ತಕದಲ್ಲೇ ಉಳಿಯಿತು. ಎಲ್ಲಾ ಕೆಲಸಗಳಲ್ಲಿಯೂ ಗೌರವವಿದೆಯೆಂಬುದನ್ನು ಗಾಂಧೀಜಿಯವರು ಸ್ವತಃ ತಾವು ಮಾಡುತ್ತಿದ್ದ ಕೆಲಸಕಾರ್ಯಗಳಿಂದ ಜನರಿಗೆ ತೋರಿಸುತ್ತಿದ್ದರು. ಕಾಯಕವೇ ಕೈಲಾಸವೆಂದು ಬಸವಣ್ಣನವರು ಬಣ್ಣಿಸಿದರು. ಆದರೆ ಇಂದು ಮೈಕೈನೋಯಿಸಿ ಕೆಲಸ ಮಾಡುವುದು ಅಗೌರವವೆಂಬ ಭಾವನೆ ಜನರಲ್ಲಿ ಬೆಳೆದಿರುತ್ತದೆ. ಸರ್ಕಾರಿ ನೌಕರಿಯಲ್ಲೋ, ರಾಜಕಾರಣದಲ್ಲೋ ಅಥವಾ ಕಳ್ಳ ವ್ಯವಹಾರಗಳಲ್ಲೋ ಅಕ್ರಮಸಂಪತ್ತನ್ನು ಗಳಿಸಿ ಅಟ್ಟಹಾಸದ ಜೀವನವನ್ನು ಮಾಡುವುದು ಬಹಳ ಗೌರವವೆಂದು ಪರಿಗಣಿಸಲ್ಪಟ್ಟಿದೆ. ಸಣ್ಣಪುಟ್ಟ ವೃತ್ತಿಗಳಲ್ಲಿ ತೊಡಗಿ ಪ್ರಾಮಾಣಿಕವಾಗಿ ಸರಳ ಜೀವನವನ್ನು ಸಾಗಿಸುವುದು ಅಗೌರವೆನಿಸಿಕೊಂಡಿದೆ. ದೇಶದ ಬಡತನವನ್ನು ಹೋಗಲಾಡಿಸಿ ದೇಶವನ್ನು ೨೧ನೇ ಶತಮಾನಕ್ಕೆ ಕೊಂಡೊಯ್ಯುತ್ತೇವೆಂದು ರಾಜಕಾರಣಿಗಳು ಆಶ್ವಾಸನೆ ನೀಡುತ್ತಿದ್ದಾರೆ. ದುಡಿಮೆಯಿಲ್ಲದೆ ದೇಶದ ಬಡತನ ಹೇಗೆ ನಿವಾರಣೆಯಾಗುವುದೋ ನಾನರಿಯೇ. ರಾಜಕಾರಣಿಗಳು ಓಟಿಗಾಗಿ ಆಗಾಗ ಜನರ ಹಕ್ಕುಬಾದ್ಯತೆಗಳನ್ನು ಪ್ರಸ್ತಾಪಿಸುತ್ತಾರೆ. ಅವರ ಕರ್ತವ್ಯವೇನೆಂಬುದನ್ನು ಪ್ರಸ್ತಾಪಿಸುವುದೇ ಇಲ್ಲ. ತಮ್ಮಲ್ಲಿಯೇ ಕರ್ತವ್ಯಪ್ರಜ್ಞೆಯಿಲ್ಲದ ರಾಜಕಾರಣಿಗಳು ಇತರರಲ್ಲಿ ಕರ್ತವ್ಯ ಪ್ರಜ್ಞೆಯನ್ನು ಮೂಡಿಸುವುದು ಹೇಗೆ? ಸಾರ್ವಜನಿಕ ಬೊಕ್ಕಸದಿಂದ ಸಂಬಳ ಪಡೆಯುವ ಸಾರ್ವಜನಿಕ ಸೇವಕರಿಗೆ ಪ್ರಾಮಾಣಿಕವಾಗಿ ಮತ್ತು ನಿಷ್ಠೆಯಿಂದ ಕೆಲಸ ಮಾಡುವ ಪ್ರವೃತ್ತಿಯಿಲ್ಲ. ಸಾಮಾನ್ಯ ಜನರಲ್ಲಿ ಕಷ್ಟಪಟ್ಟು ದುಡಿಮೆ ಮಾಡಿ ಬಾಳಬೇಕೆಂಬ ಪ್ರವೃತ್ತಿ ಕಡಿಮೆಯಾಗುತ್ತಾ ಇದೆ. ಕಳ್ಳತನ, ದರೋಡೆ, ಮೋಸ, ಭ್ರಷ್ಟಾಚಾರ, ಕಾನೂನು ಬಾಹಿರ ದುರ್ವ್ಯವಹಾರ ಮುಂತಾದವುಗಳಲ್ಲಿ ನಿರತರಾಗಿರುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಾ ಇದೆ. ದುಡಿಮೆ ಇಲ್ಲದೆ ದೇಶದ ಉದ್ಧಾರ ಹೇಗೆ?

ಬಡತನ ಸ್ವರೂಪವನ್ನು ಬಡವರ ಸ್ಥಿತಿಗತಿಗಳನ್ನೂ ಅರಿಯದಿರುವವರು ಬಡತನ ನಿರ್ಮೂಲಕ್ಕಾಗಿ ಯೋಜನೆಗಳನ್ನು ಮಾಡಿರುತ್ತಾರೆ. ಆ ಯೋಜನೆಗಳ ಅನುಷ್ಠಾನದಿಂದ ಭ್ರಷ್ಟ ಅಧಿಕಾರಿಗಳೂ, ಭ್ರಷ್ಟ ರಾಜಕಾರಣಿಗಳೂ ಶ್ರೀಮಂತರಾದರು. ಬಡವರು ಬಡವರಾಗಿಯೇ ಉಳಿದಿದ್ದಾರೆ. ಬಡವರಿಗೆ ಸಾಲಗಳನ್ನು ಹಂಚಿದ ಮಾತ್ರಕ್ಕೆ ಅವರ

ಬಡತನ ನಿವಾರಣೆಯಾಗುತ್ತದೆಂದು ನನಗನಿಸುವುದಿಲ್ಲ. ಅದ್ಯಾವ ಕಾರಣದಿಂದಲೊ ಈಗ ದುಡಿಯುವ ಪ್ರವೃತ್ತಿ ಬಹಳ ಕಡಿಮೆಯಾಗಿವೆ. ಪ್ರೌಢಶಾಲೆಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಯುವಕನಿಗೆ ವ್ಯವಸಾಯ ಮುಂತಾದ ಮೈಕೈ ಬಗ್ಗಿಸಿ ಕೆಲಸ ಮಾಡುವುದು ನಿಕೃಷ್ಟವೆಂಬ ಭಾವನೆ ಬೆಳೆದಿದೆ. ಪದವೀಧರರಾದವರಿಗೆ ತಮ್ಮ ಮನೆಯಲ್ಲಿ ಬಿದ್ದಿರುವ ಕಸವನ್ನು ಗುಡಿಸುವ ಕೆಲಸವೂ ಕೂಡ ಬಹಳ ಅಗೌರವವೆಂಬ ಭಾವನೆ ಮೂಡಿದೆ. ೩ ವರ್ಷಗಳ ಹಿಂದೆ ನಾನು ಪಶ್ಚಿಮ ಜರ್ಮನಿಯಲ್ಲಿ ಪ್ರವಾಸ ಮಾಡುವಾಗ ಪದವೀಧರರಾಗಿದ್ದ ಮಹಿಳೆಯರು ಟ್ಯಾಕ್ಸಿ ಚಾಲಕಿಯರಾಗಿ ಕೆಲಸ ಮಾಡುತ್ತಿದ್ದುದನ್ನು ನೋಡಿದೆ. ಅವರ ಟ್ಯಾಕ್ಸಿಗಳಲ್ಲಿ ನಾನು ಸಂಚಾರ ಮಾಡುತ್ತಿದ್ದಾಗ ಅವರು ನಮ್ಮ ದೇಶದ ಆಗುಹೋಗುಗಳ ವಿಚಾರವಾಗಿ ಮಾತನಾಡುತ್ತಿದ್ದುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಅವರು ನನಗೆ ತಿಳಿಯದಿದ್ದ ನಮ್ಮ ದೇಶದ ಕೆಲವು ಐತಿಹಾಸಿಕ ವಿಚಾರಗಳನ್ನು ಹೇಳುತ್ತಿದ್ದುದು ನನಗೆ ಬಹಳ ಅಚ್ಚರಿಯನ್ನುಂಟುಮಾಡಿತು. ಯುರೋಪಿನ ಅನೇಕ ದೊಡ್ಡ ಪಟ್ಟಣಗಳಲ್ಲಿ ವಿಶ್ವವಿದ್ಯಾನಿಲಯಗಳಲ್ಲಿ ಓದಿ ಪದವೀಧರರಾದವರು ಹೊಟೇಲುಗಳಲ್ಲಿ ಕೆಲಸ ಮಾಡುತ್ತಿದ್ದುದನ್ನು ನೋಡಿದೆ.

ಉನ್ನತ ಸ್ಥಾನಗಳಲ್ಲಿರುವ ರಾಜಕಾರಣಿಗಳು ಸರಳಜೀವನವನ್ನು ನಡೆಸಿ ಇತರರಿಗೆ ಮಾರ್ಗದರ್ಶಕರಾಗಿರಬೇಕು. ಶ್ರೀ ಗುಲ್ಜಾರಿಲಾಲ್ ನಂದಾರವರೂ, ದಿವಂಗತ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಗಳೂ ಅತ್ಯಂತ ಸರಳ ಜೀವನವನ್ನು ನಡೆಸುತ್ತಿದ್ದರು. ಇಂದು ಸರಳ ಜೀವನದ ಶ್ರೇಷ್ಠತೆಯನ್ನು ಪ್ರಚಾರ ಮಾಡುವುದು ಬಹಳ ಅಗತ್ಯ. ಆದರೆ ಪ್ರಚಾರ ಮಾಡುವವರು ಎಲ್ಲಿದ್ದಾರೆ? ಕಳ್ಳಹಣದ ಕುಬೇರರು ಅಮೇರಿಕಾದ ಕೋಟ್ಯಾಧಿಪತಿಗಳಂತೆ ಜೀವನ ಸಾಗಿಸುತ್ತಿದ್ದಾರೆ. ಸ್ವರಾಜ್ಯ ಬಂದ ಮೇಲೆ ರಾಜ ಮಹಾರಾಜರುಗಳನ್ನೂ ಜಮೀನ್ದಾರಿ ಮತ್ತು ಜಾಗೀರಿಗಳನ್ನೂ ರದ್ದು ಮಾಡಲಾಯ್ತು. ಈಗಿರುವ ಕಳ್ಳ ಹಣದ ಕುಬೇರರು ರಾಜ ಮಹಾರಾಜರುಗಳನ್ನು ಮೀರಿಸುತ್ತಿದ್ದಾರೆ. ಅಧಿಕಾರ ಸ್ಥಾನಗಳಲ್ಲಿರುವ ಕೆಲವು ರಾಜಕಾರಣಿಗಳೂ ಕೆಲವರು ಅಧಿಕಾರಿಗಳ ಹಿಂದಿನ ರಾಜಮಹಾರಾಜರುಗಳ ಶೈಲಿಯಲ್ಲಿ ಜೀವನ ನಡೆಸುತ್ತಿದ್ದಾರೆ. ನಮ್ಮ ರಾಜಕಾರಣಿಗಳು ಸಮಾಜವಾದದ ಉದ್ಗಾರಗಳನ್ನು ಆಗಾಗ ಮಾಡುತ್ತಿದ್ದರೂ ಅನುಸರಿಸುತ್ತಿದ್ದಾರೆ. ಉದಾಹರಣೆಗಾಗಿ ಹೇಳುವುದಾದರೆ ಈ ದೇಶದ ಅಧಿಕಾರಿಗಳ ಸಂಬಳ ಸಾರಿಗೆಗಳಿಗೂ ಅಸಂಖ್ಯಾತ ಜನರ ವರಮಾನಕ್ಕೂ ಯಾವ ವಿಧವಾದ ಸಂಬಂಧವೂ ಇಲ್ಲ. ಮಂತ್ರಿಗಳಾಗಿ ಅಥವಾ ಶಾಸಕರಾಗಿ ತಮ್ಮ ಹುದ್ದೆಯಿಂದ ನಿವೃತ್ತರಾದ ನಂತರ ಅವರು ಸಾಮಾನ್ಯ ಜನರಂತೆ ಜೀವನ ಮಾಡುವುದನ್ನು ಕಲಿಯಬೇಕು. ಇಂದಿನ

ಬಹುಮಂದಿ ರಾಜಕಾರಣಿಗಳಿಗೆ ಯಾವ ವೃತ್ತಿಯೂ ಇಲ್ಲ. ರಾಜಕೀಯವನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರು ಸ್ವಾಭಾವಿಕವಾಗಿ ಲಂಚಕೋರರಾಗುತ್ತಾರೆ.

ದಿನೇ ದಿನೇ ಪ್ರಜಾಪ್ರಭುತ್ವದ ಮೌಲ್ಯಗಳೂ ಆಚರಣೆಗಳು ವಿಕೃತಗೊಳ್ಳುತ್ತಾ ಇವೆ. ಪ್ರಜಾಪ್ರಭುತ್ವ ಎಂದರೆ ಪ್ರಜೆಗಳಿಗಾಗಿ ಪ್ರಜೆಗಳ ಪ್ರತಿನಿಧಿಗಳು ನಡೆಸತಕ್ಕ ಪ್ರಜಾ ಸರ್ಕಾರ. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಪ್ರಜೆಗಳೇ ಸಾರ್ವಭೌಮರು. ಪ್ರಜೆಗಳಾದವರು ರಾಷ್ಟ್ರದ ಆಗುಹೋಗುಗಳ ವಿಚಾರದಲ್ಲಿ ಮತ್ತು ತಮ್ಮ ಪ್ರತಿನಿಧಿಗಳ ಕಾರುಬಾರುಗಳ ವಿಚಾರದಲ್ಲಿ ಕಣ್ಮೇಲೆ ಕಣ್ಣಿಟ್ಟು ನೋಡುತ್ತಿರಬೇಕು. ಒಂದು ರಾಷ್ಟ್ರದ ಉನ್ನತಿ ಅಥವಾ ಅವನತಿ ಬಹುಮಟ್ಟಿಗೆ ಆ ರಾಷ್ಟ್ರದ ನಾಯಕರನ್ನು ಅವಲಂಬಿಸಿರುತ್ತದೆ. ಜನರ ಪ್ರತಿನಿಧಿಗಳಾದ ನಾಯಕರೆನಿಸಿಕೊಂಡವರು ತಮ್ಮ ಸ್ವಾರ್ಥವನ್ನು ಬದಿಗೊತ್ತಿ ರಾಷ್ಟ್ರದ ಹಿತಸಾಧನೆಗಾಗಿ ಶ್ರಮಿಸಿದರೆ ರಾಷ್ಟ್ರ ಉನ್ನತಿಯ ಹಾದಿಯನ್ನು ಹಿಡಿಯುವುದು. ಇದಕ್ಕೆ ಬದಲಾಗಿ ಅವರು ರಾಷ್ಟ್ರದ ಹಿತವನ್ನು ಮರೆತು ಸ್ವಾರ್ಥಸಾಧಕ ಕಾರ್ಯಗಳಲ್ಲಿ ಮಗ್ನರಾದರೆ ರಾಷ್ಟ್ರ ಅವನತಿಯ ಹಾದಿಯನ್ನು ಹಿಡಿಯುವುದು. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಜನನಾಯಕರೆನಿಸಿಕೊಂಡವರು ಪ್ರಜಾಭಿಪ್ರಾಯವನ್ನು ರೂಪಿಸಬೇಕು. ಪ್ರಜಾಭಿಪ್ರಾಯವನ್ನು ರೂಪಿಸಬೇಕಾದರೆ ಅವರಿಗೆ ನೈತಿಕ ಅಧಿಕಾರವಿರಬೇಕು. ಇಂದು ರಾಜಕೀಯ ಅಧಿಕಾರದಿಂದ ಮಾತನಾಡತಕ್ಕ ನಾಯಕರು ಹೇರಳವಾಗಿದ್ದಾರೆ. ಆದರೆ ನೈತಿಕ ಅಧಿಕಾರದಿಂದ ಮಾತನಾಡತಕ್ಕ ನಾಯಕರು ಅತ್ಯಂತ ವಿರಳ ಇಲ್ಲವೆಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ. ನಾಯಕರಾದವರು ತಮ್ಮ ಹಿಂಬಾಲಕರ ಹಾಗೂ ಸಾಮಾನ್ಯ ಜನರ ಓರೆಕೋರೆಗಳನ್ನು ತಿದ್ದುವ ಶಕ್ತಿಯನ್ನು ಪಡೆಯಬೇಕು. ಇಂದು ನಾಯಕರೆನಿಸಿಕೊಂಡವರಲ್ಲಿ ಬಹುಮಂದಿ ತಮ್ಮ ಹಿಂಬಾಲಕರಿಂದ ಸ್ಫೂರ್ತಿಯನ್ನು ಪಡೆಯುತ್ತಾರೆ.

ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿ ೩೯ ವರ್ಷಗಳಾಗಿದ್ದರೂ ಕೂಡ ವಿದ್ಯಾವಂತರಾದಿಯಾಗಿ ಈ ದೇಶದ ಬಹುಮಂದಿ ಜನರಿಗೆ ಪ್ರಜಾಪ್ರಭುತ್ವದ ಅರ್ಥವೇ ಆಗಿಲ್ಲವೆಂದು ನನಗನ್ನಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳ ಕರ್ತವ್ಯವೇನೆಂಬುದನ್ನು ನಮ್ಮ ಜನರು ಇನ್ನೂ ತಿಳಿದುಕೊಳ್ಳದೆ ಇರುವುದು ಬಹಳ ವಿಷಾದಕರ. ಪ್ರಜಾಪ್ರಭುತ್ವದಲ್ಲಿ ಜನರೂ ಅದರಲ್ಲೂ ವಿದ್ಯಾವಂತರಾದವರು ರಾಷ್ಟ್ರದ ಆಗುಹೋಗುಗಳ ವಿಚಾರದಲ್ಲಿ ಆಸಕ್ತಿವಹಿಸಬೇಕು. ಜನರ ಪ್ರತಿನಿಧಿಗಳೇ ಆಗಲಿ ಅವರಿಂದ ರಚಿತವಾದ ಸರ್ಕಾರವೇ ಆಗಲಿ ತಪ್ಪುದಾರಿಯನ್ನು ಹಿಡಿದಾಗ ಪ್ರತಿಭಟನೆಯನ್ನು ವ್ಯಕ್ತಪಡಿಸಬೇಕು. ಆದರೆ ನಮ್ಮ ದೇಶದ ಜನರು ತಮಗೂ ತಮ್ಮ ರಾಷ್ಟ್ರದ ಆಗುಹೋಗುಗಳಿಗೂ ಯಾವ

ಸಂಬಂಧವೂ ಇಲ್ಲವೆಂಬಂತೆ ನಿರ್ಲಿಪ್ತರಾಗಿ ತಂತಮ್ಮ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ತಮ್ಮ ಸ್ವಂತ ಹಿತಕ್ಕೆ ಏನಾದರೂ ಧಕ್ಕೆ ಬಂದಾಗ ಅಡಗೂಲಜ್ಜಿಯಂತೆ ಗೊಣಗುಟ್ಟುತ್ತಾರೆ. ಇಂತಹ ಜನರಿಗೆ ಪ್ರಜಾಪ್ರಭುತ್ವ ಯಾತಕ್ಕೆ ಬೇಕು? ಅವರು ಸರ್ವಾಧಿಕಾರಿಗಳ ಗುಲಾಮರಾಗಲು ಅರ್ಹರು. ಕೆಲವರು ಚುನಾವಣೆಗಳ ಕಾಲವಲ್ಲಿ ಮತ ಚಲಾಯಿಸುವಗೊಡವೆಗೆ ಹೋಗುವುದೇ ಇಲ್ಲ. ಕೆಲವರು ಚುನಾವಣೆಗಳ ಕಾಲದಲ್ಲಿ ಮತವನ್ನು ಚಲಾಯಿಸಿದರೆ ತಮ್ಮ ಕೆಲಸ ಅಲ್ಲಿಗೆ ಮುಗಿಯಿತೆಂದು ಭಾವಿಸುತ್ತಾರೆ. ಕೆಲವರು ಪ್ರಜಾಪ್ರಭುತ್ವವೆಂದರೆ ಚುನಾವಣೆಗಳ ಕಾಲದಲ್ಲಿ ಹಣಗಳಿಸಲು ಒಂದು ಅವಕಾಶವೆಂದು ಭಾವಿಸುತ್ತಾರೆ. ಕೆಲವರು ರಾಜಕಾರಣಿಗಳ ದೃಷ್ಟಿಯಲ್ಲಿ ಪ್ರಜಾಪ್ರಭುತ್ವವೆಂದರೆ ಅಕ್ರಮ ಸಂಪಾದನೆ ಮಾಡುವ ಒಂದು ವಿಧಾನ. ಕೆಲವರು ಸದಾ ಚಳವಳಿ ಮಾಡುವುದೇ ಪ್ರಜಾ ಪ್ರಭುತ್ವವೆಂದು ಭಾವಿಸಿರುವಂತೆ ತೋರುತ್ತದೆ. ಎಲ್ಲಿಯವರೆಗೆ ಜನರು ರಾಷ್ಟ್ರದ ಆಗುಹೋಗುಗಳ ಬಗ್ಗೆ ಆಸಕ್ತಿವಹಿಸುವುದಿಲ್ಲವೋ, ಎಲ್ಲಿಯವರೆಗೆ ಜನರು ಸಕ್ರಿಯ ಪಾತ್ರವನ್ನು ವಹಿಸದೆ ನಿರ್ವೀರ್ಯರಾಗಿ ನಿರ್ಲಿಪ್ತರಾಗಿರುತ್ತಾರೋ ಅಲ್ಲಿಯವರೆಗೆ ಪ್ರಜಾಪ್ರಭುತ್ವದ ಹೆಸರಿನಲ್ಲಿ ಸರ್ವಾಧಿಕಾರ ನಡೆಯುತ್ತದೆ. ಎಲ್ಲಿಯವರೆಗೆ ಪ್ರಜಾಪ್ರಭುತ್ವದ ಹೆಸರಿನಲ್ಲಿ ಸರ್ವಾಧಿಕಾರ ನಡೆಯುತ್ತದೆ. ಎಲ್ಲಿಯವರೆಗೆ ಜನರು ಚುನಾವಣೆಗಳ ಕಾಲದಲ್ಲಿ ಹಣ ಹೆಂಡ ಮುಂತಾದ ಆಮಿಷಗಳಿಗೆ ಮನಸೋತು ತಮ್ಮ ಮತಗಳನ್ನು ಚಲಾಯಿಸುತ್ತಾರೋ ಅಲ್ಲಿಯವರೆಗೆ ಪ್ರಜಾ ಪ್ರಭುತ್ವದ ಹೆಸರಿನಲ್ಲಿ ಲಂಚದ ಪ್ರಭುತ್ವ ಅಸ್ತಿತ್ವದಲ್ಲಿರುತ್ತದೆ.

ನಾನು ಸ್ವರಾಜ್ಯಕ್ಕೆ ಪೂರ್ವ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಕೇಂದ್ರ ಶಾಸನ ಸಭೆಯ ಹಾಗೂ ವಿವಿಧ ಪ್ರಾಂತೀಯ ಶಾಸನ ಸಭೆಗಳ ಕಾರ್ಯಕಲಾಪಗಳನ್ನು ವೃತ್ತ ಪತ್ರಿಕೆಗಳ ಮೂಲಕ ತಿಳಿಯುತ್ತಿದ್ದೆ. ಅಲ್ಲದೆ ೧೯೪೧ ರಿಂದ ೧೯೪೫ ರವರೆಗೆ ಅಂದಿದ್ದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿದ್ದೆ. ಆ ನಂತರ ೧೯೬೭ರ ವರೆಗೂ ಸತತ ವಿಧಾನ ಸಭೆಯ ಸದಸ್ಯನಾಗಿದ್ದೆ. ಸ್ವಾತಂತ್ರ್ಯಕ್ಕೆ ಪೂರ್ವ ಅಂದಿದ್ದ ಶಾಸನ ಸಭೆಗಳಿಗೆ ಅತ್ಯಲ್ಪ ಅಧಿಕಾರವಿದ್ದರೂ ಕೂಡ ಆ ಸಭೆಗಳ ಕಾರ್ಯಕಲಾಪಗಳಲ್ಲಿ ಘನತೆಗಾಂಭೀರ್ಯಗಳಿದ್ದವು; ಶಿಸ್ತು ಸಂಯಮಗಳಿದ್ದವು. ಆ ಸಭೆಗಳ ಸದಸ್ಯರಾಗಿದ್ದವರು ಅತ್ಯಂತ ಪ್ರಾಮಾಣಿಕರಾಗಿದ್ದರು ಮತ್ತು ಬಹಳ ಸಭ್ಯತೆಯಿಂದ ವರ್ತಿಸುತ್ತಿದ್ದರು. ರಾಷ್ಟ್ರಕ್ಕೆ ಸ್ವಾತಂತ್ರ ಲಭಿಸಿದ ನಂತರವೂ ಕೂಡ ಸುಮಾರು ೧೫ ವರ್ಷಗಳ ಕಾಲ ರಾಷ್ಟ್ರದ ಪಾರ್ಲಿಮೆಂಟ್‌ನಲ್ಲಾಗಲಿ ರಾಜ್ಯಗಳ ಶಾಸನ ಸಭೆಗಳಲ್ಲಾಗಲಿ ಅಕ್ಷಮ್ಯ, ಅಸಭ್ಯ ವರ್ತನೆ, ಹಣಾಹಣಿ, ಮುಷ್ಟಾಮುಷ್ಟಿ, ಧರಣಿ ಮುಂತಾದ ಪ್ರಜಾಪ್ರಭುತ್ವ

ತತ್ವಕ್ಕೆ ವಿರುದ್ಧವಾದ ದೃಶ್ಯಗಳನ್ನು ನಾವು ನೋಡುತ್ತಿರಲಿಲ್ಲ. ಇಂದು ಕೆಲವು ಕಡೆಗಳಲ್ಲಿ ಶಾಸಕರೆನಿಸಿಕೊಂಡವರು ಪುಂಡುಪೋಕರಿಗಳಂತೆ ವರ್ತಿಸುತ್ತಿದ್ದಾರೆ. ಜನರ ಸಮಸ್ಯೆಗಳನ್ನೂ ದೇಶದ ಮುಂದಿರುವ ಸಮಸ್ಯೆಗಳನ್ನೂ ಬಗೆಹರಿಸಲು ಪ್ರಯತ್ನ ಮಾಡುವ ಬದಲು ಆರೋಪ ಪ್ರತ್ಯಾರೋಪಗಳಲ್ಲಿಯೇ ಕಾಲವ್ಯಯ ಮಾಡುತ್ತಾರೆ. ಒಮ್ಮೊಮ್ಮೆ ಅವರ ವರ್ತನೆಯನ್ನು ನೋಡಿದಾಗ ಜನಸಾಮಾನ್ಯರು ಇಂತಹ ಶಾಸಕರಿಂದ ಏನಾದರೂ ಕಲಿಯಬೇಕಾದುದು ಇದೆಯೇ ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಉದ್ಭವಿಸುತ್ತದೆ. ಹಿಂದೆ ಆಳುವ ಪಕ್ಷದವರೂ ವಿರೋಧ ಪಕ್ಷಗಳಿಗೆ ಸೇರಿದವರೂ ಒಬ್ಬರನ್ನೊಬ್ಬರು ಪರಸ್ಪರ ಗೌರವದಿಂದ ಆಜನ್ಮವೈರಿಗಳಂತೆ ವರ್ತಿಸುತ್ತಿದ್ದಾರೆ. ಇದಕ್ಕೆ ಕಾರಣ ಮಿತಿಮೀರಿದ ಅಧಿಕಾರಲಾಲಸೆ.

ರಾಷ್ಟ್ರಭಕ್ತಿ ಯುದ್ಧ ಕಾಲದಲ್ಲಿಯೇ ಆಗಲಿ ಶಾಂತಿಯ ಕಾಲದಲ್ಲಿಯೇ ಆಗಲಿ ಒಂದು ಪ್ರಬಲ ಶಕ್ತಿಯಾಗಿರುತ್ತದೆ. ಉತ್ಕಟ ರಾಷ್ಟ್ರಪ್ರೇಮಿಗಳಿಂದ ಕೂಡಿರುವ ರಾಷ್ಟ್ರವನ್ನು ಯುದ್ಧದಲ್ಲಿ ಗೆಲ್ಲುವುದು ಸುಲಭವಲ್ಲ. ಯುದ್ಧ ಕಾಲದಲ್ಲಿ ಎಲ್ಲಾ ಶಸ್ತ್ರಾಸ್ತ್ರಗಳಿಗಿಂತ ರಾಷ್ಟ್ರಭಕ್ತಿ ಪ್ರಬಲ ಅಸ್ತ್ರವಾಗಿ ಪರಿಣಮಿಸುತ್ತದೆ. ಈ ಕಾರಣದಿಂದ ಎರಡನೆಯ ಮಹಾಯುದ್ಧದ ಕಾಲದಲ್ಲಿ ಹಿಟ್ಲರ್‌ನು ಇಂಗ್ಲೆಂಡನ್ನೂ ರಷ್ಯಾವನ್ನೂ ಸೋಲಿಸಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯಕ್ಕಾಗಿ ಆಂಗ್ಲರ ವಿರುದ್ಧ ಚಳವಳಿ ನಡೆಯುತ್ತಿದ್ದಾಗ ಈ ದೇಶದ ಜನರಲ್ಲಿ ಉತ್ಕಟ ರಾಷ್ಟ್ರಪ್ರೇಮವಿತ್ತು ಆದರೆ ಸ್ವಾತಂತ್ರ್ಯ ಲಭಿಸಿದ ನಂತರ ರಾಷ್ಟ್ರಭಕ್ತಿ ಕಡಿಮೆಯಾಗುತ್ತಾ ಬಂದಿದೆ. ರಾಷ್ಟ್ರದ ಭವಿಷ್ಯವನ್ನು ಕುರಿತು ಚಿಂತಿಸದಿರುವವರು ಹೇರಳವಾಗಿರುತ್ತಾರೆಂದು ನನ್ನ ಭಾವನೆ. ರಾಜಕಾರಣಿಗಳಲ್ಲಿಯೂ ಕೂಡ ರಾಷ್ಟ್ರದ ಭವಿಷ್ಯವನ್ನು ಕುರಿತು ಚಿಂತಿಸುವವರಿಗಿಂತ ಅಧಿಕಾರಕ್ಕಾಗಿ ಚಿಂತಿಸುವವರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಸರ್ಕಾರಿ ನೌಕರರಲ್ಲಿ ಬಹಳಮಂದಿ ರಾಷ್ಟ್ರದ ಭವಿಷ್ಯವನ್ನು ಕುರಿತು ಚಿಂತಿಸುವ ಗೊಡವೆಗೆ ಹೋಗುವುದೇ ಇಲ್ಲ. ಸಾಮಾನ್ಯ ಜನರ ಗತಿಯೂ ಅಷ್ಟೆ. ವಿದ್ಯಾವಂತ ಜನರಲ್ಲಿ ಬಹುಮಂದಿ ತಮಗೂ ರಾಷ್ಟ್ರಕ್ಕೂ ಯಾವ ಸಂಬಂಧವೂ ಇಲ್ಲವೆಂಬಂತೆ ವರ್ತಿಸುತ್ತಾರೆ. ಜನ್ಮವಿತ್ತು ಆಶ್ರಯನೀಡಿದ ಮಾತೃಭೂಮಿಗಿಂತ ತಮ್ಮ ಧರ್ಮವೇ ಹೆಚ್ಚು ಪವಿತ್ರವಾದುದೆಂದು ತಿಳಿದುಕೊಂಡಿರುವ ಜನರೂ ಈ ದೇಶದಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಧರ್ಮದ ಹಿತಕ್ಕಾಗಿ ದೇಶದ ಹಿತವನ್ನು ಮಾರಲು ಹೇಸುವುದಿಲ್ಲ. ಧರ್ಮ, ಜಾತಿ, ಭಾಷೆ ಇವುಗಳು ಜನರನ್ನು ಒಂದುಗೂಡಿಸುವ ಬದಲು ವಿಂಗಡಿಸುತ್ತವೆ. ಈ ದೇಶದ ಪರಿಸ್ಥಿತಿಯನ್ನು ಗಮನಿಸಿದಾಗ ರಾಷ್ಟ್ರಭಕ್ತಿ ಮಾತ್ರ ಜನರನ್ನು ಒಂದುಗೂಡಿಸುವ ಪ್ರೇರಕ ಶಕ್ತಿಯಾಗಬಲ್ಲದು.

ನಮ್ಮ ಜನರಲ್ಲಿ ರಾಷ್ಟ್ರದ ಏಳಿಗೆಗಾಗಿ ಅಥವಾ ಸಮಾಜದ ಹಿತಕ್ಕಾಗಿ ಒಟ್ಟುಗೂಡಿ ಕೆಲಸ ಮಾಡುವ ಪ್ರವೃತ್ತಿ ಬಹಳ ಕಡಿಮೆ. ಹಿಂದೆ ಆದರ್ಶಕ್ಕಾಗಿ ಅಥವಾ ರಾಷ್ಟ್ರಕ್ಕಾಗಿ ಯಾವ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ ಒಟ್ಟಾಗಿ ಸಾಮೂಹಿಕವಾಗಿ ಕೆಲಸ ಮಾಡಲು ಮುಂದೆ ಬರುತ್ತಿದ್ದರು. ಈಗ ತಮಗೆ ಲಾಭ ಸಿಕ್ಕುವುದಾದರೆ ಜನರು ಸುಲಭವಾಗಿ ಒಟ್ಟಾಗುತ್ತಾರೆ. ತಂತಮ್ಮ ವೈಯಕ್ತಿಕ ಅಭ್ಯುದಯಕ್ಕಾಗಿ ಜನರು ಸರ್ವಪ್ರಯತ್ನ ಮಾಡುತ್ತಾರೆ. ಅದಕ್ಕಾಗಿ ಚಿಂತಿಸುತ್ತಾರೆ. ಶ್ರಮವಹಿಸುತ್ತಾರೆ. ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ವೈಯಕ್ತಿಕವಾಗಿ ಮಹತ್‌ಸಾಧನೆಗಳನ್ನು ಮಾಡಿರುವ ವ್ಯಕ್ತಿಗಳಿದ್ದಾರೆ. ಆದರೆ ವೈಯಕ್ತಿಕ ಪ್ರಯೋಜನಕ್ಕಾಗಿ ಕೆಲಸ ಮಾಡುವ ಜನರನ್ನು ಸಾಮೂಹಿಕವಾಗಿ ದೇಶದ ಹಿತಕ್ಕಾಗಿ ದುಡಿಯಬೇಕೆಂದು ಹೇಳಿದರೆ ಅವರು ಅಷ್ಟೇ ಶ್ರದ್ಧೆಯಿಂದ ದುಡಿಯಲಾರರು. ನಮ್ಮಲ್ಲಿ ಸಾಮೂಹಿಕವಾಗಿ ಕೆಲಸ ಮಾಡುವ ಪ್ರವೃತ್ತಿ ಬಹಳ ಕಡಿಮೆ ಆದ್ದರಿಂದಲೇ ಸಹಕಾರ ಸಂಘ ಮುಂತಾದ ಸಂಸ್ಥೆಗಳು ಯಶಸ್ವಿಯಾಗಿ ಕೆಲಸ ಮಾಡಲು ಸಾಧ್ಯವಾಗಿಲ್ಲ. ೧೯೫೬ ರಲ್ಲಿ ರಾಜ್ಯಗಳ ಪುನರ್ ವಿಂಗಡಣೆಯಾದ ನಂತರ ರಾಷ್ಟ್ರಭಕ್ತಿ ಕಡಿಮೆಯಾಗುತ್ತಾ ಇದೆ; ಪ್ರಾದೇಶಿಕ ಮನೋಭಾವ ಹೆಚ್ಚಾಗುತ್ತಾ ಇದೆ. ಸ್ವಾತಂತ್ರ್ಯ ದಿನಾಚರಣೆಗಿಂತ ರಾಜ್ಯೋತ್ಸವಗಳು ಹೆಚ್ಚು ವೈಭವಗಳಿಂದ ನಡೆಯುತ್ತವೆ. ಜನರು ರಾಷ್ಟ್ರದ ಗಡಿರಕ್ಷಣೆಯ ವಿಚಾರದಲ್ಲಿ ಚಿಂತಿಸುವ ಬದಲು ರಾಜ್ಯಗಳ ಗಡಿನಿರ್ಧಾರಕ್ಕಾಗಿ ಚಳವಳಿ ಮಾಡಿ ಗುಲ್ಲೆಬ್ಬಿಸುತ್ತಾರೆ.

ರಾಷ್ಟ್ರ ಸ್ವತಂತ್ರವಾಗುವ ಪೂರ್ವ ಕವಿಗಳೂ, ಸಾಹಿತಿಗಳೂ, ತಮ್ಮ ಕೃತಿಗಳಿಂದ ರಾಷ್ಟ್ರಭಕ್ತಿ ಉಜ್ವಲಗೊಳ್ಳುವಂತೆ ಮಾಡುತ್ತಿದ್ದರು. ಈಗ ಅಂತಹ ಗ್ರಂಥಗಳು ಬಹಳ ಅಪರೂಪವಾಗಿವೆ. ಸ್ವಾತಂತ್ರ ಹೋರಾಟದ ಕಾಲದಲ್ಲಿ ಪ್ರಕಟವಾಗುತ್ತಿದ್ದ ವೃತ್ತ ಪತ್ರಿಕೆಗಳೂ, ಜನರಲ್ಲಿ ರಾಷ್ಟ್ರಭಕ್ತಿ ಮೂಡುವಂತೆ ಮಾಡುತ್ತಿದ್ದವು. ಆದರೆ ೧೯೫೬ ರಿಂದೀಚೆಗೆ ಕೆಲವರು ಸಾಹಿತಿಗಳೂ, ಪತ್ರಕರ್ತರೂ ಜನರಲ್ಲಿ ರಾಷ್ಟ್ರಭಕ್ತಿಯನ್ನು ಮೂಡಿಸುವ ಬದಲು ಜನರಲ್ಲಿ ಪ್ರಾದೇಶಿಕ ಭಾವನೆ ಮೂಡುವಂತೆ ಮಾಡುತ್ತಿದ್ದಾರೆ. ನಮ್ಮ ದೇಶಕ್ಕೂ ಚೀನಾ ದೇಶಕ್ಕೂ ಇರುವ ಗಡಿಯ ವಿವಾದ ಇನ್ನೂ ಬಗೆಹರಿದಿಲ್ಲ. ಅಮೇರಿಕಾ ದೇಶವು ನಾನಾ ರೀತಿಯಲ್ಲಿ ಪಾಕಿಸ್ತಾನಕ್ಕೆ ಬೆಂಬಲ ನೀಡಿ ಅದನ್ನು ಅತ್ಯಂತ ಪ್ರಬಲ ರಾಷ್ಟ್ರವನ್ನಾಗಿ ಮಾಡುವ ಸನ್ನಾಹದಲ್ಲಿದೆ. ಪಂಜಾಬಿನ ಉಗ್ರಗಾಮಿಗಳಿಗೆ ವಿದೇಶಿಯರು ನೆರವನ್ನು ನೀಡುತ್ತಿದ್ದಾರೆ. ನಮ್ಮ ದೇಶದ ಜನರು ಈ ಸನ್ನಿವೇಶಗಳ ದೆಸೆಯಿಂದ ಚಿಂತೆ ಮಾಡುವ ಬದಲು ಧರ್ಮದ ಹೆಸರಿನಲ್ಲಿ ಅಥವಾ ಜಾತಿಯ ಹೆಸರಿನಲ್ಲಿ ಅಥವಾ ಭಾಷೆಯ ಹೆಸರಿನಲ್ಲಿ ಪರಸ್ಪರ ಕಚ್ಚಾಡುತ್ತಿದ್ದಾರೆ. ರಾಷ್ಟ್ರಭಕ್ತಿ

ಇಲ್ಲದ ಜನರು, ರಾಷ್ಟ್ರದ ಭವಿಷ್ಯವನ್ನು ಕುರಿತು ಚಿಂತಿಸದೇ ಇರುವ ಜನರು ಎಂದೂ ಪ್ರಬಲ ರಾಷ್ಟ್ರವನ್ನು ಕಟ್ಟಲಾರರು. ಈ ಕಾರಣದಿಂದ ಜನರಲ್ಲಿ ರಾಷ್ಟ್ರಭಕ್ತಿ ಮೂಡುವಂತೆ ಎಲ್ಲಾ ವಿಧವಾದ ಪ್ರಯತ್ನ ಮಾಡುವುದು ಅತ್ಯಾವಶ್ಯಕ. ಧಾರ್ಮಿಕ ಅಲ್ಪಸಂಖ್ಯಾತರ ಮುಖಂಡರು ಸದಾ ತಮ್ಮ ಧರ್ಮದ ವಿಚಾರವನ್ನು ಮಾತನಾಡುವುದನ್ನು ಬಿಟ್ಟು ತಮ್ಮ ಮತಬಾಂಧವರಿಗೆ ರಾಷ್ಟ್ರದ ಐಕ್ಯತೆಯ ಮಹತ್ವವನ್ನು ಬೋಧಿಸುವುದು ಅತ್ಯಗತ್ಯ.

ನಮಗೆ ನಾಗರಿಕ ಪ್ರಜ್ಞೆಯೂ ಇಲ್ಲ; ನೈರ್ಮಲ್ಯ ಪ್ರಜ್ಞೆಯೂ ಇಲ್ಲ. ನಮ್ಮ ದೇಶದ ಪಟ್ಟಣಗಳಲ್ಲಿ ನಾಗರಿಕರೆನಿಸಿಕೊಂಡವರು ರಸ್ತೆಗಳ ಮೇಲೆ ಕಸ ಕಡ್ಡಿ, ಗೊಬ್ಬರ ಇತ್ಯಾದಿಗಳನ್ನು ವಿವೇಚನೆ ಇಲ್ಲದೆ ಎಸೆಯುತ್ತಾರೆ. ಪೌರ ಸಭೆಗಳು ಲಂಚದ ಆಗರಗಳಾಗಿವೆ. ಕೆಲವು ಕಡೆಗಳಲ್ಲಿ ಪೌರ ಸಭೆಯಲ್ಲಿ ಕೆಲಸ ಮಾಡುವ ನೌಕರರ ಜೊತೆಗೆ ಪೌರ ಸಭೆಯ ಸದಸ್ಯರೂ ಕೂಡ ಯಥೇಚ್ಛವಾಗಿ ಲಂಚವನ್ನು ಕಬಳಿಸುತ್ತಾರೆ. ಪಟ್ಟಣಗಳ ಸ್ವಚ್ಛತೆಗಾಗಿ ಸಾರ್ವಜನಿಕರ ಹಣವೇನೂ ಯಥೇಚ್ಛವಾಗಿ ಖರ್ಚಾಗುತ್ತದೆ. ಆದರೆ ಸ್ವಚ್ಛತೆ ಕಣ್ಣಿಗೆ ಕಾಣುವುದಿಲ್ಲ. ಪೌರ ಸಭೆಗಳಲ್ಲಿ ಕೆಲಸ ಮಾಡುವ ನೌಕರರಿಗೆ ಒಂದು ಕಡೆ ಹೆಚ್ಚು ಸಂಬಳವೂ ಬೇಕು. ಆದರೆ ಕೆಲಸ ಮಾಡುವುದು ಬಹಳ ಕಡಿಮೆ. ಕೆಲವು ದೊಡ್ಡ ದೊಡ್ಡ ಪೌರಸಭೆಗಳಲ್ಲಿ ತಮ್ಮ ಸಾಮೂಹಿಕ ಶಕ್ತಿಯನ್ನು ಪ್ರದರ್ಶಿಸಿ ಮೇಲಾಧಿಕಾರಿಗಳನ್ನು ಹೆದರಿಸುವ ಸ್ಥಿತಿಗೆ ಬಂದಿರುತ್ತಾರೆ. ಪಟ್ಟಣಗಳಲ್ಲಿ ಸಾರ್ವಜನಿಕ ಶೌಚಾಗೃಹಗಳನ್ನು ಕಾಣುವುದು ಅಪರೂಪ. ಜನರು ರಸ್ತೆಗಳ ಪಕ್ಕದಲ್ಲಿ ಅಥವಾ ಬಯಲು ಪ್ರದೇಶಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡುವ ದೃಶ್ಯ ಅಸಹ್ಯಕರವಾಗಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಈ ರೀತಿ ಬಹಿರಂಗ ಮಲಮೂತ್ರ ವಿಸರ್ಜನೆಯನ್ನು ಕಾಣುವುದೇ ಇಲ್ಲ. ಪಾಶ್ಚಿಮಾತ್ಯರ ನೈರ್ಮಲ್ಯ ಪ್ರಜ್ಞೆ ನಮಗೆ ಬರಬೇಕಾದರೆ ಎಷ್ಟು ಶತಮಾನಗಳು ಬೇಕೊ ನಾನರಿಯೆ. ಕೆಲವು ಕಡೆಗಳಲ್ಲಿ ದೇವಾಲಯಗಳಲ್ಲಿ ಮತ್ತು ಅವುಗಳ ಸುತ್ತುಮುತ್ತಲಿನ ಪ್ರದೇಶ ಅಸಹ್ಯವನ್ನುಂಟು ಮಾಡುತ್ತದೆ. ಆ ದೃಶ್ಯವನ್ನು ನೋಡಿದರೆ ಮನಸ್ಸಿಗೆ ಬಹಳ ದುಃಖವಾಗುತ್ತದೆ. ಅರೆವಾಸಿ ಸುಟ್ಟ ಹೆಣಗಳನ್ನು ಗಂಗಾ ನದಿಯಲ್ಲಿ ತೇಲಿಬಿಟ್ಟರೆ ಸತ್ತವರಿಗೆ ಮೋಕ್ಷ ಸಿಕ್ಕುತ್ತದೆಯೆಂಬ ಮೂಢ ನಂಬಿಕೆಯನ್ನು ಸ್ಮರಿಸಿಕೊಂಡರೆ, ನಮ್ಮ ಜನರ ಧಾರ್ಮಿಕ ನಂಬಿಕೆಗಳು ಕೆಲವು ಬಹಳ ವಿಚಿತ್ರವೆನಿಸುತ್ತದೆ. ಕೆಲವರು ಮನೆಗಳಲ್ಲಿ ಮಡಿ ಮಾಡುತ್ತಾರೆ. ಆದರೆ ಮನೆಗಳ ಸುತ್ತಮುತ್ತ ಎಷ್ಟು ಕೊಳಕಿದ್ದರೂ ಕೂಡ ಸೈರಿಸಿಕೊಳ್ಳುತ್ತಾರೆ. ದೆಹಲಿ ಮುಂತಾದ ದೊಡ್ಡ ಪಟ್ಟಣಗಳಲ್ಲಿ ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ನಡೆಯುತ್ತವೆ.

ಸಮ್ಮೇಳನಗಳಿಗೆ ಬರುವ ಮುಂದುವರಿದ ರಾಷ್ಟ್ರಗಳ ಪ್ರತಿನಿಧಿಗಳು ರೈಲುಗಳಲ್ಲಿ ಅಥವಾ ಕಾರುಗಳಲ್ಲಿ ಪ್ರವಾಸ ಮಾಡುವಾಗ ಜನರು ಬಹಿರಂಗವಾಗಿ ಮಲಮೂತ್ರ ವಿಸರ್ಜನೆಯನ್ನು ಮಾಡುವುದನ್ನು ನೋಡಿ ನಮ್ಮ ದೇಶದ ಜನರು ಅನಾಗರಿಕರೆಂಬ ಭಾವನೆಯನ್ನು ತಾಳುವುದರಲ್ಲಿ ಆಶ್ಚರ್ಯವೇನಿಲ್ಲ. ದೊಡ್ಡ ದೊಡ್ಡ ನಗರಪಾಲಿಕೆಗಳ ಮೇಯರುಗಳು ಸಾರ್ವಜನಿಕ ಬೊಕ್ಕಸದಿಂದ ಹಣ ಖರ್ಚುಮಾಡಿ ವಿದೇಶಗಳಿಗೆ ಹೋಗಿ ಬರುತ್ತಾರೆ. ಆದರೆ ವಿದೇಶ ಪ್ರವಾಸದಿಂದ ಅವರು ಏನನ್ನೂ ಕಲಿತುಕೊಂಡು ಬರುವುದಿಲ್ಲವೆಂದು ನನ್ನ ಭಾವನೆ.

ಜಾತಿ ಪದ್ಧತಿ ಒಂದು ವಿಲಕ್ಷಣವಾದ ಪದ್ಧತಿಯಾಗಿದೆ. ಅದು ಹಿಂದೂ ಸಮಾಜಕ್ಕೆ ಹಾಗೂ ಇಡೀ ದೇಶಕ್ಕೆ ತಗಲಿರುವ ಒಂದು ಶಾಪವಾಗಿ ಪರಿಣಮಿಸಿದೆ. ಜಗತ್ತಿನ ಯಾವ ದೇಶದಲ್ಲಿಯೂ ಕೂಡ ಒಂದೇ ಧರ್ಮಕ್ಕೆ ಸೇರಿದ ಜನರಲ್ಲಿ ಸಾವಿರಾರು ಜಾತಿ ಮತ್ತು ಒಳಜಾತಿಗಳು ಇರುವುದಿಲ್ಲ. ಈ ಸಂಗತಿಯನ್ನು ನಮ್ಮ ಜನರು ತಿಳಿದುಕೊಂಡರೆ ವಾಸಿ. ಜಾತಿ ಪದ್ಧತಿ ರಾಷ್ಟ್ರದ ಐಕ್ಯತೆಗೆ ಕಂಟಕ ಪ್ರಾಯವಾಗಿದೆ. ಯಾವ ಕಾರಣದಿಂದಲೋ, ನಮ್ಮ ಪೂರ್ವಿಕರು ನಾಲ್ಕು ವರ್ಣಗಳನ್ನು ಸೃಷ್ಟಿಸಿದರು. ನಂತರ ನಾಲ್ಕು ವರ್ಣಗಳ ಜೊತೆಗೆ ಪಂಚಮ ವರ್ಣವನ್ನು ಸೃಷ್ಟಿಸಿ, ಆ ಪಂಚಮ ವರ್ಣದವರೆಲ್ಲರೂ ಶತಮಾನಗಳ ಅಸ್ಪೃಶ್ಯರಾಗಿ ಅನಾಗರಿಕರಂತೆ ಬಾಳುವಂತೆ ಮಾಡಿದರು. ಕಾಲಕ್ರಮೇಣ ವರ್ಣಗಳು ಮಾಯವಾಗಿ ಜಾತಿಗಳು ಹುಟ್ಟಿದವು. ಒಂದೊಂದು ಜಾತಿಗೂ ಒಬ್ಬೊಬ್ಬ ಗುರುಗಳಾದರು. ಅವರನ್ನು ಜಗದ್ಗುರುಗಳೆಂದು ಕರೆದರು. ಜಾತಿಗಳಲ್ಲಿ ಉಪಜಾತಿಗಳೂ, ಒಳಜಾತಿಗಳೂ ಕ್ರಮೇಣ ಹುಟ್ಟಿದವು. ಒಂದೊಂದು ವೃತ್ತಿಯನ್ನವಲಂಬಿಸಿದವರೂ ಒಂದೊಂದು ಜಾತಿಯವರಾದರು. ಜಾತಿಪದ್ಧತಿಯಿಂದ ಮತ್ತು ಕೆಲವು ಅನಿಷ್ಟ ಧಾರ್ಮಿಕ ಸಂಪ್ರದಾಯಗಳಿಂದ ಈ ದೇಶಕ್ಕೆ ಆಗಿರುವಷ್ಟು ಹಾನಿ ಇನ್ಯಾವ ಕಾರಣದಿಂದಲೂ ಆಗಿಲ್ಲವೆಂದು ನನ್ನ ಭಾವನೆ.

ಕೆಲವರು ಮೊದಲಿನಿಂದಲೂ ತಮ್ಮ ಪ್ರಯೋಜನಕ್ಕಾಗಿ ಅಥವಾ ಮೂಢನಂಬಿಕೆಗಳಿಂದ ಜಾತಿ ಪದ್ಧತಿಯನ್ನು ಸಮರ್ಥಿಸುತ್ತಾ ಬಂದಿರುತ್ತಾರೆ. ಈಗಲೂ ಕೂಡ ಕೆಲವರು ತಮ್ಮ ವಿಚಿತ್ರ ತರ್ಕದಿಂದ ಜಾತಿ ಪದ್ಧತಿಯನ್ನು ಸಮರ್ಥಿಸುತ್ತಾರೆ. ಸುಮಾರು ಎರಡು ಸಾವಿರದ ಐನೂರು ವರ್ಷಗಳಿಂದ ಜಾತಿ ಪದ್ಧತಿಯ ನಿರ್ಮೂಲಕ್ಕಾಗಿಯೂ ಹಿಂದೂ ಸಮಾಜದ ಸುಧಾರಣೆಗಾಗಿಯೂ ಆಗಾಗ ಪ್ರಯತ್ನಗಳು ನಡೆಯುತ್ತಲೇ ಬಂದಿವೆ. ಆದರೆ ನಾನಾ ಕಾರಣಗಳಿಂದ ಜಾತಿಪದ್ಧತಿಯ ಬೇರು ಸಡಿಲವಾಗುವ ಬದಲು ಬಲವಾಗುತ್ತಲೇ ಇದೆ. ಕ್ರಿಸ್ತಪೂರ್ವ ಐನೂರರಲ್ಲಿ ಮೊಟ್ಟ

ಮೊದಲು ಬುದ್ಧನು ಒಂದು ಆಂದೋಳನವನ್ನು ಮಾಡಿ, ಎಲ್ಲಾ ಜಾತಿಯವರಿಗೂ ಅನ್ವಯಿಸಬಹುದಾದ ಸರಿಸಮಾನತೆಯ ಒಂದು ಹೊಸ ಧರ್ಮವನ್ನು ಸ್ಥಾಪಿಸಿದನು. ಬಹುಶಃ ಬೌದ್ಧ ಧರ್ಮ ಇಡೀ ಭಾರತದಲ್ಲಿ ಹಬ್ಬಿದ್ದರೆ ಈ ದೇಶದ ಇತಿಹಾಸವೇ ಬೇರೆಯಾಗಿರುತ್ತಿತ್ತು. ಆದರೆ ಜಾತಿಪದ್ಧತಿಗೆ ಅಂಟಿದ್ದವರು ಬೌದ್ಧ ಧರ್ಮ ಭಾರತದಲ್ಲಿ ಉಳಿಯದಂತೆ ಮಾಡಿದರು. ಅದನ್ನು ಚೀನಾ ಜಪಾನ್ ಮುಂತಾದ ಪರರಾಷ್ಟ್ರಗಳಿಗೆ ರಫ್ತುಮಾಡಿ, ಜಾತಿಪದ್ಧತಿಯನ್ನು ಶಾಶ್ವತಗೊಳಿಸಿದರು.

ಹನ್ನೆರಡನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಬಸವಣ್ಣನವರು ಜಾತಿಪದ್ಧತಿಯ ವಿರುದ್ಧ ಸಿಡಿದೆದ್ದು ಎಲ್ಲಾ ಜಾತಿಯವರಿಗೂ ಅನ್ವಯಿಸುವಂತಾಗುವ ಒಂದು ಹೊಸ ಧರ್ಮವನ್ನು ಸ್ಥಾಪಿಸಿದರು. ಅಸ್ಪೃಶ್ಯರೂ ಕೂಡ ಹೊಸ ಧರ್ಮವನ್ನು ಅವಲಂಬಿಸಲು ಅವಕಾಶ ಕಲ್ಪಿಸಿಕೊಟ್ಟರು. ಬಸವಣ್ಣನವರು ಉಚ್ಚ ಜಾತಿಯ ಬ್ರಾಹ್ಮಣರಾಗಿದ್ದರೆಂಬುದನ್ನು ಮರೆಯಬಾರದು. ಆದರೆ ಬಸವಣ್ಣನವರು ಸ್ಥಾಪಿಸಿದ ಧರ್ಮ ಅವರ ಕಾಲಾನಂತರ ಒಂದು ಹೊಸ ಜಾತಿಯಾಯಿತು. ರಾಮಮೋಹನ್ ರಾಯ್ ಅವರು ಹಿಂದೂ ಧರ್ಮದ ಸುಧಾರಣೆಗಾಗಿ ಬ್ರಹ್ಮಸಮಾಜವನ್ನು ಸ್ಥಾಪಿಸಿದರು. ಸ್ವಾಮಿ ದಯಾನಂದ ಸರಸ್ವತಿಯವರು ಆರ್ಯ ಸಮಾಜವನ್ನು ಸ್ಥಾಪಿಸಿದರು. ಹಿಂದೂಧರ್ಮ ಸುಧಾರಣೆಯಾಗುವ ಬದಲು ಆ ಎರಡು ಧರ್ಮಗಳೂ ಎರಡು ಹೊಸ ಜಾತಿಗಳಾದವು. ಹೀಗಾಗಿ ಜಾತಿ ಪದ್ಧತಿಯ ನಿರ್ಮೂಲಕ್ಕಾಗಿ ಇದುವರೆಗೆ ನಡೆದ ಪ್ರಯತ್ನಗಳಿಂದ ಜಾತಿಪದ್ಧತಿಯ ನಿರ್ಮೂಲಕ್ಕಾಗಿ ಇದುವರೆಗೆ ನಡೆದ ಪ್ರಯತ್ನಗಳಿಂದ ಜಾತಿಪದ್ಧತಿ ನಿರ್ಮೂಲವಾಗುವ ಬದಲು ಇದ್ದ ನೂರಾರು ಜಾತಿಗಳ ಜೊತೆಗೆ ಹೊಸ ಜಾತಿಗಳು ಹುಟ್ಟುವಂತಾಯ್ತು.

ಹಿಂದೆ ಆಂಗ್ಲರು ಈ ದೇಶದಲ್ಲಿ ತಮ್ಮ ಆಳ್ವಿಕೆಯನ್ನು ಶಾಶ್ವತಗೊಳಿಸುವ ದೃಷ್ಟಿಯಿಂದ ಒಂದು ಜಾತಿಯವರನ್ನು ಇನ್ನೊಂದು ಜಾತಿಯವರ ಮೇಲೆ ಒಂದು ಧರ್ಮದವರನ್ನು ಇನ್ನೊಂದು ಧರ್ಮದವರ ಮೇಲೆ ಎತ್ತಿಕಟ್ಟುತ್ತಿದ್ದರು. ಹಿಂದುಗಳ ಮೇಲೆ ಮುಸಲ್ಮಾನರನ್ನೂ, ಮುಸಲ್ಮಾನರ ಮೇಲೆ ಸಿಖ್ಖರನ್ನೂ, ಸ್ವರಾಜ್ಯಕ್ಕಾಗಿ ಹೋರಾಟ ಮಾಡುತ್ತಿದ್ದ ರಾಷ್ಟ್ರಭಕ್ತರ ಮೇಲೆ ದೇಶೀಯ ರಾಜಮಹಾರಾಜರುಗಳನ್ನೂ ಎತ್ತಿಕಟ್ಟುತ್ತಿದ್ದರು.

ಸ್ವರಾಜ್ಯ ಬಂದ ಮೇಲೆ ಸ್ವಾರ್ಥಸಾಧಕ ರಾಜಕಾರಣಿಗಳು ತಮ್ಮ ಹಿತಕ್ಕಾಗಿ ಬ್ರಿಟಿಷರ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಾ ಬಂದರು. ಓಟಿಗಾಗಿ

ಜಾತಿದ್ವೇಷ, ಧರ್ಮದ್ವೇಷ ಹೆಚ್ಚಾಗುವಂತೆ ಮಾಡಿದರು. ಈ ಕಾರಣದಿಂದ ಜಾತಿ ವೈಷಮ್ಯಗಳೂ, ಧರ್ಮ ದ್ವೇಷಗಳೂ ಹೆಚ್ಚಾಗಿ ಬೆಳೆಯುವಂತಾಗಿದೆ. ಹಿಂದೆ ಮುಂದುವರಿದ ಜಾತಿಗಳಿಗೆ ಸೇರಿದವರು ಸರ್ಕಾರಿ ನೌಕರಿ ತಮ್ಮ ಜಹಗೀರಿ ಎಂದು ಭಾವಿಸಿದ್ದರು. ಈಗ ವಿವಿಧ ಜಾತಿಗೆ ಸೇರಿದವರೂ, ವಿವಿಧ ಧರ್ಮಗಳಿಗೆ ಸೇರಿದವರೂ ಸರ್ಕಾರಿ ನೌಕರಿಯಲ್ಲಿ ತಮಗೆ ಸರಿಯಾದ ಪಾಲು ಸಿಕ್ಕಬೇಕೆಂದು ಚಳವಳಿ ಮಾಡುತ್ತಾರೆ. ಈ ದೇಶದಲ್ಲಿ ಕೆಲವರು ಸರ್ಕಾರಿ ನೌಕರಿಯಿಂದಲೇ ದೇಶದ ಬಡತನ ನಿವಾರಣೆಯಾಗುತ್ತದೆಂಬ ಭಾವನೆಯನ್ನು ತಾಳಿರುವಂತೆ ತೋರುತ್ತದೆ. ಆದರೆ ವಾಸ್ತವವಾಗಿ ಸರ್ಕಾರಿ ನೌಕರಿಯನ್ನು ಪಡೆದವರೂ, ಅವರ ಕುಟುಂಬ ವರ್ಗದವರೂ ಸುಖವಾಗಿರುವುದರ ಜೊತೆಗೆ ಶ್ರೀಮಂತರೂ ಆಗುತ್ತಾರೆ. ಅವರ ಜಾತಿಗೆ ಅಥವಾ ಧರ್ಮಕ್ಕೆ ಸೇರಿದ ಬಡಜನರು ಬಡವರಾಗಿಯೇ ಉಳಿಯುತ್ತಾರೆ. ಸರ್ಕಾರಿ ನೌಕರಿಗಾಗಿ ನಡೆಯತಕ್ಕ ಪೈಪೋಟಿಯ ದೆಸೆಯಿಂದ ಜಾತೀಯತೆ ಹೆಚ್ಚಾಗುತ್ತಾ ಇದೆ.

ಮತಾಂಧತೆ ದೇಶದಲ್ಲಿ ಒಂದು ಭಯಂಕರವಾದ ಪಿಡುಗಾಗಿದೆ. ಈ ಪಿಡುಗಿನಿಂದ ದೇಶದಲ್ಲಿ ಅನೈಕ್ಯಮತ್ಯ ಹೆಚ್ಚಾಗುತ್ತಾ ಇದೆ. ಮತಾಂಧತೆ ದೇಶದ ಪ್ರಬಲ ಶತ್ರುವಾಗಿ ಪರಿಣಮಿಸಿದೆ. ಮತಾಂಧರು ಧರ್ಮದ ಹೆಸರಿನಲ್ಲಿ ಅಧರ್ಮದ ಕೆಲಸವನ್ನು ಮಾಡುತ್ತಿದ್ದಾರೆ. ದೈವಭಕ್ತಿ, ಸತ್ಯಸಂಧತೆ, ಮಾನವೀಯ ಅನುಕಂಪ ಮಾನವಭ್ರಾತೃತ್ವ ಇವು ಎಲ್ಲಾ ಧರ್ಮಗಳ ಮೂಲತತ್ವಗಳನ್ನು ಮರೆತೇ ಬಿಟ್ಟಿದ್ದಾರೆ. ಜನರ ಬಾಯಲ್ಲಿ ಧರ್ಮ ಯಥೇಚ್ಛವಾಗಿದೆ. ಆದರೆ ಅವರ ದಿನಚರಿಯ ನಡವಳಿಕೆಗಳಲ್ಲಿ ಮೇಲ್ಕಂಡ ಮೂಲ ತತ್ವಗಳ ಆಚರಣೆಯಿಲ್ಲ. ಸತ್ಯ, ಮಾನವೀಯ ಅನುಕಂಪ ಇವುಗಳಿಲ್ಲದ ಧರ್ಮ ಟೊಳ್ಳು ಪಂಥವೆನಿಸುತ್ತದೆ. ನಿಜವಾದ ಧರ್ಮದಲ್ಲಿ ನಂಬಿಕೆಯುಳ್ಳವರು ಶಾಂತಿ ಸತ್ಯಗಳ ಸಂದೇಶವನ್ನು ಸಾರಬೇಕು. ಆದರೆ ಜಗತ್ತಿನ ಕೆಲವು ದೇಶಗಳಲ್ಲಿ ನಡೆಯುತ್ತಿರುವಂತೆ ನಮ್ಮ ದೇಶದಲ್ಲಿಯೂ ಕೂಡ ಧರ್ಮನಿಷ್ಠರೆಂದು ಹೇಳಿಕೊಳ್ಳುವವರು ದ್ವೇಷ ಹಿಂಸೆಗಳ ಸಂದೇಶವನ್ನು ಸಾರುತ್ತಿದ್ದಾರೆ. ಪಂಜಾಬಿನಲ್ಲಿ ಕಳೆದ ಕೆಲವು ವರ್ಷಗಳಿಂದ ಉಗ್ರಗಾಮಿಗಳೆನಿಸಿಕೊಂಡವರು ಧರ್ಮದ ಹೆಸರಿನಲ್ಲಿ ಹೆಂಗಸರು ಮಕ್ಕಳಾದಿಯಾಗಿ ನಿರಪರಾಧಿಗಳನ್ನು ಕೊಲೆ ಮಾಡುತ್ತಿದ್ದಾರೆ. ಈ ಕೊಲೆಗಡುಕರೂ ಕೂಡ ತಾವು ಧರ್ಮನಿಷ್ಠರೆಂದು ಸಾರುತ್ತಿದ್ದಾರೆ. ಕೆಲವು ಕಡೆಗಳಲ್ಲಿ ಪೂಜಾಮಂದಿರಗಳನ್ನು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಕೋಟೆಗಳನ್ನಾಗಿ ಮಾಡುತ್ತಾ ಬಂದಿರುತ್ತಾರೆ. ಕೆಲವು ಕಡೆಗಳಲ್ಲಿ ಪೂಜಾ ಮಂದಿರಗಳು ಕೊಲೆಗಡುಕರ ತಾಣಗಳಾಗಿವೆ. ಪೂಜಾ ಮಂದಿರಗಳಲ್ಲಿ ಶಸ್ತ್ರಾಸ್ತ್ರಗಳನ್ನು ಶೇಖರಿಸಿದರೆ ಅಥವಾ ಅವುಗಳಲ್ಲಿ

ಕೊಲೆಗಡುಕರು ಆಶ್ರಯಪಡೆದರೆ ಅವುಗಳು ಅಪವಿತ್ರಗೊಳ್ಳುವುದಿಲ್ಲವಂತೆ! ಆದರೆ ಅದೇ ಪೂಜಾಮಂದಿರಗಳಿಗೆ ಪೊಲೀಸು ಅಥವಾ ಮಿಲಿಟರಿಯವರು ನುಗ್ಗಿದರೆ ಅವು ಅಪವಿತ್ರಗೊಳ್ಳುತ್ತವೆಯಂತೆ ಎಂಥಹ ವಿಚಿತ್ರ ತರ್ಕ.

ದೇಶದ ಹಲವು ಕಡೆಗಳಲ್ಲಿ ದ್ವೇಷ ಧರ್ಮದ ಪೋಷಾಕನ್ನು ಧರಿಸಿದೆ. ಸ್ವಧರ್ಮದ ಮೇಲೆ ದುರಭಿಮಾನ ಹೆಚ್ಚಾಗಿ ಅನ್ಯಮತಗಳ ಮೇಲೆ ಮಿತಿಮೀರಿದ ದ್ವೇಷ ಬೆಳೆದಾಗ ಮತಾಂಧತೆ ಉತ್ಪತ್ತಿಯಾಗುತ್ತದೆ. ಮಿತಿಮೀರಿದ ಮತಾಂಧತೆಯ ಜೊತೆಯಲ್ಲಿ ಮಿತಿಮೀರಿದ ಮೌಢ್ಯ ಬೆರೆತರೆ "ಫಂಡಮೆಂಟಲಿಸಂ" ಅಥವಾ ಮೂಲಭೂತ ತತ್ವ ಉತ್ಪತ್ತಿಯಾಗುತ್ತದೆ. ಇಂದು ಜಗತ್ತಿನಲ್ಲಿ ಫಂಡಮೆಂಟಲಿಸಂ ಎಂಬ ಪೆಡಂಭೂತ ಮಾನವ ನಾಗರಿಕತೆಯನ್ನು ಪಲ್ಲಟಗೊಳಿಸುತ್ತಾ ಇದೆ. ಈ ಸಿದ್ಧಾಂತ ಧಾರ್ಮಿಕ ಮೂಲತತ್ವಗಳಿಗೂ, ಪ್ರಜಾಪ್ರಭುತ್ವಕ್ಕೆ ವ್ಯತಿರಿಕ್ತವಾಗಿದೆ. ಈ ಸಿದ್ಧಾಂತದಲ್ಲಿ ನಂಬಿಕೆಯುಳ್ಳವರು ಅಸತ್ಯ ಮತ್ತು ಹಿಂಸೆಯ ಆರಾಧಕರು. ಅವರಿಗೆ ವಿಶ್ವ ಭ್ರಾತೃತ್ವದಲ್ಲಾಗಲೀ ಅಥವಾ ಸತ್ಯ ಮಾನವೀಯತೆಗಳಲ್ಲಾಗಲೀ ನಂಬಿಕೆಯಿಲ್ಲ. ಅವರಲ್ಲಿ ಕೆಲವರು ಅಪ್ಪಟ ಕೊಲೆಗಡುಕರು. ಈ ಫಂಡಮೆಂಟಲಿಸಂ ಪೆಡಂಭೂತ ಭಾರತಕ್ಕೂ ಈಗ ನುಗ್ಗುತ್ತಾ ಇದೆ. ಈ ಭಯಂಕರ ಪಿಡುಗನ್ನು ತಡೆಗಟ್ಟುವುದು ಬಹಳ ಅವಶ್ಯಕ. ಬುದ್ಧಿಹೀನ ಜನರು ಒಂದೊಂದು ಧರ್ಮದವರಿಗೂ ಒಬ್ಬೊಬ್ಬ ಪ್ರತ್ಯೇಕ ದೇವರಿದ್ದಾನೆಂದು ನಂಬುತ್ತಾರೆ. ಇದು ನಿಜವಲ್ಲವೆಂಬುದನ್ನು ಬುದ್ಧಿ ಇದ್ದವರು ಪ್ರಚಾರ ಮಾಡಬೇಕು.

ಒಂದೊಂದು ಧರ್ಮದವರಿಗೂ ಒಬ್ಬೊಬ್ಬ ಪ್ರತ್ಯೇಕ ದೇವರಿದ್ದಿದ್ದರೆ ಜಗತ್ತಿನಲ್ಲಿ ಅಲ್ಲೋಲಕಲ್ಲೋಲ ಪರಿಸ್ಥಿತಿಯುಂಟಾಗುತ್ತಿತ್ತು. ಒಬ್ಬ ದೇವರು ಹಗಲಾಗಬೇಕೆಂದು ಆದೇಶ ನೀಡಿದರೆ ಇನ್ನೊಬ್ಬ ದೇವರು ರಾತ್ರಿಯಾಗಬೇಕೆಂದು ಆದೇಶ ನೀಡುತ್ತಿದ್ದ. ಒಬ್ಬ ದೇವರು ಮಳೆಗಾಲ ಬೇಕೆಂದು ಹೇಳಿದರೆ ಇನ್ನೊಬ್ಬ ದೇವರು ಬೇಸಿಗೆ ಬೇಕೆಂದು ಹೇಳುತ್ತಿದ್ದ. ಮತ್ತೊಬ್ಬ ದೇವರು ಚಳಿಗಾಲ ಬೇಕೆಂದು ಹೇಳುತ್ತಿದ್ದ. ಒಂದೊಂದು ಧರ್ಮಕ್ಕೆ ಒಬ್ಬೊಬ್ಬ ದೇವರಿದ್ದಿದ್ದರೆ ಒಬ್ಬ ದೇವರು ತನ್ನ ಧರ್ಮಕ್ಕೆ ಸೇರಿದವರನ್ನು ನಾಲ್ಕು ಕೈಗಳಿರುವಂತೆ ಸೃಷ್ಟಿಸುತ್ತಿದ್ದ. ಇನ್ನೊಬ್ಬ ದೇವರು ನಾಲ್ಕು ಕಣ್ಣುಗಳುಳ್ಳವರನ್ನು ಸೃಷ್ಟಿಸುತ್ತಿದ್ದ. ಮತ್ತೊಬ್ಬ ದೇವರು ತನ್ನ ಧರ್ಮದವರಿಗೆ ಎರಡು ತಲೆಗಳನ್ನು ಕೊಡುತ್ತಿದ್ದ ಒಬ್ಬ ದೇವರು ತನ್ನ ಧರ್ಮದವರಿಗೆ ನೂರು ವರ್ಷಗಳ ಆಯುಷ್ಯವನ್ನು ಕೊಟ್ಟರೆ ಇನ್ನೊಬ್ಬ ದೇವರು ತನ್ನ ಧರ್ಮದವರಿಗೆ ಎರಡುನೂರು ವರ್ಷಗಳ ಆಯುಷ್ಯನ್ನು ಕೊಡುತ್ತಿದ್ದನ್ನು. ಮತ್ತೊಬ್ಬ ದೇವರು ತನ್ನ ಧರ್ಮಕ್ಕೆ ಸೇರಿದವರನ್ನು ಅಮರರನ್ನಾಗಿ

ಮಾಡುತ್ತಿದ್ದ. ಜಾತಿಮತಗಳ ಬೇಧವಿಲ್ಲದೆ ವರ್ಣ ರಾಷ್ಟ್ರಗಳ ಬೇಧವಿಲ್ಲದೆ ಸೃಷ್ಟಿಕರ್ತನು ಮಾನವರೆಲ್ಲರನ್ನೂ, ಮುಸಲ್ಮಾನರಿಗೂ, ಕ್ರಿಶ್ಚಿಯನ್‌ರಿಗೂ ಒಂದೇ ವಿಧವಾದ ಕಣ್ಣು, ಕಿವಿ, ಕಾಲು, ನರನಾಡಿಗಳು, ಜೀರ್ಣ ಮತ್ತು ಶ್ವಾಶಕೋಶಗಳು ಮುಂತಾದ ಅವಯವಗಳಿರುತ್ತವೆ. ಇವರೆಲ್ಲರೂ ಜನನ ಬಾಲ್ಯ, ಕೌಮಾರ್ಯ, ಯೌವ್ವನ, ಮುಪ್ಪು ಈ ಅವಸ್ಥೆಗಳನ್ನು ಅನುಭವಿಸಲೇ ಬೇಕು. ಎಲ್ಲರೂ ಒಂದಲ್ಲ ಒಂದು ದಿನ ಸಾಯಲೇ ಬೇಕು. ಇವೇ ಮುಂತಾದ ಸಂಗತಿಗಳನ್ನು ಯೋಚಿಸಿದರೆ ಮಾನವರೆಲ್ಲರನ್ನೂ ಸೃಷ್ಟಿಸಿದ ಮಹಾಶಿಲ್ಪಿ ಒಬ್ಬನೇ ಎಂಬುದು ವ್ಯಕ್ತವಾಗುತ್ತದೆ.

ಧರ್ಮದ್ವೇಷ ಎಲ್ಲಿಯವರೆಗೆ ಹೋಗಿದೆಯೆಂದರೆ, ಒಮ್ಮೊಮ್ಮೆ ವೈಯಕ್ತಿಕ ಕಾರಣಗಳಿಗಾಗಿ ಬೇರೆ ಬೇರೆ ಧರ್ಮಕ್ಕೆ ಸೇರಿದ ಇಬ್ಬರು ಜಗಳವಾಡಿದರೆ ಅದು ಕೋಮುವಾರು ಘರ್ಷಣೆಗೆ ನಾಂದಿಯಾಗುತ್ತದೆ. ಹಿಂದುಗಳಿಬ್ಬರು ಪರಸ್ಪರ ಜಗಳವಾಡಿದರೆ ಅಥವಾ ಮುಸಲ್ಮಾನರಿಬ್ಬರು ಪರಸ್ಪರ ಜಗಳವಾಡಿದರೆ ಅಂತಹ ಜಗಳಗಳಿಂದ ಯಾವ ವಿಧವಾದ ಹಾನಿಯೂ ಉಂಟಾಗುವುದಿಲ್ಲ. ಆದರೆ ಒಬ್ಬ ಹಿಂದು ಮತ್ತು ಒಬ್ಬ ಮುಸಲ್ಮಾನ್ ವೈಯಕ್ತಿಕ ಕಾರಣಗಳಿಗಾಗಿ ಜಗಳವಾಡಿದರೆ ಅದು ಕೋಮುವಾರು ಘರ್ಷಣೆಗೆ ಎಡೆಮಾಡಿಕೊಡುತ್ತದೆ. ಈ ಲೋಕದಲ್ಲಿ ದೇವರನ್ನು ನೋಡಿದವರು ಈಗ ಬದುಕಿಲ್ಲ. ಜನರು ಅವರವರ ಕಲ್ಪನೆಗನುಗುಣವಾಗಿ ದೇವರನ್ನು ಸೃಷ್ಟಿಸಿಕೊಂಡಿರುತ್ತಾರೆ. ಆದರೆ ಕಣ್ಣಿದ್ದವರೂ ಬುದ್ಧಿಯಿದ್ದವರು ದೇವರ ಕೈವಾಡವನ್ನು ಪ್ರತಿದಿನವೂ ನೋಡಬಹುದು. ಗ್ರಹಗಳು ನಿಯಮಿತ ಪಥದಲ್ಲಿ ನಿಯಮಿತ ಕಾಲಕ್ಕನುಗುಣವಾಗಿ ಚಲಿಸುತ್ತವೆ. ಕ್ಲಿಪ್ತಕಾಲಕ್ಕೆ ಹಗಲಿರುಳುಗಳು ಜರುಗುತ್ತವೆ. ಋತುಗಳು ಒಂದಾದ ಮೇಲೆ ಒಂದರಂತೆ ನಿರ್ದಿಷ್ಟ ಕಾಲದಲ್ಲಿ ಬದಲಾವಣೆ ಹೊಂದುತ್ತವೆ. ನಿಗದಿಯಾದ ಕಾಲಕ್ಕೆ ಸರಿಯಾಗಿ ಸೂರ್ಯೋದಯ ಚಂದ್ರೋದಯಗಳಾಗುತ್ತವೆ. ಇವೇ ಮುಂತಾದ ವಿಚಾರಗಳನ್ನು ಗಮನಿಸಿದರೆ ವಿಶ್ವದ ಆಗುಹೋಗುಗಳನ್ನೂ, ಸಂಸ್ಥೆ ಚರಾಚರ ವಸ್ತುಗಳ ಪ್ರಗತಿ ಪರಿವರ್ತನೆಗಳನ್ನೂ ನಿರ್ಧರಿಸುವ ದೃಷ್ಟಿಗೆ ಅಗೋಚರವಾದ ಜಗನ್ನಿಯಾಮಕ ಮಹಾಶಕ್ತಿ ಇದೆಯೆಂದು ಭಾಸವಾಗುತ್ತದೆ. ಸೃಷ್ಟಿ ವೈಚಿತ್ರ್ಯವನ್ನು ಅವಲೋಕಿಸಿದರೆ ಹೊರನೋಟಕ್ಕೆ ಕಾಣುವ ವೈವಿಧ್ಯತೆಯ ಹಿನ್ನೆಲೆಯಲ್ಲಿ ಐಕ್ಯತೆ ಅಡಗಿದೆಯೆಂದೂ, ಅವ್ಯವಸ್ಥೆಯ ಹಿನ್ನೆಲೆಯಲ್ಲಿ ವ್ಯವಸ್ಥೆ ಅಡಗಿದೆಯೆಂದೂ ಸೂಕ್ಷ್ಮಮತಿಗಳಿಗೆ ಗೊತ್ತಾಗುತ್ತದೆ.

ದೇವರು ತನ್ನ ಹೆಸರಿನಲ್ಲಿ ಮನುಷ್ಯರಾದವರು ಒಬ್ಬರೊಡನೊಬ್ಬರು ಹೋರಾಡಿ ಸಾಯಬೇಕೆಂದು ಹೇಳಿದ್ದಾನೆಂದು ಯಾವ ಧರ್ಮಗ್ರಂಥಗಳಲ್ಲೂ ಉಲ್ಲೇಖವಾಗಿಲ್ಲ.

ದುಷ್ಟರು ದೇವರ ಹೆಸರನ್ನು ಒಳ್ಳೆಯ ಕೆಲಸಕ್ಕೆ ಉಪಯೋಗಿಸುವ ಬದಲು ಕೆಟ್ಟ ಕೆಲಸಕ್ಕೆ ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ. ನಮ್ಮ ಜನರಲ್ಲಿ ವೈಜ್ಞಾನಿಕ ದೃಷ್ಟಿ ಮೂಡಬೇಕು. ದಿವಂಗತ ಪಂಡಿತ್ ಜವಹರ್‌ಲಾಲ್ ನೆಹರೂರವರು ಮೊದಮೊದಲು ನಾಸ್ತಿಕರಂತೆ ಮಾತನಾಡುತ್ತಿದ್ದರೂ ಕೂಡ ಅವರ ಕೊನೆಯ ವರ್ಷಗಳಲ್ಲಿ ವಿಜ್ಞಾನ ಮತ್ತು ಆತ್ಮಜ್ಞಾನ ಭಾರತದ ಅವಳಿಗುರಿಗಳಾಗಿರಬೇಕೆಂದು ಆಗಾಗ ಹೇಳುತ್ತಿದ್ದರು. ಇಂದು ಭಾರತೀಯರಲ್ಲಿ ಆತ್ಮಜ್ಞಾನವೂ ಇಲ್ಲ; ವೈಜ್ಞಾನಿಕ ದೃಷ್ಟಿಯೂ ಇಲ್ಲ. ಇವುಗಳ ಬದಲಾಗಿ ಜನರಲ್ಲಿ ಅಗಾಧವಾದ ಮೌಢ್ಯವಿದೆ. ಅನಕ್ಷರಸ್ಥರ ಮೌಢ್ಯಕ್ಕಿಂತ ವಿದ್ಯಾವಂತರೆನಿಸಿಕೊಂಡಿರುವವರ ಮೌಢ್ಯ ನನಗೆ ಅಚ್ಚರಿಯನ್ನುಂಟು ಮಾಡುತ್ತದೆ. ಇಂದಿನ ವಿದ್ಯಾವಂತರಲ್ಲಿ ಬಹುಜನರಿಗೆ ವೈಜ್ಞಾನಿಕ ದೃಷ್ಟಿಯೂ ಇಲ್ಲ; ಜಗತ್ತಿನ ಇತಿಹಾಸದ ಸ್ಥೂಲ ಪರಿಚಯವೂ ಇಲ್ಲ; ಜಗತ್ತಿನ ಮತ್ತು ನಮ್ಮ ದೇಶದ ಆಗುಹೋಗುಗಳ ಪರಿಚಯವೂ ಇಲ್ಲ; ಸಾರ್ವತ್ರಿಕ ಜ್ಞಾನದ ಅರಿವೂ ಇಲ್ಲ. ಇಂತಹ ಜನರು ಈ ದೇಶದ ಭವಿಷ್ಯವನ್ನು ಹೇಗೆ ರೂಪಿಸಲು ಸಾಧ್ಯ?

ನಮ್ಮಲ್ಲಿರುವ ವಿಕೃತ ಗುಣಗಳೇ ನಮ್ಮ ಶತ್ರುಗಳಾಗಿ ಪರಿಣಮಿಸಿವೆ. ದೇಶದ ಹೊರಗಡೆಯಿರುವ ಶತ್ರುಗಳಿಗಿಂತ ಒಳಗಡೆ ಇರುವ ಈ ಶತ್ರುಗಳೇ ಹೆಚ್ಚು ಅಪಾಯಕಾರಿಯಾಗಿವೆ. ಯಾವ ದೇಶದಲ್ಲಿಯೇ ಆಗಲಿ ಪರಿವರ್ತನೆಯಾಗಬೇಕಾದರೆ ಮೇಲ್ಗಡೆಯಿಂದ ಸುಧಾರಣೆಯಾಗಬೇಕು. ಇಲ್ಲವೇ ಕೆಳಗಡೆಯಿಂದ ಕ್ರಾಂತಿಯಾಗಬೇಕು. ನಮ್ಮ ದೇಶದಲ್ಲಿ ನಾನಾ ಕಾರಣಗಳಿಂದ ಕೆಳಗಡೆ ಕ್ರಾಂತಿಯಾಗುವುದು ಅಸಂಭವ. ರಕ್ತಪಾತವಾಗುವ ಕ್ರಾಂತಿಯನ್ನು ನಾನು ಬಯಸುವುದಿಲ್ಲ. ಮೇಲ್ಗಡೆ ಇರುವವರು ಸುಧಾರಣೆ ಮಾಡುವುದು ಸಾಧ್ಯವಿದೆ. ಪ್ರಧಾನಿಯಾದಿಯಾಗಿ ಕೇಂದ್ರದಲ್ಲಿರುವ ಎಲ್ಲಾ ಮಂತ್ರಿಗಳೂ, ಪಾರ್ಲಿಮೆಂಟ್ ಸದಸ್ಯರೂ, ವಿವಿಧ ರಾಜ್ಯಗಳ ಮುಖ್ಯಮಂತ್ರಿಗಳೂ, ಇತರ ಮಂತ್ರಿಗಳೂ ಶಾಸಕರೂ ಮನಸ್ಸು ಮಾಡಿದರೆ ಈ ದೇಶದಲ್ಲಿ ಪರಿವರ್ತನೆಯನ್ನು ಮಾಡುವುದು ಸಾಧ್ಯ. ಆದರೆ ಅವರು ಆ ದೆಸೆಯಲ್ಲಿ ಮನಸ್ಸು ಮಾಡಬೇಕು. ರಾಷ್ಟ್ರದ ಪ್ರಸ್ತುತ ಪರಿಸ್ಥಿತಿಯನ್ನು ಕಂಡು ಪರಿತಪಿಸುವ ಉನ್ನತಮಟ್ಟದ ರಾಜಕೀಯ ಮುಖಂಡರು ಒಬ್ಬರೂ ಇಲ್ಲದಿರುವುದು ಈ ದೇಶದ ದೌರ್ಭಾಗ್ಯ. ಎಲ್ಲಾ ರಾಜಕೀಯ ಮುಖಂಡರೂ ಅಧಿಕಾರಕ್ಕಾಗಿ ಹಾತೊರೆಯುತ್ತಿರುವವರೇ ಆಗಿರುತ್ತಾರೆ. ಅವರು ಮಾಡುವುದೆಲ್ಲವೂ, ಹೇಳುವುದೆಲ್ಲವೂ ಓಟಿಗಾಗಿ. ಏಷ್ಯಾ ಖಂಡದ ಹಿಂದುಳಿದ ರಾಷ್ಟ್ರಗಳ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳ ವಿಚಾರದಲ್ಲಿ ಬಹಳ ತಜ್ಞನೆಂದು ಹೆಸರುವಾಸಿಯಾಗಿರುವ ರಾಲ್ಫ್ ಬೂಲ್ತೇನ್ಸ್ ಅವರು ಇತ್ತೀಚೆಗೆ ಒಂದು ಪತ್ರಿಕಾ

ಸಂದರ್ಶನದಲ್ಲಿ ಭಾರತ ಮತ್ತಿತರ ಪ್ರಜಾಪ್ರಭುತ್ವ ರಾಷ್ಟ್ರಗಳ ವಿಚಾರದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಈ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವವು ಕುಂಟುತ್ತಾ ಕುಗುರುತ್ತಾ ನಡೆಯುತ್ತಿದೆಯೆಂದೂ, ಭ್ರಷ್ಟಾಚಾರ ಮತ್ತು ದುರಾಡಳಿತಗಳಿಂದ ಆರ್ಥಿಕ ಪ್ರಗತಿ ಕುಂಠಿತಗೊಂಡಿದೆ ಎಂದೂ ಹೇಳಿದ್ದಾರೆ. ಅಮೇರಿಕಾ ದೇಶ ತನ್ನ ಸ್ವಪ್ರಯೋಜನಕೋಸ್ಕರ ಪಾಕಿಸ್ತಾನಕ್ಕೆ ಆಧುನಿಕ ಶಸ್ತ್ರಾಸ್ತ್ರಗಳನ್ನು ಒದಗಿಸುವ ಜೊತೆಗೆ ಯಥೇಚ್ಛ ಆರ್ಥಿಕ ನೆರವನ್ನೂ ನೀಡುತ್ತಿದೆ. ಚೀನಾದೇಶದೊಡನೆ ನಮಗಿರುವ ಗಡಿ ವಿವಾದ ಇನ್ನೂ ಬಗೆಹರಿದಿಲ್ಲ. ನಮ್ಮ ರಾಷ್ಟ್ರದ ಸುತ್ತಮುತ್ತ ಮಿತ್ರರಿಗಿಂತ ಶತ್ರುಗಳೇ ಹೆಚ್ಚಾಗಿರುತ್ತಾರೆ. ಈ ದೇಶದ ಬಹುಮಂದಿ ರಾಜಕಾರಣಿಗಳಿಗೂ ಮತ್ತು ಜನರಿಗೂ ಈ ವಿಚಾರದಲ್ಲಿ ಚಿಂತೆಯಿದ್ದಂತೆ ಕಾಣುವುದಿಲ್ಲ. ರಾಜಕಾರಣಿಗಳು ಸುಧಾರಿಸುತ್ತಾರೆಂಬ ಭರವಸೆ ನನಗಿಲ್ಲ. ಆದ್ದರಿಂದ ಈ ದೇಶದಲ್ಲಿ ಒಂದು ಪ್ರಬಲವಾದ ವೈಚಾರಿಕ ಕ್ರಾಂತಿಯಾಗುವುದು ಬಹಳ ಅವಶ್ಯಕ. ಈ ಬಗ್ಗೆ ಬುದ್ಧಿಜೀವಿಗಳೆನಿಸಿಕೊಂಡವರೂ, ಆ ಪತ್ರಕರ್ತರೂ ವಿಚಾರ ಮಾಡುವುದು ಅಗತ್ಯ. ರಾಜಕಾರಣಿಗಳು ಇಂದು ಹೋಗುತ್ತಿರುವ ಜಾಡಿನಲ್ಲೇ ಮುಂದುವರಿದರೆ ಜನರು ಈಗಿರುವಂತೆ ನಿರ್ಲಿಪ್ತರಾಗಿದ್ದರೆ ದುರ್ದಿನಗಳನ್ನು  ನಾವು ಕಾಣಬೇಕಾಗುತ್ತದೆಯೆಂದು ಎಚ್ಚರಿಕೆಯನ್ನು ನೀಡಿ ನನ್ನ ಮಾತನ್ನು ಮುಗಿಸುತ್ತೇನೆ.

(ಈ ಲೇಖನ ತಾ:೧೫-೦೭-೧೯೮೭ರಂದು ದಿ.ಕಡಿದಾಳ್ ಮಂಜಪ್ಪನವರು ಮಂಡಿಸಿದ ದಿ. ಕೆ.ವಿ.ಶಂಕರೇಗೌಡ ದತ್ತಿ ಉಪನ್ಯಾಸವಾಗಿದೆ. ಈ ಮೂಲಭಾಷಣವನ್ನು ಸಂಕ್ಷಿಪ್ತಗೊಳಿಸಿ ಮೈಸೂರಿನ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಪ್ರಕಟಿಸಿದೆ. "ಪ್ರಜಾಮತ" ವಾರಪತ್ರಿಕೆ ಆಗಸ್ಟ್ ೧೬, ೧೯೮೭ ರಿಂದ ಸೆಪ್ಟಂಬರ್ ೧೩, ೧೯೮೭ ರವರೆಗೆ ಲೇಖನಮಾಲೆಯಾಗಿ ನಾಲ್ಕು ಕಂತುಗಳಲ್ಲಿ ಪ್ರಕಟಿಸಿದೆ. ಸಂ.)

# ನಮ್ಮ ರಾಷ್ಟ್ರಕ್ಕೆ ಏನಾಗಿದೆ?

ಇಂದು ಈ ರಾಷ್ಟ್ರದ ರಾಜಕೀಯ, ಸಾಮಾಜಿಕ, ಅರ್ಥಿಕ ಮತ್ತಿತರ ಕ್ಷೇತ್ರಗಳಲ್ಲಿ ಕಾಣುತ್ತಿರುವ ದೃಶ್ಯವನ್ನು ಸ್ಮರಿಸಿಕೊಂಡರೆ ರಾಷ್ಟ್ರದ ಭವಿಷ್ಯವನ್ನು ಕುರಿತು ಚಿಂತಿಸುವ ಚಿಂತನಾಶೀಲರಿಗೆ ದಿಗ್ಭ್ರಮೆಯಾಗುವುದರ ಜೊತೆಗೆ ಕಳವಳವೂ ಆಗುತ್ತಿದೆ. ಕೇವಲ ನಲವತ್ತೆರಡು ವರ್ಷಗಳ ಹಿಂದೆ ಸತ್ಯ ಮತ್ತು ಅಹಿಂಸೆಗಳಿಂದ ಕೂಡಿದ್ದ ಒಂದು ಅಂದೋಲನದಿಂದ ಸ್ವಾತಂತ್ರ್ಯವನ್ನು ಗಳಿಸಿದ್ದ ಈ ದೇಶದಲ್ಲಿ ಇಂದು ಸತ್ಯವನ್ನು ನುಡಿಯುವವರು ಅತಿ ವಿರಳವಾಗಿ, ಅಹಿಂಸೆಗೆ ನೆಲೆಯೇ ಇಲ್ಲದಂತಾಗಿದೆ. ಕೊಲೆ, ದರೋಡೆ, ಬಾಂಬ್‌ಸ್ಫೋಟ, ಭಯೋತ್ಪಾದಕರಿಂದ ನಿರಪರಾಧಿಗಳ ಕಗ್ಗೊಲೆ ಮತ್ತು ಅಪಹರಣ, ಮಹಿಳೆಯರ ಮೇಲಿನ ಅತ್ಯಾಚಾರ ಇವೇ ಮುಂತಾದ ಹಿಂಸಾಕೃತ್ಯಗಳು ದಿನೇ ದಿನೆ ಹೆಚ್ಚುತ್ತಿವೆ. ಕಾನೂನು ಪರಿಪಾಲನಾ ಯಂತ್ರ, ಭ್ರಷ್ಟಾಚಾರ, ರಾಜಕೀಯ ಕೈವಾಡ ಮತ್ತು ದುರಾಡಳಿತಗಳಿಂದ ಶಿಥಿಲಗೊಂಡು ಜನ ಸಾಮಾನ್ಯರಿಗೆ ಕಾನೂನಿನ ರಕ್ಷಣೆ ದೊರೆಯುವುದು ದುರ್ಲಭವಾಗಿದೆ. ಕಪ್ಪು ಹಣದ ಕುಬೇರರು ಮಾತ್ರ ಅಧಿಕಾರ ಸ್ಥಾನದಲ್ಲಿರುವವರನ್ನು ತೃಪ್ತಿಪಡಿಸಿ ತಮ್ಮ ಕಾರ್ಯವನ್ನು ಸುಲಭವಾಗಿ ನೆರವೇರಿಸಿಕೊಳ್ಳುತ್ತಿದ್ದಾರೆ. ಜನಸಾಮಾನ್ಯರ ಕೂಗು ಅರಣ್ಯರೋಧನವಾಗಿ ಪರಿಣಮಿಸಿದೆ. ಆರಕ್ಷಕದಳದ ಬೇಹುಗಾರಿಕೆಯ ಲೋಪ ಎದ್ದು ಕಾಣುತ್ತಿದೆ.

ಕಾಶ್ಮೀರ, ಪಂಜಾಬ್ ಮತ್ತು ಅಸ್ಸಾಂ ರಾಜ್ಯಗಳಲ್ಲಿ ರಾಷ್ಟ್ರವು ವಿಚ್ಛಿದ್ರಗೊಳ್ಳುವ ಭಯಾನಕ ಮುನ್ಸೂಚನೆಯ ಕಾರ್ಮೋಡಗಳು ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತಿವೆ. ಕಾಶ್ಮೀರದಲ್ಲಿ 'ಜಮ್ಮೂ-ಕಾಶ್ಮೀರ ಲಿಬರೇಷನ್ ಫ್ರಂಟ್', ಅಸ್ಸಾಮಿನಲ್ಲಿ 'ಯುನೈಟೆಡ್ ಲಿಬರೇಷನ್ ಫ್ರಂಟ್ ಆಫ್ ಅಸ್ಸಾಂ, ಪಂಜಾಬಿನಲ್ಲಿ ಖಾಲಿಸ್ತಾನ ವಾದಿಗಳು ತಂತಮ್ಮ ರಾಜ್ಯಗಳನ್ನು ಸರ್ವ ಸ್ವತಂತ್ರ ರಾಷ್ಟ್ರಗಳನ್ನಾಗಿ ಮಾಡುವ ದುಸ್ಸಾಹಸದಲ್ಲಿ ತೊಡಗಿದ್ದಾರೆ. ಆಂಧ್ರಪ್ರದೇಶದಲ್ಲಿ ನಕ್ಸಲೀಯರು 'ಪೀಪಲ್ಸ್ ವಾರ್ ಗ್ರೂಪ್' ಎಂಬ ಹೆಸರಿನಲ್ಲಿ ಕಾನೂನು ಬಾಹಿರ ರಾಷ್ಟ್ರದ್ರೋಹ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಈ ಪ್ರತ್ಯೇಕತಾ ವಾದಿಗಳನ್ನು ಬಂಧಿಸಿ ಸೆರೆಮನೆಯಲ್ಲಿಟ್ಟಾಗ ಅವರ ಬಿಡುಗಡೆಗಾಗಿ ಒತ್ತಾಯ ತರುವ ಉದ್ದೇಶದಿಂದ ನಿರಪರಾಧಿಗಳನ್ನು ಅಪಹರಿಸಿ ಒತ್ತೆಯಾಳುಗಳನ್ನಾಗಿ ಮಾಡುತ್ತಿದ್ದಾರೆ. ಬಲಹೀನ ಸರಕಾರಗಳು ಕಾನೂನು ಬಾಹಿರ ಚಟುವಟಿಕೆಗಳಲ್ಲಿ ನಿರತರಾಗಿರುವ ಈ

ಪ್ರತ್ಯೇಕತಾವಾದಿಗಳನ್ನು ದಿಟ್ಟತನದಿಂದ ಬಗ್ಗು ಬಡಿಯುವ ಬದಲು ಒಮ್ಮೊಮ್ಮೆ ಶರಣಾಗುತ್ತವೆ. ಪಂಜಾಬ್ ಮತ್ತು ಕಾಶ್ಮೀರ ರಾಜ್ಯಗಳಲ್ಲಿ ಧರ್ಮದ ಹೆಸರಿನಲ್ಲಿ ಭಯೋತ್ಪಾದಕರೆನಿಸಿಕೊಂಡವರು ಹೇಡಿಗಳಂತೆ ಮೋಸದಿಂದ ನಿರಪರಾಧಿಗಳನ್ನು ಕಗ್ಗೊಲೆ ಮಾಡಿ ನರಮೇಧವನ್ನು ಆಚರಿಸುತ್ತಿದ್ದಾರೆ. ಇಂತಹ ಪರಿಸ್ಥಿತಿ ಹಿಂದೆಂದೂ ಉದ್ಭವಿಸಿರಲಿಲ್ಲ. ಈ ಪರಿಸ್ಥಿತಿಯ ಬಗ್ಗೆ ನಮ್ಮ ರಾಜಕಾರಣಿಗಳಿಗಾಗಲೀ, ಅಧಿಕಾರಿ ವರ್ಗದವರಿಗಾಗಲೀ ಅಥವಾ ವಿದ್ಯಾವಂತರಿಗಾಗಲೀ ಕಿಂಚಿತ್ತೂ ಕಳವಳವಿದ್ದಂತೆ ತೋರುವುದಿಲ್ಲ.

ಸರ್ವವ್ಯಾಪಿಯಾಗಿರುವ ಭ್ರಷ್ಟಾಚಾರವು ರಾಷ್ಟ್ರದ ಅಂತರಿಕ ಸತ್ವವನ್ನು ಹಿಂಡಿ ಹೀರುತ್ತಾ ಇದೆ. ಭ್ರಷ್ಟಾಚಾರ ಕೇವಲ ನೈತಿಕ ಸಮಸ್ಯೆ ಮಾತ್ರವಲ್ಲ. ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಯೂ ಹೌದು. ಜನ ನಾಯಕರೆನಿಸಿಕೊಂಡವರೂ, ಅಧಿಕಾರಿ ವರ್ಗದವರೂ ಅಪ್ರಾಮಾಣಿಕರಾಗಿ ಭ್ರಷ್ಟಾಚಾರದ ಹೊನಲಿನಲ್ಲಿ ಈಜಾಡುತ್ತಿದ್ದಾರೆ. ಭ್ರಷ್ಟಾಚಾರ, ಕಪ್ಪುಹಣದ ಸ್ಫೋಟ, ಪ್ರತಿವರ್ಷ ಹೆಚ್ಚಾಗುತ್ತಿರುವ ಅಪ್ರತ್ಯಕ್ಷ ತೆರಿಗೆಯ ಭಾರ. ಗಗನಕ್ಕೇರುತ್ತಿರುವ ಬೆಲೆಗಳು ಇವುಗಳ ದೆಶೆಯಿಂದ ಪ್ರಾಮಾಣಿಕರಾದವರು ಪ್ರಾಮಾಣಿಕ ರೀತಿಯಲ್ಲಿ ಸಂಪಾದನೆ ಮಾಡಿ ಪ್ರಾಮಾಣಿಕರಾಗಿ ಬಾಳುವುದು ದುಸ್ತರವಾಗಿದೆ. ಯೋಜನಾ ಆಯೋಗವೂ, ಕೇಂದ್ರ ಮತ್ತು ರಾಜ್ಯ ಸರಕಾರಗಳೂ ವಿವಿಧ ರೀತಿಯ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿವೆ. ಎಲ್ಲಾ ಯೋಜನೆಗಳಿಗಿಂತ ಮುಖ್ಯವಾಗಿ, ಮೇಲಿಂದ ಕೆಳಗಿನವರೆಗೆ ಪಾಚಿಯಂತೆ ಪಸರಿಸಿರುವ ಭ್ರಷ್ಟಾಚಾರವನ್ನು ನಿರ್ಮೂಲ ಮಾಡುವ ಯೋಜನೆಯೊಂದನ್ನು ಕಾರ್ಯಗತಗೊಳಿಸಿದರೆ ಅದಕ್ಕಿಂತ ಶ್ರೇಷ್ಠ ಯೋಜನೆ ಬೇರಾವುದೂ ಇಲ್ಲ. ಮೇಲ್ಗಡೆ ಅಧಿಕಾರ ಸ್ಥಾನದಲ್ಲಿರುವ ರಾಜಾಕಾರಣಿಗಳೂ, ಉನ್ನತ ಮಟ್ಟದ ಅಧಿಕಾರಿಗಳೂ ಮೊದಲು ತಮ್ಮನ್ನು ತಾವು ಸುಧಾರಿಸಿಕೊಳ್ಳಲು ಪ್ರಯತ್ನಪಟ್ಟರೆ ದೇಶದ ಹಲವು ಸಮಸ್ಯೆಗಳು ತನ್ನಷ್ಟಕ್ಕೆ ತಾನೇ ಬಗೆಹರಿಯುತ್ತವೆ. ದೇಶ ಇಂದು ಎದುರಿಸುತ್ತಿರುವ ಹಲವು ಬೃಹತ್ ಸಮಸ್ಯೆಗಳಿಗೆ ಮಿತಿಮೀರಿದ ಅಧಿಕಾರದಾಹದ ಭ್ರಷ್ಟ ರಾಜಕಾರಣಿಗಳೂ ಮತ್ತು ಐಶ್ವರ್ಯದಾಹದ ಭ್ರಷ್ಟ ಅಧಿಕಾರಿಗಳೇ ಕಾರಣ. ಈ ದೇಶದಲ್ಲಿಂದು ರಾಷ್ಟ್ರಮಟ್ಟದ ನಾಯಕರೆನಿಸಿಕೊಂಡವರ ಪೈಕಿ ನೈತಿಕ ಅಧಿಕಾರದಿಂದ ಜನಾಭಿಪ್ರಾಯವನ್ನು ರೂಪಿಸುವ ಶಕ್ತಿಯಿರುವ ಏಕೈಕ ನಾಯಕನೂ ಇಲ್ಲದಿರುವುದು ದುರ್ದೈವದ ಸಂಗತಿ. ನೈತಿಕ ಅಧಃ ಪತನವೇ ಇಂದಿನ ದುರ್ಗತಿಗೆ ಮುಖ್ಯ ಕಾರಣ.

## ಲಾಭದಾಯಕ ಉದ್ಯಮ

ಇಂದು ರಾಜಕಾರಣ, ಬಹುಮಂದಿ ರಾಜಕಾರಣಿಗಳಿಗೆ ಸುಖಜೀವನ ನಡೆಸಲು ಮತ್ತು ಅಕ್ರಮ ಸಂಪಾದನೆ ಮಾಡಲು ಒಂದು ಲಾಭದಾಯಕ ಉದ್ಯಮವಾಗಿ ಪರಿಣಮಿಸಿದೆ. ಎಲ್ಲಾ ರಾಜಕೀಯ ಪಕ್ಷಗಳ ರಾಜಕೀಯ ಶೈಲಿಯೂ ಒಂದೇ ರೀತಿ. ಎಲ್ಲಾ ರಾಜಕೀಯ ಪಕ್ಷಗಲೂ ಲೆಕ್ಕಕ್ಕೆ ಸಿಕ್ಕದ ಕಪ್ಪು ಹಣದಿಂದಲೇ ತಮ್ಮ ರಾಜಕೀಯ ಚಟುವಟಿಕೆಗಳನ್ನೂ ಮತ್ತು ಚುನಾವಣೆಗಳನ್ನೂ ನಡೆಸುತ್ತಿವೆ. ಕಳೆದ ನವೆಂಬರ್ ತಿಂಗಳಲ್ಲಿ ನಡೆದಿದ್ದ ಚುನಾವಣೆಗಳಲ್ಲಿ ಒಂದು ಕಡೆ ರಕ್ತದ ಕೋಡಿ ಹರಿದರೆ, ಇನ್ನೊಂದು ಕಡೆ ಹಣ-ಹೆಂಡಗಳ ಹೊಳೆಯೇ ಹರಿಯಿತು. ಕೆಲವು ರಾಜ್ಯಗಳಲ್ಲಿ ವಿಧಾನ ಸಭೆಗಳಿಗೆ ಸ್ಪರ್ಧಿಸಿದ್ದ ಅಭ್ಯರ್ಥಿಗಳು ಆಳುವ ಪಕ್ಷ ಪ್ರತಿಪಕ್ಷಗಳೆಂಬ ಭೇದವಿಲ್ಲದೆ ಇಪ್ಪತ್ತೈದು ಲಕ್ಷ ರೂಪಾಯಿಗಳಿಂದ ಒಂದು ಕೋಟಿ ರೂಪಾಯಿಗಳವರೆಗೆ ಖರ್ಚುಮಾಡಿದ್ದಾರೆಂದೂ ಮತ್ತು ಲೋಕಸಭೆಗೆ ಸ್ಪರ್ಧಿಸಿದ್ದ ಅಭ್ಯರ್ಥಿಗಳು ಕೆಲವರು ಒಂದು ಕೋಟಿ ರೂಪಾಯಿಗಳಿಂದ ಎರಡು ಕೋಟಿ ರೂಪಾಯಿಗಳವರೆಗೂ ಖರ್ಚು ಮಾಡಿದ್ದಾರೆಂದು ವದಂತಿ. ಕರ್ನಾಟಕದಲ್ಲೇ ವಿಧಾನ ಸಭೆಗೆ ಸ್ಪರ್ಧಿಸಿದ್ದ ಹಲವು ಜನತಾದಳದ ಅಭ್ಯರ್ಥಿಗಳೂ, ಕೆಲವು ಕಾಂಗ್ರೆ ಅಭ್ಯರ್ಥಿಗಳೂ ಈ ಪಟ್ಟಿಯಲ್ಲಿದ್ದಾರೆ.

ಈ ರೀತಿ ಅಪಾರವಾಗಿ ಖರ್ಚು ಮಾಡುವ ಹಣ ಎಲ್ಲಿಂದ ಹೇಗೆ ಬಂತೆಂಬುದು ನಿಗೂಢ. ನಾನು ಕೇಳಿರುವ ಸುದ್ದಿಗಳೆಲ್ಲವೂ ನಿಜವಾಗಿದ್ದಲ್ಲಿ. ಈ ದೇಶದಲ್ಲಿ ಪ್ರಜಾಪ್ರಭುತ್ವ ನಾಶವಾಗಿ ಅದಕ್ಕೆ ಬದಲು ಭ್ರಷ್ಟ ರಾಜಕಾರಣಿಗಳ, ಲಂಚಕೋರ ಅಧಿಕಾರಿಗಳ ಮತ್ತು ಕಳ್ಳ ಹಣದ ಕುಬೇರರ ಪ್ರಭುತ್ವ ಅಸ್ತಿತ್ವಕ್ಕೆ ಬಂದಿರುವಂತೆ ತೋರುತ್ತದೆ. ಅಪ್ಪಟ ಲಂಚಕೋರರೆಂದು ಜನಜನಿತವಾಗಿರುವ ಕೆಲವರು ರಾಜಕಾರಣಿಗಳು ತಮ್ಮ ಆತ್ಮಸಾಕ್ಷಿಯನ್ನು ಕೊಂದು ಅಪ್ಪಟ ಸತ್ಯಸಂಧರಂತೆ ವರ್ತಿಸುತ್ತಿದ್ದಾರೆ.

ಈ ದೇಶದಲ್ಲಿ ಪ್ರಜಾಪ್ರಭುತ್ವ ಜಾರಿಗೆ ಬಂದು ನಲವತ್ತೆರಡು ವರ್ಷಗಳು ಸಂದು ಹೋಗಿದ್ದರೂ ಕೂಡ ನಮ್ಮ ದೇಶದ ಬಹುಮಂದಿ ಜನರಿಗೆ ಪ್ರಜಾಪ್ರಭುತ್ವದ ಮೂಲ ಸಿದ್ಧಾಂತವೇ ಗೊತ್ತಿಲ್ಲ. ನಮ್ಮ ಜನರಲ್ಲಿ ಸ್ವತಂತ್ರ ರಾಷ್ಟ್ರದ ಪ್ರಜೆಗಳಿರಬೇಕಾದ ಗುಣಗಳೂ ಬೆಳೆದಂತೆ ಕಾಣುತ್ತಿಲ್ಲ. ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ಹೆಸರಿನಲ್ಲಿ ವಿವಿಧ ವರ್ಗಗಳ ಜನರು ತಮ್ಮ ಹಿತ ಸಾಧನೆಗಾಗಿ ಸದಾ ಮುಷ್ಕರ, ಚಳವಳಿಗಳಲ್ಲಿ ನಿರತರಾಗಿ ಗುಲ್ಲೆಬ್ಬಿಸುತ್ತಿದ್ದಾರೆ. ಇಲ್ಲದವರ ಗೋಳಾಟಕ್ಕಿಂತ ಇದ್ದವರ ಅರ್ಭಟವೇ ಹೆಚ್ಚಾಗಿದೆ. ಸ್ವಾತಂತ್ರ್ಯ ಲಭಿಸಿದ ಮೇಲೆ ಕೆಲವು ಕ್ಷೇತ್ರಗಳಲ್ಲಿ ಆರ್ಥಿಕ ಪ್ರಗತಿ ಜರಗಿದೆ.

ಆ ಪ್ರಗತಿಯ ಪ್ರತಿಫಲದಲ್ಲಿ ಸಿಂಹಪಾಲು ಭ್ರಷ್ಟ ರಾಜಕಾರಣಿಗಳಿಗೆ, ಲಂಚಕೋರ ಅಧಿಕಾರಿಗಳಿಗೆ, ಕಳ್ಳಸಾಗಾಣಿಕೆ ಮತ್ತು ಕಳ್ಳ ವ್ಯಾಪಾರಗಳಲ್ಲಿ ನಿರತರಾಗಿರುವ ಜನರಿಗೆ ಲಭಿಸುತ್ತಿದೆ. ಈ ದೇಶದ ಶೇಕಡಾ ಎಪ್ಪತ್ತೈದರಷ್ಟು ಜನರಿಗೆ ದುರಾಡಳಿತ, ಭ್ರಷ್ಟಾಚಾರ, ದಿನದಿನವೂ ಹೆಚ್ಚುತ್ತಿರುವ ಪ್ರತ್ಯಕ್ಷ ತೆರಿಗೆಯ ಭಾರ, ಕೈಗೆಟುಕದ ಬೆಲೆಗಳು, ಇವುಗಳನ್ನು ಸಹಿಸಿಕೊಂಡು ಬದುಕಿರುವುದೇ ಕಷ್ಟವಾಗಿದೆ. ಸರಕಾರದ ವಿವಿಧ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ಸರಕಾರಿ ಅಧಿಕಾರಿಗಳೂ, ಸರಕಾರದ ಸ್ವಾಮ್ಯಕ್ಕೊಳಪಟ್ಟ ಉದ್ಯಮಗಳಲ್ಲಿ ಮತ್ತು ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿ ವರ್ಗದವರೂ ಜನ ಸಾಮಾನ್ಯರ ಕಷ್ಟ ಕಾರ್ಪಣ್ಯಗಳೇನೆಂಬುದನ್ನು ಯೋಚಿಸದೆ ಪದೇ ಪದೇ ಸಂಬಳ ಸಾರಿಗೆಗಳ ಹೆಚ್ಚಳದ ನೆಪದಲ್ಲಿ ಮುಷ್ಕರ ಹೂಡಿ, ಬಲಹೀನ ಸರಕಾರಗಳನ್ನು ಹೆದರಿಸಿ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದಾರೆ. ಸಂಬಳ ಸಾರಿಗೆಗಳೂ, ವೇತನ ಶ್ರೇಣಿಗಳೂ ಹೆಚ್ಚಾದರೂ ಕೂಡ ಅವರ ಕೆಲಸ ಕಾರ್ಯಗಳ ದಕ್ಷತೆ ಏನೂ ಹೆಚ್ಚಾಗುವುದಿಲ್ಲ. ಅಂತೆಯೇ ಅವರ ಪ್ರಾಮಾಣಿಕತೆಯೇನೂ ಬೆಳೆಯುವುದಿಲ್ಲ. ಲಂಚಕೋರ ಅಧಿಕಾರಿಗಳು ಮಾಮೂಲಿಯಾಗಿ ತಮ್ಮ ಲಂಚದ ಕಾರುಬಾರುಗಳನ್ನು ಮುಂದುವರಿಸುತ್ತಲೇ ಇರುತ್ತಾರೆ. ಈ ಭ್ರಷ್ಟಾಚಾರದ ಯುಗದಲ್ಲಿಯೂ ಕೂಡ ಸರಕಾರದ ಎಲ್ಲಾ ಇಲಾಖೆಗಳಲ್ಲಿಯೂ ಅಲ್ಲಲ್ಲಿ ಕೆಲವರು ದೊಡ್ಡ ಅಧಿಕಾರಿಗಳೂ, ಸಣ್ಣ ದರ್ಜೆಯ ನೌಕರರೂ ಅತ್ಯಂತ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಅಂತಹವರನ್ನು ಗೌರವಿಸಬೇಕು.

## ನಿಷ್ಪ್ರಯೋಜಕ ಯೋಜನೆಗಳು

ಇಂದು ಭಾರತ ಹಲವು ಬೃಹತ್ ಸಮಸ್ಯೆಗಳನ್ನು ಎದುರಿಸುತ್ತಿದೆ. ಅವುಗಳ ಪೈಕಿ ಜನಸಂಖ್ಯಾ ಸ್ಫೋಟ. ಕಪ್ಪು ಹಣದ ಸ್ಫೋಟ, ಅನಕ್ಷರತೆ, ನಿರುದ್ಯೋಗ ಮುಂತಾದ ಗಂಭೀರ ಸಮಸ್ಯೆಗಳೂ ಸೇರಿವೆ. ಸುಮಾರು ಶೇಕಡಾ ಐವತ್ತೈದರಷ್ಟು ಮಂದಿ ಭಾರತೀಯರು ಇನ್ನೂ ಬಡತನ ರೇಖೆಯ ಕೆಳಗಿದ್ದು, ಕಡುಬಡವರಾಗಿ ಅರೆಹೊಟ್ಟೆ ಅರೆಬಟ್ಟೆಯ ಜೀವನ ಸಾಗಿಸುತ್ತಿದ್ದಾರೆ. ಶೇಕಡಾ ಎಪ್ಪತ್ತೈದರಷ್ಟು ಮಂದಿ ನಿರಕ್ಷರಕುಕ್ಷಿಗಳಾಗಿರುತ್ತಾರೆ. ಭಾರತ ಸಂವಿಧಾನದ ೪೫ನೆಯ ವಿಧಿಯ ಪ್ರಕಾರ ಮಕ್ಕಳಿಗೆ ಹದಿನಾಲ್ಕು ವರ್ಷಗಳವರೆಗೆ ಉಚಿತ ಹಾಗೂ ಕಡ್ಡಾಯ ಶಿಕ್ಷಣ ನೀಡಬೇಕು. ಆದರೆ ಮಕ್ಕಳು ಅನಕ್ಷರಸ್ಥರಾಗಿ ಬೆಳೆದ ನಂತರ ಅವರನ್ನು ಅಕ್ಷರಸ್ಥರನ್ನಾಗಿ ಮಾಡುವ ನಿಷ್ಪ್ರಯೋಜಕ ಯೋಜನೆಯನ್ನು ರೂಪಿಸಿ ಸಾರ್ವಜನಿಕ ಹಣವನ್ನು ಪೋಲು ಮಾಡಲಾಗುತ್ತಿದೆ. ಜನಸಂಖ್ಯಾ ಸ್ಫೋಟದ ಸಮಸ್ಯೆಯೂ ಕೂಡ ಭಾರತದ ಎದುರಿಗಿರುವ

ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಈಗಿರುವ ಗತಿಯಲ್ಲೇ ಜನಸಂಖ್ಯೆ ಬೆಳೆಯುತ್ತಾ ಹೋದರೆ ಇನ್ನು ಕೆಲವೇ ದಶಕಗಳಲ್ಲಿ ಭಾರತ ಜನಸಂಖ್ಯಾ ದೃಷ್ಟಿಯಿಂದ ಚೀನಾ ದೇಶವನ್ನು ಮೀರಿಸಿ ಜಗತ್ತಿನಲ್ಲೇ ಅತಿ ಹೆಚ್ಚು ಜನ ಬಾಹುಲ್ಯವುಳ್ಳ ರಾಷ್ಟ್ರವಾಗಬಹುದೆಂದು ಲಂಡನ್ ನಗರದಿಂದ ಪ್ರಕಟಗೊಳ್ಳುತ್ತಿರುವ 'ದಿ ಇಕನಾಮಿಸ್ಟ್' ೧೯೯೦ರ ಜನವರಿ ಸಂಚಿಕೆಯಲ್ಲಿ ತಿಳಿಸಿದೆ. ಆದರೆ ನಮ್ಮ ದೇಶದ ಅಧಿಕಾರ ಸೂತ್ರ ಹಿಡಿದಿರುವವರಿಗೆ ಇಂತಹ ಗಂಭೀರ ಸಮಸ್ಯೆಗಳ ವಿಚಾರದಲ್ಲಿ ಚಿಂತೆಯಿದ್ದಂತೆ ತೋರುವುದಿಲ್ಲ.

ಕಳೆದ ಒಂದು ದಶಕದಿಂದೀಚೆಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಒಂದು ಕಡೆ ನಿಷ್ಪ್ರಯೋಜನ ದುಂದುವೆಚ್ಚಕ್ಕಾಗಿ ಹಣವನ್ನು ಖರ್ಚು ಮಾಡಿದರೆ. ಇನ್ನೊಂದು ಕಡೆ ಮಿತಿ ಮೀರಿ ಸಾಲ ಮಾಡುತ್ತಲಿವೆ. ಇತ್ತೀಚಿನ ವರದಿಗಳ ಪ್ರಕಾರ ಭಾರತದ ವಿದೇಶೀ ಸಾಲ ಒಂದು ಲಕ್ಷದ ಇಪ್ಪತ್ತು ಸಾವಿರ ಕೋಟಿ ರೂಪಾಯಿಗಳೆಂದೂ, ಪ್ರತಿ ವರ್ಷ ಹದಿನೇಳು ಸಾವಿರ ಕೋಟಿ ರೂಪಾಯಿಗಳನ್ನು ಬಡ್ಡಿಯ ರೂಪದಲ್ಲಿ ತೆರಲಾಗುತ್ತಿದೆಯೆಂದೂ ತಿಳಿದು ಬರುತ್ತದೆ. ಈ ಬೃಹತ್ ಅಂಕಿ ಅಂಶಗಳನ್ನು ಗಮನಿಸಿದರೆ ಬಹುಶಃ ಶತಮಾನಗಳ ಕಾಲ ಭಾರತೀಯರು ವಿದೇಶಿ ಸಾಲದ ಋಣದಲ್ಲಿ ಬಾಳ ಬೇಕಾಗಬಹುದೆಂದು ನನಗನ್ನಿಸುತ್ತದೆ. ಕೊನೆಯದಾಗಿ ದೇಶದ 'ಬೆನ್ನೆಲುಬು' ಎಂದು ಕರೆಯಲಾಗುತ್ತಿದ್ದ ರೈತಾಪಿ ಜನರ ಕಷ್ಟ ಕಾರ್ಪಣ್ಯಗಳೇನೆಂಬುದನ್ನು ವಿವರಿಸುವ ಸಲುವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ನಾನೊಬ್ಬ ಭೂಹೀನ ಗೇಣಿದಾರನ ಮಗನಾಗಿ ಹುಟ್ಟಿ ರೈತರ ಸಮಸ್ಯೆಗಳೇನೆಂಬುದನ್ನು ಪ್ರತ್ಯಕ್ಷದರ್ಶಿಯಾಗಿ ಅರಿತವನು. ದೇಶದ ಒಟ್ಟು ೮೮೦ ಮಿಲಿಯನ್ ಜನಸಂಖ್ಯೆಯಲ್ಲಿ ಸುಮಾರು ೫೮೦ ಮಿಲಿಯನ್ ಜನರು ರೈತಾಪಿ ವರ್ಗದವರಾಗಿರುತ್ತಾರೆ. ಅವರ ವಾಸ್ತವಿಕ ಸ್ಥಿತಿಗತಿಗಳೇನೆಂಬುದನ್ನು ತಿಳಿಯದ ಕೆಲವು ಲೇಖಕರು ದೊಡ್ಡ ದೊಡ್ಡ ನಗರಗಳ ದಂತಗೋಪುರಗಳಲ್ಲಿ ಕುಳಿತು ರೈತರೆಲ್ಲರೂ ಶ್ರೀಮಂತರೆಂಬ ಭಾವನೆ ಬರುವಂತೆ ಬರೆಯುತ್ತಿದ್ದಾರೆ. ರೈತರ ಸಮಸ್ಯೆಗಳ ಗಂಧವನ್ನೇ ಅರಿಯದಿದ್ದವರು ರೈತರ ಉದ್ಧಾರಕ್ಕಾಗಿ ಯೋಜನೆಗಳನ್ನು ರೂಪಿಸುತ್ತಿದ್ದಾರೆ. ಶೇಕಡಾ ೮೫ ರಷ್ಟು ರೈತರಿಗೆ ಸರಕಾರಿ ಇಲಾಖೆಗಳಲ್ಲಿ ಕೆಲಸ ಮಾಡತಕ್ಕ ಜವಾನನಿಗೆ ದೊರೆಯತಕ್ಕ ವರಮಾನವೂ ಲಭ್ಯವಾಗುವುದಿಲ್ಲ.

ಈ ದೇಶವನ್ನು ಕಾಡುತ್ತಿರುವ ಹಲವು ಸಮಸ್ಯೆಗಳಿಗೆ ಭಾರತೀಯರಲ್ಲಿರುವ ವಿಕೃತ ಗುಣಗಳೇ ಮೂಲ ಕಾರಣ. ನಮ್ಮಲ್ಲಿ ರಾಷ್ಟ್ರ ಭಕ್ತಿ ಕಡಿಮೆ; ಸ್ವಾರ್ಥಸಾಧಕ ಪ್ರವೃತ್ತಿ ಹೆಚ್ಚು. ನಮಗೆ ಕ್ಷಾತ್ರ ಗುಣವೂ ಇಲ್ಲ. ಸಾತ್ವಿಕ ಕ್ರೋಧವೂ ಇಲ್ಲ.

ಸಮಯಕ್ಕನುಗುಣವಾಗಿ ನುಸುಳಿಕೊಂಡು. ಎಲ್ಲಾ ಸನ್ನಿವೇಶಗಳಿಗೂ ಹೊಂದಿಕೊಂಡು ಹೋಗುವ ಪ್ರವೃತ್ತಿ ನಮ್ಮಲ್ಲಿ ಯಥೇಚ್ಚವಾಗಿವೆ. ರಾಷ್ಟ್ರದ ಭವಿಷ್ಯವನ್ನು ರೂಪಿಸುವ ಹೊಣೆಯನ್ನು ಹೊರಬೇಕಾಗಿದ್ದ ಯುವ ಜನಾಂಗದವರು ಮೋಜಿನ ಜೀವನದ ಹಾದಿಯನ್ನು ಹಿಡಿದಿರುವುದು ಈ ದೇಶದ ದೌರ್ಭಾಗ್ಯ. ಈ ದೇಶದಲ್ಲಿ ದ್ವೇಷ ಧರ್ಮದ ಪೋಷಾಕನ್ನು ಧರಿಸಿ ಸಮಗ್ರ ಭಾರತದ ಏಕತೆಗೆ ಮಾರಕವಾಗಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದ ನಾನು ಭಾವೀ ಸ್ವತಂತ್ರ ಭಾರತವು ಈಗಿರುವ ರೂಪವನ್ನು ತಾಳುತ್ತದೆ ಎಂಬುದನ್ನು ಅಂದು ಕನಸಿನಲ್ಲಿಯೂ ಕಂಡಿರಲಿಲ್ಲ. ಇಂದಿರುವ ಈ ದೇಶದ ದೃಶ್ಯವನ್ನು ನೋಡುತ್ತಾ ಇನ್ನೂ ಬದುಕಿರುವುದು ನನ್ನ ದೌರ್ಭಾಗ್ಯ.

ತಾ: ೧೧.೧೧.೧೯೯೦

## SPEECH DELIVERED ON THE OCCASION OF THE INAUGURATION OF SOCIALIST FORUM

I am not fully qualified to speak on the theoretical aspects of Socialism. My interest in Socialism is not the result of a deep study of socialist theory. It is born out of my sympathy for the poor and the down-trodden, among whom I was born and brought up. Human society is governed by the natural laws of evolution and development. It is not possible to evolve a theory which can hold good for all time to come. Either in science or in political economy the latest theory is not the last word on the subject. Even Karl Marx had acknowledged that his theory was not a complete and finished theory but that it required to be constantly developed to suit the changing situations. His dream of a communist society, Where in the State withers away and where people live in perfect equality and harmony, each contributing according to his ability and each getting according to his need has still remained a distant dream.

To the majority of the power-seeking politicians is this country the socialist Jargon has been a convenient weapon to win elections to gain power and to amass wealth, because they know that the poor people think that their future lies in socialism. It is amusing to see corrupt political adventurers who live like multimillionaires masquerading as radical socialists. It is a pity that it has been possible for them to fool the people even to this day. Since the Avadi Session of the Congress, the Congress leaders had been proclaiming that democratic socialism was the

goal of the Congress. It is appropriate on this occasion to assess the achievements of the country in this direction.

It is true that there has been some economic progress in the country, after it became independent. It is also true some measures have been adopted to improve the conditions of the masses. But to what extent the masses are benefitted by these measures is a relevent question. Even afters 30 years of independence, 75% of the people contiue to be illterate and poverty-stricken. Nearly 65% of the people live below the poverty line. Population explosion, inflation, scarcity of essential commodities and unemployment have worsoned the situation, in recent years. After independence we have abandoned our traditional simplicity of life. People in the upper strata of the society are living with each other in amassing wealth and in adopting extravagant styles of living. Some among the rich are ravenously greedy. Their greed seems to know no bounds. These and other factors have contributed to the widening of the gulf between the urbon rich and the rural poor

The plight of the rural poor is pitiable. It is well known that nearly 75% of the people live in the rural areas of them nearly one-third are landless labourers. Among the land owners, more than 60% of the holders are owning lands from half an acre to five acres. If the rain God favours, they will be able to make a hand -to-mouth living. If the rains fail they have to migrate in search of work or depend upon scarcity relief. It is not an exaggeration to say that 75% of the cultivators will be too glad to migrate to the towns or cities, If they could secure jobs to work as IV Class servants in Government Offices, banks, or other insitutions.

The spectacle of millions of people living in ramshackle houses or sheds, hordes of people living on pavements or in the slums in big cities, starving people searching for food in garbage, swarming crowds of beggars, nacked children, unemployed people frantically searching for jobs is really heart-rending for people who have a heart to feel for their fellow-beings. Some countries which were as backward as we were 30 years ago, are now more advanced than us. When we think of this a feeling of despondency overtakes us and we are naturally inclined to conclude that the policies, programmes and methods which we have bean adopting hither to cannot be of much help to solve our problems.

What is the cause for this misery and backwardness? We must analyse the causes and find a solution. In my opinion, lack of idealism in politics, rampant corruption in the administration, callousness on the part of the political leaders and Government servants are the root causes. Of course ignorance and lethargy, on the part of the people are also contributory causes. Since the last 15 years it has been a steep deterioration of standards in public life. On account of unhealthy competition for power, self seekers has began to dominate the political field. The moral and spiritual values for which our country was held in high esteem by foreigners were shattered. Gradually, the entire body- politic became saturated with corruption. Today, corruption is no longer a moral problem. It has became a serious ecomomic problem. Nearly 45% of the amount spent by the Central and State Governments is being pocketted by the corrupt officials and unscrupulous business men. In some places the politcians also have a large share in this booty. Till now no serious attempt has

been made to plug this leakage, instead, fresh taxes are levied year by year. When fresh taxes are imposed the prices go up and this adds to the misery of the common men.

The situation calls for a radical change in our outlook and approach. We have to change our policies and programmes. We must discard our power-oriented politics. and adopt a new style of service oriented clean polities. The inefficient and corrupt administrative machinery has to be thoroughly overhauled. The official class must be made to understand that they are the servants of the people and not their masters. Thanks to providence and to the people of the North, the dictatorial regime of Smt. Indira Gandhi has come to an end and our civil liberties are restored.

But, freedom and liberty have no meaning to the poor people. unless their essential needs of food, clothing and shelter are satisfied. This is a stupendous task which needs dedicated and dynamic leadership. No doubt, some of the top leaders of the Janatha Party are men known for their integrity and sincerety. But at the lower rungs the leaders and the rank and file are clinging to the Congress style of politics. Whether the Janatha learders will be able to give a new direction to the politics and the administration of this country is a big question. If some Congress leaders use the socialist slogan for catching votes and acquiring power some Janatha leaders are allergic to the very mention of the word 'Socialism'. The vast majorty of the people in this country think that their solvation lies in democratic socialism. Therefore, there is no question of going back and adopting a new system.

We have discussed and debated for 30 long years, with regard to the political and economic set-up. We are not prepared to adopt that totalitarian methods, to solve our problem. Nor are we prepared to accept the capitalist system in toto. We have to evolve our own system, by democratic and peaceful means, consistant with our traditions, culture and needs, without blindly following any other country. Some people in this country think that we need a bloody revolution to improve the conditions of the people, Our experience for the last 30 years has shown that our people are against blood-shed. We are wedded to the philosophy of non-violence. This apart, the merciless large scale massacre of millions of human beings during the regime of Stalin in soviet Russia, in the name of Communism, must serve as a constant reminder of the horrors of blody revolutions. Socialism involves hard work, discipline and above all integrity. Corrupt people can never usher in a new era. Therefore, people should be wary of corrupt people who talk much about socialism.

Socialist Forum will not function as a political party but it will not keep away from politics. Though it is not interested in power politics it will take active interest in political affairs. It shall be the primary task of the Forum to educate the masses, with a view to bring about political awareness among them. It shall also be the task of the Forum to create necessary public opinion against the all-parvading corruption. It will also try to eradicate certain social evils. If people who are not contaminated with the canker of corrupt practices in politics join the Forum in large numbers, the Forum will become a powerful corrective force. I appeal to all people who have faith in socialism and in clean politics to join the Forum.

## WHAT LIFE HAS TAUGHT ME

I have been asked to give an account of what life has taught me. I have gone through many vicissitudes and encountered many hurdles in life. Life was never a bed of roses for me. I have learnt many lessons from life; some of them are very bitter. While recounting these lessons, I have to necessarily refer to some important events in my life which have a bearing on them, although I dislike the idea of making this article a mini autobiography. I was born and brought up in a poor peasant family. My father was a tenant, cultivating a few acres of land, on crop-sharing basis. I was one among the 13 children of my parents. In those days, the plight of the tenants was not much better than that of the bonded labourers. It was extremely difficult for my father to maintain a large family, with his meagre income. I can never forget the days when I had only a loin cloth and a shirt to wear. The memories of tending cattle, gathering firewood, ploughing the land, and assisting my mother, in her house-hold chores still linger in my mind.

My scholastic career was also beset with unforgettable hardships. While I was studying in High School and college, I was entirely dependent on the backward class scholarship and the small sums of money which I was receiving from my uncle. For many years, I had tobe content with only two meals a day. If I felt hungry in between, I drank water to satisfy my hunger. Due to malnutrition and malaria, I was often falling ill. I had to discontinue my studies for one year, due to ill-health and it was

with great difficulty that I completed my college education. Thereafter, with the generous help of my uncle and brother-in-law, I went to pune to study law. The harsh life I led during the early years of my life gave me strength and courage to face the future challenges of life.

Mahatma Gandhi visited my High School at Shimoga, in the year 1927. The speech delivered by him on that occasion had a tremendous effect on me. perhaps, that was a turning point to my life. In the midst of my studies and struggle for existence, I was closely following the course of national events. The seeds of nationalism were already sown in me. I was an ardent reader of the speeches and writings of Mahatma Gandhi and other national leaders. After securing a degree in law, I settled at Shimoga and commenced my career as a lawyer and as a political worker. I opened my law office in the year 1937 and in the same year I became the secretary of the Shimoga District congress committee. For more than a decade I was only a part-time lawyer and a full- time political worker.

Life of congressmen in those days was not easy. Though my sacrifice during the Freedom struggle was negligible, when compared to those made by great patriots, I had faced several difficulties. I was imprisoned twice for short terms. Despite the hardships. My work during the freedom struggle was exciting. I am inclined to think that the decade preceding the Independence was the best period of my life. Service in the cause of the country or humanity gives greater satisfaction than work for self-advancement, or material gain. I was elected to the Representative Assembly of the erst-while state of Mysore in

1941 and to the Legislative council in 1945. As a young legislator, I often criticised the Maharaja's Government for the lapses in administration. In retrospect, I must admit that though the rule of the Maharaja was authoritarian, his administration was far more impartial, honest and efficient than the present day public administration in this country. After Independence, I served as a Member of the Legislative Assembly of this State for 20 years and as a minister for a little more than 9 years.

Within a decade after Independence we could observe signs of decline in the standards of public life. After the states Reorganisation in 1956, there was gradual erosion of values in public life. The Neo Congressmen, who captured positions of vantage in the Congress party, introduced new stratagies in politics. Disgusted with the growing unhealthy bid for power, I retired from active politics, in 1967, after writing a lengthy letter to the then Congress President late Shri K.Kamaraj Nadar. My friends found fault with me for my decision, but I have never regretted that decision. It is my firm conviction that people who sacrifice ideals for the sake of power of money, can never serve the interests of the nation. Yet, the condition of politics which I found disgusting in 1967 was far more decent and idealistic than the present state of Indian politics.

In the course of my long career as a political agitator, a Legislator, Minister and as a Lawyer, I have come into contact with a large number of people. I had close associations with some of the great men of the Gandhian Era. These associations had enriched my knowledge. I learnt certain lessons from my father and some from my own experience in life. My father, though

poor and semi-literate, was honest and uprigth. He inculcated in me the sense of dignity of labour. He often told me that if a person is truthful and industrious, God is bound to help him. I believe in his dictum. An important lesson I have learnt from life is that honesty, sincerety and hard work are very essential for any person to achieve success, in any field. There is no short-cut to success, unless one chooses to be a swindler or a scoundrel or a thief. Discipline, sense of duty, integrity, hard work and patriotism are essential for any nation to achieve prosperity. The paucity of these essential virtues is the main cause for the Indian poverty. Today some of my countrymen are trying to make India prosperous through perpetual agitations, like strikes, Harathals, road roko, Rail roko, kam roko etc., some appears to believe in the motto- "work less and earn more".

Poverty coupled with a series of deaths in the family had impelled me to ponder over the baffling questions about the mysteries of life and death and about God and Religion. I have read a lot of religious literature, including the holy books of different religious. I don't believe in any organised religion. More people have been killed in this world in the name of religion than in ordinary wars. The religion of truth, love and compassion taught by the great prophets and saints is almost forgotten. Instead, in some countries including India, pseudo religious leaders who have forgotten God worship mammon and power. A faith devoid of truth, compassion and love is an empty tenet. A religion which preaches hatred and blood-shed is a savage dogma. It is foolish to think that there are different gods for people professing different faiths. If there were more gods than one,

there would have been chaos in the universe. I don't belive in idolatory and rituals but I am not an atheist. I belive in the existance of God, the Supreme Lord of the entire universe. I also belive that God answers the sincere prayers of the God-fearing truthful persons.

I have learnt from my public life that a political worker or a political leader, having no independent and honest means of livelihood and who is entirely dependent on politics for a living, invariably becomes a corrupt adventurer. At the completion of my second term as a minister, in 1962, my financial condition was very bad. I had no other source of income except the salary of Rs. 250/- which I was drawing as a legislator every month. I was not even owning a house. I had incured some debts. Added to these my health was not quite good. I was in a miserable plight. I was an influential legislator, though I had ceased to be a minister. Even at that time, there were vested interests who were ready to purchase influential politicians, on terms of quid-pro-quo. It was easy for me to be in the pay of those vested interests. But I detested the very idea. With great determination I resumed my legal practice, after an interval of a decade, and worked hard in the profession. By the grace of God, I was not only able to make an honest living, but also discharge my debts, after some years of struggle. The stinking corruption which is prevailing in India politics is mainly due to the fact that the majority of the politicians depend on politics for their livelihood. It is not a great thing to become a legislator or Minister. Some fools and crooks have also become Ministers and legislators in this country. Greatness lies in resisting the tempetation while holding the office. This needs moral strength and sacrifice.

I have learnt from my experience that faith in God, courage and tact are necessary while facing crisis and difficulties in life. If a person loses courage during such times he will be courting defeat or trouble. Some times one has take risks if it becomes inevitable. once, perhaps in the year 1959 or 1960, when I was a Minister, a group of gangsters who were living in the slum behind my house in Andree Road, perhaps instigated by political opponents, began to hurl big stones at my residence, at about 11.30 p.m. Except the panick-striken security guard there was no other help. I phoned to the police control room. As the police did not come in time and as the gangsters intensified their attack, I sneaked out of the house in pitch-dark with my Gun in hand, climbed the roof of the out-house and fired shots in the air to scare away the miscreants. The incident was of a serious nature, and quite interesting, but there is no space to narrate in detail. Once, during my tour in the old Mysore area I was halting in the Traveller's Bangalow in a town. There were communal clashes in that town between two groups. One group, suspecting that I had gone there to help the other group, marched towards the Traveller's Bangalow and surrounded it. Excepting a security guard and peon in the Bangalow there was no other person. After seeing the crowd I sent the peon to the police station which was nearly a mile away. I faced the menacing crowd, armed with a loaded revolver in my pocket and tactfully engage the crowd in a conversation until the police arrived and saved the situation. I have also learnt from life that truth ultimately triumphs and honesty has its own reward. But the reward cannot be judged in terms of wealth. Some people do not believe this because they expect the reward for honesty in terms of wealth.

Every nation has its own perversities. We Indians have also some perversities. Some of them are too pernicious to be ignored. We must have the moral courage to admit these perversities and make attempts to overcome them. Our vision is narrow. We are highly communal and opportunistic. We lack scientific and rational out look. Majority of us lack the ability to think objectively. Our thinking is vitiated by petty prejudices based on caste, religion and language. There is enormous stupidity. Stupidity breeds arrogance. Arrogance lulls the stupid to believe that they are wise. The stupid and the arrogant justify or defend even serious social and political evils by citing precendents or parallels. wise people benefit from the lessons they learn from life and from history. We have even forgotten the lessons of history and behave like irresponsible urchins in public life. We have to learn many things and unlearn many things, if we are to survive and prosper as a nation.

**Date: 30.08.1983**

# LAND REFORMS IN KARNATAKA
# (I) THE ORIGIN OF LEGISLATION

Even before the country achieved its independence from the British Rule, the Congress Party had committed itself to the programme of land reforms. After Independence, as a first step in the process, several States had enacted laws to abolish intermediary tenures like Zamindaries, jahagirs and inams.

Similarly, tenancy laws had been enacted to ensure fixity of tenure to the tenants and to regulate the fixation of fair rent. At the time, when the States' Recorganization took place in 1956, there were different agrarian laws in the different parts of the new State of Karnataka, then called Mysore State.

With a view to enacting a comprehensive Land Reforms Act, the new Government, headed by Mr. S. Nijalingappa, appointed a committee on 10-05-1957 under the chairmanship of Mr. B.D. Jatti, the former Vice President of India, to make suitable recommendations in that behalf.

The jatti Committee, after studying the different laws already in force in the different parts of the country and after eliciting public opinion, submitted its report to the State Government on 10-09-1957. The Government accepted the committee's recommendations and took a decision to introduce a Bill in the legislature, on the lines suggested by its report.

## Origin of Bill

Within a few months thereafter, there was a change of Government in the State and Mr. B.D. Jatti himself became the Chief Minister. I joined his Cabinet as the Revenue Minister. On the advice of the Congress High Command and on the recommendation of the planning commission, a Bill was prepared and was introduced by me in the Legislative Assembly on 29-11-1958.

The Mysore Land Reforms Bill, as it was then called, was referred to a Joint Select Committee of both the Houses of Legislature consisting of 46 persons, including veteran. Legislators like Messrs. Kengal Hanumanthayya, M.P. Patil, B.Huche Gowda, R.Nagangowd, T. Subramanya, H.K. Veeranna Gowda, H.M. Channabasappa, K. Puttaswamy, Kollur Mallappa, Veerendra Patil, Ramakrishna Hegde, B.Rachaiah and M.P.L. Sastry. I was the Chairman of the Joint Select Committee.

The committee met for 64 days, scrutinised the Bill clause by clause and submitted its report to the Assembly on 25-03-1961. The report was unanimous except for the minutes of dissent sent by five members, on some minor points. The Land Reforms Bill, as amended by the Joint Select Committee, was discused at great length in both the Houses. Ultimately, after adopting certain amendments, the legislature passed the Bill inNovember, 1961. The Bill as passed by the legislature, received the assent of the president on 05-03-1962. Two days earlier, I had ceased to be a Minister, after completing my second term. Therefore, I had no opportunity to implement the Land Reforms Act.

## Personal Cultivation

Under the original Land Reforms Act, as adopted in 1961, widows, small holders, minors, unamarried women, persons suffering from mental or physical disability and members of the armed forces were permitted to lease their lands to the tenants. The landlords, who had no other sources of income excepting the income from their lands, were permitted to resume a portion of the lands from their tenants for personal cultivation, subject to the condition, among others, that the tenants were left with at least a basic holding.

Provisions had been made in the Act for the fixation of ceiling on the holdings and for conferment of the occupancy rights on the tenants in respect of the non-resumable lands. The Act provided for the appointment of Munsiffs of the Judicial Department as tribunals for adjudicating disputes between the landlords and the tenants, Against the decisions of the tribunals, the aggrieved parties could go in appeal to the District Judge, whose decision was final. There was also a provision in the Act, for giving free legal aid to the poor tenants at the cost of the State.

I do not claim that the legislation which I had sponsored was perfect. I must admit that there were certain anomalies and complexities in the Act. The ceiling fixed was on the higher side. But, the Government could not avoid these defects, because we were bound by the opinion of the majority of the members both in the Joint Select Committee and in the legislature. On the whole, I am of the view that the original Act, which was passed in 1961 was an equitable legislation.

Though the Land Reforms Act received the assent of the President on 05-03-1962 it was not given effect to for nearly three and a half years for reasons best known to the then Government. Taking advantage of this interregnum, powerful landlords evicted their tenants, by force in some places. In some others landlord, in connivance with unscrupulous Village Accountants, got their names entered in the Revenue Records to create false evidence of their personal cultivation.

**Drastic Amendment**

After three and half years, the Act was brought into force with effect from 02-10-1965. Unfortunately, as the requisite number of tribunals had not been appointed and as the Government did not issue certain notifications which were essential for implementing the Act, the progress of implementation was very tardy. It is very interesting to note that some political leaders who in later years claimed the entire credit for land reforms, were keeping mum during all those years.

In 1973, the Land Reforms Act was drastically amended, deleting the provisions which permitted the small holders, widows and others to lease their lands as well as the provisions relating to the resumption of the land by the landlords for personal cultivation. The leasing of the agricultural lands was altogether banned.

Instead of Munsiff Tribunals, non-official tribunals presided over by the Revenue Assistant Commissioners came to be appointed. The amended Act was brought into force with effect from 01-03-1974. Tribunals were constituted in each taluk.

Besides the Chairman, the tribunals consisted of four non-official members, including the legislator of the taluk.

The majority of the members of the tribunals constituted for the first time in 1974 were generally honest. Therefore the majority of the decisions rendered by those tribunals for about two years were generally just and equitable, though the enquires held were not in accordance with the law. Within about two years, the contagion of political and bureaucratic corruption, prevailing at the higher levels, spread to the Land Tribunals too.

As a result, the tribunals became dens of corruption. Political or communal bias, favouritism and corruption began to play their role in the deliberations and decisions of tribunals. As and when the Government changed, new tribunals came to be constituted. Membership of the tribunals became an office of political patronage. It also became a lucrative job for amassing wealth.

People began to vie with each other to become members of the Land Tribunals, I had heard of reports that some persons had bribed the higher authorities to become the members of the tribunals. All sorts of persons, like contractors, traders and political hoodlums, who had absolutely no knowledge of agriculture, became the members of the tribunals.

There were reports that in some tribunals judgments were actually sold for sums ranging from Rs.5,000 to Rs.50,000. Added to this, political leaders began to interfere in the working of the tribunals.

If the information I have gathered from various sources is correct, it can be safely assumed that the majority of the asst.

commissioners who functioned as chairman of the tribunals have amassed vast ill gotten wealth and the majority of the non-official members became rich overnight. The secretaries and the other employees in the tribunals did not lag behind. They freely fleeced both the landlords and the tenants in various ways.

There were several instances where these unscrupulous officials have taken a few hundreds of rupees for granting certified copies of records which according to the prescribed fee would cost only a few rupees. The Village Accountants made their fortunes while making false entries in the pahanies and while granting certified copies of pahanies.

In the amended Act which came into force with effect from 01-03-1974, time upto six months had been given to the tenants to file applications before the tribunals for occupancy rights. Discretion had been given to the tribunals to condone the delay and admit applications upto one year for sufficient cause being shown. Subsequently, the Government went on extending the time limit periodically upto 30-06-1979.

**False claims**

Taking advantage of this extension of time, persons who had never cultivated lands as tenants preferred false claims by misusing the forum of the tribunals, either due to personal vendetta or due to family feuds or with the mala fide intention of grabbing the land illegally. There were several instances where persons preferred false claims of tenancy in respect of the lands belonging to their close relatives, like brothers, sisters, parents and parents-in-law.

In the urban areas, where agricultural lands situated in the outskirts of cities and towns are eminently suited for being converted into non-agricultural purposes like building sites, bogus tenants preferred hundreds of false claims, on the plea that they were tenants. Some persons owning hundreds of acres of agricultural lands created bogus tenancies in favour of their relatives or henchmen to evade the ceiling provision in the Land Reforms Act.

There are instances where some members of the tribunals had instigated their followers to prefer false claims in respect of the lands belonging to their political enemies. The tribunals did not hesitate to grant occupancy rights to these pseudo tenants also.

